ಕುವೆಂಪು
ಸಮಗ್ರ
ಸಾಹಿತ್ಯ ಮಾಲೆ

# ಶ್ರೀ ರಾಮಾಯಣ ದರ್ಶನಂ

ಹಾಗೂ

# ಚಿತ್ರಾಂಗದಾ





ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ (ರಿ), ಕುಪ್ಪಳಿ

ದೇವಂಗಿ ಅಂಚೆ - 577415,
ತೀರ್ಥಹಳ್ಳಿ ತಾಲ್ಲೂಕು
ಶಿವಮೊಗ್ಗ ಜಿಲ್ಲೆ

# ರೈತ ಗೀತೆ

## ನೇಗಿಲ ಯೋಗಿ

ನೇಗಿಲ ಹಿಡಿದಾ ಹೊಲದೊಳು ಹಾಡುತ
ಉಳುವಾ ಯೋಗಿಯ ನೋಡಲ್ಲಿ.
ಫಲವನು ಬಯಸದ ಸೇವೆಯೆ ಪೂಜೆಯು
ಕರ್ಮವೆ ಇಹಪರ ಸಾಧನವು.
ಕಷ್ಟದೊಳನ್ನವ ದುಡಿವನೆ ತ್ಯಾಗಿ
ಸೃಷ್ಟಿನಿಯಮದೊಳಗವನೇ ಭೋಗಿ.

ಲೋಕದೊಳೇನೇ ನಡೆಯುತಲಿರಲಿ
ತನ್ನೀ ಕಾರ್ಯವ ಬಿಡನೆಂದೂ:
ರಾಜ್ಯಗಳುದಿಸಲಿ ರಾಜ್ಯಗಳಳಿಯಲಿ,
ಹಾರಲಿ ಗದ್ದುಗೆ ಮಕುಟಗಳು,
ಮುತ್ತಿಗೆ ಹಾಕಲಿ ಸೈನಿಕರೆಲ್ಲ,
ಬಿತ್ತುಳುವುದನವ ಬಿಡುವುದೆ ಇಲ್ಲ.

ಬಾಳಿತು ನಮ್ಮೀ ನಾಗರಿಕತೆ ಸಿರಿ
ಮಣ್ಣುಣಿ ನೇಗಿಲನಾಶ್ರಯದಿ;
ನೇಗಿಲ ಹಿಡಿದಾ ಕೈಯಾಧಾರದಿ
ದೊರೆಗಳು ದರ್ಪದೊಳಾಳಿದರು.
ನೇಗಿಲ ಬಲದೊಳು ವೀರರು ಮೆರೆದರು,
ಶಿಲ್ಪಿಗಳೆಸೆದರು, ಕವಿಗಳು ಬರೆದರು.

ಯಾರೂ ಅರಿಯದ ನೇಗಿಲ ಯೋಗಿಯೆ
ಲೋಕಕೆ ಅನ್ನವನೀಯುವನು.
ಹೆಸರನು ಬಯಸದೆ ಅತಿಸುಖಕೆಳಸದೆ
ದುಡಿವನು ಗೌರವಕಾಶಿಸದೆ.
ನೇಗಿಲಕುಳದೊಳಗಡಗಿದೆ ಕರ್ಮ;
ನೇಗಿಲ ಮೇಲೆಯೆ ನಿಂತಿದೆ ಧರ್ಮ.

– ಕುವೆಂಪು

# ಕುವೆಂಪು

# ಸಮಗ್ರ ಕಾವ್ಯ

## ಸಂಪುಟ - ೩

## ಶ್ರೀ ರಾಮಾಯಣ ದರ್ಶನಂ

ಹಾಗೂ

## ಚಿತ್ರಾಂಗದಾ



ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ (ರಿ), ಕುಪ್ಪಳಿ

ದೇವಂಗಿ ಅಂಚೆ - ೫೭೭ ೪೧೫

ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ

**KUVEMPU**
**SAMAGRA KAVYA - Vol. 3**
(Sri Ramayana Darshanam and Chitrangada)

Published By:
**Rashtrakavi Kuvempu Pratishthana (R), KUPPALI**
Devangi Post - 577 415
Thirtahalli Taluk, Shivamogga Dist.
Phone: 08265 - 230166, 08181 - 274 120

First Impression: January 2013
No. of Pages : 924
No. of Copies : 1000

**ಬೆಲೆ / Price Rs. 400 /=**

ಕುವೆಂಪು ಸಮಗ್ರ ಕಾವ್ಯ - ಸಂಪುಟ ೩
(ಶ್ರೀ ರಾಮಾಯಣ ದರ್ಶನಂ ಹಾಗೂ ಚಿತ್ರಾಂಗದಾ)



ಮುಖಪುಟ: ಕುವೆಂಪು, ಚಿತ್ರಕೃಪೆ: ಕೆ. ಜಿ. ಸೋಮಶೇಖರ್
ಹಿಂಬದಿ ರಕ್ಷಾಪುಟ: ಚಿತ್ರ: ಎಂ. ವಿಶ್ವನಾಥ್

ಪ್ರಕಾಶಕರು:
ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ (ರಿ), ಕುಪ್ಪಳಿ
ದೇವಂಗಿ ಅಂಚೆ - 577 415
ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ
ದೂರವಾಣಿ: 08265 - 230166, 08181 - 274 120

ಟೈಪ್ ಸೆಟ್ಟಿಂಗ್ ಮತ್ತು ಪುಸ್ತಕ ವಿನ್ಯಾಸ:
ಪುಸ್ತಕ ಪ್ರಕಾಶನ

ಮುದ್ರಣ:
ಶ್ರೀಮಾನ್ ಪ್ರಿಂಟೆಕ್ಸ್
ದೂರವಾಣಿ: 2330 0660, ಮೊ: 99005 43225

# ಅಧ್ಯಕ್ಷರ ಮಾತು

ಕುವೆಂಪು ಕನ್ನಡ ಸಾಹಿತ್ಯ ಸ್ರಷ್ಟಾರ, ದ್ರಷ್ಟಾರ, ವಕ್ತಾರ. ಜಡಗೊಂಡು ಮ್ಲಾನಮುಖಿಯಾಗಿದ್ದ ಇಪ್ಪತ್ತನೆಯ ಶತಮಾನದ ಆರಂಭದ ಕನ್ನಡವನ್ನೂ, ಕರ್ನಾಟಕವನ್ನೂ, ಕನ್ನಡಿಗರನ್ನೂ ಒಟ್ಟೊಟ್ಟಿಗೆ ಒಗ್ಗೂಡಿಸಿ ಕಸುವು ತುಂಬಿದ ಬಗೆಯನ್ನು ಪರಿಭಾವಿಸಿದರೆ ಬೆರಗು ಆವರಿಸುತ್ತದೆ. ಸಣ್ಣಪುಟ್ಟದಲ್ಲಿ ವಿರಮಿಸದೆ ಎತ್ತರಗಳಿಗೆ ಜಿಗಿದ ಅವರು ಸಾಹಿತ್ಯದತ್ತ ಹೊರಳಿದ, ಸಾಹಿತ್ಯ ವಿಮರ್ಶೆಯನ್ನು ಹೊರಳಿಸಿದ ಸಂದರ್ಭ ವಿಶಿಷ್ಟವಾದದ್ದು. ಅದುವರೆಗೆ ಸಾಗಿ ಬಂದ ಕನ್ನಡ ಭಾಷಾ ಸಾಹಿತ್ಯ ಹೊರಳುದಾರಿಯಲ್ಲಿ ನಿಂತು ಮಹಾಕವಿಯ ಬರುವಿಕೆಗೆ ಕಣ್ಣರಳಿಸಿತ್ತು. ವಸಾಹತುಶಾಹಿಯ ನೆರಳು ನಾಡಿನ ಉದ್ದಗಲಗಳಲ್ಲಿ ಮೈಚಾಚಿತ್ತು. ಅದು ರಾಷ್ಟ್ರೀಯತೆ ಮಡುಗಟ್ಟುತ್ತ ಬಿಡುಗಡೆಗಾಗಿ ಚಡಪಡಿಸುತ್ತಿದ್ದ ಪರ್ವಕಾಲ. ಸ್ವಾಭಿಮಾನ ಹಾಗೂ ಆತ್ಮಪ್ರತ್ಯಯಗಳಿಂದ ಉದ್ದೀಪನಗೊಂಡ ಬುದ್ಧಿಭಾವಗಳಿಗೆ ಸ್ವಾತಂತ್ರ್ಯದ ಅಗಾಧ ಹಸಿವು ಮೂಡಿದ್ದ ಕಾಲ. ಸ್ಥಿತ್ಯಂತರಗೊಳ್ಳುತ್ತಿದ್ದ ಚಾರಿತ್ರಿಕ ಮಹತ್ವದ ಇಂಥದೊಂದು ಸಂಕ್ರಮಣ ಕಾಲಘಟ್ಟದಲ್ಲಿ ಕುವೆಂಪು ಲೇಖಣಿ ತೋರಿದ ಪ್ರತಿಕ್ರಿಯೆ ಅನನ್ಯವಾದುದು. ಇಂಗ್ಲೀಷ್ ವ್ಯಾಮೋಹದಿಂದ ಪಾರಾಗಿ ಅವರು ಕನ್ನಡವನ್ನು ಅಪ್ಪಿಕೊಂಡ ಗಳಿಗೆ ಅಮೃತಗಳಿಗೆ. ಈ ದಿವ್ಯತಿರುವು ಕನ್ನಡಕ್ಕೆ ವರವಾಯಿತು. ಹಾಗೆಂದು ಅವರು ಇಂಗ್ಲೀಷ್ ಸಾಹಿತ್ಯವನ್ನು ನಿರಾಕರಿಸಲಿಲ್ಲ. ಭಾರತೀಯ ಸಾಹಿತ್ಯಶ್ರೀಯನ್ನು ಸಾಕ್ಷಾತ್ಕರಿಸಿಕೊಳ್ಳುತ್ತಲೇ ಪಾಶ್ಚಾತ್ಯ ಸಾಹಿತ್ಯದ ಅಸ್ಮಿತೆಯನ್ನು ಧಾರಣ ಮಾಡಿ ತಮ್ಮ ಸಾಹಿತ್ಯದ ಬಹುಪ್ರಕಾರಗಳಿಗೆ ಜೀವ ತುಂಬಿದರು.

ಸಾಹಿತ್ಯ ಸೃಷ್ಟಿ ಕ್ರಿಯೆಯಲ್ಲಿ ಕುವೆಂಪು ನಿರತರಾದದ್ದು ಇಪ್ಪತ್ತನೆಯ ಶತಮಾನದ ಮೂರನೆಯ ದಶಕದ ಆರಂಭದಿಂದ. ಹೊಸಗನ್ನಡ ಸಾಹಿತ್ಯ ಆಗಷ್ಟೆ ದಷ್ಟಪುಷ್ಟವಾಗಲು ಹವಣಿಸುತ್ತಿತ್ತು. ಆ ಮನ್ವಂತರದಲ್ಲಿ ಕನ್ನಡ ಸಾಹಿತ್ಯದ ನಾನಾ ಪ್ರಕಾರಗಳಿಗೆ ನೀರುಣಿಸಿ, ಸಮೃದ್ಧ ವಿಶಾಲ ಪರಿಪ್ರೇಕ್ಷ್ಯಕ್ಕೆ ದಾಟಿಸಿದ ಮಹತ್ವದ ಲೇಖಕರು ಕುವೆಂಪು. ಅವರು ಸೃಜಿಸಿದ ಸಾಹಿತ್ಯದ ಹಾಸು-ಬೀಸು ಬಹು ದೊಡ್ಡದು. ಬಗೆಬಗೆಯ ಪ್ರಯೋಗಗಳಿಂದ ಹಳೆಯ ಕನ್ನಡ ಪರಂಪರೆಯನ್ನು ಪುನರುಜ್ಜೀವಿಸುತ್ತ ಪುನರ್ಭರಣಗೊಳಿಸಿ ಅನೇಕ ಪ್ರಥಮಗಳನ್ನು ದಾಖಲಿಸಿದ ಅನುಪಮ ಸಾಹಿತ್ಯ ಚೇತನ ಅವರು.

ನಾಡಗೀತೆ, ರೈತಗೀತೆ ನೀಡಿ, ದೇಸೀ ಚಿಂತನೆಗಳನ್ನು ಸಪ್ರಾಣಿಸಿದ ಈ ಮಲೆನಾಡ

ಕವಿಯ ಸಾಹಿತ್ಯ ವೈಚಾರಿಕ ಪ್ರಜ್ಞೆಯನ್ನು ಉದ್ದೀಪಿಸುತ್ತದೆ. ವೈಜ್ಞಾನಿಕ ದೃಷ್ಟಿಯನ್ನು ಕರುಣಿಸುತ್ತದೆ, ನಿರಂಕುಶಮತಿಗಳನ್ನಾಗಿಸುತ್ತದೆ. ಓದುತ್ತ ಪರಿಭಾವಿಸಿದಷ್ಟೂ ವೆಗ್ಗಳಿಸುವ ಸಮಾಜಮುಖಿ ಹಾಗೂ ಜೀವಪರ ಕಾಳಜಿ ಉಳ್ಳುತ್ತ ಕನ್ನಡನಾಡಿನ ಅಸ್ಮಿತೆಯನ್ನು ಬಿಂಬಿಸುವ ಚಿರಂಜೀವ ಸಾಂಸ್ಕೃತಿಕ ನಾಯಕ ಕುವೆಂಪು.

ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನದ ಸಮಕಾರ್ಯದರ್ಶಿ ಕಡಿದಾಳು ಪ್ರಕಾಶ್‌ರವರು ಪ್ರತಿಷ್ಠಾನದ ಹುಟ್ಟು, ಬೆಳವಣಿಗೆ, ಕಾರ್ಯವಿಧಾನ, ಇದುವರೆಗೆ ಆಗಿರುವ ಕೆಲಸ ಮತ್ತು ಮುಂದಿನ ಯೋಜನೆಗಳ ಸ್ವರೂಪವನ್ನು ಪರಿಚಯಿಸಿದ್ದಾರೆ. ಜತೆಗೆ ಪ್ರಸ್ತುತ ಕುವೆಂಪುರವರ ಸಮಗ್ರ ಸಾಹಿತ್ಯ ಸಂಪುಟ ಪ್ರಕಟಣೆಯ ಹಿನ್ನಲೆಯನ್ನೂ ತಿಳಿಸಿದ್ದಾರೆ. ಪ್ರತಿಷ್ಠಾನದ ಪ್ರಗತಿ ಸರ್ಕಾರದ ಉದಾರ ನೆರವಿನೊಂದಿಗೆ ಸಾರ್ವಜನಿಕರ ಸಲಹೆ, ಸಹಕಾರ ಮತ್ತು ಮಾರ್ಗದರ್ಶನವನ್ನು ಅವಲಂಬಿಸಿದೆ. ಕಾಲಕಾಲಕ್ಕೆ ಸೂಕ್ತ ಸೂಚನೆಗಳೊಂದಿಗೆ ಪ್ರತಿಷ್ಠಾನದ ಸರ್ವತೋಮುಖ ಮುನ್ನಡೆಗೆ ನೆರವಾಗಬೇಕೆಂದು ಸಾಹಿತ್ಯಾಸಕ್ತರನ್ನೂ ಸಂಸ್ಕೃತಿ ಪ್ರಿಯರನ್ನೂ ಪ್ರಾರ್ಥಿಸುತ್ತೇನೆ.

ತಾವು ಜೀವಿಸಿದ ತೊಂಬತ್ತು ವರ್ಷಗಳ ನಿಡುಬಾಳಿನಲ್ಲಿ (1904-1994) ಎಪ್ಪತ್ತು ವರ್ಷ ಸಾಹಿತ್ಯ ರಚನೆಯಲ್ಲಿ ತೊಡಗಿ ರಚಿಸಿದ ಕವನ ಸಂಕಲನಗಳು, ಸಾಹಿತ್ಯ ವಿಮರ್ಶೆಯ ಗ್ರಂಥಗಳು, ಕಾದಂಬರಿಗಳು, ಖಂಡಕಾವ್ಯಗಳು, ಜೀವನಚರಿತ್ರೆಗಳು, ಆತ್ಮಚರಿತೆ, ಮಹಾಕಾವ್ಯ, ಅನುವಾದಗಳು, ನಾಟಕಗಳು, ಸಣ್ಣಕಥಾ ಸಂಕಲನಗಳು, ಕನ್ನಡದ ಕೃತಿರತ್ನಗಳು. ಎಲ್ಲ ಕಾಲಕ್ಕೂ ಸಲ್ಲುವ, ನಿಲ್ಲುವ ಅಮರಕವಿ ಕುವೆಂಪುರವರು ರಚಿಸಿದ, ನಂದಾದೀವಿಗೆಯಾಗಿ ಬೆಳಗುವ ಸಮಗ್ರ ಸಾಹಿತ್ಯ ಸಂಪುಟಗಳಿರುವ ಕೃತಿರತ್ನಕರಂಡಕವನ್ನು ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನವು ಕನ್ನಡಿಗರ ಮಡಿಲಿಗಿಡುವ ಸೌಭಾಗ್ಯಶ್ರೀಗೆ ಕಾರಣವಾದ ಕರ್ನಾಟಕ ಸರ್ಕಾರಕ್ಕೆ ನಮ್ಮ ಕೃತಜ್ಞತೆಗಳು.

ವಿಶ್ವಕವಿ ಕುವೆಂಪುರವರ ಈ ಸಮಗ್ರ ಸಾಹಿತ್ಯ ಕರಂಡಕ ಅಮೃತದ ಮಡು, ಮಿಂದವರು ಧನ್ಯರಾಗುವರು; ಜ್ಯೋತಿಯ ಖನಿ, ಹೊಕ್ಕವರು ಪ್ರಬುದ್ಧರಾಗುವರು.

ಜನವರಿ ೨೦೧೩

ನಾಡೋಜ ಪ್ರೊ||ಹಂ. ಪ. ನಾಗರಾಜಯ್ಯ
ಅಧ್ಯಕ್ಷರು
ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ (ರಿ)
ಕುಪ್ಪಳಿ

# ಪ್ರಕಾಶಕರ ನುಡಿ

ಕವಿ, ದಾರ್ಶನಿಕ ಕುವೆಂಪು ಅವರ ಸಮಗ್ರ ಸಾಹಿತ್ಯ ಗುಚ್ಛವನ್ನು ಕನ್ನಡಿಗರಿಗೆ ನೀಡಬೇಕೆಂಬುದು ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನದ ಮಹೋದ್ದೇಶಗಳಲ್ಲಿ ಒಂದು. ಇದೀಗ ಕುವೆಂಪು ಅವರ ಸಮಗ್ರ ಸಾಹಿತ್ಯದ ಸಂಪುಟಗಳನ್ನು ಹೊರತರುತ್ತಿರುವ ಈ ಶುಭ ಸಂದರ್ಭದಲ್ಲಿ ಪ್ರತಿಷ್ಠಾನವು ನಡೆದುಬಂದ ದಾರಿಯನ್ನು, ಹಾಕಿಕೊಂಡಿರುವ ಯೋಜನೆಗಳನ್ನು ಓದುಗರಿಗೆ ತಿಳಿಸುವ ಉದ್ದೇಶ ನನ್ನದು.

೧೯೯೨ರಲ್ಲಿ ಅಂದಿನ ಮುಖ್ಯಮಂತ್ರಿಗಳಾದ ಶ್ರೀ ಎಸ್.ಬಂಗಾರಪ್ಪನವರ ಹಂಬಲ ಮತ್ತು ಪ್ರೋತ್ಸಾಹದಿಂದ ಕುವೆಂಪು ಪ್ರತಿಷ್ಠಾನ ರಚನೆಯಾಯಿತು. ಪ್ರತಿಷ್ಠಾನದಲ್ಲಿ ನಾಡೋಜ ದೇ.ಜವರೇಗೌಡರು, ಶ್ರೀ ಡಿ.ಬಿ.ಚಂದ್ರೇಗೌಡರು, ಶ್ರೀ ಕಾಗೋಡು ತಿಮ್ಮಪ್ಪನವರು, ನಾಡೋಜ ಕಮಲಾ ಹಂಪನಾ ಹಾಗೂ ನಾಡೋಜ ಪ್ರೊ|| ಹಂ.ಪ.ನಾಗರಾಜಯ್ಯ ಅವರು ಸ್ಥಾಪಕ ಟ್ರಸ್ಟಿಗಳಾಗಿದ್ದರು. ಅವರುಗಳ ಪ್ರಯತ್ನ ಮತ್ತು ಸಹಕಾರದಿಂದ ಪ್ರತಿಷ್ಠಾನ ಇಂದು ಈ ಎತ್ತರಕ್ಕೆ ಬೆಳೆದಿದೆ.

ಪ್ರಾರಂಭದ ಅಧ್ಯಕ್ಷರಾಗಿ ನಾಡೋಜ ದೇ.ಜವರೇಗೌಡರು ಭದ್ರ ಅಡಿಪಾಯವನ್ನು ಹಾಕಿದರು. ಕೆಲವು ವರ್ಷಗಳ ನಂತರ ನ್ಯಾಯಮೂರ್ತಿ ಎನ್.ಡಿ.ವೆಂಕಟೇಶ್ ಅವರು ಅಧ್ಯಕ್ಷರಾಗಿ ಬಹಳ ವರ್ಷಗಳ ಕಾಲ ಸಂಸ್ಥೆಯನ್ನು ಸಮರ್ಥವಾಗಿ ಮುನ್ನಡೆಸಿದರು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾಗಿದ್ದ ಶ್ರೀ ವೈ.ಕೆ.ಮುದ್ದುಕೃಷ್ಣ ಅವರು ಮಧ್ಯದಲ್ಲಿ ಸ್ವಲ್ಪ ಕಾಲ ಅಧ್ಯಕ್ಷರಾಗಿ ಕೆಲಸ ನಿರ್ವಹಿಸಿದರು. ಈಗ ಕೆಲವು ವರ್ಷಗಳಿಂದ ನಾಡೋಜ ಹಂ.ಪ.ನಾಗರಾಜಯ್ಯ ಅವರು ಅಧ್ಯಕ್ಷಸ್ಥಾನದ ಹೊಣೆ ಹೊತ್ತಿದ್ದಾರೆ. ಪ್ರಾರಂಭದಲ್ಲಿ ಸಮ ಕಾರ್ಯದರ್ಶಿಗಳಾಗಿ ಪ್ರೊ|| ಎಚ್.ಜೆ.ಲಕ್ಕಪ್ಪಗೌಡರು, ಕೆಲವು ವರ್ಷಗಳ ನಂತರ ಡಾ|| ಎಚ್.ಡಿ.ಚಂದ್ರಪ್ಪಗೌಡರು ಕಾರ್ಯನಿರ್ವಹಿಸಿದರು. ೧೯೯೮ರಿಂದ ಈವರೆಗೆ ನಾನು ಅಂದರೆ ಕಡಿದಾಳ್ ಪ್ರಕಾಶ್ ಸಮಕಾರ್ಯದರ್ಶಿಯಾಗಿ ಜವಾಬ್ದಾರಿ ನಿರ್ವಹಿಸುತ್ತಾ ಬಂದಿದ್ದೇನೆ. ಪ್ರಾರಂಭದಿಂದ ಇತ್ತೀಚಿನ ವರ್ಷಗಳವರೆಗೂ ಶ್ರೀ ಕೊಳಾವರ ಕೆ.ಟಿ.ನಾರಾಯಣಮೂರ್ತಿ ಅವರು ಖಜಾಂಚಿಗಳಾಗಿದ್ದರು. ಈಗ ಆ ಜವಾಬ್ದಾರಿಯನ್ನು ಶ್ರೀ ದೇವಂಗಿ ಮನುದೇವ್ ಅವರು ನಿರ್ವಹಿಸುತ್ತಿದ್ದಾರೆ.

ಉಪಾಧ್ಯಕ್ಷರಾಗಿ ಕುವೆಂಪು ವಿಶ್ವವಿದ್ಯಾನಿಲಯ ಕುಲಪತಿಗಳಾಗಿದ್ದ ಡಾ.ಎಂ.ಆರ್.ಗಜೇಂದ್ರಗಡ ಇವರಿಂದ ಪ್ರಾರಂಭಗೊಂಡು ಈಗಿನ ಕುಲಪತಿಗಳಾಗಿರುವ ಪ್ರೊ|| ಎಸ್.ಎ.ಬಾರಿ ಅವರವರೆಗಿನ ಎಲ್ಲಾ ಕುಲಪತಿಗಳೂ ಸಮರ್ಥವಾಗಿ ಮಾರ್ಗದರ್ಶನ ಮಾಡಿದ್ದಾರೆ. ಕಾರ್ಯದರ್ಶಿಯಾಗಿ ಶಿವಮೊಗ್ಗ ಜಿಲ್ಲಾಧಿಕಾರಿಗಳಾಗಿದ್ದ ಡಾ. ಎಸ್.ಎಂ.ಜಾಮದಾರ್ ಅವರಿಂದ ಪ್ರಾರಂಭಗೊಂಡು ಈಗಿನ ಜಿಲ್ಲಾಧಿಕಾರಿಗಳಾಗಿರುವ ಶ್ರೀ ಎಂ.ವಿ.ವೇದಮೂರ್ತಿ ಅವರವರೆಗಿನ ಎಲ್ಲ ಜಿಲ್ಲಾಧಿಕಾರಿಗಳು ಪ್ರತಿಷ್ಠಾನದ ಕಾರ್ಯನಿರ್ವಹಣೆಯಲ್ಲಿ ಸಹಕಾರವನ್ನು ನೀಡಿದ್ದಾರೆ. ಸಾಹಿತಿಗಳಾದ ಡಾ.ಜಿ.ಕೆ.ರಮೇಶ್ ಹಾಗೂ ಡಾ. ಸಬಿಹಾ ಭೂಮಿಗೌಡ ಇವರು ಟ್ರಸ್ಟಿಗಳಾಗಿ ಬೆಳವಣಿಗೆಯಲ್ಲಿ ಸಹಕಾರ ನೀಡುತ್ತಿದ್ದಾರೆ. ಪ್ರತಿಷ್ಠಾನದ ವಿಶೇಷ ಆಹ್ವಾನಿತರಾಗಿ ತೀರ್ಥಹಳ್ಳಿ ಕ್ಷೇತ್ರದ ಶಾಸಕರುಗಳಾಗಿದ್ದ ಶ್ರೀ ಡಿ.ಬಿ.ಚಂದ್ರೇಗೌಡರು, ಶ್ರೀ ಆರಗ ಜ್ಞಾನೇಂದ್ರ ಹಾಗೂ ಈಗಿನ ಶಾಸಕರಾದ ಶ್ರೀ ಕಿಮ್ಮನೆರತ್ನಾಕರ್ ಇವರುಗಳ ಸಹಕಾರವು ಪ್ರತಿಷ್ಠಾನದ ಬೆಳವಣಿಗೆಯಲ್ಲಿ ಗಮನಾರ್ಹವಾದುದು. ಕನ್ನಡ ವಿಶ್ವವಿದ್ಯಾನಿಲಯದ ಕುಲಪತಿಗಳು ವಿಶೇಷ ಆಹ್ವಾನಿತರಾಗಿ ಭಾಗವಹಿಸಿ ಸಲಹೆಗಳನ್ನು ನೀಡಿದ್ದಾರೆ. ಸರ್ಕಾರ ನೇಮಿಸಿರುವ ವಿವಿಧ ಇಲಾಖೆಯ ಹಿರಿಯ ಅಧಿಕಾರಿಗಳು ಪದ ನಿಮಿತ್ತ ಟ್ರಸ್ಟಿಗಳಾಗಿ ಅಭಿಮಾನದಿಂದ ಸಹಕಾರ ನೀಡುತ್ತಾ ಬಂದಿದ್ದಾರೆ. ವಿಶೇಷ ಆಹ್ವಾನಿತರಾಗಿ ಪದನಿಮಿತ್ತ ಕೆಲವು ಸ್ಥಳೀಯ ಸಂಸ್ಥೆಗಳ ಅಧ್ಯಕ್ಷರೂ ಹೆಚ್ಚಿನ ಆಸಕ್ತಿಯಿಂದ ಭಾಗವಹಿಸಿ ಸಲಹೆ ಸೂಚನೆಗಳನ್ನು ನೀಡಿರುತ್ತಾರೆ.

ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಅವರು ಪ್ರತಿಷ್ಠಾನದ ಹೊರಗಿದ್ದರೂ ಪ್ರತಿಷ್ಠಾನದ ಬೆಳವಣಿಗೆಯಲ್ಲಿ ಅವರು ನೀಡಿದ ಸಹಕಾರ ಮತ್ತು ಮಾರ್ಗದರ್ಶನವನ್ನು ನಾವು ನೆನೆಯಲೇಬೇಕಾಗುತ್ತದೆ.

ಈ ಮೇಲಿನ ಎಲ್ಲ ವಿವರಗಳನ್ನು ಕೊಡುತ್ತಿರುವ ಉದ್ದೇಶ ಕುವೆಂಪು ಪ್ರತಿಷ್ಠಾನ ಕಟ್ಟುವುದರ ಹಿಂದಿನ ಪ್ರೇರಣೆ ಮತ್ತು ಶಕ್ತಿಗಳ ಬಗ್ಗೆ ಕಿರು ಪರಿಚಯ ಮಾಡಿಸುವುದೇ ಆಗಿದೆ.

ಪ್ರತಿಷ್ಠಾನದ ಮುಖ್ಯ ಚಟುವಟಿಕೆಯೆಂದರೆ ಕುವೆಂಪು ಅವರನ್ನು ಮುಂದಿನ ಜನಾಂಗಕ್ಕೆ ಪರಿಚಯಿಸುವ ಕಾರ್ಯವನ್ನು ನಿರಂತರವಾಗಿ ಕೈಗೊಂಡಿರುವುದು. ಕವಿ ಹುಟ್ಟಿಬೆಳೆದ ಕುಪ್ಪಳಿ ಮನೆಯನ್ನು ಸ್ವಾಧೀನಕ್ಕೆ ಪಡೆದು ಸ್ಮಾರಕವಾಗಿ ನಿರ್ಮಾಣ ಮಾಡಲಾಗಿದೆ. ಕವಿಮನೆಯು ಕವಿಯನ್ನು ಪರಿಚಯಿಸುವ ವಸ್ತು ಸಂಗ್ರಹಾಲಯವಾಗಿ ಮಾರ್ಪಟ್ಟಿದೆ. ಕವಿ ಬಳಸಿದ ವಸ್ತುಗಳು, ಕವಿಯ ಎಲ್ಲಾ ಕಾಲದ ಫೋಟೋಗಳು, ಪ್ರಶಸ್ತಿ ಪತ್ರಗಳು ಹಾಗೂ ಪ್ರಶಸ್ತಿಗಳನ್ನು ಪ್ರದರ್ಶನಕ್ಕೆ ಇಡಲಾಗಿದೆ. ಕವಿಯ ಎಲ್ಲ ಕೃತಿಗಳ ಮಾರಾಟದ ವ್ಯವಸ್ಥೆಯನ್ನು ಸಹ ಮಾಡಲಾಗಿದೆ. ಕವಿಗೆ ಸ್ಫೂರ್ತಿ ನೀಡಿದ ಹಾಗೂ ಅವರ ಅಂತ್ಯ ಸಂಸ್ಕಾರ ನಡೆದ ಸ್ಥಳವಾದ ಕವಿಶೈಲದಲ್ಲಿ ಬೃಹತ್ ಶಿಲಾ ಸ್ಮಾರಕವನ್ನು ಕಲಾವಿದ ಶ್ರೀ ಕೆ.ಟಿ.ಶಿವಪ್ರಸಾದ್ ಅವರ ಕಲ್ಪನೆಯಂತೆ, ಉದ್ಯಮಿ ಶ್ರೀ ವಿ.ಜಿ.ಸಿದ್ಧಾರ್ಥ ಹೆಗ್ಗಡೆ ಅವರ ಆರ್ಥಿಕ ನೆರವಿನಿಂದ ನಿರ್ಮಾಣ ಮಾಡಲಾಗಿದೆ. ೨೦೦೪ರಲ್ಲಿ ಕವಿಯ ಜನ್ಮ ಶತಮಾನೋತ್ಸವದ ನೆನಪಿಗೆ

ಸ್ಮಾರಕ ಭವನವನ್ನು ಕಟ್ಟುವುದರ ಮೂಲಕ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಲು ಬೇಕಾದ ಎಲ್ಲ ಅನುಕೂಲವಿರುವ ಕಟ್ಟಡವನ್ನು ನಿರ್ಮಾಣ ಮಾಡಲಾಗಿದೆ. ಕಟ್ಟಡದಲ್ಲಿ ಸುಮಾರು ೭೫ ಜನಕ್ಕೆ ವಸತಿ ವ್ಯವಸ್ಥೆ, ಕಾರ್ಯಕ್ರಮ ನಡೆಸಲು ಸುಸಜ್ಜಿತ ವೇದಿಕೆ (ಹೇಮಾಂಗಣ), ೫೦೦ ಜನ ಕುಳಿತುಕೊಳ್ಳುವ ಸಭಾಂಗಣ, ದೃಕ್ ಶ್ರವಣಕೊಠಡಿ, ೧೦೦ ಜನ ಕುಳಿತುಕೊಳ್ಳುವ ಸಭಾ ಕೊಠಡಿ, ಗ್ರಂಥಾಲಯ, ಅಡಿಗೆ ಮನೆ ಮತ್ತು ಭೋಜನಾಲಯ- ಹೀಗೆ ಎಲ್ಲ ಸೌಲಭ್ಯಗಳನ್ನು ಕಲ್ಪಿಸಲಾಗಿದೆ.

ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಅವರು ತೆಗೆದಿರುವ ಮಲೆನಾಡಿನ ಅದ್ಭುತ ಪಕ್ಷಿ ಚಿತ್ರಗಳ ಕಲಾ ಗ್ಯಾಲರಿಯನ್ನು ಸಹ ಸಿದ್ಧಪಡಿಸಲಾಗಿದೆ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಅವರ ಸ್ಮಾರಕದ ನಿರ್ವಹಣೆಯನ್ನು ಸಹ ಪ್ರತಿಷ್ಠಾನ ನಿರ್ವಹಿಸುತ್ತಿದೆ.

"ಕುವೆಂಪು ನಿರಂತರ" ಯೋಜನೆಯ ಅಡಿಯಲ್ಲಿ ಸಾಕಷ್ಟು ಕಾರ್ಯಕ್ರಮಗಳನ್ನು ಪ್ರತಿಷ್ಠಾನವು ನಡೆಸುತ್ತಿದೆ. ಸಂಚಾರಿ ವಾಹನದ ಮೂಲಕ ಕವಿಯ ಪುಸ್ತಕಗಳನ್ನು ರಿಯಾಯಿತಿ ದರದಲ್ಲಿ ರಾಜ್ಯಾದ್ಯಂತ ಸಂಚರಿಸಿ ಮಾರಾಟ ಮಾಡಲಾಗುತ್ತಿದೆ. ಕರ್ನಾಟಕದಿಂದ ಹೊರಗೆ ಅಂದರೆ ದೆಹಲಿ, ಕೊಲ್ಕತ್ತಾ, ಮುಂಬಯಿ, ಅಹಮದಾಬಾದ್, ರಾಜಸ್ಥಾನದ ಉದಯಪುರ ಈ ಸ್ಥಳಗಳಲ್ಲಿ ಕಾರ್ಯಕ್ರಮಗಳನ್ನು ನಡೆಸುವ ಮೂಲಕ ಇತರೆ ಭಾಷೆಯವರಿಗೂ ಕುವೆಂಪು ಸಾಹಿತ್ಯವನ್ನು ತಲುಪಿಸುವ ಕೆಲಸವನ್ನು ಟ್ರಸ್ಟ್ ಮಾಡಿದೆ. ಕವಿಯ ಪರಿಚಯ ಕೃತಿಯನ್ನು ಇಂಗ್ಲೀಷ್, ಗುಜರಾತಿ, ರಾಜಸ್ಥಾನಿ, ಹಿಂದಿ ಭಾಷೆಯಲ್ಲಿ ಪ್ರಕಟಿಸಿದೆ. ಮುಂದಿನ ದಿನಗಳಲ್ಲಿ ಕುವೆಂಪು ಸಾಹಿತ್ಯವನ್ನು ಸಹ ಭಾರತದ ಬೇರೆ ಭಾಷೆಗಳಿಗೆ ಅನುವಾದಿಸುವ ಯೋಜನೆ ಸಹ ಪ್ರತಿಷ್ಠಾನದ್ದಾಗಿದೆ. ಹಂತ ಹಂತವಾಗಿ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲೂ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಯೋಜನೆ ಇದೆ. ಪ್ರಾರಂಭದಿಂದಲೂ ಕುಪ್ಪಳಿಯಲ್ಲಿ ಪ್ರತಿ ವರ್ಷ ಸಾಕಷ್ಟು ಸಾಹಿತ್ಯಕ ಕಾರ್ಯಕ್ರಮಗಳನ್ನು ನಡೆಸುತ್ತಾ ಬರಲಾಗಿದೆ.

ಕರ್ನಾಟಕ ಸರ್ಕಾರ ಕುಪ್ಪಳಿಯ ಸುತ್ತಮುತ್ತಲಿನ ೩೫೦೦ ಎಕರೆ ಅರಣ್ಯವನ್ನು ಕವಿಗೆ ವಿಶಿಷ್ಟ ಗೌರವ ಸಲ್ಲಿಸುವ ಉದ್ದೇಶದಿಂದ ಕವಿಯ ಹೆಸರಿನಲ್ಲಿ (ಕುವೆಂಪು ಸ್ಮಾರಕ ಜೈವಿಕ ಅರಣ್ಯ) ರಕ್ಷಿಸುವ ಕೆಲಸವನ್ನು ಮಾಡುತ್ತಿದೆ. ಪ್ರತಿ ತಿಂಗಳು ಹತ್ತು ಸಾವಿರಕ್ಕೂ ಹೆಚ್ಚು ಪ್ರವಾಸಿಗರು ಕುಪ್ಪಳಿಗೆ ಭೇಟಿ ನೀಡಿ ತಮಗೆ ಆದ ಸಂತೋಷವನ್ನು ವ್ಯಕ್ತಪಡಿಸಿದಾಗ ಪ್ರತಿಷ್ಠಾನದ ಶ್ರಮ ಸ್ವಲ್ಪ ಮಟ್ಟಿಗಾದರೂ ಸಾರ್ಥಕವಾಗಿದೆ ಎಂಬ ಸಮಾಧಾನ ನಮ್ಮದಾಗಿದೆ.

ಕರ್ನಾಟಕ ಸರ್ಕಾರದ ಉದಾರ ಆರ್ಥಿಕ ನೆರವಿನಿಂದ ಈ ಎಲ್ಲ ಚಟುವಟಿಕೆಗಳು ನಡೆದಿರುತ್ತವೆ. ಕುವೆಂಪು ಅಭಿಮಾನಿಗಳ ಆರ್ಥಿಕ ನೆರವು ಸಹಾ ಇದಕ್ಕೆ ಸಹಕಾರವಾಗಿದೆ ಎನ್ನುವುದನ್ನು ಮರೆಯುವಂತಿಲ್ಲ. ಪ್ರಾರಂಭದಿಂದ ಇಲ್ಲಿಯವರೆಗಿನ ಎಲ್ಲ ಸರ್ಕಾರಗಳು ನೆರವು ಮತ್ತು ಸಹಕಾರವನ್ನು ನೀಡುತ್ತಾ ಬಂದಿವೆ. ಜನಪ್ರತಿನಿಧಿಗಳ ಸಹಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಕಾರ, ಜಿಲ್ಲಾಡಳಿತದ ಸಹಕಾರ ಹಾಗೂ ಮಾಧ್ಯಮದವರ ಬೆಂಬಲ ಅಪರಿಮಿತವಾಗಿದೆ. ಇದು ನಮ್ಮ ಸುಯೋಗ. ಕುವೆಂಪು ಅಭಿಮಾನಿಗಳು ಸಹ ಕಾಲಕಾಲಕ್ಕೆ ಹಲವಾರು ಸಲಹೆ ಸೂಚನೆಗಳನ್ನು ನೀಡುವ ಮೂಲಕ ಪ್ರೋತ್ಸಾಹಿಸಿರುತ್ತಾರೆ.

ಕುಪ್ಪಳಿಯ ಸುತ್ತಲಿನ ಸ್ಥಳೀಯರ ಸಹಕಾರ, ಕುವೆಂಪು ಕುಟುಂಬದವರ ಬೆಂಬಲವನ್ನು ಇಲ್ಲಿ ಸ್ಮರಿಸಿಕೊಳ್ಳುವುದು ನಮ್ಮ ಕರ್ತವ್ಯವಾಗಿದೆ. ಹಾಗೆಯೇ ಕುಪ್ಪಳಿ ಮನೆಯಲ್ಲಿ ವಾಸವಾಗಿದ್ದ ಹಿರಿಯರಾದ ಶ್ರೀ ಕೆ.ಆರ್.ಶೇಷಪ್ಪಗೌಡರ ಸಹಕಾರವನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇವೆ. ಪ್ರತಿಷ್ಠಾನದ ಸಿಬ್ಬಂದಿ ಸಹಕಾರ ನೀಡುತ್ತಿರುವುದು ಸಹಾ ಅಷ್ಟೇ ಮುಖ್ಯವಾಗಿರುತ್ತದೆ. ಹಂಪಿಯ ಕನ್ನಡ ವಿಶ್ವವಿದ್ಯಾನಿಲಯವು ಕುಪ್ಪಳಿಯಲ್ಲಿ "ಕುವೆಂಪು ಅಧ್ಯಯನ ಕೇಂದ್ರ"ವನ್ನು ತೆರೆದು ಕನ್ನಡದಲ್ಲಿ ಸಂಶೋಧನೆ ಮಾಡುವವರಿಗೆ ಅವಕಾಶ ಕಲ್ಪಿಸಿದೆ. ಈ ಕೇಂದ್ರದಿಂದ ಪಿ.ಎಚ್.ಡಿ. ಮಾಡಲು ಅವಕಾಶವಿದೆ. ಇಂಥದೊಂದು ಕೇಂದ್ರ ತೆರೆದು ಸಹಾಯ ಮಾಡಿರುವ ವಿಶ್ವವಿದ್ಯಾನಿಲಯಕ್ಕೆ ಧನ್ಯವಾದಗಳನ್ನು ಸಮರ್ಪಿಸುತ್ತೇನೆ.

ಪ್ರಸ್ತುತ ಮುಂದುವರೆಸುತ್ತಿರುವ ಯೋಜನೆಗಳ ಜೊತೆಗೆ ಈ ವರ್ಷ ಹಲವಾರು ಹೊಸ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ. ಕುವೆಂಪು ಕುರಿತ ಸುಂದರ ಚಿತ್ರ ಸಂಪುಟ ಹೊರ ತರುವುದು, ಶ್ರೀ ರಾಮಾಯಣ ದರ್ಶನಂ ಕಾವ್ಯದ ವಾಚನ ಮತ್ತು ವ್ಯಾಖ್ಯಾನವನ್ನು ಧ್ವನಿ ಮುದ್ರಿಸಿ ೪೦ ಗಂಟೆಗಳ (೧೦ ಡಿ.ವಿ.ಡಿ) ಧ್ವನಿ ಸುರಳಿಯನ್ನು ಹೊರ ತರುವ ಕಾರ್ಯವು ನಡೆಯುತ್ತಿದೆ. ಕುವೆಂಪು ಹೆಸರಿನಲ್ಲಿ ರಾಷ್ಟ್ರೀಯ ಪ್ರಶಸ್ತಿಯನ್ನು ಘೋಷಣೆ ಮಾಡಿ ಮುಂದಿನ ವರ್ಷದಿಂದ ಕೊಡಬೇಕು ಎನ್ನುವ ಕುರಿತು ಎಲ್ಲ ಸಿದ್ಧತೆಗಳು ನಡೆದಿರುತ್ತವೆ. ಇದಕ್ಕೆ ಬೇಕಾದ ಹೆಚ್ಚಿನ ಆರ್ಥಿಕ ನೆರವನ್ನು ಸಚಿವರಾಗಿದ್ದ ದಿವಂಗತ ಎಂ.ಚಂದ್ರಶೇಖರ್ ಅವರ ನೆನಪಿನಲ್ಲಿ ಅವರ ಪುತ್ರ ಬೆಂಗಳೂರಿನ ಶ್ರೀ ಎಂ.ಸಿ.ನರೇಂದ್ರ ಅವರು ನೀಡಿ ಸಹಕರಿಸಿರುತ್ತಾರೆ.

ಈ ಮೇಲಿನ ಎಲ್ಲಾ ವಿವರಗಳಲ್ಲದೆ ಈಗ ಹಮ್ಮಿಕೊಂಡಿರುವ ಕುವೆಂಪು ಸಾಹಿತ್ಯದ ಕಿಟ್ ಕುರಿತು ನಾಲ್ಕು ಮಾತುಗಳನ್ನು ಹೇಳಲೇಬೇಕು. ಈ ಯೋಜನೆಯ ಮುಖ್ಯ ಉದ್ದೇಶ ಕಡಿಮೆ ಬೆಲೆಗೆ ಕುವೆಂಪು ಸಮಗ್ರ ಸಾಹಿತ್ಯ ಸಂಪುಟಗಳನ್ನು ಒಂದೇ ಕಡೆ ದೊರೆಯುವಂತೆ ಮಾಡುವುದಾಗಿದೆ. ಹನ್ನೆರಡು ಸಂಪುಟಗಳಲ್ಲಿ ಒಟ್ಟು ಸುಮಾರು ೧೦,೦೦೦ ಪುಟಗಳ ಸಾಹಿತ್ಯವು ಅಡಕವಾಗಿರುತ್ತದೆ. ರಾಮಾಯಣ ದರ್ಶನಂ ಜೊತೆಗೆ ಚಿತ್ರಾಂಗದಾ ಸೇರಿದಂತೆ ಮೂರು ಕಾವ್ಯ ಸಂಪುಟಗಳು, ಗದ್ಯ ಸಾಹಿತ್ಯದ ಎರಡು ಸಂಪುಟಗಳು, ಹದಿನಾಲ್ಕು ನಾಟಕಗಳ ಒಂದು ಸಂಪುಟ, ಬಿಡಿಯಾಗಿ ಎರಡು ಕಾದಂಬರಿಗಳ ಪ್ರತ್ಯೇಕ ಸಂಪುಟ, ಆತ್ಮ ಚರಿತ್ರೆ (ನೆನಪಿನ ದೋಣಿ)ಯ ಒಂದು ಸಂಪುಟ, ಜೀವನ ಚರಿತ್ರೆಗಳ ಒಂದು ಸಂಪುಟ, ಪ್ರಬಂಧ ಮತ್ತು ಸಣ್ಣ ಕಥೆಗಳ ಒಂದು ಸಂಪುಟ, ಜನಪ್ರಿಯ ವಾಲ್ಮೀಕಿ ರಾಮಾಯಣದ ಒಂದು ಸಂಪುಟ, ಹೀಗೆ ಒಟ್ಟು ೧೨ ಸಂಪುಟಗಳಲ್ಲಿ ಕುವೆಂಪು ಅವರ ಸಾಹಿತ್ಯವನ್ನು ಪ್ರಟಿಸುತ್ತಿದ್ದೇವೆ. ಇಂಥದೊಂದು ಯೋಜನೆಯನ್ನು ಕಾರ್ಯರೂಪಕ್ಕೆ ತರಬೇಕು ಎನ್ನುವ ಆಸೆ ಬಹಳ ವರ್ಷಗಳಿಂದ ನನ್ನ ಮನಸ್ಸಿನಲ್ಲಿ ಉಳಿದಿತ್ತು. ಈ ವಿಚಾರವನ್ನು ಪ್ರತಿಷ್ಠಾನದ ಸಭೆಯಲ್ಲಿ ಚರ್ಚಿಸಿದಾಗ ಎಲ್ಲ ಸದಸ್ಯರು ಈ ಯೋಜನೆಯನ್ನು ಬೆಂಬಲಿಸಿದರು. ಕುವೆಂಪು ಸಾಹಿತ್ಯದ ಹಕ್ಕುದಾರರಾದ ಉದಯರವಿ ಪ್ರಕಾಶವನ್ನು ಕೇಳಿಕೊಂಡಾಗ ಅವರು ಸಂತೋಷದಿಂದ ಒಪ್ಪಿಗೆ ಸೂಚಿಸಿದರು. ಈ ಯೋಜನೆಗೆ ಸರ್ಕಾರದ ಆರ್ಥಿಕ ನೆರವು ಕೇಳಿದಾಗ ಸಕಾರಾತ್ಮಕ

ಭರವಸೆಯನ್ನು ಸಹಾ ನೀಡಿದರು. ಹೀಗಾಗಿ ಈ ಯೋಜನೆಯನ್ನು ಅತ್ಯಂತ ಅಭಿಮಾನದಿಂದ ಕಾರ್ಯರೂಪಕ್ಕೆ ತಂದಿದ್ದೇವೆ. ಕುವೆಂಪು ಸಾಹಿತ್ಯದ ಎಲ್ಲಾ ಬಿಡಿ ಪ್ರತಿಗಳನ್ನು ಖರೀದಿಸುವುದಾದರೆ ರೂ.೬೦೦೦/- ಆಗುತ್ತದೆ. ಆದರೆ ಪ್ರತಿಷ್ಠಾನವು ಈಗ ತಮಗೆ ಕೇವಲ ರೂ.೩೦೦೦/- ಗಳಿಗೆ ಕುವೆಂಪು ಸಮಗ್ರ ಸಾಹಿತ್ಯವನ್ನು ಪೂರ್ಣವಾಗಿ ಅಂದರೆ ಶೇಕಡಾ ೫೦ರ ರಿಯಾಯಿತಿಯಲ್ಲಿ ಒದಗಿಸುತ್ತಿದೆ. ಕೃತಿಗಳನ್ನು ಕೊಳ್ಳುವ ಸಂದರ್ಭದಲ್ಲಿ ಕವಿಯ ಅಭಿಮಾನಿಗಳು ಹಣದ ಕೊರತೆಯಿಂದ ಖರೀದಿಸಲು ಸಾಧ್ಯವಾಗದೆ ಇರುವುದನ್ನು ಗಮನಿಸಿ ಈ ಯೋಜನೆಯ ಕಲ್ಪನೆ ಹುಟ್ಟಿತು. ಕುವೆಂಪು ಕೃತಿಗಳನ್ನು ಖರೀದಿಸಿ ಓದುವವರಿಗೆ ಇದರಿಂದ ಸ್ವಲ್ಪವಾದರೂ ಸಂತೋಷವಾದರೆ ನಮ್ಮ ಶ್ರಮ ಸಾರ್ಥಕ ಎಂದು ಭಾವಿಸುತ್ತೇವೆ. ಸ್ಥಳೀಯವಾಗಿ ಕೆಲವು ಅಡಚಣೆಗಳ ನಡುವೆಯೂ ಪ್ರತಿಷ್ಠಾನ ತನ್ನ ಪೂರ್ಣ ಪ್ರಮಾಣದ ಪ್ರಯತ್ನವನ್ನು ತೊಡಗಿಸುತ್ತಿದೆ. ಕವಿಯ ಆಶಯಗಳಿಗೆ ಅನುಗುಣವಾಗಿ ಕುಪ್ಪಳಿಯನ್ನು ಕರ್ನಾಟಕದ ಒಂದು ದೊಡ್ಡ ಸಾಂಸ್ಕೃತಿಕ ಕೇಂದ್ರವಾಗಿ ಬೆಳೆಸುವ ಉದ್ದೇಶ ನಮ್ಮದಾಗಿದೆ.

ಸಮಗ್ರ ಸಾಹಿತ್ಯದ ಈ ವಿಶೇಷ ಪ್ರಕಟಣಾ ಯೋಜನೆಗೆ ರಾಜ್ಯ ಆಯವ್ಯಯ ಪತ್ರದಲ್ಲಿಯೇ ಅನುದಾನದ ಮಂಜೂರಾತಿಯನ್ನು ಒದಗಿಸಿದ ರಾಜ್ಯದ ಮುಖ್ಯ ಮಂತ್ರಿಗಳಾಗಿದ್ದ ಸನ್ಮಾನ್ಯ ಡಿ.ವಿ.ಸದಾನಂದಗೌಡರಿಗೆ ಹಾಗೂ ಇದಕ್ಕೆ ಒತ್ತಾಸೆಯಾಗಿ ಕಾರ್ಯ ನಿರ್ವಹಿಸಿದ ಶೃಂಗೇರಿ ಕ್ಷೇತ್ರದ ಶಾಸಕರಾದ ಸನ್ಮಾನ್ಯ ಡಿ.ಎನ್.ಜೀವರಾಜ್ ಅವರ ಉಪಕಾರವನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇನೆ.

ಈ ಸಂದರ್ಭದಲ್ಲಿ ಹಲವಾರು ಹಿರಿಯರ ಸಹಕಾರವನ್ನು ಅಭಿಮಾನದಿಂದ ಸ್ಮರಿಸುವುದು ನನ್ನ ಪರಮ ಕರ್ತವ್ಯವಾಗಿದೆ. ಮೊದಲನೆಯದಾಗಿ ಸಾಹಿತ್ಯದ ಹಕ್ಕುದಾರರಾದ ಶ್ರೀಮತಿ ಕೆ.ಪಿ.ತಾರಿಣಿ ಚಿದಾನಂದಗೌಡ ಅವರಿಗೆ ಕೃತಜ್ಞತೆಗಳು. ಈ ಯೋಜನೆ ಕಾರ್ಯರೂಪಕ್ಕೆ ಬರಲು ಮೈಸೂರಿನ ಪ್ರೊ|| ಬಿ.ಎನ್.ಶ್ರೀರಾಮ್ ಹಾಗೂ ಶ್ರೀಮತಿ ರಾಜೇಶ್ವರಿ ತೇಜಸ್ವಿ ಇವರ ಸಹಕಾರವನ್ನು ನೆನಪಿಸಿಕೊಳ್ಳಬೇಕು. ಕುವೆಂಪು ಸಾಹಿತ್ಯದ ಪ್ರವೇಶ ಕುರಿತು ರಾಷ್ಟ್ರಕವಿ ಜಿ.ಎಸ್.ಶಿವರುದ್ರಪ್ಪನವರು ಬರೆದಿರುವ "ಕುವೆಂಪು ಸಮಗ್ರ ಕಾವ್ಯಕ್ಕೆ ಒಂದು ಪ್ರವೇಶ" ಲೇಖನವನ್ನು ಬಳಸಿಕೊಂಡಿರುತ್ತೇವೆ. ಅವರಿಗೂ ಸಹಾ ಕೃತಜ್ಞತೆಗಳು. ೧೦,೦೦೦ ಪುಟಗಳನ್ನು ಡಿ.ಟಿ.ಪಿ. ಮಾಡಿಕೊಟ್ಟಿರುವ ಮೂಡಿಗೆರೆಯ ಶ್ರೀ ಆರ್.ರಾಘವೇಂದ್ರ ಅವರ ಶ್ರಮವನ್ನು ನೆನೆಯುತ್ತಾ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಮುದ್ರಣದ ಸಿದ್ಧತೆಯನ್ನು ಪರಿಶೀಲಿಸಿ ಸಹಕರಿಸಿದ ಬೆಂಗಳೂರಿನ ಲೇಖಕ ಹಾಗೂ ಛಾಯಾಗ್ರಾಹಕ ಮಿತ್ರ ಶ್ರೀ ಎಂ.ವಿಶ್ವನಾಥ್ ಅವರಿಗೆ ಕೃತಜ್ಞತೆಗಳು. ಪುಸ್ತಕ, ಮುಖಪುಟ ವಿನ್ಯಾಸ ಹಾಗೂ ಮುದ್ರಣದ ಬಗೆಗೆ ತಾಂತ್ರಿಕ ಸಲಹೆ ನೀಡಿರುವುದಲ್ಲದೆ ಸಕಾಲದಲ್ಲಿ ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿರುವ ಬೆಂಗಳೂರಿನ 'ಶ್ರೀಮಾನ್ ಪ್ರಿಂಟೆಕ್ಸ್' ಮುದ್ರಣಾಲಯದ ಮಾಲೀಕರಾದ ಶ್ರೀ ಎಸ್.ಪ್ರಕಾಶ್ ಅವರಿಗೂ ಮತ್ತು ಸಹಕರಿಸಿರುವ ಮುದ್ರಣಾಲಯದ ಸಿಬ್ಬಂದಿಗೂ ನಮ್ಮ ವಂದನೆಗಳು. ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮಾನ್ಯ ಸಚಿವರಾದ ಶ್ರೀ ಗೋವಿಂದ ಕಾರಜೋಳ ಅವರ ಸಹಕಾರವನ್ನು ಇಲ್ಲಿ

ನೆನೆಯುತ್ತೇನೆ. ಈ ಯೋಜನೆಯು ಕಾರ್ಯರೂಪಕ್ಕೆ ತರಲು ಸಹಕರಿಸಿರುವ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಬಸವರಾಜು ಅವರಿಗೂ, ಕಮೀಷನರ್ ಆದ ಶ್ರೀ ಕೆ.ಆರ್.ರಾಮಕೃಷ್ಣ ಅವರಿಗೂ, ಜಂಟಿ ನಿರ್ದೇಶಕರಾದ ಶ್ರೀ ವಿ.ಎನ್.ಮಲ್ಲಿಕಾರ್ಜುನ ಸ್ವಾಮಿಯವರಿಗೂ, ಇನ್ನೋರ್ವ ಜಂಟಿ ನಿರ್ದೇಶಕರಾದ ಶ್ರೀ ಬಿ.ಟಿ.ಮುನಿರಾಜು ಅವರಿಗೂ ಹಾಗೂ ಶಿವಮೊಗ್ಗದಲ್ಲಿರುವ ಸಹಾಯಕ ನಿರ್ದೇಶಕರಾದ ಶ್ರೀ ಎನ್.ಹರಿಕುಮಾರ್ ಅವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಇಲ್ಲಿ ಒಂದು ವಿಚಾರವನ್ನು ಓದುಗರ ಗಮನಕ್ಕೆ ತರುವುದು ನನ್ನ ಕರ್ತವ್ಯವಾಗಿದೆ. ಈಗ್ಗೆ ಕೆಲವು ವರ್ಷಗಳ ಹಿಂದೆ ಕಾವ್ಯ, ಗದ್ಯ, ನಾಟಕಗಳನ್ನು ಕನ್ನಡ ವಿಶ್ವವಿದ್ಯಾನಿಲಯವು ಸಮಗ್ರ ಸಂಪುಟಗಳಲ್ಲಿ ಪ್ರಕಟಿಸಿರುವುದನ್ನು ನೆನೆಯಬೇಕು. ಅವರು ಮಾಡಿರುವ ಮಹಾನ್ ಕಾರ್ಯದಿಂದಾಗಿ ನಮ್ಮ ಪ್ರಕಟಣೆಯ ಕೆಲಸ ಈಗ ಸುಲಭವಾಗುತ್ತಿದೆ. ಆದ್ದರಿಂದ ಕನ್ನಡ ವಿಶ್ವವಿದ್ಯಾನಿಲಯಕ್ಕೆ ನಾನು ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಗದ್ಯ, ಕಾವ್ಯ ಮತ್ತು ನಾಟಕಗಳನ್ನು ಸಮಗ್ರವಾಗಿ ತರುವ ಸಂದರ್ಭದಲ್ಲಿ ಡಾ. ಕೆ.ಸಿ.ಶಿವಾರೆಡ್ಡಿಯವರು ಶ್ರಮವಹಿಸಿ ದುಡಿದಿರುವುದನ್ನು ನಾನು ಗಮನಿಸಿರುತ್ತೇನೆ. ಅದರಲ್ಲಿಯೂ ವಿಶೇಷವಾಗಿ ಗದ್ಯ ಸಂಪುಟವನ್ನು ತರುವಾಗ ಅವರು ಬಹಳ ಶ್ರಮವಹಿಸಿದ್ದಾರೆ. ಅವರಿಗೂ ನಾನು ವಿಶೇಷವಾದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಎಲ್ಲ ಹಂತಗಳಲ್ಲೂ ಸಲಹೆ ಸಹಕಾರ ನೀಡಿದ ಕನ್ನಡ ವಿಶ್ವವಿದ್ಯಾನಿಲಯದ ಕುಲಪತಿಗಳಾದ ಪ್ರೊ|| ಹಿ.ಚಿ.ಬೋರಲಿಂಗಯ್ಯ ಅವರನ್ನು ಪ್ರೀತಿಯಿಂದ ನೆನೆಯುತ್ತೇನೆ. ಕುವೆಂಪು ಅಧ್ಯಯನ ಕೇಂದ್ರದ ನಿರ್ದೇಶಕರಾಗಿದ್ದ ಡಾ.ಕರೀಗೌಡ ಬೀಚನಹಳ್ಳಿ ಅವರ ಪ್ರೋತ್ಸಾಹಕ್ಕೂ ಕೃತಜ್ಞತೆಗಳು.

ಯಾವುದೇ ಸಾಹಿತ್ಯದ ಪ್ರಕಟಣೆಗೂ ಓದುಗರ ಒಲವೇ ನಿಜವಾದ ಬೆಂಬಲ. ಈ ಸಮಗ್ರ ಸಾಹಿತ್ಯ ಮಾಲೆಯನ್ನು ನಿಮಗೆ ಪ್ರೀತಿಯಿಂದ ಅರ್ಪಿಸುತ್ತಿದ್ದೇನೆ. ನಿಮ್ಮ ಹೃದಯಕ್ಕೆ ಹತ್ತಿರವಾದವರಿಗೆ ನೀವು ಉಡುಗೊರೆಯಾಗಿ ಕೊಡಬಹುದಾದ ಅತ್ಯಂತ ಮೌಲಿಕ ಸಮಗ್ರ ಸಾಹಿತ್ಯದ ಕಿಟ್ ಇದಾಗಿರುತ್ತದೆ. ಕೊನೆಯದಾಗಿ ಒಂದು ಮಾತು. ಕುಪ್ಪಳಿಯ ಕೇಂದ್ರವನ್ನು ಎಲ್ಲ ಕನ್ನಡಿಗರು ಸೇರಿ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಕೇಂದ್ರವಾಗಿ ಬೆಳೆಸಬೇಕು ಎಂಬುದು ಪ್ರತಿಷ್ಠಾನದ ವಿನಯಪೂರ್ವಕ ವಿನಂತಿ.

ಜನವರಿ ೨೦೧೩

**ಕಡಿದಾಳ್ ಪ್ರಕಾಶ್**
ಸಮಕಾರ್ಯದರ್ಶಿ
ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ
ಮತ್ತು
ಕುವೆಂಪು ಸಮಗ್ರ ಸಾಹಿತ್ಯ ಸಂಪುಟಗಳ
ಸಂಯೋಜಕರು

## ವಿಷಯಾನು ಕ್ರಮಣಿಕೆ

### ೧ ಶ್ರೀ ರಾಮಾಯಣ ದರ್ಶನಂ

೧೯೪೯

### ಅಯೋಧ್ಯಾ ಸಂಪುಟಂ



### ಕಿಷ್ಕಿಂದಾ ಸಂಪುಟಂ

### ಲಂಕಾ ಸಂಪುಟಂ



### ಶ್ರೀ ಸಂಪುಟಂ



### ೨ ಚಿತ್ರಾಂಗದಾ

೧೯೩೬

# ಕುವೆಂಪು ಸಮಗ್ರಕಾವ್ಯಕ್ಕೆ ಒಂದು ಪ್ರವೇಶ

ತನ್ನ ವ್ಯಕ್ತಿವಿಶಿಷ್ಟವಾದ ಧ್ವನಿಯಿಂದ, ಉಜ್ವಲವಾದ ತೇಜಸ್ಸಿನಿಂದ, ವೈವಿಧ್ಯ ಹಾಗೂ ವಿಸ್ತಾರಗಳಿಂದ ಮತ್ತು ಲೋಕಾಕರ್ಷಕವಾದ ಲಕ್ಷಣಗಳಿಂದ ಕುವೆಂಪು ಅವರ ಕವಿತೆ, ಇಪ್ಪತ್ತನೆಯ ಶತಮಾನದ ಕನ್ನಡ ಕಾವ್ಯದ ಒಂದು ಮಹತ್ವದ ಭಾಗವಾಗಿದೆ. ಮಲೆನಾಡಿನ ಅಪ್ರತಿಷ್ಠಿತ ಸಾಮಾಜಿಕ ನೆಲೆಯಿಂದ ಹುಟ್ಟಿಬಂದ, ಆ ಮಲೆನಾಡಿನ ಪರ್ವತಾರಣ್ಯ ಚೈತನ್ಯದ ಮೊದಲ ಪ್ರತಿನಿಧಿ ಎಂಬಂತೆ ತೋರುವ ಈ ಕವಿ ತನ್ನ ಅಭಿವ್ಯಕ್ತಿಯನ್ನು ಮೊಟ್ಟಮೊದಲಿಗೆ ಕಂಡುಕೊಂಡದ್ದು ಕನ್ನಡದಲ್ಲಿ ಅಲ್ಲ -ಇಂಗ್ಲಿಷಿನಲ್ಲಿ ಎನ್ನುವುದು ಸ್ವಾರಸ್ಯದ ಸಂಗತಿಯಾಗಿದೆ. ಈ ದಿನ ಕನ್ನಡ ಸಾಹಿತ್ಯವಿಮರ್ಶೆ ಕುವೆಂಪು ಅವರನ್ನು ನವೋದಯ ಸಾಹಿತ್ಯ ಸಂದರ್ಭದ ಪ್ರಮುಖ ಸಾಹಿತಿ ಎಂದು ವರ್ಣಿಸುವುದಾದರೂ, ಅವರ ಕಾವ್ಯಭಿವ್ಯಕ್ತಿಯ ಮೊದಲದಿನಗಳಲ್ಲಿ ಅವರ ಜೀವನ ವಾಹಿನಿ, ನವೋದಯದ ಮುಖ್ಯ ಪ್ರವಾಹಕ್ಕೆ ಸಮಾನಾಂತರವಾದ ದೂರದಲ್ಲಿಯೆ ಹರಿಯುತ್ತ ತನ್ನ ಪಾಡಿಗೆ ತಾನು ತನ್ನದಲ್ಲದ ಭಾಷೆಯೊಂದರಲ್ಲಿ ತನ್ನ ಅಭಿವ್ಯಕ್ತಿಯನ್ನು ಕಂಡುಕೊಳ್ಳುತಿತ್ತು. ಈ ಪ್ರಯತ್ನದ ಪರಿಣಾಮವಾಗಿ, ಅವರಿನ್ನೂ ಮೈಸೂರಿನ ವೆಸ್ಲಿಯನ್ ಮಿಷನ್ ಹೈ ಸ್ಕೂಲಿನ ಎಸ್.ಎಸ್.ಎಲ್.ಸಿ. ತರಗತಿಯ ವಿದ್ಯಾರ್ಥಿಯಾಗಿರುವಾಗಲೆ, ಅಂದರೆ ತಮ್ಮ ಹದಿನೆಂಟನೆಯ ವಯಸ್ಸಿನಲ್ಲಿ The Beginner's Muse ಎಂಬ ಹದಿನಾರು ಪುಟಗಳ ಇಂಗ್ಲಿಷ್ ಭಾಷೆಯ ಕಿರುಕವನ ಸಂಗ್ರಹವನ್ನು ಪ್ರಕಟಿಸಿ, ತಮ್ಮ ಸಹಪಾಠಿಗಳನ್ನೂ ಅಧ್ಯಾಪಕರನ್ನೂ ಚಕಿತಗೊಳಿಸಿದರೆಂಬುದನ್ನು ನೆನೆದರೆ, ಅವರ ಅದಮ್ಯವಾದ ಕಾವ್ಯಪ್ರತಿಭೆ, ತಾನು ಯಾವ ನೆರವು ವಿರ್ದೇಶನಗಳೂ ಇಲ್ಲದೆ ಇಂಗ್ಲಿಷ್ ಸಾಹಿತ್ಯದೊಡನೆ ಹೋರಾಡಿ ನಿರಂತರ ಅಧ್ಯಯನದ ಮೂಲಕ ಕಷ್ಟಪಟ್ಟು ಕರಗತಮಾಡಿಕೊಂಡ ಇಂಗ್ಲಿಷ್ ಭಾಷಾಮಾಧ್ಯಮದಲ್ಲಿ ತನ್ನನ್ನು ತಾನು ಅಭಿವ್ಯಕ್ತಪಡಿಸಿಕೊಳ್ಳಲು ಹವಣಿಸುತಿತ್ತು ಎಂಬುದು ಗಮನಿಸಬೇಕಾದ ಸಂಗತಿಯಾಗಿದೆ. ಮಲೆನಾಡಿನ ಕಾಡಿನ ಹಳ್ಳಿಯ ಹುಡುಗನೊಬ್ಬ ಮೈಸೂರಿನ ಇಂಗ್ಲಿಷ್ ಭಾಷಾಮಾಧ್ಯಮದ ಪ್ರೌಢ ಶಾಲೆಯ ದಿನಗಳಲ್ಲಿ ತನ್ನದಲ್ಲದ ಭಾಷೆಯಾದ ಇಂಗ್ಲಿಷಿನಲ್ಲಿ ಪದ್ಯ ಬರೆಯುವಷ್ಟು ಹಿಡಿತವನ್ನು ಸಾಧಿಸಿಕೊಂಡದ್ದು ನಿಜಕ್ಕೂ ಸೋಜಿಗದ ಸಂಗತಿಯಾಗಿದೆ. ಆಗ ಪ್ರಕಟವಾದ ಇಂಗ್ಲಿಷ್ ಕವನ ಸಂಕಲನದ ಮೊದಲ ಕವಿತೆಯೆ ಈ 'ಸೋಜಿಗ'ವನ್ನು ದೃಢಪಡಿಸುವುದರ ಜತೆಗೆ, ತನ್ನದಲ್ಲದ ಭಾಷೆಯಲ್ಲಿ ಕವನವನ್ನು ಬರೆಯಲಾಶಿಸುವ ಸೂಕ್ಷ್ಮ ಸಂವೇದನಾಶೀಲನಾದ ಕವಿಯೊಬ್ಬ ಎದುರಿಸುತ್ತಿರುವ ಸಾಂಸ್ಕೃತಿಕ ಬಿಕಟ್ಟುಗಳನ್ನು ಪ್ರಕಟಿಸುತ್ತದೆ. ಕವಿತೆಯ ಪ್ರಾರಂಭ ಹೀಗಿದೆ:

Dishearten not my friends this bard unknown
Holds an alien harp and not his own!

ಈ ಪಂಕ್ತಿಗಳು ಮೊಟ್ಟಮೊದಲು ರಂಗಪ್ರವೇಶ ಮಾಡಿದ ಸೂತ್ರಧಾರನ ನಾಂದೀ ಪದ್ಯದಂತಿವೆ.

ಈ ಕವಿತೆಯ ಹಾಡುಗಾರನ ಪ್ರತೀಕ, ಅದರ ಉಕ್ತಿ ಕ್ರಮ ಅಸ್ಖಲಿತವಾದ ಕಾವ್ಯಪ್ರತಿಭೆಯ ಸಹಜಾಭಿವ್ಯಕ್ತಿಗೆ ಸಾಕ್ಷಿಯಾದರೂ, ಈ ತರುಣ ಕವಿಗೆ ಗೊತ್ತಿತ್ತು ಹಾಡಲೆಳಸುವ ತಾನು ತನ್ನ ಕೈಯ್ಯಲ್ಲಿ ಹಿಡಿದಿರುವುದು, ತನ್ನದಲ್ಲದ - ಪರಕೀಯವಾದ (Alien) ತಂತೀವಾದ್ಯ (harp) - ಎಂಬ ಸತ್ಯ. ಆದ್ದರಿಂದಲೇ ಸಹೃದಯನಾದ ಗೆಳೆಯನೊಬ್ಬನಿಗೆ ಸಮಾಧಾನವನ್ನು ಹೇಳುವ ಧಾಟಿಯಲ್ಲಿ ಈ ಅಜ್ಞಾತ ಕವಿ (this bard unknown) ತನ್ನ ಅಧೈರ್ಯವನ್ನು ತಾನೇ ಕಂಡುಕೊಂಡು, ತನ್ನನ್ನೂ ಸಮಾಧಾನಪಡಿಸಿಕೊಳ್ಳುವ ಒಂದು ಬಗೆಯ ಅಳುಕಿನ ದನಿಯಲ್ಲಿ ಮಾತನಾಡುತ್ತಾನೆ. ಹಾಗಾದರೆ ತನ್ನದೆ ಆದ ಅಭಿವ್ಯಕ್ತಿಯನ್ನು ಯಾಕೆ ಕಂಡುಕೊಳ್ಳಲಾಗದೆ, ಪರಕೀಯವಾದ ವಾದ್ಯವೊಂದನ್ನು ಹಿಡಿದು ನಿಲ್ಲುವಂತಾಯಿತು? ಕಾರಣ, ಕುವೆಂಪು ಅವರೆ ತಮ್ಮ ಆತ್ಮ ಕಥನವಾದ 'ನೆನಪಿನ ದೋಣಿ'ಯಲ್ಲಿ ಈ ಕುರಿತು ಪ್ರಸ್ತಾಪಿಸುವಂತೆ, ಅವರು ಬಿ.ಎ. ಪರೀಕ್ಷೆಯಲ್ಲಿ ತೇರ್ಗಡೆಯಾಗಿ ತಮ್ಮ ಇಪ್ಪತ್ತೆರಡನೆಯ ವಯಸ್ಸಿನಲ್ಲಿ ಮಹಾರಾಜಾ ಕಾಲೇಜಿನ ಎಂ.ಎ. ತರಗತಿಯನ್ನು ಸೇರುವವರೆಗೂ, ಅವರಿಗೆ ಅಂದಿನ ಯಾವೊಬ್ಬ ಸಾಹಿತಿಯ ಸಂಪರ್ಕವಾಗಲೀ, ಕನ್ನಡದಲ್ಲಿ ಹೊಸ ಸಾಹಿತ್ಯ ಚಳುವಳಿಯೊಂದು ಪ್ರಾರಂಭವಾಗಿದೆ ಎಂಬುದಾಗಲಿ ಗೊತ್ತೇ ಇರಲಿಲ್ಲ. ಜತೆಗೆ ಪ್ರೌಢಶಾಲೆ ಹಾಗೂ ಕಾಲೇಜಿನ ಇಂಗ್ಲಿಷ್ ಮಾಧ್ಯಮದ ಶಿಕ್ಷಣ ಸಂದರ್ಭದಲ್ಲಿ ಅವರಿಗೆ ಪರಿಚಿತವಾದ ಹಾಗೂ ಮನಸ್ಸನ್ನು ಸೂರೆಗೊಂಡ ಪಶ್ಚಿಮದ ಕಾವ್ಯಾಭಿವ್ಯಕ್ತಿಯ ಮಾದರಿಗಳಿಗೆ ಹೋಲಿಸಿದರೆ, ತಮ್ಮ ಮಲೆನಾಡಿನ ಪರಿಸರದಲ್ಲಿ ತಮ್ಮ ಎಳೆಯಂದಿನಿಂದ ಕಿವಿಯ ಮೇಲೆ ಆಗಾಗ ಬೀಳುತ್ತಿದ್ದ ಷಟ್ಪದಿ, ಕಂದವೃತ್ತಾದಿ ಬಂಧಗಳು, ತಾವು ಹೇಳಲಾಶಿಸುವ ಅನುಭವಗಳಿಗೆ ತಕ್ಕ ಮಾಧ್ಯಮವಾಗಲಾರವು ಎಂಬ ಅರಿವಿನಿಂದ ಅವರು ಇಂಗ್ಲಿಷ್ ಭಾಷೆಯನ್ನು ಮೊದಲಿಗೆ ತಮ್ಮ ಕಾವ್ಯಾಭಿವ್ಯಕ್ತಿಯ ಮಾಧ್ಯಮವನ್ನಾಗಿ ಮಾಡಿಕೊಂಡು ಬಹು ಸಂಖ್ಯೆಯ ಪ್ರಯೋಗಗಳನ್ನು ಮಾಡಿದ್ದಾರೆ. 'ನೆನಪಿನದೋಣಿ'ಯಲ್ಲಿ ಎಂಬ ಅವರ ಆತ್ಮಕಥನದ ಬೃಹತ್ ಸಂಪುಟದಲ್ಲಿ ಅವರು ಬರೆದ ಬಹು ಸಂಖ್ಯೆಯ ಇಂಗ್ಲಿಷ್ ಕವನಗಳನ್ನು ಕಾಣಬಹುದು. ಈ ಕವಿತೆಗಳು ಅವರು ಅನಂತರ ಬರೆದ ಕನ್ನಡದ ಶ್ರೇಷ್ಠ ಕವಿತೆಗಳ ಮುಂದೆ ನಿಲ್ಲಲಾರವೆಂಬುದು ನಿಜವಾದರೂ, ಅವರು ಬರೆದ ಇಂಗ್ಲಿಷ್ ಭಾಷೆಯ ಬಹು ಸಂಖ್ಯೆಯ ಕವಿತೆಗಳೊಳಗಿನ ಭಾಷಾಪ್ರಭುತ್ವ ಹಾಗೂ ಬಂಧ ಯಾರನ್ನೂ ಬೆರಗುಗೊಳಿಸವಂಥದಾಗಿದೆ. ಅಷ್ಟೆ ಅಲ್ಲ, ಅವರು ಕನ್ನಡದಲ್ಲಿ ಆವಿಷ್ಕಾರಗೊಳಿಸಿದ ವಿವಿಧ ಕಾವ್ಯಪ್ರಕಾರಗಳಿಗೆ ಪ್ರೇರಣೆ - ಮಾದರಿ ಹಾಗೂ ಸ್ಫೂರ್ತಿಯನ್ನೊದಗಿಸಿದ ಮೊದಲ ಕಾವ್ಯ ಪ್ರಯೋಗಶಾಲೆಯಂತೆ ತೋರುತ್ತದೆ, ಅವರು ಕನ್ನಡಕ್ಕೆ ತಿರುಗುವ ಮುನ್ನಿನ ಈ ಕಾವ್ಯ ಸಂದರ್ಭ. ಅಂತೂ ಕುವೆಂಪು ಕನ್ನಡದಲ್ಲಿ ಬರೆಯುವ ಮೊದಲೇ - ಇಂಗ್ಲಿಷಿನಲ್ಲಿ ಬರೆದು 'ಕವಿ'ಯಾಗಿ ಹೆಸರು ಮಾಡಿದ್ದರು. ಅವರನ್ನು ಸಂಪೂರ್ಣವಾಗಿ ಕನ್ನಡದ ಕಡೆ ತಿರುಗಿಸಿದ್ದು, ಐರಿಷ್ ಕವಿ ಜೆ.ಎಚ್.ಕಸಿನ್ಸ್ ಅವರೊಡನೆ ನಡೆದ ಮುಖಾಮುಖಿಯ ಸಂದರ್ಭ. ಅದು ಸಂಭವಿಸಿದ್ದು ೧೯೨೪ನೆ ಜುಲೈ ಎರಡನೆ ದಿನಾಂಕ.

Alien harpನ್ನು (ಪರಕೀಯ ತಂತೀವಾದ್ಯವನ್ನು) ಹಿಡಿದು, ಆ ಕಿರಿಯ ವಯಸ್ಸಿಗೆ

'ಕವಿ' ಎಂದು ಹೆಸರು ಮಾಡಿದ ಪುಟ್ಟಪ್ಪನವರಿಗೆ, ತಾವು ಹಿಡಿದ ಅಭಿವ್ಯಕ್ತಿಯ ದಾರಿ, ನಿಜವಾಗಿಯೂ ತನ್ನದಲ್ಲದ್ದು ಮಾತ್ರವಲ್ಲ, ತನಗೆ ಸಲ್ಲದ್ದು ಕೂಡ ಎಂಬ ಸಂಗತಿಯನ್ನು ಖಚಿತಗೊಳಿಸಿದವರು, ಜೆ.ಎಚ್.ಕಸಿನ್ಸ್ ಅವರು. ಪುಟ್ಟಪ್ಪನವರು ಬರೆದ ಬಹು ಸಂಖ್ಯೆಯ ಇಂಗ್ಲಿಷ್ ಕವನಗಳ ಮೇಲೆ ಕಣ್ಣಾಡಿಸಿ, 'ಏನಿದೆಲ್ಲ ಕಗ್ಗ' (What is all this stuff?) ಎಂದು ಪ್ರತಿಕ್ರಯಿಸುವುದರ ಮೂಲಕ, ಅವರು ಇಂಗ್ಲಿಷ್ ಕವಿತಾ ರಚನೆಯ ಹೆಮ್ಮೆಯಿಂದ ಕಟ್ಟಿಕೊಂಡ ಭ್ರಮೆಗೆ ಬಲವಾದ ಆಘಾತವನ್ನುಂಟುಮಾಡಿದ್ದಲ್ಲದೆ, 'ನೀವು ಏನು ಮಾಡಿದರೂ ನಿಮ್ಮದಲ್ಲದ ಭಾಷೆಯಲ್ಲಿ ನಿಮ್ಮ ಅಭಿವ್ಯಕ್ತಿಯನ್ನು ಕಂಡುಕೊಳ್ಳಲಾರಿರಿ; ಅದರಲ್ಲೂ ಕವಿತೆಯಂಥ ಸೃಜನಾತ್ಮಕ ಅಭಿವ್ಯಕ್ತಿಯಂತೂ ನಿಮ್ಮದಲ್ಲದ ಪರಕೀಯ ಭಾಷೆಯಲ್ಲಿ ನಿಮಗೆ ಸಾಧ್ಯವೇ ಇಲ್ಲ' – ಎಂಬ ವಿವೇಕದ ಮಾತುಗಳನ್ನಾಡಿ ಪುಟ್ಟಪ್ಪನವರನ್ನು ಅಂದಿನ ನವೋದಯದ ಮುಖ್ಯ ಪ್ರವಾಹದತ್ತ ತಿರುಗಿಸಿದವರು ಕಸಿನ್ಸ್. ಕಸಿನ್ಸ್ ಅವರನ್ನು ಭೇಟಿಯಾಗುವ ಮುನ್ನ ಈ ತರುಣ ಕವಿ ಕನ್ನಡದಲ್ಲಿ ಏನನ್ನೂ ಬರೆಯಲು ಪ್ರಯತ್ನಿಸಿರಲಿಲ್ಲ ಎಂಬುದು ನಿಜವಲ್ಲವಾದರೂ, ಕನ್ನಡದಲ್ಲೂ ಇಂಗ್ಲಿಷಿನಲ್ಲೂ ಏಕಕಾಲಕ್ಕೆ ಬರೆದು ತಾನು ಸವ್ಯಸಾಚಿಯಾಗಬಹುದೇನೋ ಎಂಬ ಭ್ರಮೆಯನ್ನು ನಿರಸನಗೊಳಿಸಿದ್ದು ಈ ಮುಖಾಮುಖಿಯ ಪರಿಣಾಮವಾಗಿದೆ. ಈ ಒಂದು ಘಟನೆಯ ಅನಂತರ, ಕುವೆಂಪು ಅವರ ದಾಖಲೆಯಂತೆ ಜುಲೈ (೧೯೨೪) ಹತ್ತರ ನಂತರ "ಕನ್ನಡದಲ್ಲಿ ಬರೆಯುವ ಸ್ಫೂರ್ತಿಯ ಜೋರಿಗೆ ಸಿಕ್ಕಿ ಒಂದೆ ತಿಂಗಳಲ್ಲಿ ಅರುವತ್ತೇಳು ಕವನಗಳು" (ನೆನಪಿನದೋಣಿಯಲ್ಲಿ ಪು.೩೭೧. ೧೯೮೦)ರಚಿತವಾದುವೆಂದು ತಿಳಿದುಬರುತ್ತದೆ. ಕುವೆಂಪು ಕನ್ನಡದ ಕಡೆ ತಿರುಗಿದ ಈ ಸ್ಫೂರ್ತಿಯ ಪ್ರವಾಹದಲ್ಲಿ, ಅವರು ಅದುವರೆಗೂ ಹಿಡಿದುಕೊಂಡಿದ್ದ Alien harp ಕೊಚ್ಚಿಕೊಂಡು ಹೋದದ್ದಂತೂ ನಿಜ. ಅನಂತರ ಅವರ ಕೈಗೆ ಬಂದದ್ದು ಕೊಳಲು; ಮಲೆನಾಡಿನ ಕಾಡಿನ ಕೊಳಲು.

ಚಾರಿತ್ರಿಕವಾಗಿ ಗುರುತಿಸುವುದಾದರೆ ಕುವೆಂಪು ಅವರ ಮೊದಲ ಕನ್ನಡ ಕವನ ಸಂಗ್ರಹ 'ಕೊಳಲು'. ಕನ್ನಡ ನವೋದಯದ ಆಚಾರ್ಯರೆಂದು ಹೇಳಲಾದ ಬಿ.ಎಂ. ಶ್ರೀ ಕಂಠಯ್ಯನವರ ಮುನ್ನುಡಿಯೊಂದಿಗೆ ೧೯೩೦ರಲ್ಲಿ ಪ್ರಕಟವಾದ ಈ ಸಂಗ್ರಹದಲ್ಲಿ, ಕುವೆಂಪು ೧೯೨೬ ರಿಂದ ೧೯೨೯ ರವರೆಗೆ ಬರೆದ ಸಾಕಷ್ಟು ಸಂಖ್ಯೆಯ ಪದ್ಯಗಳಿವೆ. ಅಷ್ಟೆ ಅಲ್ಲ, ಮುಂದೆ ಅವರ ಕಾವ್ಯದ ಉದ್ದಕ್ಕೂ ಸ್ಥಾಯಿಯಾಗಿ ಕಾಣಿಸುವ ಅನೇಕ ಆಶಯಗಳನ್ನು ಬೀಜರೂಪವನ್ನಾಗಿ ಉಳ್ಳ ಕವನ ಸಂಕಲನ ಇದಾಗಿದೆ. ಇವುಗಳಲ್ಲಿ ಮುಖ್ಯವಾದದ್ದು ಕುವೆಂಪು ತಮ್ಮನ್ನು 'ಕಾಡ ಕವಿ' (ಕಾಡಿನ ಕವಿ) ಎಂದು ಘೋಷಿಸಿಕೊಂಡಿದ್ದೂ ಒಂದು. ಈ ಸಂಕಲನದ ಮೊದಲ ಕವಿತೆಯಾದ 'ಗೊಲ್ಲನ ಬಿನ್ನಹ'

ಕಾಡಿನ ಕೊಳಲಿದು ಕಾಡ ಕವಿಯು ನಾ
ನಾಡಿನ ಜನರೊಲಿದಾಲಿಪುದು
ಬೃಂದೆಯನಂದನ ಕಂದನೆ ಬಂದು
ಗೊಲ್ಲನ ಕೊಳಲಲಿ ನಿಂದಿಹನೆಂದು
ಭಾವಿಸಿ ಮನ್ನಿಸಿ ಲಾಲಿಪುದು

ಎಂದು ಪ್ರಾರಂಭವಾಗುತ್ತದೆ. ಈ ಪ್ರಸ್ತಾವನೆಯಲ್ಲಿ, ತನ್ನದಲ್ಲದ ಹಾಗೂ ಅನ್ಯ ದೇಶೀಯವಾದ ತಂತೀವಾದ್ಯವನ್ನು ಹಿಡಿದು ಕಾವ್ಯವೇದಿಕೆಯ ಮೇಲೆ ನಿಂತಂದಿನ ಅಳುಕಾಗಲೀ, ಅಧೈರ್ಯವಾಗಲೀ ಇಲ್ಲ. ಯಾಕೆಂದರೆ ಆ Alien harp ಅನ್ನು ವಿಸರ್ಜಿಸಿ, ಕಾಡಿನ ಕೊಳಲನ್ನು ಹಿಡಿದು ತನ್ನ ನಾಡಿನ ಜನರ ಮುಂದೆ ಈ ಕವಿ, ತನ್ನನ್ನು 'ಕಾಡಿನ ಕವಿ' ಎಂದು ಘೋಷಿಸಿಕೊಳ್ಳುವ ದನಿಯಲ್ಲಿ, ತನ್ನ ನಿಜವಾದ ನೆಲೆಯನ್ನು ಕಂಡುಕೊಂಡ ಆತ್ಮವಿಶ್ವಾಸವೂ, ತನ್ನದೇ ಆದ ಭಾಷೆಯಲ್ಲಿ ಸಹಜಾಭಿವ್ಯಕ್ತಿಯನ್ನು ಕಂಡುಕೊಂಡ ಸಂಭ್ರಮವೂ ಏಕ ಕಾಲಕ್ಕೆ ಕಾಣಿಸಿಕೊಂಡಿವೆ. ಹಾಗೆಯೆ ತನ್ನ ಈ ಕೊಳಲಿನಲ್ಲಿ 'ಬೃಂದೆಯ ನಂದನ ಕಂದ'ನಾದ ಸಾಕ್ಷಾತ್ ಶ್ರೀ ಕೃಷ್ಣನೇ ನಿಂದು ವಿವಿಧ ರಾಗಗಳನ್ನು ನುಡಿಸುತ್ತಾನೆ ಎಂದು ಭಾವಿಸಿ, ಮನ್ನಿಸಿ ತನ್ನ ಕವಿತೆಯನ್ನು ಕೇಳಬೇಕೆಂದು ಕವಿ ಸಹೃದಯರಲ್ಲಿ ಬಿನ್ನವಿಸಿಕೊಳ್ಳುವ ಹಂಬಲವಿದೆ. ಈ ಒಂದು ನಿವೇದನೆಯ ಮೂಲಕ ಕವಿ ಕುವೆಂಪು ಈ ದೇಶದ ಭಕ್ತಿ ಹಾಗೂ ಅನುಭಾವಿ ಕವಿಗಳ ಅಹಂನಿರಸನದ ಕಾವ್ಯಶ್ರದ್ಧೆಯ ವ್ಯಕ್ತಿತ್ವದೊಂದಿಗೆ ತಮ್ಮನ್ನು ಸಮೀಕರಿಸಿಕೊಳ್ಳುತ್ತಾರೆ. ಕನ್ನಡ ಕಾವ್ಯರಂಗ ಪ್ರವೇಶದ ಧಾಟಿಯಲ್ಲಿರುವ ಈ ಪ್ರಸ್ತಾವನೆಯಲ್ಲಿ ಮುಖ್ಯವಾಗಿ ಗಮನಿಸಬೇಕಾದ ಮಾತೆಂದರೆ 'ಕಾಡಿನ ಕವಿ' ಎನ್ನುವುದು.

'ತೆರೆ ತೆರೆಯೆದ್ದರಣ್ಯಶ್ರೇಣಿ'ಯ ಸಹ್ಯಾದ್ರಿಯ ಮಲೆನಾಡು ಕುವೆಂಪು ಅವರ ಜನ್ಮಭೂಮಿ; ಅವರ ಕರ್ಮ ಭೂಮಿ; ಅವರ ತಪೋ ಭೂಮಿ. ಕುವೆಂಪು ಬರುವ ಮುನ್ನ ಕೇವಲ ಕಾಡು - ಬೆಟ್ಟಗಳೆಂಬ ಭೌಗೋಲಿಕ ವಾಸ್ತವ ಮಾತ್ರವಾಗಿ 'ಮಳೆ, ಸೊಳ್ಳೆ, ಮಲೇರಿಯಾ, ಹುಲಿ, ಹಾವು, ರೋಗ, ಸಾವು, ಭೂತ ಬೆಂತರಗಳ ಬೀಡಾಗಿ', 'ಭೂಮಿಯಲ್ಲಿ ಹುಟ್ಟಿದ್ದಕ್ಕೆ ಹೇಗಾದರೂ ಮಾಡಿ ನಿವಾರಿಸಿಕೊಳ್ಳಬೇಕಾದ ಒಂದು ದುರ್ಗಮ ದುರಂತ ಭೂ ಭಾಗ'ವಾಗಿದ್ದ ಮಲೆನಾಡು, ಕುವೆಂಪು ಅದರೊಳಗಿನ ಸಂಕಲ್ಪ ಶಕ್ತಿಯಂತೆ ಸಂಭವಿಸಿದ ಮೇಲೆ, ಹಠಾತ್ತನೆ ಅವರ ಕವಿಪ್ರತಿಭೆಯ ಮೂಲಕ ತನ್ನ ಅಸಂಖ್ಯ ಸೌಂದರ್ಯ ವೈಭವಗಳ ಸಹಿತ ಪ್ರತ್ಯಕ್ಷವಾದ ಪರಿ ಆಶ್ಚರ್ಯಕರವಾಗಿದೆ. ಬೇರೆ ಮಾತಿನಲ್ಲಿ ಹೇಳುವುದಾದರೆ, ಸಹ್ಯಾದ್ರಿಯ ಪರ್ವತಾರಣ್ಯ ಪ್ರಪಂಚವೇ ತನ್ನ ಅಭಿವ್ಯಕ್ತಿಗಾಗಿ ಕುವೆಂಪು ಅವರಂಥ ಕವಿಯನ್ನು ಸೃಷ್ಟಿಸಿತೋ ಏನೊ! ಈ ಅರ್ಥದಲ್ಲಿ ಕುವೆಂಪು 'ಕಾಡಿನ ಕವಿ'. ಅವರು ಮೂಲತಃ 'ಕಾಡಿನ ಕವಿ' ಎನ್ನುವುದೇ ಕನ್ನಡ ಸಾಹಿತ್ಯ ಸಂದರ್ಭದ ಇತರ ಪ್ರಮುಖ ಬರೆಹಗಾರರಿಂದ, ಅವರನ್ನು ಬೇರ್ಪಡಿಸುವ ಲಕ್ಷಣವಾಗಿದೆ. ಕನ್ನಡದಲ್ಲಿ ನಿಸರ್ಗವನ್ನು ಗಾಢವಾಗಿ ಒಲಿದ ಹಾಗೂ ಅದರ ಚೆಲುವನ್ನು ಕುರಿತು ಬರೆದ ಕವಿಗಳು ಹಲವರಿದ್ದಾರೆ. ಆದರೆ ಅವರ್‍ಯಾರೂ ಬಹುಶಃ ಕುವೆಂಪು ಅವರಂತೆ ಇಂಥ ದುರ್ಗಮ ಅರಣ್ಯ ಶ್ರೇಣಿಯ ದಟ್ಟವಾದ ಅನುಭವಗಳಲ್ಲಿ ಬೇರೂರಿ ಬೆಳೆದವರಲ್ಲ; ಮತ್ತು - ಕನ್ನಡದ ಮೊದಲ ಕವಿ ಪಂಪನನ್ನು ಹೊರತುಪಡಿಸಿದರೆ - ಯಾರೂ ಕುವೆಂಪು ಅವರಂತೆ, ರಮ್ಯತೆಯಿಂದ ಮೊದಲುಗೊಂಡು ಭವ್ಯತೆಯವರೆಗಿನ, ಅರಣ್ಯ ನಿಸರ್ಗಾನುಭವಗಳನ್ನು ಗ್ರಹಿಸಿ ಅಭಿವ್ಯಕ್ತಿಸಿದವರಲ್ಲ. ಈ ಪರ್ವತಾರಾಣ್ಯ ಪ್ರಪಂಚದ ರುದ್ರ - ರಮಣೀಯ ಅದ್ಭುತ ಸೌಂದರ್ಯದ ಅನೇಕ ಪರಿಗಳನ್ನೂ, ಋತು ಋತುವಿಗೂ ಬದಲಾಗುವ ಅದರ ವರ್ಣವಿಲಾಸ ಹಾಗೂ ವೈಶಿಷ್ಟ್ಯಗಳನ್ನೂ, ಅದರೊಳಗಿನ ಪ್ರಾಣಿ - ಪಕ್ಷಿ

- ಕ್ರಿಮಿ - ಕೀಟಾದಿಗಳ ಚಹರೆ ಮತ್ತು ಚಲನವಲಗಳನ್ನೂ, ಒಟ್ಟಾರೆಯಾಗಿ ಸಹ್ಯಾದ್ರಿಯ ಸಮಸ್ತ ಪರಿಸರವನ್ನೂ, ಬಯಲುನಾಡಿನವರೆಂದೂ ಕಾಣದ ಹಾಗೂ ಕೇಳದ ಮೃಗಯಾ ವಿನೋದದ ಸಾಹಸ ಕಥನಗಳನ್ನೂ, ನಗರ ನಾಗರಿಕತೆಗೆ ಅರಣ್ಯಸಂಸ್ಕೃತಿ ಮುಖಾ ಮುಖಿಯಾಗುವ ಸಂದರ್ಭಗಳನ್ನೂ, ಈ ನಿಬಿಡಾರಣ್ಯಗಳ ನಡುವೆ ಅದುವರೆಗೂ ಅನಾವರಣಗೊಳ್ಳದಿದ್ದ ಮಲೆನಾಡಿನ ಬದುಕಿನ ವೈವಿಧ್ಯ ಹಾಗೂ ಸಂಘರ್ಷಗಳನ್ನೂ ಮೊತ್ತ ಮೊದಲಬಾರಿಗೆ ತೆರೆದು ತೋರಿದವರು ಕುವೆಂಪು ಅವರೊಬ್ಬರೇ. ಆದರೆ ಅವರ ಕವಿತೆಯೊಳಗೆ ಪ್ರಕಟವಾಗುವ ನಿಸರ್ಗಾನುಭವವು, ಅವರ ಕತೆ ಕಾದಂಬರಿಗಳಲ್ಲಿ ವ್ಯಕ್ತವಾಗುವ ನಿಸರ್ಗಾನುಭವದಷ್ಟು ವಾಸ್ತವ ಬದುಕಿನ ಸ್ಪರ್ಶವನ್ನೂ, ವಿವರಗಳನ್ನೂ, ಸಮಗ್ರತೆಯನ್ನು ಪಡೆದುಕೊಂಡಿಲ್ಲವೆಂಬ ಮಾತನ್ನು ಒಪ್ಪಿಕೊಂಡರೂ, ಅವರ ಕಾವ್ಯದಲ್ಲಿ ಕವಿ ಕುವೆಂಪು ಏಕಾಂಗಿಯಾಗಿ ನಿಸರ್ಗದೊಂದಿಗೆ ನಡೆಯಿಸುವ ಅನುಸಂಧಾನವು ಅತ್ಯಂತ ಉತ್ಕಟವಾದದ್ದೂ, ಅನುರಕ್ತಿಯ ರೂಪದ್ದೂ, ಆರಾಧನೆಯ ಸ್ವರೂಪದ್ದೂ ಆಗಿದೆ. ನಿಸರ್ಗದೊಂದಿಗಿನ ಈ ಅನುರಕ್ತಿ ಅವರಿಗೆ ಜನ್ಮಜಾತವಾಗಿ ಬಂದದ್ದು. 'ಮಲೆಯ ನಾಡೆನಗೆ ತಾಯಿಮನೆ, ಕಾಡು ದೇವರ ಬೀಡು' ಎಂಬ ಶ್ರದ್ಧೆಯನ್ನುಳ್ಳ ಈ ಕವಿ 'ಪ್ರಕೃತಿಯ ಉಪಾಸಕ'ನಾದದ್ದು ತೀರಾಸಹಜವಾಗಿದೆ. ತಮ್ಮ ನಿಸರ್ಗ ಕವಿತೆಗಳ ಮೂಲಕ ಪಶ್ಚಿಮದ ರೊಮ್ಯಾಂಟಿಕ್ ಕವಿಗಳನ್ನು ಕುವೆಂಪು ನೆನಪಿಗೆ ತರುವಂತೆ ತೋರಿದರೂ, ಮತ್ತು ಅವರಿಂದ ನಿಸರ್ಗ ಸೌಂದರ್ಯಾನುಭವಕ್ಕೆ ಕಾವ್ಯ ರೂಪದಲ್ಲಿ ಆಕಾರವನ್ನು ನೀಡುವ ವಿಧಾನವನ್ನು ಕಲಿತುಕೊಂಡರೂ, ಪಶ್ಚಿಮದ ರೊಮ್ಯಾಂಟಿಕ್ ಕವಿಗಳಂತೆ ಬದುಕಿನ ಬವಣೆಗೆ ಬೇಸತ್ತು ಅಥವಾ ಕೈಗಾರಿಕೀಕರಣ, ಯಾಂತ್ರೀಕರಣ, ನಗರೀಕರಣ ಇತ್ಯಾದಿ ಆಧುನಿಕ ಯುಗ ನಿರ್ಮಿತ ರೇಜಿಗೆ ಹಾಗೂ ಭ್ರಮೆಗಳಿಂದ ಪಾರಾಗಿ ಸಮಾಧಾನವನ್ನು ಕಂಡುಕೊಳ್ಳಲು ನಿಸರ್ಗದ ಕಡೆ ತಿರುಗಿದವರಲ್ಲ. ಹಾಗೆ ನೋಡಿದರೆ ಕುವೆಂಪು ಬರೆಯುವ ಕಾಲಕ್ಕೆ ಪಶ್ಚಿಮದ ರೊಮ್ಯಾಂಟಿಕ್ ಕವಿಗಳಿಗೆ ಅಂದು ಇದ್ದಂಥ ಪರಿಸ್ಥಿತಿ ನಮ್ಮಲ್ಲಿನ್ನೂ ಉಂಟಾಗಿರಲಿಲ್ಲ. ನಿಸರ್ಗದ ಬಗೆಗಿದ್ದ ಅವರ ಅನುರಕ್ತಿ, ಸದಾ ಅವರ ಸ್ಮೃತಿಯ ಒಂದು ಭಾಗವಾಗಿ, ನಿರಂತರ ಕಾಡುವ ಹಸಿವಾಗಿ, ದಾಹವಾಗಿ, ತನ್ನ ವ್ಯಕ್ತಿತ್ವದ ಒಂದು ವಿಸ್ತರಣೆಯಂತೆ ಕಣ್ಣೆದುರು ಚಾಚಿಕೊಂಡ ನಿಸರ್ಗದಲ್ಲಿ ಅವರನ್ನು ಏಕಾಂಗಿಯಾದ ರಸಯಾತ್ರಿಕನನ್ನಾಗಿ ಪರಿವರ್ತಿಸಿತು. 'ಭೂಮಿಯ ಕವಿ ವ್ಯೋಮದ ರವಿ, ಪ್ರೇಕ್ಷಕರಿನ್ನೊಬ್ಬರ ಕಾಣೆ' ಎಂಬಂಥ ನಲೆಯಲ್ಲಿ ನಿಂತು, ನಿಸರ್ಗದ ಚೆಲುವಿನ-ವೈಭವದ ಮುಖಗಳನ್ನು ಕುರಿತು ಬರೆಯುತ್ತಲೆ, ಅವರು ಪಡೆದುಕೊಳ್ಳುವ ಅನುಭವಗಳು ಕೇವಲ ಸೌಂದರ್ಯಾನುಭವ ಮಾತ್ರವಾಗದೆ ಅದನ್ನೂ ಮೀರಿದ ಆಧ್ಯಾತ್ಮಿಕವಾದ ನೆಲೆಯನ್ನು ತಲುಪುತ್ತವೆ. ಧಾರ್ಮಿಕವಾಗಿ ನೋಡುವುದಾದರೆ ಅದು ಧ್ಯಾನ - ಪೂಜೆ - ಜಪತಪಾದಿಗಳ ಮೂಲಕ ಸಾಧಕನಾದವನು ತಲುಪಬಹುದಾದ ಪರಮಪ್ರಯೋಜನದ ಒಂದು ನೆಲೆ. ಕುವೆಂಪು ಈ ನಿಸರ್ಗ ಪ್ರೀತಿಯಿಂದ ಮನುಷ್ಯ, ಈ ಒಂದು ನೆಲೆಯನ್ನು ತಲುಪಬಹುದೆಂಬುದನ್ನು ಒಂದು ಸಾಕ್ಷಾತ್ಕಾರವೆಂಬಂತೆ ಎತ್ತಿ ಹೇಳುತ್ತಾರೆ. ಈ ನಿಸರ್ಗದಲ್ಲಿ 'ಸಕಲಾರಾಧನ ಸಾಧನ ಬೋಧನದನುಭವ ರಸ'ವನ್ನು ಪಡೆಯುವ ಕುವೆಂಪು, ಮನುಷ್ಯ ನಿರ್ಮಿತವಾದ ಗುಡಿ -

ಚರ್ಚು - ಮಸೀದಿಗಳನ್ನು ನಿರಾಕರಿಸಿ 'ಆವ ಗುಡಿಮಿಗಿಲು ಈ ಭುವನ ದೇವಾಲಯಕೆ?' ಎಂಬ ನಿಲುವನ್ನು ಎತ್ತಿಹಿಡಿಯುತ್ತಾರೆ. ತೀರ ಗಮನಿಸಬೇಕಾದ ಸಂಗತಿಯೆಂದರೆ, ನಿಸರ್ಗದ ಚೆಲುವಿನ ನಡುವೆ, ಅವರು ಧ್ಯಾನಸ್ಥಿತಿಯ ಮೂಲಕ ಏರ್ಪಡಿಸಿಕೊಳ್ಳುವ ಸಂವಾದ ಹಾಗೂ ತಲ್ಲೀನತೆಯ ಸ್ಥಿತಿಯನ್ನು 'ರಸಾನುಭೂತಿ' ಎಂಬ ಪಾರಿಭಾಷಿಕದ ಮೂಲಕ ಸೂಚಿಸುತ್ತಾರೆ. ಇದನ್ನು ವೇದಾಂತದ ಮಾತಿನಲ್ಲಿ ಹೇಳುವುದಾದರೆ 'ಅದ್ವೈತ' ಎಂದು ಕರೆಯಬಹುದು. ಎಂದರೆ ವಸ್ತುವೊಂದನ್ನು ನೋಡುತ್ತ ಪರಿಭಾವಿಸುತ್ತ ತಾನೇ ಅದಾಗುವುದು ಅಷ್ಟೆ ಅಲ್ಲ, ಎಲ್ಲವನ್ನೂ ಅಖಂಡ ಚೈತನ್ಯದ ಅಭಿವ್ಯಕ್ತಿ ಎಂಬಂತೆ ಕಾಣುವುದು; ಜಡಕ್ಕೂ ಚೇತನಕ್ಕೂ ಯಾವುದೇ ವ್ಯತ್ಯಾಸವಿಲ್ಲವೆಂಬಂಥ ನೆಲೆಯಲ್ಲಿ ನಿಲ್ಲುವುದು; ಸರ್ವವನ್ನೂ ಸಮದರ್ಶನದಲ್ಲಿ ಪರಿಭಾವಿಸುವುದು - ಇತ್ಯಾದಿಗಳು ಕುವೆಂಪು ತಲುಪುವ 'ಅದ್ವೈತ' ಸ್ಥಿತಿಯ ಅನುಭವಗಳು. ಕುವೆಂಪು ಅವರ ಅನೇಕ ನಿಸರ್ಗಪರ ಕವಿತೆಗಳಲ್ಲಿ ಮುಖ್ಯವಾಗಿ 'ಪಕ್ಷಿಕಾಶಿ' 'ಕೃತ್ತಿಕೆ' ಈ ಸಂಕಲದ ಕವಿತೆಗಳಲ್ಲಿ - ಮತ್ತು ಈ ಜಗತ್ತಿನ ಸೃಷ್ಟಿಯನ್ನು ಕುರಿತು ಖಗೋಳ ವಿಜ್ಞಾನ, ವಿಕಾಸವಿಜ್ಞಾನಗಳ ತಿಳಿವಳಿಕೆಯಿಂದ ಬರೆದ 'ಶಿಲಾತಪಸ್ವಿ' 'ನಟರಾಜ' 'ನಾನು' ಇಂಥ ಕವಿತೆಗಳಲ್ಲಿ ಅದ್ವೈತಾನುಭವದ ಹಾಗೂ ಜಡವು ಚೈತನ್ಯವಾಗಿ ಪರಿಣಾಮಗೊಳ್ಳುವ ಚಿಂತನೆಗಳನ್ನು ಗುರುತಿಸಬಹುದು. ಇದು ಉಪನಿಷತ್ತಿನ ದರ್ಶನವೂ ಹೌದು. ವಿಜ್ಞಾನವು ಕಂಡುಕೊಂಡ ಸತ್ಯವೂ ಹೌದು. ಕುವೆಂಪು ಅವರ ಸಾಮಾಜಿಕ ಹಾಗೂ ತಾತ್ವಿಕ ವೈಚಾರಿಕತೆಯು ರೂಪುಗೊಂಡಿರುವುದು ವಿಜ್ಞಾನ ಹಾಗೂ ವೇದಾಂತದ ಗಾಢವಾದ ತಿಳಿವಳಿಕೆಯಿಂದಲೇ.

ಕುವೆಂಪು ನಮ್ಮ ಕಾಲದ ಮಹತ್ವದ ಕವಿ ಮಾತ್ರವಲ್ಲ, ಶ್ರೇಷ್ಠ ವಿಚಾರವಂತರೂ ಹೌದು. ಅವರ ಕವಿತಾ ಪ್ರತಿಭೆಯಂತೆಯೆ, ಅವರ ವಿಚಾರ ಶಕ್ತಿಯೂ ಅವರಲ್ಲಿ ಮೊದಲಿನಿಂದಲೂ ಮೊಳಕೆಯೊಡೆದವುಗಳು. ಅವು ಕೇವಲ ಪುಸ್ತಕ ವಿದ್ಯೆಯ ಪರಿಣಾಮಗಳಲ್ಲ. ಅನಂತರ ಅವರು ಅಧ್ಯಯನದ ಮೂಲಕ ಮೈಗೂಡಿಸಿಕೊಂಡ ವಿವಿಧ ಜ್ಞಾನ ಶಾಖೆಗಳ ತಿಳಿವು ಅವರ ಸಮಗ್ರ ಸಾಹಿತ್ಯ ನಿರ್ಮಿತಿಯ 'ವ್ಯುತ್ಪತ್ತಿ'ಯಂತೆ ಬಳಕೆಗೆ ಬಂದಿದೆ. ಅವರೇ ಒಂದೆಡೆ ಕನ್ನಡ ಸಾಹಿತ್ಯವಿಮರ್ಶೆ ಕೇವಲ ತಮ್ಮ ಕಾವ್ಯದ ಭಾವಮುಖ ವಷ್ಟನ್ನೆ ಗಮನಿಸುವುದರಲ್ಲಿ ತೋರಿದ ಉತ್ಸಾಹವನ್ನು, ತಮ್ಮ ಸಾಹಿತ್ಯದ ಹಿನ್ನೆಲೆಗಿರುವ ವೈಚಾರಿಕ ಮುಖವನ್ನು ಅರ್ಥಮಾಡಿಕೊಳ್ಳುವ ಕಡೆ ಅಷ್ಟಾಗಿ ತೋರಿಲ್ಲ ಎಂದು ಅರ್ಧ ಕೊರಗಿನ, ಅರ್ಧ ಆಕ್ಷೇಪಣೆಯ ದನಿಯಲ್ಲಿ ಮಾತನಾಡಿದ್ದಾರೆ: "ನನ್ನ ಕವಿಪ್ರತಿಭೆ ತನ್ನ ರಸಧರ್ಮಕ್ಕೆ ಒಂದಿನಿತೂ ಭಂಗ ಬರದಂತೆ ವೈಚಾರಿಕ ಬುದ್ಧಿಯನ್ನೂ ವೈಜ್ಞಾನಿಕ ದೃಷ್ಟಿಯನ್ನೂ ಸಮಪ್ರಮಾಣದಲ್ಲಿ ಅಳವಡಿಸಿಕೊಂಡಿರುವುದನ್ನು ಸಹೃದಯರು ಗುರುತಿಸಲಾಗದಿದ್ದರೆ ನನ್ನನ್ನು ಆಂಶಿಕವಾಗಿ ಮಾತ್ರ ಪರಿಶೀಲಿಸಿದಂತಾಗುತ್ತದೆ: ನನ್ನ ಸಂಪೂರ್ಣತ್ವಕ್ಕೆ ಚ್ಯುತಿ ಬರುತ್ತದೆ" (ನೆನಪಿನ ದೋಣಿಯಲ್ಲಿ ಪು. ೬೮ - ೧೯೮೦). ಕುವೆಂಪು ಅವರ ಸಾಹಿತ್ಯವನ್ನು ಅವರ ಈ ನಿರ್ದೇಶನದ ದೃಷ್ಟಿಯಿಂದ ನೋಡುವುದು ಅಗತ್ಯವಾಗಿದೆ ಎಂಬ ಮಾತನ್ನು ಒಪ್ಪುತ್ತಾ, ಇತ್ತೀಚಿನ ಸಾಹಿತ್ಯ ವಿಮರ್ಶೆಯಲ್ಲಿ ಕುವೆಂಪು ಅವರ ಸಾಹಿತ್ಯವನ್ನು ಈ ನಿಲುವಿನಿಂದ ಚರ್ಚಿಸಿದ ಪ್ರಯತ್ನ ಸ್ವಲ್ಪಮಟ್ಟಿಗೆ ನಡದಿದೆ ಎಂಬುದನ್ನು ಇಲ್ಲಿ ನೆನೆಯಬಹುದು. ಈ ಹಿನ್ನೆಲೆಯಿಂದ

ಹೇಳುವುದಾದರೆ ಕುವೆಂಪು ಅವರ ಕವಿತೆಗಳು ಕೇವಲ ಸೌಂದರ್ಯ ನಿಷ್ಠೆಯ ಹಾಗೂ ಅವುಗಳ ರಚನಾ ಕೌಶಲದ ಬೆರಗಿನಲ್ಲಿ ಓದುಗರನ್ನು ನಿಲ್ಲಿಸುವ ಕವಿತೆಗಳಲ್ಲ, ಅವುಗಳ ಹಿಂದೆ ಗಟ್ಟಿಮುಟ್ಟಾದ ವೈಚಾರಿಕತೆಯೊಂದು ಕ್ರಿಯಾಶೀಲವಾಗಿದೆ. ಅದನ್ನು ಸ್ಥೂಲವಾಗಿ ತಾತ್ವಿಕ ವೈಚಾರಿಕತೆ ಮತ್ತು ಸಾಮಾಜಿಕ ವೈಚಾರಿಕತೆ ಎಂದು ಕರೆಯಬಹುದು. ಆದರೆ ಈ ಎರಡರ ನಡುವಣ ವ್ಯತ್ಯಾಸವೇನಿದ್ದರೂ ಪ್ರಾಸಂಗಿಕವಾದದ್ದು. ಯಾಕೆಂದರೆ ಈ ಎರಡರ ಉದ್ದೇಶವೂ ಮನುಷ್ಯನ 'ಏಕತೆ'ಯ ಪರವಾಗಿ ತುಡಿಯುವ ಕಾಳಜಿಗಳಿಂದ ಕೂಡಿದ್ದಾಗಿದೆ. ಕುವೆಂಪು ಅವರ ಕವಿತೆಗಳಲ್ಲಿ ಸೌಂದರ್ಯನಿಷ್ಠೆ, ಆಧ್ಯಾತ್ಮಿಕ ನಿಲುವು ಮತ್ತು ವೈಚಾರಿಕತೆಗಳು ಒಂದರಿಂದ ಮತ್ತೊಂದನ್ನು ಬೇರ್ಪಡಿಸಲಾಗದಂತೆ ಹೆಣೆದುಕೊಂಡಿವೆ.

ಕುವೆಂಪು ಕಾವ್ಯದ ಮೊದಲ ನೆಲೆಯಾದ ನಿಸರ್ಗಪರ ಕವಿತೆಗಳ ಸಂದರ್ಭದಲ್ಲಿ, ಅವರು ತಮ್ಮ ಧ್ಯಾನ ಸ್ಥಿತಿಯ ಮೂಲಕ ನಿಸರ್ಗದೊಂದಿಗೆ ಏರ್ಪಡಿಸಿಕೊಳ್ಳುವ ಸಂವಾದ ಹಾಗೂ ತಲ್ಲೀನತೆಯಲ್ಲಿ ಅವರು ಪಡೆಯುವ ಅದ್ವೈತಾನುಭವದಲ್ಲಿ ಸೌಂದರ್ಯ ನಿಷ್ಠೆ ಹಾಗೂ ವೈಚಾರಿಕತೆಯೂ ಸಮ್ಮಿಳಿತವಾಗಿರುವುದನ್ನು ಗುರುತಿಸಬಹುದು. ಅವರ ಬಹುತೇಕ 'ಸೂರ್ಯೋದಯ ಕವಿತೆ'ಗಳಲ್ಲಿ ಈ ಅನುಭವದ ಹಲವು ಹಂತಗಳನ್ನು ಕಾಣಬಹುದು. ಹಾಗೆ ನೋಡಿದರೆ ಕುವೆಂಪು ಅವರಷ್ಟು 'ಸೂರ್ಯೋದಯ'ವನ್ನು ಕುರಿತ ಕವಿತೆಗಳನ್ನು ಬರೆದ ಕವಿ ಮತ್ತೊಬ್ಬರಿಲ್ಲ. ಸೂರ್ಯೋದಯ 'ನವೋದಯ'ದ ಬಹು ಮುಖ್ಯವಾದ ರೂಪಕವೂ ಹೌದು. ಅಷ್ಟೇ ಅಲ್ಲ, ಹೊಸಗನ್ನಡ ಕಾವ್ಯವನ್ನು, 'ರಮ್ಯಕಾವ್ಯ' 'ರೊಮ್ಯಾಂಟಿಕ್ ಕಾವ್ಯ' ಎಂದು ಸಾಹಿತ್ಯ ವಿಮರ್ಶಕರು ತಪ್ಪು ತಪ್ಪಾಗಿ ಕರೆಯುತಿದ್ದ ಕಾಲದಲ್ಲಿ ಇಡೀ ಭಾರತೀಯ ಪುನರುಜ್ಜೀವನಕ್ಕೆ ಅನ್ವಯವಾಗಬಹುದಾದ 'ನವೋದಯ' ಎಂಬ ಹೆಸರನ್ನು ಕೊಟ್ಟವರು ಕುವೆಂಪು. 'ಸೂರ್ಯೋದಯ'ದಂಥ ಪ್ರಚಂಡ ಚೈತನ್ಯೋತ್ಕರ್ಷವನ್ನು ಕುರಿತ ಕವಿತೆಗಳ ಸಂದರ್ಭದಲ್ಲಿನ ಸೌಂದರ್ಯಾನುಭವದ ಹಂತದಲ್ಲಿಯೆ, 'ಜಡ' ಮತ್ತು 'ಚೈತನ್ಯ'ಗಳ ವ್ಯತ್ಯಾಸವನ್ನು, ಏಕತೆಯನ್ನೂ ಕುರಿತು ಕುವೆಂಪು ಕಾವ್ಯದ ಚೌಕಟ್ಟಿನಲ್ಲಿಯೆ ನಡೆಯಿಸುವ ಚರ್ಚೆ ಅನೇಕ ದೃಷ್ಟಿಗಳಿಂದ ಅರ್ಥಪೂರ್ಣವಾದುದು. ಅವರ ಬಹುತೇಕ ಕವಿತೆಗಳ ಕಾಣ್ಕೆಯ ಇದುಃ 'ತೆಗೆ ಜಡವೆಂಬುದೆ ಬರಿಸುಳ್ಳು' 'ಜಡವೆಂಬುದೆಲ್ಲ ಚೇತನದ ನಟನೆಯ ಲೀಲೆ', 'ಚೈತನ್ಯವಲ್ಲದಿನ್ನಿಲ್ಲ ವಿಶ್ವದಲಿ' 'ಎಲ್ಲ ಜಡತೆಯ ಬಯಕೆ ಚೈತನ್ಯ ಸಿದ್ಧಿಯೈ'. ಇದು ಅವರು ತಮ್ಮ 'ರಸಾನುಭೂತಿ'ಯ ಸ್ಥಿತಿಯಲ್ಲಿ ಪಡೆದುಕೊಳ್ಳುವ 'ಅದ್ವೈತ'ದ ಅನುಭವದ ವರ್ಣನೆಯೂ ಹೌದು. ಯಾವ ಒಂದು ಮನಃಸ್ಥಿತಿ ಮೂಲಭೂತವಾಗಿ 'ಜಡ' - 'ಚೇತನ'ಗಳೆಂಬ ತಾರತಮ್ಯವನ್ನು ಒಪ್ಪುವುದಿಲ್ಲವೋ ಅದು ಸಾಮಾಜಿಕ ನೆಲೆಯ ತರ-ತಮಗಳನ್ನು ವಿರೋಧಿಸುವುದು ಸಹಜವಾಗಿದೆ. ಈ ದೃಷ್ಟಿಯಿಂದ ಕುವೆಂಪು ಅವರ 'ಅದ್ವೈತ' ಏಕ ಕಾಲಕ್ಕೆ ಆಧ್ಯಾತ್ಮಿಕವೂ ಹೌದು, ಸಾಮಾಜಿಕವೂ ಹೌದು. ಕನ್ನಡದ ಸಂದರ್ಭದ ಇತರ ಪ್ರಮುಖ ಬರಹಗಾರರಂತೆ, ಹುಟ್ಟಿನಿಂದಲೇ ಯಾವ ಸಿದ್ಧ ಸಂಪ್ರದಾಯಕ್ಕೂ ಸೇರದ ಕುವೆಂಪು 'ಯಾವ ಮತದವನಲ್ಲ, ಎಲ್ಲಮತದವನು' ಎಂಬ ನಿಲುವಿನಿಂದ, ಉಪನಿಷತ್ತು ಹಾಗೂ ಆಧುನಿಕ ವಿಜ್ಞಾನದ ತಿಳಿವಳಿಕೆಯಿಂದ ರೂಪಿಸಿಕೊಂಡ ಅಧ್ಯಾತ್ಮವು, ಎಲ್ಲ ಜಾತಿ ಮತಗಳನ್ನೂ

ನಿರಾಕರಿಸುತ್ತ, ಪ್ರತಿಯೊಂದು ಜೀವವೂ ತನ್ನ ಪಾರಿಣಾಮಕ ಪಥದಲ್ಲಿ ಮುನ್ನಡೆದು ತನ್ನ ಸ್ವರೂಪವನ್ನು ಆವಿಷ್ಕಾರ ಮಾಡಿಕೊಳ್ಳುವ ಹಕ್ಕು ಮತ್ತು ಸ್ವಾತಂತ್ರ್ಯವನ್ನು ಹೊಂದಿದೆ ಎಂಬ ನಿಲುವನ್ನು ಪ್ರತಿಪಾದಿಸುತ್ತದೆ. ಅದು ಒಂದು ರೀತಿಯಲ್ಲಿ ಎಲ್ಲದರ ಹಿಂದಿರುವ ಏಕತೆಯ ದರ್ಶನ. ಆದುದರಿಂದಲೆ ಅದು ಮನುಷ್ಯನ ಚೈತನ್ಯದ ಚಲನಶೀಲತೆಯನ್ನು ಸ್ಥಗಿತಗೊಳಿಸುವ ಜಾತಿಪದ್ಧತಿ, ಚಾತುರ್ವರ್ಣ, ಪುರೋಹಿತಷಾಹೀ ಹಾಗೂ ಸಾಂಸ್ಥಿಕ ಧರ್ಮಗಳ ಪ್ರತಿನಿಧಿಗಳಾದ ಗುಡಿ - ಚರ್ಚು - ಮಸೀದಿ - ಮಠಗಳನ್ನು ನಿರ್ದಾಕ್ಷಿಣ್ಯವಾಗಿ ನಿರಾಕರಿಸಿ, ಜೀವ ಜೀವರುಗಳ ನಡುವೆ, ಆತ್ಮ ಆತ್ಮಗಳ ನಡುವೆ ಯಾವುದೇ ವ್ಯತ್ಯಾಸಗಳನ್ನು ಕಲ್ಪಿಸುವ 'ದ್ವೈತವಾದ'ವನ್ನು ತಿರಸ್ಕರಿಸುತ್ತದೆ. ಕುವೆಂಪು ಪ್ರತಿಪಾದಿಸುವ ಈ 'ಅದ್ವೈತ' – ಏಕಕಾಲಕ್ಕೆ ಆಧ್ಯಾತ್ಮಿಕವೂ ಹೌದು ಸಾಮಾಜಿಕವೂ ಹೌದು ಎಂದು ಹೇಳಿದ್ದು ಈ ಅರ್ಥದಲ್ಲಿಯೇ. ಮನುಷ್ಯತ್ವದ ಏಕತೆಯನ್ನು ಎತ್ತಿ ಹಿಡಿಯುವ ಈ ವಿಚಾರಗಳು, ನವೋದಯ ಸಂದರ್ಭದ ಪ್ರಮುಖವಾದ ಉದಾರ ಧಾರ್ಮಿಕ ನಿಲುವುಗಳೂ ಹೌದು. ಶ್ರೀ ರಾಮಕೃಷ್ಣ ಪರಮಹಂಸ, ವಿವೇಕಾನಂದ, ಗಾಂಧಿ, ಅರವಿಂದರಂಥ ಮಹಾವಿಭೂತಿಗಳ ಪ್ರಭಾವ ವಲಯದಲ್ಲಿ ಸೃಜನಶೀಲರಾಗಿದ್ದ ಕುವೆಂಪು ಅವರ ಮೇಲೆ ಇವರೆಲ್ಲರ ಧಾರ್ಮಿಕ - ಸಾಮಾಜಿಕ ಚಿಂತನೆಗಳು ಪ್ರಭಾವ ಬೀರಿರುವುದು, ಕುವೆಂಪು ಅವುಗಳನ್ನು ತರ್ಕ ಬದ್ಧವಾಗಿ ಅರಗಿಸಿಕೊಂಡದ್ದು ಸಹಜವಾಗಿದೆ. ಶ್ರೀ ರಾಮಕೃಷ್ಣಪರಮಹಂಸ ಮತ್ತು ಅರವಿಂದರು ಕುವೆಂಪು ಅವರ ಅನುಭಾವ ಹಾಗೂ ಆಧ್ಯಾತ್ಮಿಕ ದೃಷ್ಟಿಯನ್ನು ರೂಪಿಸಿದಂತೆ, ವೀವೇಕಾನಂದ ಮತ್ತು ಗಾಂಧಿಯವರು ಕುವೆಂಪು ಅವರ ವೈಚಾರಿಕತೆ ಹಾಗೂ ರಾಷ್ಟ್ರೀಯತೆಯ ಕಲ್ಪನೆಗಳನ್ನು ರೂಪಿಸಿದರೆಂದು ಹೇಳಬಹುದು. ಗಾಂಧಿಯವರಿಗಿಂತ ವಿವೇಕಾನಂದರ ವ್ಯಕ್ತಿತ್ವವು ಕುವೆಂಪು ಅವರನ್ನು ವಿಶೇಷವಾಗಿ ಆಕರ್ಷಿಸಿದ್ದು, ಅಲ್ಲ ಆಕ್ರಮಿಸಿದ್ದು, ಅದರ ಪ್ರಖರವಾದ ವೈಚಾರಿಕತೆಯಿಂದ. ವಿವೇಕಾನಂದರ ಕ್ರಾಂತಿಕಾರೀ ಚಿಂತನೆಗಳು, ಕುವೆಂಪು ಅವರ ವೈಚಾರಿಕತೆಗೆ ಸಮ್ಮತವಾದುದರಿಂದ ಕುವೆಂಪು ಅವರ ಕವಿತೆಯ ಹಾಗೂ ವೈಚಾರಿಕ ಬರಹಗಳ ಮೂಲಕ ಒಂದು ಬಗೆಯ ಧೀರೋದಾತ್ತತೆಯ ಧಾಟಿಯಲ್ಲಿ ಮಂಡಿತವಾಗಿವೆ. ಇದರ ಜತೆಗೆ, ಅಂದು ಕುವೆಂಪು ಪ್ರತಿಪಾದಿಸುತ್ತಿದ್ದ 'ಮನುಷ್ಯತ್ವದ ಏಕತೆ'ಯ ಕಲ್ಪನೆಗೆ, ಗಾಂಧೀಜಿಯವರು ರಾಷ್ಟ್ರೀಯತೆಯ ಆಂದೋಲನದ ಸಂದರ್ಭದಲ್ಲಿ ಬಳಸುತ್ತಿದ್ದ 'ಸರ್ವೋದಯ' ಎಂಬ ಪದ ಅತ್ಯಂತ ಸೂಕ್ತವೂ ಪ್ರಿಯವೂ ಆಗಿ ಕಂಡುದರಿಂದ, ಕುವೆಂಪು 'ಸರ್ವೋದಯ'ವನ್ನು ಒಂದು ಯುಗ ಮಂತ್ರ ಎಂದು ಸ್ವೀಕರಿಸುತ್ತಾರೆ. 'ಹಿಂದಾಯಿತು ಓರ್ರೋರ್ವರ ಗರ್ವದ ಕಾಲ! ಇದು ಸರ್ವರ ಕಾಲ' - ಎಂದು ಘೋಷಿಸುತ್ತಾರೆ. ಸರ್ವೋದಯ ಸಮನ್ವಯ ಮತ್ತು ಪೂರ್ಣದೃಷ್ಟಿ ಇವು ಮುಂದಿನ ಸಾಹಿತ್ಯದ ಲಕ್ಷಣಗಳಾಗಬೇಕೆಂದು ಒಂದೆಡೆ ಹೇಳುತ್ತಾರೆ. ಈ ಮೂರೂ ಅನುಕ್ರಮವಾಗಿ ಗಾಂಧಿ, ಶ್ರೀರಾಮಕೃಷ್ಣ ಪರಮಹಂಸ ಮತ್ತ ಯೋಗಿ ಅರವಿಂದರ ವಿಚಾರಗಳನ್ನು ಸೂಚಿಸುತ್ತವೆ. ಅದೇನೆ ಇರಲಿ, ಕುವೆಂಪು ಅವರ ಅನೇಕ ಸಾಮಾಜಿಕ ಕವಿತೆಗಳ ಹಿಂದೆ ತುಡಿಯುತ್ತಿರುವುದು ಈ 'ಸರ್ವೋದಯ'ದ ಕಾಳಜಿಗಳೇ. ಏಕ ಕಾಲಕ್ಕೆ ಆಧ್ಯಾತ್ಮಿಕವೂ ಸಾಮಾಜಿಕವೂ ಆದ ಈ ಕಾಳಜಿಗಳು ಅವರ ವೈಚಾರಿಕತೆಯ

ಮೂಲಕ, ಸರ್ವೋದಯ ವಿರೋಧಿಯಾದ ವಿಕೃತಿಗಳನ್ನು ಖಂಡಿಸುತ್ತ, ಸವಾಲಿನ, ಪ್ರತಿಭಟನೆಯ ಕೆಲವೊಮ್ಮೆ ವ್ಯಂಗ್ಯದ ಧಾಟಿಯಲ್ಲಿ ಮಂಡಿತವಾಗಿರುವ ಕ್ರಮವು ವಿಶೇಷ ರೀತಿಯದಾಗಿದೆ. ಏಕೆಂದರೆ ಈ ದೇಶದ ಅಪ್ರತಿಷ್ಠಿತ ಸಾಮಾಜಿಕ ಸ್ತರದಿಂದ ಬಂದ ಕುವೆಂಪು ಅವರಿಗೆ ಕಂಡ ವಾಸ್ತವಗಳೂ, ಚರಿತ್ರೆಯೊಳಗಿನ ಸತ್ಯಗಳೂ, ಅವರ ಸಮಕಾಲೀನರಾದ, ಸಿದ್ಧಸಂಪ್ರದಾಯಕ್ಕೆ ಸೇರಿದ ಇತರ ಬರಹಗಾರರಿಗೆ ಆ ಪ್ರಮಾಣದಲ್ಲಿ ಆ ಸ್ವರೂಪದಲ್ಲಿ ಕಂಡವೆಂದು ಹೇಳಲು ಬರುವುದಿಲ್ಲ. ಆದ್ದರಿಂದಲೆ ಹುಟ್ಟಿನಿಂದ ಶೂದ್ರರೂ, ಹಿಂದಿನ ಅಥವಾ ಇಂದಿನ, ಅಂತರಂಗದ ಅಥವಾ ಬಹಿರಂಗದ, ಯಾವ ಸಾಂಪ್ರದಾಯಿಕ ಉಪಾಧಿಗಳಿಗೂ ಬದ್ಧವಾಗದ ಒಂದು 'ನಿರಂಕುಶಮತಿ'ಯನ್ನು ಎತ್ತಿಹಿಡಿದವರೂ ಆದ ಕುವೆಂಪು, ಈ ದೇಶದ ಜಾತಿ ಪದ್ಧತಿ, ಮೂಢನಂಬಿಕೆ, ಸಾಮಾಜಿಕ ಅಸಮಾನತೆ ಹಾಗೂ ಪುರೋಹಿತ ಶಾಹೀ ಪ್ರವೃತ್ತಿಗಳನ್ನು ಅತ್ಯಂತ ದಿಟ್ಟತನದಿಂದ ಯಾವುದೇ ಒಡಂಬಡಿಕೆಗಳಿಲ್ಲದೆ ಪ್ರಶ್ನಿಸಿದಂತೆ, ವೈಚಾರಿಕ ಚಿಕಿತ್ಸೆಗೆ ಒಳಗುಪಡಿಸಿದಂತೆ, ಇತರ ಅವರ ಸಮಕಾಲೀನ ಪ್ರಮುಖ ಬರೆಹಗಾರರಿಗೆ ಆ ಪ್ರಮಾಣದಲ್ಲಿ ಸಾಧ್ಯವಾಗಲಿಲ್ಲ ಎನ್ನುವುದು ಸ್ಪಷ್ಟವಾದ ಸಂಗತಿಯಾಗಿದೆ. 'ದೇವರು-ಪೂಜಾರಿ' 'ಗೊಬ್ಬರ' 'ಕ್ರಾಂತಿ ಕಾಳಿ' 'ಯಾವ ಕಾಲದ ಶಾಸ್ತ್ರವೇನು ಹೇಳಿದರೇನು' ಇಂಥ ಕವಿತೆಗಳೊಳಗಿನ ಮೂಲದ್ರವ್ಯವು ಈ ಸ್ವರೂಪದ್ದಾಗಿದೆ. ಈ ದೇಶದ ಚರಿತ್ರೆ ಮತ್ತು ಸಂಸ್ಕೃತಿಯನ್ನು ಆರೋಗ್ಯ ಪೂರ್ಣವಾದ ಚರ್ಚೆಗೆ ಗುರಿಪಡಿಸಿದ ಕೆಲವೇ ಲೇಖಕರಲ್ಲಿ ಕುವೆಂಪು ಮುಖ್ಯರಾಗುತ್ತಾರೆ.

ಕುವೆಂಪು ಅವರ ವೈಚಾರಿಕತೆಗೆ ಇರುವ ಇನ್ನೊಂದು ಮುಖ್ಯಲಕ್ಷಣ ವೈಜ್ಞಾನಿಕ ದೃಷ್ಟಿ. ಕುವೆಂಪು ಅವರಂತೆ ಆಧುನಿಕ ವಿಜ್ಞಾನದ ತಿಳಿವಳಿಕೆಯನ್ನು ತಮ್ಮ ಕಾವ್ಯದ ವಸ್ತುವನ್ನಾಗಿ ಮಾಡಿಕೊಂಡವರು ತೀರಾ ವಿರಳ. ಖಗೋಳ ವಿಜ್ಞಾನ, ಯಂತ್ರ ವಿಜ್ಞಾನ, ಜೀವವಿಜ್ಞಾನ, ಮನೋವಿಜ್ಞಾನ, ಯೋಗವಿಜ್ಞಾನ - ಇತ್ಯಾದಿಗಳಿಂದ ಬಂದ ತಿಳಿವಳಿಕೆ ಅವರ ಅನೇಕ ಕವನಗಳ ಮೂಲದ್ರವ್ಯವಾಗಿದೆ. ಅವರ 'ಕೂಸಿನ ಕನಸು' ಈ ಪರಿಣತಿಯ ಅತ್ಯುತ್ತಮ ಅಭಿವ್ಯಕ್ತಿಯಾಗಿದೆ. ಅವರ ಕಾವ್ಯದ ಉದ್ದಕ್ಕೂ ರೂಪಕಗಳಾಗಿ, ಪ್ರತೀಕಗಳಾಗಿ, ಪ್ರತಿಮೆಗಳಾಗಿ ರೂಪುಗೊಂಡಿರುವ ವೈಜ್ಞಾನಿಕ ಸಂಗತಿಗಳೂ, ವಿಚಾರಗಳೂ ಬೇರೆಯಾರಲ್ಲೂ ಈ ಪ್ರಮಾಣದಲ್ಲಿ ಕಾಣಿಸಿಕೊಳ್ಳುವುದಿಲ್ಲ. ಈ ದೃಷ್ಟಿಯಿಂದ ಅವರ ಮಹಾಕಾವ್ಯವಾದ 'ಶ್ರೀ ರಾಮಾಯಣ ದರ್ಶನಂ', ಇಪ್ಪತ್ತನೆ ಶತಮಾನದ ವೈಜ್ಞಾನಿಕ ಹಾಗೂ ವೈಚಾರಿಕ ಯುಗದ ಪ್ರತಿನಿಧಿಯಾಗಿದೆ ಎಂದು ಹೇಳಬಹುದು. ಆಧುನಿಕ ಯುಗದ ಎಲ್ಲ ಸಾಮಾಜಿಕ ಅನಿಷ್ಟಗಳ ಚಿಕಿತ್ಸೆಗೆ ಅಗತ್ಯವಾದ ವೈಜ್ಞಾನಿಕ ಮನೋಧರ್ಮವೊಂದನ್ನು ಅತ್ಯಂತ ಏರು ದನಿಯಲ್ಲಿ ಸಾರಿ ಹೇಳಿದವರು ಕುವೆಂಪು. ಅಷ್ಟೆ ಅಲ್ಲ, ಗಾಂಧಿಯವರು ಯಂತ್ರ ವಿಜ್ಞಾನವನ್ನು ವಿರೋಧಿಸುತ್ತಿದ್ದ ಕಾಲದಲ್ಲಿ, ಕುವೆಂಪು ಮನುಷ್ಯನ ಲೌಕಿಕ ಪ್ರಗತಿಗೆ ಅಗತ್ಯವಾದ ಯಂತ್ರ ವಿಜ್ಞಾನವನ್ನು ಸ್ವಾಗತಿಸುತ್ತಾರೆ. ನಿಸರ್ಗದ ಶಕ್ತಿಯನ್ನು ಪಳಗಿಸಿ, ಅದನ್ನು ಸಾಮಾನ್ಯ ಮನುಷ್ಯನ ಯೋಗ ಕ್ಷೇಮಕ್ಕೆ ವಿನಿಯೋಗಿಸುವ ಯಂತ್ರ ವಿಜ್ಞಾನವನ್ನು ಉತ್ಸಾಹದಿಂದ ಕುವೆಂಪು ಸ್ವಾಗತಿಸುತ್ತಾರೆ. ಅವರ ದೃಷ್ಟಿಗೆ ಯಂತ್ರ ವಿಜ್ಞಾನಿಯಾದ ಎಂಜಿನಿಯರ್ 'ಯಂತ್ರರ್ಷಿ'ಯಾಗುತ್ತಾನೆ. 'ಯಂತ್ರರ್ಷಿ ಮಾನವರೆ

ಮಂತ್ರರ್ಷಿಗಳು ನಮಗೆ' ಎನ್ನುವುದು ಕುವೆಂಪು ಈ ಕಾಲಮಾನಕ್ಕೆ ಸ್ಪಂದಿಸಿದ ಪರಿಯನ್ನು ಸೂಚಿಸುತ್ತದೆ. ರಾಷ್ಟ್ರೀಯತೆಯ ಆಂದೋಲನದ ಸಮಯದಲ್ಲಿ , ಸಾಂಪ್ರದಾಯಿಕ ಮೌಲ್ಯಗಳು ಪುನರುತ್ಥಾನಗೊಂಡು, ನಿಜವಾದ ಸಾಮಾಜಿಕ ವಾಸ್ತವಗಳು ನಿಚ್ಚಳವಾಗಿ ಕಾಣದೆ ಹೋಗುವಂಥ ಪರಿಸ್ಥಿತಿಯಲ್ಲಿ, ಕುವೆಂಪು ಅವರ ಮನಸ್ಸು ಉಳಿದೆಲ್ಲರಿಗಿಂತ ಹೆಚ್ಚು ನಿಖರವಾಗಿ ಸಮಕಾಲೀನ ವಾಸ್ತವಗಳನ್ನು ಗುರುತಿಸಿ, ವೈಚಾರಿಕ ಚಿಕಿತ್ಸೆಗೆ ಗುರಿಪಡಿಸಲು ಸಾಧ್ಯವಾದದ್ದು ಅವರಿಗೆ ಇದ್ದ ವೈಜ್ಞಾನಿಕ ಪ್ರಗತಿಪರ ಮನೋಧರ್ಮದಿಂದಲೇ. ಈ ಮನೋಧರ್ಮ ಕೇವಲ ಭಾರತೀಯವಾದದ್ದರ ಪರವಾಗಿ ಮಾತ್ರವಲ್ಲ, ಜಾಗತಿಕವಾದ ಸಮಾಜವಾದಿ ಚಿಂತನೆಗಳಿಗೂ ಸ್ಪಂದಿಸಿದ್ದು ಅದರ ವಿಶೇಷತೆಯಾಗಿದೆ. ಲೆನಿನ್, ಟಾಲ್ ಸ್ಟಾಯ್ ಕುರಿತು ಅವರು ಬರೆದ ಕವಿತೆಗಳೂ, 'ಕಲ್ಕಿ' 'ಕೋಗಿಲೆ ಮತ್ತು ಸೋವಿಯಟ್ ರಷ್ಯಾ'ದಂಥ ಕವಿತೆಗಳೂ ಮತ್ತು ಇದೇ ಬಗೆಯ ಸಾಮಾಜವಾದೀ ನಿಲುವುಗಳನ್ನು ಒಂದು ಬಗೆಯ ಪ್ರವಾದಿಯ ಧಾಟಿಯಲ್ಲಿ ಅಭಿವ್ಯಕ್ತಿಸುವ ಕವನಗಳೂ ಈ ಮಾತಿಗೆ ನಿದರ್ಶನವಾಗಿವೆ. ಸಮಕಾಲೀನ ಜಗತ್ತಿನಲ್ಲಿ ಸಂಭವಿಸುತ್ತಿರುವ ಯುಗಪರಿವರ್ತನಕಾರಿಯಾದ ಅನೇಕ ಬದಲಾವಣೆಗಳ ಹಿನ್ನೆಲೆಯಲ್ಲಿ ಭಾರತದ ತರುಣರು ತಮ್ಮ ಹಳೆಯ ಜಡತೆಯಿಂದ ಮೇಲೆದ್ದು 'ನವ ಕ್ರಾಂತಿಗೆ, ಶಾಂತಿಗೆ' ಕಣ್ ತೆರೆಯಬೇಕೆಂಬ ಸಂದೇಶವನ್ನು ಘೋಷಿಸುವ ಅವರ ಎಷ್ಟೋ ಕವನಗಳು, ಈ ಕವಿಯ ಸಾಂಸ್ಕೃತಿಕ ಜವಾಬ್ದಾರಿಯನ್ನು, ನವ ಮಾನವತಾವಾದದ ಕಾಳಜಿಗಳನ್ನೂ ಪ್ರತಿನಿಧಿಸುತ್ತವೆ. ಅಷ್ಟೇ ಅಲ್ಲ, ಅವರ ನಲವತ್ತರ ದಶಕದ ಅನೇಕ ಸಮಾಜವಾದೀ ಕವಿತೆಗಳಲ್ಲಿ ಕಾಣಿಸಿಕೊಳ್ಳುವ ಕ್ರಾಂತಿಕಾರೀ ವೈಚಾರಿಕತೆಯಲ್ಲಿ, ಎಪ್ಪತ್ತರ ದಶಕದ ಕನ್ನಡದ ಸಂದರ್ಭದಲ್ಲಿ ಸ್ಫೋಟಗೊಂಡ ದಲಿತ-ಬಂಡಾಯ ಸಾಹಿತ್ಯ ಚಳುವಳಿಯ ಮೂಲ ಪ್ರೇರಣೆಗಳಿವೆ ಎಂದರೆ ಅದೇನೂ ಅತಿಶಯೋಕ್ತಿಯಲ್ಲ.

ವಿಜ್ಞಾನ ಯುಗದ ಎಂಜಿನಿಯರ್ 'ಯಂತ್ರರ್ಷಿ' ಎಂಬ ಗೌರವಕ್ಕೆ ಪಾತ್ರನಾದರೆ, ಯಾರ ಕಣ್ಣಿಗೂ ಕಾಣಿಸದೆ ತನ್ನ ಪಾಡಿಗೆ ತಾನು ಹೊಲವನ್ನುಳುವ ರೈತನು 'ನೇಗಿಲ ಯೋಗಿ'ಯಾಗುತ್ತಾನೆ. ರಾಜ್ಯ ಸಾಮ್ರಾಜ್ಯಗಳ ಏಳು ಬೀಳಿನ ನಡುವೆ ಸದ್ದಿಲ್ಲದ ತನ್ನ ದುಡಿಮೆಯಿಂದ ಲೋಕಕ್ಕೆ ಅನ್ನವನ್ನು ಬೆಳೆಯುವ ರೈತನ ಕಾಯಕ, ಯಾವರೀತಿಯಲ್ಲೂ ಯೋಗಿಯಾದವನು ಕೈಕೊಳ್ಳುವ ಲೋಕ ಕಲ್ಯಾಣಕರವಾದ ತಪಸ್ಸಿಗೆ ಕಡಮೆಯಾದುದೇನಲ್ಲ ಎನ್ನುವುದು ಕುವೆಂಪು ಅವರ ನಿಲುವು. ಕುವೆಂಪು ಅವರ ಸಾಮಾಜಿಕ ವೈಚಾರಿಕತೆ, ಈ ಬಗೆಯ ಸಾಮಾನ್ಯತೆಯನ್ನು ಕುರಿತ ಗೌರವದಿಂದ ಪ್ರಾರಂಭವಾಗುತ್ತದೆ. ರೈತನನ್ನು 'ನೇಗಿಲಯೋಗಿ' ಎಂದು ಕರೆದು ಗೌರವಿಸಿದ ಮೊದಲ ಕವಿ ಕುವೆಂಪು. ಹಾಗೆಯೇ ಸ್ವಾತಂತ್ರ್ಯೋತ್ತರ ಭಾರತದ ಸಾಮಾನ್ಯ ಜನ ಸಮುದಾಯವನ್ನು 'ಶ್ರೀಸಾಮಾನ್ಯ'ರೆಂದು ಹೊಸ ಹೆಸರಿನಿಂದ ಕರೆದು, ಅವರೊಂದಿಗೆ ತಮ್ಮನ್ನೂ ಸಮೀಕರಿಸಿಕೊಂಡವರು ಕುವೆಂಪು. ಈ 'ನೇಗಿಲಯೋಗಿ'ಯಾದ ರೈತ ಮತ್ತು ಈ ದೇಶದ ಅಸಂಖ್ಯಾತ ಶ್ರೀಸಾಮಾನ್ಯರು ಮೇಲುವರ್ಗದವರಿಂದ ಶತಶತಮಾನಗಳ ಕಾಲ ಶೋಷಣೆಗೆ ಗುರಿಯಾದ ಪರಿಯನ್ನು, ಶೂದ್ರವರ್ಗದ ರೈತನ ಮನೆತನದಿಂದ ಬಂದ ಕುವೆಂಪು ತಮ್ಮ ಅನೇಕ ಕವಿತೆಗಳಲ್ಲಿ, ಗ್ರಹಿಸಿ

ಅಭಿವ್ಯಕ್ತಿಸಿದ್ದಾರೆಂಬುದು ಗಮನಿಸಬೇಕಾದ ಸಂಗತಿಯಾಗಿದೆ. ಆ ಶೋಷಕ ಶಕ್ತಿಗಳನ್ನು ಹಿಂದೂ ಧರ್ಮದ ಪುರೋಹಿತಷಾಹಿ ಮತ್ತು ರಾಜಷಾಹಿ ಎಂದು ಖಚಿತವಾಗಿ ಗುರುತಿಸಿ, ಆ ಎರಡನ್ನೂ ಅತ್ಯಂತ ತೀಕ್ಷ್ಣವಾದ ವಿಮರ್ಶೆಗೆ, ಕುವೆಂಪು ಅವರಂತೆ ಗುರಿಪಡಿಸಿದ ಬೇರೊಬ್ಬ ಕವಿ ಇಲ್ಲ ಎಂದರೂ - ಸಲ್ಲುತ್ತದೆ. ಹಾಗೆ ನೋಡಿದರೆ ಕನ್ನಡ ಸಾಹಿತ್ಯ ಚರಿತ್ರೆಯ ಉದ್ದಕ್ಕೂ ಕ್ರಿಯಾಶೀಲವಾಗಿರುವ ಮುಖ್ಯಪ್ರವೃತ್ತಿಗಳೆಂದರೆ ವೈದಿಕ ವಿರೋಧೀ ನಿಲುವು ಮತ್ತು ಪ್ರಭುತ್ವವಿರೋಧೀ ಧೋರಣೆಗಳೇ. ಪಂಪನಿಂದ ಹಿಡಿದು, ವಚನ ಕಾರರನ್ನೂ ಒಳಗೊಂಡು ಉದ್ದಕ್ಕೂ ಹರಿದು ಬಂದಿರುವ, ವೈದಿಕ ವಿರೋಧೀ ನಿಲುವು ಮತ್ತು ಪ್ರಭುತ್ವ ವಿರೋಧೀ ಧೋರಣೆಗಳು ಕುವೆಂಪು ಅವರಲ್ಲಿ ಪುನಃ ಪ್ರಕಾಶನಗೊಂಡು, ಅತ್ಯಂತ ದಿಟ್ಟವಾಗಿ ಮತ್ತು ಸ್ಪಷ್ಟವಾಗಿ ಕೇಳಿಸುವ ಧ್ವನಿಗಳಾಗಿವೆ. ಪಂಪ - ರನ್ನರಂಥ ಮಾರ್ಗ ಕವಿಗಳ ಜತೆಗೆ ತಮ್ಮನ್ನು ಉತ್ಸಾಹದಿಂದ ಗುರುತಿಸಿಕೊಳ್ಳುವ ಕುವೆಂಪು ಅವರು, ಈ ದೇಶದ ದೇಶೀ ಕವಿಗಳ ಜತೆಗೆ, ಅದರಲ್ಲೂ ವಚನಕಾರರು ಮತ್ತು ಹರಿಹರಾದಿಗಳ ವಿಚಾರದಲ್ಲಿ ಅಂಥ ಆಸಕ್ತಿಯನ್ನು ತಾಳದಿರುವುದು ಆಶ್ಚರ್ಯದ ಸಂಗತಿಯಾಗಿದೆ. ಸ್ವಾರಸ್ಯದ ಸಂಗತಿ ಎಂದರೆ ಕಿಂಕಿಣಿ (೧೯೪೬) ಎಂಬ ಹೆಸರಿನ ಅವರ ಕೃತಿ 'ವಚನ ಕವನ'ಗಳ ಒಂದು ಸಂಕಲನವಾದರೂ, ಈ ವಚನಗಳ ಮೂಲ ಪ್ರೇರಣೆ, ರವೀಂದ್ರನಾಥ ಟ್ಯಾಗೂರರ ಬರೆಹಗಳೆ ಹೊರತು, ಕನ್ನಡದ ವಚನಕಾರರಲ್ಲ! ಆದರೂ ಕುವೆಂಪು ಅವರು ವೈಚಾರಿಕತೆಯಲ್ಲಿ – ದೇಸೀಯತೆಯ ಪ್ರೇರಣೆಯಿಂದ ಹೊಸಗನ್ನಡದಲ್ಲಿ ಬರೆದ ಇತರ ಕವಿಗಳಿಗಿಂತ – ವಚನಕಾರರಿಗೆ ತೀರಾ ಹತ್ತಿರವಾಗುತ್ತಾರೆ! ವರ್ಣಾಶ್ರಮ ವಿರೋಧ, ಪುರೋಹಿತಷಾಹೀ ದೌರ್ಜನ್ಯಗಳ ಖಂಡನೆ, ದೇವಸ್ಥಾನದ ನಿರಾಕರಣೆ, ಮನುಷ್ಯರ ಸಮಾನತೆಯಪರವಾದ ನಿಲುವು ಇವುಗಳನ್ನು ಹನ್ನೆರಡನೆಯ ಶತಮಾನದಷ್ಟು ಹಿಂದೆ ವಚನಕಾರರು ಎತ್ತಿ ಹಿಡಿದಿದ್ದರೆಂಬ ಸಂಗತಿಗಳಿಗಿಂತ, ಶ್ರೀ ರಾಮಕೃಷ್ಣ, ವಿವೇಕಾನಂದ ಮತ್ತು ಗಾಂಧಿಯವರ ಮೂಲಕ ಪ್ರತಿಪಾದಿತವಾದ ಇದೇ ವಿಚಾರಗಳು ಕುವೆಂಪು ಅವರಿಗೆ ಹೆಚ್ಚು ಆಕರ್ಷಕವಾದಂತೆ ತೋರುತ್ತವೆ. ಇದಕ್ಕೆ ಕಾರಣ ಅವರು ಈ ತಿಳಿವಿನ ಲೋಕಕ್ಕೆ ಕನ್ನಡದ ದಿಕ್ಕಿನಿಂದ ಪ್ರವೇಶಿಸದೆ·ಇಂಗ್ಲಿಷಿನ ಮುಖಾಂತರ ಪ್ರವೇಶಿಸಿದ್ದೇ – ಎಂದು ತೋರುತ್ತದೆ. ಇಂಗ್ಲಿಷಿನ ಸಾಹಿತ್ಯ ಪ್ರಪಂಚವೂ, ಶ್ರೀರಾಮಕೃಷ್ಣ-ವಿವೇಕಾನಂದ-ಗಾಂಧಿ-ಅರವಿಂದರ ವಿಚಾರಗಳೂ ಅವರ ಮನಃಕೋಶವನ್ನು ಮೊಟ್ಟ ಮೊದಲು ಪ್ರವೇಶಿಸಿದ್ದು ಇಂಗ್ಲಿಷಿನ ಮೂಲಕವೇ. ಹಾಗೆಯೆ ಪ್ರಾಚ್ಯ ಪಾಶ್ಚಾತ್ಯ ತತ್ವಜ್ಞಾನವೂ ಅವರ ಬುದ್ಧಿಯ ಒಂದು ಭಾಗವಾದದ್ದು ಇಂಗ್ಲಿಷಿನ ಮೂಲಕವೇ. ಈ ಎಲ್ಲ ತಿಳಿವಿನ ಹಿನ್ನೆಲೆಯಿಂದ ಮತ್ತು ತಾವು ಹುಟ್ಟಿಬಂದ ಶೂದ್ರ ಸಮುದಾಯದ ಒಂದು ಭಾಗವಾಗಿ ತಾವು ಪಡೆದ ಸ್ವಾನುಭವಗಳಿಂದ ಕುವೆಂಪು ಹಿಂದೂಧರ್ಮದ ಶೋಷಕ ಶಕ್ತಿಗಳನ್ನು ಗುರುತಿಸಿ ವೈಚಾರಿಕ ಚಿಕಿತ್ಸೆಗೆ ಗುರಿಪಡಿಸಲು ಸಾಧ್ಯವಾಯಿತು. ಈ ಚಿಕಿತ್ಸೆಯಲ್ಲಿ ಮುಖ್ಯವಾಗಿ ಅವರು ತಾಳಿದ ನಿಲುವು ಬಹುತೇಕ ಸುಧಾರಣಾವಾದಿಯದು. ಹಿಂದೂ ಸಂಸ್ಕೃತಿಯನ್ನು ಕೆಲವು ಉಗ್ರವಿಚಾರವಾದಿಗಳಂತೆ, ಸಂಪೂರ್ಣವಾಗಿ ನಿರಾಕರಿಸಿ, ಅದರ ಸ್ಥಾನದಲ್ಲಿ ಪರ್ಯಾಯ ಸಂಸ್ಕೃತಿಯೊಂದನ್ನು ಸ್ಥಾಪಿಸಬೇಕೆಂಬುದಾಗಿರಲಿಲ್ಲ. ಅದರ ಬದಲು ಅದರೊಳಗಿರುವ

ಜೀವವಿರೋಧೀ ಸಮಾನತಾವಿರೋಧೀ ಸಂಗತಿಗಳನ್ನು ನಿರಾಕರಿಸುತ್ತ ಮನುಷ್ಯನ ಚೈತನ್ಯೋತ್ಕರ್ಷಕ್ಕೆ ಅಗತ್ಯವಾದ ಮೌಲ್ಯಗಳನ್ನು ಸ್ವೀಕರಿಸುವುದು ಅವರ ಉದ್ದೇಶವಾಗಿದೆ. ವ್ಯಕ್ತಿ ವ್ಯಕ್ತಿಗಳನ್ನು ವಿಭಜಿಸುವ 'ಮತ' ತೊಲಗಿ ಅದರ ಸ್ಥಾನದಲ್ಲಿ ಆಧ್ಯಾತ್ಮವನ್ನು ನೆಲೆಗೊಳಿಸುವುದು, 'ಮನುಷ್ಯ ಜಾತಿ ತಾನೊಂದೆ ವಲಂ' ಎಂಬ ಕವಿ ಪಂಪನ ಉಕ್ತಿಯನ್ನು ನಿರುಪಾಧಿಕವಾಗಿ ಸ್ವೀಕರಿಸಿ, ಅನಿಕೇತನ ಪ್ರಜ್ಞೆಯ ಮೂಲಕ ಮನುಷ್ಯನನ್ನು ವಿಶ್ವಮಾನವನನ್ನಾಗಿ ಮಾಡುವುದು ಕುವೆಂಪು ಅವರ ತಾತ್ವಿಕ ನಿಲುವಾಗಿದೆ.

ಹಿಂದೂ ಧರ್ಮದ ವೈದಿಕ ಪುರೋಹಿತ ಷಾಹಿಯನ್ನು ಪ್ರತಿಭಟಿಸಿದಂತೆ, ಅವರು ರಾಜಷಾಹಿಯನ್ನೂ ವಿರೋಧಿಸಿದರು. ಸ್ವಭಾವತಃ ಸ್ವತಂತ್ರವೂ, ನಿರಂಕುಶಮತಿಯೂ ಆದ ಅವರ ವ್ಯಕ್ತಿತ್ವ ತನ್ನನ್ನು ನಿಯಂತ್ರಿಸುವ ಎಲ್ಲ ಬಗೆಯ ಪ್ರಭುತ್ವಗಳನ್ನೂ ಧೈರ್ಯದಿಂದ ನಿರಾಕರಿಸುವ ಸ್ವರೂಪದ್ದಾಗಿದೆ. 'ಹುಟ್ಟಿನಿಂದಲೂ ನನಗೆ ಪುರೋಹಿತರು ಮತ್ತ ರಾಜರು ಎಂದರೆ ಆಗದು' ಎಂದು ತಮ್ಮ ಆತ್ಮಕಥನದಲ್ಲೊಂದು ಕಡೆ (ನೆನಪಿನ ದೋಣಿಯಲ್ಲಿ ಪು೧೧೬) ಬರೆದುಕೊಂಡಿದ್ದಾರೆ. 'ಚಕ್ರವರ್ತಿಯ ವಿಪುಲ ಸಂಪತ್ತು ಕವಿಯ ಕಾಲ್ಗಳಡಿ' 'ಕವಿಗರಸುಗಿರಸುಗಳ ಋಣವಿಲ್ಲ, ಅವನಗ್ನಿಮುಖಿ, ಪ್ರಳಯ ಶಿಖಿ' – ಎಂಬ ದಿಟ್ಟತನ ಅವರ ಕವಿತೆಗಳಲ್ಲಿ ಅಭಿವ್ಯಕ್ತವಾಗಿದೆ. ಇದು ಎಲ್ಲ ದೊಡ್ಡ ಕವಿಗಳ ನಿಲುವೂ ಹೌದು. ಕುವೆಂಪು ಪ್ರತಿಭಟಿಸುವ, ಹಿಂದಿನಿಂದಲೂ ಬಂದ ಈ 'ರಾಜತ್ವ', ಕುವೆಂಪು ಸಾಹಿತ್ಯ ನಿರ್ಮಿತಿಯಲ್ಲಿ ತೊಡಗಿಕೊಂಡ ಕಾಲಕ್ಕೆ 'ಸಾಮ್ರಾಜ್ಯಷಾಹಿ'ಯಾಗಿ ರೂಪಾಂತರಗೊಂಡಿತ್ತು. ಈಗ ಇದನ್ನು ಚಾರಿತ್ರಿಕವಾಗಿ ವಸಾಹತುಷಾಹಿ ಸಂದರ್ಭ ಎಂದು ವರ್ಣಿಸಲಾಗುತ್ತಿದೆ. ಈ ವಸಾಹತುಷಾಹೀ ಸಂದರ್ಭಕ್ಕೆ ಭಾರತವು ಒಳಗಾದದ್ದರ ಪರಿಣಾಮಗಳನ್ನು ಕುರಿತು ಸಾಕಷ್ಟು ಚರ್ಚೆಗಳು ನಡೆದಿವೆ. ಕುವೆಂಪು ಅವರ ದೃಷ್ಟಿಯಲ್ಲಿ ಇದು ಏಕಕಾಲಕ್ಕೆ ವರವೂ ಶಾಪವೂ ಆಗಿತ್ತು. 'ವರ', ಈ ವಸಾಹತುಷಾಹಿಯ ಪರಿಣಾಮವಾದ ಇಂಗ್ಲಿಷ್ ಶಿಕ್ಷಣ, ಮತ್ತು ಆಗಿನ ಆಳುವವರು ತಂದ ಸುಧಾರಣಾ ಕ್ರಮಗಳು ಈ ದೇಶದ ಶೂದ್ರ ಸಮುದಾಯದ ಎಚ್ಚರಕ್ಕೆ ಮತ್ತು ಬಿಡುಗಡೆಗೆ ಸಾಧನವಾಯಿತೆಂಬ ಕಾರಣಕ್ಕೆ. ಶಾಪ, ಈ ದೇಶದ ವ್ಯಕ್ತಿ ಸ್ವಾತಂತ್ರ್ಯವನ್ನು ಅಪಹರಿಸಿ, ಗುಲಾಮಗಿರಿಗೆ ತಳ್ಳಿ ಈ ದೇಶದ ಸಂಪತ್ತನ್ನು ಪರಕೀಯರು ಲೂಟಿಮಾಡಲು ಅವಕಾಶವಾಯಿತೆಂಬ ಕಾರಣಕ್ಕೆ. ಈ ಕುರಿತು 'ನನ್ನ ಅಭಿವ್ಯಕ್ತಿ ಮೊದಲು ಮೈದೋರಿದ್ದು ಇಂಗ್ಲಿಷಿನಲ್ಲಿ. ಯಾವ ಬ್ರಿಟಿಷರನ್ನು ಹೊಡೆದೋಡಿಸಲು ಭರತಖಂಡ ಪ್ರಚಂಡ ಚಳುವಳಿ ಹೂಡಿತ್ತೊ ಆ ಬ್ರಿಟಿಷರ ಭಾಷೆಯಲ್ಲಿ' .... 'ಇಂಡಿಯಾವನ್ನು ಶೋಷಣೆ ಮಾಡಿ ದಬ್ಬಾಳಿಕೆ ನಡೆಯಿಸುತ್ತಿದ್ದ ಇಂಗ್ಲಿಷರ ಮೇಲೆ ನನಗೆ ಎಷ್ಟು ದ್ವೇಷವಿತ್ತೊ ಅದಕ್ಕೆ ದ್ವಿಗುಣಿತ, ತ್ರಿಗುಣಿತವಾಗಿ ಇಂಗ್ಲಿಷ್ ಭಾಷೆಯ ಮೇಲೆ ನನಗೆ ಗೌರವ ಮಮತೆಗಳಿದ್ದವು' (ನೆನಪಿನ ದೋಣಿಯಲ್ಲಿ ಪು೧೬) – ಎಂದು ಕುವೆಂಪು ವಸಾಹತುಷಾಹಿಯ ರಾಜಕೀಯ ಮುಖ ವನ್ನು ಸಾಂಸ್ಕೃತಿಕ ಮುಖವನ್ನೂ ವಿಶ್ಲೇಷಿಸುತ್ತಾರೆ. ಹಿಂದಿನ 'ರಾಜಷಾಹಿ' ಈ ಹೊತ್ತಿಗೆ 'ಸಾಮ್ರಾಜ್ಯಷಾಹಿ'ಯಾಗಿದ್ದು, ಅದನ್ನೆದುರಿಸಲು ಹಾಗೂ ಕಿತ್ತೆಸೆಯಲು ಗಾಂಧಿಯವರ ಮುಂದಾಳುತನದಲ್ಲಿ ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿ ದೇಶಾದ್ಯಂತ ಕ್ರಿಯಾಶೀಲವಾಗಿತ್ತು.

ಹುಟ್ಟಿನಿಂದಲೆ ಪ್ರಭುತ್ವ ವಿರೋಧಿಯಾದ ಕುವೆಂಪು ಈ ರಾಷ್ಟ್ರೀಯ ಚಳುವಳಿಯಲ್ಲಿ ನೇರವಾಗಿ ಭಾಗವಹಿಸದಿದ್ದರೂ, ಅವರು ಅಂದಿನ ರಾಷ್ಟ್ರೀಯ ಚಳುವಳಿಗೆ ಧ್ವನಿಯಾದುದಲ್ಲದೆ, ಅಂದಿನ ಹೋರಾಟಕ್ಕೆ ಸ್ಫೂರ್ತಿಯನ್ನು ನೀಡುವ ಅನೇಕ ಕವಿತೆಗಳನ್ನು ಬರೆದಿದ್ದಾರೆ. ಪಾಂಚಜನ್ಯ (೧೯೩೩) ಕವನ ಸಂಗ್ರಹದೊಳಗಿನ ಎಷ್ಟೋ ಪದ್ಯಗಳು ಅಂದಿನ ಸ್ವಾತಂತ್ರ್ಯಯೋಧರಿಗೆ ಕ್ರಾಂತಿ ಮಂತ್ರಗಳಂತೆ ವರ್ತಿಸಿದವೆಂದು ಹೇಳಲಾಗಿದೆ. ಅಷ್ಟೆ ಅಲ್ಲ, ನಿಜವಾದ ರಾಷ್ಟ್ರೀಯ ಪ್ರಜ್ಞೆಯ ಎಚ್ಚರಕ್ಕೆ ಅಗತ್ಯವಾದ ಪರಂಪರೆಯ ಹಿನ್ನೆಲೆಯನ್ನೂ, ಸಮಾಜ ಸುಧಾರಣ ನಿಲುವುಗಳನ್ನೂ, ಸಾಂಸ್ಕೃತಿಕ ಸ್ಮರಣೆಗಳನ್ನೂ ಮತ್ತು ವೈಚಾರಿಕತೆಯನ್ನೂ ತಮ್ಮ ಕವನಗಳ ಮೂಲಕ ಅಭಿವ್ಯಕ್ತಿಸುತ್ತ, ಅಂದಿನ ತರುಣ ಜನಾಂಗವನ್ನು ಯುಗ ಪರಿವರ್ತನೆಗೆ ಸ್ಪಂದಿಸುವಂತೆ ಮಾಡಿದವರು ಕುವೆಂಪು. ಅಷ್ಟೆ ಅಲ್ಲ, ಸ್ವಾತಂತ್ರ್ಯೋತ್ತರ ಭಾರತದ ಹೊಸ್ತಿಲಿನಲ್ಲಿ, 'ಸ್ವಾತಂತ್ರ್ಯೋದಯ ಮಹಾ ಪ್ರಗಾಥ'ದ ಮೂಲಕ ಸ್ವಾತಂತ್ರ್ಯೋದಯದ ಸಂಭ್ರಮವನ್ನು ಹಾಡಿದ ಕವಿ, ಅನಂತರ ಉದ್ದಕ್ಕೂ ಈ ದೇಶದ ವಿದ್ಯಮಾನಗಳಿಗೆ ಸ್ಪಂದಿಸಿರುವ ಕ್ರಮ ವಿಶೇಷ ರೀತಿಯದಾಗಿದೆ. ಈ ದೃಷ್ಟಿಯಿಂದ ಹೇಳುವುದಾದರೆ ಕುವೆಂಪು ಅವರ ಇಡೀ ಸಾಹಿತ್ಯ ಈ ದೇಶದ ಸ್ವಾತಂತ್ರ್ಯ ಪೂರ್ವದ ಆಶೋತ್ತರಗಳ ಪ್ರತಿನಿಧಿಯೂ, ಸ್ವಾತಂತ್ರ್ಯೋತ್ತರ ಭಾರತದ ವಿಮರ್ಶೆಯೂ ಆಗಿದೆ.

ಈ ದೇಶದ ಸ್ವಾತಂತ್ರ್ಯ ಚಳುವಳಿಯ ಜತೆಗೇ ಅದರದೊಂದು ಭಾಗವಾಗಿ ಹುಟ್ಟಿಕೊಂಡಿದ್ದು, ಕರ್ನಾಟಕದ ಏಕೀಕರಣದ ಕಲ್ಪನೆ. ಸ್ವಾತಂತ್ರ್ಯ ಚಳುವಳಿಯ ಮೂಲಕ ಈ ದೇಶ ಪರಕೀಯ ಪ್ರಭುತ್ವದಿಂದ ಬಿಡುಗಡೆ ಪಡೆಯುವುದು ಎಷ್ಟು ಮುಖ್ಯವಾಗಿತ್ತೋ, ಅಷ್ಟೇ ಮುಖ್ಯವಾಗಿತ್ತು ವಸಾಹತುಷಾಹೀ ಕಾರಣದಿಂದ ಹರಿದು ಹಂಚಿ ಹೋದ ಕರ್ನಾಟಕ ಮತ್ತೆ ಏಕೀಕೃತ ಕರ್ನಾಟಕವಾಗುವುದು. ಇದು ಕೇವಲ ರಾಜಕೀಯವಾದದ್ದಲ್ಲ; ಮೂಲತಃ ಸಾಸ್ಕೃಂತಿಕವಾದದ್ದು. 'ಕರ್ನಾಟಕ ಮಾತೆ'ಯನ್ನು 'ಭಾರತ ಜನನಿಯ ತನುಜಾತೆ'ಯಂತೆ ಪರಿಭಾವಿಸಿದ ಕುವೆಂಪು, ಮೊದಲಿನಿಂದಲೂ ಕನ್ನಡ ಭಾಷೆಯ ಮೇಲಣ ಉತ್ಕಟವಾದ ಪ್ರೀತಿಯನ್ನು ಕುರಿತ ಹಲವು ಕವಿತೆಗಳನ್ನು ಬರೆದ ಕುವೆಂಪು, 'ಸಾಯುತಿದೆ ನಿಮ್ಮ ನುಡಿ ಓ ಕನ್ನಡದ ಕಂದರಿರ ಹೊರನುಡಿಯ ಹೊರೆಯಿಂದ ಕುಸಿದು ಕುಗ್ಗಿ' ಎಂದು ಕನ್ನಡಿಗರನ್ನು ಎಚ್ಚರಿಸುತ್ತ, ಅಖಂಡ ಕರ್ನಾಟಕದ ಕನಸುಕಾಣುತ್ತ, ಕನ್ನಡದ ಸ್ಥಾನಮಾನಗಳ ಪರವಾಗಿ ದನಿಯೆತ್ತುತ್ತ, ಕನ್ನಡ ಪರ ಹೊರಾಟಗಳಿಗೆ ಸ್ಫೂರ್ತಿಯಾಗುತ್ತ, ಪ್ರೋತ್ಸಾಹಿಸುತ್ತ ನಿಂತ ನಿಲುವು ಕೇವಲ ಕನ್ನಡ ಭಾಷೆಯ ಮೇಲಣ ಅಭಿಮಾನದಿಂದ ಹುಟ್ಟಿಕೊಂಡದ್ದಲ್ಲ; ಈ ದೇಶದ ಶ್ರೀ ಸಾಮಾನ್ಯನ ಅಭ್ಯುದಯದ ಪರವಾದ ಕಾಳಜಿಗಳಿಂದ ಹುಟ್ಟಿಕೊಂಡದ್ದು. ಯಾಕೆಂದರೆ ಇಂಗ್ಲಿಷ್ ಭಾಷೆ ಹಾಗೂ ಶಿಕ್ಷಣದ ಹಿಡಿತ ನಮ್ಮ ಸಾಮಾಜಿಕ ಸಂದರ್ಭದಲ್ಲಿ ಉಂಟುಮಾಡುವ ತರ-ತಮಗಳು ಪ್ರಜಾಪ್ರಭುತ್ವಕ್ಕೆ ವಿರೋಧಿಯಾದ ಅಸಮಾನತೆಯನ್ನು ಸುಭದ್ರಗೊಳಿಸುವ ತಂತ್ರಗಳೆ ಆಗುತ್ತವೆ ಎಂಬ ಸತ್ಯವನ್ನು ಕುವೆಂಪು ಬಲ್ಲವರಾಗಿದ್ದರು. ಆದರೇನು ಕುವೆಂಪು ಕಂಡ ಅಖಂಡ ಕರ್ನಾಟಕದ ಕನಸು ನನಸಾದರೂ, ರಾಜ್ಯಕ್ಕೆ ಕರ್ನಾಟಕ ಎಂದು ಹೆಸರಾದರೂ, ಅವರು ಆಶಿಸಿದಂತೆ ಕರ್ನಾಟಕದ ಎಲ್ಲ ಹಂತಗಳಲ್ಲಿ ಇನ್ನೂ

ಕನ್ನಡಕ್ಕೆ ನ್ಯಾಯವಾಗಿ ಸಲ್ಲಬೇಕಾದ ಸ್ಥಾನಮಾನಗಳು ಸಂದಿಲ್ಲ.

ಹೊಸಗನ್ನಡ ಕಾವ್ಯ ಸಂದರ್ಭದಲ್ಲಿ ಕವಿಯ ಸಾಂಸಾರಿಕ ಜೀವನ ಕೇಂದ್ರಿತವಾದ 'ಪ್ರೇಮಕವನ'ಗಳದ್ದೇ ಒಂದು ವಿಶೇಷತೆಯಾಗಿದೆ. ಅದರಲ್ಲೂ ಕೆ.ಎಸ್.ನ. ಮತ್ತು ಬೇಂದ್ರೆಯವರ ಕೊಡುಗೆ ಈ ಪ್ರಕಾರದಲ್ಲಿ ದೊಡ್ಡದು. ಕುವೆಂಪು ಅವರೂ ಪ್ರೇಮವನ್ನು ವಸ್ತುವನ್ನಾಗಿಸಿಕೊಂಡು ಸಾಕಷ್ಟು ಕವಿತೆಗಳನ್ನು ಬರೆದಿದ್ದಾರೆ. 'ಷೋಡಶಿ' 'ಪ್ರೇಮ ಕಾಶ್ಮೀರ' 'ಚಂದ್ರ ಮಂಚಕೆ ಬಾ, ಚಕೋರಿ' 'ಅನುತ್ತರಾ' – ಈ ಸಂಕಲನಗಳು ಈ ಬಗೆಯ ಕವಿತೆಗಳನ್ನು ಒಳಗೊಂಡಿವೆ. ಆದರೆ, ಅವರ ನಿಸರ್ಗಪರ ಹಾಗೂ ಸಮಾಜಪರ ಕವಿತೆಗಳಲ್ಲಿನ ಉತ್ಕಟತೆಗೆ ಹೋಲಿಸಿದರೆ, ಕುವೆಂಪು ಅವರ ಪ್ರೇಮ ಕವನಗಳು ಅಂತಹ ಉತ್ಸಾಹವನ್ನೇನೂ ಹುಟ್ಟಿಸುವುದಿಲ್ಲ. ಕುವೆಂಪು ಅವರು ಮೊದಮೊದಲು ಸನ್ಯಾಸ ಜೀವನಕ್ಕೆ ಹಂಬಲಿಸಿ, ಅನಂತರ ದಾಂಪತ್ಯ ಜೀವನವನ್ನು ಒಪ್ಪಿಕೊಂಡ ಕಾರಣದಿಂದಲೋ ಏನೋ, ಅವರ ಸಾಂಸಾರಿಕ ಜೀವನ ಕೇಂದ್ರಿತ ಪ್ರೇಮ ಕವನಗಳು ಸಾಕಷ್ಟು ಸಹಜವೂ ತೀವ್ರವೂ ಆಗದೆ, ಗಂಡು ಹೆಣ್ಣಿನ ಸಂಬಂಧವನ್ನು ಆದರ್ಶೀಕರಿಸುವ, ಮನುಷ್ಯ ಸಹಜವಾದ ಭೋಗವನ್ನು ಆ ದೈವೀಲೀಲೆಯ ಒಂದು ವಿನ್ಯಾಸವೆಂದು ಸಂತೈಸಿಕೊಳ್ಳುವ ಆಧ್ಯಾತ್ಮಿಕತೆಯ ಪರಿವೇಷದಲ್ಲಿ ಆಶ್ರಯವನ್ನು ಪಡೆಯುತ್ತವೆ. ಹೀಗಾಗಿ ಅವರ ಎಷ್ಟೋ ಕವನಗಳಲ್ಲಿಯಂತೆ ಅವರ ಪ್ರೇಮಕವನಗಳೂ ಆಧ್ಯಾತ್ಮಿಕ ಹಾಗೂ ಆದರ್ಶ ಪರ ನಿಲುವುಗಳನ್ನು ಮಂಡಿಸುವ ಮಧ್ಯಮವಾಗುತ್ತವೆಯೇ ಹೊರತು, ನಿಸ್ಸಂಕೋಚವಾದ ಹಾಗೂ ಸಹಜವಾದ ಮಾನವ ಭಾವಗಳ ತೀವ್ರಾಭಿವ್ಯಕ್ತಿಯಾಗುವುದಿಲ್ಲ. 'ಕವಿಗೀ ಸಂಸಾರವೆ ಪೂಜೆ', ಸಹಧರ್ಮಿಣಿಯು ಜಗನ್ಮಾತೆಯ ಒಂದು ಅಂಶ, ಸಂಸಾರ ಒಂದು ತಪೋವನ, ಭೋಗವೇನಿದ್ದರೂ ಆ ಶಿವ-ಶಿವಾಣಿಯರ ಲೀಲೆ - ಎಂಬ ಅನಗತ್ಯವಾದ ಆದರ್ಶದ ನಿಲುವಿಗೇರುವುದರ ಮೂಲಕ ಅವರ ಪ್ರೇಮ ಕವಿತೆಗಳು ತೀರಾ ವೈಯಕ್ತಿಕವೂ, ಪರಿಮಿತವೂ ಆಗಿ, ಹೆಚ್ಚೆಂದರೆ ವಿಸ್ಮಯಕ್ಕೆ ಪಾತ್ರವಾಗುತ್ತದೆ.

ಕುವೆಂಪು ತಾವು ಸಾಹಿತ್ಯಕ್ಷೇತ್ರಕ್ಕೆ ಕನ್ನಡದ ದಿಕ್ಕಿನಿಂದ ಪ್ರವೇಶಿಸದೆ ಇಂಗ್ಲಿಷಿನ ದಿಕ್ಕಿನಿಂದ ಪ್ರವೇಶಿಸಿದವರೆಂದು ಹೇಳಿಕೊಂಡರೂ, ಸಮಗ್ರ ಕನ್ನಡ ಸಾಹಿತ್ಯ ಪರಂಪರೆಯೊಂದಿಗೆ ಅವರು ಗಾಢವಾಗಿ ಬೆಸೆದುಕೊಳ್ಳುವಂತೆ ಮಾಡಿದ್ದು ಅವರ 'ಕಥನ ಪ್ರತಿಭೆ'ಯೇ. ಅವರ 'ಕವಿತಾ ಪ್ರತಿಭೆ' ಅವರನ್ನು ನವೋದಯದ ಪ್ರಮುಖ ಕವಿಗಳಲ್ಲಿ ಒಬ್ಬರನ್ನಾಗಿ ಮಾಡಿದರೆ, ಅವರ ಕಥನ ಪ್ರತಿಭೆ – ಸಾಂಪ್ರದಾಯಿಕ ಅರ್ಥದಲ್ಲಿ – ಅವರನ್ನು ಆಧುನಿಕ ಕನ್ನಡ ಸಾಹಿತ್ಯದ ಏಕೈಕ 'ಮಹಾಕವಿ'ಯನ್ನಾಗಿ ಮಾಡಿದೆ. ಅವರನ್ನು 'ಮಹಾಕವಿ' ಎಂದು ನಿರ್ದೇಶಿಸಲು ಕಾರಣವಾದ ಅವರ 'ಶ್ರೀ ರಾಮಾಯಣ ದರ್ಶನಂ' ಒಂದರ್ಥದಲ್ಲಿ ಅವರ ಸಮಸ್ತ 'ಕವಿತಾ ಪ್ರತಿಭೆ'ಯ ಶಿಖರ ಎನ್ನಬಹುದು. ಇಂಥದೊಂದು ಮಹತ್ ಕೃತಿಯ ನಿರ್ಮಿತಿಗಾಗಿ ಅವರು ತಮ್ಮ ಪೂರ್ವ ಹಾಗೂ ಪಶ್ಚಿಮದ ಕಾವ್ಯ ಸಂಸ್ಕಾರದ ಹಿನ್ನೆಲೆಯಲ್ಲಿ ಮೊದಲಿನಿಂದಲೂ ವಿವಿಧ ಕಥನ ಕವಿತೆಗಳ ಮೂಲಮಾನದಲ್ಲಿ ನಿರಂತರವಾಗಿ ಪ್ರಯೋಗದಲ್ಲಿ ತೊಡಗಿದ್ದರೆಂಬ ಸಂಗತಿಯನ್ನು ಅವರು ತಮ್ಮ ಆತ್ಮಕಥನವಾದ ನೆನಪಿನ ದೋಣಿಯಲ್ಲಿ ಸಾಕಷ್ಟು ಕಡೆ ಪ್ರಸ್ತಾಪಿಸಿದ್ದಾರೆ. ಕುವೆಂಪು ಅವರ ಕಥನ ಪ್ರತಿಭೆ ಒಂದೆಡೆ ಅವರ 'ಶ್ರೀ

ರಾಮಾಯಣ ದರ್ಶನಂ'ದಂಥ ಮಹಾಕಾವ್ಯದಲ್ಲಿ, ಮತ್ತು ಅವರು ಬರೆದ ಎರಡು ಕಾದರಂಬರಿಗಳಲ್ಲಿ ತನ್ನ ಸಮೃದ್ಧವಾದ ಅಭಿವ್ಯಕ್ತಿಯನ್ನು ಕಂಡುಕೊಂಡರೆ, ಅವರ ಇನ್ನಿತಿರ ಕಾವ್ಯ ನಿರ್ಮಿತಿಯ ಒಂದು ಭಾಗವಾಗಿಯೂ – ಅನೇಕ ಕಥನ ಕವನಗಳಲ್ಲಿ – ಅಭಿವ್ಯಕ್ತವಾಗಿದೆ. ಈ ಕಥನ ಕವನಗಳನ್ನು ವಸ್ತುವಿನ ದೃಷ್ಟಿಯಿಂದ ಎರಡು ಭಾಗಗಳನ್ನಾಗಿ ವಿಂಗಡಿಸಿಕೊಂಡು ನೋಡಬಹುದು: ಒಂದು ಅಭಿಜಾತ ಕಾವ್ಯ ಪರಂಪರೆಯ ಲಕ್ಷಣಗಳನ್ನುಳ್ಳ ಕಥನ ಕವನಗಳು; ಮತ್ತೊಂದು ನೇರವಾಗಿ ನವೋದಯ ಸಂದರ್ಭದ 'ಭಾವಗೀತೆ'ಯೆಂಬ ಕವಿತೆಯ 'ಕಾವ್ಯಕಲ್ಪನೆ'ಗೆ ಹೊಂದುವ ಕಥನಗಳು. 'ಮಹಾದರ್ಶನ' 'ಸಮುದ್ರಲಂಘನ' 'ತಾನಾಜಿ' 'ರಕ್ತರಜನಿ' 'ಚಿತ್ರಾಂಗದಾ' – ಇಂಥ ಕವನಗಳು ಮೊದಲನೆಯ ವರ್ಗಕ್ಕೆ ಸೇರುವ ಕಥನ ಕವನಗಳು ಎನ್ನುವುದಾದರೆ, 'ಅಮಲನ ಕಥೆ' 'ಪ್ರಾಯಶ್ಚಿತ್ತ' 'ಹಾಳೂರು' ಮತ್ತು ಅವರ 'ಕಥನ ಕವನಗಳು' ಎಂಬ ಸಂಗ್ರಹದೊಳಗಿನ ಇನ್ನೆಷ್ಟೊ ಕವನಗಳು ಈ ಎರಡನೆಯ ವರ್ಗದ ಕಥನ ಕವನಗಳು ಎನ್ನಬಹುದು. ಇಷ್ಟಲ್ಲದೆ ಮಕ್ಕಳಿಗಾಗಿ ಅವರು ಬರೆದ ಸಾಕಷ್ಟು ಸಂಖ್ಯೆಯ ಕವನಗಳೂ ಮೂಲತಃ ಕಥನದ ಲಕ್ಷಣಗಳನ್ನು ಒಳಗೊಂಡರೂ, ಬ್ರೌನಿಂಗ್ ಕವಿಯ ಪ್ರೇರಣೆಯಿಂದ ಅವರು ಬರೆದ 'ಬೊಮ್ಮನ ಹಳ್ಳಿಯ ಕಿಂದರಿ ಜೋಗಿ' ಅವರೇ ಹೇಳುವಂತೆ 'ಏಕ್‌ದಂ ಕರ್ನಾಟಕವನ್ನೆಲ್ಲ ಬೆರಗುಗೊಳಿಸಿದ' ಕವಿತೆ. ಇವತ್ತಿಗೂ ಅಷ್ಟರ ಮಟ್ಟಿಗೆ ಮಕ್ಕಳನ್ನು ಬೆರಗುಗೊಳಿಸುವ ಕವಿತೆ ಮತ್ತೊಂದಿಲ್ಲ.

ಕನ್ನಡಕ್ಕೆ ಸಮಾನಾಂತರವಾದ ದೂರದಲ್ಲಿ ನಿಂತು, ತಮ್ಮ ಪಾಡಿಗೆ ತಾವು ಏಕಾಂಗಿಯಾಗಿ ಇಂಗ್ಲಿಷ್ ಸಾಹಿತ್ಯದೊಂದಿಗೆ ಹೋರಾಡುತ್ತ ಇಂಗ್ಲಿಷಿನಲ್ಲಿಯೆ ಪದ್ಯರಚನೆ ಮಾಡುತ್ತಿದ್ದ ಸಂದರ್ಭದಲ್ಲಿ ಅವರು ಕನ್ನಡದಲ್ಲಿ ಬರೆಯಲು ಪ್ರಯತ್ನಪಟ್ಟ 'ಅಮಲನ ಕಥೆ' ಚಾರಿತ್ರಿಕವಾಗಿ ಕುವೆಂಪು ಅವರ ಮೊಟ್ಟ ಮೊದಲ ಕಥನ ಕವನವಾಗಿದೆ. ಇದು ಪ್ರಕಟವಾದದ್ದು ೧೯೨೪ರಲ್ಲಿ ಎಂದು ಕಾಣಿಸಲಾಗಿದೆ. ಇದರ ವಸ್ತು ಕಾಡಿಗೆ ಹೋಗಿ ಕಟ್ಟಿಗೆ ಕಡಿದು ತಂದು ಮಾರಿ ಬದುಕುವ ಬಡವನೊಬ್ಬನನ್ನು ಕುರಿತದ್ದು. ಶಾಲಾ ಪುಸ್ತಕದಲ್ಲಿ ಪರಿಚಿತವಾದ 'ಗೋವಿನ ಕತೆ'ಯ ಧಾಟಿಯ ಈ ಪದ್ಯ ಐನೂರು ಅರವತ್ತು ಪಂಕ್ತಿಗಳಷ್ಟು ಸುದೀರ್ಘವಾಗಿದೆ. ಕುಮಾರವ್ಯಾಸ ಲಕ್ಷ್ಮೀಶರ ಪ್ರೇರಣೆಗಳನ್ನು ಗುರುತಿಸಬಹುದಾದ ಈ ಕವಿತೆ ತೀರಾ ಸಾಮಾನ್ಯವಾಗಿದ್ದರೂ, ಕುವೆಂಪು ಅವರ ಕಾವ್ಯದ ಮುಖ್ಯಲಕ್ಷಣಗಳಾದ ನಿಸರ್ಗಪ್ರೀತಿ ಮತ್ತು ದೈವಶ್ರದ್ಧೆಗಳನ್ನು ಸ್ಪಷ್ಟವಾಗಿ ಪ್ರಕಟಿಸುತ್ತದೆ. ತದನಂತರ ೧೯೨೬ರಲ್ಲಿ ರಚಿತವಾದ, ೫೩೮ರಷ್ಟು ಪಂಕ್ತಿಗಳ 'ಹಾಳೂರು', ೧೯೨೭ರಲ್ಲಿ ರಚಿತವಾದ ಸುಮಾರು ೨೨೫ ಪಂಕ್ತಿಗಳ 'ಪ್ರಾಯಶ್ಚಿತ್ತ, ಮತ್ತು ಅದೇಕಾಲದಲ್ಲಿ (೧೯೨೭) ರಚಿತವಾದ, ಸುಮಾರು ಏಳುನೂರು ಪಂಕ್ತಿಗಳಷ್ಟು ದೀರ್ಘವಾದ 'ಮಹಾದರ್ಶನ'' ಮತ್ತು ೧೯೩೦ರಲ್ಲಿ ಮೈಸೂರಿನ ಅರ್ಥಸಾಧಕ ಪತ್ರಿಕೆಯಲ್ಲಿ ಪ್ರಕಟವಾದ 'ಸಮುದ್ರಲಂಘನ' ಎಂಬ ಹೆಸರಿನ ೫೧೨ ಪಂಕ್ತಿಗಳ ಕಥನ ಕವನ - ಇವುಗಳನ್ನು ನೋಡಿದರೆ, – ಕುವೆಂಪು ಅವರು ತಾವು ನೇರವಾಗಿ ಆವಿಷ್ಕಾರ ಮಾಡಿಕೊಂಡ 'ಬ್ಲ್ಯಾಂಕ್ ವರ್ಸ್' ಎಂಬ ಛಂದೋರೂಪದ ಹಿನ್ನೆಲೆಯಲ್ಲಿ, ತಾವು ಮುಂದೆ 'ಶ್ರೀರಾಮಾಯಣ ದರ್ಶನಂ'ದಂಥ ಮಹಾಕಾವ್ಯಕ್ಕೆ ಅಗತ್ಯವಾದ 'ಮಹಾಛಂದಸ್ಸ'ನ್ನು

ರೂಪಿಸಿಕೊಳ್ಳುವ ಕಾವ್ಯಪ್ರಯೋಗಗಳಲ್ಲಿ, ತಮ್ಮ ಕಾವ್ಯೋದ್ಯೋಗದ ಪ್ರಾರಂಭದ ದಿನಗಳಿಂದಲೇ ತೊಡಗಿಕೊಂಡರೆಂಬುದು ಸ್ಪಷ್ಟವಾಗುತ್ತದೆ. ಅದರಲ್ಲಿಯೂ 'ಸಮುದ್ರಲಂಘನ'ವೆಂಬ ಕಥನ ಕಾವ್ಯ, – ದ್ವಿತೀಯಾಕ್ಷರ ಪ್ರಾಸವನ್ನು ಕೈಬಿಟ್ಟು ಭಾಮಿನೀಷಟ್ಪದಿಯ ಹೊಸನಡೆಯಲ್ಲಿ ಲಿಖಿತವಾದ ಕಾವ್ಯ – ಅವರ ಶ್ರೀ ರಾಮಾಯಣದರ್ಶನಂ ಮಹಾಕಾವ್ಯದ ಮೊದಲ ಸಂಪುಟದಲ್ಲಿ ಬರುವ 'ಸಾಗರೋಲ್ಲಂಘನ' ಸಂಚಿಕೆಯ ಪೂರ್ವಾವಸ್ಥೆಯಂತಿದೆ.

ನವೋದಯ ಸಂದರ್ಭದ 'ಭಾವಗೀತೆ' ಎಂದು ಕರೆಯಿಸಿಕೊಳ್ಳಲಾದ ಕವಿತೆಯ 'ಕಾವ್ಯಕಲ್ಪನೆಗೆ ಅನುಸಾರವಾದ ಕಥನಕವಗಳ ಮಾದರಿ ಸಿದ್ಧವಾದದ್ದು ಆಚಾರ್ಯ ಬಿ.ಎಂ.ಶ್ರೀ ಅವರ 'ಇಂಗ್ಲಿಷ್ ಗೀತೆಗಳು' ಸಂಕಲನದಲ್ಲಿದ್ದ 'ಕಾರಿ ಹೆಗ್ಗಡೆಯ ಮಗಳು' 'ಮುದಿಯ ರಾಮಗೌಡ' 'ಚೋಳಕನ್ನೆಯರು' – ಇಂಥ ಕವಿತೆಗಳಿಂದ. ದೈನಂದಿನ ಸರಳ ಸಾಧಾರಣ ಸಂಗತಿಗಳನ್ನು ಕೀರ್ತಿಸುವ ಇಂಥ ಸಾಕಷ್ಟು ಕವಿತೆಗಳನ್ನು ಕುವೆಂಪು ಬರೆಯಲು ಶ್ರೀಯವರ ಮಾದರಿಗಳು ಪ್ರೇರಕವಾಗಿರಬಹುದು. ಅವರಿಗೆ ಪ್ರಿಯವಾದ ಇಂಗ್ಲಿಷ್ ಕವಿಗಳಾದ ವರ್ಡ್ಸ್‌ವರ್ತ್, ಟೆನಿಸನ್ ಮೊದಲಾದವರ ದಿಗ್ದರ್ಶನದಿಂದ ಇದೇ ಸಂದರ್ಭದಲ್ಲಿ ಕುವೆಂಪು ಬರೆದ ನಿಸರ್ಗಪರ ಕವಿತೆಗಳಿಗೂ ಮತ್ತು ಕಥನ ಕವನಗಳಿಗೂ ಇರುವ ಮುಖ್ಯವಾದ ವ್ಯತ್ಯಾಸವೇನೆಂದರೆ, ಅವರ ನಿಸರ್ಗಪರ ಕವಿತೆಗಳಲ್ಲಿ ಕವಿಯೊಬ್ಬನಲ್ಲದೆ ಮತ್ತೆ ಬೇರೆಯಾವ ಮನುಷ್ಯ ವ್ಯಕ್ತಿಗಳೂ ಇಲ್ಲದ ಏಕಾಕಿತನವಿದ್ದರೆ, ಅವರ ಕಥನ ಕವಗಳಲ್ಲಿ ಕವಿಯ ಜತೆಗೆ, ಮಲೆನಾಡಿನ ಸರಳ ಸಾಧಾರಣ ಜೀವಂತ ವ್ಯಕ್ತಿಗಳೂ, ಘಟನೆಗಳೂ ಒಂದು ಬಗೆಯ ಆತ್ಮೀಯ ಬಾಂಧವ್ಯದಲ್ಲಿ ಬೆಸದುಕೊಂಡಿರುವುದನ್ನು ಕಾಣಬಹುದು. 'ಮರಸು ಬೇಟೆ' 'ಡೂಲಿ' 'ನಾಗಿ' 'ಮಂಜಣ್ಣ ಹೇಳಿದ ಸ್ಥಳಗತೆ' – ಹೀಗೆ ಮಲೆನಾಡಿನ ಜೀವಂತಿಕೆಯನ್ನೂ ವ್ಯಥೆಗಳನ್ನೂ ತೆರೆದಿಡುವ ಇಂಥ ಪದ್ಯಗಳನ್ನು ಓದಿದ ಮೇಲೆ, ಯಾಕೆ ಕುವೆಂಪು ಈ ಅನುಭವ ಪ್ರಪಂಚವನ್ನು ವಿಸ್ತರಿಸುವ ಇನ್ನಷ್ಟು ಕಥನ ಕವನಗಳನ್ನು ಬರೆಯಲಿಲ್ಲ ಎಂಬುದು ಒಂದು ಸೋಜಿಗವಾಗಿ ನಮ್ಮನ್ನು ಕಾಡುತ್ತದೆ.

ಈ ಕಥನ ಕವನಗಳಲ್ಲಿ ಅವರು ೧೯೨೭ರಷ್ಟು ಹಿಂದೆಯೆ ಬರೆದ 'ಕರಿಸಿದ್ದ' ಎಂಬ ಕವಿತೆ. ಕುವೆಂಪು ಅವರ 'ದರ್ಶನ'ದ ದೃಷ್ಟಿಯಿಂದ ತುಂಬ ಮುಖ್ಯವಾದುದಾಗಿದೆ. 'ತೀರ್ಥಹಳ್ಳಿಯ ಕಳೆದು, ತಾಯಿ ತುಂಗೆಯ ದಾಟಿ, ಒಂಬತ್ತು ಮೈಲಿಗಳ ದೂರದಲಿ ನಮ್ಮೂರ ಕುಪ್ಪಳಿ' ಎಂಬ ಆತ್ಮೀಯತೆಯ ಮಾತು ಕತೆಯೊಂದಿಗೆ ಪ್ರಾರಂಭವಾಗುವ 'ಸರಳ ರಗಳೆ'ಯ ಈ ಕಥನ, ಅದೇ ಕುಪ್ಪಳಿಯ ಪರಿಸರದ ಗುಡಿಸಲಿನಲ್ಲಿ ವಾಸಮಾಡುವ ಕರಿಸಿದ್ದ, ಗಿಡ್ಡಿ ಮತ್ತು ಅವರಿಬ್ಬರ ಮಗ ಹಾಗೂ ಹಂಡನಾಯಿಯ ವೃತ್ತಾಂತದೊಂದಿಗೆ ಮುಂದುವರಿದು, ಒಂದು ದಿನ ಆವಲು ಹೂವನ್ನು ಕೀಳಲು ಹೋಗಿ ಕಾಲುಜಾರಿ ಬೈರ ಹುಡುಗ ಕುಪ್ಪಳಿಯ ಕೆರೆಯಲ್ಲಿ ಬಿದ್ದು ಸತ್ತು ಹೋದ ದುರಂತವನ್ನು ಚಿತ್ರಸುತ್ತದೆ. ಈ ಕವಿತೆಯ ಹೆಣಿಗೆಯೊಳಗೆ ಮಲೆನಾಡಿನ ಕೆಳವರ್ಗದ ಬದುಕು, ಅವರ ನಂಬಿಕೆ-ನಡವಳಿಕೆ ಹಾಗೂ ಆಚರಣೆಗಳ ಜತೆಗೆ, ಈ ದೇಶದ ಕಾವ್ಯ ಪರಂಪರೆಗೆ ಹಾಗೂ ಸಂಸ್ಕೃತಿಗೆ ಕವಿ ತೋರಿದ ಸೂಕ್ಷ್ಮವಾದ ಪ್ರತಿಕ್ರಿಯೆಗಳೂ ದಾಖಲಾಗಿರುವ ಕ್ರಮ ವಿಶೇಷರೀತಿಯದಾಗಿದ್ದು, ಅಪ್ಪಟ ದೇಸೀಯತೆಯಲ್ಲಿ ಈ ಕವಿ

ಬೇರೂರಿ ಬರೆದ ಒಂದು ಅಪರೂಪದ ಕವಿತೆ ಇದು ಎನ್ನಿಸುತ್ತದೆ. ಇದೆಲ್ಲಕ್ಕಿಂತ ಮುಖ್ಯವಾಗಿ ಇಲ್ಲಿ ಹೇಳಬೇಕಾದ ಮಾತೆಂದರೆ, ಕುಪ್ಪಳಿಯ ಕೆರೆಯಲ್ಲಿ ಬೈರ ಹುಡುಗನು ಬಿದ್ದು ಸತ್ತು ಹೋದ ಸಂದರ್ಭವನ್ನು, ಅದೇ ಹೊತ್ತಿನಲ್ಲಿ ಈ ಜಗತ್ತಿನಲ್ಲಿ ನಡೆದ ಇತರ ಅನೇಕ ಘಟನೆಗಳ ಜತೆಗೆ ಇರಿಸಿ ನೋಡಿರುವ ಕ್ರಮ. ಈ ಕವಿತೆಯ ಮುಕ್ತಾಯದ ಸಾಲುಗಳು ಹೀಗಿವೆ:

'ಯಮನ ಕರಣಿಕನಾಗ ಕಾಲದೋಲೆಯಮೇಲೆ
ಚಿತ್ರಗುಪ್ತನು ಬರೆದು ಚಿತ್ರಿಸಿದ ನಿಂತೆಂದು:
ಪಾರ್ಲಿಮೆಂಟಿನಲೊಬ್ಬ ಭಾಷಣವ ಮಾಡಿದನು....
ವಂಗ ದೇಶದ ಕವಿಯು ನಾಟಕವನಾಡಿದನು.
ಹಿಮಗಿರಿಯ ಮೇಲೊಬ್ಬ ಸಾಧುವಾದನು ಸಿದ್ಧ
ಜರ್ಮನಿಯ ದೇಶದಲಿ ನಡೆದಿದೆ ಮಹಾಯುದ್ಧ
ಕುಪ್ಪಳಿಯ ಕೆರೆಯಲ್ಲಿ ಬೈರ ಹುಡುಗನು ಬಿದ್ದ
ಮಡಿದವಗೆ ಮರುಗುವರು ಗಿಡ್ಡಿ ಕರಿಸಿದ್ಧ
ಹಂಡನಾಯಿಯು ಮರುಗಿ ಕಣ್ಣೀರ ಕರೆದಿತ್ತು
ಆಫ್ರಿಕದಿ ಕಂಬಿ ತಪ್ಪಿದ ರೈಲು ಬಿದ್ದಿತ್ತು
ಕಾಶಿಯಲಿ ಹಾರುವರು ಹೇಳುತಿರುವರು ವೇದ
ಚಿತ್ರಗುಪ್ತನಿಗಿದೆಯೆ ಮೇಲು ಕೀಳಿನ ಭೇದ?'

'ಕುಪ್ಪಳಿಯ ಕೆರೆಯಲ್ಲಿ ಬೈರ ಹುಡುಗನು ಬಿದ್ದ'ದ್ದು ಲೋಕದ ಕಣ್ಣಿಗೆ ತೀರಾ ಯಃಕಶ್ಚಿತ್ತಾದ ಸಂಗತಿಯಾಗಿರಬಹುದು. ಆದರೆ ಕವಿಯ ಕಣ್ಣಿಗೆ, ಅದು ಅದೇ ಹೊತ್ತಿನಲ್ಲಿ ಜರುಗಿದ ವಿವಿಧ ಜಾಗತಿಕ ಘಟನೆಗಳಲ್ಲಿ ಒಂದು ಎಂಬಂತೆ ಗ್ರಹೀತವಾಗಿದೆ. ಆ ಬಿಡಿಬಿಡಿ ಘಟನೆಗಳಿಗೆ ಕಾಲದೇಶ ಬದ್ಧವಾದ ತರ ತಮಗಳ ಪರಿಗಣನೆ ಇರಬಹುದು. ಆದರೆ 'ಇಡಿ'ಯಾಗಿ ನೋಡಿದಾಗ ಈ ಜಗತ್ತಿನಲ್ಲಿ ಯಾವುದೂ ಒಂದು ಮತ್ತೊಂದಕ್ಕಿಂತ ಮೇಲಾದದೂ ಅಲ್ಲ, ಕೀಳಾದುದೂ ಅಲ್ಲ. ಇದು ಕುವೆಂಪು ಜಗತ್ತಿನ ಅಖಂಡತೆಯನ್ನು ಗ್ರಹಿಸುವ ಕ್ರಮ. ಪ್ರತಿಯೊಂದೂ ಪ್ರತಿಯೊಂದರ ಜತೆಗೆ ಹೆಣೆದಿರುವ ಸೃಷ್ಟಿಯ ವ್ಯೂಹದ ಹಿನ್ನೆಲೆಯೊಳಗೆ 'ಬಿಡಿ'ಯನ್ನು 'ಇಡಿ'ಯಾಗಿ ಪರಿಭಾವಿಸುವ ರೀತಿ. ಪ್ರತಿಯೊಂದನ್ನೂ ಸಮಗ್ರವಾಗಿ ಅಥವಾ ಸಮಗ್ರತೆಯ ಜತೆಗೆ ಗ್ರಹಿಸುವ ಕವಿಕಾಣ್ಕೆ. ಇದು ಕುವೆಂಪು ಅವರ ಕಾವ್ಯದ ಮುಖ್ಯ ಲಕ್ಷಣವಾದ ಆಧ್ಯಾತ್ಮವನ್ನು ರೂಪಿಸಿರುವ ನಿಲುವೂ ಹೌದು. 'ರಾಮನ ಕಿರೀಟದಲ್ಲಿ ರಾರಾಜಿಸುವ ರತ್ನದ ಮಣಿ ಎಷ್ಟು ರಮ್ಯವಾದದ್ದೋ, ಅಷ್ಟೇ ರಮ್ಯವಾದದ್ದು ಪಂಚವಟಿಯಲ್ಲಿ ಸೂರ್ಯೋದಯದ ಸಮಯದಲ್ಲಿ ಹಸಿರು ಹುಲ್ಲಿನ ತುದಿಯಲ್ಲಿ ತೃಣಸುಂದರಿಯ ಮೂಗುತಿಯ ಮುತ್ತಿನಂತೆ ಮಿರುಮಿರುಗುವ ಇಬ್ಬನಿಯ ಬಿಂದುವೂ' (ಕವಿಕ್ರತುದರ್ಶನಂ: ೧೧೧ - ೧೧೫) ಎಂದು ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯವನ್ನು ಬರೆಯುವಾಗ ಕುವೆಂಪು ಘೋಷಿಸಿದ ನಿಲುವೂ ಇದೇ. ೧೯೬೭ರಲ್ಲಿ ಪ್ರಕಟವಾದ ಅವರ 'ಮಲೆಗಳಲ್ಲಿ

ಮದುಮಗಳು' ಕಾದಂಬರಿಯ ಮೊದಲಲ್ಲಿ ಓದುಗರನ್ನು ಉದ್ದೇಶಿಸಿ 'ಇಲ್ಲಿ, ಯಾರೂ ಮುಖ್ಯರಲ್ಲ, ಯಾರೂ ಅಮುಖ್ಯರಲ್ಲ, ಯಾವುದೂ ಯಃಕಶ್ಚಿತವಲ್ಲ' ಎಂದು ಹೇಳಿರುವ ಮಾತುಗಳ ಅರ್ಥವೂ ಇದೇ!

* * * * *

ಕನ್ನಡ ವಿಶ್ವವಿದ್ಯಾಲಯದ ಕುಲಪತಿ ಡಾ.ಎಂ.ಎಂ.ಕಲಬುರ್ಗಿ ಅವರ ಸಂಕಲ್ಪ ಹಾಗೂ ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಅವರ ಸಹಕಾರಗಳಿಂದ ಮೊಟ್ಟ ಮೊದಲ ಬಾರಿಗೆ ಶ್ರೀ ಕುವೆಂಪು ಅವರ ಸಮಗ್ರ ಕಾವ್ಯ – ಎರಡು ಸಂಪುಟಗಳಲ್ಲಿ – ಕನ್ನಡಿಗರ ಕೈಗೆ ದೊರೆಯುವಂತಾಗಿದೆ. ಅವರ ಕಾವ್ಯ ಪ್ರತಿಭೆಯ ವಿಸ್ತರಣೆಗಳಾದ 'ಚಿತ್ರಾಂಗದಾ' ಮತ್ತು 'ಶ್ರೀ ರಾಮಾಯಣ ದರ್ಶನಂ' – ಈ ಎರಡನ್ನು ಪ್ರತ್ಯೇಕಿಸಿ ಅವರ ಕಾವ್ಯದ 'ಸಮಗ್ರತೆ'ಯನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ ಎಂಬುದು ನಿಜವಾದರೂ, ಸ್ವರೂಪದಲ್ಲಿ ಭಿನ್ನವಾದ ಅವುಗಳು ಪ್ರತ್ಯೇಕವಾಗಿಯೆ ಪರಿಗಣನೆಗೆ ಅರ್ಹವಾಗುವ ಸಾಧ್ಯತೆಯನ್ನು ಪಡೆದಿರುವುದರಿಂದ, ಖಂಡ ಕಾವ್ಯ ಮಹಾಕಾವ್ಯಗಳಿಂದ ಹೊರತಾದ, ಕುವೆಂಪು ಕಾವ್ಯ ಈ ಸಂಪುಟಗಳಲ್ಲಿ ಸಹೃದಯರಿಗೆ ಲಭ್ಯವಾಗಿದೆ. ಇಲ್ಲಿ ೧೯೩೦ರಲ್ಲಿ ಪ್ರಕಟವಾದ 'ಕೊಳಲು' ಸಂಗ್ರಹದಿಂದ ಹಿಡಿದು ೧೯೮೧ರಲ್ಲಿ ಪ್ರಕಟವಾದ 'ಕೊನೆಯ ತೆನೆ ಮತ್ತು ವಿಶ್ವಮಾನವ ಸಂದೇಶ'ದವರೆಗಿನ ಐವತ್ತು ವರ್ಷಗಳ ಕಾಲಕ್ಕೂ ಮೀರಿದ ಕಾವ್ಯದ ಹರಹು ಇಲ್ಲಿನ ಒಟ್ಟು ಮೂವತ್ತುಮೂರು ಕವನ ಸಂಗ್ರಹಗಳ ಮೂಲಕ ಕಾಣಿಸಿಕೊಂಡಿದೆ. ಇದುವರೆಗೂ ಅಷ್ಟಾಗಿ ಪರಿಚಿತವಾಗದ ಮತ್ತು ಹೊಸದಾಗಿ ಉಪಲಬ್ಧವಾದ, ಎರಡು ಇಂಗ್ಲಿಷ್ ಕವನ ಸಂಗ್ರಹಗಳೂ, ಅಮಲನ ಕತೆ, ಹಾಳೂರು, ಸಮುದ್ರ ಲಂಘನ, ಮಹಾದರ್ಶನ ಮತ್ತು ಪ್ರಾಯಶ್ಚಿತ್ತ ಎಂಬ ಕವನಗಳೂ ಇಲ್ಲಿ ಸೇರ್ಪಡೆಯಾಗಿವೆ.

ಕುವೆಂಪು ಅವರ ಕಾವ್ಯ, ವಿಸ್ತಾರವೂ ವೈವಿಧ್ಯಮಯವೂ ಆದ ಅವರ ಸಾಹಿತ್ಯ ಸೃಷ್ಟಿಯ ಒಂದು ಭಾಗವಾಗಿದೆ. ಅವರ ಸಾಹಿತ್ಯದ ಹರಹು ಎಷ್ಟಿದೆ ಎಂದರೆ, ಅದರ ವಿಪುಲತೆ, ವಿಸ್ತಾರ ಹಾಗೂ ಎತ್ತರಗಳಿಂದ ಸಹ್ಯಾದ್ರಿಯ ನಿಬಿಡಾರಣ್ಯ ಶ್ರೇಣಿಯಂತೆ ಪ್ರವೇಶ ಮಾಡಿದವರನ್ನು ದಂಗುಬಡಿಸುತ್ತದೆ. ಆದ ಕಾರಣ ಅದಷ್ಟನ್ನೂ ಸಮಗ್ರವಾಗಿ ಗ್ರಹಿಸುವುದಾಗಲೀ, ಅರ್ಥ ಮಾಡಿಕೊಳ್ಳುವುದಾಗಲಿ ಸುಲಭ ಸಾಧ್ಯವಾದ ಸಂಗತಿ ಅಲ್ಲ. ಹೀಗಾಗಿ ಕುವೆಂಪು, ವಿಮರ್ಶಕರ ಪಾಲಿಗೆ ಒಂದು ಸವಾಲೆಂದೇ ಹೇಳಬಹುದು. ಅವರ ಸಾಹಿತ್ಯದ ವಿಭಿನ್ನ ನೆಲೆಗಳು, ಅದರ ವೈರುಧ್ಯಗಳು, ಅಸ್ತಿತ್ವದ ಅನೇಕ ಸ್ತರಗಳಿಗೆ ಏರಿಳಿಯುವ ಅನುಭವಗಳು, ವಿವಿಧ ಜ್ಞಾನ ಶಾಖೆಗಳಿಂದ ಪಡೆದುಕೊಂಡ ವ್ಯುತ್ಪತ್ತಿ ವಿಶೇಷಗಳು, ಯಾವುದೇ ಸಿದ್ಧಸಾಹಿತ್ಯ ವಿಮರ್ಶೆಯ ಮಾನದಂಡಗಳಿಗೆ ಅಳವಡುವುದು ದುಸ್ತರವಾಗಿದೆ. ಇಂಥ ಸಾಹಿತ್ಯ ನಿರ್ಮಿತಿಯ ಒಂದು ಭಾಗವನ್ನು ಒಳಕೊಳ್ಳುವ 'ಸಮಗ್ರ ಕಾವ್ಯ' ಸಂಪುಟಗಳ ಪ್ರಕಟನೆಯ ಸಂದರ್ಭದಲ್ಲಿ, ಪ್ರಸ್ತಾವನೆಯಾಗಿ ನಾಲ್ಕು ಮಾತುಗಳನ್ನು ನಾನೇ ಬರೆಯಬೇಕೆಂದು ಮಾನ್ಯ

ಮಿತ್ರರಾದ ಡಾ. ಕಲಬುರ್ಗಿಯವರು ನನ್ನನ್ನು ನಿಯೋಜಿಸಿ, ಇದುವರೆಗೂ ಬಿಡಿಬಿಡಿಯಾಗಿ ಕುವೆಂಪು ಅವರ ಕಾವ್ಯವನ್ನು ಓದುತ್ತ ಬಂದ ನನಗೂ (ಕನ್ನಡ ಸಹೃದಯರಿಗೂ) ಈಗ ಇಡಿಯಾಗಿ ಕುವೆಂಪು ಕಾವ್ಯವನ್ನು ಪರಿಶೀಲಿಸುವ ಒಂದು ಅವಕಾಶವನ್ನು ಕಲ್ಪಿಸಿದ್ದಾರೆ. ಅದಕ್ಕಾಗಿ ನಾನು ಡಾ.ಕಲಬುರ್ಗಿಯವರಿಗೆ ಕೃತಜ್ಞನಾಗಿದ್ದೇನೆ. ಕುವೆಂಪು ಅವರ ಕಾವ್ಯವನ್ನು ಕುರಿತು ಈಗಾಗಲೆ ನಡೆದಿರುವ ವಿಮರ್ಶೆಯ ಹಿನ್ನಲೆಯಲ್ಲಿ ನಾನು ಕೇವಲ ಒಬ್ಬ ಓದುಗನಾಗಿ, ಈ ಮರು ಓದಿನ ಸಂದರ್ಭದಲ್ಲಿ ನನ್ನ ಕೆಲವು ಪ್ರತಿಕ್ರಿಯೆಗಳನ್ನು ಈ ಮೇಲಿನ ಪ್ರಸ್ತಾವನೆಯಲ್ಲಿ ದಾಖಲು ಮಾಡಿದ್ದೇನೆ. ಕುವೆಂಪು ಅವರ ಸಮಗ್ರ ಕಾವ್ಯವನ್ನು ಪ್ರವೇಶಿಸಲು ಹಾಗೂ ಅರ್ಥಮಾಡಿಕೊಳ್ಳಲು ನನ್ನ ಈ ಪ್ರತಿಕ್ರಿಯೆಗಳಿಂದೇನಾದರೂ ಸಹೃದಯರಿಗೆ ಸಹಾಯುವಾಗುವುದಾದರೆ ಸಂತೋಷ.

ಆಗಸ್ಟ್ —೨೦೦೦ —ಜಿ.ಎಸ್.ಶಿವರುದ್ರಪ್ಪ.

---

ಓದುಗರ ಗಮನಕ್ಕೆ:

ಹನ್ನೆರಡು ವರ್ಷಗಳ ಹಿಂದೆ ಕನ್ನಡ ವಿಶ್ವವಿದ್ಯಾಲಯದವರು ಕುವೆಂಪು ಸಮಗ್ರ ಕಾವ್ಯ ಸಂಪುಟವನ್ನು ಹೊರತರುವ ಸಂದರ್ಭದಲ್ಲಿ ರಾಷ್ಟ್ರಕವಿ ಜಿ.ಎಸ್.ಶಿವರುದ್ರಪ್ಪನವರು 'ಕುವೆಂಪು ಸಮಗ್ರ ಕಾವ್ಯಕ್ಕೆ ಒಂದು ಪ್ರವೇಶ' ಬರೆದಿರುವ ಲೇಖನವನ್ನು ಯಥಾವತ್ತಾಗಿ ಇಲ್ಲಿ ಓದುಗರ ಅನುಕೂಲಕ್ಕಾಗಿ ಮುದ್ರಿಸಿರುತ್ತೇವೆ.

## ಸಂಚಿಕೆ ೧

# ಕವಿಕ್ರತು ದರ್ಶನಂ

ಶ್ರೀ ರಾಮ ಕಥೆಯಂ ಮಹರ್ಷಿ ನಾರದ ವೀಣೆಯಿಂ
ಕೇಳ್ದು, ಕಣ್ದಾವರೆಯೊಳಶ್ರುರಸಮುಗುವನ್ನೆಗಂ
ರೋಮಹರ್ಷಂದಾಳ್ದು ಸಹೃದಯಂ ವಾಲ್ಮೀಕಿ ತಾಂ
ನಡೆತಂದನಾತ್ಮಸುಖಿ, ಕೇಳ್, ತಮಸಾ ನದೀ ತಟಿಗೆ,
ತೇಜಸ್ವಿ, ತರುಣಂ, ತಪೋವಲ್ಕಲ ವಸ್ತ್ರ ಶೋಭಿ.
ಮುಂಬಿಸಿಲ ಹೊಂಬಣ್ಣಮಂ ಮಿಂದು ಕಳಕಳಿಸಿ
ನಗುತಿರ್ದ ಕಾಂತಾರ ಪಂಕ್ತಿ ವಿಸ್ತಾರದಲಿ
ಚೈತ್ರಋತು ಪಕ್ಷಿಯಿಂಚರವನಾಸ್ವಾದಿಸುತೆ,
ತೆಳುಗಾಳಿಗೊಯ್ಯನೆಯೆ ನಿರಿನಿರಿ ವಿಕಂಪಿಸುವ
ಪಟಿಕ ನಿರ್ಮಲ ನದಿಯ ಪುಲಕಿತ ಮುಕುರದಲ್ಲಿ
ಮಜ್ಜನಕ್ಕುಜ್ಜುಗಿಸಿ, ಸಲಿಲಾವಗಾಹಕ್ಕೆ
ಸೋಪಾನಗಳನಿಳಿದು ದಿಣ್ಣೆಮಳಲಂ ದಾಂಟಿ,
ಹೊಳೆಯ ಜೀವನದಂಚನಡಿಗಳಿಗೆ ಸೋಂಕಿಸಿರೆ
ಕೇಳ್ದತ್ತದೊಂದು ರತಿಸುಖ ಚಾರು ನಿಸ್ವನಂ.
ಗಗನವೀಣಾ ತಂತ್ರಿಯಂ ಮಿಡಿದ ತೆರನಾಗಲಾ
ಹರ್ಷಚಿತ್ತಂ, ಮಹರ್ಷಿ, ಕಣ್ ಸುಳಿದನಾಗಸಕೆ
ಕವಿಪುಂಗವಂ: ಕಂಡು ನಲಿದುದು ಮನಂ ಮಿಥುನಮಂ
ದಂಪತಿಕ್ರೌಂಚಂಗಳಾ. ನೋಡುತಿರೆ, ತೆಕ್ಕನೆಯೆ,
ಗಾಳಿವಟ್ಟೆಯೊಳಾಡುತಿರ್ದಾ ವಿಹಂಗಮಗಳಲಿ
ಗಂಡುಕೊಂಚೆ ಒರಲ್ದು ದೊಪ್ಪನೆ ನೆಲಕ್ಕುರುಳ್ದು
ಪೊರಳ್ದುದು. ಕಾರಿದತ್ತೆರ್ದೆಗೆ ಚುರ್ಚ್ಚಿದ ಸರಳ್

ನೆತ್ತರಂ, ಜೀರ್ಕೊೞೆಯಿಯಂತೆವೋಲ್. ಹುದುಗಿರ್ದ
ಹೊದೆಯಿಂದೆ ಕಾರೊಡಲ ಬಿಲ್ಲವನುರದೆ ಚಿಮ್ಮಿ
ತುಡುಕಿದನದಂ ಮಾಂಸದೊಲವಿಂದೆ. ಕೊಂಚೆವೆಣ್
ಬಿಸುನೆತ್ತರೊಳ್ ನಾಂದು, ಪೊಳೆಮರಳ್ ಪುಡಿಯೊಳ್
ಪೊರಳ್ದು, ಬಿಯದನ ಕೈಗೆ ಸಿಲುಕಿದಿನಿಯಾಣ್ಮನಂ
ಕಂಡು ಚೀರ್ದಾರ್ದುದಯ್ ಚಕ್ರಗತಿಯಿಂ ಪಾರ್ದು,
ಗಿರಿವನಾಚಿಚ್ಚೇತನಮೆ ಚೀತ್ಕರಿಸುವಂತೆ.
ಕರಗಿತಂತೆಯೆ ಕರುಳ್ ಮುನಿಗೆ. ಕಣ್ಬನಿಯುಣ್ಮುವೋಲ್
ವೇದನೆಯ ಕರ್ಮುಗಿಲ್ ತೀವಿಬರೆ ಹೃದಯದೊಳ್,
ಮರುಗಿದನು ಋಷಿ, ಮನಕೆ ಮಿಂಚಲಾ ತನ್ನ ಪೂರ್ವಂ.
ಬಾಳ್ಗಬ್ಬದೊಳ್ ಕರುಣೆ ತಾಂ ಬೇನೆಗುದಿದೊಡಮಲ್ತೆ
ಮೆರೆದಪುದು ಪೊರೆಪೊಣ್ಮುತಾ ಮಹಾಕಾವ್ಯ ಶಿಶು ತಾಂ
ಚಾರು ವಾಗ್‌ವೈಖರಿಯ ಛಂದಶ್ಶರೀರದಿಂ?
ಕುರಿತು ಮರುಗಿದನಿಂತು ಕೊಂಚೆಗುಲಿ ಬಿಯದಂಗೆ:
"ಮಾಣ್, ನಿಷಾದನೆ, ಮಾಣ್! ಕೊಲೆ ಸಾಲ್ಗುಮಯ್ಯೊ ಮಾಣ್!
ನಲಿಯುತಿರೆ ಬಾನ್ ಬನದ ತೊರೆ ಮಲೆಯ ಭುವನಕವನಂ
ಸುಖದ ಸಂಗೀತಕೆ ವಿಷಾದಮಂ ಶ್ರುತಿಯೊಡ್ಡಿ
ಕೆಡಿಸುವಯ್? ನಾನುಮೊರ್ ಕಾಲದೊಳ್ ನಿನ್ನವೊಲೆ
ಕೊಲೆಯ ಕಲೆಯಲ್ಲಿ ಕೋವಿದನಾಗಿ ಮಲೆತಿರ್ದೆನಯ್.
ನಾರದ ಮಹಾಋಷಿಯ ದಯೆ ಕಣಾ ಕರುಣೆಯಂ
ಕಲಿತೆನ್!" ಎಂದಾತ್ಮಕಥೆಯಾತ್ಮತತ್ತ್ವವನೊರೆದು,
ಕಬ್ಬಿಲಗೆ ಬಗೆ ಕರಗುವಂತೆ ಬೋಧಂಗೆಯ್ದು,
ಕೃಪೆದೋರುತಾತಂಗಹಿಂಸಾ ರುಚಿಯನಿತ್ತು,
ಕೊಂಚೆವಕ್ಕಿಯ ಮೆಯ್ಯಿನಾ ಬಾಣಮಂ ಬಿಡಿಸಿ,
ಪ್ರಾಣಮಂ ಬರಿಸಿ ಸಂಜೀವ ಜೀವನದಿಂದೆ,
ತವಿಸಿ ಪೆಣ್ವಕ್ಕಿಯೊಡಲುರಿಯನಾ ವಾಲ್ಮೀಕಿ
ತಮಸೆಯಿಂ ತನ್ನೆಲೆವನೆಗೆ ಮರಳ್ದು, ಧ್ಯಾನದೊಳ್
ಮುಳುಗಿರಲ್, ಮಿಂಚಿತಯ್ ಕಾವ್ಯ ದಿವ್ಯ ಪ್ರಜ್ಞೆ,
ನವನವೋನ್ಮೇಷಶಾಲಿನಿ, ನಿತ್ಯತಾ ಪ್ರತಿಭೆ.
ಹೊಮ್ಮಿತಾ ದರ್ಶನಂ ಬಗೆಗಣ್ಗೆ; ಚಿಮ್ಮಿದತ್ತೀ
ವರ್ಣನಂ ನಾಲಗೆಗೆ: ಪಿಡಿವೊಲಲ್ತಾದುದಕೆ

ಕನ್ನಡಿಯನಪ್ಪುದಕೆ ಮುನ್ನುಡಿಯನುಲಿವಂತೆಯುಂ,
ಕಂಡ ರಾಮಾಯಣವನೆಲ್ಲಮಂ ಕಂಡಂತೆ
ಹಾಡಿದನೊ, ಕೇಳ್ದ ಲೋಕಂಗಳೆಲ್ಲಂ ತಣಿವವೋಲ್.
    ತನ್ನ ಲೀಲಾ ಲೋಕಲೋಕಂಗಳಂ ಸೃಜಿಸಲ್
ಅನಾದಿಕವಿ, ಪರಮ ಪುರುಷೋತ್ತಮಂ, ಸರ್ವೇಶ್ವರಂ,
ಬೇರೆಬೇರೆಯ ವಿಶ್ವಕವಿಗಳಂ ಬ್ರಹ್ಮರ್ಕಳಂ
ನಿರ್ಮಿಪೋಲ್, ನಮ್ಮೀ ಚತುರ್ಮುಖ ಜಗತ್‌ಕರ್ತೃ ತಾಂ
ತನ್ನ ಲೀಲೆಯ ಕಾವ್ಯಸತ್ತೆಯ ಬೃಹತ್ ಕೃತಿಗಳಂ
ಸೃಷ್ಟಿಸೆ ವಸುಂಧರೆಯೊಳಂತೆಯೆ ಕವೀಂದ್ರರ್ಕಳಂ
ಪುಟ್ಟಿಪನ್. ಬ್ರಹ್ಮಕೃತಿಯೊಳ್ ಸಚ್ಚಿದಾನಂದಮಂ
ವ್ಯಕ್ತಗೊಳಿಪಂತುಟಾ ಅವ್ಯಕ್ತ ಪರಮ ತತ್ತ್ವಂ,
ವರಕವಿಯ ಕಾವ್ಯಸತ್ತೆಯೊಳಾತ್ಮ ರಸ ಸತ್ಯಮಂ
ಪ್ರಕಟಿಸುವನೀ ಬ್ರಹ್ಮನನ್ಯವಿಧದಿಂದೆಮ್ಮ
ಮರ್ತ್ಯ ಪೃಥಿವೀ ತತ್ತ್ವದೊಳ್ ಪ್ರಕಟನಾಸಾಧ್ಯಮಂ,
ಅನಿರ್ವಚನ ಬೋಧ್ಯಮಂ, ಪ್ರತಿಮಾ ವಿಧಾನದಿಂ
ರಸಋಷಿ ಪ್ರತಿಭಾನ ಮಾತ್ರ ಸಂವೇದ್ಯಮಂ.
    ಬ್ರಹ್ಮ ಸತ್ತೆಯನಾ ಪರಬ್ರಹ್ಮ ಸತ್ತೆಯಿಂ
ಮಾತ್ರಮೆಯೆ ದರ್ಶಿಸುತಿದಂ ಮಿಥ್ಯೆಯೆಂಬುದೇಂ
ಪೂರ್ಣ ಸತ್ಯಮೆ? ಯೋಗವಿಜ್ಞಾನಮೊಪ್ಪದು ಕಣಾ!
ಪೂರ್ಣಮದು; ಪೂರ್ಣಮಿದು; ಪೂರ್ಣದಿಂ ಬಂದುದೀ
ಪೂರ್ಣಮಾ ಪೂರ್ಣದಿಂ ಪೂರ್ಣಮಂ ಕಳೆದೊಡಂ
ಪೂರ್ಣಮೆಯೆ ತಾನುಳಿವುದಾ ಪ್ರಜ್ಞೆಗದುವಿದುಂ
ಸರ್ವಮುಂ ಸತ್ಯದಾವಿಷ್ಕಾರ ವಿನ್ಯಾಸಗಳ್.
ಕಾವ್ಯ ಸತ್ತೆಯನನ್ಯ ಸತ್ತಾ ಪ್ರಮಾಣದಿಂ
ಪರಿಕಿಸಲ್ ಮಿಥ್ಯೆಯಲ್ಲದೆ ತನಗೆ ತಾಂ ಮಿಥ್ಯೆಯೇಂ?
ಕವಿಕೃತಿಯುಮಾ ಬ್ರಹ್ಮಕೃತಿಯಂತೆ ಋತಚಿದ್
ವಿಲಾಸಮಾ ಕೃತಿಲೋಕಮೀ ಪ್ರಕೃತಿಲೋಕದೊಲೆ
ಬಹುಲೋಕ ಕಿರಣಮಯ ಸತ್ಯ ಸೂರ್ಯೋತ್ತಮನ
ಚಿತ್ ಪ್ರಕಾಶನದೊಂದು ರಸಲೋಕರೂಪ ಕಿರಣಂ.
ಸಂಭವಿಸಿ ಭವಕಿಳಿದು ವಾಣೀಪತಿಯ ಕೃತಿಯ
ವಿಭವಗಳನನುಭವಿಸುವೋಲುಣ್ಬವೋಲ್ ಕಾಣ್ಬವೋಲ್

ಕಾಣವೇಳ್ಕುಂ ಪೊಕ್ಕು ಕೃತಿನೇತ್ರ ಪಥದಿಂ
ಕವೀಂದ್ರ ಮತಿ ಲೋಕದೊಳ್ ಪೊಳೆವ ಋತಕಲ್ಪನಾ
ಮೂರ್ತಂಗಳಂ, ಭಾವಚರ ನಿತ್ಯ ಸತ್ಯಂಗಳಂ.
ಏರುವೆನು ವಾಗ್ದೇವಿಯಮೃತ ರಸನೆಯ ಲಸನ್
ನಾವೆಯಂ. ರಾಮನ ಕಥೆಯ ಮಧು ಧುನೀ ಪಥಂ
ಪಿಡಿದಾಂ ಮಹಾಛಂದಸ್ ತರಂಗವಿನ್ಯಾಸದಿಂ
ಸೇರುವೆನು ಗುರುಕೃಪೆಯೊಳಾ ಋತಚಿದ್ ರಸಾಬ್ಧಿಯಂ.
ನೀಡದೊಳ್ ಬಳೆದು, ಕಾಡಿನಲಿ ಹಾರಾಡಿದಾ
ಗರುಡ ಶಿಶು, ಗರಿ ಬಲಿತಮೇಲಲ್ಪದೇಶಂಗಳಂ
ಚರಿಸಿ ತಣಿವುದೆ? ವಿಯದ್ ವಿಸ್ತೀರ್ಣಮಂ ಬಯಸಿ
ಕೈಕೊಳ್ವುದಾಕಾಶ ಪರ್ಯಟನಮಂ. ಕಿರುಮೀನ್ಗೆ
ಕೆರೆ ಕೊಳಂ ಪೊಳೆ ಸಾಲ್ಗುಮಾ ತಿಮಿಗೆ ವೇಳ್ಕುಂ
ಜಲಕ್ರೀಡೆಗಾ ರುಂದ್ರಸಾಗರ ಸಲಿಲವಿಸ್ತಾರ.
ವ್ಯೋಮ ಸಾಗರ ಸಮಂ ನಿನ್ನ ರಾಮಾಯಣಂ,
ಗುರುವೆ, ರಸಋಷಿಯೆ, ಓ ವಾಲ್ಮೀಕಿ. ಕ್ರಮಿಸಲ್ಕದಂ
ದಯೆಗೆಯ್ಯೆನಗೆ ವೈನತೇಯನ ವಜ್ರವೀರ್ಯಮಂ.
ಕಲೆಯನಲ್ಲದೆ ಶಿಲ್ಪಿ ಶಿಲೆಯನೇಂ ಸೃಷ್ಟಿಪನೆ?
ತನು ನಿನ್ನದಾದೊಡಂ ಚೈತನ್ಯಮೆನ್ನದೆನೆ,
ಕಥೆ ನಿನ್ನದಾದೊಡಂ, ನೀನೆ ಮೇಣಾಶೀರ್ವದಿಸಿ
ಮತಿಗೆ ಬೋಧವನಿತ್ತೊಡಂ, ಕೃತಿ ನನ್ನ ದರ್ಶನಂ
ಮೂರ್ತಿವೆತ್ತೊಂದಮರ ಕಾವ್ಯದಾಕೃತಿಯಲ್ತೆ?
ಪಂಜರದ ಪಳಮೆಯೊಳ್ ಪ್ರಾಣ ನವ ಪಕ್ಷಿಯಂ,
ವಿಗ್ರಹಕೆ ದೇವತಾವಾಹನಂ ಗೆಯ್ವವೋಲ್,
ಭಕ್ತಿಯಿಂದಾಹ್ವಾನಿಪೆನ್. ಕವಿಗುರುವೆ, ನೀಡೆನಗೆ
ವಾಙ್ಮಂತ್ರ ಶಕ್ತಿಯಂ. ಸಾವಧಾನದಿ ತೇಲ್ದು
ಸಾಗುವೆನ್. ತೆರೆತೆರೆಯನೇರ್ದು, ರಸಮಂ ಪೀರ್ದು
ಸಾಗುವೆನ್. ಗುರಿಯೆಂತುಟಂತೆವೋಲ್ ಬಟ್ಟೆಯುಂ
ಬಲ್ಲೆನ್ ಸುಭಗಮೆಂದು. ರಾಮನ ಕಿರೀಟದಾ
ರನ್ನವಣಿಯೋಲೆ ರಮ್ಯಂ, ಪಂಚವಟಿಯೊಳ್
ದಿನೇಶೋದಯದ ಶಾದ್ವಲದ ಪಸುರ್ಗರುಕೆಯೊಳ್
ತೃಣಸುಂದರಿಯ ಮೂಗುತಿಯ ಮುತ್ತುಪನಿಯಂತೆ

ಮಿರುಮಿರುಗಿ ಮೆರೆವ ಹಿಮಬಿಂದುವುಂ. ರಸಯಾತ್ರೆಯಂ
ಕೈಕೊಂಡೆನಯ್, ಬಾರಯ್, ತಂದೆ, ಕೈಹಿಡಿ, ನಡಸು
ನಿನ್ನನುಗನೀ ಕಂದನಂ. ಮಣಿವೆನಿದೊ ನಿನ್ನಡಿಗೆ:
ಕೃಪೆದೋರು; ಒಲಿದೆತ್ತು; ಹರಕೆಗೆಯ್, ದೇವಕವಿ,
ನನ್ನನೊಯ್ಯನೆ ಕಾವ್ಯ ವಿದ್ಯುದ್ ವಿಮಾನದೊಳ್
ನಿರಿಸಿ, ಮೇಣ್ ಸರಸತಿಯನೆನ್ನಾತ್ಮ ಜಿಹ್ವೆಗೆ ಬರಿಸಿ.
　ಬಾಳು, ವೀಣಾಪಾಣಿ; ಬಾಳು, ಬ್ರಹ್ಮನ ರಾಣಿ;
ಗಾನಗೆಯ್, ಹೇಳು, ಓ ಭಾವಗಂಗಾ ವೇಣಿ.
ನಂದನದಿ ತುಂಬಿಯೋಂಕೃತಿ ತುಂಬಿ ಮೊರೆವಂತೆವೋಲ್
ಕರ್ಣಾಟಕದ ಜನದ ಕರ್ಣವೀಣಾ ತುಂಬಿ
ನಿನ್ನ ವಾಣಿಗೆ ವಿಕಂಪಿಸಿ, ಜೇಂಕೃತಿಯ ಬೀರಿ,
ರಸದ ನವನೀತಮಂ ಹೃದಯದಿ ಮಥಿಸುವಂತೆ
ಗಾನಗೆಯ್, ಹೇಳು, ಓ ಭಾವಗಂಗಾ ವೇಣಿ.
ತೀಡಿದರೆ ನಿನ್ನುಸಿರ್, ಮದ್ದಿಗೆ ಕಿಡಿ ತಗುಳ್ದು
ಹೊಮ್ಮುವಂದದಿ ಜೋತಿ, ಜಡವೆ ಚಿನ್ಮಯವಾಗಿ
ಚಿಮ್ಮಿದಪುದಯ್. ಮುಟ್ಟಿದರೆ ನಿನ್ನ ಮೆಯ್, ರಾಮಾಂಘ್ರಿ
ಸೋಂಕಿದೊಡನೆಯೆ ಕಲ್ಲು ಕಡುಚೆಲ್ವು ಪೆಣ್ಣಾಗಿ
ಸಂಭವಿಸಿದೋಲ್, ಪಂಕದಿಂ ಕಲಾಪಂಕಜಂ
ಕಂಗೊಳಿಪುದಯ್, ಭುವನ ಮನಮಂ ಮೋಹದಿಂದಪ್ಪಿ
ಸೆಳೆದು. ನಿನ್ನ ಕಯ್ ಪಿಳಿಯೆ ಕಬ್ಬಿಣದಿಂದೆಯುಂ
ಪೊರಸೂಸಿದಪುದು ಕಬ್ಬಿನ ರಸಂ. ಮಂತ್ರಮಯಿ
ನೀಂ ಬಡಿಯೆ, ಬಂಡೆಯುಂ ನೀರಿನೊಳ್ಬುಗ್ಗೆಯಂ
ಹೊಮ್ಮಿ ಚಿಮ್ಮುವುದಲ್ತೆ, ಮುತ್ತು ಚಿಪ್ಪೊಡೆವಂತೆವೋಲ್
ಬಿರಿದು. ರಸಚಿತ್ ತಪೋಬಲಕೆಲ್ಲೆ ತಾನೊಳದೆ
ಪೇಳ್, ಕಲಾಲಕ್ಷ್ಮಿ? ಕೃಪೆಗೆಯ್, ತಾಯೆ, ಪುಟ್ಟನಂ,
ಕನ್ನಡದ ಪೊಸಸುಗ್ಗಿ ಬನದ ಈ ಪರಪುಟ್ಟನಂ.
　ಹೋಮರಗೆ ವರ್ಜಿಲಗೆ ಡಾಂಟೆ ಮೇಣ್ ಮಿಲ್ಟನಗೆ
ನಾರಣಪ್ಪಂಗೆ ಮೇಣ್ ಪಂಪನಿಗೆ, ಋಷಿವ್ಯಾಸ
ಭಾಸ ಭವಭೂತಿ ಮೇಣ್ ಕಾಳಿದಾಸಾದ್ಯರಿಗೆ,
ನರಹರಿ ತುಲಸಿದಾಸ ಮೇಣ್ ಕೃತ್ತಿವಾಸಾದಿ
ನನ್ನಯ್ಯ ಫಿರ್ದೂಸಿ ಕಂಬಾರವಿಂದರಿಗೆ,

ಹಳಬರಿಗೆ ಹೊಸಬರಿಗೆ ಹಿರಿಯರಿಗೆ ಕಿರಿಯರಿಗೆ,
ಕಾಲ ದೇಶದ ನುಡಿಯ ಜಾತಿಯ ವಿಭೇದಮಂ
ಲೆಕ್ಕಿಸದೆ ಜಗತೀ ಕಲಾಚಾರ್ಯರೆಲ್ಲರ್ಗೆ,
ಜ್ಯೋತಿಯಿರ್ಪೆಡೆಯಲ್ಲಿ ಭಗವದ್ ವಿಭೂತಿಯಂ
ದರ್ಶಿಸುತೆ, ಮುಡಿಬಾಗಿ ಮಣಿದು ಕೈಜೋಡಿಸುವೆನಾಂ.
ಲೋಕ ಗುರು ಕೃಪೆಯಿರಲಿ; ಲೋಕ ಕವಿ ಕೃಪೆ ಬರಲಿ;
ಲೋಕ ಹೃದಯದ ಬಯಕೆಯಾಶೀರ್ವಾದವೈತರಲಿ.
ಮಣಿದಿರಲಿ ಮುಡಿ; ಮತ್ತೆ ಮುಗಿದಿರಲಿ ಕಯ್; ಮತ್ತೆ
ಮಡಿಯಾಗಿರಲಿ ಬಾಳ್ವೆ. ಜಯಿಸುಗೆ ರಸತಪಸ್ಯೆ;
ದೊರೆಕೊಳುಗೆ ಚಿರಶಾಂತಿ; ಸಿರಿಗನ್ನಡಂ ಗೆಲ್ಗೆ!
ದೇಶ ಕೋಸಲಮಿಹುದು ಧನ ಧಾನ್ಯ ಜನ ತುಂಬಿ
ಸರಯೂ ನದಿಯ ಮೇಲೆ. ಮೆರೆದುದು ವಿಷಯಮಧ್ಯೆ
ರಾಜಧಾನಿ ಅಯೋಧ್ಯೆ, ರಮಿಸುವಿಂದ್ರಿಯ ಸುಖದ
ನಡುವಣಾತ್ಮಾನಂದದಂತೆ. ಪೇಳೇನೆಂಬೆನಾ
ಪರ್ವಿತ್ತದರ ಜಸಂ, ರಾಕಾ ಶಶಾಂಕನಿಂ
ಪರ್ವಿತೆನೆ ಬೆಳ್ದಿಂಗಳೊಳ್ಪಿನ ಸೊದೆಯ ಸೋನೆ,
ಲೋಕತ್ರಯಂಗಳಂ. ರಚಿಸಿದನು ಮನು ತಾನೆ
ನಾಲ್ಕುಮಡಿಯೈದು ಯೋಜನದಗಲದಾ ಮಹಾ
ಸಾಕೇತ ನಗರಿಯಂ, ರವಿವಂಶದರಸರಿಗೆ
ಕೀರ್ತಿಯ ಕಿರೀಟವಿಡುವಂತೆ. ತವರೂರೆನಿಸಿ
ಸಿರಿಗೆ ಬಿಜ್ಜೆಗೆ ಕಲೆಗೆ ಬೀರಕಾ ಪತ್ತನಂ
ಮನೆಗಳಿಂದರಮನೆಗಳಿಂದಾಪಣಗಳಿಂದೆ,
ಹೆದ್ದಾರಿಯಿರ್ಕೆಲದೊಳಿರ್ಪ ಸಾಲ್ ಮರಗಳಿಂ
ನಿಚ್ಚಮುಂ ಮಳೆಗರೆವ ಹೂವಿನುದುರುಗಳಿಂದೆ,
ಸುಂದರ ಸುಸಂಸ್ಕೃತ ಲತಾಂಗಿಯರ ಸಿರಿಗೈಯ
ಹೊಂಗೊಡದ ಪನ್ನೀರ ತುಂತುರೆರಚುಗಳಿಂದೆ,
ತಳಿರು ತೋರಣದಿಂದೆ, ಕಪ್ಪುರದ ಕಮ್ಮನೆಯ
ರಂಗವಲ್ಲಿಯ ಲಲಿತಕಲೆಯಿಂದೆ, ಕೊರಳಿಂಚರದಿ
ಪಕ್ಕಿಗಳನಣಕಿಸುವ ನಲ್ಮಕ್ಕಳಿಂದಮಾ
ಸಗ್ಗದೂರನೆ ಸೂರೆಗೊಂಡಂತೆ ಮೆರೆದುದಯ್
ನಿಚ್ಚಸೊಗದಾವಾಸದೋಲ್, ಚಕ್ರವರ್ತಿಯದಕ್ಕೆ

ದಶರಥಂ. ದೊರೆ ಸಗ್ಗದೊಡೆಯಂಗೆ. ಇಕ್ಷ್ವಾಕು
ರಘು ದಿಲೀಪರ ಕುಲಪಯೋಧಿಯ ಸುಧಾಸೂತಿ.
ರಾಜರ್ಷಿಯಾ ದೀರ್ಘದರ್ಶಿಯಾ ಸಮದರ್ಶಿ ತಾಂ
ಜನ್ಮ ಕುಲ ಧನ ಜಾತಿ ವರ್ಣ ಪ್ರಭೇದಮಂ
ಗಣಿಸದೆಯೆ, ಮನದ ಹೃದಯದ ಧರ್ಮಕರ್ಮವನೆ
ಹಿಡಿದು ಮನ್ನಣೆಮಾಡಿ, ನೀಚೋಚ್ಚ ಭಿನ್ನಮಂ
ಸ್ಪರ್ಧೆವೈರಂಗಳಂ ತೊಡೆದು, ಸಮಬುದ್ಧಿಯಿಂ
ದರ್ಪದಿಂ ಪಾಲಿಸಿರ್ದನು ತನ್ನ ರಾಜ್ಯಮಂ,
ಸರ್ವ ಪ್ರಜಾಮತಕೆ ತಾನು ಪ್ರತಿನಿಧಿಯೆಂಬ
ಮೇಣವರ ಹಿತಕೆ ಹೊಣೆಯೆಂದೆಂಬ ಬುಧರೊಲಿದ
ಸಮದರ್ಶನವನೊಪ್ಪಿ.
ಸಿರಿಯನಿತುಮಿರ್ದೊಡಂ,
ಅರಮುಡಿಗೆ ನೆರನವಿರ ಬೆಳ್ಳಿಗೆರೆಯೇರ್ದೊಡಂ,
ದೇವಿ ಕೌಸಲ್ಯೆಯಂ ಸಾಧ್ವೀ ಸುಮಿತ್ರೆಯಂ
ಚೆಲ್ವು ಮೈವೆತ್ತಿರ್ದುದೆನೆ ಮೆರೆವ ಕೈಕೆಯಂ
ಮೂವರಂ ನಲ್ವೆಂಡಿರಂ ಕಾಮದಿಂ ಪ್ರೇಮದಿಂ
ಮದುವೆ ನಿಂದಿರ್ದೊಡಂ, ನಿಡಿದು ಪಾರ್ದಿರ್ದೊಡಂ,
ವಂಶಕರ ಸಂತಾನಮಂ ಕಾಣದಾ ನೃಪತಿ
ತಾನೊರ್ಮೆ ತಿರುಗುತಿರಲರಮನೆಯ ಸಿರಿದೋಂಟದೊಳ್:
ಮರಿಯ ತೆರೆವಾಯ್ಗಿಡುತೆ ತನ್ನ ಕೊಕ್ಕಂ, ಕುಟುಕು
ಕೊಡುತಿರ್ದ ತಾಯ್ವಕ್ಕಿಯಂ ಕಂಡು, ಕಣ್ ನಟ್ಟು,
ಕಾಲ್‌ನಟ್ಟು ನಿಂದನು ಮರಂಬಟ್ಟು. ಮಕ್ಕಳಂ
ಪಡೆದ ಪಕ್ಕಿಯ ಸಿರಿತನಂ ಚಕ್ರವರ್ತಿಗೆ ತನ್ನ
ಬಡತನವನಾಡಿ ಮೂದಲಿಸಿತೆನೆ, ಕರುಬಿ ಕುದಿದನ್
ಕೋಸಲೇಶ್ವರನಾ ವಿಹಂಗಮ ಸುಖಕೆ ಕಾತರಿಸಿ.
ದೇವತೆಗಳಾಶಿತಮೊ? ಋತಚಿದಿಚ್ಛೆಯೊ? ವಿಧಿಯೊ?
ಪಕ್ಕಿ ಗುಬ್ಬಚ್ಚಿಯಾದೊಡಮೇಂ? ವಿಭೂತಿಯಂ
ತಿರೆಗೆ ಕರೆವಾಸೆಯಂ ಕೆರಳಿಸಿದುದಾ ದೊರೆಯ
ಹೃದಯದಲಿ! ಊರ್ಧ್ವಲೋಕದ ದೇವ ಶಕ್ತಿಗಳ್
ಸಂಚು ಹೂಡಿದರೆನಲ್, ಚರಿಸಿದತ್ತವರಿಚ್ಛೆ
ಮುದುಕನೆರ್ದೆಯಲಿ ಮಕ್ಕಳಾಸೆವೋಲ್. ಉದ್ಯಾನದಿಂ

ನೇರಮರಮನೆಗೆಯ್ದಿ, ಪುತ್ರಾಭಿವಾಂಛೆಯತಿ
ಚಿಂತೆಯಿಂ ಬರಿಸಿದನ್, ನುಡಿಸಿದನ್ ಗುರುಗಳಂ
ವಾಮದೇವ ವಸಿಷ್ಠರಂ. ಕರೆಸಿದನು ಕೂಡೆ
ಸಚಿವರಂ, ಮಂತ್ರಪಾಲ ಸುಮಂತ್ರರಂ. ತನ್ನ
ಬಾಳ್‌ಬಯಕೆಯಂ ಪೇಳ್ದನಿಂತು: "ಗುರುಗಳಿರ, ಕೇಳಿಂ:
ನನ್ನೆರ್ದೆಯ ಸಿರಿಯ ಹೊಂಗಳಸದಲಿ ಬಿರುಕೊಡೆದು
ಸೋರುತಿದೆ ಬರಿದೆ ಜೀವಾಮೃತಂ. ಬಾಳ್ವೆಯ ಸೊಡರ್
ತಾನಾರ್ವ ಮುನ್ನಮಿನ್ನೊಂದು ಬತ್ತಿಯ ಕುಡಿಗೆ
ದೀಪಾಂಕುರಂಗ್ಯೆದು ಪೊತ್ತಿಸದೆ ಪೋದೊಡಾಂ
ನೆಲದರಿಕೆ ನೇಸರ್ಬೆಳಿಗೆ ಕಳ್ತಲೆಯನಡಕಿ
ಪೋದಂತುಟಲ್ತೆ? ಮಕ್ಕಳಂ ಕಾಣದೀ ಕಣ್
ಹೃತ್ತಾಪದಿಂ ಸೀದು ಕುರುಡಾಯ್ತಲಾ: ಮನದ
ಮಾಮರಕೆ ಹಿಡಿದಿಹುದು ನನಗೆ ನಿರ್ವಿಣ್ಣತೆಯ
ಬಂದಿಳಿಕೆ. ರುಚಿಸದು ವಿಹಂಗಮಗಳಿಂಚರಂ;
ಸೊಗಯಿಸದು ಮಾಮರಂ. ಶೋಭಿಸದು ಕೆಂದಳಿರ್:
ಪಸುಳೆಯ ವಿಲಾಸದಿಂ ಶಿಶುವಿಲಾಸವನೆನ್ನ
ನೆನಹಿಗಿರದೊಯ್ದು ಕದಡುವುದೆದೆಗೆ ಕಡೆಗೋಲ್
ಇಡುವವೋಲ್. ಸೊಗಯಿಸದು ನನಗಿಂದು ಚೆಲ್ವಾವುದುಂ.
ಪಗಲಿರುಳ್ ರವಿಶಶಿಗಳುದಯಾಸ್ತಮಿಂದ್ರಧನುಗಳ್
ಸರ್ವಸೌಂದರ್ಯಾಮೃತಂ ಮೃತದಂತಿಹುದು ನನಗೆ
ನೀರಸಂ. ಶವದ ಸಿಂಗಾರದಂದದೊಳೆನಗೆ,
ಮಕ್ಕಳಿಲ್ಲದ ದೊರೆಗೆ, ನೃಪಸಂಪದಂ. ಕುರುಡನುಂ
ಕನ್ನಡಿಗೊಡೆಯನಾದ ಮಾತ್ರದಿಂ ಕಾಣ್ಬನೇಂ?
ಬಾಳ್ಗೆ ಕಣ್ಣಂತಿರ್ಪ ಕಂದರಂ ಪಡೆವೊಂದು
ದೇವವಟ್ಟೆಯನುಸಿರಿಮೆನಗೆ, ಓ ವಂದ್ಯರಿರ;
ತವಿಸಿಮೆನ್ನೆದೆಯಗ್ಗಿಯಂ, ಬರಿಸಿ ಸುಗ್ಗಿಯಂ."
    ಕೂರಳಲ ಹೊರೆವೊತ್ತ ದೊರೆಮೊರೆಯನಾಲಿಸುತೆ
ಗುರು ವಸಿಷ್ಠಂ ಪುತ್ರಕಾಮೇಷ್ಟಿಯಂ ಪೇಳ್ದು,
ಪುತ್ರಸಂತಾನಮಹುದೆಂದು ನಂಬುಗೆಗೊಟ್ಟು,
ಸಂತೈಸಿ, ಯಜ್ಞಶಾಲೆಗೆ ನಡೆದನಲ್ಲಿಂದೆ.
ಕೇಳ್ದದಂ ಕೃತಧೀ, ವಿಚಾರಮತಿ, ಗುರುವರಂ

ಜಾಬಾಲಿ ಋಷಿವರೇಣ್ಯಂ ಬರುತ್ತಾಯೆಡೆಗೆ
ಪೇಳ್ದನಿಂತೆಂದು: ''ರಘುಕುಲ ವಾರ್ಧಿಚಂದ್ರಮನೆ,
ಕುಲ ಪುರೋಹಿತರೊರೆದ ಜನ್ನಮಂ ಕೈಕೊಂಡು
ಪಸುಳೆರನ್ನರ ಪಡೆವೆಯದು ದಿಟಂ. ಕೇಳಾದೊಡಂ
ನನ್ನೊಂದು ಕಾಣ್ಕೆಯಂ. ಪೂರ್ವ ಪದತಿವಿಡಿದು
ಮಾಳ್ಪ ದಿಗ್ವಿಜಯ ಹಯಮೇಧ ಮೊದಲಾದುವಂ
ತೊರೆದು, ಹಿಂಸಾ ಕ್ರೌರ್ಯಮಿಲ್ಲದಿಹ ಪ್ರೇಮಕ್ಕೆ
ನೋಂತು, ದೇವರ್ಕಳಂ ಪೂಜಿಸಲ್ ಮೆಚ್ಚುವುದು
ಜಗವನಾಳುವ ಋತಂ. ನೆಲದಲ್ಲಿ, ಬಾನಲ್ಲಿ,
ಕಡಲು ಕಾಡುಗಳಲ್ಲಿ ಪಕ್ಕಿ ಮಿಗ ಪುಲ್ಗಳಲಿ
ಆರ್ಯರಲಿ ಮೇಣ್ ಅನಾರ್ಯರಲಿ, ಕೇಳ್, ವಿಶ್ವಮಂ
ಸರ್ವತ್ರ ತುಂಬಿದಂತರ್ಯಾಮಿ ಚೇತನಂ ತಾಂ
ಪ್ರೇಮಾತ್ಮವಾಗಿರ್ಪುದದರಿಂದೆ ಹಿಂಸೆಯಿಂ
ಪ್ರೇಮಮೂರ್ತಿಗಳಾದ ಸಂತಾನಮುದಿಸದಯ್.
ರಾಜೇಂದ್ರ, ಕೇಳ್, ಪ್ರೇಮ ಸಾಕ್ಷಾತ್ಕಾರಮಾಗಿರ್ಪ
ಋಷ್ಯಶೃಂಗಾದಿ ಮುನಿಗಳನಿಲ್ಲಿಗಾಹ್ವಾನಗೆಯ್.
ಮಖಶಾಲೆಯಂ ರಚಿಸಿ, ಯಜ್ಞಕುಂಡಂಗೈದು,
ವಿಶ್ವಶಕ್ತಿಸ್ವರೂಪಿಯನಗ್ನಿಯಂ ಭಜಿಸು ನೀಂ
ಸಾತ್ವಿಕ ವಿಧಾನದಿಂ. ಪ್ರಜೆಗಳಂ ಬಡವರಂ
ಸತ್ಕರಿಸವರ್ಗೆ ಬಗೆ ತಣಿವವೋಲ್. ತೃಪ್ತಿಯಿಂ
'ದೊರೆಗೊಳ್ಳಿತಕ್ಕೆ!' ಎಂದಾ ಮಂದಿ ಪರಸಲ್ಕೆ,
ಪರಕೆಯದೆ ದೇವರಾಶೀರ್ವಾದಕೆಣೆಯಾಗಿ
ಕೃಪಣ ವಿಧಿಯಂ ಪಿಂಡಿ ತಂದೀವುದೈ ನಿನಗೆ
ನೆಲದರಿಕೆಯೊಳ್ಮಕ್ಕಳಂ. ಜನಮನದ ಶಕ್ತಿ
ಮೇಣವರಭೀಪ್ಸೆಯೆ ಮಹಾತ್ಮಾರಂ ನಮ್ಮಿಳೆಗೆ
ತಪ್ಪದೆಳೆತರ್ಪುದು ಕಣಾ!''
ಋಷಿಯೊರೆದ ವೇದಮಂ
ಕೇಳ್ದು ಪುಲಕಿತನಾಗಿ ದಶರಥಂ, ಬಾಷ್ಪಮಂ
ಸೂಸಿ, ಕಾಲ್ಗೆರಗಿ, ಸಾತ್ವಿಕ ಮಖ ವಿಧಾನಮಂ
ನಲಿದು ಕೈಕೊಳಲೊಪ್ಪಿ, ಬೀಳ್ಕೊಟ್ಟನಾ ಜ್ಞಾನಿಯಂ.
ಸಮೆದುದಧ್ವರಶಾಲೆ ಸರಯೂ ತರಂಗಿಣಿಯ

ಪಚ್ಚೆಯ ಪಸುರ್ ದಡದ ಮೇಲೆ, ಚೈತ್ರನ ಕೃಷಿಯ
ಕುಸುಮ ಕಿಸಲಯ ಲತಾ ಶೋಭಿತದ ರಮಣೀಯ
ಗಂಧಬಂಧುರ ದೇವ ಕಾನನ ನಿಕೇತನದ
ಸಿರಿಮಾಳ್ಕೆಯಿಂದೆ. ಮಧ್ಯದೊಳಗ್ನಿಕುಂಡದುರಿ
ದೇದೀಪ್ಯಮಾನಮಾದುದು, ವಿಪುಲ ದೂರದಲಿ,
ದೂರದರ್ಶಕ ಯಂತ್ರದಕ್ಷಿಯೊಳ್ ಕಣ್ಣಿಟ್ಟು,
ಗಗನ ವಿಜ್ಞಾನಿ ತಾಂ ರಾತ್ರಿಯಾಕಾಶದಲಿ
ಕಾಣ್ಬೊಂದು ತಾರಾಗರ್ಭದಂತೆ. ನೆರೆದುದಯ್,
ಮಲೆನಾಡಿನಲಿ ಮೊದಲ ಮುಂಗಾರು ಮಳೆಗರೆಯೆ,
ಮರುದಿನಂ, ತೊಯ್ದು ಕಂಪಿನ ನೆಲದಿನುಕ್ಕೆದ್ದು,
ಸಾಲ್ಗೊಂಡು ಲಕ್ಕಲಕ್ಕಂ ಪರಿದು, ಜೇನಿರ್ಪ
ಪುತ್ತುಮಂ ಮುತ್ತುವಾ ಕಟ್ಟಿರುಂಪೆಯ ರಾಸಿ
ಹಿಂಡುಗೊಳ್ವಂತುಟಾ ದೇಶ ದೇಶದ ಜನಂ
ಕ್ರತುರಂಗದೊಳ್ ವಿಪುಲ ಸಂಖ್ಯೆಯಲಿ. ಕುದಿಗೊಂಡವೋಲ್
ಕಡಲಾಯ್ತು ಸಾಕೇತ ನಗರಿ. ತೃಪ್ತಿಯೆ ತಣಿದು
ತೇಗಿದುದೆನಲ್ಕೆ ನಲಿದುದು ಜನಂ ಭಾರಕಾ
ಭೋಜನಕೆ ಮೇಣ್ ದಾನದಕ್ಷಿಣೆಗೆ. ದಾರಿದ್ರ್ಯ ತಾಂ
ಶ್ರೀಯಾದುದೆಂಬಂತೆ ಹೊನ್ನ ಹೊರೆಯಿಂ ಬೆನ್ನೆ
ಬಾಗಿತು ಬಡತನಕ್ಕೆ. ದೊರೆಯಿಚ್ಚೆ ನೆರವೇರಿ
ಸೊಗವಾಗಲೆಂಬಾ ಹರಕೆ ಜನದ ಹೃದಯದಿಂ
ಜನ್ನವನೆಯಿಂದೇಳ್ವ ಹೋಮಧೂಮಂಬೋಲೆ
ವ್ಯೋಮಾಂತರಕೆ ಪರ್ವಿದತ್ತು. ಸಗ್ಗವೆ ಮಣಿದು
ತಣಿಸದಿರುವುದೆ ತಿರೆಯನತಿತೀವ್ರದಾಕಾಂಕ್ಷೆ ತಾಂ
ಪಿಡಿದು ಜರ್ಗ್ಗಿಸಿ ಸೆಳೆಯೆ? ಬಹುಜನರ ಪೆರ್ಬಯಕೆ
ಕಲ್ಪವೃಕ್ಷದ ಕೊಂಬೆಯನೆ ಕಚ್ಚಿ ಸೆಳೆದಿಳೆಗೆ
ಫಲದಮೃತಮಂ ಮಳೆಗರೆಯದಿಹುದೆ? ಜನಮನಮೆ
ಯುಗಶಕ್ತಿಯಲ್ತೆ? ತಾನಾ ಶಕ್ತಿ ಮೂರ್ತಿಗೊಳೆ
ನಾಮದನ್ನವತಾರಮೆಂದು ಪೂಜಿಪೆವಲ್ತೆ ಪೇಳ್,
ವ್ಯಷ್ಟಿರೂಪದಿನಿಳಿವ ಸೃಷ್ಟಿಯ ಸಮಷ್ಟಿಯಂ?
ಖಡ್ಗಧಾರಾವ್ರತವನಾಂತು ದಶರಥ ನೃಪಂ,
ತನ್ನವೊಲೆ ನಾರುಮಡಿಯುಟ್ಟು ನೋಂಪಿಗೆ ನಿಂದ

ದಾರೆಯರ್ವೆರಸಿ, ತನುಜಾತ ಕಾಮೇಷ್ಟಿಯಂ
ಕೈಕೊಂಡು, ಋಕ್‌ಸಾಮಯಜುರಾದಿ ವೇದದಿಂ
ಓಂಕಾರ ಸ್ವಾಹಾದಿ ಮಂತ್ರಘೋಷಂ ಬೆರಸಿ
ಬೇಳ್ವ ಬೇಳಂಬದಿಂ ಜನ್ನಕೊಂಡಂ ಬಳಸಿ
ಕವಿದಿರ್ದ ಋತ್ವಿಜರ ಗೋಷ್ಠಿಯಲಿ, ದೇವರಿಗೆ
ಹವಿಯನರ್ಪಿಸುತಿರ್ದನಾತ್ಮಭಕ್ತಿಯ ಚಿತ್ತಪಸ್
ಶಕ್ತಿಯಿಂ ಬಯಸಿ. ಮನದೊಲೆ ತನುಜರೆಂದೆಂಬ
ಜಾಣ್ನುಡಿಯನರಿತು, ಅಲ್ಪತೆಯ ಭಾವಂಗಳಂ
ನೆರೆ ತೊರೆದು, ಗಗನಮಂ ಪೃಥ್ವಿಯಂ ವಾರ್ಧಿಯಂ
ಪರ್ವತಾರಣ್ಯ ವಿಸ್ತಾರ ಧೀರೋದಾತ್ತ
ಗಾಂಭೀರ್ಯಮಂ, ಭದ್ರ ವೀರ ಸೌಂದರ್ಯಮಂ,
ಧ್ಯಾನಿಸುತೆ ಭಾವಿಸುತೆ ರೂಪಿಸುತೆ ಕಾಮಿಸಿದನಾ
ಭೂಮಿಪಂ ತದ್ರೂಪ ಗುಣ ಹೃದಯರಂ.
ನೃಪತಿಯಾ
ಭಾವಮಹಿಮಾ ಜ್ಯೋತಿ ಸಂಚರಿಸಿದುದು ಮಿಂಚಿ
ಪಟ್ಟಮಹಿಷಿಯರೆರ್ದೆಗಳೊಳ್. ಕೂರ್ಮೆ ಬೆಸುಗೆಯಿಂ
ದ್ವೈತ ತಾನದ್ವೈತಮಪ್ಪುದೊಂದಚ್ಚರಿಯೆ ಪೇಳ್?
ಮೆಯ್ಗಳೆನಿತಾದೊಡೇನೊಲಿದವರ್ಗದು ದಿಟಂ
ಮನಮೊಂದೆಯಲ್ತೆ?
ಸಂತಾನಕಾಮಿ ಧರಾಧಿಪಂ
ತಾನಿಂತುಟೊಂದು ಹುಣ್ಣಿಮೆಯಿರುಳ್, ತುಂಬುಪೆರೆ
ಗರಿಹಗುರ ನೊರೆಮುಗಿಲಿನಂಬರದೊಳಿಂಬಾಗಿ
ತೇಲಿ, ಸರಯೂನದಿಯ ಸಲಿಲ ವಕ್ಷಸ್ಥಲದ
ರಮ್ಯ ದ್ರವೀಭೂತ ದರ್ಪಣಕೆ ಜ್ಯೋತ್ಸ್ನೆಯಂ
ಪಾಲು ಪೊಯ್ದಂದದಲಿ ಚೆಲ್ಲಿ ರಾರಾಜಿಸಿರೆ,
ಬೆಳ್ದಿಂಗಳನ್ನೀಂಟಿ ತೇನೆ ತಾನುನ್ಮೋದದಿಂ
ಹಾರಾಡಿ ಮೀಂಟುತಿರಲಾಕಾಶಮಂ, ಪೃಥ್ವಿ
ನಿಶ್ಶಬ್ದತಾ ಸುಪ್ತಿಯಲ್ಲಾಳ್ದು ಮೋನಮಿರೆ,
ಋತ್ವಿಜರೊಡನೆ ಹೋಮಕುಂಡದೆಡೆ ಪೂಜೆಯೊಳ್
ಪುತ್ರಾಭಿವಾಂಛೆಯ ಸಮಾಧಿಯೊಳ್ ತಾನಿರಲ್
ನೂರ್ಮಡಿಸಿತಾ ಅಗ್ನಿಕುಂಡದಲಿ ಕೆಂಡದುರಿ

ಕೆರಳಿ. ಕಗ್ಗತ್ತಲೆಯ ಕಲ್ಗಬ್ಬಮಂ ಸೀಳ್ದು
ಕೋಟಿ ಮಿಂಚುಗಳೊಮ್ಮೆ ಮಿಂಚಿದುವೆನಲ್ಕೆ ದ್ಯುತಿ
ಪೊಣ್ಮಿದುದು, ದಿಟ್ಟಿ ಕೋರೈಸೆ! ಸಂಯಮಿಗಳುಂ
ಬೆಚ್ಚಿ ಕಣ್ಣಾಗಿರೆ, ಚಿಕೀರ್ಷೆಯಾವೇಗದಾ
ವಹ್ನಿಫಣಿ ಲೇಲಿಹ್ಯಮಾನ ಜಿಹ್ವೆಗಳಂತೆ,
ಬೀಳುವಾಹುತಿಗಳಂ ನುಂಗಿ ನೊಣೆದೊಡನೊಡನೆ
ಸಿಮಿಸಿಮಿಸಿ ಛಟಛಟಿಸಿ ಧಗಧಗಿಸುತುಬ್ಬೇಳ್ವ
ರಕ್ತಾಗ್ನಿತಾಂಡವ ಜ್ವಾಲಾಜಲದ ಮಧ್ಯೆ
ತಾನೊರ್ವನಲ್ಲಿ ಮೈದೋರಿದನು ಝುಗಝುಗಿಸಿ,
ಕೆಂಡದುರಿಮೆಯ್ಯ ಮಿಂಚಿನ ದಿವ್ಯಕಾಂತಿಯಲಿ.
ಮೂಡು ಬಾನಿನ ಕರೆಯ ಕುಂಕುಮದ ತೀರ್ಥದೊಳ್
ಮಿಂದೇಳ್ವ ಫಾಲ್ಗುಣ ಪ್ರಾಭಾತ ರವಿಯಂತೆ
ಮೆರೆದುದು ವದನಮಂಡಲಂ. ಕೇಸುರಿಯ ಹರಿಯ
ರಶ್ಮಿಕೇಸರಗಳೆನೆ ಮುದ್ರಿಸಿತು ಮಂಡೆಯಂ
ಕೆನ್ನವಿರ ರಾಶಿ. ನಕ್ಷತ್ರಮಯ ರಾತ್ರಿಯಂ
ಧರಿಸಿ ಸೂರ್ಯನೆ ಶೋಭಿಪಂತೆ, ಕೆಂಗಿಡಿಗಳಿಂ
ತುಂಬಿದಂಬರದಂತೆವೋಲಾ ಹೋಮಧೂಮಮಂ
ನೀಲದ ದುಕೂಲದವೊಲಾಂತು, ಪೊಳೆದುದು ಕಣ್ಗೆ
ಮಂಗಳದಮರ ಮೂರ್ತಿ ಆ ಯಾಜಕರ ಮುಂದೆ.
ತಪ್ತ ಜಾಂಬೂನದದ ದೀಪ್ತಿಯನಣಕವಾಡಿ
ಮಿಸುಪ ಮಿಸುನಿಯ ಪಾತ್ರೆಯಲಿ ಸುಪಾಯಸ ರಸಂ,
ಕೋದಂಡ ಚಂದ್ರನಲಿ ಪೊನ್ನಜೊನ್ನದ ಜಲಂ
ಪೊಳೆವಂತೆ, ತಳತಳ ನಲಿದು ಕುಣಿಯೆ, ತೋಳ್‌ನೀಡಿ
ಪೇಳ್ದನಾಶೀರ್ವಾದಮಂ, ಮಂದ್ರ ಗಂಭೀರ
ದುಂದುಭಿಧ್ವನಿ ಸಭಾ ನಿಶ್ಶಬ್ದತೆಯ ಮಥಿಸಿ
ಪೊಣ್ಮೆ: "ಸೃಷ್ಟಿಯ ಶಕ್ತಿ ದೂತನೆಂ, ರಾಜೇಂದ್ರ,
ಋತಚಿನ್ಮಯೀ ಲೀಲೆಗಾಂ ಕವಿಕ್ರತು ಕಣಾ.
ಕೊಳ್ಳಿದಂ, ಕಾಮಧೇನುವಿನ ಕೊಡಗೆಚ್ಚಲಂ
ಪಾಲ್ಗರೆದು ಗೆಯ್ದ ಪಾಯಸಮಿದಂ. ಮರುಭೂಮಿ
ನಗುವ ನಂದನವಪ್ಪುದಿದನೀಂಟೆ. ಮೆಚ್ಚಿತಯ್
ನಿನ್ನೀ ವ್ರತಕೆ ಋತಂ. ಪಸುಗೆ ನೀಡಂಶಂಗಳಂ

ಸತಿಯರ್ಗೆ. ಗೆಲ್ವುದಾ ವಿಧಿಲೀಲೆಯುಂ.'' ಕೈಮುಗಿದು,
ಸೊಗದ ಕಡಲೊಳಗಾಳ್ದು, ದೊರೆಯೆಳ್ದಿದಿರ್ವೋಗಿ:
''ಬಯಸುವೆನ್ ನಿನಗೆ, ಪೂಜ್ಯನೆ, ಸುಖಾಗಮನಮಂ.
ನಡೆವೆನಿದೊ ನಿನ್ನಾಜ್ಞೆಯಂ.'' ಎನುತೆ ಅಂಜಲಿ ನೀಡಿ
ದಿವ್ಯ ಪಾಯಸಪೂರ್ಣ ಪಾತ್ರೆಯಂ ವಿನಯದಿಂ
ಕೊಂಡು, ಬಲವಂದು, ಮಣಿಯುತಿರೆ, ಮರೆಯಾದುದಾ
ದೇವ ತೇಜಃಪುಂಜ ಮಖಮೂರ್ತಿಯಗ್ನಿಮೆಯ್
ಜ್ವಾಲಾ ನಿಮಗ್ನಮೆನಲ್: ಕವಿಶೈಲದುನ್ನತಿಯ
ಸಂಜೆಗಿರಿ ನೆತ್ತಿಯೊಳ್ ಕುಳಿತು ಕವಿ ನೋಡುತಿರೆ,
ದೂರದ ತರಂಗಿತ ದಿಗಂತದಲಿ ಚೈತ್ರರವಿ
ಮುಗಿಲ ನೆತ್ತರ್ಗೆಂಪಿನಲಿ ಮುಳುಗುವೋಲಂತೆ!
  ನಿರ್ಮಲ ಶರಚ್ಚಂದ್ರ ಕಿರಣಗಳಿನಂಬರಂ
ಪ್ರೋಲ್ಲಾಸಗೊಳ್ವಂತೆ ದಶರಥಂ ಬಗೆಯುರ್ಬಿ
ಪರಿಯುತಂತಃಪುರಕೆ ದೇವಿ ಕೌಸಲ್ಯೆಯಂ
ಕುರಿತು: ''ರಾಜ್ಞಿ, ಕುಸುಮಸುಖಮೊದಗಿತೀ ಮಾಮರಕೆ.
ಮಧುಫಲಸ್ವಾದು ಸಂತೋಷಮಿದೊ. ಕೊಳ್ಳಿದಂ,
ಕ್ರತುಮೂರ್ತಿ ದಯೆಗೆಯ್ದ ಪಾಯಸಪ್ರಾಣಮಂ.
ನೀನುಮಾ ನಿನ್ನ ತಂಗೆಯರಿದಂ ಪಸುಗೆಗೊಳ್ಳಿಮ್
ಕುಲದ ಮೇಣ್ ಕ್ರಮದ ಮರ್ಯಾದೆಗಳ್ ಮೆರೆವವೋಲ್.''
  ಪೆರೆ ತುಂಬುವಂದದಲಿ ನವಮಾಸ ತುಂಬಿ ಬರೆ,
ಶ್ರೀರಾಮಚಂದ್ರನೆಂಬಳ್ಕರೆಯ ಹೊರೆಹೊತ್ತು,
ಬೆಳ್ದೆರೆಯ ಮುಗಿಲ ಹತ್ತಿಯ ತೆಳ್ಮಡಿಯನುಟ್ಟ
ಪೂರ್ಣಿಮಾ ರಜನಿಯಂತೆಸೆದಳಾ ಕೌಸಲ್ಯೆ,
ಗಂಭೀರ ಸೌಂದರ್ಯದಿಂ. ಜೊನ್ನವಕ್ಕಿಯೆದೆ
ಹಿಲ್ಲೋಲವಪ್ಪಂತೆ ಪೆರ್ಚಿತರಸನ ಮನಂ.
ಯಮಳ ತಾರೆಗಳಿರ್ದುಮೊಂದೆ ಚುಕ್ಕಿಯ ತೆರದಿ
ತೋರ್ಪ ನಕ್ಷತ್ರದೋಲಾ ಸುಮಿತ್ರಾದೇವಿ
ಕಂಗೊಳಿಸಿದಳ್ ಸಮುಲ್ಲಾಸದಿಂ. ಕೈಕೆ ತಾಂ,
ರಾಜ ಖಡ್ಗವನಾಂತು ಮುತ್ತು ಕೆತ್ತನೆಯಿಂದೆ
ಮಿರುಪ ಚೆಂಬೊನ್ನಿನೊರೆಯಂತೆ, ಮಿಂಚಿದಳಕ್ಷಿ
ಪಕ್ಷಿಯೋಲವಳೊಡಲ ಕಣ್ಣೆಗಣ್ಣೊಳ್ ಸಿಲ್ಕಿ

ತಳ್ಳಂಕಗೊಳೆ ದೊರೆಗೆ. ಮೇಣ್ ಪೇಳ್ವುದೇಂ? ಪೊಂಬಳ್ಳಿ
ಬಿಗಿದೆಳೆದುದಾ ಸ್ತ್ರೈಣನಂ, ಜೇನುರುಳ್ಗೊಳ್ಳಿಯೋಲ್!
ದಶರಥ ಸತಿಯರಿಂತು ತುಂಬು ಬಸಿರಿಂದೆಸೆಯೆ
ನಲಿದತ್ತಯೋಧ್ಯೆ. ನಲಿದುದು ಪೃಥ್ವಿ. ನೀರ್ಮುಗಿಲ್
ತವಿಸಿದುದು ಬೇಸಗೆಯ ಬೇಗೆಯಂ, ಪೊಸಮಳೆಯ
ಸೂಸಿ. ತಂಪಿಡಿದು ತೀಡಿದುದೆಲರ್. ನೆರೆಯೇರಿ
ತುಂಬಿ ತುಳುಕಿದುವು ತೊರೆ. ಸರಯೂ ತರಂಗಿಣಿಗೆ
ಹಿಮಗಿರಿಯ ದೂರದಿಂದೈತಂದುವೆಡೆಬಿಡದೆ
ಕ್ರೌಂಚ ಸಾರಸ ಪಂಕ್ತಿ, ಹಂಸ ಕಾರಂಡ ತತಿ,
ನವ ವರ್ಷ ಹರ್ಷದುನ್ಮಾದ ಕಲನಾದದಿಂ.
ತಳಿರು ತೀವಿತ್ತಡವಿ. ಭ್ರಮರ ಸಂಭ್ರಮದಿಂದೆ
ಝೇಂಕರಿಸಿದತ್ತು ಕುಸುಮಿತ ಕಾನನಾಂತರಂ.
ಪೊಣ್ಮಿದುದು ಮೈನವಿರ್ ತಿರೆವೆಣ್ಣಲಂಪಿನಿಂ,
ಪಚ್ಚನೆ ಪಸುರ್ ಗರುಕೆಯಂತೆ. ಕಲಕಂಠನುಲಿ
ಘೋಷಿಸಿತು ಜಗಕೆ, ರಾಮಾಗಮನ ವಾರ್ತೆಯಂ!
ಭುವನ ಸಂಭ್ರಮದೊಡನೆ ತಾಯೆರ್ದೆಗೆ ಪಾಲುರ್ಕಿ
ಬರಲೊಂದಿರುಳ್, ಕನಸಿನೊಳ್, ದುಗ್ಧಾಬ್ಧಿಯಂ
ಕಂಡು ನಲಿದಳ್ ದೇವಿ ಕೌಸಲ್ಯೆ. ಚಂದ್ರಶಿಶು
ಪಾಲ್ದೆರೆಗಳಗ್ರದಲಿ ತೇಲ್ದುದು ಮುಗುಳ್‌ನಗೆಗಳಿಂ
ಮಿಂಚಿ. ಇರಲಿರೆ, ಪಸುಳೆ ತೇಲುತೆ ದಡಕ್ಕೆ ಬರೆ,
ಕೈಚಾಚಿ ಕರೆಯೆ ಕೌಸಲ್ಯೆ, ಚೆಂದುಟಿಯ ಶಿಶು
ಮೊಗ್ಗರಳ್ವಂದದಿಂ ಬಂದೇರ್ದುದಂಕಮಂ,
ತಳಿರ ಬೆರಳಿಂದಪ್ಪುತೆರ್ದೆಯಂ ಸುಧಾಸುಖಕೆ!
ಲಕ್ಷ ನಕ್ಷತ್ರಮಯ ವಕ್ಷಾಂತರಿಕ್ಷದಾ
ಕ್ಷೀರಸಾಗರದಿಂ ಕಿಶೋರಶಶಿ ಬರುವಂತೆ,
ಪ್ರತಿಭಾ ತಟಿಲ್ಲತೆಯ ಸುಪ್ರಭಾ ಸ್ಫೂರ್ತಿಯಿಂ
ಕವಿಯ ಮನದಿಂ ಮಹಾ ಕಾವ್ಯಮುದ್ಭವಿಪಂತೆ,
ಮರುದಿನಂ ಚೈತ್ರನವಮಿಯ ಶುಭಮುಹೂರ್ತದೊಳ್
ಪಿರಿಯರಸಿ ಬೆಸಲೆಯಾದಳ್ ಪಸುಳೆಚೆಲ್ವಂ,
ಸ್ಥಿರಾ ಸುಖಂ ಪೆರ್ಚುವೋಲ್. ಶ್ರೀರಾಮನ ಅನಂತರಂ
ಮೂಡಿದನು ಭರತನಾ ಕೈಕೆವಸಿರಿಂದೆ. ಮೇಣ್

ಲಕ್ಷ್ಮಣಂ ಶತ್ರುಘ್ನರೆಂಬವಳಿ ಮಕ್ಕಳ್ಗಳಂ
ಪೆತ್ತಳ್ ಸುಮಿತ್ರೆ, ಮಗಧೇಶ್ವರ ತನೂಜೆ. ಆ
ಮಂಗಳ ಮಹೋತ್ಸವಕೆ ಬಿಡದೆ ನಲಿದತ್ತವನಿ.
ತುಂಬಿದತ್ತಶರೀರ ಗಂಧರ್ವ ಗಾಯನಂ
ನೀರವ ನಿಶಾ ನಭೋದೇಶಮಂ. ನಲಿದುಲಿದು
ನರ್ತಿಸಿದರಪ್ಸರೆಯರೆರಚಿ ಪೂವಲಿಗಳಂ.
ಹಾರ ಕೇಯೂರ ಸಾರಸನ ನೂಪುರ ರವಕೆ
ಕಿವಿಗೊಟ್ಟು ಬೆರಗಾದುದಾ ಅಯೋಧ್ಯಾ ಮನಂ.
ಬೀದಿ ಬೀದಿಗಳಲ್ಲಿ ಸಾಕೇತ ಪುರಜನರ್
ನೆರೆದು, ಸಂಗೀತಾಭಿನಯ ವಾದ್ಯಕಲೆಗಳಿಂ
ಕೊಂಡಾಡಿದರು ರಾಜನಂ, ಕೊನೆದು ದೇವರ್ಕಳಂ.
ಪೊಳ್ತುಬರೆ, ಪದ್ಧತಿಯ ಮೇರೆಗೆ ಪುರೋಹಿತರ್
ನಾಮಕರಣಂಗೆಯ್ದು, ನುಡಿದು ನಲ್ವರಕೆಯಂ,
ಜಾತಕಂ ಬರೆದು, ಕಣಿವೇಳ್ದರಾ ನಾಲ್ವರುಂ
ನೆಲಕೊಳ್ಳಿತಂ ಗೆಯ್ದು, ನೆಲದರಿಕೆಯವರಾಗಿ,
ನೇಸರಂ ಮೀರಿ ಪೊಳೆದಪರೆಂಬುದಂ, ಕೀರ್ತಿಯಿಂ
ಮತ್ತೆ ಸಚ್ಚರಿತೆಯಿಂ. ಗೆರೆನಗೆಯ ಕಿರಿಯೊಡಲ
ಪಸುಳೆದಿಂಗಳ್ ದಿನಂ ದಿನದಿನಂ ಬಳೆವಂತೆ
ಬೆಳ್ವಕ್ಕದಿರುಳಿನಬ್ಬೆಯ ತೊಡೆಯ ತೊಟ್ಟಿಲಲಿ,
ನೆರೆದನಾ ಶ್ರೀರಾಮಚಂದ್ರನಂಬೆಯೆರ್ದೆಯಲಿ
ಮತ್ತೆ ಕಂಡವರೆಲ್ಲರಕ್ಷಿಯಲಿ.

ಕೌಸಲ್ಯೆ

ತನ್ನಾತ್ಮವನೆ ಸುತನ ಸೌಂದರ್ಯ ಸುಧೆಯಲ್ಲಿ
ಕರಗಿಸಿದಳದ್ದಿ ಸಕ್ಕರೆಯವೋಲ್. ಬಗೆಯಿಂದೆ
ಜಗಮನಿತುಮುಂ ಜಾರಿ ಮಗನೆ ಮೂಜಗಮಾಯ್ತು!
ಸಕಲ ಸಾಧನೆಯಾದುದಾ ರಾಮ ಶುಶ್ರೂಷೆ;
ಪ್ರೇಮವೆ ನಿಖಿಲ ಪೂಜೆಯಾಯ್ತು. ಸರ್ವೇಂದ್ರಿಯಕೆ
ಮೋಹದ ಶಿಶುವದೊಂದೆ ಮುದ್ದಿನ ವಿಷಯಮಾಯ್ತು.
ಮಾಯವಾದತ್ತುಳಿದುದನಿತುಮುಂ ಪ್ರಜ್ಞೆಯಿಂ
ಜಗುಳ್ದು ಲಯವೊಂದಿ. ಮುದ್ದಿನ ಮುದ್ದೆಯೋಲಂತೆ
ಮೈ ತುಂಬಿ ಚೆಂದಳಿರ ಕೋಮಳತೆವೆತ್ತೆಸೆದಿರ್ದ

ನೀಲೋತ್ಪಲ ನಿಭಾಂಗನಂ ಕುಲದೀಪಚಂದ್ರನಂ,
ಬಳ್ಳಿ ತನ್ನೆಲೆವೆರಳ್ಗಳಿಂ ಮೊಗ್ಗನಿರದಪ್ಪಿ
ಲಲ್ಲೆಗೈವಂತೆ, ಆಲಿಂಗಿಸುತೆ ಮುದ್ದಿಸುತೆ
ಮಂಡೆಯಂ ಮೂಸಿ ಕೆನ್ನೆಗೆ ಕುರುಳನೊತ್ತುತ್ತೆ
ಬೆಣ್ಣೆನುಣ್‌ದೋಳ್ಗಳಂ ತನ್ನ ನಳಿದೋಳ್ಗಳಿಂ
ಮುಟ್ಟಿ ಸೋಂಕಿಗೆ ಸೊಗಸುವಳು ತಾಯಿ. ತಿಳಿಗೊಳನ
ತಾವರೆಯ ಸೆರೆಯ ತುಂಬಿಗಳಂತೆ ಚಂಚಲಿಪ
ಕಣ್ಗಳಿಗೆ ಕವಿದುಬರೆ ಸುರುಳಿಯುಂಗುರಗುರುಳ್
ನೋಡಿ ನಲಿವಳು; ತೋರಿ ಮೆರೆವಳು; ಪುಲಕಸುಖಕೆ
ಮೈಮರೆಯುವಳು ದಶರಥನ ರಾಣಿ, ಕೌಸಲ್ಯೆ,
ರಾಮಚಂದ್ರನ ತಾಯಿ.
ಮಗನ ಕಂಗಳ ನೋಡಿ
ಬಾನನೀಕ್ಷಿಸಿದಂತೆ, ಮಗನ ತೊದಲಂ ಕೇಳಿ
ಕಡಲನಾಲಿಸಿದಂತೆ ಬೆಚ್ಚುವಳು ತಾಯ್ ಸುಯ್ದು.
ಒರ್ಮೆ ಆ ಹೂಹಗುರ ಶಿಶುವಿದ್ದಕಿದ್ದಂತೆ
ಗಿರಿಭಾರಮಾಗಿ ಬರೆ, ನೆಗಹಲಾರದೆ ತಾಯಿ
ತೇಂಕಿದಳು, ಕಾತರಿಸಿ ಮಗನಭ್ಯುದಯ ಶಂಕೆಯಿಂ.
ಮತ್ತೊರ್ಮೆ ಪಚ್ಚೆದೊಟ್ಟಿಲ್ ಬಿಂಬದಲಿ ತನ್ನ
ಮುದ್ದುಕಂದಗೆ ಬದಲ್ ಕಾಣೆಸೆ ಮಹಾಮೂರ್ತಿ
ಕೂಗಿಕೊಂಡಳು ದುಷ್ಟ ಕುಗ್ರಹಚೇಷ್ಟೆಯೆಂದಳ್ಕಿ.
ಬಳಿಯಟ್ಟಲಾ ಕುಲಪುರೋಹಿತನ ಸನ್ನಿಧಿಗೆ,
ಬ್ರಹ್ಮರ್ಷಿ ಗುರುವಸಿಷ್ಠಂ ಬಂದು ತಾಯ್ಮನಕೆ
ಪೇಳ್ದನಿಂತೆಂದು ಸಂತೈಕೆಯಂ:
“ಬಿಡು, ಮಗಳೆ,
ಭೀತಿಯಂ. ನಿನ್ನ ಮಗನಪ್ರಾಕೃತಂ. ನಿನ್ನೆ ನಾಂ
ಜಾನದೊಳಿರ್ದು ಕಂಡುದಂ ಪೇಳ್ವೆನಾಲಿಸು. ಮೇಲೆ
ಸಂಭ್ರಮಂ ತುಂಬಿರ್ದುದಮರ ಲೋಕಂಗಳೊಳ್.
ಮಿಂಚಿನಂಚಿನ ದೇವತಾ ಚರಣ ಸಂಚಾರದಾ
ಪದಚಿಹ್ನೆಗಳ್ ಪೊಳೆದುವಮಿತ ನಕ್ಷತ್ರಗಳವೋಲ್.
ಕಂಡೆನೀ ಪೃಥಿವಿಯೆಡೆಗಾ ದ್ಯೌಶಕ್ತಿ ರಾಶಿಗಳ್
ಧಾವಿಸುತ್ತಿರ್ದುದಂ. ನನ್ನಾತ್ಮವವರನೆಯೆ

ಹಿಂಬಾಲಿಸೈತರಲ್ ಪೊಕ್ಕುದು ಅಯೋಧ್ಯೆಯಂ.
ಜ್ಯೋತಿಶ್ಶರೀರಿ ನಿನ್ನಂಕದಲಿ ಮಲಗಿರ್ದನಂ
ಜ್ಯೋತಿಶ್ಶರೀರನಂ ಕಂಡೆನೀ ಶಿಶು ರೂಪನಂ.
ದೇವರ್ಕಳೆಲ್ಲರುಂ ದಿವ್ಯ ಸುಮಗಳನೆರಚಿ
ಮೀಯಿಸಿದರವನಂ ದಿವ್ಯೋಧುನಿಯ ಪೀಯೂಷ
ತೀರ್ಥದಿಂ, ಪಾಡಿ ಸುರಗೇಯ ಘೋಷಂಗಳಂ.
ಧನ್ಯನಾಂ! ಧನ್ಯೆ ನೀಂ! ಧನ್ಯಮೀ ರವಿಕುಲಂ!''
ಮಣಿದು ಗುರುಪದಕಾತನಂ ಸತ್ಕರಿಸಿ ಕಳುಹಿ,
ಮುದ್ದಾಡಿದಳು ಮತ್ತೆಮತ್ತೆ ಮಗನಂ ತಾಯಿ
ಕೌಸಲ್ಯೆ, ಮಗು ರಾಮನುಂ ಮುಗುಳುನಗುವಂತೆ.
    ನಸುಮೊಳೆತ ಹಾಲುಹಲ್ಗಳ ಸಾಲೆಸೆವ ಬಾಯ
ಜೊಲ್ಲುಗುವ ತುಟಿದೆರೆಯ ಕಿವಿಸೊಗದ ತೊದಲಿಂದೆ,
ದಾದಿಯರ ಕರೆಗೆ ಹೊಂಗೆಜ್ಜೆ ಕಿಂಕಿಣಿ ಕುಣಿಯೆ
ಪರಿವಂಬೆಗಾಲಿಂದೆ, ಕೈಗುಡಲ್ ಪಿಡಿದೆದ್ದು
ತಿಪ್ಪ ತಿಪ್ಪನೆ ದಟ್ಟಿತಡಿಯಿಟ್ಟು ನಡೆಯುವಾ
ಸಾಹಸಕೆ ಸಂತಸಂಬಡುತೆ, ಕೈಬಿಡಲೊಡನೆ
ಮರಳಿ ನೆಲಮಂ ಪಿಡಿವ ಬಾಲ ಲೀಲೆಗಳಿಂದೆ
ರಾಮನೊಡಗೂಡಿ ಬಳೆದರು ಮೂವರನುಜರುಂ
ತಂತಮ್ಮ ತಾಯ್ಗಳೊಲ್ಮೆಯ ತೊಟ್ಟಿಲೊಳ್, ಗೊಂಚಲ್
ಅದೊಂದರೊಳೆ ನಾಲ್ಮಲರಲರುವಂತೆ.
                                        ಇರಲಿರಲ್,
ಒಂದು ಹುಣ್ಣಿಮೆಯಿರುಳ್, ಅರಮನೆಯ ಉದ್ಯಾನ
ಶಾದ್ವಲ ಶ್ಯಾಮ ವೇದಿಕೆಯಲ್ಲಿ ರಾಣಿಯರ್
ತಮ್ಮ ಮಕ್ಕಳ್ವೆರಸಿ ವಿಹರಿಸುತ್ತಿರೆ ವಿವಿಧ
ಹರ್ಷ ಭಾಷಿತ ಮೋದದೊಳ್, ಶಿಶು ರಾಮನಾಗಸದಿ
ಮೆರೆದ ಪೂರ್ಣೇಂದುವಂ ನೋಡಿ, ಮೋಹಿಸಿ, ಪಡೆಯೆ
ಹಲುಬಿ, ಹಂಬಲಿಸಿ, ಕಾಡಿದನು ಕೌಸಲ್ಯೆಯಂ.
ನಭದ ಚಂದ್ರಂ ನರರ ಧರಣಿಗೈತರನೆಂದು
ತಾಯೆನಿತು ಸಂತೈಸಿ ನುಡಿದೊಡಂ, ಸಹಿಸದೆಯೆ
ಪಳಯಿಸಿದನಾ ಬಾಲನಕ್ಷಿ ಕೆಂಪೇರ್ವಿನಂ,
ಕಿರುದೋಳ್ಗಳುದ್ದಮಂ ರವಿತಾರೆಗಳೆ ಸೋಲ್ವ

ಬಾನ್ದೆಸೆಗೆ ನೀಡಿ. ಪೊನ್ನೊಡವೆಯಂ ರನ್ನಮಂ
ಬಣ್ಣ ಬಣ್ಣದ ಪಣ್ಗಳಂ ಭಕ್ಷ್ಯಭೋಜ್ಯಂಗಳಂ
ಕೊಟ್ಟೊಡವುಗಳನೆಲ್ಲಮಂ ನೂಂಕಿ, ಚಂದ್ರಂಗೆ
ಗೋಗರೆದನಮ್ಮನ ಬೆದರ್ಕೆಯಂ ಕೆಲಕ್ಕೊತ್ತಿ,
ಕೇಳ್ದರೆದೆ ಸುಯ್ಯೆ. ಆ ರೋದನಕ್ಕುರೆ ಬೆರ್ಚಿ,
ಪಿತೃಮನಂ ಮರುಗೆ, ದೊರೆ ಕನಲ್ದು ತಾನಾಯೆಡೆಗೆ
ಬರೆ, ನೆರೆದ ದಾದಿಯರ್ ಸರಿದರಲ್ಲಿಂದೇನೊ
ಗತಿ ಮುಂದೆ ತಮಗೆಂದು ಬೆದರಿ. ಕೌಸಲೆ, ತಾಯಿ,
ಮಗನುಲ್ಬಣ ಸ್ಥಿತಿಗೆ ಕಡಿದು ಕಾತರೆಯಾಗಿ
ಏಗೈಯಲರಿಯದೆಯೆ ಕಂಗೆಟ್ಟು, ದಮ್ಮಯ್ಯ,
ಸುಮ್ಮನಿರೊ, ಓ ನನ್ನ ಕಣ್ಮಣಿಯೆ, ಕಂದಯ್ಯ,
ಕೈಮುಗಿವೆನಳಬೇಡವೆಂದು ಕಂಬನಿಗೂಡಿ
ಮುಂಡಾಡಿ, ರವಿವಂಶದವನೆಂಬ ಕರುಬಿಂದೆ ನೀಂ
ತಿಳಿಯದೆಳಪಸುಳೆಯಂ ಪೀಡಿಸುತ್ತಿಹೆಯೆಂದು
ಬೈದಳಾ ಶಶಿಯಂ ಮನಂ ಮುನಿದು.
ದಶರಥಂ
ಬರೆ, ಕೈಕೆ ಕಂಬನಿ ಮಿಡಿದು ಪೇಳ್ದಳೆಲ್ಲಮಂ.
ಕೇಳುತಾ ದೊರೆಯ ಕನಲಿಕೆ ದುಗುಡಕೆಡೆಯಾಯ್ತು.
ಮರುಗಿದನು ಮಗನಾಸೆ ತನ್ನ ಬಲ್ಮೆಗೆ ಮೀರಿ
ಕೈಗೂಡಲಸದಳಮಲಾ ಎನುತ್ತೆ. ಶಿವಶಿವಾ,
ತಿರೆಗರಸನಾದರೇನೊಂದು ಕೂಸಿನ ಬಯಕೆ
ಬಡತನವನೊಡರಿಸಿತಲಾ! "ತನ್ನ ಸಿರಿ ಇನಿತು
ಪುಸಿಯಾಯ್ತೆ?" ಎನುತ ಕೌಸಲ್ಯೆಯಿಂ ರಾಮನಂ
ಕರೆದೆತ್ತಿಕೊಂಡು ಜಿಂಕೆಗಳೆಡೆಗೆ ಕೊಂಡೊಯ್ದು
ತೋರಿ, ನೈದಿಲೆಗೊಳದೊಳೀಜುವಂಚೆಗಳೆಡೆಗೆ,
ಮತ್ತೆ ಬೆಳ್ದಿಂಗಳಲಿ ಕಣ್ಣು ಕಣ್ಣಿನ ಗರಿಯ
ಕೆದರಿ ಕುಣಿಯುವ ನವಿಲುಗಳ ಬಳಿಗೆ, ಅಲ್ಲಿಂದೆಯುಂ
ರತ್ನ ಕೃತ ಕೃತಕ ಖದ್ಯೋತ ಸಂಕುಲಮಯಂ
ಚಾಮೀಕರಾಲಂಕೃತಂ ಲತಾ ಭವನಮಂ
ಪೊಕ್ಕು ನಡೆನಡೆದಿರದೆ ತೋರ್ದೊಡಂ, ಶಿಶುರೋದನಂ
ನೆರೆದುದಲ್ಲದೆ ತವಿದುದಿಲ್ಲ.

ಮುಂಗಾಣದೆಯೆ,
ನೃಪತಿ ಮಂತ್ರಿ ಸುಮಂತ್ರನಂ ಕರೆಸಲಾತನುಂ
ಬಾಲನಾಕಾಂಕ್ಷೆಗಚ್ಚರಿವಡುತೆ ಮೌನಮಿರೆ
ಬೆಳ್ಪಮರ್ದಂತೆ, ಬಂದಳ್ ಮುದುಕಿಯೊರ್ವಳಾ
ತಾಣಕ್ಕೆ ಕಿಶೋರ ಭರತನನಾಂತು ಕೌಂಕುಳಲಿ.
ಕಂಡುದೆ ತಡಂ, ಅಮಂಗಳವನೀಕ್ಷಿಸಿದಂತೆ,
ಮೊಗಂಮುರಿದು, ಮಾತು ನಿಲ್ಲಿಸಿದರನಿಬರುಮಲ್ಲಿ,
ಕೈಕೆ ಹೊರತಾಗಿ:
ಕುಡುಬಿಲ್ಲು ಬಾಗಿದ ಮೆಯ್ಯ,
ತೊನ್ನ ಬೆಳ್ಗಲೆವಿಡಿದ ಕರ್ರನೆಯ ಕುಬ್ಜತೆಯ,
ಗೂಳಿ ಹಿಣಿಲಿನವೋಲು ಗೂನುವುಬ್ಬಿದ ಬೆನ್ನ,
ಸುಕ್ಕು ನಿರಿನಿರಿಯಾಗಿ ಬತ್ತಿದ ತೊವಲ್ ಪತ್ತಿ
ಬಿಗಿದೆಲ್ವುಗೂಡಿನಾ ಶಿಥಿಲ ಕಂಕಾಲತೆಯ,
ಪಲ್ಲುದುರಿ ಬೋಡಾದ ಬಚ್ಚುಬಾಯಿಯ, ಕುಳಿಯ
ಕೆನ್ನೆಗಳ, ದಿಟ್ಟಿಮಾಸಿದ ಕಣ್ಣ ಕೋಟರದ,
ಕರ್ಬುನ ಮೊರಡು ಮೊಗದ, ಕೂದಲುದುರಿದ ಬೋಳು
ಪುರ್ಬಿನ ವಿಕಾರದಾ, ಬೆಳ್ವಕ್ಕಿ ತಿಪ್ಪುಳೆನೆ
ಮಂಡೆಯಂ ಮುತ್ತಿ ಕೆದರಿದ ಬೆಳ್ಳನೆಯ ನವಿರ
ಅಸ್ಥಿಪಂಜರದಂತೆವೋಲಸ್ಥಿರ ಸ್ಥವಿರೆಯಂ
ಕಂಡೊಡನೆ ಕೈಕೆ ನಡೆದಳ್ ಬಳಿಗೆ. ನುಡಿಸಿದಳ್
ತಾಯವೊಲ್ ಸಾಕಿ ಸಲಹಿದ ದಾಸಿ ಮಂಥರೆಯ!
ನೋಡುತಿರೆ ನೆರೆದ ಜನರಾ ವಿರೂಪದ ವೃದ್ಧೆ,
ಮಾತನಾಲಿಸೆ ಬಾಗಿದರಸಿಯ ಕಿವಿಗದೇನನೊ
ಪರ್ಚಿ, ಮಡಿಲಿಂದೊಂದು ಮುಕುರಮಂ ಪೊರದೆಗೆದು
ನೀಡಿದಳ್. ನಗೆಗೂಡಿ ಕೈಕೆ ತಾನದನೊಯ್ದು
ತೋರಿದಳ್ ದೊರೆಯ ತೋಳ್ಗಳಲಿ ರೋದಿಸುತಿರ್ದ
ರಾಮಂಗೆ. ಪೊಳೆಯೆ ಪಡಿನೆಳಲಿನಲಿ ಬಾನೆಡೆಯ
ಚಂದಿರಂ, ಪಡೆದೆನಿಂದುವನೆಂದು ಕುಣಿಕುಣಿದು
ನಲಿಯತೊಡಗಿದನನಿಬರುಂ ಬಿಲ್ಲುಬೆರಗಾಗೆ.
ಸಂತಸದೊಳಾ ದಾಸಿ, ಮುದಿಗೂನಿ, ರಾಮನಂ
ಮುದ್ದಿಸಲ್ ಬಯಸಿ ತೋಳ್ ಚಾಚಲಾ ಕೌಸಲ್ಯೆ:

ಕಂದಂಗಮಂಗಳಂ, ಮುಟ್ಟದಿರ್ ಮುಟ್ಟದಿರ್.
ಬೇಡವೇಡೆನ್ನುತೆ ನಿವಾರಿಸಿದಳಾಕೆಯಂ,
ಮುದಿ ಮಂಥರೆಯ ಮೈತ್ರಿ ಜಜ್ಜರಿತಮಪ್ಪಂತೆವೋಲ್.
ಮುರಿದೊಲ್ಮೆಯವಮಾನದಿಂದೆ ಕಣ್ಬನಿ ಚಿಮ್ಮಿ
ನಿಲ್ಲದಲ್ಲಿಂ ನಡೆದಳಯ್ ಭರತನಂ ಬಿಗಿದಪ್ಪಿ,
ತುಳಿದ ಸರ್ಪಿಣಿಯಂತೆ ಮುಳಿಸಿನುರಿಯಿಂ ಪೊಗೆದು,
ಸುಯ್ದು ಹೆಡೆಯೆತ್ತಿ!
ಕೈಕೆಯ ತಾತನೊರ್ದಿನಂ
ಬೇಂಟೆಯಾಯಾಸದಿಂ ಬೈಗುವೊಳ್ತಡವಿಯೊಳ್
ಪರಿವಾರದೊಡನೆ ಬರುತಿರೆ, ಪಳುವೆ ತಾನಳುವಂತೆ
ಗೋಳಿಟ್ಟುದೊಂದು ಶಿಶುರೋದನಂ. ಕೂರ್ಗೆಲಸದಿಂ
ಪಿಂತಿರುಗುತಿರ್ದ ಪಾರ್ಥಿವನೊಳುದಿಸಿತು ಕರುಣೆ,
ಕಟ್ಟಲಿಹ ಕಬ್ಬಕೆ ಮೊದಲ್‌ಗುದ್ದಲಿಯ ಪೂಜೆವೋಲ್.
ನಡೆದು ನೋಡಲ್ಕೆ, ಕಾಣಿಸಿತೊಂದು ದಸ್ಯುಶಿಶು,
ಮುಳ್ ಮಣ್ಣು ತರಗೆಲೆಯಿಡಿದ ನೆಲದ ಮೇಲಿರುವೆ
ಮುತ್ತಿ, ಹಾ, ವಿಕೃತಿ ವಕ್ರತೆ ರೂಹುಗೊಂಡಂತೆ!
ಪೆತ್ತವರ ಸುಳಿವಿಲ್ಲದಿರ್ದ ಆ ಪೆಣ್ ಪಸುಳೆಯಂ
ಪಿಡಿದೆತ್ತಿ, ಕಟ್ಟೆರುಂಪೆಯನೊರಸಿ, ಸಂತೈಸಿದನ್.
ಗೂಬೆಯಪಶಕುನದ ವಿಕಾರದುಲಿಯನ್ನೇರ್ದು
ಕವಿಯುತಿರೆ ಕಾಡುಗಳ್ತಲೆ, ತಂದನೂರಿಗವಳಂ
ದಾರಿಯ ನಡೆವ ಮಾರಿಯಂ ಮನೆಗೆ ತರುವಂತೆ,
ಮುಂದಣ ಮಹಾದುಃಖ ದಾವಾನಳಕೆ ತನ್ನ
ಕಿರುಗಜ್ಜದಾ ಒಂದೆ ಕಿಡಿಯ ಮುನ್ನುಡಿಯಿಡುವ
ವಿಧಿ ವಿಲಾಸದಲಿ! ಬೆಳೆದುದು ಕೂಸು ಕುಳ್ಳಾಗಿ,
ಗೂನಾಗಿ, ತೊತ್ತಾಗಿ, ಕರ್ರಗೆ, ಜನರ ಕಣ್ಗೆ
ಹೇಸಿನಾಕೃತಿಯಾಗಿ! ಕಂಡ ಕಂಡವರೆಲ್ಲರುಂ
ಕುಬ್ಜೆಯನನಾರ್ಯೆಯಂ, ತಂದೆತಾಯಿಲ್ಲದಾ
ಪರದೇಶಿ ಕನ್ನೆಯಂ, ಚೀಃ ಎಂದು, ತೊಲಗೆಂದು,
ಥೂ ಎಂದು, ಸಾಯೆಂದು, ನಾಯ್ಮರಿಗೆ ಕಡೆಯಾಗಿ
ಭಾವಿಸಿದರಾ ನೃಪನ ಕಟ್ಟಾಣೆಯಂ ಮೀರ್ದು
ಕಡೆಗಣ್ಚಿ. ಮನುಜರೊಲ್ಮೆಯ ಸವಿಯನೊಂದಿನಿತುಮಂ

ಕಾಣದೆ, ಮಿಗದ ತೆರದಿ ಮಿದುಳಿಲ್ಲದೆಯೆ ಬೆಳೆದು
ಜಡತೆವೆತ್ತಿರ್ದ ಸೋಂಬೆಗೆ ಮಂದಿ, ಬಯ್ವವೋಲ್
ಜರೆದು, ಮಂಥರೆಯೆಂದು ಪೆಸರನೆಸೆದರ್, ಮೊಗಕೆ
ಕೆಸರನಿಡುವಂತೆ. ಕನ್ನಡಿಯಂತುಟಾಕೆಯುಂ
ಪ್ರತಿಬಿಂಬ ರೀತಿಯಂ ಕೈಕೊಂಡಳಾ ಜನದ
ಮನದ ವಿಕೃತಿಗೆ ತನ್ನ ಮೆಯ್ ವಿಡಂಬನಮಪ್ಪವೋಲ್.
ಪರಿದುದಯ್ ಪೊಳ್ತುವೊಳೆ. ನಿಂದೆಯೊಳ್ ಬೆಳೆಬೆಳೆದು
ಕುವರಿಯಾಗಿರೆ ಕುಬ್ಜೆ, ಸಂಭವಿಸಿದಳು ಕೈಕೆ
ಕೇಕಯ ರಾಜಸತಿಗೆ. ಆ ಧರಾವಲ್ಲಭಂ
ಮಂಥರೆಯ ಭೀಷಣೈಕಾಂತತೆಗೆ ಬಗೆಗರಗಿ
ಮಗುವನಾಡಿಪ ಕೆಲಸಕಾಕೆಯನೆ ಬೆಸಸಿದನ್. ಕೇಳ್,
ಮಳೆಹೊಯ್ದ ತೆರನಾಯ್ತು ಮಂಥರೆಯ ಮರುಧರೆಗೆ,
ಚೈತ್ರನಾಗಮವಾಯ್ತು ಮಂಥರೆಯ ಶಿಶಿರಕ್ಕೆ,
ಮಂಥರೆಯ ಬಾಳ್‌ನಿಶೆಗೆ ಶಶಿಯುದಿಸಿದಂತಾಯ್ತು,
ಮಂಥರೆಯ ಮೃತ್ಯುವಿಗೆ ತಾನಮೃತ ಸೇಚನೆಯಾಯ್ತು,
ಶುಷ್ಕತಾ ಶೂನ್ಯತೆಯೊಳೊಲ್ಮೆ ಸಂಚರವಾಯ್ತು;
ಬದುಕು ಸಾರ್ಥಕ ಮಧುರಮಾಯ್ತು ಶಿಶುಸನ್ನಿಧಿಯ
ಪ್ರೇಮಸೌಂದರ್ಯ ಮಹಿಮೆಯಲಿ. ರೂಪ ವಿಹೀನೆ
ರೂಪಸಿಯೊಳಿರ್ದು ತನಗಿಲ್ಲದಾ ಚೆಲ್ವಿನಲಿ
ಲೋಲಾಡಿದಳ್, ತೇಲ್ವವೋಲ್ ಪಾಲೊಳಿದ್ದಲಿನ
ಚೂರು. ಮರೆದಳು ಕೈಕೆ ಮಂಥರೆಯ ತೊಡೆಯಲ್ಲಿ,
ಕಾಳಾಹಿ ಭೋಗದಲಿ ಹೊಳೆವ ಹೆಡೆಮಣಿಯಂತೆ,
ತಾರತಮ್ಯದಿ ಮತ್ತಿನಿತು ಚಾರುತರಮಾಗಿ.
ಚಕ್ಕಮಕ್ಕಿಯ ಕಲ್ಲಿನಂತರಂಗದೊಳಗ್ನಿ
ಗುಪ್ತವಾಗಿರ್ಪಂತೆ, ಬಾಹ್ಯ ವಿಕೃತಿಯ ಮಧ್ಯೆ
ಮಂಥರೆಯ ಹೃದಯದಲಿ ಸುಪ್ತವಾಗಿರ್ದ ರತಿ,
ಚೆಲುವೊಲವುಗಳ ಚಿಲುಮೆ ತಾಂ ಕಣ್ದೆರೆದುದೊಯ್ಯನೆಯೆ
ಮುಕ್ತ ಮುಕ್ತಾಹಾರ ಧಾರೆಯಲಿ. ತನ್ನೊಂದು
ಜೀವಿತಕೆ ರಾಜಪುತ್ರಿಯೆ ಸರ್ವಸುಖಮಾಗೆ
ಮರೆತಳನ್ಯಾಯಮಂ, ಮರೆತಳಪಮಾನಮಂ,
ಮತ್ತೆ ಮರೆತಳು ತನ್ನನುಂ ತಾನೆ, ಕೈಕೆಯೊಳ್

ಸಾಯುಜ್ಯವೊಂದಿ.
ಮಂಥರೆಯಿಂತು ಬದುಕುತಿರೆ,
ಬೆಕ್ಕಸವನೇನೆಂಬೆ, ಬಾಲ್ಯ ಕೌಮಾರದಿಂ
ಯೌವನವನತಿಗಳೆದು, ಜರೆಗೆ ದಾಂಟಿದಳಹಾ
ನರೆಯೇರಿ, ಸುರ್ಕಡರಿ, ಪೊರಮೆಯ್ ವಿಕೃತಿ ಪೆರ್ಚಿ!
ತನು ವಿಕಾರಂ ಪೆರ್ಚಿದಂತೆ ಮನಸಿನ ಮಮತೆ
ನೂರ್ಮಡಿಸಿದತ್ತು ಕೈಕೆಯ ಮೇಲೆ. ಕೈಕೆಯುಂ
ನರ ತಿರಸ್ಕೃತೆ ವಿಕೃತೆ ಆ ಮಂಥರಾ ದಾಸಿಯಂ
ಶೈಶವ ಕೃತಜ್ಞತಾ ಪ್ರೇಮದಿಂ ಪ್ರೀತಿಸುತೆ
ನೆರೆ ನೆರೆದಳಂಗಜನ ಹೊಸಮಸೆಯ ಹೊಳೆಹೊಳೆವ
ಶೃಂಗಾರಶರ ಶರಲ್ಲಕ್ಷ್ಮಿಯೋಲ್. ವಿಧಿನಿಯಮದಿಂ,
ಮೇಲೆ ಕಾಲಾಂತರಕೆ, ದೇವ ದಶರಥ ನೃಪಂ
ಲೋಕ ಮೋಹಕ ಸತಿಯ ಸೊಬಗಿನ ಸುಳಿಗೆ ಸಿಲ್ಕಿ
ಕೈಕೆಯಂ ಮದುವೆ ನಿಂದಂದು, ಮಂಥರೆ ದಾಸಿ
ಸಾಕೇತ ರಾಜಧಾನಿಗೆ ಬಂದಳವಳೊಡನೆ,
ನೆರಳಂತೆವೋಲ್. ರವಿವಂಶದರಸರೂರಾದೊಡೇಂ
ಮನ್ನಣೆ ಕುರೂಪತೆಗೆ ತಾನೆಲ್ಲಿ? ಮುದಿಗೂನಿ
ಮಂಥರೆಗೆ ಮೊಲದ ಕೋಡಾದುದು ಸೊಗಂ. ಶನಿಯೆನುತೆ
ಶಪಿಸಿದುದು ಮಂದಿ: ಕಂಡರೆ ಹುಬ್ಬು ಗಂಟಿಕ್ಕಿ
ದೂರ ಸರಿದುದು ಮೊಸಳೆಗಂಡಂತೆ. ಸನಿಹಕ್ಕೆ
ಬರಗೊಡರ್, ಗಾಳಿ ಸೋಂಕುವುದೆಂಬ ಮೈಲಿಗೆಗೆ
ಪೇಸಿ. ಬಳಿಗೀಶ್ವರಾರಾಧನೆಗೆ ಸೇರಿಸರ್.
ಉಣಲಿಡುವ ಪೊಳ್ತು ಪೊರನೂಂಕುವರ್ ತೊಳ್ತುಗಳ್,
ಕಿರಿರಾಣಿಯಾಜ್ಞೆಗೆ ಕಿವುಳ್ಗೇಳ್ದು. ಕೌಸಲ್ಯೆಯುಂ
ಲಕ್ಷ್ಮಣನ ತಾಯಿ ಮೊದಲಪ್ಪ ಸಿರಿವೆಂಡಿರುಂ
ಮಂಥರೆ ಅನಿಷ್ಟೆಯೆನುತಾ ಸವತಿ ಕೈಕೆಯಂ
ಬಳಿಸೇರಿಸದೆ ಹೆದರಿ ಹೇಸಿ ಹಿಂಜರಿದರಾ
ಗೂನಿಯಿರಲೊಡನೆ. ಸಹಿಸಿದಳನಿತುಮಂ ಕುಬ್ಜೆ
ತನ್ನೊಡತಿಯೊಲ್ಮೆಯ ಸೊಗಕೆ ಜೀವವನೆ ಬೇಳ್ದು,
ಕಮ್ಮಾರನಡಿಗಲ್ಲೆನಲ್ ಬಾಳ್ದು.
ಇರುತಲಿರೆ.

ಬೆಸಲೆಯಾದಳು ಕೈಕೆ ಭರತನಂ. ಮಂಥರೆಗೆ
ಮೂರನೆಯ ಕಣ್ ಮೂಡಿದಂತಾಯ್ತು. ಬಾಳ್ಗೊಂದು
ಪೊಸವೊಲ್ಮೆ ಚೆಂದಳಿರ್ ಚಿಗುರಿದುದು ತಾನಂದಿನಿಂ.
ಜಿಪುಣ ಬಡವಂ ಕಡವರವನಪ್ಪಿಕೊಳ್ವಂತೆ,
ಹಗಲಿರುಳ್ ಕೈಕೆಯ ತನೂಜನಂ ಸಲಹಿದಳ್
ಆ ದಸ್ಯುಸತಿ, ಹಡೆದ ತಾಯಿಯೆ ನಾಣ್ಚುವೋಲಂತೆ.
ಮಂಥರೆಯ ಮೋಹಸರಸಿಯೊಳಿಂತು, ತಾವರೆಯ
ತೆರದಿ, ಭರತಂ ಬಳೆದನಯ್. ಮತ್ತೆ ಶತ್ರುಘ್ನನುಂ
ಲಕ್ಷ್ಮಣ ಶ್ರೀರಾಮರುಂ ತಂತಮ್ಮ ಜನನಿಯರ
ಮತ್ತೆ ದಾದಿಯರಕ್ಕರೆಯ ಸಕ್ಕರೆಯ ಸವಿಗೆ
ಬಳೆಯುತಿರ್ದರು ಕುಂಜತರು ದೇವಕುಂಜರಗಳೋಲ್.
ಶೈಶವಂ ಕಳೆದು ಬಾಲ್ಯ ಮೆಯ್ಗೆ ಮೈದೋರೆ
ಗುರು ವಸಿಷ್ಠನ ಕೈಯೊಳಾಳ್ವ ಪಾರ್ಥಿವ ಜನಕೆ
ತಗುವ ವಿದ್ಯಾಭ್ಯಾಸದಂಕುರಕ್ಕಗೆಯಾಯ್ತು.
ಕಲಿತರೈ ಬಿಲ್ಬಿಜ್ಜೆಯಂ, ವೇದಮಂ, ಮೇಣ್ ನೀತಿ
ನಯ ವಿನಯ ನಿಯತಿಯಂ, ಶಾರ್ದೂಲ ಶಾಬಕಂ
ಬೇಂಟೆ ಕಲ್ವಿಯ ಕಲಿಯುವಂತೆ; ಪರ್ವತ ಶಿರದಿ
ಜನ್ಮವೆತ್ತಿದ ತೊರೆ ಸಮುದ್ರಾಭಿಮುಖಮಾಗಿ
ಪರಿಯಲರಿವಂತೆ; ಬಂಡೆಯ ಕೊರೆದು ವರಶಿಲ್ಪಿ
ಭುವನ ಸುಂದರ ಕಲಾಲಕ್ಷ್ಮಿಯಂ ಸೃಜಿಪಂತೆ;
ಕೋಸಲ ಸುಖಿಸುವಂತೆ. ದೇಹದಲಿ ಮನದಲ್ಲಿ
ಜ್ಞಾನದಲಿ ಗುಣದಲ್ಲಿ ವೀರ್ಯದಲಿ ಧೈರ್ಯದಲಿ
ಸಹ್ಯಾದ್ರಿ ಶೃಂಗ ಸಂಕುಲದಂತೆ ನಿಮಿರೆಳ್ದು
ಮೈತ್ರಿಯಿಂ ಸ್ಪರ್ಧಿಸಿದರೊಬ್ಬರೊಬ್ಬರ ಕೂಡೆ
ನಾಲ್ವರುಂ ನಾಲ್ಕು ತೋಳುಗಳೆಳೆ ದಶರಥಗೆ.
ಕ್ಷಮೆಯಲ್ಲಿ, ಸತ್ತ್ವದಲಿ, ಶಾಂತಗಾಂಭೀರ್ಯದಲಿ,
ಭದ್ರರೂಪದಲಿ, ತನುಕಾಂತಿಯಲಿ ಮೆರೆದನಾ
ಶ್ರೀರಾಮಚಂದ್ರನಂಬರ ಮಹಾಮಂಡಲಮೆ
ಮೂರ್ತಿವೆತ್ತಂತೆ. ಹಿರಿಯಣ್ಣನಂ ಚಿರದಿನಂ
ಬೆಂಬಿಡದೆಯಿರ್ದ ಲಕ್ಷ್ಮಣದೇವನೆಸೆದನಯ್
ರಾಗಾನುರಾಗದಲಿ, ವೇಗದಲಿ, ರಭಸದಲಿ,

ಹೃದಯ ವೈಶಾಲ್ಯದಲಿ, ಶ್ಯಾಮ ಶ್ರೀಯೊಲ್ಮೆಯಲಿ,
ನೆರೆಯೇರ್ದ ಮಳೆಗಾಲದ ಮಹಾತರಂಗಿಣಿಯ
ಧೀರಶೈಲಿಯಲಿ. ಸೌಂದರ್ಯ ಶ್ರೀ ದೇವತೆಯ
ಪಟ್ಟದ ಕುಮಾರನನೆ, ಕೈಕೆಯ ಸೊಬಗನೆಲ್ಲಮಂ
ಮಥಿಸಿ ಸಾರವನೆರೆದ ನವನೀತಕಿಂದ್ರಧನುವಿಂ
ವರ್ಣತೇಜಸ್ಸೂದಗಿದಂತಿರ್ದ ಕೃತಿಯಂತೆವೋಲ್
ಭರತಂ ಮಹಾತ್ಮನೆಸೆದನು ದಿವ್ಯ ತೇಜಸ್ವಿ,
ತ್ಯಾಗಬುದ್ಧಿಯಲಿ, ನಿರ್ವೇಗದಲಿ, ತಪದಲ್ಲಿ,
ಸಂಯಮದ ಸೌಂದರ್ಯದಲ್ಲಿ, ನಿರಸೂಯೆಯಲಿ,
ರಸಕಾವ್ಯ ಸತ್ಕಲಾಭ್ಯಾಸದಧ್ಯಾತ್ಮದಲಿ,
ಸೋದರ ಪ್ರೀತಿಯಲಿ, ಬಾಲಋಷಿಯೆಂಬಂತೆ
ಭಾಜನನಾಗಿ ರಾಮಗೌರವಕೆ. ಭರತಂಗೆ
ಛಾಯಾ ಶರೀರವೆನೆ ಶತ್ರುಘ್ನನಿರ್ದನು ತನ್ನ
ನಾಮ ಲಕ್ಷ್ಯಕೆ ಲಕ್ಷಣಂ ತಾನೆನಲ್.
ಕೋಸಲದೊಳಾ
ಗೂನಿ ಮಂಥರೆಯ ಮೀರಿದ ತಿರಸ್ಕೃತೆಯುಮಂ
ಸಂತೃಪ್ತ ಸುಖಿಯುಮಂ ಕಾಣೆ! ಭರತಾಭ್ಯುದಯ
ಚಂದ್ರೋದಯಕ್ಕುರ್ಬಿದತ್ತವಳ ಹೃಜ್ಜಲಧಿ,
ಪಾಳು ಕೊರಕಲ್ ಬಂಡೆಯಿಂ ವಕ್ರಮಾಗಿರ್ಪ
ಮೊರಡು ದಡದಂತಿರ್ದವಳ ಮೆಯ್ಯುನುಚ್ಛ್ವಸಿತ
ಹರ್ಷೋರ್ಮಿಮಾಲಾ ಸಮೂಹದಿಂದವ್ವಳಿಸಿ
ಮುಚ್ಚಿ. ನರರನ್ಯರಿಲ್ಲಾಯಿತ್ತು ಮಂಥರೆಯ
ಲೋಕಕ್ಕೆ, ಕೈಕೆ ಭರತರ್ ವಿನಾ. ದಶರಥಂ
ಕೈಕೆ ಭರತರಿಗಾಗಿ; ಕೈಕೆ ಭರತರಿಗಾಗಿ ಏ
ಕೋಸಲಮಯೋಧ್ಯೆಗಳ್. ಶಶಿ ಸೂರ್ಯ ತಾರಾಳಿಗಳ್
ಕೈಕೆ ಭರತರಿಗಾಗಿ; ಭರತನಾಳ್ವಿಕೆಗಾಗಿ ಈ
ಪೃಥಿವಿ! ಹಾ, ಮಂಥರೆಯ ಈ ಮಮತೆಯಾವರ್ತದೊಳ್,
ಸುಟ್ಟುರೆಗೆ ಧೂಳಿ ತರಗೆಲೆ ತಿರ್ರನೆಯೆ ಸುತ್ತುವೋಲ್
ಸಿಲ್ಕಿ ಘೂರ್ಣಿಸದಿಹುದೆ ಪೇಳ್ ತ್ರೇತಾ ಮಹಾ ಯುಗಂ!

ಸಂಚಿಕೆ ೨

# ಶಿಲಾತಪಸ್ವಿನಿ

ಮೆಯ್‌ಸಿರಿಗೆ ಷೋಡಶ ವಸಂತ ವೀಚಿಯನೊತ್ತಿ
ಪ್ರವಹಿಸಿತು ಕಾಲನದಿ ರಾಮ ಲಕ್ಷ್ಮಣ ಭರತ
ಶತ್ರುಘ್ನ ಜೀವನದಿ. ಜೌವನ ರಸದ ಬಿಣ್ಪುಮಂ
ಬಿಜ್ಜೆಯಾಳದ ಗುಣ್ಪುಮಂ ಮೆರೆವ ವಿಗ್ರಹಂ
ಶೋಭಿಸಿದುದೋಜಸ್ವಿಗಳ್ಗೆ. ದಶರಥನೃಪಂ
ಮಕ್ಕಳ್ಗೆ ಮದುವೆಯಂ ನೆನೆದನಾಸಾರಮಂ
ನೆನೆವಂತುಟೊಕ್ಕಲಿಗನುತ್ತು ಬಿತ್ತಂ ಬಿತ್ತಿ
ಹರಗಿ. ವನಘನರಾಶಿಯಾಶಾ ದಿಗಂತದೊಳ್
ವರ್ಷದಾಶೀರ್ವಾದ ಮುದ್ರೆಯಿಂದೇರ್ದುದೆನೆ
ಬಂದನೋಲಗಕೆ ವಿಶ್ವಾಮಿತ್ರ ಮುನಿವರಂ,
ಚಂಡತೇಜಸ್ವಿ. ದೊರೆ ಕುಲಪುರೋಹಿತರಿಂದೆ
ಋಷಿಗರ್ಘ್ಯಮಂ ಕೊಡಿಸಿ, ಪಾಳಿಯಿಂದಡಿತಡಿಗೆ
ಮಣಿಯೆ, ಕುಶಿಕೋದ್ಭವಂ: “ನೃಪಾಲಶಾರ್ದೂಲ, ಕೇಳ್,
ಸಿದ್ಧ್ಯರ್ಥಮಾನೊಂದು ಜನ್ನಮಂ ಕೈಕೊಂಡು
ತೊಡಗಿಹೆನ್. ಅದಂ ಮಾಂಸರುಧಿರೌಘದಿಂ ಕಿಡಿಸಿ
ಕಾಡುವರ್ ತಾಟಕಿಯ ಮಕ್ಕಳ್ ಸುಬಾಹುವುಂ
ಮಾರೀಚನುಂ. ಕಳುಹು ರಕ್ಷೆಗೆನ್ನೊಡನೆ ನಿನ್ನಾ
ಜ್ಯೇಷ್ಠನಂ, ಕಾಕಪಕ್ಷಧರ ಕಲಿ ರಾಮನಂ,
ಶ್ರೇಷ್ಠನಂ. ಕರಿಯ ಕೊಲ್ಲುವ ಹರಿಗೆ ಮರಿಯೆಂಬ
ಶಂಕೆ ತಾನೇಕೆ? ಕಾಕುತ್ಸ್ಥ, ಯಮಪಾಶದಿಂ

ಪಾಪಕರ್ಮಂ ಮೊದಲೆ ಬಿಗಿದ ಪಿಶಿತಾಶರಂ
ತೇಜಸ್ವಿ ರಾಮನಾತನ ಮಹಾ ಶಕ್ತಿಯಿಂ
ಮೇಣೆನ್ನ ಗುಪ್ತ ದೈವಿಕಬಲದ ಮಹಿಮೆಯಿಂ
ಸಂಹರಿಸಿ, ಧರ್ಮಲಾಭಕೆ ಯಶೋದೀಪ್ತಿಯಂ
ಮೆರೆವನಯ್. ವರಮೆಂದು ನಂಬು ಮದ್ವಚನಮಂ.
ಪಡೆವೆ ಚಿರಕೀರ್ತಿಯಂ. ಗುರು ವಸಿಷ್ಠಾದ್ಯರಂ
ಬೆಸಗೊಂಡು ತಿಳಿ. ಪೊತ್ತು ತಾಂ ಪತ್ತು ಸೂಳಂ ಕಳಿದ
ಮರುವಗಲೆ ಆ ನಿನ್ನ ರಾಜೀವಲೋಚನಂ
ಪಿಂತಿರುಗಿ ಬರ್ಪನಯ್, ಬಹುಳ ಕಲ್ಯಾಣದಿಂ,
ಸಾಕೇತ ಜನಮನ ವನಧಿ ಪೆರ್ಚುವೋಲಂತೆ."
ಹಣ್ಣಿಗೆಳಸಿದ ಕಣ್ಗೆ ಹುಳಿ ಸಿಡಿದವೋಲಾಯ್ತು;
ಜೇನಿಗೆಳಸಿದ ಜಿಹ್ವೆ ಕಹಿ ನೆಕ್ಕಿದಂತಾಯ್ತು;
ಸವಿಗೊರಲನಾಕರ್ಣಿಸಲ್ ಕಿವಿಯನಿತ್ತವಗೆ
ಕಾಯಿಸಿದ ಕಬ್ಬಿಣವ ಕರಗಿ ಹೊಯ್ದಂತಾದುದಯ್
ದಶರಥಗೆ, ಕುಶಿಕತನಯನ ಪೇಳ್ದ ಕೂರ್ನುಡಿಗೆ.
"ಕೃಪೆದೋರ್, ಮಹಾಮುನಿಯೆ! ಮೊಗ್ಗಿನಿಂದಿರಿಯುವರೆ
ಕಗ್ಗಲ್ಲ ಬಂಡೆಯಂ? ಕದಳಿಯೆಳಕಂದಿನಿಂ
ಸಿಡಿಲಂ ತಡೆಯಲಹುದೆ? ಮುದ್ದಿನ ಕುಮಾರನಿಂ,
ಯುದ್ಧಾನುಭವವಿಲ್ಲದಿಹ ಮುಗ್ಧ ರಾಮನಿಂ,
ಕ್ರೂರಿಗಳ್ ಕೋಪಿಗಳ್ ವಜ್ರ ದೃಢದೇಹಿಗಳ್
ರಣವಿದಗ್ಧರನೆಂತು ಗೆಲಲಹುದೊ? ಮನ್ನಿಸೆನ್ನಂ.
ತಿಳಿಯದೆಳಪಸುಳೆ ತಾಂ ಕೊಲೆಯಹುದು ನಿರ್ನೆರಂ.
ಶಿಶುವೇಕೆ? ನಾನೆ ಬಹೆನತಿ ಬಲ ಸಮನ್ವಿತಂ,
ನಿರ್ವಿಘ್ನಮೆಸಗೆ. ಪೇಳ್, ಮುನಿಮಹೇಶ್ವರನೆ, ಆ
ದಾನವರದಾರ್? ಪೆಸರೇನ್? ಬಲಮೆನಿತ್ತವರ್ಗೆ?"
"ಲಂಕಾ ಕನಕಲಕ್ಷ್ಮಿಯನ್ನಾಳ್ವ ವಿಪ್ಲವನೆ
ಕಲಿ, ಬಲಿಷ್ಠಂ, ಮಹಾ ದೈತ್ಯನಿರ್ದಪನಲ್ಲಿ
ದೂರ ತೆಂಕಲಲಿ, ನರ ಸುರ ಕಿನ್ನರರ್ಗೆಲ್ಲರ್ಗೆ
ಕಿವಿ ಭಯಂಕರದ ರಾವಣನೆಂಬ ಪೆಸರಿಂದೆ.
ಪೌಲಸ್ತ್ಯ ವಂಶಜಂ; ದ್ರಾವಿಡ ತಪಸ್ಸಿನಿಂ
ಮೃಡನಿಂ ಬರಂಗಳಂ ಪಡೆದನೆಂಬರ್ ಕಣಾ!

ದಿಗ್ಗಜ ದಶಂಗಳದಟಿರ್ಪುದಾತಂಗೆ, ಮೇಣ್
ದಶಶಿರಂ ತಾನೆಂಬರಯ್. ನಂಟರಾ ದೈತ್ಯಂಗೆ
ಮಾರೀಚ ಮೊದಲಪ್ಪ ಖಲ ನಿಶಾಚರರನಿಬರುಂ;
ಸರ್ವವೈರಿಗಳಾರ್ಯರಪ್ಪೆಮಗೆ.'' ಋಷಿ ನುಡಿದು
ಮುಗಿವ ಮುನ್ನಮೆಯೆ ವಸುಧಾಧಿಪಂ: ''ಶಿವ ಶಿವಾ,
ಸಾಲ್ಗುಮಾ ಕಥೆ, ಗುರುವೆ; ಬಲ್ಲೆನಾನೆಲ್ಲಮಂ
ಕೇಳ್ದು. ಕೀನಾಶನಣಲೊಳಗೆ ಕೈ ದುಮ್ಮಿಕ್ಕಿ
ಕೋರೆಯಂ ಕೀಳ್ವಾ ಪರಾಕ್ರಮಿಯಿದಿರ್ ನಾನೆ
ನಿಲಲಾರೆನೈ. ಮುದ್ದು ಮಗುವಂತಿರಲಿ. ಸುದಿ
ಪರ್ವಿದೊಡೆ ರಾವಣನ, ಯಕ್ಷಕಿನ್ನರ ದೇವ
ಗಂಧರ್ವರೆರ್ದೆಗಳುಂ ತಳ್ಳಂಕಗೊಳ್ಳುವುವೊ
ಬೆರ್ಚ್ಚಿ. ಶಿಶು ರಾಮನೇಗೈವನೈ, ಧರ್ಮಜ್ಞ, ಪೇಳ್.
ಸುಂದೋಪಸುಂದರೆಂಬರ್ಗೆ ಮಾರೀಚಾದಿ
ಸೋದರರ್ ಮಕ್ಕಳ್; ಸಮರ ಯಮರ್! ರಾಮನಂ
ಕಳುಹಲಾರೆನೊ ದಿಟಂ; ಕ್ಷಮಿಸೈ, ತಪೋಧನಾ!''
ಮಕ್ಕಳಕ್ಕರೆಯಿಂದೆ ತೊದಲುತೊದಲಕ್ಕರಂ
ನುಡಿದು ಕೈಮುಗಿದು ಕಂಬನಿಗರೆವನಂ ನೋಡಿ,
ಗುರುವಸಿಷ್ಠಂ: ''ಇಕ್ಷ್ವಾಕು ಕುಲಧರ್ಮಮೂರ್ತಿ,
ಋಷಿಕೃಪಾಶೀರ್ವಾದಮಿದು ಕಣಾ! ರಾಮನಂ
ಕಳುಹು ನಿಶ್ಶಂಕೆಯಿಂ. ಭಾಳನೇತ್ರಂಗೆ ತಾಂ
ಸದೃಶನೀ ಕೌಶಿಕಂ. ಕಂದನೀತನ ರಕ್ಷೆಯೊಳ್,
ಪ್ರಳಯಾಗ್ನಿ ಚಕ್ರಕೇಂದ್ರದೊಳಿರ್ಪ ಸುಧೆಯವೊಲ್,
ನಿತ್ಯಂ ಸುರಕ್ಷಿತಂ. ಸಕಲ ಮಂತ್ರಾಸ್ತ್ರವಿದನೀ
ರಣಕಲಾ ಪಂಡಿತಂ ತಾನೆ ಗುರುವಹನೆನಲ್
ಧನ್ಯನೈಸಲೆ ರಾಮಚಂದ್ರಂ! ತಪೋಬಲಂ
ಕುಶಿಕಾತ್ಮಜಂಗೆ ನಿಗ್ರಹಕಿರ್ಪೊಡಂ, ನಿನ್ನ
ತನುಜಾತರಭ್ಯುದಯಕಾಗಿ ಬಂದಿಹನಿಂದು ಕೇಳ್
ಸಾಕೇತ ಪುರಿಗೆ, ನೆರಮಂ ಬೇಳ್ಪ ಬೇಳಂಬದಿಂ.''
ಆಪ್ತವಾಕ್ಯಂಗೇಳ್ದು ಸಂತೃಪ್ತನಾಗಿ, ದೊರೆ
ಬರಿಸಿದನು, ದೂತರಂ ಕಳುಹಿ, ಲಕ್ಷ್ಮಣಸಹಿತನಾ
ರಾಮನಂ. ಪರಸುತಿರೆ ಗುರುಹಿರಿಯರೆಲ್ಲರುಂ

ಶಿರವನಾಘ್ರಾಣಿಸುತೆ, ಪೂವೆರಚಿ, ಹಿತವೇಳ್ದು,
ಶಂಖದುಂದುಭಿ ರವದ ಮಂಗಳಂ ಮೊಳಗುತಿರೆ,
ವಪು ಚಾರು ಧನ್ವಿಗಳನಾ ಪುತ್ರಯುಗ್ಮಮಂ
ಬೀಳ್ಕೊಟ್ಟನೈ ನೃಪತಿ ಯತಿಯೊಡನೆ. ಮುದದಿಂದೆ
ನಡೆ ನಡೆದು ಮುಂಬರಿದು ಆ ಮೂವರೊಂದುವರೆ
ಯೋಜನವನುತ್ತರಿಸಿ, ಸೇರೆ ಸರಯೂ ನದಿಯ
ದಕ್ಷಿಣ ತಟವನಲ್ಲಿ, ಸವಿಗೊರಳ ನೇಹದಿಂ
ನೀಡಿದನು ಕುಶಿಕತನಯಂ ರಾಮಚಂದ್ರಂಗೆ,
ಮಂಗಳಸ್ನಾತಂಗೆ, ಮಂತ್ರ ಸದ್ವಿದ್ಯೆಯಂ.
ರಘುಜರ್ ನದೀತಟದ ತೃಣಶಯ್ಯೆಯೊಳ್ ಮಲಗಿ
ಜಲದ ಜೋಗುಳವೆರಸಿ ರಿಸಿನುಡಿಯನಾಲಿಸುತೆ
ನಕ್ಷತ್ರಮಯ ವಿಪುಲಗಗನದ ವಿಭಾವರಿಯ
ಕಳೆದರಯ್, ಸುಸ್ವಪ್ನಮಯ ಸುಖದ ನಿದ್ರೆಯಲಿ.
ಪ್ರಾಚೀ ದಿಗಂಗನೆಯ ಕಣ್ದೆರಹಿನೊಳ್ಬೆಳಗೊ,
ಕನಕ ಮೇರುವನೇರಿಬಹ ತೇರನೆಳೆಯುತಿಹ
ತಪನ ಹಯ ಖುರಪುಟದಿನೆದ್ದ ಹೊಂದೂಳಿಯೋ,
ಕತಂಲೆಯನಟ್ಟಿ ಬರ್ಪಿನನ ನಾರಾಚದಿಂ
ಗಾಯಗೊಂಡಿರ್ಪಿರುಳ್ ಕಾರ್ದ ನೆತ್ತರ್ ಸೋರ್ವ
ಸೋನೆ ತುಂತುರ್ ಮಳೆಯೊ ಪೇಳೆನಲ್, ಮರುದಿನಂ
ಬೆಳಗಾದುದಿಂದ್ರ ದಿಕ್ತಟದಿ. ತುಂಬಿತ್ತೊಡನೆ
ವನದೇಶಮಂ ಲಕ್ಷಪಕ್ಷಿಯುಲಿ. ರಾಜಿಸಿತು
ಸರಯೂ ನದಿಯ ವಕ್ಷಮೋಕುಳಿಯ ಕಾಂತಿಯಿಂ
ತಳಿಸಿ. ಋಷಿಯೊಡನೆ ಮಿಂದರು ರಾಮಲಕ್ಷ್ಮಣರ್,
ಶೀತ ಸುಂದರ ಸುಖದ ಸಲಿಲದಲಿ! ಕುವರರಿಗೆ
ತಮ್ಮರಮನೆಯ ಸಿರಿಯೆ ಬಡತನಂ ತಾನಾಯ್ತುಲಾ
ಕಾಡಿನ ಸೊಗದ ಸರಿಸದಲಿ! ಬಂಡೆಯಿಂ ದುಮುಕಿ
ನೀರ್ಗೆ, ಮೇಣೊಬ್ಬರೊಬ್ಬರ ಮೊಗಕೆ ನೀರೆರಚಿ,
ನಲಿದಾಡಿದರ್ ಸ್ಪರ್ಧೆಯಿಂದೀಸಿ. "ಗುರುದೇವ,
ನಿಮ್ಮ ಕರುಣೆಯಿನೆಮಗೆ ಲಭಿಸಿತೀ ವನಸುಖಂ.
ದಾರಿದ್ರ್ಯಮಲ್ತೆ ಆ ನಾಗರಿಕ ಜೀವನಂ
ಈ ವನ್ಯ ಸಂಸ್ಕೃತಿಯ ಮುಂದೆ?" ಎಂದ ರಾಮನಂ

ಕುರಿತಾ ಮಹರ್ಷಿ ಮಂತ್ರಿಸಿದನಿಂತು:
"ದಿಟವೊರೆದೆ,
ಹೇ ವತ್ಸ, ಗಿರಿವನಪ್ರೀತಿ ತಾಂ ದೈವಕೃಪೆ ದಲ್.
ಜಗದೀಶ್ವರನ ಮಹಿಮೆ ಸಂವೇದ್ಯವಹುದಿಲ್ಲಿ
ಭವ್ಯ ಸೌಂದರ್ಯ ಶೀಲದ ವನ್ಯ ಶಾಂತಿಯಲಿ.
ಉಪನಿಷತ್ತಿನ ಮಹಾ ಮಂತ್ರಾನುಭವಗಳುಂ
ಹೃದ್ಗಮ್ಯವಿಲ್ಲಿ. ಚಿತ್ತಕೆ ಸಮಾಧಿಯನಿತ್ತು
ಹರಿದಂತ ವಿಶ್ರಾಂತ ಹರಿತ ಕಾನನಮಯಂ ತಾಂ
ಪರ್ವತಶ್ರೇಣಿ ಪರ್ವಿದೆ ನೋಡು ಶಿವನಂತೆವೋಲ್,
ಧ್ಯಾನ ಮಾಳ್ಪಗೆ ಹೃಷ್ಟರೋಮತೆಯನಿತ್ತು. ಅದೊ,
ಬಣ್ಣದ ಮುಗಿಲ್ ಗಗನ ಪಟದಲ್ಲಿ ತೇಲುತಿದೆ
ದೇವರೆ ಪೆಸರ್ ಬರೆದ ಮುದ್ರೆಯೋಲ್. ಕರೆಯುತಿದೆ ಕಾಣ್
ನಮ್ಮಾತ್ಮಮಂ ಕಲೋಪಾಸನೆಗೆ. ರಘುಜ ಕೇಳ್,
ಸೃಷ್ಟಿ ಸೌಂದರ್ಯದೊಲ್ಮೆಯೆ ಸೃಷ್ಟಿಕರ್ತಂಗೆ
ಪೂಜೆಯಯ್. ರಸಜೀವನಕೆ ಮಿಗಿಲ್ ತಪಮಿಹುದೆ?
ರಸಸಿದ್ಧಿಗಿಂ ಮಿಗಿಲೆ ಸಿದ್ಧಿ? ಪೊಣ್ಮಿದೆ ಸೃಷ್ಟಿ
ರಸದಿಂದೆ; ಬಾಳುತಿದೆ ರಸದಲ್ಲಿ; ರಸದೆಡೆಗೆ ತಾಂ
ಪರಿಯುತಿದೆ; ಪೊಂದುವುದು ರಸದೊಳೈಕ್ಯತೆವೆತ್ತು
ತುದಿಗೆ. ರಸಸಾಧನಂಗೆಯ್ಯದಿರುವುದೆ ಮೃತ್ಯು.
ಆನಂದರೂಪಮಮೃತಂ ರಸಂ!"
ಋಷಿಮಂತ್ರಮಂ
ಕೇಳ್ದು ಬಾಲಕರಾತ್ಮ ಭಾವನೋಜ್ವಲರಾಗಿ
ರವಿಗರ್ಘ್ಯಮೆತ್ತಿದರ್, ಗಾಯತ್ರಿ ಘೋಷದಿಂ
ಜೇಂಕರಿಸಲಡವಿ.
ಅಲ್ಲಿಂದೆ ಮೇಣ್ ಮುಂಬರಿದು
ಕಾಮಾಶ್ರಮಂಬೊಕ್ಕು ಋಷಿಗಳಾತಿಥ್ಯಮಂ
ಕೈಕೊಂಡು, ಮುನಿಯಿಂದೆ ಕಮನೀಯ ಕಥೆಗಳಂ
ಕೇಳುತಿರುಳಂ ಕಳೆದು, ಮುಂಬೆಳಗಿನೊಳಗೆಳ್ದು
ನಡೆದು ಗಂಗಾತೀರಮಂ ಸೇರ್ದು, ದೋಣಿಯಿಂ
ದಾಂಟಿ, ಪೊಕ್ಕರ್ ಮಹಾ ಭೀಷಣ ಭಯಂಕರದ
ನಿಬಿಡ ಘೋರಾರಣ್ಯಮಂ. ಪಳುವ ಪೊಕ್ಕೊಡನೆ

ತರುಣನೆದೆ ನಡುಗಿ ವಿಶ್ವಾಮಿತ್ರನಂ ಕುರಿತು
ಲಕ್ಷ್ಮಣಂ: "ಮೌನಶಿಲೆಯಂ ಧ್ವನಿಕ್ರಕಚದಿಂ
ಗರ್ಗರಿಸಿ ಕೊಯ್ವಂತೆವೋಲ್, ಗುರುವೆ, ಚೀರುತಿವೆ
ಜೀರುಂಡೆಗಳ್, ಕರ್ಣಕರ್ಕಶಂ. ಶಕುನಿಗಳ್
ಕೂಡೆ ಕೂಗುತಿವೆ ದುಶ್ಶಕುನಮಂ. ಕಾಡಿನೀ
ಕಳ್ತಲೆಯೊ ಕಾನನ ನಿಶಾಚರಿಯ ಕರ್ರ್ಮೊಗದ
ಪುರ್ಬುಗಂಟೆಂಬಂತೆವೋಲ್ ನೀರವಕ್ರೌರ್ಯದಿಂ
ನಿಟ್ಟಿಸಿದೆ, ನೋಳ್ಪರನಣಕಿಪಂತೆ. ಗುರುವೆ, ಪೇಳ್,
ಕಾಡಾವುದಿದಕೆ ಪೆಸರೇನ್?"
"ತಾಟಕಾ ವನಂ
ತಾನಿದು ಕಣಾ! ಋಷಿಯ ಶಾಪದಿಂ ಸುಂದಸತಿ, ಆ
ಮಾರೀಚನಬ್ಬೆ, ಜಕ್ಕಿಣಿಯಾಗಿ ಪುಟ್ಟಿ ಈ
ಪೆರ್ಬನವನಂಡಲೆಯುತಿಹಳು ತಾಟಕೆಯೆಂಬ
ಘೋರ ರಾಕ್ಷಸ ರೂಪದಿಂ."
ತೆಕ್ಕನೆಯೆ ಕೇಳ್ದುದಯ್
ಚೀತ್ಕಾರಮೊಂದು, ಗಿರಿಯಟವಿ ಚೀತ್ಕರಿಸಿದಂತೆ.
"ಅವಳೆ ತಾಟಕೆ! ಬರ್ಪಳದೊ! ಹೆದೆಗೆ ಬಾಣಮಂ
ಪೂಡಿ ನಿಲ್ಲಿಂ!" ಗುರುವಿನಾಣತಿಗೆ ಬಾಲಕರ್
ಬತ್ತಳಿಕೆಯಿಂ ತುಡುಕಿ ನಾರಾಚಮಂ, ಪೂಡಿ
ಸಿಂಜಿನಿಗೆ, ಸೆಳೆದು ನಿಂದರ್ ಜವಳಿಗಣ್ಗಳೋಲ್.
ಭೂಕಂಪ ಕಾಲದೊಳ್ ಶಿಖರದೌನ್ನತ್ಯದಿಂ
ಕಣಿವೆ ಕಿಬ್ಬಿಗುರುಳ್ದು ಬೀಳ್ವ ಪೆರ್ಬಂಡೆ ತಾಂ
ತಳ್ಪಲ್ಗಿಡುಮರಂಗಳಂ ನುರ್ಚುನುರಿಗೆಯ್ದು
ನುರ್ಗಿ ಬರ್ಪಂತೆವೋಲ್ ಬಂದಳ್ ಮಹಾಘೋಷದಿಂ
ಕಿಡಿಯಿಡುವ ರೋಷದಿಂ ಕೋರೆದಾಡೆಗಳಸುರಿ,
ತಾಟಕೆ, ಕರಾಳೆ! ಮುಡಿಗೆದರಿದಳ್ ಮುಂಗಾರೆನಲ್.
ಕೊರಳೆತ್ತಿ ಮೊಳಗಿದಳ್. ಕಣ್‌ಸುಳಿಸಿ ಮಿಂಚಿದಳ್.
ಬೀಸಿದಳ್ ದೆಸೆದೆಸೆಗೆ ಬಿರುಗಾಳಿಯಂತೆವೋಲ್.
ದಿಕ್ತಟಂಗಿಡುವಂತೆ ಧೂಳಿಯಂ ಮುಸುಗಿದಳ್.
ಆಲಿಕಲ್ ಮಳೆಗರೆದಳಾ ಮಾಯಾಮಯಿ ಕೂಟ
ಯುದ್ಧಪ್ರವೀಣೆ. ಲಕ್ಷ್ಮಣ ರಾಮರಸ್ತ್ರಾಳಿಗಳ್

ತೂರುತಿರೆ ದೆಸೆದೆಸೆಗೆ, ರಾಕ್ಷಸಿಯ ಪೀನತನು ತಾಂ
ಮಳೆಗರೆದುದಯ್, ಹೊಳೆಹೊಳೆಗಳಾಗಿ ಕೆನ್ನೀರುಗಳ್
ಪರಿಯೆ. ಬಿದ್ದಳ್ ನೆಲಕೆ ಕರ್‌ಮುಗಿಲ್ ಬೀಳ್ವಂತೆ.
ರಾಕ್ಷಸಿಯ ರೂಪವಾನುತೆ ಬಂದ ಬಿರುವಳೆಯೆ
ಹೊಯ್ದು ಹೊಳವಾದಂತೆ, ಹೊರಗೊಳಗೆ ತಿಳಿಯಾಯ್ತು
ರಾಮ ಲಕ್ಷ್ಮಣ ಋಷಿಯರಾತ್ಮಲೋಕತ್ರಯಂ.
   ಕಳೆಯುತಾ ರಜನಿಯಂ ತಾಟಕಾವನದೊಳಲ್ಲಿಂ
ಮರುದಿನಂ ಚಲಿಸಿದರ್ ಕೌಶಿಕ ತಪೋವನಕೆ.
ನಿಚ್ಚ ಪಚ್ಚೆಯ ಪಸುರ್‌ಬನದಿಂದೆಸೆವ ಮಲೆಯ
ತೋಳ್ತಳ್ಕೆಯೊಳ್, ನೀಳಿಯಾಗಸವನೆರ್ದೆಯಲ್ಲಿ
ರನ್ನಗನ್ನಡಿಯಂತೆ ತೊಟ್ಟ ವನದೇವತಾ
ಹೃದಯ ಲೋಚನಮೆನಲ್ ಮೆರೆವ ವಿಸ್ತಾರದಾ
ಸ್ಫಟಿಕ ನಿರ್ಮಲ ಸರೋವರ ಸುಭಗ ತೀರದಲಿ
ಶೋಭಿಸಿದುದಾ ಮುನಿ ನಿಕೇತನಂ.
                                        ಐತಂದರಂ
ಸಂಕಟ ನಿವಾರಕರನೀಕ್ಷಿಸಿ ತಪೋಧನರ್
ಮನೆಗೆ ಬಿಜಯಂಗೈದ ಮಂಗಳದ್ವಯಗಳಂ
ಮುದ್ದಿಸಿದರುಪಚರಿಸಿದರ್ ದಶರಥ ಕುಮಾರರಂ.
ಮರುವಗಲ್ ತೊಡಗಿದನ್ ಕುಶಿಕತನಯಂ ಯಜ್ಞಮಂ.
ದುಷ್ಟಶಿಕ್ಷಣ ದೀಕ್ಷಿತರ ರಾಮಲಕ್ಷ್ಮಣರ
ಕೋದಂಡ ಠಂಕಾರ ಮಂತ್ರ ಚಿಚ್ಛಕ್ತಿಯ
ಶರಾಘಾತಕಳಿದನ್ ಸುಬಾಹು. ಮಾರೀಚನುಂ
ಏರ್ವಡೆದು, ದೇಹಮುರುಳಲ್ ಪ್ರಾಣಮೋಡುವೊಲ್
ಕೆಟ್ಟೋಡಿದನ್. ಋಷಿಯಭೀಷ್ಟಂ ಸಿದ್ಧಿಯಪ್ಪಂತೆ
ದಿನಂ ಮೂರರೊಳ್ ಮುಗಿದುದಯ್ ಮಖಂ.
                                                ಕೆಲ ದಿನಕೆ
ಮಿಥಿಳೆಯಿಂ ಯಾತ್ರೆಬಂದುದು ಮುನಿಗಳಾಶ್ರಮಕೆ
ಧರಣಿಪತಿ ಜನಕನ ಮಹಾಕ್ರತು ಸುಕೃತವಾರ್ತೆ.
ರಾಮಲಕ್ಷ್ಮಣರೊಡನೆ ಪೊರಮಟ್ಟನಾಯೆಡೆಗೆ
ಮುನಿಪುಂಗವಂ, ವಿಧಿನಿಯಂತ್ರದಲಿ. ಹಾದಿಯಲಿ
ಹೇಳಿದನು, ಜನಕರಾಜಗೆ ದಿವಿಜ ಕೃಪೆಯಿಂದೆ

ಲಭಿಸಿರ್ಪ ಹರಧನುಸ್ಸಿನ ಕಥಾಚರಿತಮಂ.
ಕೇಳ್ದ ರಾಮಂಗೆ ಶಿವಶಕ್ತಿ ಸಂಚರಿಸಿದೊಲ್
ಪುಲಕಿಸಿತು ಮೆಯ್: ತನ್ನ ಹೃದಯೇಶ್ವರಿಯನನ್ಯ
ಕಾಪುರುಷರಿಂ ಪೊರೆವ ಹರಕೃಪಾ ರೂಪಿಯೇಂ
ಚಾಪಮಾತ್ರಮೆ ಪೇಳ್? ಶಿವೇಚ್ಛಾಪ್ರಣಾಲಿಯೆ ದಿಟಂ!
ಕಣಿವೆಗಳನಿಳಿದದ್ರಿಗಳನಡರಿ ಬರುತಿರಲ್,
ಗೌತಮನ ವಾಙ್ಮಹಿಮೆಯೋ ಮೇಣಹಲ್ಯೆಯ
ತಪೋಬಲಮೊ ಕಾಣೆನಟವಿಯ ಕುಟಿಲ ಪಥದಲಿ
ಹಠಾತ್ತೆನಲ್ ಭ್ರಷ್ಟಮಾದುದು ಪರಿಚಿತಾಧ್ವಮಾ
ಕುಶಿಕ ಸೂನುವಿಗೆ. ತಾರಾಗಣಮೆ ತೋರ್ಬೆರಳ್
ತಾನಾಗೆ, ದೆಸೆಯರಿತು, ಕಳ್ತಲೊಳೆ ನಡೆದರಯ್
ಸಾಹಸದ ಕಣ್ಣೊಹೆಯಿಂ. ಪೂರೈಸಿದುದು ರಾತ್ರಿ.
ಕಣ್ದೆರೆದಳುಷೆ ಮೂಡಣಂಬರದಿ. ಪಾಂಥರ್ಗೆ
ಗೋಚರಿಸಿತೊಂದು ಋಷಿವನ ಸದೃಶ ಕಾನನಂ.
ಪೊಕ್ಕರದನೇನೆಂಬನಾ ಮಹಾ ಶಕುನಮಯ
ದುಃಖಗರ್ಭಿತ ಮೌನಮಂ! ಹಾಡದಿವೆ ಹಕ್ಕಿ.
ನಲಿದಾಡದಿವೆ ಮಿಗಂ. ಸಂಚರಿಸದಿದೆ ಗಾಳಿ.
ತನಿಗಂಪನೀಯದಿವೆ ಮರಗೋಡಿನೊಳ್ ಮಲರ್.
ಚಲಿಸವೆಲೆ ಪುಲ್ಲೆಸಳ್. ಆವ ದುಃಖವೊ ಅಲ್ಲಿ
ಕೊನೆಗಾಣದಂತಮಂ ದಿನಮುಂ ನಿರೀಕ್ಷಿಪೊಲ್
ಮೂಗುವಟ್ಟಿರ್ದ ಬನಮೆಸೆದುದಾ ಪಥಿಕರ್ಗೆ
ಬರೆದಂತೆ ನೀರವಂ, ಕೊರೆದಂತೆ ನಿಶ್ಚಲಂ,
ನಿಶ್ಶಬ್ದತಾ ಕುಂಭಕಸ್ಥಿತಿಯ ಯತಿನಾದದೋಲ್.
ರಾಮಾಯಣದೊಳತಿಮನೋ ಋತದ ಸಂಘಟನೆ
ಸಂಭವಿಸಲಿರ್ಪ ತಾಣಂ ತಾನದೆಂದರಿವರೇಂ?
ಗೌತಮ ಮಹಾಮುನಿಯ ಶಾಪದಿನಹಲ್ಯೆ ತಾಂ
ವರ್ಷ ಶತಮಾನಂಗಳಿಂದೆ ಜಡರೂಪದಿಂ,
ನಿಷ್ಠುರ ಶಿಲಾತಪಸ್ವಿನಿಯಾಗಿ, ಕನಿಕರದ
ಕಣ್ಗೆ ಬಾಹಿರೆಯಾಗಿ, ಜಗದ ನಿರ್ದಾಕ್ಷಿಣ್ಯ
ವಿಸ್ಮೃತಿಗೆ ತುತ್ತಾಗಿ, ವಜ್ರಮೌನದ ಅಚಿನ್
ನಿದ್ರೆಯಿಂದೆಳ್ಚರುವ ಬಯಕೆಯಿಂದೊರಗಿರ್ದ

ಸುಕ್ಷೇತ್ರಮಂ ಪ್ರವೇಶಿಸಿದುದೆ ತಡಂ, ಮರುಗಿ
ಕರಗಿದುದು ರಾಮಾತ್ಮವನಿಮಿತ್ತ ಶೋಕದಿಂ.
ಕಣ್ಗಳಿಂ ಪರಿದುದಯ್ ನೀರ್. ತಾಯಿ ಕೌಸಲ್ಯೆ
ಗೋಳಿಡುತೆ ತನ್ನ ಪೆಸರಂ ಪಿಡಿದು ಕರೆವವೊಲ್
ಕಲ್ಗಳಿಂ ಪುಲ್ಗಳಿಂ ಮರಮರದ ಹೃದಯದಿಂ
ಮೂಡಿ ಕೇಳ್ದುದು ಸಂಕಟಂ ರಾಮನೊರ್ವಂಗೆ.
ಕುಳಿರ್ಗಾಳಿ ಬೀಸಲ್ಕೆ ತಳಿರ ತುದಿಯೊಳಗಿರ್ದು
ತಳಿಸುವಿರ್ಪನಿ ತರತರನೆ ಕಂಪಿಸುವ ತೆರದಿ, ಕೇಳ್,
ಸ್ಪಂದಿಸಿದುದವನ ಮೆಯ್ ಚಿನ್ಮಯಾವೇಶದಿಂ.
ಕೈವೆರಸಿ ನಡುಗಿದುದು ಪಿಡಿದ ಬಿಲ್. ಕುಣಿದತ್ತು
ಬತ್ತಳಿಕೆ ಬೆನ್ನಮೇಲ್. ತಲೆಯ ಮೇಲಾಡಿದುದು
ಕಾಕಪಕ್ಷದ ಕುರುಳ್, ಗಾಳಿಗೊಲಿಯುವ ಬಳ್ಳಿ
ಜೋಲ್ವಂತೆವೋಲ್. ವಕ್ಷಮೇದಿದುದು ಸುಯ್ಗಳಿಂ.
ಚೆಲ್ಲಿತಯ್ ತೇಜಂ ವದನದಿಂದೆ! ನೋಡುತಿರೆ,
ಬಾಹ್ಯಸಂಜ್ಞಾ ಶೂನ್ಯನೆಂಬಂತೆ ರಘುನಂದನಂ
ನರ್ತಿಸಲ್ ತೊಡಗಿದನು ಭಾವದ ಸಮಾಧಿಯಿಂ
ಮಧುಮತ್ತನಂತೆ. ಪೇಳೇನೆಂಬೆನದ್ಭುತಂ:
ಸ್ತಬ್ಧ ಗಿರಿವನ ಧರಣಿ ಸಪ್ರಾಣಿಸಿತು ಕೂಡೆ
ಚೈತ್ರಲಕ್ಷ್ಮೀ ಸ್ಪರ್ಶಮಾದಂತೆ. ಬೀಸಿದನ್
ಪುಣ್ಯಪವನಂ ತರುವರಂಗಳ ನಾಳನಾಳದೊಳ್
ಶಕ್ತಿ ಸಂಚರಿಸೆ. ತುಂಬಿತು ಕೊಂಬೆಕೊಂಬೆಯುಂ
ಫುಲ್ಲಪಲ್ಲವ ರಾಶಿ ರಾಶಿ. ಪರಿಮಳಮಯಂ
ನವರುಚಿರ ಕುಸುಮಸಂಕುಲಮೆಸೆದುವೆತ್ತಲುಂ
ಸುಗ್ಗಿಯಾಣ್ಮನ ಸಗ್ಗದೋಲಗಸಾಲೆ ಸಮೆದಂತೆ.
ಕಾಜಾಣಮುಲಿದುದಯ್. ನಲಿದುದು ನವಿಲ್. ಪಿಕಂ
ಪಾಡಿದುದು. ಪಕ್ಕಿಯಿಂಚರದೊಡನೆ ಸಂಗಮಿಸಿ
ತುಂಬಿಮೊರೆ ತುಂಬಿ ಝೇಂಕರಿಸಿತೋಂಕಾರಮಂ.
ಸುಳಿ ಸುಳಿದುವೈ ಚಿನ್ನಚುಕ್ಕಿಯ ಚಿಗರೆ ಚೆಲ್ವಾಗಿ.
ಪ್ರಾಣಮಯಮಾಯ್ತಾನ್ನಮಯ ಜಗಂ. ಭೋಂಕನೆ
ಮನೋಮಯತೆವೆತ್ತು, ವಿಜ್ಞಾನಮಯಮಂ ಪೊಕ್ಕು,
ದುಮುಕಿತಾನಂದಮಯದೊಳ್, ಕೋಶಕೋಶಂಗಳಂ

ಮೀಂಟಿ ನೆಗೆನೆಗೆದುತ್ತರಿಸಿ ದಾಂಟಿ. ತಗುಳ್ದುದಾ
ಅಲೌಕಿಕಂ ನೋಳ್ಪರ್ಗಮನುಭೂತಿ. ನೋಡುತಿರೆ,
ಚಲಿಸಿದನು ರಾಮನೊಯ್ಯೊಯ್ಯನೆಯೆ ನೃತ್ಯಶೀಲಂ,
ಮುಂದೆ. ಹಿಂಬಾಲಿಸಿದರಿತರರುಂ ಮಂತ್ರಬಲದಿಂ
ಬದ್ಧರಾದಂತೆ. ನೆರೆದುದು ಚೈತ್ರ ಸೌಂದರ್ಯಮಂ
ಬಾನತ್ತಣಿಂದಿಳಿದ ಗಂಧರ್ವ ಮಧುರಗೇಯಂ,
ಅಶರೀರ ಲಕ್ಷ ವೀಣಾ ತಂತ್ರಿಯಂ ಮಿಡಿದು
ಮೇಳಗೈದಂತೆ.
ಮೆರೆದುದು ಮುಂದೆ ಪಳುವದೊಳ್,
ವನಭಿತ್ತಿಗೆದುರಾಗಿ, ಸುತ್ತಣ್ಪೊರಲೆಯ ಪುತ್ತು
ತಬ್ಬಿರ್ದ ಕಲ್ಬಂಡೆಯೊಂದು, ಹಾವಸೆ ಹಬ್ಬಿ,
ಮುತ್ತಿದ ಬಿದಿರ್ಮೆಳೆಯ ವನಮಾತೃವಕ್ಷದಲಿ.
ಸತಿಯ ರಕ್ಷೆಗೆ ತಾನೆ ರೂಪಮಂ ತಾಳ್ದುದೆನೆ
ಪತಿಯ ಶಾಪಂ, ಶಿಲೆಯ ಮೇಲೊರಗಿ ಕಿಚ್ಚುಗಣ್ಣಿಂ
ನಿಚ್ಚಮುಂ ಕಾಪಿರ್ದ ಕರ್‌ಪಳದಿ ಪಟ್ಟೆಯಾ
ಪೆರ್ಬುಲಿಯದೊಂದು ಬರ್ಪವರ ಕಾಣಲೊಡಮಾ
ತಾಣದಿಂದೆದ್ದು ಮಿಂಚುತೆ ಕಣ್ಗೆ ಮರೆಯಾಯ್ತು.
ಋಷಿಕೃಪಾವಚನದೊಲ್ ರಾಮನೇರ್ದನು ಬಂಡೆಯಂ,
ಲಾಸ್ಯಮಂ ತೊಡಗಿ. ಒಯ್ಯನೆ ಚರಣಚುಂಬನಕೆ
ಕಲ್ಲೆ ತಾಂ ಬೆಣ್ಣೆಯಾಯ್ತೆನೆ ಕಂಪಿಸಿತು ಬಂಡೆ,
ಪ್ರೇಮ ಸಾಮೀಪ್ಯದಿಂ ಸಾನ್ನಿಧ್ಯದಿಂ ಮತ್ತೆ
ಸಂಸರ್ಗದಿಂ ತಲ್ಲಣಂಗೊಳ್ಳುವಬಲೆಯೋಲ್.
ಬಿಲ್ಲು ಬೆರಗಾಗಿ ನೆರೆದವರೆಲ್ಲರೀಕ್ಷಿಸಿರೆ,
ಬೆಂಗದಿರನುರಿಗೆ ಕರ್ಪೂರಶಿಲೆಯಂತೆವೋಲ್
ದ್ರವಿಸಿತಾ ಕರ್ಬಂಡೆಃ ದಿವ್ಯ ಮಾಯಾ ಶಿಲ್ಪಿ
ಕಲ್ಪನಾ ದೇವಿಯಂ ಕಲ್ಲಸೆರೆಯಿಂ ಬಿಡಿಸಿ
ಕೃತಿಸಿದನೆನಲ್, ರಘುತನೂಜನಡಿದಾವರೆಗೆ
ಹಣೆಮಣಿದು ನಿಂದುದೊರ್ವ ತಪಸ್ವಿನೀ ವಿಗ್ರಹಂ,
ಪಾಲ್‌ಬಿಳಿಯ ನಾರುಡೆಯ, ಕರ್ಪಿರುಳ ಸೋರ್ಮುಡಿಯ,
ಪೊಳೆವ ನೋಂಪಿಯ ಮೊಗದ ಮಂಜು ಮಾಂಗಲ್ಯದಿಂ.
ಪೆತ್ತ ತಾಯಂ ಮತ್ತೆ ತಾನೆ ಪಡೆದಂತಾಗೆ

ನಮಿಸಿದನೊ ರಘುಜನುಂ ಗೌತಮಸತಿಯ ಪದಕೆ,
ತನ್ನ ಕಾವ್ಯಕೆ ತಾಂ ಮಹಾಕವಿ ಮಣಿಯುವಂತೆ!
ಇಂದ್ರನಳುಪಿಂಗಳ್ಕಿ ಪತಿಯ ಶಾಪಕೆ ಸಿಲ್ಕಿ
ಕಲ್ಲಾದಹಲ್ಯೆಯಂ ಸಿರಿಯಡಿಯ ಸೋಂಕಿಂದೆ
ಮರಳಿ ಪೆಣ್ ಮಾಡಿದಾ ರಾಮೋತ್ತಮಾಂಗಕ್ಕೆ
ಘೇಯೆಂದು ದೇವತೆಗಳರಳುಮಳೆಗರೆದರಯ್,
ದುಂದುಭಿ ರವಂಗಳಂ ಮೊಳಗಿ. ಕಲ್ಲಾದರೇನ್?
ತೀವ್ರತಪದಿಂದೆ ಚೇತನ ಸಿದ್ಧಿಯಾಗದೇಂ
ಜಡಕೆ? ಕಲ್ಲಾದ ಪೆಣ್ಣರಕೆ ತಾಂ ಕೌಶಿಕಗೆ
ಬಟ್ಟೆದಪ್ಪಿಸಿ ಸೆಳೆಯದೇನಿಹುದೆ, ಪೇಳ್, ಚರಣಮಂ
ಶ್ರೀರಾಮನಾ? ಮುನಿಜನಂ ಪರಸಿ ಕೊಂಡಾಡುತಿರೆ
ರಾಮಪದ ಮಹಿಮೆಯಂ ತೋರ್ದಹಲ್ಯೆಯ ತಪೋ
ಗೌರವವನಾ ಗೌತಮಂ ಬಂದನಲ್ಲಿಗೆ ಶಿವಂ
ಬರ್ಪಂತೆವೋಲ್. ಕೂಡೆ ಪಾಳ್‌ಪೋಗಿರ್ದುದಾ ಬನಂ
ಪ್ರಾಣಮಯ ಪಾವನಾಶ್ರಮವಾಯ್ತು. ನೊರೆಯ ಮುತ್ತಂ
ಚೆಲ್ಲಿ ಪರಿದುದು ಮೊರೆವ ನಿರ್ಝರಿಣಿ. ಹೂ ತುಂಬಿ
ತೆಳುಗಾಳಿಗೊಲೆದು ತಲೆದೂಗಿತಾ ವನಧರಣಿ.
ಹರಿಣನಂ ಬಳಿಸಾರ್ದು ಮೊಗಂ ನೆಕ್ಕಿ ಮೆಯ್‌ತಿಕ್ಕಿ
ಸೊಗಸಿದುವು ಹರಿಣಿ! ಪದತಲಕೆ ಮುಡಿಯಿಟ್ಟಳಂ
ದಿವ್ಯ ಸಹಧರ್ಮಿಣಿಯನೆತ್ತಿ, ಕಣ್ಣೀರ್ವೊರಸಿ,
ಕರೆದನು ತಪೋಧನಂ ಹರ್ಷಾಶ್ರುವಂ. ಪೇಳ್ವುದೇಂ
ರಾಮನಾನಂದಮಂ? ಗೌತಮಾಲಿಂಗನದಿ
ಮೈಮರೆದನಯ್, ಭಕ್ತಿಯಪ್ಪುಗೆಗೆ ಭಗವಂತನೋಲ್.
ಕಳೆಯುತಾ ರಾತ್ರಿಯಂ ಗೌತಮಾಶ್ರಮದಲ್ಲಿ
ಮುಂದೆ ನಡೆದರು ಮಿಥಿಲೆಗಾಗಿ. ನಾನಾ ಕಥಾ
ಶ್ರವಣದಿಂದಧ್ವಶ್ರಮಂಗಳಂ ನೀಗುತಂ,
ಬ್ರಹರ್ಷಿ ವಚನ ತತ್ತ್ವಾಮೃತವನೀಂಟುತಂ,
ಪ್ರಕೃತಿ ಸೌಂದರ್ಯ ರತಿಯಿಂಪನನುಭವಿಸುತಂ
ಬರಬರಲ್ ಶೋಭಿಸಿತು ಮುಂದೆ, ಸಂಪತ್ತಿನಿಂ
ಶ್ರೀಯುತ ಕುಬೇರನಲಕಾವತಿಗೆ ಮಲೆತುದೆನೆ
ರಂಜಿಸುತ್ತಿರ್ದಾ ವಿದೇಹದ ರಾಜಧಾನಿ.

ರಾಮಂಗೆ ಪುಳಕಿಸಿರೆ ಮೆಯ್ ಚಿತ್ತದೆಚ್ಚರಕೆ
ತಿಳಿಯದಿಂಪಿಂದೆ, ಪೊಕ್ಕರ್ ಮಹಾ ಮಿಥಿಳೆಯಂ,
ಮುತ್ತುರತ್ನಕೆ ಶರಧಿಯಂ ಪುಗುವರೋಲ್. ಜನಂ
ಕಿಕ್ಕಿರಿದು ಸುರಿದುದು ವಿದೇಶ ದೇಶಂಗಳಿಂ
ಜನಕರಾಜನ ಮಖದ ಸಂಭ್ರಮಕೆ. ಪಟ್ಟಣದ
ಬೀದಿಯಲಿ ಕೌಶಿಕನೊಡನೆ ರಾಮಲಕ್ಷ್ಮಣರ್
ಸಾಗುತಿರೆ, ಮಂದಿ ನಿಂದುದು ದಿಟ್ಟಿನಟ್ಟು, ಕೇಳ್,
ಬಾಲಕರ ಭದ್ರಾಕೃತಿಗೆ ಕಣ್ಮನಂ ಸೋಲ್ತು.
ದೊರೆಯಾಳುಗಳ್ ಬಂದು ಪೊಳೆವತಿಥಿಗಳ್ಗೆರಗಿ
ಜನ್ನಸಾಲೆಯ ಬಳಿಯ ಪಂದಳಿರ ಪಂದರದಿ
ಸಮೆದ ಬೀಡಾರಕವರಂ ಪುಗಿಸಿ, ಪರಿದರ್
ಮಹರ್ಷಿ ವಿಶ್ವಾಮಿತ್ರನಾಗಮನ ವಾರ್ತೆಯಂ
ರಾಜರ್ಷಿಗರುಹಲ್ಕೆ. ಕೇಳ್ದೊಡನೆ ಬಂದನಾತಂ;
ಪೊಕ್ಕನಾ ಪರ್ಣಕುಟಿಯಂ. ಚಂದ್ರಸೂರ್ಯರ್ವೆರಸಿ
ಗಗನಮಿರ್ಪಂತೆ ಲಕ್ಷ್ಮಣರಾಮರೊಡನಿರ್ದ
ಕೌಶಿಕಂಗೆರಗಿದನ್: 'ಧನ್ಯನಾಂ, ಪುಣ್ಯಮಾಯ್ತಾ
ಮಿಥಿಲೆ.' ಸಂಭಾಷಿಸುತ್ತಿರೆ, ನೃಪನ ಕಣ್‌ಪರಮೆ
ರಾಮ ರೂಪದ ಚಾರು ಕುಟ್ಮಲಾಕರ್ಷಣೆಗೆ
ಸಿಲ್ಕಿರ್ದುದಂ ಕಂಡು, ನಸುನಗುತೆ ಕುಶಿಕತನಯಂ
ನುಡಿದನಿಂತಾ ಜನಕರಾಜನ ಕಿವಿಗೆ ಜೇನು
ಹೊಯ್ವಂತೆ:
"ಮಹಿಮೆ ಮಹಿಮೆಯ ಕಣ್ಗೆ ಮರೆಯಹುದೆ,
ರಾಜರ್ಷಿ? ಸದೃಶರೊಳ್ ನೆಟ್ಟುದಯ್ ನಿನ್ನ ಚಿತ್ತಂ.
ರಾಮ ಲಕ್ಷ್ಮಣರಿವರ್ ದಶರಥನ ಮಕ್ಕಳ್ ಕಣಾ."
ಎಂದು ಮೊದಲಾಗವರ ಸಿರಿಮೆಯ್ಮೆಗಳನೊರೆದು
ಮತ್ತೆ "ನೃಪವರ, ಹರನ ಕೋದಂಡಮಂ ತೋರ್ಪ
ನೆವದಿನಿವರಂ ತಂದೆನೀಯೆಡೆಗೆ. ತೋರಿಸಾ
ಶಿವಚಾಪಮಂ. ಕಣ್ದಣಿಯೆ ಕಾಣ್ಗೆ. ಮರಳವೇಳ್ಕುಂ
ಬೇಗಮಾ ಕೋಸಲಕೆ. ಕಾತರದಿ ಕಾಯುತಿಹರ್ಮೈ
ತಂದೆ ತಾಯ್ವಿರ್. ದಶರಾತ್ರಿಯವಧಿಯಂ ಪೂಣ್ದು
ಕರೆತಂದೆನಿವರನೆನ್ನಾ ಯಜ್ಞಮಂಗಳಕೆ."

ಮುನಿವರನ ನುಡಿಗೇಳ್ದನವನಿಪತಿ. ಸುಖರಸಂ
ತೀವಿದಾ ತನ್ನ ಹೃದಯವನೊರೆಯಲಾಶಿಸಿದ
ಜನಕನಿಂಗಿತವರಿತು ಕೌಶಿಕಂ ಕುವರರಿಗೆ
ಸನ್ನೆಗೆಯ್ದನ್, ಬಳಿಯೆ ಕಂಗೊಳಿಸುತಿರ್ದೊಂದು
ನಗುವ ಪೂದೋಂಟಮಂ ತೋರ್ದು. ಕಿವಿಮರೆಯಾಗೆ
ರಾಮ ಲಕ್ಷ್ಮಣರೊರೆದನವನೀಶನಿಂತು ಮನಮಂ:
"ತಿಮಿರದಿ ತೊಳಲ್ವಂಗೆ ತಣ್ಗದಿರನೈತಂದು
ಸೊಡರ್ವಿಡಿದವೋಲಾಯ್ತು ನಿನ್ನ ಬರವಿಂದೆನಗೆ,
ಮುನಿವರೇಣ್ಯ. ರಾಮನಂ ಕಂಡೆನಗದೇನಾಯ್ತೊ
ಪೇಳಲರಿಯೆಂ. ಮಲರ್ದ್ದುದು ಬಾಡಿದೊಂದಾಶೆ.
ಯಜ್ಞಾರ್ಥಮೊರ್ಮೆ ನಾಂ ನೆಲನನುಳುತಿರಲಲ್ಲಿ
ಕುಳದ ನೇಗಿಲ್‌ಗೆರೆಯ ಬೈತಲೆಯ ಬಟ್ಟೆಯೊಳ್
ರನ್ನದೊಟ್ಟಿಲೊಳಿರ್ದ ಶಿಶುರತ್ನಮಂ ಕೊಂಡು,
ಪೆಣ್ಗೂಸದಂ ಮಗಳ್‌ಗೆತ್ತು ಸಲಹಿದೆನೊಲಿದು
ಸೀತೆಯೆಂಬಭಿಧಾನಮಂ ಪ್ರೀತಿಯಿಂ ತೊಡಿಸಿ.
ರತಿ ಮನ್ಮಥರ ಮಾತೆಯೆಂಬಂತೆ ಬಳೆದಳು ಕುವರಿ
ಪಾರ್ಥಿವ ಕುಮಾರ ಕಂದರ್ಪರಾ ಕಣ್ಮೀನ್ಗಳಂ
ಸೆಳೆಯುವ ಸರೋವರದ ಚಾರು ನೀರೇಜದೋಲ್.
ಪಂತದಿಂ ಪಾಡಿನಿಂದೊಬ್ಬರೊಬ್ಬರ ಕಾಡಿ
ಕರುಬಿಂದೆ ಬಂದರಿಲ್ಲಿಗೆ ಧರಾಪುತ್ರಿಯಂ
ಕೈವಿಡಿಯೆ ಬೇಡಿ, ಮೇಣ್ ಬಲ್‌ಪಡೆಗಳಂ ಕೂಡಿ,
ಏಗೆಯ್ಯಲರಿಯದಾಂ ಹರನನರ್ಚಿಸುತಿರಲ್:
ಶಿವಕಾರ್ಮುಕವನೆತ್ತಿ ಕೊಪ್ಪಿಗೇರಿಸಿ ನಾರಿಯಂ,
ನಾರಾಚಮಂ ಪೂಡಿ, ಕಿವಿವರೆಗೆ ಸೆಳೆದೆಸುವ
ವೀರಂಗೆ ನೀರೆಯಂ ಧಾರೆಯೆರೆಯೆಂದೊರೆದುದೈ
ವಾಣಿ. ಬಂದರಸರ್ಗೆ ದೇವವಾಣಿಯನರುಹಿ
ವೀರಶುಲ್ಕೆಯನಾಗಿ ಸಾರಿದೆನಯೋನಿಜಾ
ಕನ್ಯೆಯಂ. ವಜ್ರದುರ್ಕಿನ ಮೇರುಭಾರದಾ
ರುದ್ರ ಕೋದಂಡಮಂ, ಗುರುವೆ, ನಾನಿನ್ನೆಗಂ
ಕಾಣೆನಲುಗಾಡಿಸಿದ ಸಾಹಸಿಗರಂ, ಕೇಳಾ
ವೀರನೊರ್ವಂ ವಿನಾ! ಲಂಕಾಪುರವನಾಳ್ವನಾ

ದಶಶಿರ ಬಿರುದುವೊತ್ತಂ, ರಾವಣನಿದಂ ಕೇಳ್ದು
ಬಂದನಿಲ್ಲಿಗೆ ಪುಷ್ಪಕಾರೂಢನಾಗಿ, ಕೇಳ್,
ಗೆಲ್ದು ಸೀತೆಯನುಯ್ವ ಕಳ್ಗೆ ಮಿದುಳಂ ಮಾರಿ.
ರುಂದ್ರ ರಾಕ್ಷಸ ಮೂರ್ತಿಯಂ ಕಂಡು ಗೋಳಿಟ್ಟಳಯ್
ಸೀತೆ. ರೋದಿಸಿತಖಿಲ ಮಿಥಿಲೆಯುಂ, ಕೋಮಳೆಗೆ
ಬೇಡುತೆ ಮಹಾದೇವನಂ. ಪರಶಿವನ ಕೃಪೆ ಕಣಾ!
ಪರ್ವತೋಪಮ ಕರ್ಬುರಂ ದಿಗ್ಗಜದ ಮಾಳ್ಕೆಯಿಂ
ನೆಲಂ ನಡುಗೆ ಜಗ್ಗಜಗ್ಗನೆ ನಡೆದು, ಕೈತುಡುಕಿ
ನೆಗಹಿದನ್ ಹರಧನುವನಸು ಗದ್ಗದಿಸೆ ಜಗಕೆ.
ಗೊಲೆಗೆ ಹೆದೆಯೇರುತಿರೆ, ಸೀತೆಯ ಸುಕೃತವಲಾ,
ಚಾಪ ಭಾರಕೆ ಕರಂ ತತ್ತರಿಸಿ, ತನು ಬೆವರಿ,
ಚಿತ್ತ ಪಲ್ಲಟವಾಗಿ, ಕೈಲಾಸಮಂ ಪಿಡಿದು
ತೊನೆದ ದೈತ್ಯಂ ಕುಸಿದು ಬಿದ್ದನು, ಪರ್ವತಾಗ್ರಂ
ಪ್ರಳಯದಶನಿಗೆ ಕೆಡೆದು ಬೀಳ್ವಂತೆ! ಲಂಕೇಶ್ವರಂ
ತನ್ನ ಬಿಂಕದ ಭಂಗಕುರೆ ಮುಳಿದು ಪಿಂತಿರುಗಿದನ್,
ಮತ್ತೆ ತಪದಿಂ ಬಲ್ಮೆಯಂ ಪಡೆದು ಬಹೆನೆಂಬ
ಕಡು ಸೂರುಳಂ ಗುಡಗುಡಿಸಿ ಪೂಣ್ದು. ಗುರುವೆ, ಕೇಳ್,
ದಶಕಂಠನತಿದೃಢ ಮನಸ್ಕನಯ್. ಇನ್ನೊಮ್ಮೆ ಆ
ರಕ್ಕಸಂ ಬರ್ಪ ಮುನ್ನಮೆ ಮನುಜವೀರಂಗೆ ನಾಂ
ಕುವರಿಯಂ ಕೊಡುವ ಕಾತರ ಮನದಿ ಕುದಿಯುತಿರ್ಪೆಂ.''

ಅತ್ತಲಾ ಪೂದೋಂಟದೊಳ್ ಮದನನೊಡಗೂಡಿ
ಮಧುನೃಪಂ ವಿಧಿವಿಲಾಸಕೆ ತನ್ನ ಕೈಂಕರ್ಯಮಂ
ಸಲ್ಲಿಸುವ ಸಿರಿಗಜ್ಜದೊಳ್ ತೊಡಗಿ, ನೋಟದಿಂ
ನೋಟಕ್ಕೆ ನಡೆದು, ಸಿಂಗರಿಸಿದನು ಬೇಟಮಂ
ಪೊತ್ತಿಸುವ ಸಿರಿಯ ರಾಗಂಗಳಿಂ ಗಂಧಂಗಳಿಂ,
ಮಿರುಮಿರುಗಿ ಮೆರೆವವೊಲ್, ಕರೆವವೊಲ್, ತರತರದ
ಪೂವೆಲೆಗಳಂ. ಬಂದಳಲ್ಲಿಗೆ ಸೀತೆ, ತಂಗೆಯರ್
ಊರ್ಮಿಳಾ ಮಾಂಡವಿ ಶ್ರುತಕೀರ್ತಿಯರ್‌ವೆರಸಿ,
ಗಿಳಿವಿಂಡನಣಕಿಸುವವೋಲ್, ಬಣ್ಣದೆಲೆಗಳುಂ
ಪೂಗಳುಂ ನಾಣ್ಚಿ ತಲೆಬಾಗುವೋಲ್. ಕಾಲಪುರುಷಂ
ರೋಮ ಹರ್ಷಿತನಾಗುವಂತೆ ಮೈಥಿಲಿ ನಿಂದು

ನೋಡಿದಳ್, ಮಲ್ಲಿಗೆಯ ಹೊದರ ಮರೆಯಿಂ, ಕೊಳನ
ತಿಳಿನೀರ್ಗೆ ಕಲ್ಲೆಸೆಯುವಾಟದಲಿ ಲಕ್ಷ್ಮಣನ
ಕೆಲನಿರ್ದ ರಾಮ ಮೋಹಕ ಮೂರ್ತಿಯಂ. ಮೊಗಂ
ಬೆಟ್ಟದಾವರೆಗೆ ಬೈಗಾದವೋಲೋಕುಳಿಯ
ರಾಗಮಂ ತಳೆದುದಾಕೆಯ ಮನೋರಾಗಮಂ
ಪ್ರತಿಬಿಂಬಿಪೋಲ್. ನಿತ್ಯಮುಂ ತನಗೆ ಕನಸಿನೊಳ್
ಕಾಣುತಿರ್ದಾ ನೀಲದೇಹನಂ ವಿಸ್ಮಯದಿ
ನೋಡಿದಳ್, ಕಣ್‌ಸಿಲ್ಕಿ, ಪೆಸರರಿಯದಜ್ಞಾತನಂ,
ರೂಪವಾರಾಶಿಯಿಂದೆದ್ದ ರವಿಮದನನೊಲ್
ರಮಣೀಯನಂ. ಜನಕನೌರಸ ಕುಮಾರ್ತೆಯರ್
ಕಾರಣವನರಿಯಲೆಳಸಲ್, ಸೀತೆ ನಿಡುಸುಯ್ದು,
ಕಡುಸೇದೆಯಿಂದಲ್ಲಿ ನಿಲ್ಲಲಾರದೆ ತಿರುಗಿ
ನಡೆದಳರಮನೆಗೆ. ಊರ್ಮಿಳೆ ಕಣ್ಣನೊರಸಿದಳ್.
ಅಕ್ಕರೆಗೆ ತಬ್ಬಿ ತನ್ನಕ್ಕನಂ, ಪೇಳಕ್ಕ ಪೇಳ್,
ದುಗುಡಮೇಕೆಂದಳುತೆ ಕೇಳಲ್ಕೆ, ಇಂತೊರೆದಳಾ
ವೈದೇಹಿ ತನ್ನಾತ್ಮಮಂ:
"ತಂಗೆ, ನಾನಿನ್ನೆಗಂ
ಪೇಳ್ದನಿಲ್ಲೊಂದಾತ್ಮವಿಷಯಮಂ. ಬಾಲ್ಯದಿಂ, ಕೇಳ್,
ನನಗರ್ಥವಾಗದೊಂದನುಭವಂ ತಾಂ ನಿಚ್ಚಮುಂ
ಬಂದೆನ್ನನೊಳಕೊಳ್ವುದವ್: ಗಗನ ಮಂಡಲಮೆ
ಬಂದೆನ್ನ ಮೆಯ್ಯಪ್ಪುತೆರ್ದೆಯೊಳಗೆ ಸೇರ್ವಂತೆ;
ಕಡಲುಕ್ಕಿ ಮೇರೆ ಮೀರುತೆ ಪಾಯ್ದು ಮುಳುಗಿಸಲ್
ನಾನೆ ಕಡಲೊಡತಿಯಪ್ಪಂತೆ; ಪೃಥಿವಿಯೆ ಕರಗಿ
ಪೆಣ್ ಪಸುಳೆಯಾಗುತೆನ್ನಯ ತೊಡೆಯ ತೊಟ್ಟಿಲೊಳ್
ಸಲಿವಂತೆ; ತೊರೆ ಬನಂ ಭೂಮಿ ಬಾನ್ ಗಿರಿಪಂಕ್ತಿ
ಪಗಲಿರುಳ್ ಚುಕ್ಕಿ ತಿಂಗಳ್ ನೇಸರೆಲ್ಲಮುಂ
ಮೆಯ್ಯಾಗುತಾಂ ತ್ರೈಭುವನ ಲಕ್ಷ್ಮಿಯಪ್ಪಂತೆ.
ಬೆದರಿದೆನ್ ಮೊದಮೊದಲ್. ಪೇಳಲೆಂದೆಳಸಿದರೆ
ತೊದಲಾಯ್ತು. ಮೂಗಿ ಕಂಡದ್ಭುತದವೋಲಾಯ್ತು
ಕೇಳನುಭವಂ! ಲಂಕೆಯಧಿಪತಿ ದಶಾನನಂ
ನಮ್ಮಯ್ಯನೆಡೆಗೆ ಹರಚಾಪಮಂ ಮುರಿಯಲ್ಕೆ

ಬಂದ ದುರ್ದಿನದಂದು ರಾತ್ರಿ, ಶಶಿಮೌಳಿಯಂ
ಕಣ್ಣೀರ್ಗಳಭಿಷೇಕದಿಂದೆ ಜಾನಿಪವೊಲ್ತು,
ಮತ್ತೊಮ್ಮೆ ತನಗಾದುದನುಭವಂ, ಏನೆಂಬೆನಾ
ತಿರೆ ಕಡಲ್ ಚುಕ್ಕಿ ಬಾನುಗಳೆಲ್ಲವೊಂದಾಗಿ
ನನ್ನ ಮೆಯ್ಯಗ್ಗವತರಿಸಿದೋಲ್. ಪ್ರಜ್ಞೆ ನಿದ್ರಿಸಿರೆ,
ನಿಃಸಂಜ್ಞಳಾದೆನಗೆ ಕಣಸಾದುದಾ ದರ್ಶನದಿ
ಮೈದೋರ್ದುದೀ ಸರ್ವ ಲೋಕ ರಮಣೀಯತಾ
ನೀಲ ಮೇಘ ಶ್ಯಾಮಮೂರ್ತಿ. ಆ ರಾತ್ರಿಯಿಂ
ದಿನದಿನಂ ಸ್ವಪ್ನದೊಳ್ ಗೋಚರಿಸಿತಾ ವಿಗ್ರಹಂ.
ಗುರುತಿಸಿದೆನಾ ರೂಪಮಂ ನಮ್ಮ ಪೂದೋಂಟದೊಳ್
ಕೊಳನ ತಡಿಯೊಳ್ ನಿಂದ ಗಗನೋಪಮಾಂಗದಾ
ನೀಲ ಕಾಂತಿಯ ತರುಣ ವಿಗ್ರಹದಿ.''
                                        ಮಿಥಿಳೇಂದ್ರ
ಧರಣಿಸಂಭೂತೆ ಊರ್ಮಿಳೆಯೊಡನೆ ಮಾತಾಡಿ
ಮುಗಿವನಿತರೊಳ್ ಕೆಳದಿಯರ್ ಬಂದರೋಡೋಡಿ;
ತಂದರಿಂಪಿನ ವಾರ್ತೆಯಂ: ''ಅಕ್ಕ, ನೀನಲ್ಲಿ
ಕಂಡವಗೆ ರಾಮನೆಂಬಭಿಧಾನಮಿಹುದಂತೆ!''
''ರವಿಕುಲದರಸು ದೇವ ದಶರಥ ಪುತ್ರನಂತೆ!''
''ತಾನಯೋಧ್ಯೆಗೆ ಸ್ವಾಮಿಯಹನಂತೆ!'' ''ಬಿಲ್ಮುರಿಯೆ,
ನಿನಗವನಿನಿಯನಂತೆ!'' ''ಬಲ ಪರೀಕ್ಷೆಗೆ ನಾಳೆ
ದಿನವಂತೆ!'' ''ಏಳಕ್ಕ! ಬಾರಕ್ಕ! ಬಿಲ್ ಮುರಿವವೋಲ್
ಪಾರ್ವತಿಯನಾರಾಧಿಪಂ!'' ''ದಿಟಂ ಶಿವನ ಸೋಲ್!''
    ಹರ ಶರಾಸನವಂತೆ! ತೆಗೆ, ಪರೀಕ್ಷೆಯದೇಕೆ
ತಾನೊಲಿದ ನಲ್ಲಂಗೆ? ಜಗದೇಕ ವೀರಂಗೆ
ಪದ್ಧತಿಯ ಪಾಳ್ ತೊಡರುಮೆಡರೇಕೆ? ತುಕ್ಕಡರಿ
ಮುರಿಯಲಾ ರುದ್ರಚಾಪಂ!- ಎನುತೆ ಸೀತಾಕನ್ಯೆ
ಮನದಿ ನೆನೆದಳೊ, ಮರೆತು ತನ್ನನಂದಿನವರೆಗೆ
ಬೇರೆ ಬಣಗರಸರಿಂ ಮತ್ತೆ ಲಂಕೇಶನಿಂ
ದಶರಥ ತನುಜಗಾಗಿ ಕಾಯ್ದಿತ್ತದೆಂಬುದಂ.
ಹಿಂದೆ ರಾವಣನಂದು ಬಂದಾಗಳ್ 'ಓ ಧನುವೆ,
ಕಾಪಾಡು ಬಾಲೆಯಂ; ಕೈಮುಗಿವೆ ಕಾಲ್ಗೆರಗಿ;

ಮುರಿಯದಿರ್; ಬಾಗದಿರ್; ಸುರಮೇರು ಭಾರದಿಂ
ದೈತ್ಯನೆತ್ತದ ತೆರದಿ ಭಾರಗೊಂಡಬಲೆಯಂ
ಪೊರೆ'- ಎಂದೆರೆದ ತರುಣಿ ತಾನಿಂದು-'ಹಗುರಾಗು
ಗರಿಯಂತೆ; ಬಾಗು ಬಳ್ಳಿಯ ತೆರದಿ; ರಾಮಂಗೆ
ಮುರಿದು ಬೀಳ್, ಓ ಧನುವೆ!' ಎಂದು ಪರಿಪರಿಯಿಂದೆ
ಬಿನ್ನಹಂಗೈದಳೆನೆ, ನಿಂದಾ ಸ್ತುತಿಗಳೆಲ್ಲಮಾ
ಸಮಯವರ್ತಿಗಳಲ್ತೆ? ರಾಮನ ಬಲಕೆ ತನ್ನ
ಪ್ರೇಮದ ಬಲವನೀಯಲೆಂದು ನೋಂಪಿಯ ನೋಂತು
ಹೃತ್‌ಪದ್ಮದಿಂದೆ ಭೂಜಾತೆ ಗಿರಿಜೇಶನಂ
ಪೂಜಿಸಿದಳಾ ರಾತ್ರಿ, ನಿದ್ದೆ ನೈವೇದ್ಯಮಂ
ನೀಡಿ.
ತಳಿರಿದುದು ಮುಂಬೆಳಗಿಂದ್ರದಿಕ್ತಟದಿ.
ನೆರೆದುದು ಜನಂ ಜನ್ನಸಾಲೆಯಲಿ. ತಿಮಿರಾರಿ
ಮೈದೋರಿದನು, ತನ್ನ ಸಂತಾನದೇಳಿಗೆಗೆ
ಕಾರಣಂ ತಾನಪ್ಪ ಸಾಹಸವನೀಕ್ಷಿಸುವ
ವಾತ್ಸಲ್ಯದುದ್ವೇಗದಿಂದರುಣಮುಖಿಯಾಗಿ,
ಮೂಡುವೆಟ್ಟಿನ ಮುಡಿಯ ಕೋಡಿನಲಿ. ಬಹುಮಂದಿ
ಬಲಶಾಲಿಗಳ್ ತಿಣಿಕಿ ತಂದಿಟ್ಟ ಕಾರ್ಮುಕದ
ಭೀಮ ಭೀಷ್ಮತೆಯುಜ್ವಲಿಸಿದತ್ತು ರೌದ್ರಮಾ
ತರುಣ ನವ ತರಣಿಯ ಕಿರಣದರುಣದಾತಪದಿ.
ನೆರೆದ ಮಹಿಳಾ ಜನದ ಮಧ್ಯೆ ತರುಣಿಯರೊಡನೆ
ಚಿತ್ತದುದ್ವೇಗ ಶೂಲದ ಮೇಲೆಯೆಂಬಂತೆ
ಕುಳಿತಿರ್ದ ಧರಣಿಜೆಗೆ ಗದಗದಿಸಿತೆದೆ, ತನ್ನ
ಮನದನ್ನ ರಾಘವನ ವಿಜಯ ವಿಷಯದಿ ಶಂಕೆ
ಭರವಸೆಗಳುಯ್ಯಾಲೆಯಂ ತೂಗಿ. ನೋಡುತಿರೆ,
ಕೌಶಿಕನ ಪಾರ್ಶ್ವದಿಂದೆದ್ದನು ರಘೂದ್ವಹಂ,
ಮಖಧೂಮ ಮುಖದಿಂ ಶಿಖಿಜ್ವಾಲೆಯೇಳ್ವವೋಲ್.
ನಯನಾಭಿರಾಮನಂ ಕಂಡೊಡನೆ ಘೇ ಉಘೇ
ಉಲಿದು ಕೈಪರೆಯಿಕ್ಕಿತಯ್ ಜನಂ. ತುಂಬುಹೊಳೆ
ಮರವಿಡಿದು ಕಾಡಾದ ದಡಗಳೆರಡರ ನಡುವೆ
ಮುಂಬರಿಯುವಂತೆ, ನಡೆದನು ರಾಮನಿಂಬಾದ

ಗಾಂಭೀರ್ಯದಿಂ, ಹರಧನುವಿನೆಡೆಗೆ. ಮರುಗಿದುದು
ಸೌಮ್ಯನಂ ಕಂಡು ಮುದುಕರ ಮನಂ; ತಾಯ್ವಿರ್ಗೆ
ಕರಗಿದತ್ತೆರ್ದೆ: ಚಂದ್ರಚೂಡ ಕೋದಂಡದೆಡೆಯೊಳ್
ಲಲಿತ ರಾಮನ ಬಾಲ ಮೂರ್ತಿಯಂ ನೋಡಿ 'ಹಾ!
ಧನುವೆಲ್ಲಿ? ಶಿಶುವೆಲ್ಲಿ? ಸಿಡಿಲೆತ್ತ? ಹೂವೆತ್ತ?
ಕಾಳಾಹಿಯಂ ಹರಿಣಶಿಶು ತಿವಿದು ಕೋಡಿಂದೆ ತಾಂ
ಕೊಲಲಹುದೆ? ಗೆಲಲಹುದೆ? ಬರ್ದುಕುವುದೆ? ಹಾ!' ಎಂಬ
ಲಲನೆಯರ ಹೆಂಗರುಳ್ ಕುದಿಯೆ, ಹೋಹಾತನಂ
ಕಂಗಳಿಂದಪ್ಪಿದರೊ, ಸೊಬಗನಾಲಿಂಗಿಪೋಲ್, ಮೇಣ್
ಅಶುಭಮಂ ಪರಿಹರಿಪವೋಲ್! ಭೈರವ ಮುಹೂರ್ತಮಂ
ಸರ್ವೇಂದ್ರಿಯಂಗಳಿಂ ಚಿತ್ತದಿಂದಾತ್ಮದಿಂ
ಸಂವೀಕ್ಷಣಂಗೈದು ನೆರೆದಿರ್ದ ಪರಿಷತ್ತು
ನಿಶ್ಯಬ್ದತೆಯ ಕಡಲೊಳಳ್ದತ್ತು, ಬಣ್ಣದೊಳ್
ಕೆತ್ತಿ ಬರೆದಂತೆ. ಶಾಂತಿಸ್ಥೈರ್ಯಧೈರ್ಯನಿಧಿ ತಾಂ
ಶ್ರೀರಾಮನಾ ಧನುವಿನೆಡೆ ನಿಂತದರ ಮಹಾ
ಗಾತ್ರಮಂ ದೃಷ್ಟಿಸಿದನಾಪಾದಮಸ್ತಕಂ,
ತನ್ನಳವನದರ ಬಲ್ಮೆಗೆ ತೂಗಿ ನೋಳ್ಪಂತೆ.
ಕಿರುನಗೆಯ ಮಲರ ಸುಳಿವೊಂದರಳುತಿರೆ ಮೊಗದಿ,
ತಿರುಗಿ, ದಿಟ್ಟಿಯನಟ್ಟಿ, ನೆರೆದ ಸಭೆಯಂ ಕುರಿತು
ಕೈಮುಗಿದನೊರ್ಮೆ. ಮನದೊಳೆ ಮಣಿದು ಗುರುಜನಕೆ
ಕೈಮುಗಿದನಿರ್ಮೆ. ಶಂಕರ ಚರಣ ಪಂಕಜಕೆ
ಬಗೆಯ ಪೂಜೆಯ ಸಲಿಸುತಕ್ಷಿಪಕ್ಷಿಯನಟ್ಟಿ
ಪೀತಾಂಬರವನುಟ್ಟ ಲಲಿತಾಂಗಿಯರ ಮಧ್ಯೆ
ತರತರದ ರನ್ನದೊಡಮೆಯ ಪೊಗರನೇಳಿಸುತೆ,
ಹಸುರು ಕಾಡಿನೊಳಸುಗೆ ಹೂವಂತೆಸೆಯುತಿರ್ದಾ
ತನ್ನ ಮೀನಾಕ್ಷಿಯಂ ಮೈಥಿಲಿಯನೊಯ್ಯನೆಯೆ
ಕೋಮಳ ಕಟಾಕ್ಷದಿಂದೀಕ್ಷಿಸಿ, ಶರಾಸನಕೆ
ತಿರುಗಿದನ್ ಮತ್ತೆ. ಬಿಲ್ಲಿಗೆ ಬಾಗಿ, ಹಣೆಚಾಚಿ
ನಮಿಸಿ, ನಿಮಿರ್ದನ್ ಪ್ರಾಣಮಯನಾಗಿ.
                                        ಪೇಳಲೇಂ?
ರವಿಕುಲನ್ ಮಣಿದೇಳುತಿರೆಯಿರೆ ಹಠಾತ್ತನೆಯೆ

ರಾರಾಜಿಸಿತು ಜಾನಕಿಯ ಕಣ್ಗೆ ಶಿವಮೂರ್ತಿ ತಾಂ
ಕೋದಂಡದಿಂ ಮೂಡಿ ಮೈದೋರಿ! ಶಶಿಧರಂ,
ಫಣಿಭೂಷಣಂ, ದೇವ ಗಂಗೋತ್ತಮಾಂಗಂ,
ಪಿಂಗಲ ಜಟಾಜೂಟ ಕೂಟಂ, ತ್ರಿಣೇತ್ರಂ,
ವಿಭೂತಿ ಶೋಭಿತ ಕಳೇಬರನ್, ಇಭ ದುಕೂಲಾಂಗಿ,
ಶಂಕರ ಭಯಂಕರ ಪಿನಾಕಿ, ಕೇಳ್, ಕರವೆತ್ತಿ
ಪರಸುತಿಕ್ಷ್ವಾಕು ಕುಲ ಸಂಜಾತನಂ, ಕಾರ್ಮಿಂಚು
ಮೋಡದೊಳಡಗುವಂತೆ ಮರೆಯಾದನೊರ್ಮ್ಮೊದಲೆ
ಚಾಪ ಮಧ್ಯದೊಳೈಕ್ಯಮಾಗಿಃ

ಐರಾವತಂ

ದೇವೇಂದ್ರನಂ ಪೊತ್ತು ದಿಕ್ಪಾಲ ಪುರಗಳಿಗೆ,
ಮತ್ತೆ ವೈಕುಂಠಕ್ಕೆ, ಮತ್ತೆ ಕೈಲಾಸಕ್ಕೆ,
ಸತ್ಯಲೋಕಕೆ, ಮತ್ತೆ ತೆರಳುತಲ್ಲಿಂ ಮರಳಿ
ಬರ್ಪುದಮರಾವತಿಗೆ, ಸುರವಾದ್ಯ ನಿಸ್ವನಕೆ
ಬಿಂಕದಿಂ ಬೀಗಿಃ ಬೀಳ್ಕೊಳುತ್ತಿರಲಿಂದ್ರನಂ
ವರುಣಾಂ ಸ್ವಹಸ್ತದಿಂದಮೆ ತನ್ನ ಮೈಮೇಲೆ
ಕೈಯನಾಡಿದನಲ್ತೆ? ಅಗ್ನಿ ನೀಡಿದನಲ್ತೆ
ತನ್ನಂಗಳದ ಮರದ ಮಾಂದಳಿರ ಚೆಂದೊಂಗಲಂ?
ಮೇಣಾ ಕುಬೇರನುಂ ಸೊಂಡಿಲ್ಗಳಂ ನೀವಿ
ಸೋಂಕಿಗೆ ಸೊಗಂಬಡೆದನಲ್ತೆ? ಮಾಹೇಶ್ವರಂ
ಬೆಳ್ಳಿಬೆಟ್ಟದ ತಳ್ಪಲೆಳೆವುಲ್ಲನೆಳೆದಿತ್ತು
ರತ್ನಖಚಿತಂ ದೀರ್ಘದಂತಂಗಳೆರಡುಮಂ
ಬಣ್ಣಿಸಿದನಲ್ತೆ? ತನಗಾರು ಹೊಯಿಕಯ್ಯೆಂದು,
ಬೇರೆಬೇರೆಯ ಲೋಕದಾಹಾರಮಂ ಸವಿದ
ತೃಪ್ತಿಗೆ ಮನಂ ಮಿಕ್ಕು, ಶಚೀದೇವಿಯರಮನೆಯ
ಮರಕತದ್ವಾರದೆಡೆ ಸಗ್ಗದೊಡೆಯನನಿಳಿಸಿ,
ಕನಕ ಶೃಂಖಲೆಯಿಂ ಬಿಡುತೆಗೊಂಡು, ಸ್ವೇಚ್ಛೆಯಿಂ
ಪರಿತಂದು, ರತ್ನಧೂಳಿಯ ಮಳಲ ಪಾತ್ರದೊಳ್
ಪ್ರವಹಿಸುವಮರನದೀ ದುಗ್ಧ ತೀರ್ಥದೊಳೊಡನೆ
ದುಮ್ಮಿಕ್ಕುವುದು, ಸುಧೆಯ ತೆರೆ ದಡಕ್ಕವ್ವಳಿಸಿ
ಮೊರೆಯೆ. ಆ ಪಾಲ್ಗಲ್ಲ ಪೆರ್ಬಂಡೆ ಪಾಲ್ವೊಳೆಯ

ಮಿಂದು, ನಂದನ ವನದ ಕಲ್ಪದ್ರುಮಕೆ ನಡೆದು
ಬಂದು, ಮೆಯ್ ತಿಕ್ಕುವುದು ಕ್ರೀಡಾ ವಿನೋದದಿಂ.
ದೈತ್ಯಾಕೃತಿಯ ದೇವತರು ಬೃಹನ್ಮಸ್ತಕಂ
ಶಾಖೋಪಶಾಖಾ ಪ್ರಸಾರ ವಿನ್ಯಾಸದಿಂ
ತೂಗಿ ತೊನೆದಪುದೆಡಕೆ ಬಲಕೆ. ಚೀರ್ವುದು ದಿವಿಜ
ಖಗವೃಂದಮಿಂದ್ರನಾನೆಯ ಘೀಂಕೃತಿಯ ರವಕೆ
ಬೆರ್ಚಿ ಗಾರಾಗಿ. ಹೆಬ್ಬಳ್ಳಿ ಹಂಬುವ ತೆರದಿ
ಹೆಮ್ಮರನ ಮೆಯ್ಗೆ, ಕಲ್ಪದ್ರುಮದ ಗಾತ್ರಮಂ
ತನ್ನ ನೀಳ್ದಿರ್ಕೆದು ಸೊಂಡಿಲ್ಗಳಿಂ ಸುತ್ತಿ,
ಕ್ಷೀರ ಫೇನ ಶ್ವೇತ ಗೀರ್ವಾಣ ವಾರಣಂ
ಮತ್ತ ವೈಖರಿಯಿಂದೆ ಜಗ್ಗಿಸೆಳೆವುದು, ಮರಂ
ಬಳ್ಳಿಯಾಗುತೆ ಬಳ್ಕುವಂತೆ!

ರಘುಕುಲ ಖಮಣಿ
ಬಿಳಿಯಾನೆ ಸೊಂಡಿಲಂದದ ನೀಳ ತೋಳಿಂದೆ
ತುಡುಕಿದನು ಕಲ್ಪಭೂರುಹ ಸದೃಶ ಚಾಪಮಂ
ಸೀತಾಫಲದ ಬಯಕೆಯಿಂದೆ. ಬಾಗಿದುದ್ ಬಿಲ್,
ಹಂಬಿನೋಲ್. ಹೆದೆ ಏರಿದುದು. ಪೂಡಿ ಬಾಣಮಂ
ಸೆಳೆಯುತಿರೆ ಕಿವಿಯನ್ನೆಗಂ, ಕಬ್ಬು ಮುರಿವಂತೆ
ಮುರಿದುದಾ ಹರನ ಧನು ತಾಂ ಸಿಡಿಲ ಸದ್ದೊದರಿ.
ಜಾನಕಿಯ ಸುಖದಕ್ಷಿಯಿಂದಿಕ್ಷುರಸಧಾರೆ
ಸೋರ್ದುದಯ್. ಹರ್ಷವೀಚಿಗಳವ್ವಳಿಸಿದವೋಲ್
ಘೋಷಿಸಿತು ಘೇ ರವದೊಳಾ ನೆರೆದ ನರಶರಧಿ.
ಬಿಡದೆ ಪೂವಳೆ ಬಿಳ್ದುದಾಲಿಕಲ್ ಕರೆವಂತೆ,
ತರತರದ ಪರಿಮಳದ ಮೇಣ್ ವಿವಿಧ ವರ್ಣದಾ
ವರ್ಷ ಶೈಲಿಯಲಿ! ಹರ್ಷಾಶ್ರು ಸುರಿಯುತಿರೆ, ಜನಕಂ
ತಡೆಯಲಾರದೆ ತುಂಬಿ ತುಳುಕುವ ಮಧುರ ಸುಖಕೆ
ಋಷಿಪದಕೆ ಮಣಿದನಯ್, ಕೃತಜ್ಞತಾಭಾರದಿಂ
ಬಾಗಿ. ಹುಟ್ಟಿಯನುಳಿದ ಹೆಜ್ಜೇನ ಹುಳುಹಿಂಡು
ದಟ್ಟಯಿಸಿ ಮೊರೆವಂತಿರಿರ್ದ ಜನ ಸಂದಣಿಯ
ನಡುವೆ ನಡೆದಪ್ಪಿದನು ರಘುಕುಲೋದ್ದೀಪನಂ,
ತನ್ನಿಷ್ಟದೇವತೆಯನಾಲಿಂಗಿಪಂತೆವೋಲ್.

ಅನಿತರೊಳ್, ಸಂಭ್ರಮಿತ ಸಖಿಯರ ನಡುವೆ, ಸೀತೆ ತಾಂ
ಕರದೊಳ್ ವಿಜಯಮಾಲೆಯಂ ಪಿಡಿದು, ಮೋಹಿನಿಯೊ
ತ್ರೈಭುವನ ರತಿಯೊ ವೈಯಾರ ಸುಂದರಿಯೊ ಮೇಣ್
ತುಹಿನ ಗಿರಿಶಿವ ಶಿರದ ಮಾನಸ ಸರೋವರದಿ
ಸಂಭವಿಸಿ ವನದೇವಿಯರ ಸೇವೆಯೊಳ್ ಸಂದು
ಮುಂಬರಿದು ಸಾಗರನನಪ್ಪುವಾ ತವಕದಿಂ
ಪ್ರವಹಿಪಾ ಜಾಹ್ನವಿಯ ಹೊನಲೊ ಹೇಳೆಂಬಿನಂ
ಹರಿದು ಬಂದಳು ರಾಮ ಮನ್ಮಥ ಶರಧಿತಟಿಗೆ.
ಪೊಣ್ಮುತಿರೆ ಸುಖರಸದ ಮಧುರ ಮಂಗಳ ಗೀತೆ
ವಾದ್ಯ ವೈವಿಧ್ಯ ವಿದ್ಯಾಶ್ರುತಿಯ ನಣ್ಪಿಂದೆ,
ರಾಮಂಗೆ ಮಾಲೆಸೂಡಿದಳೊ ಸೀತಾಕನ್ಯೆ,
ಭೂರಮೆ ಸಮುದ್ರಂಗೆ ಬೆಳ್ದೆರೆಗಳಂ ಕೋದು
ಪೂದಂಡೆವೋಲ್ ಗೈದ ಬಾನ್ದೊರೆಯ ದಾಮಮಂ
ಹಾಯ್ಕಿದಳೆನಲ್ಕೆ!
ವಿಶ್ವಾಮಿತ್ರ ಮುನಿವರಂ
ಸಮ್ಮತಿಸೆ, ಮಿಥಿಳೇಂದ್ರನಾಜ್ಞೆಯಂತಾಳುಗಳ್
ಸಾಕೇತಪುರಿಗೆಯ್ದಿದರ್, ಮೂರಿರುಳ್ ಮೂರ್ಪಗಲ್
ನಿಲ್ಲದೆ ಪಯಣಗೈದು. ಸುತರಾಗಮನ ಚಿಂತೆ
ಮಸಗಿರ್ದ ದಶರಥಗೆ ಬಿನ್ನೈಸಿದರ್ ಶುಭದ
ವಾರ್ತೆಯಂ. ಕಡಲುಕ್ಕುವಂತುಕ್ಕಿತು ಅಯೋಧ್ಯೆ.
ಸಂತಸಕೆ ತಡಿಯಿಲ್ಲದಾದಳಾ ಕೌಸಲ್ಯೆ
ಮಗನಭ್ಯುದಯಕೆ: ನೆನೆದಳು ಬಗೆಯಲಂಪೇರೆ
ಚೆಲ್ವಿನೊಲ್ವಿನ ಸೊಸೆಯ ಗುಣಶೀಲರೂಪಮಂ,
ಮಗನ ಮಂಗಳ ಮೂರ್ತಿಯೆಡೆಯಲ್ಲಿ! ಪಡೆವೆರಸಿ,
ಪರಿವಾರದೊಡನೆ, ಮಕ್ಕಳ್ ಕೂಡಿ ಮಹಿಷಿಯರ್
ಗುರು ಮಂತ್ರಿ ಬಂಧು ಬಾಂಧವ ಮುಖ್ಯಪೌರರುಂ
ಬರಲೊಡನೆ, ದಶರಥಂ ತಾನೆಯ್ದಿದನು ಮಿಥಿಳೆಯಂ
ನಾಲ್ಕೆ ದಿನಮಣಿ ಮುಳುಗುವನಿತರಲಿ. ಬೀಗರಂ
ವಿಭವದೊಳಿದಿರ್ಗೊಂಡು ಸಂಭ್ರಮಿಸಿತಯ್ ಮಿಥಿಳೆ.
ನಿಮಿವಂಶಜರ ಕೂಡೆ ಕೊಳುಕೊಡೆ ರವಿಕುಲರ್ಗೆ
ಪಣೆಗೆ ತಿಲಕಂ ಬಂದ ತೆರನಾದುದೆಂಬಂತೆ

ಸಮನಿಸಿತು ಮದುವೆ ಸೀತಾರಾಮರಿಗೆ. ಭೂಮಿ
ನಲಿದತ್ತು. ಸೊಗಸಿದುದು ದೇಶದೇಶದ ಜನಂ,
ಸಂಭ್ರಮಕೆ ಸಂಭ್ರಮವೆ ಸಂಘಟಿಸಿತೆಂಬಂತೆ,
ಕಲ್‌ಸಕ್ಕರೆಗೆ ಜೇನು ಸೋರ್ದಂತೆ. ನೆಲದೆರೆಯ
ಜನಕ ರಾಜನ ಹೃದಯದಿಂಗಿತಕೆ ಮನಮೊಪ್ಪಿ
ಸೌಮಿತ್ರಿಯೂರ್ಮಿಳೆಯನೊಪ್ಪಿದನ್, ಹೂಗೆಲಸಿ
ಸುಗ್ಗಿಮೊಗ್ಗನ್ನಪ್ಪುವಂತೆ. ಶತ್ರುಘ್ನಂಗೆ, ಕೇಳ್,
ಶ್ರುತಕೀರ್ತಿ ತಾನಾದಳೊಲ್ಮೆವೆಂಡಿತಿ. ಕೈಕೆ ತಾಂ
ಮಾಂಡವಿಯನೆರ್ದೆಯನ್ನಳಂ ಪಡೆದಳೈ ತನ್ನ
ಸುಂದರ ತನೂಜ ಭರತಂಗೆ.
                                        ಇಂತೊಚ್ಚತಂ
ಪಗಲೇಳುಮಿರುಳೇಳುಮೆಸೆದತ್ತು ಬಿರ್ದಿನೊಸಗೆ,
ಬರ್ದಿಲರೂರಂ ಸೂರೆಗೊಳ್ವಂತೆ. ತರುವಾಯಮಾ
ಮಿಥಿಳೆಯಿಂ ಸಾಕೇತಪುರಕೆ ನಡೆದುದು ಮದುವೆಯಾ
ದಿಬ್ಬಣದ ಮೆರವಣಿಗೆ. ಹೇಳಲದನೇಸೆಂಬೆ?
ನೆಲದರಸರಿರ್ವರ ಸಿರಿಗಳೊಂದುಗೂಡಿದೊಡೆ
ಶಿವಸಖ ಕುಬೇರಂ ಪುರಂದರಗೆ ಕೈಗೊಟ್ಟು
ಅಮರೆಯಿಂದಲಕೆವಯಣಂ ನಡೆವೊಲಾಯ್ತಲಾ
ಮರುದಿಬ್ಬಣದ ಮೆರವಣಿಗೆ ಜಾತ್ರೆ.
                                        ಪಟ್ಟೆಮಡಿ
ತೇರಾನೆ ರನ್ನಗಂಬಳಿ ಗೋವು ಕಾಲಾಳು
ಮುತ್ತು ಪವಳಂ ತೊತ್ತು ಮೊದಲಪ್ಪ ತರತರಂ
ಸಿರಿಯ ಬಳುವಳಿವೊತ್ತು, ಜನಕನೃಪನಂ ಮರಳಿ
ಮಿಥಿಳಾ ಪುರಿಗೆ ಬೀಳುಕೊಟ್ಟು, ದೊರೆವಟ್ಟೆಯಂ
ಪಿಡಿದು ಮಂಗಳವರೆಯ ನಾದಕ್ಕೆ ನಡೆನಡೆಯೆ
ನಿಡುವೊಸಗೆ, ತೆಕ್ಕನೆಯೆ ತೋರ್ದುವುತ್ಪಾತ ತತಿ:
ಶಕುನಿ ಚೀರಿದುವು ದುಶ್ಶಕುನಮಂ; ಜನಕೆ ಕಣ್
ಕಂಪಿಸಿತು; ಕುದುರೆ ಕೆನೆದುವು ರೋದಿಪಂದದಲಿ.
ಬೆದರುತಿರೆ ದಶರಥಂ ಬೀಸತೊಡಗಿತು ಗಾಳಿ
ಬಿರುಸಾಗಿ. ಭೂಮಿಯದಿರಿತು. ಪಣ್ಣಿಡಿದ ಮರಂ
ತಿರೆಗುರುಳಿದುವು ಲಕ್ಕಲೆಕ್ಕದಲಿ. ನುಂಗಿದುದು

ಕೃಷ್ಣ ಜಲಧರ ರಾಹು ರವಿಯಂ. ಚತುರ್ದಿಕ್ಕುಗಳ್
ಕಳ್ತಲೆಯ ಕಾಡಿಗೆಯ ಮೆತ್ತಿನಿಂದಿಲ್ಲಾದುವಯ್.
ರೋಷಭೀಷಣವಾಯ್ತು ಸಿಡಿಲುಮಿಂಚಿಟ್ಟಳಂ
ಕರ್‌ಧೂಳಿ ಬೊಮ್ಮಮಂ ಪರ್ವಿ. ಮೈ ಮರೆಯುತಿರೆ
ಸೇನೆ, ಸಂಮ್ಮೋಹ ಭಸ್ಮವನೆರಚಿದರೆನಲ್ಕೆ,
ಕಾಣಿಸಿತ್ತದ್ಭುತಂ ದಶರಥ ದೊರೆಯ ಕಣ್ಗೆ:
ಕಾರ್ಗೆ ಕಾಯಂ ಮೂಡಿದಂತೆ ಮೂಡಿತು ಮುಂದೆ
ಭೃಗುವಂಶಿ ಜಮದಗ್ನಿತನಯ ಭೈರವ ಮೂರ್ತಿ,
ಕಂಡರ್ಗೆ ಬರ್ದುಕು ಕಳವಳಿಸೆ. ಕಾಲಾಗ್ನಿಯೊಳ್
ಮುಳುಗುತೆ ಹದಂಗೊಂಡ ಕಾಳಾಹಿಸಂಕುಲಂ
ಜೋಲ್ವಂತೆ ಜೋಲ್ದುವು ಜಟಾಳಿ. ಭೀಷ್ಮತೆವೆತ್ತು
ರಂಜಿಸಿತು ಹೆಗಲಿನೊಳ್ ಕೆಂಗೊಡಲಿ. ಕೈಗಳಲಿ
ಮಿಂಚಿದುವು ವಿಷ್ಣುಕೋದಂಡ ಬಾಣಾಳಿಗಳ್,
ಕಣ್ಗೆರಿಯುವಂತೆ. ಬೆಚ್ಚಿರೆ ಸೈನ್ಯ ಸರ್ವಮುಂ,
ಶ್ರೀರಾಮನೊರ್ವನೆಯೆ ತನ್ನೊಸಗೆದೇರಿಳಿದು
ನಡೆದಂ ಶರತ್ಕಾಲ ಸುಪ್ರಸನ್ನತೆಯಂತೆವೋಲ್,
ಕೊಡಲಿಗೊರವನ ಕಡುಪಿನೆಡೆಗೆ. ತವಿದುದೊ ಗಾಳಿ.
ಪರಿದುದೊ ಮುಗಿಲ್ ಕೂಡೆ. ಪರಶುರಾಮನ ಮೊಗಕೆ
ಮಲರಿದುದೊ ಮುಗುಳುನಗೆ! ಶೈಶವ ಸರಲ ಶಾಂತಿ
ಸೌಂದರ್ಯಗಳ್ಗೆ ಸೋಲದರೊಳರೆ ಲೋಕದೊಳೆನಲ್
ರಾಮಂಗೆ ತಾಂ ಮೆಚ್ಚುಗೊಟ್ಟನು ವಿಷ್ಣುಚಾಪಮಂ
ಜಮದಗ್ನಿಸೂನು, ಲೋಕಂ ನಿನ್ನಿಂದಮಾವಗಂ
ನಿರ್ವಿಘ್ನಮಕ್ಕೆಂದು ಪರಸಿ. ಸುಡಲೆಂದು ಕಿಡಿ ತಾಂ
ಬರಲೊಡಂ, ಪಿಡಿಯಲದೆ ಮಾಣಿಕಮಾಗಿ, ಬಡತನಂ
ಪೋಪಂತೆ ಪೋದನಾ ಪರಶುರಾಮಂ. ದಶರಥಂ
ಪಿರಿಯ ಮಗನಂ ತಬ್ಬಿ ಮೂಸಿದನು ಮಂಡೆಯಂ,
ಬಗೆಯಲಂಪಿಂಗೆ ಕಣ್ ತೊಯ್ವಿನಂ. ಒಸಗೆ ನಡೆದುದು
ಮುಂದೆ ಸಾಕೇತಪುರಕಾಗಿ. ಪನ್ನೀರಿರ್ಪಿನಿಂ
ತಣ್ಣಸಂಬಡೆದಿರ್ದು ನಲ್‌ಗಂಪುವೆತ್ತಲರ
ಹರಹಿಂದೆ ಮೇಣ್ ತೋರಣ ಪಸುರ್ಪಿಂದೆ ಸಿಂಗರಂ

ಬಡೆದಿರ್ದ ಬೀದಿಗಳಲೆಲ್ಲೆಲ್ಲಿಯುಂ ಕಿಕ್ಕಿರಿದ
ಮಂದಿ, ಬದ್ದವಣದಿಂ ಮೇಣ್ ಸುಸ್ವರಸ್ವಾಗತದ
ಸಂಗೀತದಿಂ, ವಧೂವರರನಿದಿರ್ಗೊಂಡುದಯ್,
ಶಶಿಯುದಯಸಮಯಾಬ್ಧಿ ವಾಹಿನಿಯನಾಲಿಂಗಿಪೋಲ

ಸಂಚಿಕೆ ೩

# ಮಮತೆಯ ಸುಳಿ ಮಂಥರೆ

ಪೆಣ್ಣೊಲಿದ ನಲ್ಲನಿರೆ, ಗಂಡೊಲಿದ ನಲ್ಲೆಯಿರೆ,
ಸಿರಿಬಾಳ್ತೆ ಸಿಂಗಾರಸೊಗಕೆ ಹೊಯಿಕೈಯಿಹುದೆ ಪೇಳ್
ಬದುಕಿನಲಿ? ಲಲಿತೆ, ಓ ಮದನಮೋಹಿನಿ ರತಿಯೆ,
ನಿನ್ನಾದಿ ತಾರುಣ್ಯ ಕಾಲದಾರಂಭಮಂ
ಪೊಸಕೆಂದು ಪೊಸವೊಲ್ಮೆವೇಟಂ ತಗುಳ್ದಂದು
ನೀಂ ಮದನನಧರಕ್ಕೆ ಮುತ್ತೊತ್ತಿದಾ ಇಂಪೆ
ತಾನಾವಗಂ ಮರಳಿಮರಳಿ ಮಲರುತೆ ಚಿರಂ
ಸೊಗವೀವುದಲ್ತೆ ನವ ನಿಖಿಲ ದಂಪತಿಗಳ್ಗೆ?
ತಿಂಗಳ್ಗೆ ತೇನೆಯೊಲಿವಂತೆ ಸೀತಾಕಾಂತೆ
ತೇಲಾಡಿದಳು ತನ್ನ ರಮಣನಾನಂದಕ್ಕೆ
ತನ್ನೆಲ್ಲಮಂ ನಲಿದು ನೈವೇದ್ಯಮಂ ನೀಡಿ,
ತನ್ನತನವನೆ ಸೊನ್ನೆಮಾಡಿ. ತಾನೊಲಿದಂಗೆ
ಪ್ರಾಣೇಶ್ವರಂಗಿಷ್ಟಮೂರ್ತಿಗಾದರ್ಶಕ್ಕೆ ಪೇಳ್
ಪ್ರಾಣಾರ್ಪಣಂ ಗೈವ ಸೊಗದಿಂ ಮಿಗಿಲ್ ಸೊಗಂ
ತಾನೊಳದೆ? ಪೋ! ಸಗ್ಗಕೇಂ ಕೋಡುಂಟೆ ಬೇರೆ?
ಶ್ರೀರಾಮಪ್ರೇಮದೊಳೆ ಕಂಡಳ್ ಜನಕಜಾತೆ
ಜೀವನದ ಪರಮ ಪುರುಷಾರ್ಥಮಂ, ಮೇಣಖಿಳ
ಸೃಷ್ಟಿಲೀಲಾ ಮಹೋದ್ದೇಶಮಂ. ಬರಿದಲಾ
ಪ್ರಕೃತಿ ಸೌಂದರ್ಯಮಿನಿಯನ ಚೆಲ್ವುವೆರಸದಿರ್ಪಾ
ಪೆಣ್ಗೆ! ಸನ್ನಿನಿಯನಾನನ ಸರೋವರಜಲದಿ
ಮಲರುತಿಹವಲ್ತೆ ತಾವರೆ ನೇಸರುದಯದಲಿ?
ಚಲಿಸುತಿಹವಲ್ತೆ ಮೀಂಗಳದೊ ತಾವರೆಯೆಸಳ

ನಡುವೆ? ಝೇಂಕರಿಸದೆಯೆ ತೇರ್ಕೈಸುತಿಹವಲ್ತೆ
ಕರಿದುಂಬಿವಿಂಡು? ತ್ರೈಭುವನ ಸೌಂದರ್ಯಕಾ
ಮುಖಮದೆ ಮುಕುರಮಲ್ತೆ?- ವೈದೇಹಿಯಿರಲಿಂತು
ರಘುರಾಮಚಂದ್ರನಿನಿಯಳ ಜೀವದೀವಿಗೆಗೆ
ತೈಲಮುಂ ಕಾಂತಿಯುಂ ತಾನಾಗಿ ರಸವಾಹದೊಳ್
ತೇಲುತಿರ್ದನು ತನ್ನ ತಾಯ್‌ತಂದೆಯರ್ಗೊಂದು
ಬಾಳ್‌ದೋಣಿಯಂತೆವೋಲ್. ತಿರೆಮಗಳ ಚೆಲುವಲರ
ಬಂಡಿಡಿದ ಬಟ್ಟಲಂ ಪೀರ್ದನೆರ್ದೆತುಟಿಯಿಂದೆ
ತಣಿವಿನಂ ತನ್ನಾತ್ಮತೃಷ್ಣೆ. ಕಣ್ಣೆವೆಯಿಡದೆ
ನೋಡಿದನು ಶೃಂಗಾರ ಸಾರ ಸಂಪೂರ್ಣೆಯಂ:
ದಂತ ಸುಸ್ನಿಗ್ಧ ಕಾಂತಿಯ ತನುರುಚಿರ ಕಾಂತೆ
ಕಮ್ಮನೆಯ ಬಿಸಿಯ ನೀರಂ ಮಿಂದು ಕೆಂಪೇರ್ದು,
ಬಾನ ಬಣ್ಣದ ತಿಳಿಯ ನೀಲಿಯ ದಳಿಂಬಮಂ
ನಿರಿಯುಟ್ಟು, ಪೊರವಾರ್ಗಳೆಲ್ಲೆಯಂ ದಾಂಟಿ ಮುಡಿ
ಸೋರ್ವಂತೆ ಕರ್ಪುಗುವ ಧಮ್ಮಿಲ್ಲಮಂ ಬಿರ್ಚಿ
ನೇಲ್ಗೆದರಿ ಮೆರೆಯೆ, ನೋಡಿದನು ಕಣ್ಣೆವೆಯಿಡದೆ
ಸೌಂದರ್ಯಸುಖದಿಂ ಸಮಾಧಿ ದೊರೆಕೊಂಡನೋಲ್!
ನಲಿಯುವನ್ ನೋಡಿ ಕಣ್ದುಂಬಿ. ದನಿಯಂ ಕೇಳ್ದು
ಸವಿಯುವನ್. ಪುಳಕಿಸುವನೆರ್ದೆಮೆಯ್ಯ ಸೋಂಕಿಂಗೆ
ಹರವಸತೆವೆತ್ತು. ಕಾಲ್ಗೆಜ್ಜೆ ನೇವುರ ಬಳೆಯ
ಹೊನ್ನೊಡವುಗಳ ಕಿಂಕಿಣಿಗೆ, ಚಾತಕಂ ಮಳೆಗೆ
ಹಾರ್ವಂತೆ, ಹಾರಿದಪನಾಲಿಸಿ ಮರಳಿಮರಳಿ
ದನಿಯನಾಕರ್ಣಿಸಲ್ಕಾಟಿಸುತ್ತೆ. ಧರಣಿಜೆಯ
ಪುಣ್ಯಾತ್ಮಮಂ ಪ್ರೀತಿಸಿದವೋಲೆ ಸೀತೆಯಾ
ಸುಂದರ ಶರೀರಮಂ ಪ್ರೀತಿಸಿದನಾ ರಾಮನೆನೆ
ದೇಹಾತ್ಮ ಭೇದಮಂ ಪೇಳ್ ಮಿಥ್ಯೆಗೊಳಿಸದೆ ರಸದ
ದೃಷ್ಟಿ. ಕಾಯಕೆ ಕಣ್ಗಳೆರಡಿರ್ಪ ಮಾಳ್ಕೆಯಿಂ
ದ್ವೈತಮಿರ್ದುದು ಸೀತೆರಾಮರೊಳಗದ್ವೈತಿ
ತಾನಾಗಿ! ಕಣ್ಗಳೆರಡಾದರೇನೊಂದಲ್ತೆ ಪೇಳ್
ದೃಷ್ಟಿ ತಾಂ? ಮೆಯ್ಗಳೆರಡಾದಡೇನೊಲಿದರ್ಗೆ
ಬಾಳ್ವೆಯೊಂದಲ್ತೆ?

ಸೀತಾರಾಮರಿರಲಿಂತು
ಸೊಗದ ಪಾಲ್ಜೇನಿನೊಳ್ ತೇಲ್ದು ಬಾಳ್ದೋಣಿಯಂ,
ಭೋಂಕನೆಯೆ ಮಂಥರೆಯ ಮಮತೆಯ ಸುಳಿಗೆ ಸಿಲ್ಕಿ
ರಸದೋಡಮಳ್ದುದಯ್. ಸುಖನೌಕೆ ಮುಳುಗಲಾ
ನೌಕೆಯಂ ಮುಳುಗಿಸಿದ ಸುಳಿಯೆ ಸುಟ್ಟುರೆಯಾಗಿ
ತಿರ್ರನೆ ತಿರುಪಿ ಬಾನ್ಗೆ ಬೀಸಿದುದು ಸುಖಿಗಳಂ
ಜನಕಜಾ ರಘುಜಾತರಂ. ಕಡೆಯದೆಯೆ ಕೇಳ್ ಬೆಣ್ಣೆ
ಹೊಮ್ಮುವುದೆ? ಮೂಡುತಿರ್ದುವೆ ಮಹಾಮತ್ನಗಳ್, ಪೇಳ್,
ಮಥಿಸದಿರೆ ಮಂಥರೆಯ ವಾಸುಕಿಮಹಾಮಮತೆ ತಾಂ
ಕೈಕೆಮನ್ದರದಿಂದಮಾ ತ್ರೇತಾ ಸಮುದ್ರಮಂ?
ಪೆಳರ್ದುದು ಅಯೋಧ್ಯೆ ವಿಸ್ಮಯ ಭಯಾಶ್ಚರ್ಯದಿಂ
ತಾನೊಂದಿರುಳ್ ಅರಿಲ್ ತುಂಬಿದಾಗಸದೊಳೊರ್ಮ್ಮೊದಲೆ
ದೀಪ್ತಮಂ ದೀರ್ಘ ಲಾಂಗೂಲ ಕೇಶಾನ್ವಿತಮುಮಂ
ಕಂಡು ಮಹದುಲ್ಕೆಯಂ. ಕರ್ದಿಂಗಳಾಗಸದ
ಕರ್ಮಣಿಯ ಕುಟ್ಟಿಮದಿ ಕೆದರಿರ್ದ ಪೂಗಳಂ
ಗುಡಿಸಲೆಂದಿರುಳವೆಣ್ ಕೈಲಾಂತು ನಿಡುನೀಳ್ದ
ಕೆಂಗೆಂಡದುರಿಯ ಸಮ್ಮಾರ್ಜನಿಯೊ, ಪೊಳ್ತಿಳಿಯೆ
ಕಳ್ತಲೆಯ ದಾರಿನಡೆಯಲನಂತ ಯಾತ್ರಿಕಂ,
ಕಾಲಪುರುಷಂ, ಪಿಡಿದ ಪೊಂಜೊ ತಾಂ ಪೇಳೆಂಬಿನಂ
ನೆತ್ತರುರಿಗೂದಲಂ ಬೀಸಿ ರಂಜಿಸುತಿರ್ದ ಆ
ಭೀಷ್ಮ ಭೀಷಣ ಧೂಮಕೇತುಗೆ ಜನಂ ಬೆರ್ಚಿ
ನರಳ್ದುದಕಟಾ ಕೋಸಲಕೆ ಕೇಡಪ್ಪುದೆಂದಳ್ಕಿ.
ಆ ಭಯಂಕರ ಗಗನಶಕುನಮಂ ನೋಡಿ, ದೊರೆ
ದಶರಥಂ ತನ್ನ ಕೊನೆಗದೆ ಬಾನ್ಬರೆಪಮೆಂದು
ಬಗೆದು, ಪಿರಿಯಂಗೆ ರಾಮಂಗೆ ಪಟ್ಟಂಗಟ್ಟಿ
ಬೇಗದಿಂದಿರದೆ ತಾಂ ಪಾರಲೌಕಿಕದೆಡೆಗೆ
ತನ್ನಾತ್ಮಮಂ ತಿರುಗಿಸಲ್ಕೆಳಸಿ, ಸಚಿವರಂ
ಗುರುಗಳಂ ಪ್ರಜೆಗಳಂ ಕರೆದೊರೆದನಿಂತುಟಾ
ತನ್ನಿಷ್ಟಮಂ:
"ಕೋಸಲ ಹಿತ ಕ್ಷೇಮ ಚಿಂತಕರೆ,
ಪೋದಿರುಳ್ ಬಾನಿನೊಳ್ ಬಿದಿ ಬರೆದುದೋದಿದೆನ್,

ನಕ್ಷತ್ರಲೇಖನಿಯ ದಿವ್ಯಾಗ್ನಿ ಲಿಖಿತಮಂ.
ಪ್ರಾಕೃತ ಘಟನೆಗಳ್ಗೆ ಪ್ರಕೃತಿಕಾರಣದಂತೆ
ದೇವಕಾರಣಮಿರ್ಪುದೆಂದು ಗುರು ಕಲಿಸಿದನ್
ನನಗೆ. ರವಿಕುಲನೃಪರ ಸಾಮ್ರಾಜ್ಯ ಭಾರಮಂ
ಪೆರತು ಮುಡುಹಿಂಗಿಟ್ಟು ವಿಶ್ರಾಂತಿಗಾಟಿಸುತೆ
ಪೇಳ್ವೆನಾಲಿಪುದು ತಾಳ್ಮೆಯ ಮನಃಪ್ರೀತಿಯಿಂ:
ತನ್ನ ಮಗನಂ ತಾನೆ ಹೊಗಳಿದೊಡೆ ಒಲವರಂ
ಪಿತೃಗೆಂಬರ್. ಆದೊಡಂ ಗುಣಕೆ ಮಚ್ಚರಮೇಕೆ?
ಶ್ರೀರಾಮನಾಹ್ಲಾದ ರೂಪಿ. ಔದಾರ್ಯ ನಿಧಿ.
ನಿರಸೂಯೆಯಿಂ ಸರ್ವರನುರಾಗ ಭಾಜನಂ.
ಕಲಿ. ಮತ್ಸರವಿದೂರನತ್ಯಂತ ಶಾಂತಿಖನಿ.
ಪ್ರಿಯಭಾಷಿ. ಹಿತಸಖಂ. ಮಿತಮಾರ್ಗಿ. ಧೀರವಶಿ.
ನಗುಮೊಗದ ಸಂಯಮಿ. ಕೃತಜ್ಞತಾ ಮೂರ್ತಿ. ಮೇಣ್
ಜ್ಞಾನಿ. ಸಜ್ಜನಪ್ರೇಮಿ. ಸೂಕ್ಷ್ಮ ಮತಿ. ಪಂಡಿತಂ.
ಶ್ರುತಿವಿದಂ; ಸುವಿಚಾರಿ; ನಿತ್ಯಂ ಪ್ರಜಾಪ್ರೇಮಿ!
ಸುಸ್ಥಿರಂ; ಸಂಬುದ್ಧ ಪ್ರಜ್ಞಾ ಮಹೇಶ್ವರಂ!
ಶಸ್ತ್ರಾಸ್ತ್ರ ವಿದ್ಯಾಪ್ರವೀಣ ರಣಪಂಡಿತಂ.
ನವನವೋನ್ಮೇಷಿತಂ ನಿತ್ಯ ಚಿರನೂತನಂ
ರಸದರ್ಶನಾಸ್ವಾದನಂ ಗೈವ ಸಹಜ ಕವಿ.
ಶ್ರುತಿಶಾಸ್ತ್ರ ಕಾವ್ಯ ರಸಋಷಿ; ಯೋಗಿ. ಕೇಳಿಮಾ
ರಾಮನಲ್ಲದೆ ಬೇರೆ ನನ್ನೀ ಕಿರೀಟಮಂ
ಧರಿಸುವ ಸಮರ್ಥರಂ ಕಾಣೆನಾಂ. ಪಿರಿಯವನ
ಪೆಗಲೊಳೀ ಪೊಡವಿಯಂ ಪೊರೆಯಿಳುಹಿ, ತಪಮಿರ್ದು
ಪೊರೆವೆನೆಮ್ಮೀ ಕುಲದ ಮರ್ಯಾದೆಯಂ.''

ಕೇಗಿತಾ

ನೆರವಿ, ಮಳೆಮೋಡಮಂ ಕಾಣುವ ನವಿಲ್‌ಗಳೋಲ್,
ವೇಪಿಸೆ ಸಭಾಸ್ಥಾನ ಮಂಟಪಂ. ಪೌರರಂ
ಭಿನ್ನಮತಮಿಲ್ಲದೆಯೆ ಕರಪುಟಾಂಜಲಿಯೆತ್ತಿ
ಸರ್ವರೊಮ್ಮನದಿಂದೆ ಜಯಘೋಷಗೈದರಂ
ರಾಜನಭಿವಂದಿಸಿ, ವಸಿಷ್ಠಾದಿ ಗುರುಗಳಂ
ಕುರಿತೊರೆದನಣಿಗೆಯ್ಯಲಭಿಷೇಕದುತ್ಸವಕೆ

ರವಿವಂಶ ರಾಜಾರ್ಹಮಾದಖಿಲ ಪರಿಕರಗಳಂ.
   ಪುಣ್ಯಪ್ರಸೂನಮಯ ಶುಕ್ಲದಾಮಂ ಬಿಡಿದು
ಪಟ್ಟಾಭಿಷೇಕಕ್ಕೈತಂದುದಾ ಚೈತ್ರಮಾಸಂ!
ಪೊನ್, ಬೆಳ್ಳಿ, ಧನಧಾನ್ಯ, ಮುತ್ತುರತ್ನದ ರಾಸಿ,
ಬೆಳ್ಳನೆಯರಳದಂಡೆ, ಬೆಳ್ಗೊಡೆ, ಅರಳ್, ಜೇನ್,
ನೂತನ ದುಕೂಲಗಳ್, ಸ್ಯಂದನಂಗಳ್, ನಿಖಿಲ,
ಶಸ್ತ್ರಾಸ್ತ್ರಗಳ್, ಕುದುರೆ ತೇರಾನೆ ಕಾಲಾಳ್,
ಹೊಂಗೊಂಬೆಸೆವ ಗೋವು ಗೂಳಿಗಳ್, ಬಿಳಿಚವರಿ,
ಪುಲಿದೊಗಲ್, ಪಾಲ್, ಮೊಸರ್, ಗಂಗೆನೀರ್, ಕಡಲನೀರ್,
ಗಂಧ ಪುಷ್ಪಾದಿ ಮಂಗಳದ ಸಾಮಗ್ರಿಗಳ
ನಾನಾ ಸುಖದ ಶುಭದ ಸಂಪದದ ಸಂಬರಂ
ಸಮನಿಸಿತು ತುಂಬುವೋಲ್ ಕೋಸಲ ರಾಜಧಾನಿ.
ಮರುದಿನಂ, ಪೊಂಗದಿರ್‌ಚವರಿಯಂ ಬೀಸಿ ರವಿ
ಮೂಡಣದ್ರಿಯನೇರಿ ಬರ್ಪನಿತರೊಳೆ, ನಗರಿ
ರಾಜಿಸಿತು ಹಸುರು ತೋರಣಗಳಿಂ, ಹೂಮಳೆಯ
ಚೆಲ್ವಿನಿಂ, ಕಂಪಿಡಿದ ತಣ್ಣೀರ್ಗಳಿಂ ನಾಂದ
ಕಮ್ಮನೆಯ ನೆಲಗಳಿಂ, ಪಟ್ಟೋತ್ಸವಕೆ ಸಮೆದ
ಬಿತ್ತರದ ಕಲ್ಯಾಣಮಂಟಪಂ ತಾನೆಂಬವೋಲ್.
   ನೆಯ್ವಾಳುತಿದೆ ಜಗವನೊಂದತಿವಿರಾಣ್ ಮನಂ,
ಸೂಕ್ಷ್ಮಾತಿ ಸೂಕ್ಷ್ಮ ತಂತ್ರದಿ ಬಿಗಿದು ಕಟ್ಟಿಯುಂ
ಜೀವಿಗಳ್ಗಿಚ್ಛೆಯಾ ಸ್ವಾತಂತ್ರ್ಯಭಾವಮಂ
ನೀಡಿ. ಮಂಥರೆ ಸೀತೆ ರಾಮ ರಾವಣರೆಲ್ಲರುಂ
ಸೂತ್ರಗೊಂಬೆಗಳಲ್ತೆ ಆ ವಿಧಿಯ ಹಸ್ತದಲಿ?
ಮಥಿಸಿದುದು ದಶಶಿರನ ವಿಧಿ ಮಂಥರೆಯ ಮನದಿ
ತನ್ನ ತಂತ್ರದ ಕೃತಿಯನಾ ಇರುಳ್ ಕನಸಿನಲಿ:
ಮುದುಕಿಯಾದಾ ಕೈಕೆ ಭರತನಂ ಕೈವಿಡಿದು
ಮರುಧರೆಯಸಲೆಯುತಿರ್ದಳ್ ವಿಧವೆಯೋಲ್. ಕುಬ್ಜೆ
ಕರೆದೊಡಂ ಕಿವಿಗೊಡದೆ, ಮಗನೊಡನೆ ಕಿರಿರಾಣಿ
ಮುಂದು ಮುಂದೆಯ್ದುತಿರೆ, ಬೈಗುಗಳ್ತಲೆಯಿಳಿದು
ನುಂಗಿದತ್ತಿರ್ವರಂ. ತೊಳ ತೊಳಲಿ ನೀರಡಸಿ
ದೆಸೆದೆಸೆಗೆ ಬಾಯ್ಬಿಟ್ಟು ನಿಡುಪೊರಲಿ ಗೂನಿ ತಾಂ

ಕೆಡೆದಳಾ ಮರಳುಗಾವಲಿಯಿಳೆಗೆ, ರಾಮನಂ
ಕರೆಕರೆದು ನಿಡುಸರದೊಳಾಕ್ರಂದಿಸುತೆ ಕೂಗಿ.
ಕ್ರೂರ ದುಃಸ್ವಪ್ನ ಜೇಡನ ಪೀಡನೆಗೆ ಸಿಲ್ಕಿ
ನಡುನಡುಗುತೊದ್ದಾಡಿದತ್ತು ಮಂಥರೆಯೊಡಲ್,
ಬಲೆಗೆ ಬಿಳ್ದೊಂದು ಪುಳುವಂತೆ. ಹಾಸಗೆ ಕೆದರೆ
ಕುಳ್ತಳ್ ಧಿಗಿಲ್ಲೆಂದು. ಬಡಿದುದು ಭಯಗ್ರಹಂ
ಮಂಥರೆಗೆ. ಕೇಡದೇನಂ ಸ್ವಪ್ನಮಾಡಿದುದೊ
ತನಗೆನುತೆ ಚಿಂತಿಸುತ್ತಿರೆ, ಕಿವಿಗೆವಂದುದಯ್
ನಲಿವ ಮಂಗಳವಾದ್ಯ ಸಂಭ್ರಮಂ.
ಸೋಜಿಗಕೆ
ಹೊರ ಹೊಂಟಳಾಲಯವನಾ ದಾಸಿ. ಬೆರಗೇರ್ದು
ನಡೆದು ಬಂದಳು ರಾಜಬೀದಿಯಲಿ. ಬರಬರುತೆ
ನೋಡಿದಳು ನಗರಶೃಂಗಾರಮಂ, ನಲಿದುಲಿವ
ಪುರಜನೋತ್ಸಾಹಮಂ: ಇಲ್ಲಿ ಜಲಸೇಚನಂ,
ಇಲ್ಲಿ ಹೊಸ ರಂಗೋಲಿ, ಮೇಣಿಲ್ಲಿ ಕಪ್ಪುರದ
ಸಾರಣೆಯ ಕಂಪು. ನೋಡಲ್ಲಿ ಗುಡಿತೋರಣಂ.
ಅಲ್ಲಿ ಪೊಂಬಾವುಟಂ. ನಿಂತಿಹರು ಕಾಣಲ್ಲಿ
ದೀರ್ಘಾಸಿ ಕಟಿಬದ್ಧ ಸನ್ನದ್ಧ ಯೋದ್ಧರುಂ.
ಬೆಣ್ಣೆಯಂದದ ಸುಣ್ಣಮಂ ಬಳಿದ ದೇಗುಲಂ
ಕಾಣದೊ ಮನೋಹರಂ ತಲೆ ನಿಮಿರ್ದಿದೆ ಬಾನ್ಗೆ!
ಮತ್ತೆ, ನಡೆದಿವೆ ಕುದುರೆ ತೇರಾನೆ ಸಾಲ್ಗೊಂಡು,
ಪೊಂಗೆಲಸದೆಸಕದಿಂ ಮಿಂಚಿ. ಪರಿಯುತೆ ಮುಪ್ಪಿ
ನೋಟದಿಂ ನೋಟಕ್ಕೆ ಬೆಸಗೊಂಡೊಡನಿಬರುಂ
ವೈರೂಪ್ಯಮಂ ಕಂಡು, ಕಿನಿಸಿ, ಮುನಿದಕ್ಷಿಯಿಂ
ಪಳಿದು ಮುನ್‌ನಡೆಯೆ, ಮಂಥರೆ ಸಾರ್ದಳೊಯ್ಯನೆಯೆ
ಸಂಭ್ರಮಂ ತುಳುತುಳುಕಿರ್ದ ಕಲ್ಯಾಣ ಮಂಟಪಕೆ.
ಕಲಕಲ ನಿನಾದದಿಂ ತಾವರೆಯ ಪೂಗೊಳದ
ಜಲಪಕ್ಷಿ ಕುಲದಂತುಲಿಯುತಿರ್ದ ಚೆಲ್ವೆಣ್ಗಳೆಡೆ
ಕಣ್ಮಲರನರಳಿ ರಾಮನ ದಾದಿ ನಗುತಿರಲ್
ಕೇಳ್ದಳಾಕೆಯನೊಸಗೆಯೇನೆಂದು. ತಿಳಿಯಲಾ
ಕಹಿನನ್ನಿ, ರಾಮಪಟ್ಟಾಭಿಷೇಕದ ನನ್ನಿ,

ಹೃದಯವೊಡೆದಂತೆ ತತ್ತರಿಸಿ ಮಂಥರೆ ಕೂಡೆ
ನಡೆದೋಡಿದಳ್ ಕೈಕೆಯರಮನೆಗೆ. ಏದುತಿರೆ
ಸೇದೆಯಿಂದುದ್ವೇಗದಿಂ ಚೀರಿದಳ್:
"ಓ ಕೈಕೆ,
ಮತಿಗೇಡಿ, ನಿರ್ಭಾಗ್ಯೆ, ಇನ್ನುಮೇನೀ ನಿದ್ದೆ
ನಿನಗೆ? ಮೇಲೇಳ್ ಏಳ್: ಕೆಡೆದು ಬಿದ್ದಿದೆ ನಿನ್ನ
ಸಿರಿಗುಡಿಯ ಗೋಪುರಂ! ಹೊಂಗನಸು ಹುಡಿಯಾಯ್ತು!
ಬಯಲ ಸೇರ್ದುದು ಬಹುದಿನದ ಬಯಕೆ! ಕೆಟ್ಟೆ ನೀಂ!
ಕೆಟ್ಟೆನಾಂ! ಹಾ ಭರತ! ಭರತ! ಹಾ! ಎಲ್ಲಿಹೆಯ್?
ಎಲ್ಲಿಹೆಯೊ ಇಂದು? ಬಾ ಬೇಗ ಬಾ!" ಎಂದಳುತೆ,
ಕಿರಿರಾಣಿ ಬಳಿಸಾರ್ವ ಮುನ್ನಮೆ, ಪೊಸನ್ತಿಲೆಡೆ,
ದೊಪ್ಪೆಂದು ಸೈಗೆಡೆದಳುರುಳಿದಳು, ಪೇಳ್ವುದೇಂ,
ಬಡಿಗೆ ಪೊಯ್ದಂತೆ! ನೆಗಹಿದಳು ಮಾಂಡವಿಯತ್ತೆ
ಭರತಧಾತ್ರಿಯನೊಡನೆ ಶಿಶಿರೋಪಚಾರಮಂ
ಮಾಡಿದಳ್. ಕಣ್ದೆರೆಯುತೆಳ್ಚರುತೆ, ಕನಿಕರದ
ನೋಟಮಂ ಬೀರಿ ಮಂಥರೆ ತನ್ನ ರಾಣಿಯಂ
ಬಿಗಿದಪ್ಪಿದಳ್ ಬಿಕ್ಕಿ ಬಿಕ್ಕಳ್ತು!
ಹೇಳವ್ವ, ಹೇಳ್
ಏನಾದುದೆನೆ ಕೈಕೆ, ಭರತ ಭರತೆಂದೆಂದು
ಗದ್ಗದಿಸಿ, ನುಡಿಯಲಾರದೆ ಮುದುಕಿ ಕಮ್ಮನಿರೆ,
ಮಗನಿಗೇನಾದುದೋ ಅಳಿದಿಹನೊ ಉಳಿದಿಹನೊ
ಎಂಬುವಾಶಂಕೆಯಿಂ ಕುದಿಯುತಳತೊಡಗಿದಳ್
ದಶರಥನ ರಾಣಿ. ನುಡಿಯಂ ತೊಡಗಿದಳ್ ಗೂನಿ:
"ಬೇಸಗೆಯ ಹೊಳೆಯಾದುದೌ, ಕೈಕೆ, ನಿನ್ನ ಸಿರಿಯುಂ
ನಿನ್ನ ಸೌಂದರ್ಯದಂತೆ. ಬಂಡನೀಂಟಿದ ಬಳಿಕಮಾ
ಬಂಡುಣಿಗೆ ಹೂವಿನ ಗೊಡವೆಯೇಕೆ? ಅಂತೆವೊಲ್
ದಶರಥಗೆ ನೀನಾದೆಯೌ. ಮಗಳೆ, ಪೇಳ್ವೆನಿದೊ
ದುರ್ವಾರ್ತೆಯಂ. ಕೇಳ್ವದಟು ನಿನಗಿಹುದೆ? ಅಯ್ಯೊ,
ವಂಚಕರ ಸಂಚಿನಿಂದೆಮ್ಮ ಭರತಂಗೀ ನೆಲಂ
ಪಳುವಾಯ್ತೆ? ನಾವಿರ್ವರಿರ್ದುಮೇಂ? ಪೇಳ್, ಮುಗ್ಧೆ!
ಸನ್ನಿಹಿತಮಾದೀ ವಿಪತ್ತನರಿತುಂ ಬರಿದೆ

ಕುಳಿತಿಹರೆ, ಮತಿಯಿರ್ಪ ಮಂದಿ? ನಿನಗರಿಯದೆಯೆ
ಮಸೆದಿಹರು ನಿನ್ನ ಕೊರಳಂ ಕೊಯ್ವ ಕತ್ತಿಯಂ!
ನಿನ್ನ ದುಃಖವೆ ದುಃಖಮೆನಗೆ; ಸುಖಮೆಯೆ ಸುಖಂ;
ಪೆರತಿಹುದೆ ಪೇಳಕ್ಕ? ದಶರಥಪ್ರೇಮಮಂ
ಭಾಗ್ಯಕೆಣೆಯಿಲ್ಲೆಂದು ತಿಳಿದ ನೀನಲ್ಪಮತಿ!
ಕ್ರೌರ್ಯದಲಿ ರಾಕ್ಷಸರ ಮೀರ್ದುದೌ ಕ್ಷತ್ರಿಯ ಕುಲಂ.
ಕ್ಷತ್ರಿಯ ಕುಲವರೇಣ್ಯನಾ ದಶರಥಂ? ಸವಿನುಡಿಯ
ಕಳ್ಳೆಂಟಿ ಮರುಳ್ಗೊಳಿದೆಯಮ್ಮ ನೀನಾತಂಗೆ:
ದಿಟದೊಲ್ಮೆ ಕೌಸಲ್ಯೆಗಾಯ್ತು; ಹುಸಿ ನಿನಗಾಯ್ತು.
ಭರತನನುಪಾಯದಿಂ ನಿನ್ನ ತೌರಿಂಗಟ್ಟಿ, ಕೇಳ್,
ಪಟ್ಟ ಕಟ್ಟುವನಂತೆ ನಾಳೆ ರಾಮಂಗೆ! ಹಾ,
ತೊಡೆಯ ಮೇಲಿಟ್ಟವನನಿನ್ನೆಗಂ ಪಾಲಿಸಿದೆ:
ಪಾವ್ಗೆ ಪಾಲೆರೆದೆ! ಮೊಟ್ಟೆಯನೊಡೆದು ಮುಡಿಪದಿರೆ,
ಹಗೆಹಾವು ಹೆಡೆಯೆತ್ತಿ ಕೊಲ್ವುದೆ ದಿಟಂ, ದಿಟಂ!
ಕಿರಿಯೆ, ಕೇಳ್, ನೀನಿನ್ನುಮರಿಯೆ."
ಮೊಗಮಲರ್ದುದಯ್
ಕೈಕೆಗದನಾಲಿಸುತೆ, ಶಶಿಗೆ ನೈದಿಲೆಯವೋಲ್.
ಕೊರಳ ಸರಮಂ ತೆಗೆದು ಮಂಥರೆಗೆ ನೀಡಿ ನುಡಿದಳ್:
"ನಿನಗಿದೊ ಕೊಡುಗೆ, ಶುಭದ ವಾರ್ತೆಯಂ ತಂದುದಕೆ.
ರಾಮನೇಂ? ಭರತನೇಂ? ಮಕ್ಕಳಿರ್ವರುಮೆನ್ನವರ್!"
ನೀಡಿದಾ ಹಾರಮಂ ಪಿಡಿದಪ್ಪಳಿಸಿ ನೆಲಕೆ,
ರಾಣಿಯಂ ನುಡಿಯಲೀಯದೆ ಮುಂದೆ, ಸಂತಪ್ತೆ
ಕುಬ್ಜೆ ಮಂಥರೆಯಿಂತು:
"ಸಾಕು, ನಿಲ್ಲಿಸು, ಮೂರ್ಖೆ;
ಲೇಸಾಯ್ತು ನಿನ್ನ ಮತಿ! ಬಹುಕಾಲಮರಮನೆಯ
ಸುಖಸೋಮಪಾನಮಂ ಗೈದು ಪಲ್ಲಟವಾಯ್ತೆ
ಸದ್ಬುದ್ಧಿ? ಪೆತ್ತ ಮಗುವನೆ ತಿಂಬ ರಕ್ಕಸಿಯ
ಪಾಂಗಿನಿಂದಾಡುತಿಹೆ: ನಿನ್ನ ಕಂದಗೆ ನೀನೆ
ಮಿಳ್ತು. ರಾಮಾಭಿಷೇಕಂ ನಿನಗೆ ಪ್ರಿಯವಾರ್ತೆಯೇಂ?
ವೈರಿ ಬೇರುಂಟೆ ಲೋಕದಿ ಸವತಿಮಗನಿಗಿಂ?
ಕೌಸಲ್ಯೆಗೇಂ ಕಿರಿಯೆ ನೀಂ? ಧೀರ ಭರತನೇಂ

ಕೊರತೆ ರಾಮಂಗೆ? ಜನ್ಮಕ್ರಮದಿ ನೋಳ್ಪೊಡಂ?
ಪೇಳ್ವೆನಾಂ, ಕೇಳ್ ಮುಗ್ಧೆ. ಪಡೆವ ಬೇನೆಯೊಳಿರ್ದೆ
ನೀನರಿಯೆ! ನಾಲ್ವರೊಳ್ ಭರತನೆಯೆ ದಿಟದಿಂದೆಯುಂ
ಜ್ಯೇಷ್ಠನ್! ಅಚ್ಚರಿಯೇಕೆ? ಬಲ್ಲೆ ನಾನೆಲ್ಲಮಂ.
ದೊರೆ ಮಂತ್ರಿ ಕುಲಪುರೋಹಿತರೆಲ್ಲರೊಲವರದಿ
ಪಿರಿಯನಾದನ್ ಕೌಸಲೆಯ ಮಗಂ. ನಿನಗಾಯ್ತು
ಸೊನ್ನೆಬಳುವಳಿ. ತೊಳ್ತು ನೀನಪ್ಪೆಯಿನ್ ಮುಂದೆ
ರಾಮನಾಳ್ವಿಕೆಯಲ್ಲಿ, ಕೌಸಲೆಯ ಕಾಲ್ದೆಸೆಯ
ಧೂಳಿಯೋಲ್. ಮರೆತೆಯೇಂ ನೀನಿಲ್ಲಿಗೈತಂದ
ಮೊದಲಂದು ಕರುಬಿ ಕೌಸಲೆಯಿತ್ತ ಕಾಟಮಂ?
ತನ್ನವೋಲನಿಬರುಂ ಸತ್ವಮೂರ್ತಿಗಳೆಂದು
ನಂಬಿ ನೀಂ ಕೆಡುವೆ. ಬೇಗಮೆಚ್ಚರದಿರಲ್, ದಿಟಂ,
ಹುಡಿಸೇರಿ ಹಾಳಾಗಿ ಗತಿಗೆಡುವೆಯೌ. ಗಾಂಪೆ,
ಕೊರಗದಿರ್ ಸಂಚು ಮಿಂಚಿದ ಮೇಲೆ!'' ಎನುತಾಕೆ
ತನ್ನ ಕನಸಂ ಪೇಳ್ದಳುರಿಗೆ ನೆಯ್ ಪೊಯ್ವಂತೆವೋಲ್.
    ಕೇಳುತ್ತೆ, ಕೆಲವೊಳ್ತು ಮೌನಮಿರ್ದಳ್ ಕೈಕೆ,
ಕೆನ್ನೆಗೈಯಾಗಿ, ಕಂಬನಿದುಂಬಿ, ಕಣ್ಮುಚ್ಚದೆಯೆ,
ಹಾಲ್ಗಲ್ಲ ಗೋಡೆಯನೆ ನೋಡಿಃ ಮೂಡಿತು ಮನಕೆ
ಮಾವನ ಮನೆಯ ದೂರದೊಳಿರ್ದ ತನುಜನ ಮೂರ್ತಿ.
ನೆನೆದು ಮೆಲುಕಾಡಿದಳ್, ನೆರಕೆ ಗರಗಸವಾಗೆ,
ಮಂಥರೆಯ ಮಾತೆಲ್ಲಮಂ. ಹೃದಯಮುರಿದಂತಾಯ್ತು.
ದುಃಖಮಿರ್ಮಡಿಸಿದುದು. ಕೊರಳು ಗದ್ಗದವಾಗಿ
ನುಡಿದೋರಲಾರದಿರೆ, ಮತ್ತೆ ಪೇಳ್ದಳ್ ಕುಬ್ಜೆ:
''ಶತ್ರುಘ್ನನಿಲ್ಲಿರ್ದೊಡಾತನುಂ ಪಟ್ಟಕ್ಕೆ
ವಿಘ್ನವೊಡ್ಡುವನೆಂದು ಭರತನೊಡವೆರಸಟ್ಟಿ
ಕಳೆದರಮ್ಮಾ, ಕೈಕೆ. ಮುಳ್‌ಬಳ್ಳಿ ಪೆರ್ಮರಕೆ
ಪೆಣೆದದಂ ಕಡಿಯಲೆಡೆಗೊಡದಂತೆ, ಲಕ್ಷ್ಮಣಂ
ರಕ್ಷೆ ತಾನಲೆ ಕೌಸಲೆಯುವಂಗೆ. ಭರತನಂ
ರಾಮಂಗೆ ತೊಳ್ತುಗೆಯ್ಸದೆ ಪಳುವಕಾದೊಡಂ
ಕಳುಹು; ದಯೆದೋರು. ನಾನವನೊಡನೆ ಪೋದಪೆನ್
ಶುಶ್ರೂಷೆಗೆಯ್ಯೆ. ಭಿಕ್ಷೆಯಿದೆನಗೆ ನಿನ್ನಿಂದೆ!''

ಎನುತ್ತೆದ್ದು ಹೋಹಳಂ ತೆಗೆದಪ್ಪಿದಳ್ ಕೈಕೆ,
ಮುಳುಗುವಾತಂ ಪ್ರಾಣರಕ್ಷಣೆಗೆ ಮೊಸಳೆಯಂ
ತಬ್ಬುವೋಲಂತೆ. "ಬರಿ ಅಳುವಿನಿಂದೇನಹುದು?
ಮೇಲೇಳೇಳು. ಕಾರ್ಯಸಾಹಸಿಯಾಗು! ವೀರಸತಿ,
ನೀಂ ಮರೆತೆಯಾದರಿದೊ ನೆನವೀವೆನಾಂ. ನೆನೆ, ಮಗಳೆ,
ನೀನಂದು ನನಗೊರೆದ ಗೋಪ್ಯಮಂ, ದಶರಥಂ
ನಿನ್ನ ಚೆಲ್ವಿಂಗೋತು ಸೊಬಗಿಗಡಿಯಾಳಾಗಿ
ಮದುವೆಯಾಗುವ ಮೊದಲ್ ನಿನಗಿತ್ತ ಭಾಷೆಯಂ."
    ಐಸಿರಿಯನೆಲ್ಲಮಂ ದುರ್ವ್ಯಸನದೊಳ್ ಕಳೆದು
ಕಡು ದರಿದ್ರತೆವೆತ್ತು, ತೊಳಲಿ, ಬಿಕ್ಕೆಯ ಬೇಡಿ,
ಹೊಟ್ಟೆಗಿಲ್ಲದೆ ಬಳಲಿ ಹಸಿವಿಂದೆ ನಿದ್ರಿಪಗೆ
ಬೀಳ್ವುದು ಕನಸು. ಕನಸಿನಲಿ ಯಕ್ಷನೈತಂದು
ಬಾ ಎಂದು ಕರೆದುಕೊಂಡೊಯ್ಯುತೊಂದೆಡೆಗಲ್ಲಿ
ತೋರ್ದಪನ್, ಕೊಪ್ಪರಿಗೆ ತುಂಬಿ ತುಳುಕಿತೆನಲ್ಕೆ,
ತಳತಳನೆ ಹೊಳೆವ ಹೊನ್ನಿನ ಹಳದಿರಾಶಿಯಂ.
ಸಂತೋಷಕೆಚ್ಚತ್ತು ನಡೆವನಾ ಎಡೆಗಾಗಿ
ಹುಡುಕಿ ನಿಧಿಯಂ. ಹುಡುಕುತಿರೆ ಕಣ್ಗೆ ಬಿಳ್ದುದದೊ
ವಾಸ್ತವಂ ಸ್ವರ್ಣ ನಿಧಿರಾಶಿ! ಆ ಬಡವನೋಲ್
ಹಿಗ್ಗಿದಳ್ ಕೈಕೆ. ಗೂನಿಯ ವಕ್ರಗಾತ್ರಮಂ
ತಬ್ಬಿ ನುಡಿದಳ್: "ಕಂಗೆಟ್ಟೆನಗೆ ದಾರಿ ತೋರ್ದೆಯೌ,
ಓ ನನ್ನ ಭಾಗ್ಯ ದೇವತೆ! ಮರಳಿ ಹಡೆದೆಯೌ,
ನೀನೆನ್ನ ತಾಯಿ! ನೀಂ ತೊರೆಯಲಿನ್ನಾರೆ ಗತಿ
ಪರದೇಸಿಯೆನಗೆ? ಕಣ್ಣಿರ್ದುಮಾನಿನ್ನೆಗಂ
ಕುರುಡಿಯಾಗಿರ್ದೆನೌ. ನೋಡಿತ್ತನೋಡೆನ್ನನಃ!
ಇಂದೆನಿತು ಚಾರುರೂಪಿಣಿಯಾಗಿ ತೋರುತಿಹೆ
ನೀನೆನಗೆ! ಲೋಕದೊಳ್ ಹೊರಮೆಯ್ಯನೀಕ್ಷಿಸುತೆ
ಸೊಬಗನಾರೈವವರ್ ಬರಿಯ ಬೆಪ್ಪುಗಳಲ್ತೆ?
ನಿಜಮಪ್ಪ ಸೌಂದರ್ಯಮಾತ್ಮಕ್ಕೆ ಸೇರ್ದುದೆನೆ
ನಿನಗಿನೇಂ ಸುಂದರಿಯರೊಳರೆ? ಗೂನಿರ್ದರೇಂ?
ಚಂದನದ ಕೊರಡು ಮುರುಟಿರ್ದರೇನೂನಾಯ್ತೆ
ಗಂಧಕ್ಕೆ?" ಎನುತ್ತಾ ಕುರೂಪತಾ ಮುದ್ರೆಯಂ

ಮುದ್ದಾಡಿದಳೊ ಕೈಕೆ, ಸರ್ವಸೌಂದರ್ಯನಿಧಿ,
ಫಣಿವೇಣಿ, ಸುಶ್ರೋಣಿ, ದಶರಥೇಂದ್ರನ ರಾಣಿ!
ಕಚ್ಚಿತೆನೆ ಮೀನು ಗಾಳದ ನೇಣನೊಂದಿನಿತು
ಸಡಿಲ ಬಿಡುವವನಂತೆ, ಮತ್ತೆ ನುಡಿದಳ್ ಕುಬ್ಜೆ,
ಮುದ್ದಿನ ಬಿಸಿಲ್ ಬೀರಿ, ಕೇಕಯ ಕುಲಾಬ್ಜಿನಿಗೆ:
"ನಿಚ್ಚಯಿಸುವಾ ಮುನ್ನಮಿನ್ನೊರ್ಮೆ, ಮೇಣೊರ್ಮೆ,
ಮತ್ತಮಾಲೋಚಿಸೌ, ಚಂದ್ರಸುಂದರ ವದನೆ;
ದುಡುಕದಿರ್. ತಲೆಗೆಟ್ಟ ಗೂನಿಯೆನ್ನಯ ನುಡಿಗೆ
ಬಿಳ್ದು ತರುವಾಯದೊಳ್ ದೂರದಿರ್. ಮಮತೆಯಿಂ,
ನಿನ್ನ ಭರತನ ಮೇಲಣಳ್ಕರೆಯ ಮಮತೆಯಿಂ,
ರಾಮ ವಿದ್ವೇಷದಿಂದಲ್ತು, ರಾಮಂ ಬಾಳ್ಗೆ!
ಪೇಳ್ದೆನಿನಿತೆಲ್ಲಮಂ ನಿನಗೆ.–ರಾಮಂ ಬಾಳ್ಗೆ!
ಕೇಳನಿತೆ ಬಯಕೆಯಾದೊಡಮೆನಗೆ, ರಾಮನಂ
ಕೋಸಲದೊಳಿರಲೀಯುವೊಡೆ ಲಭಿಸದೀ ನೆಲಂ
ಭರತಂಗೆ. ಚಕ್ರಾಧಿಪತ್ಯಮಂ ಸುಲಿದು ನೀಂ
ದಶರಥನ ಕೈಯಿಂದೆ ಭರತಂಗೆ ಕೊಟ್ಟೊಡಂ
ರಾಮಪಕ್ಷಂ ತಪ್ಪದೊಳಸಂಚುಗಳನಗೆದು
ಕೆಡಹುವುದು ಸತ್ತ್ವನಿಧಿ ಬಾಲರ್ಷಿ ಭರತನಂ
ಕೂಪಕ್ಕೆ. ನಿನ್ನಾ ಕುಮಾರಂಗೆ ನೆಲದ ಸಿರಿಯುಂ
ಪಟ್ಟಮಹಿಷಿಯ ಕೌಸಲೆಯ ಕುವರ ರಾಮಂಗೆ
ಪದಿನಾಲ್ಕು ವರ್ಷಂಬರಂ ವಿಪಿನಯಾತ್ರೆಯುಂ
ಜೋಡಿಗೊಳ್ಳುವ ತೆರದಿನೆಸಗವೇಳ್ಕುಂ. ಆಲಿಸದೊ
ವಾದ್ಯ ಮಂಗಳ ರವಂ!"
ಸಡಿಲಿಸಲ್ ಗಾಳನೇಣಂ,
ಕೊಂಡಿಯೊಳಗಣ ದೀವದಾಹಾರಮಂ ಬಿಡದೆ
ನುಂಗಿ, ಸೆಳೆಸೆಳೆದೆಳೆವ ಮೀನಂತೆವೋಲ್ ರಾಣಿ
ಮಂಥರೆಯನಪ್ಪಿದಳ್:
"ನಿನ್ನ ಮೈಮೆಯನಿನ್ನೆಗಂ
ತಿಳಿಯದಾಂ ಮೂರ್ಖೆಯೆ ದಿಟಂ. ಕಳದಿ, ಪೇಳೆನಗೆ
ಕೈಕೊಳ್ವ ಮುಂಬಟ್ಟೆಯುಂ."
"ಮರುಳೆ, ಸೌಂದರ್ಯದಿಂ

ಗೆಲ್ವನಂಗಜನಖಿಲ ಲೋಕಮಂ. ಕೋಸಲಂ
ತನಗೊಂದು ತೃಣಮಲ್ತೆ? ಏಳು, ನಡೆ ತಳ್ವದಿರ್!
ತೊರೆಯಿಳಿದ ಮೇಲೆ ಸಂಕವನಿಕ್ಕಲೇನಹುದು?
ಕೋಪಗೃಹಮಂ ಸೇರ್ದು, ನೆರವೇರುವನ್ನೆಗಂ
ನಿನ್ನರಕೆ, ಹೊರ ಬಾರದಿರ್!''
ಪೋದಳತ್ತಲ್ ಕುಬ್ಜೆ.
ದೀಕ್ಷೆಯಂ ಕೈಕೊಂಡು ಹಠಮೂರ್ತಿಯಾಗೀಕೆ
ಪೊಕ್ಕಳಾ ಕೋಪಗೃಹಮಂ. ಮೆಯ್ತೊಡವೆಗಳನಿಳ್ದು
ದಿಕ್ಕುದಿಕ್ಕಿಗೆ ಚೆದರಿ ಸೂಸಿ, ಮುಡಿಯಂ ಕೆದರಿ
ಬೀಸಿ, ದಿಂಡುರುಳಿದಳ್ ದಶರಥಪ್ರಿಯ ರಾಜ್ಞಿ,
ಸಿದ್ಧಿಗಾಗತಿ ಕಠೋರದ ಸಾಧನೆಗೆ ನಿಲ್ವ
ಕರ್ಮಠ ರಜೋಗುಣದ ಹಠಯೋಗಿಯೋಲಂತೆ.
ತನಯಂಗೆ ಹಿತವೊರೆದು ಕಳುಹಿದ ಅನಂತರಂ
ಕೈಕೆಯಂ ಮದುವೆಯಪ್ಪಂದು ಗೋಪ್ಯದೊಳೆರೆದ
ನುಡಿಯ ಕೊಡುಗೆಯ ನೆನಹಿನಾಶಂಕೆಯೊಳಗಾಳ್ದು
ರವಿಕುಲ ನರೇಂದ್ರಚಂದ್ರಂ, ತನ್ನ ಕಿರುವೆಂಡಿತಿಯ
ಮನಮನೆಂತಾದೊಡಂ ತನ್ನಾಸೆಗೀಳಲ್ಕೆ
ತರಿಸಂದು ಹೊರಟನವಳೆಡೆಗೆ, ಮೀನಾಕ್ಷಿಯಂ
ಶೃಂಗಾರ ಜಾಲದೊಳ್ ಪಿಡಿವ ಬುದ್ಧಿಯ ರಸದ
ಹರಿಗೋಲಿನೊಳ್ ತೇಲಿ. ಕೈಕೆಯಂತಃಪುರಂ
ಸಾರೆ ಬರೆವರೆ, ದೊರೆಯ ಬಗೆ ನಲಿದುದಿಂಪಿಂಗೆ,
ನೆನೆದು ರತಿಸದೃಶ ರೂಪಸಿಯ ಸೌಂದರ್ಯಮಂ.
ಮತ್ತೆ, ಸುರದೇಹದಾ ಸುರೆಯ ಸಮ್ಮೋಹಶಿಖಿ
ಕೆರಳುವೋಲ್, ಮನ್ಮಥಂ ಬಿಜ್ಜಣಿಗೆ ವೀಸಿದನೆನಲ್,
ರಾಣಿಯಂತಃಪುರವ ಸುತ್ತಿ ನಳನಳಿಸಿರ್ದ
ನಂದನದಿ, ಗಿಳಿ ನವಿಲ್ ಕೊಂಚೆ ಕೋಗಿಲೆಯಂಚೆಗಳ್
ನಾನಾ ಶಕುಂತಂಗಳೇಕ ಕಾಲದೊಳುಲಿಯ
ತೊಡಗಿದುವು. ಭೋಗರಾಗದ ಕುಡಿಯೆ ಪರಿವಂತೆ,
ತಳಿರಲರ್ಗೆದರಿ ಕುಣಿದುವು ವೃಕ್ಷಗಳ್ ಮೇಣ್ ವಲ್ಲಿ.
ವೇಣು ವೀಣೆಗಳಿಂಪುದನಿ ಕರ್ಣಕಮೃತಮಂ
ಸೂಸುತಿರೆ, ಚೆಲ್ವು ಚೆಂಗಳ್ಬಾಯ್ತು ನರಪತಿಯ

ಮತಿಗೆ. ರತಿಯಿಚ್ಛೆಯಿಂ ರತಿಯೆಡೆಗೆ ನಡೆಗೊಳ್ವ
ಮೀನಕೇತನನಂತೆ ಕಾಮಚೇತನನಾಗಿ
ನಡೆದನು ನರಾಧಿಪಂ ದಯಿತೆಯ ಸಜ್ಜೆವನೆಗೆ.
ರತ್ನಮಂಚದ ಮೇಲೆ ಪತ್ನಿಯಂ, ಲಲಿತೆಯಂ,
ಕಾಣದಾ ಲುಲಿತೇಂದ್ರಿಯಂ ಶೂನ್ಯತೆಗೆ ಸುಗಿದು
ಸೆಡೆತನುಮ್ಮಳದಿಂದೆ, ಬಾಳನೆಲ್ಲಂ ತೇಯ್ದು
ಹೊಟ್ಟೆ ಬಟ್ಟೆಯ ಕಟ್ಟಿ ಸುಯ್ದಾನಮಂ ಗೆಯ್ದ
ತನ್ನ ಹೇಳಿಗೆಯ ಹೊನ್ ಕಳುವಾದುದಂ ಕಂಡ
ಕಡು ಕೃಪಣನಂತೆ. ಕಾದಲ್ಮೆಯಾತುರದಿಂದೆ
ಕೇಳಿದನ್ ಪಡಿಹಾರಿಯಂ: 'ಪೇಳ್ ದೇವಿಯೆಲ್ಲಿದಳ್?'
ನಡುನಡುಗಿ ಹಿಂಜರಿದು ನೆಲವ ನೋಡುತ್ತವನ್
ಕೈಮುಗಿಯುತೆಂದನ್ ಕಠೋರಮಂ. ಸೀಸಮಂ
ಕಿವಿಗೆ ಕರಗಿಸಿ ಹೊಯ್ದ ತೆರನಾಯ್ತು. ಬೆಬ್ಬಳಿಸಿ,
ಸುಯ್ದು, ಪರವಶತೆವೆತ್ತಂದದಿಂ ತತ್ತರಿಸಿ,
ಕೋಪಗೃಹಮಂ ಪೊಕ್ಕನಾ ನವಿರ್ ನರೆತರಸು,
ಕನಸಿನೊಳ್ ಕಂಡ ಪುಲಿಯಾರ್ಭಟೆಯನೆಳ್ಚರ್ತುಮ್
ಆಲಿಪನವೋಲ್.
ಕೆದರಿದಾಭರಣಗಳೆ ತಾರೆಗಳೊ,
ಕರ್ಪು ಸೀರೆಯೆ ಗಗನ ನೀಲಿಮೆಯೊ, ಚೆಲ್ಲಿದಾ
ಚಿಕುರ ರಾಶಿಯೆ ಕತ್ತಲೆಯ ಮೊತ್ತಮೆಂಬಂತೆವೋಲ್
ಗ್ರಹಣರಾತ್ರಿಯ ಮಾಳ್ಕೆಯಿಂ ಭಾರ್ಯೆ ಬಿಳ್ದಿರೆ ನೆಲದಿ,
ಮ್ಲಾನಮುಖಚಂದ್ರಂ ನರೇಂದ್ರನವಳೆಡೆಗೋಡಿದನ್:
ವ್ಯಾಧ ವಿಷದಿಗ್ಧ ಬಾಣಕ್ಕುರುಳಿ ಬೀಳಲ್ಕೆ
ಪೆಣ್ಣಾನೆ ತಾಂ ಗಂಡಾನೆ ಸೊಂಡಿಲಿಂದದನಪ್ಪಿ
ಕೂರ್ಮೆಗುಪಚಾರಮಂ ಗೈವವೋಲ್, ಆಕೆಯಂ
ತೋಳ್ಗಳಿಂದಮರ್ದಪ್ಪಿ, ಮುಂಡಾಡಿ, ಮುದ್ದಿಸುತೆ,
ಜೇನ್ನುಡಿಗರೆದನಿಂತು:
"ಕಲ್ಯಾಣಚೇತಸಿಯೆ, ಪೇಳ್,
ಪ್ರೇಮಪಕ್ಷಿಯ ಹೇಮಪಂಜರಮ, ಅಳಲಿದೇನ್?
ಮುನಿಸೆ ನನ್ನೊಳ್, ಜೀವಿತೇಶ್ವರಿಯ? ಹೇಮಾಂಗಿನಿಯೆ,
ಮುಡಿ ಹತ್ತಿ ಹೊರಳುತಿರ್ಪೀ ನಿನ್ನನವಲೋಕಿಸೀ

ಲೋಚನಂಗಳ್ ಸೀಯುತಿವೆ. ಬೇಯುತಿದೆ ಹೃದಯಂ
ಸಿಡಿಲ್‌ಪೊಯ್ದ ಬಾಳೆವೋಲ್. ಸಹಿಸಲಾರೆನ್, ಕಾನ್ತೆ,
ಕಮನೀಯ ಸೌಖ್ಯವಿಶ್ರಾನ್ತೆ. ನಿಂದಿಸಿದರಾರ್?
ಪರಿಭವಕೆ ಗುರಿಯಾಯ್ತೆ ನಿನ್ನ ಮಾನಂ? ರುಜೆಗೆ
ತೆರವನಿತ್ತುದೆ ನಿನ್ನ ತನುನಂದನಂ? ಕೊಲೆಯೆ?
ಕೊಲ್ಲಿಪೆನ್! ತಳ್ವವೇಳ್ಕುಮೆ ಕೊಲೆಯನಂತೆಗೆಯ್ವೆನ್!
ನ್ಯಾಯಮನ್ಯಾಯ ಧರ್ಮಾಧರ್ಮಮೊಂದುಮಂ, ಕೇಳ್,
ಪರಿಗಣಿಸದೆಯೆ ನಡೆವೆ ನಿನ್ನಿಷ್ಟಮಂ, ದೇವಿ,
ಬಗೆಯನುಸಿರೆನಗೆ. ಮಂಗಳೆ, ಕೇಳ್ವುದೀ ಪ್ರಜೆಯಂ:
ಪ್ರಾಣಮಂ ಪಣವೊಡ್ಡಿದನ್. ನಿನ್ನಭೀಪ್ಸಕೆ ಸಿದ್ಧಿ
ನಿರ್ವಿಘ್ನಮಿನ್. ಏಳ್! ಕೇಳ್!''
ಧರಾಧೀಶನಿಂತು
ಮನಸಿಜನ ಮಲರಲಗಿನೇರಿಂದೆ ಮೆಯ್ಮರೆತು,
ಕಾಮಂಗೆ ಸಿಲ್ಕಿ ರಾಮನ ತೊರೆವನೆಂಬಂತೆ,
ತನ್ನ ಬಟ್ಟೆಗೆ ಬರ್ಪುದಂ ಕಾಣುತಾ ಕೈಕೆ
ತುದಿಯ ಬೆರಳಿಂದೆ ಕಣ್ಬನಿ ಮಿಡಿದು ನುಡಿದಳಯ್,
ತೆರೆದ ಬಿಂಬಾಧರಮೆ ನೃಪಮತಿಯ ಗಜಗತಿಗೆ
ಸತಿಯಗೆವ ಬಾವಿಗಪ್ಪಿನ ಕಾವಿಮಣ್ಣಾಗೆ:
''ರುಜೆಯಲ್ತು, ಜೀವೇಶ. ಏಕೆನಗೆ, ನೀನೆಯಿರೆ,
ಬೇರೆ ಐಸಿರಿ, ನೃಪತಿ? ನಿಂದೆಯಪಮಾನದಿಂ
ಬೆಂದಿಲ್ಲ ಬಗೆ. ನಾಲಗೆಯ ಜಾಣ್ಮೆಗೆನ್ನಾಸೆ
ತೀರದಯ್. ಮನವನೊರೆಯೆನೆ ನಿನಗೆ, ಮನದನ್ನ,
ಕೋರ್ದುದಂ ಕೊಡುವೆನೆಂದಾಣೆಯಿಟ್ಟಾಡಿದೊಡೆ,
ಚುಂಬನದ ಜತುಮುದ್ರೆಯೊತ್ತಿ?''
''ಪೀಡಿಪೆಯೇಕೆ?
ನಿನಗಿಂ ಮಿಗಿಲ್ ಪ್ರಿಯರೆ, ಪೇಳ್, ನನಗೆ ಮೂಜಗದಿ?
ಪ್ರಾಣಮಂ ಪತ್ತುವಿಟ್ಟಾದೊಡಂ ನಿನ್ನಿಷ್ಟಮಂ
ಸಲಿಪೆನೆಂದಾಣೆಯಿಟ್ಟಾಡಿದೆನ್. ಮತ್ತಿದೇನ್?
ಪುರುಷರೊಳ್ ರಾಮನೆನಗೆಂತಂತೆ ಪೆಣ್ಗಳೊಳ್
ನೀನಲ್ತೆ, ಕುಸುಮಕೋಮಲೆ, ಪ್ರಿಯತಮಂ! ಮುದ್ದು
ಮಗುವೆನ್ನ ರಘುರಾಮನಾಣೆ, ಪೇಳ್ ಬಯಕೆಯಂ;

ನಿನ್ನಾಶೆ ಸೇರ್ದುದೆಂದರಿ ಕಲ್ಪತರುಮೂಲಮಂ!''
   ದೀಹಕೆರಗಿದ ಹಕ್ಕಿ ಬಲೆಯೊಳಗೆ ಬಿಳ್ದುದಂ
ಕಾಣ್ಬ ಬಿಯದನವೊಲ್ ಲತಾಂಗಿ ಉಲ್ಲಸಗೊಳುತೆ
ಕಾಳಕೂಟವ ಕರೆದಳಾ ದಶರಥಾಸುವಿಗೆ:
''ಧನ್ಯೆ ದಲ್, ಪ್ರಾಣೇಶ, ನಾನಿಂದು! ಕೇಳ್ದು ನಿನ್ನೀ
ಲೋಕ ಕಲ್ಯಾಣಕರ ವಚನಮಂ ನಲಿಯುತಿಹರಾ
ನಿರ್ಜರರ್, ಪೋದ ಸಗ್ಗಂ ಮರಳಿ ಕೈಸಾರ್ದವೋಲ್!
ಮುನ್ನಂದು ನೀಂ ಪೇಳ್ದುದಂ ಪ್ರಣಯಪ್ರಬಂಧಮಂ
ನೆನವೀವೆನಿಂದು. ನನಗಾ ವರದ್ವಯಂಗಳಂ
ನೀಡವೇಳ್ಕುಂ: ರಾಮಪಟ್ಟಾಭಿಷೇಕಕೆ ಗೆಯ್ದ
ಸನ್ನಾಹದಿಂದೆ ಭರತಂಗೆ ಪಟ್ಟಂಗಟ್ಟಿ,
ರಾಜ್ಯಮಿದು ನಿಷ್ಕಂಟಕಿತಮಾಗಲೋಸುಗಂ
ಕೌಸಲ್ಯೆಯಾತನಂ ಕಳುಹು ವಿಪಿನಾಂತರಕೆ,
ಪದಿನಾಲ್ಕೆ ಬರಿಸಂಬರಂ! ನಾರುಡೆಯನುಟ್ಟು,
ಕೃಷ್ಣಮೃಗ ಚರ್ಮಮಂ ಧರಿಸಿ, ಜಟೆಗಳನಾಂತು,
ಬಾಳ್ಗೆ ದೂರಾರಣ್ಯದೊಳ್!''
                                        ಮದನ ಸದನವೆನೆ
ಮುಂತೆ ಮೋಹವನೆರಚುತಿರ್ದವಳ ವದನಮಂ
ಬೆಬ್ಬಳಿಸಿ ನೋಡುತಿರೆ, ಮಂದೈಸಿದುದು ದಿಟ್ಟಿ
ನೃಪಗೆ. ಕದಡಿತು ಮನಂ. ಪಲ್ಲಟಿಸಿದುದು ಬುದ್ಧಿ.
ಬಿಳ್ದನವನಿಪನವನಿಗಶನಿವೊಯ್ಲಿಂಗುರುಳ್ವ
ಮರನಂತೆ. ಸತಿಯ ಶೈತ್ಯೋಪಚಾರಕೆ ಮತ್ತಳಿಂ
ಚೇತರಿಸಿ, ತನ್ನ ಕಣ್ಣಂ ತಾನೆ ನಂಬದೆಯೆ,
ಬೆಳ್ಪಮರ್ದ್ದಂತೆವೋಲ್ ಬಾಯ್ದೆರೆದ ಬೆರಗಿಂದೆ
ತನ್ನೆದುರೊಳಿರ್ದಾಕೆಯಂ ನಟ್ಟ ನೋಟದಿಂ
ನೋಡಿ:
            ''ತೆಗೆ ತೆಗೆ, ಪುಸಿಯದಿರ್! ಪುಣ್ಯರೂಪದಿಂ
ಪಾಪಮೇನುದಿಸುವುದೆ? ಹೊಮ್ಮುವುದೆ ಕೈಕೆಯಿಂ
ಮಂಥರೆಯ ವಿಕೃತರೂಪಂ? ಚಿತ್ತ ವಿಭ್ರಾಂತಿ
ದಿಟಮೆನಗೆ!''
                        ಎನುತ್ತೆ, ದುಃಸ್ವಪ್ನದಿಂದೊಯ್ಯನೆ

ಜಗುಳ್ವಂತೆ, ತಡೆಯಲಾರದೆ ತತ್ತರದಿನೆಳ್ದು,
ತೂಗುತಂ, ಬಾಗುತಂ, ತಪ್ಪುವಜ್ಜೆಯನಿಡುತೆ
ಗೋಡೆಯಂ ಪಿಡಿದು ಬಡಿಗೊಂಡಂತೆ ನಡೆವುತಂ,
ಕೋಪಗೃಹದಿಂದೆಂತೊ ಪೊರಗೆವಂದುದೆ ತಡಂ,
ನಿಲ್ಲಲಾರದೆ ಕುಸಿದು ಕುಳ್ತನಾ ಧರಣಿಪತಿ,
ಮಂತ್ರಶಕ್ತಿಗೆ ಸಿಲ್ಕಿ ಹಾವಾಡಿಗಂ ಬರೆದ
ಮಂಡಲದ ತಡೆಯೊಳಗೆ ಬುಸುಗುಡುವಹೀಂದ್ರನೋಲ್.
   ಕಾರ್ದ ವಿಷಮಂ ತಾನೆ ಮರಳಿ ಪೀರಲ್ಕೆಳಸಿ
ಬಳಿಸಾರ್ವ ನೀಲನಾಗಿನಿಯಂತೆ ತನ್ನೆಡೆಗೆ
ತಪಿಸುತ್ತೈತರುತಿರ್ದ ಭರತಜನನಿಯನಿರದೆ
ನೂಂಕಿದನ್, ಮುನಿಶಾಪಮಹಿಮೆಯಿಂದೆಂಬವೋಲ್,
ಕೋಪಿ:
      "ಕುಲಘಾತಿನಿಯೆ, ಪಾಪಿನಿಯೆ, ನಡೆ, ತೊಲಗು!
ಮಣಿಹಾರವೆಂದು ಕಂಠಕೆ ಮಾಲೆಯಂ ಸೂಡಿದೆನ್.
ಫಣಿಯಾಗಿ ಹೆಡೆಯೆತ್ತಿ ಕರ್ಚಿ ವಿಷವೂಡಿದುದು
ರಘುಕುಲದ ಮೆಯ್ಗೆ. ದುರ್ಬುದ್ಧಿಯಂ ನಿನಗದಾರ್
ಪೇಳ್ದರೀ ಕುಲಕೆ ಹಾಲಾಹಲವನೆರೆವ ಮತಿಯಂ?
ನೀಂ ಬೇಡಿದುದು ವರಮೆ? ನನ್ನ ಹೃತ್‌ಪಿಂಡಮಂ
ಪಿಂಡಿ ನೆತ್ತರ್ ಕುಡಿಯಲೆಳಸಿದೆः ನಿಶಾಚರಿಯೆ
ನೀಂ ದಿಟಂ! ರಾಮನಂ ನೋಡಿ ತಣಿಯದು ಮನಂ
ನನಗೇಗಳುಂ. ರಾಮನನ್ನಲ್ತು, ಕೇಳ್ ಕೈಕೆ,
ನೀನಡವಿಗಟ್ಟುತಿಹೆ ನಿನ್ನ ಮಾಂಗಲ್ಯಮಂ.
ಭರತ ರಾಮರ್ಗೆಣೆಸದಿರ್ ಭೇದಮಂ. ರಾಮ
ಚಂದ್ರೋದಯಕೆ ಭರತನಾನಂದ ಸಾಗರಂ
ಪ್ರೋಲ್ಲಾಸಗೊಳದೆ? ದುರ್ಬೋಧೆಗೊಳಗಾಗಿ ನೀಂ
ಕುಲಗೇಡಿಯಾಗದಿರ್. ನಿನ್ನ ಮೆಯ್ಯಂತಂತೆ
ನಿನ್ನ ಮನಮುಂ ಚೆಲ್ವನಾಂತಿರ್ಕೆ. ಮುತ್ತುಗಳ್
ಮುತ್ತುಸಿಪ್ಪಿನೊಳಿರಲ್ ಪ್ರಕೃತಿ; ಮತ್ತಾ ಫಣಿಯ
ತತ್ತಿಗಳಿರಲ್ ವಿಕೃತಿ! ಕಂಡರಿಯೆನಿನ್ನೆಗಂ
ನಿನ್ನೊಳ್ ವಿರೂಪಮಂ. ಇಂತೇಕಿದೊಮ್ಮಿಂಗೆ
ಇಂದೀ ವಿಕಾರಚಿತ್ತಂ ನಿನಗೆ, ಪೇಳೆನಗೆ,

ಇಂದೀವರಾಕ್ಷಿ?''
ಕೋಪದಿನೊಯ್ಯನೊಯ್ಯನೆಯೆ
ಇಳಿದಿಳಿದು, ಹೃದಯ ತಾಪದಿ ದೀನಮನನಾಗಿ,
ದುಃಸ್ಥಿತಿಯನಾಂತಾ ನೃಪೇಂದ್ರನಂ ಕಾಣುತಾ
ಕೇಕಯ ಕುಲೀನೆಯಾಕುಲೆಯಾದಳೆದೆಗರಗಿ.
ತನ್ನ ಕೇಳ್ಕೆಗೆ ತಾನೆ ಬೆದರಿದಳ್. ಕೊರಳ ಸೆರೆಗಳ್
ಬಿಗಿಯೆ, ಮೆಯ್ ನಡುಗಲಾ ಗದ್ಗದಿಸಿದಳ್ ಮಹಿಳೆ
ಕೈಮುಗಿದು:
''ರಾಜೇಂದ್ರ, ಕೊಳ್ಳೆನಗೆ ಬೇಡಮಾ
ನಿನ್ನ ವಾಗ್ದಾನಗಳ್. ನಿನಗಿನಿತು ನೋವೆಸಗಿ
ನಾನುಮಾ ನನ್ನ ತವರಿನೊಳಿರ್ಪ ಕುವರನುಂ
ಸೊಗದೊಳಿರ್ಪೆವೆ? ಮರೆತೆನಿನ್ನೆಂದುಮಾಂ ನೆನೆಯೆನಾ
ನಿನ್ನ ವರದಾನಮಂ. ಪೇಳ್ವುದೆ ತಡಂ ಬಯಕೆ
ಕಲ್ಪತರು ಮೂಲಮಂ ಸೇರ್ವುದೆಂದೆನಗೊಲಿದು
ರಾಮನಾಣೆಯನಿಟ್ಟುದಕೆ ಕೇಳ್ದೆನಲ್ಲದೆಯೆ
ಅಮಂಗಳಕೆ ನೋಂತೆನಿಲ್ಲಾಂ!''
ಕಬಂಧನ ಮೊರೆಯೊ?
ಶಬರಿಯ ಕರೆಯೊ? ರಾಮನಾತ್ಮಾಭಿಲಾಷಿತಮೊ?
ಪಾತ್ರಂಗಳಂತರಾಳದಿ ತನ್ನ ಸೂತ್ರಂಗಳಂ
ನಡೆಯಿಪಂತರ್ಯಾಮಿ ಶಕ್ತಿಯ ವಿಲಾಸಿತಮೊ?
ಕೈಕೆಯಾಡಿದುದಾಯ್ತು ಮನಕೆ ಮೊದಲಿಕೆಯೋಲ್!
ಪ್ರೋಜ್ವಲಿಸಿದುದು ಕೋಪನ ಜ್ವಾಲೆ ಭೂಮಿಪಗೆ.
ಪ್ರಾಣಾಗ್ನಿಪರ್ವತ ಜ್ವಾಲಾ ಮುಖಿಯ ಮುಖಂ
ನೀರ್ಬೆಂಕೆಯಂ ಪೊನಲ್ಗರೆಯುತೋಕರಿಪಂತೆ
ರೋಷಭೀಷಣನಾಗಿ ಕಾರ್ದನ್ ಕಠೋರಮಂ:
''ಪತನದಿಂ ಪತನಕೆನ್ನಂ ನೂಂಕಲೆಳಸುವೆ, ಪಾಪಿ.
ಕೊಲ್ಲಲೈತರ್ಪುರುಳ್‌ಗಣ್ಣೆಯಂ ಪೊನ್ನೆಂದು
ಕೊರಳ್ಗೆ ಸಿಂಗರಗೊಳ್ವ ಗಾಂಪನವೊಲಾದೆನಾಂ
ಕೈವಿಡಿದು ನಿನ್ನಂ. ವರಂಗಳಂ ನೀಡಲಾ
ರಾಮನನಡವಿಗಟ್ಟೆ ರಾಜ್ಯಮಂ ಬೇಡಿದಯ್!
ಮತ್ತೀಗಳವುಗಳಂ ಬೇಡವೆಂಬುವ ನೆವದಿ

ವಾಗ್‌ಭ್ರಷ್ಟನಂ ಮಾಡಿ ರವಿಕುಲ ಯಶೋದೀಪ್ತಿಯಂ
ನನ್ನಿಂದೆ ಮಸುಳಿಸುವುಪಾಯಮಂ ನೆನೆವೆ! ಕೇಳ್,
ಕೈಕೆ, ನಿನ್ನಂ ನೆಯ್ದನಾ ಪುಲಿ ದರಿಗಳೆರಡುಮಂ
ಕೂಡಿಸಿ ವಿಧಾತಂ! ನೀನೆನ್ನ ಸರ್ವನಾಶಂ!
ಪೆಣ್ಣಲ್ತು; ಕೀನಾಶನೊಡ್ಡಿದ ವಿನಾಶಪಾಶಂ!
ಅಂಚೆದಿಪ್ಪುಳ್ ಸಜ್ಜೆಯೊಳ್ ಪವಡಿಪಾತನಂ
ಕಲ್‌ಮುಳ್ಳಿಗಟ್ಟಲ್ಕದೆಂತು ಬಗೆದಂದೆ ನೀಂ?
ಚೆಲ್ವೆ ಕಿರುವೆಂಡಿತಿಗೆ ಮರುಳಾಗಿ ಮುಪ್ಪುದೊರೆ
ಕಂದನಂ ಕಾಡಿಗಟ್ಟಿದನೆಂದು ಲೋಕವೆಲ್ಲಂ
ನಗದಿಹುದೆ ಪೇಳ್, ಪಳಿಗೆ ಗಾದೆಗೈದೆನ್ನ ಪೆಸರಂ?''
    ಕರೆದವಿದ್ಯಾಮಾಯೆಯಂ ಬೆಸಸಿದನು ವಿಧಿ:
''ವಿಭೂತಿಯಾವಿಷ್ಕಾರ ಸಾಧನಾರ್ಥಂ ಬೇಗಮಾ
ಕೈಕೆಯಾತ್ಮಂಬೊಕ್ಕು ರಚಿಸು ವಿನ್ಯಾಸಮಂ!''
ರೂಪಲಾವಣ್ಯದಿಂ ಚಿನ್ನದ ಕಠಾರಿಯೋಲ್
ಮಿರಮಿರುಗಿ ನಿಂದಿರ್ದ ಕೈಕೆ, ತೆಕ್ಕನೆ ಬಿದಿಯ
ಕೈ ಝಳಪಿಸುವ ಕೈದುವಾದಳೆನೆ, ಮಿಂಚಿದಳ್
ಪುರ್ಬುಗಂಟಿಕ್ಕಿದ ಕಟಾಕ್ಷದಿಂ:
                    ''ಲೇಸಾಯ್ತು!
ಲೇಸಾಯ್ತು, ಕೋಸಲೇಶ್ವರ!'' ಸರ್ಪಿಣಿಯ ತೆರದಿ
ಸುಯ್ ಸುಯ್ದುಳಿದೆಯ ತಿದಿಯೊತ್ತಿ ಮೂಗಿನ ಸೊಳ್ಳೆ
ವಿಸ್ಫಾರಿಸಲ್: ''ಲೇಸಾಯ್ತು, ಲೇಸಾಯ್ತು! ತಪ್ಪು
ನಿನ್ನದಾಗಿರಲೇತಕೆನ್ನನೀಪರಿ ಬಯ್ದು
ವರ್ತಿಸುತ್ತಿರ್ಪೆ ಸಾಮಾನ್ಯನೊಲ್, ವನ್ಯನೊಲ್,
ಕೋಸಲಾಧೀಶ! ನೀನೆಯೆ ಮೆಚ್ಚಿ ಕೊಟ್ಟೆ ನನಗಾ
ವರಂಗಳಂ. ನೀನೊಪ್ಪಿ ಕೇಳೆಂದೊಡಾಂ ಕೇಳ್ದೆನಯ್.
ನಿನ್ನ ಗೋಳಿಡುವುದಂ ಕಂಡು ಕೊಳ್ಳೆಂದೆನಾ
ದುರ್ದಾನಮಂ! ಬರಿದೆ ನನ್ನನೇತಕೆ ಬಯ್ವೆ?
ಮಾವನ ಮನೆಗೆ ಕಳುಹುವಾ ನೆವದಿ ಕಂದನಂ
ನಾಡಿಂದೆ ಪೊರಗಟ್ಟಿ, ಭರತನಿಲ್ಲದ ವೇಳೆ
ಕಿತವರುಪದೇಶದಿಂದಶ್ಲೀಲದಾತುರದಿಂದೆ
ಪಟ್ಟಮಹಿಷಿಯ ಮಗಗೆ ಗುಟ್ಟಾಗಿ ಪಟ್ಟಮಂ

ಕಟ್ಟುವೀ ಕುಹಕವಿದ್ಯಾ ಪ್ರವೀಣಂ ನೀನೆ
ಮಸುಳಿಸಿದ ರವಿಕುಲ ಯಶೋದೀಪ್ತಿಯಂ, ಏನಬಲೆ
ನಾಂ ಸಮರ್ಥೆಯೆ ಮರಳಿ ಬೆಳಗಿಸಲ್? ಶಕ್ತನಾ
ರಾಮನೊರ್ವನೆ ಮಸುಳ್ದಾ ಯಶೋದೀಪ್ತಿಯಂ
ಮತ್ತೆ ಪೊತ್ತಿಸಲಂತೆ ಕಾಪಿಡಲ್ ಕಿಡದವೋಲ್?''
ಸತಿಯ ನಾಲಗೆಯ ಮಸೆದಲಗಿನಾಘಾತಕಾ
ಪೃಥಿವೀಶ್ವರಂ ಪ್ರತಿಯನುತ್ತರಿಸಲಾರದೆಯೆ
ಮತಿಶೂನ್ಯನಾಗಿ ಮೂರ್ಛೆಗೆ ಜೋಲ್ದನಗಮೋಡುವೋಲ್.
ಅತ್ತಲನಿತರೊಳೋಡಿದಳ್ ಕುಬ್ಜೆ. ಕಂಡಳಾ
ರಾಮನಂ, ಪಟ್ಟಾಭಿಷೇಕ ಶುಭವಾರ್ತೆಯಂ
ಕೇಳ್ದ ಸಂತೋಷದಿಂ ದೇವಾದಿದೇವನಂ
ಪೂಜಿಸುತ್ತಿರ್ದ ತಾಯೊಡಗೂಡಿ ಪೂಜೆಯೊಳ್
ಮುಳುಗಿರ್ದ ಗುರುಭಕ್ತಿಧಾಮನಂ. ರೋದಿಸುತೆ
ಕಾಲ್ವಿಡಿದಳಾತನಂ. ಕನಿಕರಿಸಿ ಕೈವಿಡಿದು
ತನ್ನನೆತ್ತಿದ ಕರುಣೆಗಳ ಬಲ್ಲಹಂ ಪ್ರಶ್ನಿಸಲ್,
ಗದ್ಗದಿಸಿ ತೊದಲಿದಳ್ ಸತ್ಯಮನಸತ್ಯದಿಂ
ಬೇರ್ಪಡಿಸಲಸದಳಂ ತಾನಪ್ಪವೋಲ್. ಬೆರ್ಚಿದಾ
ಮಾತೆಗೆ ಸಮಾಧಾನಮಂ ಪೇಳ್ದು, ನನ್ನಿಯಂ
ನಿಚ್ಚಯ್ಸಲೆಂದು ಮೈಥಿಲಿಯಾಣ್ಮನೈತಂದನಾ
ಭರತನಂಬಿಕೆಯಿದಿರ ದಶರಥನ ದುಃಸ್ಥಿತ
ದುರಂತ ಸನ್ನಿಧಿಗೆ.
ಮೂರ್ಛಿತ ಮಹೀವಲ್ಲಭನ
ಮೆಯ್ಯನೊಯ್ಯನೆ ನೆಗಹಿ ಕನಕ ಮಂಚಕ್ಕುಯ್ದು
ಬಿಜ್ಜಣಿಗೆಯಿಕ್ಕಿದನ್ ದಾಶರಥಿ. ಕುಬ್ಜೆಯುಂ
ಸಂತಯ್ಸತೊಡಗಿದಳ್ ಕೈಕೆಯಂ, ಇರ್ಕಯ್ಗಳಿಂ
ಮೊಗಂಮುಚ್ಚಿ ಅಳ್ತು ಕುಳ್ತಿರ್ದಳಂ. ಪ್ರೀತಿಯಿಂ
ತನ್ನನೇನೆಂದು ಬೆಸಗೊಂಡ ಕಂದಂಗಾ ಕೈಕೆ
ಪೇಳಲಾರದೆ ಬರಿದೆ ಗದ್ಗದಿಸಿ, ಗೂನಿಯಂ
ನೋಡಲವಳಾ ನಡೆದುದಂ ನುಡಿದಳೇನೆಂಬೆ
ನಗೆಯ ತಿಂಗಳ್ ಮಿನುಗೆ ರಾಮಾನನಾಂಬರದಿ.
ಧೀರ ಮಂದಸ್ಮೇರ ವದನಾರವಿಂದದಾ

ಕಾಂತಿ, ದಿವಿಜರ ಮುಖದ ತಿಮಿರಮಂ ತಿವಿತಿವಿದು,
ದಿವ್ಯ ಭಾಗೀರಥಿಗೆ ಪುಲಕವೀಚಿಯನುಬ್ಬಿಪೋಲ್
ಸೂಸಿದನು ಮಧುರ ವಾಙ್ಮಕರಂದಮಂ ಕಿವಿಗೆ
ಭರತಾಂಬೆಯಾ:
"ತಾಯಿ, ಇನಿತಲ್ಪಕೀ ಮಹಾ
ದುಮ್ಮಾನವೇಕೆ? ಕೈಗೂಡಿದುದು ನಿನ್ನಾಸೆ:
ರಘುಕುಲೇಶ್ವರನೆನ್ನ ಪಿತೃದೇವ ವಚನಮಂ
ಸಾಮಾನ್ಯಮೆಂದರಿಯದಿರ್. ಋಣಗಳೈಸಲೆ
ತನೂಭವರ್ ತಮ್ಮ ತಂದೆಯ ಋಣಕೆ. ನಾನುಮಾ
ಭರತನುಂ ಶತ್ರುಘ್ನ ಲಕ್ಷ್ಮಣರ್‌ವೆರಸಿ, ಕೇಳ್,
ಹೊಣೆ ನಿಲ್ವೆವಾ ನಿನ್ನ ಬಯಕೆ ಕೈಗೂಡುವೋಲ್,
ಮೇಣಯ್ಯನಿತ್ತ ವಾಗ್ದಾನಂ ಸಫಲಮಪ್ಪವೋಲ್!
ನೀನ್ ಕೇಳ್ದುದಾ ವರಂ ನಾನೆ ಬೇಡಿದುದಲ್ತೆ?
ಕಾಡನಲೆದಲ್ಲಲ್ಲಿ ಮುನಿವಸತಿಗಳೊಳಿರ್ದು
ಭೂಮಿಯಂ ನೋಡಿ ಬಹೆನೆಂಬೆನ್ನ ಬೇಡಿತಕೆ
ಬೆದರಿದಯ್ಯಂ, ಬೇಗದಿಂ ಮಕುಟಭಾರದಿನೆನ್ನ
ಹಾರಲೆಳಸಿದ ಗರಿಯ ಹಾರೈಕೆಯಂ ತಡೆವ
ಮೋಹದಿಂದಿಂತೆಸಗಿದನ್. ಭರತನಂ ವಂಚಿಸುವ
ಬುದ್ಧಿಯಿನಿತಿಲ್ಲಮಾತನೊಳದಕೆ ನಾಂ ಸಾಕ್ಷಿ.
ನಿನ್ನಾಸೆ ಸಾರುತಿದೆ ನನ್ನ ಕಲ್ಯಾಣಮಂ:
ನೀಂ ತಾಯ್ ದಿಟಂ! ಭರತನಾಳುವನ್; ಬಾಳುವನ್;
ಕೋಸಲ ಧರಾಭಾರಮಂ ಜಗಂ ಮೆಚ್ಚುವೊಲ್
ತಾಳುವನ್ ಶಿರದಿ! ವನವಾಸಮೇಂ ಸಾಹಸಂ?
ಗಿರಿವನಪ್ರಿಯನೆನಗೆ ಗಿರಿವನಾವಾಸಮೆ
ಕಲಾನಂದಕರಮಲ್ತೆ? ಮೇಣ್ ವಲ್ಕಲ ಜಟೆಗಳೇಂ
ಕಿರೀಟಕಿಂ ಕೀಳೆ? ಪಿತೃ ವಚನ ಪರಿಪಾಲನೆಯೆ
ನನಗೆ ಧರ್ಮಂ, ಪ್ರಥಮಮುತ್ತಮಂ!"
ಒಯ್ಯನೆಯೆ
ಕಣ್ದೆರೆದು ಮೆಯ್‌ತಿಳಿಯುತಿರ್ದ ತನ್ನಯ್ಯಂಗೆ
ಕೈಂಕರ್ಯವೆಸಗುತಿರೆ, ಕುಬ್ಜೆಯೆಂದಳ್ ಮತ್ತೆ:
"ಪೆತ್ತಾತನೆಂತಾದೊಡಂ ಕೊಡುವನೆ ಕುಮಾರಂಗೆ

ಪಟ್ಟಮಂ ಬಿಟ್ಟಡವಿಗೆಯ್ದುವ ನಿರೂಪಮಂ?
ದೇವನಿಂಗಿತವರಿತು ನಡೆವುದೆ ಪಥಂ ನಿನಗೆ.''
ಕುಬ್ಜಿಕೆಯ ಕಟಕಿಯ ಕಶಾಘಾತಕಟುತೆಗಾ
ದಶರಥಪ್ರಾಣಪಶು ತೇಂಕಿರ್ದುದಂ ಕಂಡು
ಬಾಷ್ಪಾರ್ದ್ರ ರಾಜೀವಲೋಚನಂ!
''ತಾಳ್, ತಾಯಿ!
ಕಂದನಳ್ಕರೆಯಿಂದೆ ತಂದೆ ಬಾಯ್ಬಿಟ್ಟದಂ
ಪೇಳದಿರ್ದೊಡಮಾನೆ ಪೋದಪೆನರಣ್ಯಕ್ಕೆ.
ಪದಿನಾಲ್ಕರವಧಿಯಂ ತೀರ್ಚಿ ಬಂದಪೆನಮ್ಮ,
ಮರಳಿ ನಿಮ್ಮಾಣತಿಯನೆಸಗಲ್ಕೆ; ಮತ್ತೆಯುಂ
ನನ್ನಯ್ಯನಡಿಯ ತಾವರೆಯ ಸೇವೆಯನೆಸಗಿ
ಪರಕೆವಡೆಯಲ್ಕೆ!''
ತಾನಾಡಿದೊಳ್ನುಡಿಗಳಂ
ಕೇಳ್ದು ಕಣ್ಬನಿವೊನಲ್ ಗರೆದು ಗೋಳಿಡುತಿರ್ದ
ಪಿತೃ ಪೂಜ್ಯಪಾದಂಗಳಿಗೆ ತನ್ನ ಬಾನೆಣೆಯ
ಬಿತ್ತರದ ಪರ್ವತೋನ್ನತ ಪಣೆಯನಿರದೊತ್ತಿ:
''ದುಃಖಿಸದಿರಯ್ಯ. ನಿನ್ನೊಲ್ಮೆಕೊಡೆ ನೆಳಲಿರಲ್
ಕಾಡಾದೊಡಂ ತಾಯಿ ಕೌಸಲೆಯ ಮಡಿಲಂತೆ
ತಣ್ಪೇವುದೆನಗೇಗಳುಂ. ನಡೆವುದೆಲ್ಲಮುಂ
ನಡೆವುದೊಳ್ಪಿಗೆ: ಸರ್ವಶಕ್ತಿಯುಂ ಜ್ಞಾನಮುಂ
ಮತ್ತೆ ಕಲ್ಯಾಣಮುಂ ತಾನಪ್ಪ ಕೃಪೆ ತಾನೆ
ಪಿಡಿದಿದೆ ಜಗದ್‌ರಥವನೆಳೆವ ಶಕ್ತ್ಯಶ್ವಕುಲ
ವಾಘೆಯಂ!''
ತಂದೆಯಂ ಬಲವಂದೆರಗಿ, ಮತ್ತೆ
ಕೈಕೆಗಭಿವಂದಿಸುತೆ ಪೊರಮಟ್ಟನಲ್ಲಿಂದೆ,
ಮಂಗಳಂ ಮನೆಯನುಳಿವಂತೆವೋಲ್. ಧುಮುಕಿತಯ್
ದಶರಥಮನಂ ಮತ್ತೆ ಮೂರ್ಛಾ ಶರಧಿತಲಕೆ:
ಪರಿಗೋಲನೇರ್ದು ಪೊಳೆಯಂ ಪಾಯ್ದು ಪೋಪವಂ
ಪೊನಲ ಪೊಕ್ಕುಳ್ಗೆ ಬರೆ ಕಾಣ್ಬನದೊ: ರಂಧ್ರದಿಂ
ನೀರೊಳ್ಕಿ ಸುಗ್ಗುತಿರ್ಪುದು ಬುಗ್ಗೆಯೋಲ್! ಕೂಡೆ
ದಿಗಿಲ್ಗೊಂಡದಂ ಕೈವೆರಳ್ಗಳಿಂ ತಡೆಯಲ್ಕೆ

ತೊಡಗುವನ್. ಸಾಹಸಂ ಬರಿದಾಗಿ, ತೂಂತಿನಿತು
ಪಿರಿದಾಗಿ, ನುಗ್ಗುತಿಹುದದೊ ಮೊದಲ್ಗಿರ್ಮಡಿಯ ನೀರ್!
ಬಿಲಜಲಂ ಬಗ್ಗಬಗ್ಗನೆ ಚರ್ಮನಾವೆಯಂ
ತುಂಬುತಿರೆ, ಕುಹರಕರುವೆಯನಿಡುಕಿ ಛಿದ್ರಮಂ
ಮುಚ್ಚಲಿಕ್ಕೆಳಸಲಾ ರೋಕಮಿನ್ನುಂ ಪೆರ್ಚಿ
ಮೊಳಕಾಲಿಗೇರಿದಪುದುದಕಂ. ಹತಾಶೆಯಿಂ
ನೀರಂ ತಡೆಯುವುಜ್ಜುಗವನುಳಿದು, ಕೈಗಳಂ
ಬೊಗಸೆಗೈದೊಳನುಗ್ಗಿದನಿತಂ ತುಳುಂಕಲ್ಕೆ
ಯತ್ನಿಪನ್, ಬರಿದೆ. ನೀರೇರುವುದು ನಾವೆಯಂ
ತುಂಬುತೆ, ಬೆಮರ್ದ್ದೀದುವಾತನೆರ್ದೆಯುಂ ಬರಂ.
ಪುರುಷಪ್ರಯತ್ನಮಂ ಬರ್ದುಕುವಾಸೆಯ ಕೂಡೆ
ನೀಗಿ, ಕೈಮುಗಿವನಾ ವ್ಯೋಮಕ್ಕೆ ದೇವರಂ
ಬೇಡಿ. ಬೇಡುತ್ತಿರಲ್, ದಡದ ಮರಗಳ್ ನಿಂತು
ನೋಡುತ್ತಿರಲ್ ಮುಳುಗುವನ್, ಕಣ್ಗೆ ಮರೆಯಪ್ಪ
ಹರಿಗೋಲ್ವೆರಸಿ. ಜಲೋಚ್ಛ್ವಾಸದಿಂ ಪರಿವುದಾ
ವಿಸ್ತೃತ ಸಲಿಲ ರಾಶಿ. ಕಂತಿದನೊ ತಾನಂತೆವೋಲ್
ದಶರಥನೃಪಂ ಮತ್ತೆ ಮೂರ್ಛೆಯ ತಳಾತಳಕ್ಕೆ!

## ಸಂಚಿಕೆ ೪

# ಊರ್ಮಿಳಾ

ಪರ್ವಿದುದೊ ದುರ್ವಾರ್ತೆ, ವಿಲಯವೇಳಾ ವನಧಿ
ಮೇರೆ ಮೀರುತ್ತುರ್ವರೆಯನವ್ವಳಿಸುವಂತೆ,
ಬಡಿದು ಸಿಡಿಲಂ ಸಕಲ ಸಾಕೇತ ಸಂಭ್ರಮದ
ಸಿರಿಗೆ. ಸಂದಣಿಸಿತಯ್ ನಗರದ ವಿಪುಲ ಜನಂ
ದೊರೆಯರಮನೆಯ ಮುಂದೆ, ಮಸಗಿದಂಬುಧಿಯಂತೆ
ಶಬ್ದಮಯಮಾಗಿ. ತೊಪ್ಪನೆ ತೊಯ್ದುದರಮನೆಯ
ಮಂದಿ ಕಣ್ಣೀರ ಸರಿಯಲ್ಲಿ. ಕ್ಷಣಪೂರ್ವದೊಳ್
ಹರ್ಷದಾಗರಮಾಗಿ ನಲಿಯುತಿರ್ದಾ ಅಯೋಧ್ಯೆ ತಾಂ
ಶೋಕಸಾಗರಮಾಯ್ತೆನಲ್, ಕಾಣ್ಬುದಸದಳಮಲಾ
ಮನುಜ ಮನದುತ್ತರಮುಖಿಗೆ ಬಿದಿಯ ಚಿರತಾರೆ!
ತನ್ನರಮನೆಯೊಳಿರ್ದ ಕೇಳಿದಳ್ ಕೌಸಲ್ಯೆ
ಕರುಳಿರಿಯುವಂತೆ ಬಾಂಬಟ್ಟೆಯಂ ತುಂಬೇರ್ದ
ತುಮುಲ ಕಳಕಳ ರುದಿತರಾವಂಗಳಂ. ನಡುಗಿದಳ್
ಪವನಪ್ರವಾಹಕರಳಿಯ ತಳಿರದಿರ್ವವೋಲ್
ತರತರನೆ. ಕೂಡೆ ಬಳಿಯಟ್ಟಿದಳ್ ದೂದಿಯಂ
ಕಾರಣವರಿಯೆ ಗೋಳ್ಗೆ. ತತ್ತಳಿಕೆಯಂ ಮತ್ತೆ
ತಾಳಲಾರದೆ ತಾನೆ ಚಾವಡಿಗಿರದೆ ಪರಿಯಲಾ
ಕಾಣಿಸಿತು ಕುಪಿತ ಲಕ್ಷ್ಮಣನೊಡನೆ ಬರುತಿರ್ದ
ಶ್ರೀರಾಮನಕ್ಷುಬ್ಧ ಶರಧಿಸಮ ವಿಗ್ರಹಂ,
ತಾಯ ದಿಟ್ಟಿಗೆ ಪಾಲನೀಂಟಿಸುತೆ. ಬಳಿಸಾರೆ,

ತನ್ನೆರಡು ತೋಳ್ಗಳಿಂದಪ್ಪಿ, ಮುಡಿಯಂ ಮೂಸಿ
ಮುಂಡಾಡಿ ನುಡಿಸೆ, ರಾಮಂ ಕೆಮ್ಮನಿರ್ದುದಂ
ಕಂಡುಮ್ಮಳಂಗೊಂಡು ಊರ್ಮಿಳೆಯ ಗಂಡನಂ
ಬೆಸಗೊಂಡೊಡಾತನುಂ ಕಲ್ಲುಂಡಿನಂದದಲಿ
ಮೂಗುವಟ್ಟಿರಲಿಕಾ ಪುತ್ರವತ್ಸಲೆ ಬೆದರಿ
ತೊಡಗಿದಳ್ ರೋದನಕೆ. ರಾಜೀವಲೋಚನಂ
ತಾಯ ಬಿಸುಗಂಬನಿಯನೊರಸಿ ಕೈದಾವರೆಯ
ಕೋಮಳತೆಯಿಂದೆ, ಮೆಲ್ಲನೆ, ನಡೆದುದೆಲ್ಲಮಂ
ನುಡಿದನಾದ್ಯಂತಮಂ. ಬಿಳ್ದಳ್ಕೈ ಹಮ್ಮೈಸಿ
ಕೌಸಲ್ಯೆ, ತವಿಯೆ ಪುಣ್ಯಂ ಸ್ವರ್ಗಧಾಮದಿಂ
ಮರ್ತ್ಯಸೀಮೆಗೆ ಬೀಳುವಪ್ಸರೆಯವೋಲ್. ಕೆಡೆದ
ಪಡೆದಮ್ಮನಂ ನೆಗಹಿ, ಕುಳ್ಳಿರಿಸಿ, ಸತ್ಕರಿಸೆ
ಮೈತಿಳಿಯುತಾಕೆ ರಯ್ಯನೆ ರಾಮಚಂದ್ರಂಗೆ:
“ಮಗನೆ, ಕೈಕೆಯ ಕುವರನಿಗೆ ರಾಜ್ಯಸಂಪದವೆ?
ಹಳುವವೆ ಗತಿಯೆ ನಿನಗೆ? ಕೆಟ್ಟೆನೈ ನಾನೆನ್ನಂ
ಕೈಬಿಟ್ಟರೆಲ್ಲರುಂ, ಓ ಕಂದ ಲಕ್ಷ್ಮಣಾ!
ಬಾ ತಂದೆ, ನೀನಾದೊಡಂ ಬಾಳ್ಗಡರ್ಪಾಗಿ
ಕಾಪಿಡೆನ್ನಂ! ಕೇಡದೇನನಾಂ ಕೋರಿದೆನೊ
ಪೋದ ಜನ್ಮದೊಳಾರ್ಗೆ? ಸತ್ಪುರುಷನಾವಂಗೆ
ಬಗೆನೋಯುವಂತೆ ನುಡಿದೆನೊ, ದೇವ? ಓ ವಿಧಿಯೆ,
ನಿನ್ನ ಗರಗಸಕಿನಿತು ಕರುಳಿಲ್ಲ? ಕಂದನಂ
ಪೆತ್ತು ಪಡುವಳಲಿಗಿಂ ಬಂಜೆತನಮಿನಿದಲ್ತೆ!
ವತ್ಸ! ವತ್ಸಾ!” ಮುಂದೆ ನುಡಿ ಹೊಮ್ಮಲಾರದಿರೆ
ಕಾಕುತ್ಸ್ಥನೆರ್ದೆಗೆ ಪಣೆಯಂ ತಗುಳ್ದಳಾ ತಾಯಿ.
ಮತ್ತಿನಿತನಂತರಂ ಚೇತರಿಸಿ ತೋಡಿದಳ್
ತನ್ನಾತ್ಮಮಂ:
“ತನ್ನುಸಿರನಡವಿಗಟ್ಟುತೆ ಒಡಲ್
ಮನೆಯೊಳೆಂತಿರ್ಪುದಯ್? ತೊಡೆಯ ತೊಟ್ಟಿಲೊಳಿಟ್ಟು
ಪಾಲೆರೆದು ಕರುವಿಟ್ಟು, ತೂಗಿ ಜೋಗುಳವಾಡಿ
ಲಾಲಿಸಿದ ಪಾಲಿಸಿದ ನಿನ್ನ ಮೆಯ್ಯಿದನೆಂತು
ಪೇಳ್ ಕಾಂತಾರ ರಾಕ್ಷಸಿಗೆ ತುತ್ತುಗಳ್ ಕೊಡಲಿ?

ಕರುಣೆಯಂ ದೂರಗೆಯ್ದೀ ನಿನ್ನ ಪರದೇಶಿಯಂ
ತಾಯಿಯಂ ತಳ್ಳದಿರೊ ಚಿಂತಾ ನರಕ ಚಿತೆಯ
ಪುತ್ರ ವಿರಹದ ಚಿತ್ರಭಾನುವಿಗೆ! ದಾಶರಥಿ,
ಹೆತ್ತ ತಾಯನೆ ತೊತ್ತುಗೈದೀ ಧರ್ಮಬುತ್ತಿಯಂ
ಕಟ್ಟಿ ಕಾಡಿಗೆ ಹೊತ್ತುಣುವ ಬುದ್ಧಿಯಂ ಮಾಣ್ದು,
ಕಿರುವೆಂಡಿತಿಗೆ ಮಾರುವೋದ ನಿನ್ನಯ್ಯನಂ
ತಿದ್ದಿ, ಕಾಪಿಡು ಕುಲದ ಬಾಳ್ವೆಯಂ, ಕೀರ್ತಿಯಂ!
ನೀನಡವಿಗೆಯ್ದುವೊಡೆ ನಾನುಮೆಯ್ದುವೆನೊಡನೆ,
ಕರುಗೂಡಿ ನಡೆವ ಗೋವಂತೆ!''
ಬಳಿ ನಿಂದಿರ್ದ
ಊರ್ಮಿಳೇಶಂ ತನ್ನ ದೊಡ್ಡಮ್ಮನೆಂದುದಂ
ಸಮ್ಮತಿಸುವೋಲ್, ಬೆಂಕೆಯಾದನನೆ ತಾನನ್ನೆಗಂ
ತಡೆದ ಕೋಪದ ತೀಕ್ಷ್ಣತೆಗೆ, ನುಡಿದನಿಂತೆಂದುಃ
"ತಾಯಿ, ಕಾಮಾಂಧವಶನಾಗಿ ಲಂಪಟನೊರ್ವ
ಮತಿಗೆಟ್ಟ ಮುಪ್ಪುದೊರೆ ಹೆಂಗುಸೊರ್ವಳ ಪದಕೆ
ದಾಸನಾಗುರುಳಿದರೆ, ಪೂಜ್ಯನೀ ರಾಮಚಂದ್ರಂ
ರಾಜ್ಯಮಂ ತ್ಯಜಿಸಿ ವಿಪಿನಾಂತರದ ವಾಸಮಂ
ಕೈಕೊಳ್ವುದೇಕೆ? ತೆಗೆ ತೆಗೆ! ಧರ್ಮಮಿಲ್ಲದಾ
ನೀಚ ನೃಪನಂ ಪ್ರಜಾಶಕ್ತಿ ಸಂಹರಿಪಂತೆ
ಕೊಲೆಗರ್ಹನಲ್ತೆ ನಾಣಿಲಿ ತಂದೆ? ಪಿತನಾದೊಡೇಂ?
ಚಪಲ ಮತಿ ಗೌರವಾರ್ಹನೆ? ಶಾಸನಾರ್ಹಂ!
ಕೇಳಗ್ರಜಾತ, ನೆರವಾದಪೆನ್ ನಿನಗೆ ನಾಂ.
ನಿನ್ನೊಡನೆ ನಾಂ ಬಿಲ್ವಿಡಿದು ನಿಲಲ್, ನೋಳ್ಪೆನಾಂ
ಸಾಕೇತ ಸಿಂಹಾಸನಕೆ ಸೆಣಸಿ ನಿಲ್ವರಾರ್?
ಸಾತ್ವಿಕಕೆ ಸಮಯಮಲ್ತಿದು. ತಾಯಿ, ರೋದನವನಿನ್
ಮಾಣ್! ರಾಮವನವಾಸಮೆಂಬುದದು ಸಿಡಿದೊಡೆದ
ದಶರಥನ ತಲೆಯ ದುಃಸ್ವಪ್ನಮಾತ್ರಂ!''
"ಹೆತ್ತುದಾ
ಹೆಂಗರುಳ್ ನೋವಿಂದೆ ಮುಂಗಾಣದಿರೆ, ನಿನಗೆ
ಮತಿಗೇಡಿದೇನ್, ಸೌಮಿತ್ರಿ?'' ರಾಮನೆಂದನ್ ತಡೆದು
ತಮ್ಮನಂ, "ನೀನತಿ ಮಹಾ ಪರಾಕ್ರಮಿಯೆಂಬುದಂ

ಬಲ್ಲೆನಾಂ. ನನಗೆ ಕೊರೆಯೆಂದರಿತೆಯೇಂ ವಿಕ್ರಮಂ?
ಗುರು ಕರುಣೆಯಿಂ ಕಲಿತ ಬಿಲ್‌ಬಿಜ್ಜೆಯಿಂದೆನಗೆ
ದುಸ್ಸಾಧ್ಯಮಿಹುದೆ ಪೇಳ್ ನರಸುರಾಸುರ ಲೋಕ
ಮೇಖಲಾ ಮಧ್ಯದೊಳದೇನಾದೊಡಂ? ನನಗೆ
ಧರ್ಮಮಂ ಬಿಟ್ಟನ್ಯ ಸಿರಿಯಿಲ್ಲ. ಧರ್ಮ ಸಹಿತಂ
ವಿಪಿನಮರಮನೆ; ಧರ್ಮ ರಹಿತಮೀ ರತ್ನಮಯ
ರಾಜಸೌಧಂ ಶ್ಮಶಾನಕೆ ಮಿಗಿಲ್ ಭೀಕರಂ.-
ಮತ್ತೊಂದನೊರೆವೆನಾಂ: ಮುನಿಯದಿರ್, ಸೌಮಿತ್ರಿ.
ಬರಿದೆ ಬಯ್ಬುದೆ ತಂದೆಯಂ, ತಿಳಿಯದಾಂತರ್ಯಮಂ?
ಕೋಸಲದ ನೆಲದ ದೊರೆತನವೆನಗೆ ದೊರೆಯದಿರೆ
ಕೇಡೆಂದು ಬಗೆಯದಿರ್: ಲೇಸನೆಸಗುವ ವಿಧಿಗೆ
ಬಹುಪಥಗಳುಂಟು ನಡೆಯಲ್. ಇಂದಿನಿಷ್ಟಮೆಯೆ
ಮುಂದನಿಷ್ಟಕೆ ಹೇತುವಪ್ಪಂದದಿಂ, ಇಂದಿನ
ಅನಿಷ್ಟಮೆಯೆ ತೊಟ್ಟಿಲಾಗದೆ ಮುಂದಣಭ್ಯುದಯ
ಶಿಶುಗೆ? ಕೀರ್ತಿ ಲಭಿಪುದು ಮುಂದೆ ನಾನೀ ಪೊಳ್ತು
ತೊರೆವ ರಾಜ್ಯಕೆ ನೂರುಮಡಿ ಶಾಶ್ವತದ ಸಿರಿಯ
ಸಾಮ್ರಾಜ್ಯಮಹುದೆನಗೆ. ನಿತ್ಯಮೆನ್ನಂ ಕರೆವ
ಕನಸೊಂದನೊರೆವೆನಾಲಿಪುದು. ಏನೆಂದರಿಯೆನಾಂ.
ಗೋಚರಿಸುತಿವೆ ಕಡಲ್ ಕಾಡುಗಳ್, ತರತರದ
ಪ್ರಾಣಿಗಳ್, ಪರ್ವತಶ್ರೇಣಿಗಳ್. ದಿನದಿನಂ
ಗಿರಿಸದೃಶ ಭವ್ಯನೊರ್ವಂ ಮಹಾವಾನರಂ
ಬೆಳೆಬೆಳೆಯುತಾಕಾಶ ಚುಂಬಿ ಶೈಲಾಗ್ರದೊಳ್
ವಿಸ್ತೃತವ್ಯೋಮ ಪಟಕೆದುರಾಗಿ ನಿಂದೆನಗೆ
ಕೈವೀಸಿ ಕರೆಯುತಿರ್ಪನ್ ದಕ್ಷಿಣಾಪಥಕೆ.
ಮನಮರಿಯದದರರ್ಥಮಂ; ತುಡಿವುದಾತ್ಮವಾ
ದೆಸೆಗೆ. ಆ ಕರೆಯ ಕೂರ್ಮೆಯೆ ಇಲ್ಲಿ ನಮ್ಮ ಬಾಳಂ
ಕಡೆದು ತೆರೆತೆರೆಯೆಬ್ಬಿಸಿರ್ಪುದೆನೆ, ದೈವಮಂ
ಮೀರ್ವರಾರ್?''
ಅಣ್ಣನಂ ನುಡಿಯಲೀಯದೆ ಮುಂದೆ,
ಮದ್ದಾನೆ ಸೊಂಡಿಲಂ ತೂಗಿ ಬೀಸುವ ತೆರದಿ
ತೊನೆದು ತೋಳಂ ಲಕ್ಷ್ಮಣಂ:

"ಸಾಲ್ಗುಮೀ ಭ್ರಾಂತಿ,
ಕನಸಿನ ಮತ್ತೆ ದೈವದಾ! ವೀರ ರಘುಕುಲಜ ನೀಂ,
ಬಿದಿಪಣೆಯ ಬರೆಪವನೊರಸಿ ಮರಳಿ ಬರೆಯಲ್ಕೆ
ಕಲಿಯಾಗಿಯುಂ ನುಡಿದೊಡಿಂತು ನಗೇಡಲ್ತೆ?
ಹೇಡಿಗಳಿಗುಚಿತಮಾ ಸೊಲ್; ತಗದು ಧೀರರ್ಗೆ.
ಪುರುಷಕಾರಮೆ ಬಿದಿಗೆ ಬಾಳುಸಿರ್. ಶೌರ್ಯಮಿರೆ
ಕೃಪಣವಿಧಿ ಮುಕ್ತಹಸ್ತಂ. ಧರ್ಮಮೇನಿಲ್ಲಿ,
ಕೈಕೆ ದಶರಥರಿರ್ವರೊಳಸಂಚು ತೋಡಿದೀ
ನರಕದಲಿ? ಮುಳ್ಗೆ ಮುಳ್ಳೆಯೆ ಮರ್ದ್ದು; ಬೇರಿರದು
ಭೇಷಜಂ. ದುರ್ವಿಧಿಯನಡ್ಡಗಟ್ಟುವೆನಿಂದು,
ನೀಡಾಜ್ಞೆಯಂ! ತಿವಿಯುತಂಕುಶದ ಮೊನೆಯಿಂದೆ
ಮಾವುತಂ ಮದಕರಿಯನೆಂತು ತನ್ನಿಚ್ಛೆಯಾ
ಮಾರ್ಗಕೆ ಮರಳ್ಚುವನೊ ತಾನಂತೆವೊಲ್ ದೈವವಂ
ಜುಟ್ಟುವಿಡಿದೆಳೆತರ್ಪೆನೊಳ್ವಟ್ಟೆಗಿಂದು! ನೀಂ
ನೋಡುತಿರ್."
ಲಕ್ಷ್ಮಣನ ಬಳಿಗೆಯ್ದಿ, ಮುಡುಹಿನೊಳ್
ಕೈಯಿಟ್ಟು, ಸೋದರನ ವಾದವನೊರಸುವಂತೆ
ತಾನವನ ಕಣ್ಬನಿಯನೊವುತೊಯ್ಯನೆ ನೀವಿ,
ರಾಮನೆಂದನು ಕಿರುನಗೆಯ ತುಟಿಯ ಕೊಂಕಿಂದೆ:
"ದೈವಮಂ ಮುಂದಲೆವಿಡಿದು ತರುಬುವದಟಿರ್ಕೆ,
ಅವರಜನೆ. ಮೇರೆಯಿದೆ ಮರ್ತ್ಯದ ಪರಾಕ್ರಮಕೆ.
ಮರ್ತ್ಯದಾಳ್ ಬಿದಿಯೊಡನೆ ತಾಂ ನಡೆಯುವನ್ನೆಗಂ
ಕಲಿ; ಬಿಂಕದಿಂ ಬಿಧಿಗಿದಿರ್ ಮಲೆಯೆ ಬಲಿ, ಕೂಡೆ
ತಾನದರ ಚಕ್ರಶೈಲತೆಗೆ. ಪಾಯದಿರು ತಲೆ
ಬಲ್ಲಿತೆಂದರೆಬಂಡೆಯಂ. ದುಡುಕದಿರು, ತಮ್ಮ.
ಪಿತನ ದೌರ್ಬಲ್ಯದೊಳೆ ಕಾಣ್ ವಿಧಿಯ ವಿನ್ಯಾಸಮಂ.
ನಿನ್ನ ಮಾತನೆ ಕೇಳ್ದು, ಬಂದೆಡರನೆಲ್ಲಮಂ
ಗೆಲ್ದು, ಸಿಂಹಾಸನವನಡರೆ ನಾಂ, ನೆಮ್ಮದಿಯೆ ಪೇಳ್
ಕೋಸಲಕೆ? ನಮ್ಮ ನಮ್ಮಂತಃಕಲಹದಗ್ನಿ ತಾಂ
ಸುಟ್ಟುರುಹದಿಹುದೆ ನಾಡನಿತುಮಂ? ಕಾಡಿಂಗೆ

ನಾನೊರ್ವನಾಗುವುದು ಲೇಸೊ? ಯುಗಯುಗಗಳಿಂ
ರವಿಕುಲದರಸುಗಳ್ಗೆ ನಚ್ಚುನೆಲೆವೀಡಾದ
ನಾಡಿದೆಲ್ಲಂ ತವಿದು ಕಾಡಾಗುವುದು ಲೇಸೊ?
ನಾಡ ಹಿರಿಯೊಳ್ಪಿಗೋಸುಗಮೆ ಬಲಿಗೊಡುವೆನಯ್
ನಾನೆನ್ನ ಕಿರಿಯೊಳ್ಪನಾನಂದದಿಂ. ನೀನದಕೆ
ನೆರವೀಯವೇಳ್ಕನಗೆ, ಸೋದರನೆ. ತೊರೆ ರಭಸಮಂ.''
ನಾಗಸ್ವರಂಗೇಳ್ದ ನಾಗರನ ತೆರನಾಗಿ
ಹೆಡೆಮುಚ್ಚಿತೊಯ್ಯನೊಯ್ಯನೆ ಮೊಗಕೆ ಹದಗೆಂಪು
ಕಾಯ್ಬಿತ್ತ ಮುನಿಸು ಲಕ್ಷ್ಮಣಗೆ. ಜಾನಕಿಯ ಪತಿ
ಕುರಿತು ಕೌಸಲ್ಯೆಯಂ: ''ನೀನಳಲದಿರು, ತಾಯೆ;
ಕಿರಿದು ಬೇಗನೆ ಮುಗಿಸಿ ಬರ್ಪೆನೆಂಟಾರರಾ
ವನವಾಸಮಂ. ಸತಿಗೆ ತನ್ನ ಪತಿಯಂ ತ್ಯಜಿಸಿ
ಬಾಳ್ವುದರಮಲ್ತು. ಮುಪ್ಪಡಸಿದೆನ್ನಯ್ಯಂಗೆ
ಶುಶ್ರೂಷೆವೇಳ್ಕುಂ. ನನ್ನೊಲ್ಮೆಗೇಂ ಕಡಿಮೆ,
ಹೇಳವ್ವ, ನಿನಗೆ ಬಾಲರ್ಷಿ ಭರತನ ಕೂರ್ಮೆ?
ನಾನಿಲ್ಲದಂದು ನೂರ್ಮಡಿಯಾಗಿ ನಳನಳಿಸಿ
ತಳಿರುತದು ಮುತ್ತಿ ಮುದ್ದಿಸದಿಹುದೆ? ನಿನ್ನಂ?-
ಹೋಗಿಬರುವೆನು ಹರಕೆಗೈ, ತಾಯೆ; ದುಃಖಿಸದೆ
ಹರಕೆಗೈ. ಕೋಸಲಕ್ಷೇಮಕ್ಕೆ ಹರಕೆಗೈ.
ರವಿಕುಲದ ಜಸಕಾಗಿ ಹರಕೆಗೈ. ಸತ್ಯಕ್ಕೆ,
ಧರ್ಮಕ್ಕೆ, ಪಿತೃವಾಕ್ಯಪರಿಪಾಲನಕ್ಕೆ, ಮೇಣ್
ನಿನ್ನೀ ಕುಮಾರನಾತ್ಮೋದ್ಧಾರಕೋಸುಗಮೆ
ಹರಕೆಗೈ; ಹರಕೆಗೈ! ಹೋಗಿಬರುವೆನು, ತಾಯೆ,
ಹರಕೆಗೈ! ಬೇಡುವೆನು ಕೈಮುಗಿದು, ಕಾಲ್ಮುಟ್ಟಿ,
ನಿನ್ನಡಿಯ ತಾವರೆಗೆ ಮುಡಿಚಾಚಿ; ಹರಕೆಗೈ!''
ಮುದ್ದು ಮಗನಂ ತೋಳ್ಗಳಿಂ ಬಾಚಿದಳ್ ತಬ್ಬಿ.
ಕಣ್ಣೀರ ಧಾರೆಯನೆರೆದು ತಳಿದಳಾ ತಾಯಿ
ಮಂಗಳಾಶೀರ್ವಾದ ಶೇಷೆಯಂ, ಆಲಿಸಿದ
ವಿಶ್ವದ ಚರಾಚರಂ ರೋಮಾಂಚಕಂಚುಕಿತ
ಗಾತ್ರಮಪ್ಪಂತೆ:

"ಜೈಸುಗೆ ವಿಧಿಯ ವಜ್ರೇಚ್ಛೆ!
ಗೆಲ್ಗೆ ನಿರುತಂ ಋತಂ! ಜಗದೀಶ ಕೃಪೆಯೆನಗೆ
ದಯೆಗೆಯ್ಗೆ! ಗೆಲಮಕ್ಕೆ ದೇವರ್ಕಳೆಲ್ಲರ್ಗೆ!
ಜಯಮಕ್ಕೆ ಮಾತೃವೊಲ್ಮೆಯ ಮಹತ್ ಪ್ರಾರ್ಥನೆಗೆ!
ಓ ಧರ್ಮದೇವತೆಯೆ, ಮಗನೀತನೆನ್ನವಂ;
ನಿನ್ನಂಕಪರ್ಯಂಕದೊಳಗಿಟ್ಟು ಕಳಿಪೆನಾ
ಹೇರಡವಿ ಪೊಡವಿಯ ಹುಲಿಯ ಹೊಡೆಗೆ. ಪಾಲಿಸೌ
ಪರದೇಶಿಯಂ! ನೀನೆ ತಾಯಮ್ಮ ತಬ್ಬಲಿಗೆ,
ನನ್ನ ಕಂದಗೆ, ರಾಮಚಂದ್ರಂಗೆ! - ನಡೆ, ಮಗನೆ,
ತಡೆಯಲಾರ್ಪೆನೆ ನಿನ್ನನಾಂ? ನದಿಯನಚಲಾದ್ರಿ
ಪಡೆದು ತಡೆದೊಡೆ ನಿಲ್ವುದೇಂ ಶರಧಿಯಾತ್ರೆಯಂ ತಾಂ
ಕುದಿದು ಕೈಕೊಳದೆ? ತಾಯೊಲ್ಮೆಯಿದು ಕಿರಿದಲ್ತೆ
ನಿನ್ನ ಹಿರಿಬಾಳ್ಗೆ! ಸಿರಿವೊಳೆವೆತ್ತ ಗಿರಿಶಿಖರಿ
ಕರುಬಲೇವುದು ವಾರ್ಧಿಯಂ? ಜಗಜ್ಜೀವನಂ
ಕರೆಯುತಿರೆ ಕೈವೀಸಿ, ತಡೆಯಲಾರ್ಪಳೆ ತಾಯಿ
ತಾನಬಲೆ ನಿನ್ನಂ? ಹೆತ್ತಾವೊತ್ತೆ ಶಂಕಿಸಿದೆ
ನಾನಿದಂ! ಪಕ್ಷಿಶಿಶು ಮೊಟ್ಟೆಯನೊಡೆಯುತೆಂತು
ಗರಿಗೆದರುತಾಗಸದ ಸಾಹಸಕೆಳಪುದಂತೆ
ಮನೆಯೊಲ್ಮೆ ತಾಯೊಲ್ಮೆ ನಾಡೊಲ್ಮೆಗಳನೊಡೆದು
ಕಾಡಿಗೈದುವ ನೆವವನೊಡ್ಡಿ ಹಾರುವೆಯಿಂದು,
ಬಿಂದು ಸಿಂಧುವ ಸೇರುವೋಲಂತೆ! ತೆರಳಯ್ಯ,
ತೆರಳೊ! ಪದಿನಾಲ್ಕರವಧಿಯ ಮುಗಿಸಿ ಮರಳಯ್ಯ,
ಮರಳೊ! ಬೇಗನೆ ಮರಳೊ! ಸೊಗಮಕ್ಕೆ, ಗೆಲಮಕ್ಕೆ,
ನಿನಗೆನ್ನ ಕಂದಯ್ಯ! ನೀನಾವ ಧರ್ಮಮಂ
ಗುರಿಗೆಯ್ದು ಹೊರಟಿಹೆಯೊ ಆ ಧರ್ಮದೇವತೆಯೆ
ರಕ್ಷೆಯಾಗಲಿ ನಿನಗೆ! ನೀಂ ಪೂಜೆಗೈದಿರ್ಪ
ದೇವಾನುದೇವತೆಗಳೆಲ್ಲರೂ ನಿನಗಕ್ಕೆ
ರಕ್ಷೆ! ಮಾತಾಪ್ರೀತಿ, ಪಿತೃಭಕ್ತಿ, ಜನರೊಲ್ಮೆಗಳ್
ಚಿರಂಜೀವಮಂ ನಿನಗೆ ದಯೆಗೆಯ್ಗೆ! ಗಿರಿವನಂ
ಪಕ್ಷಿಪನ್ನಗರೆಲ್ಲರುಂ ರಕ್ಷೆಯಕ್ಕಯ್ ನಿನಗೆ!
ರಕ್ಷಿಸಲಿ, ಹಗಲಿರುಳು ಬೈಗುಬೆಳಗುಗಳಿನಂ

ಶಶಿ ತಾರೆ ಸಪ್ತರ್ಷಿಮಂಡಲಂ ಶ್ರುತಿಚಯಂ
ದಿಕ್ಪಾಲ ದೇವದಾನವರೆಲ್ಲರುಂ ರಕ್ಷಿಸಲಿ!
ಕ್ರಿಮಿ ಕೀಟ ಕಪಿ ಚೇಳುಗಳ್ ಹುಲಿ ಸಿಂಹನೆಕ್ಕಲಂ
ಕಾಳ್ಕೋಣ ಮೊದಲಪ್ಪ ವಿಷಜಂತು ಕೋಳ್ಮಿಗಂಗಳ್
ಕಾಪಾಡಲೀ ನನ್ನ ಮೊಲೆವಾಲ ಮೂರ್ತಿಯಂ,
ರವಿಕುಲ ಲಲಾಮನೀ ರಾಮಾಭಿರಾಮನಂ!
ಮಗುವು ಮಜ್ಜನಕಿಳಿಯುವಂದು, ಜಲದೇವಿಯರೆ,
ಮಕರ ನಕ್ರಗಳಿಂದೆ ರಕ್ಷಿಸಿಂ! ರಕ್ಷಿಸಿಂ
ಕಾಂತಾರದಧಿದೇವಿಯರೆ, ಕಂದನಡವಿಯೊಳ್
ಪುತ್ತಿನೆಡೆ ಪವಡಿಸಿರೆ; ಮತ್ತೆ ಮರಗಳ ಕೆಳಗೆ
ತಂಪುನೆಳಲೊಳ್ ಮಲಗಿರಲ್ಕೆ! ತಾಯೊಲವಾಣೆ
ನಿಮಗೆ, ಓ ಸಿಡಿಲ್ಮಿಂಚು ಬಿರುಗಾಳಿಗಳೆ, ಕೇಳಿಮ್:
ಹೆತ್ತು ಹೊರೆದೀ ಹೃದಯದಭಿಶಾಪ ನಿಮಗಕ್ಕೆ
ಹಸುಳೆ ರಾಮಗೆ ನಿಮ್ಮ ಕತದಿಂದೆ ಭವಿಸಿದಡೆ
ಕೇಡು! ಓ ವಿಧಿಯೆ, ಹೇ ಸರ್ವಲೋಕಪ್ರಭೂ,
ಕೊಳ್ಳಿದೊ ನಿವೇದಿಸುವೆನೆನ್ನಾತ್ಮದೊಲುಮೆಯಂ
ರಾಮ ಮಂಗಲ ಕಾರಣಂ ತವಚರಣ ತಲಕೆ!"
ಪರಸಿ, ಮಗನಂ ಪ್ರದಕ್ಷಿಣೆವಂದು, ಪ್ರೇಮದಿಂ
ಬಿಗಿದಪ್ಪಿ, ಮುದ್ದಿಸಿ ಪುನಪ್ಪುನಂ, ಮೈಮರೆವ
ಮಾತೆಯ ಪದದ್ವಯಂಗಳಿಗೆ ಪಣೆಯಿಟ್ಟೊತ್ತಿ
ಪೊಡಮಟ್ಟು, ತುಳ್ಕಿಬಂದಳ್ಕರೆಯ ದುಕ್ಕಮಂ
ಕಾಣಿಸದ ಸಂಯಮದ ಶೀಘ್ರತೆಯಿನಲ್ಲಿಂದೆ
ಬೀಳ್ಕೊಂಡನೈದಿದನ್ ಕಾಂತೆಯಂತಃಪುರಕೆ!

ಪ್ರಿಯನ ಪಟ್ಟಾಭಿಷೇಕೋತ್ಸವದ ಸಂಭ್ರಮಕೆ,
ಸುರಚಾಪಲತೆಗಳಂ ತಿರಿತಂದು ವೃಂದಮಂ
ರಚಿಸಿದೊಲೆಸೆವ ವಿವಿಧ ವರ್ಣಗಂಧಂಗಳಿಂ
ಶೋಭಿಪ ಕುಸುಮರಾಶಿಗಳ್ ಬಳಸೆ, ತಾನೊಂದು
ಗುರುತಿಸಲ್ಕಸದಳಂ ಸುಮರಾಶಿಯೆಂಬಂತೆ
ಮೆರೆದಿರ್ದು, ಸೀತಾಳಿದಂಡೆವೂ ಮಾಲೆಯಂ
ಕಟ್ಟುತಿರ್ದಾಕೆ, ಚರರಿಲ್ಲದೊರ್ವನೆ ಬಂದ
ಪ್ರಾಣೇಶನಂ ಕಂಡು, ಬಿಲ್ಲುಂ ಬೆರಗುಮಾಗಿ,

ರಿಕ್ತಾಗಮನ ಖಿನ್ನತೆಗೆ ಕಾರಣಂ ಕೇಳೆ,
ಪೇಳ್ದನಿನಕುಲ ಸೂನು ಜಾನಕಿಗೆ: "ಪ್ರಿಯೆ, ನನಗೆ
ಸಂಪ್ರಾಪ್ತಮಾಗಿದೆ ವನವ್ರತಂ. ಬೆದರದಿರ್
ಧೀರ ರಾಜರ್ಷಿಸುತೆ. ಸದ್ವಂಶ ಸಂಜಾತೆ,
ಸೀತೆ, ನೀನಾಕ್ರೋಶಗೊಳ್ಳದಿರ್. ಶಾಂತಿಯಂ
ತಳೆದು ಧೈರ್ಯಂಗೆಡದೆ ಪತಿಗೆ ನೆರವಾಗಿ, ಸತಿ,
ಪೊರೆ ಧರ್ಮಮಂ. ನೀನೆ ಸಹಧರ್ಮಿಣಿಯೆನಲ್ಕೆ
ಹೃದಯಧರ್ಮಕೆ ಹೃದಯಮಲ್ತೆ?" ಎನುತೊಯ್ಯನೆಯೆ
ಮುಂಗುರುಳನೆಳವಿ ಕದಪಂ ಸವರಿ ಸಂತೈಸಿ,
ನಡೆದುದೆಲ್ಲವನೊರೆದನಾದ್ಯಂತಮಂ. ಕೇಳ್ದು,
ಮೆಲ್ಲಲರಿಗೊಲೆವ ತಳಿರಂತಿನಿತು ತುಟಿನಡುಗೆ
ನುಡಿದಳಾ ಕ್ಷಮೆಯ ಸುತೆ, ನಲ್ಲನಿನಿಗಂಗಳಿಗೆ
ಜೇನಿಳಿವ ಕಂಗಳಿಂದಾಲಿಂಗನಂ ಗೆಯ್ದು:
"ನಿನ್ನನಲ್ಲದೆ, ನಲ್ಲ, ಕೋಸಲ ನೆಲವನಲ್ಲ
ನಾನೊಲ್ದುದಂದು. ಮೇಣೆಂದಿಗುಂ ಮನೆಯೆನಗೆ
ರಮಣನೆರ್ದೆಯಲ್ಲದೆಯೆ ಮಾವನರಮನೆಯಲ್ತು.
ನೀನಿರಲ್ಕೆನ್ನೊಡನೆ ನಾಡಾದರೆಂತಂತೆ
ಕಾಡಾದೊಡಂ ಸುಖಿಯೆ ನಾಂ. ದುಃಖಿ ನಿನಗಾಗಿ.
ನಿನ್ನ ನೋವಿಂಗಳಲ್ಕೆಯೆ ಹೊರತೆನಗೆ ಬೇರೆ
ಸಂಕಟದ ಸೋಂಕೆಲ್ಲಿ?"
"ನಿಲ್ ನಿಲ್, ಮಂಗಳಾಂಗಿ,
ರಾಮಂಗೆ ವನವಾಸಮಿನ್ನುಳಿದವರ್ಗಲ್ತು."
"ರಾಮನರ್ಧಾಂಗಿ ಸೀತೆಗೆ ಬೇರೆತನವಿಲ್ಲ.
ಪತಿಯ ಸುಖದುಃಖದರ್ಧಂ ಸತಿಗೆ."
"ಕೇಳ್, ಜಾನಕಿ,
ನೀನತ್ತೆ ಮಾವಂದಿರಂ ಸೇವಿಸುತ್ತೀಯೆಡೆಯೆ
ಧರ್ಮಮಾಚರಿಸುತಿರ್ಪುದೆ ಪರಮ ಕರ್ತವ್ಯಂ."
"ಪತಿಸೇವೆಗಿಂ ಮಿಗಿಲ್ ಸೇವೆಯಿಲ್ಲಂಗನೆಗೆ.
ರಾಜರ್ಷಿ ತಂದೆಯುಂ, ಗುರುಗಳುಂ, ಧರ್ಮಮಂ
ಬೋಧಿಸಿಹರೆನಗೆ."

"ಮೈಥಿಲಿ, ನೀನಡವಿಗೆನ್ನೊಡನೆ
ಹಿಂಬಾಲಿಪೊಡೆ ಕಠಿನವಹುದೆನ್ನ ಜೀವನಂ
ನಿನ್ನ ರಕ್ಷೆಯ ಭಾರದುದ್ವೇಗದಿಂ. ಸುಕುಮಾರಿ,
ನೀನರಿಯೆ ವಿಪಿನವಾಸದ ಭಯಂಕರತೆಯಂ,
ಘೋರಮಂ, ಕ್ಲಿಷ್ಟಕಷ್ಟಂಗಳಂ ಮೇಣ್ ನಷ್ಟಮಂ."
"ಸ್ತ್ರೀಮಾತ್ರಳಂ ಭೀರುವಂ ಕೂಡಿ ಕಾಡಿನೊಳ್
ಬಾಳ್ವುದೆಂತೆಂದು ಶಂಕಿಸದಿರೈ. ಹೇಡಿಗಳ್
ಹಿಂಜರಿವರಾದಡೆಲೆ ವೀರಪುರುಷೋತ್ತಮನೆ,
ಶಸ್ತ್ರಾಸ್ತ್ರಮಂತ್ರವಿದ್ಯಾಪ್ರವೀಣಂ ನಿನಗೆ, ಕೇಳ್,
ಪೆಣ್ಣೊರ್ವಳೊಲಿದಳಂ ರಕ್ಷಿಪ್ಪುದೇಂ ಕರಿಗೆ
ತೃಣಕಣದ ಭಾರಕೆಣೆಯಲ್ತೆ? ಕೇಳ್ ಪೂಣ್ಕೆಯಂ:
ನಿನ್ನ ನೆಳಲೆಂತು ನಿನ್ನಡಿಗೆ ತೊಡಕಾಗದೆಯೆ
ನಿನ್ನನೊಡವರ್ಪುದೇಗಳುಮಂತುಟೆಯೆ ವಲಂ
ಬಂದಪೆನ್, ಪಾದಪೂಜೆಯ ಸೇವೆಗೋತನುದಿನಂ
ಕೈಂಕರ್ಯವೆಸಗಿ. ಪೇಸಿದಪೆನಮರರ ಸುಖಕೆ
ನಿನ್ನನುಳಿದಾಂ, ಪ್ರಿಯನೆ; ಮಾವನರಮನೆ ಸೊಗದ
ಮಾತಿರಲಿ!...ಹೆದರದಿರು ಹೆಣ್ಣೆಂದು: ನಿನ್ನ ಕಣ್,
ಬಗೆಗೆ ನಾಲಗೆಯಾಗಿ, ಸೂಚಿಸುತ್ತಿಹುದೆನಗೆ
ನಿನ್ನೆದೆಯ ಶಂಕೆಯಂ. ಪತಿವ್ರತಾಧರ್ಮಮಂ
ಕೈಕೊಂಡು, ನಿಯಮ ವಜ್ರದೊಳಿಂದ್ರಿಯಂಗಳಂ
ಬಿಗಿದು ದೃಢಮನದಿ, ಸೇವಿಪೆ ನಿನ್ನನ್, ಅವಚತ್ತು
ರಾಜೋಪಭೋಗ ಸರ್ವಸ್ವಮಂ! ಬದುಕುವೆನ್
ಹಣ್ಣುಹಂಪಲು ಕಂದಮೂಲಂಗಳನೆ ತಿಂದು;
ಮತ್ತಾವ ತೆರದೊಳುಂ ನಿನಗಡಚಣೆಯನೀಯೆನ್.
ನಿನ್ನೊಡನೆ ಬಾಳ್ವ, ನಿನ್ನೊಡನಲೆವ, ಮೇಣಂತೆ
ನಿನ್ನಯ ಸರಂಗೇಳ್ವ ಸೌಭಾಗ್ಯವೊಂದದುವೆ
ಸಾಲ್ಗೆನಗೆ!"
"ಕೋಮಳೆ, ಲತಾಂಗಿ, ತಳಿರಡಿಯ ನೀಂ
ಬಿಸರುಹ ಶರೀರೆ! ಕಲ್ಮುಳ್ಪಿಡಿದ ಕಾನನಂ
ಕಣ್ಗೆ ದೂರಕೆ ನುಣ್ಪುದೋರ್ದಡಂ, ಬಾಳ್ಕೆಗತಿ
ದಾರುಣಂ. ಕವಿಯ ವರ್ಣನೆಯಲ್ತು ಕಾನನಂ!

ನಿನ್ನಂ ಪೊರೆಯಲಾರೆನೆಂದಲ್ತು; ಪೇಳ್ದಪೆಂ
ನಿನ್ನ ಹಿತಮಂ: ವ್ಯಾಘ್ರ ಭಲ್ಲೂಕ ಹರ್ಯಕ್ಷ
ವಿಷದರೋರಗ ಭೀಷಣಂ ಕೇಳ್ ಮಹಾಟವಿ!
ಮೇಘಚುಂಬಿತ ಗಿರಿಯ ಚೂಡದಿಂದಾರ್ಭಟಿಸಿ
ದುಮ್ಮಿಕ್ಕುವರ್ಬಿಯಾಘಾತದಿಂ ಭೀಷ್ಮವಹ
ಜಲಪಾತ ವ್ರಾತಂಗಳಿಂ ಭೀಕರಮರಣ್ಯಂ!
ಪಗಲೊಳುಂ ನಾದಮತಿ ಕರ್ಕಶ ಭಯಂಕರಂ;
ಅಂತೆ ಮೇಣ್ ಇರುಳೊಳುಂ ಘೋರಾಂಧಮಧ್ಯಮಂ
ಪೀರ್ದು ಮೂರ್ಛೆಗೆ ಸಂದ ಮೌನಮತಿ ನಿಷ್ಠುರಂ,
ಕಠಿನಂ, ಭಯಾನಕಂ, ಹೃದಯಭಾರಂ, ಮಹಾ
ಕ್ರೂರಂ! ಅಂಗನೆ, ಬೇಸಗೆಯೊ ದವಾನಳನಿಂದೆ,
ಮಳೆಗಾಲವೆಡೆಬಿಡದೆ ಹಿಡಿದು ಹೊಡೆಯುವ ಜಡಿಯ
ಕರೆಕರೆಯ ಕಾಟದಿಂದಪಸಹ್ಯಮಲ್ತೆ? ಆ
ಕೆಸರಿನಲಿ ಮುಳ್ಳಿನಲಿ ಹಳ್ಳಕೊಳ್ಳಂಗಳಲಿ
ಪಗಲೆಲ್ಲಮಂ ಬಟ್ಟೆಯರಿಯದ ಪಳುವದಲಿ ಸುತ್ತಿ
ಬಳಲಿ ಬರೆ, ಮಲಗುದಾಣಂ ತೊಯ್ದರೆಯ ಸಜ್ಜೆ!
ಬೆಂದ ಷಡುರಸದುಣಿಸೆ? ಕೇಳ್, ಕರುಳ್ ಕೊರೆವವೊಲ್
ಕುಳಿರಿಡಿದ ಪಣ್ಪಳಂ ಗೆಡ್ಡೆಗೆಣಸೆಯೆ ತಿನಲ್
ಗತಿ! ಲಲಿತೆ, ಹಾಸಲರುವೆಗಳೆಲ್ಲಿ? ಚಳಿವೊಳ್ತು
ತಾನಡಿಯಿಡಲ್ ಹೊದೆವುಡೆಗಳೆಲ್ಲಿ? ಸುಖಲೇಶಮುಂ
ಸುಳಿಯದತಿಕಠಿನಕ್ಕೆ, ರಾಜಪುತ್ರಿ, ಲತಾಂಗಿ,
ನಿನ್ನನೆಂತೊಯ್ದಪೆನ್ ಪೇಳ್?"
ವರ್ಣನಂಗೇಳ್ದಾ
ಪತಿವ್ರತೆ ನಸುನಗುತ್ತೆ ಮಾರ್ನುಡಿಯನಿತ್ತಳ್ಕೆ,
ವಾದಂ ನಿರಾಯುಧಂ ತಾನಾಗಿ. ಸೋಲೊಪ್ಪುವೋಲ್
ದಾಶರಥಿ: "ನೆತ್ತರೀಂಟುವ ಜಿಗಣೆ, ಮೇಣ್ ಕರ್ಕಶಂ
ಕೂಗಿಡುವ ಜೀರುಂಡೆಗಳನೇತಕುಳಿದೆ ಪೇಳ್?
ಕರುಣಾಳಲಾ! ಕೊರ್ವಿದಾ ಪೆರ್ವಾತುಗಳ್ಗಾಂ
ಬೆದರ್ವಂತುಟಣುಗಿಯೇಂ? ಕೇಳ್, ಹೃತ್ಕಮಲ ಕರುಣಾರವಿ,
ನಿನ್ನ ಬಣ್ಣನೆಗೇಳ್ದು ಕಾತರಿಸುತಿದೆ ಮನಂ
ಕಾಂತಾರ ರಸಕ್ಕೆಳಸಿ! ಮನದನ್ನ, ನನ್ನುಸಿರ್

ನಿನ್ನುಸಿರೊಳೊಂದಾದುದೆಂದು ನಿನ್ನಂಗಮಂ
ಕಂಡೆನಾ ಮೊದಲ್‌ಗೊಂಡು. ಬೆಚ್ಚಿರಡು ಬಾಳ್ಗಳಂ
ಬೆಸುಗೆಗೆಡಿಸೇಕೆ ಬೇಳುವೆಯೆನ್ನ ಬರ್ದುಕಿದನ್?
ತಂದೆತಾಯ್ಗಳನಗಲುತೆಲ್ಲವೂ ನೀನೆಂದು
ಕೈವಿಡಿದು ನಂಬಿದೀ ದೀನಾರ್ತೆಯಂ, ಕರುಣೆ,
ತೊರೆಯದಿರ್."
ಬಾಷ್ಪನೈವೇದ್ಯದಿಂ ಪ್ರಾರ್ಥಿಸಿದ
ಭೂಜಾತೆಯಂ ಸೀತೆಯಂ ಸಂತಯ್ಸುತಿಂತು
ನುಡಿದನ್ ದಿನೇಶಕುಲಸಂಭವಂ: "ದುಗುಡಮಂ
ಬಿಡು, ನಲ್ಲೆ, ನೀನೆನ್ನುಸಿರ್‌ಗುಸಿರ್! ಬರ್ದುಕುವೆನೆ ಪೇಳ್
ಬಿಟ್ಟೊಡುಸಿರಂ? ಜೀವಮೆನ್ನದು, ಜನಕಜಾತೆ,
ನಿನ್ನ ರೂಪದ ತಾವರೆಯ ನಿತ್ಯಲೋಕದಲಿ
ವಿಹರಿಸುತ್ತಿದೆ ಮಧುಕರ ಪತಂಗದೋಲಂತೆ,
ಮಧು ಮಧುರ ಸೌಂದರ್ಯಮಕರಂದ ಸುಧೆಯೀಂಟಿ
ಸವಿಯುತಮೃತತ್ವಮಂ. ನಿನ್ನನುಳಿದೆನಗಾವ
ಸಗ್ಗಮುಂ ರುಚಿಸದೆಲೆ ತನ್ವಂಗಿ. ದಿವಮಲ್ತೆ,
ನೀನಿರಲ್ಕೆನ್ನ ಬಳಿ, ವನವಾಸ ನರಕಮುಂ?
ಲೋಕಮೋಹಕ ನೇತ್ರೆ, ಬಿಸುಗಂಬನಿಯ ಸೂಸಿ
ಬೇಯಿಸದಿರೆನ್ನಾತ್ಮಮಂ: ಸಲ್ಗೆ ನಿನ್ನಿಚ್ಛೆ!
ಬನಕೈದಲನುವಾಗು, ಹೇಮಸುಂದರ ಗಾತ್ರೆ,
ದಾನಗೈದೆಮ್ಮಿರ್ವರೊಡವೆ ಹಾಸಗೆಯುಡುಗೆ
ಸರ್ವಮಂ ದೀನರಿಗೆ, ದೆಸೆಗೆಟ್ಟರಿಗೆ, ಮತ್ತೆ
ಪೂಜ್ಯರಿಗೆ." ಮೋಹದಿಂ ಮುದ್ದಿಸಿ ಕಳುಹಲಾಕೆ
ಪೆರ್ಚುತೆ ಸೊಗಂಬರಿದು ತಮ್ಮಿರ್ವರನಿತುಮಂ
ಕರೆ ಕರೆದು ಪಸುಗೆ ತೊಡಗಿದಳಮಿತ ಸಂಭ್ರಮದಿ!
ಕೇಳ್ದದಂ ಸೌಮಿತ್ರಿ ಪಿರಿಯಣ್ಣನಡಿಗೈದಿ,
ಮರನ ಬುಡದಲಿ ನೆಳಲ್ ಬೀಳ್ವಂತೆ ಕಾಲ್ಗೆರಗಿ,
ಮೇಲೇಳ್ದನಿಲ್ಲ, ತನ್ನಂ ಜೊತೆಗೆ ಬನಕುಯ್ಯೆ
ರಾಮನೇಗೊಳುವನ್ನೆಗಂ. ಪರ್ವಿತರಮನೆಗೆ,
ಪುರಕೆ, ನಾಡಿಗೆ, ವಾರ್ತೆ: ರಾಮನೊಡನೆಯೆ ಸೀತೆ
ಲಕ್ಷ್ಮಣರುಮಡವಿ ಸೇರ್ದಪರೆನುತೆ! ಪರಿದುದಯ್

ರೋದನದ ನದಿಯೆ ಮುಪ್ಪುರಿಗೊಂಡು ನೆರೆಯೇರ್ದವೋಲ್.
ಮಡದಿಯಂ ತಮ್ಮನಂ ತನ್ನೊಡನೆ ಬನಕುಯ್ಯಲಾ
ರಾಜಾಜ್ಞೆಯಂ ಪಡೆಯಲೋಸುಗಂ ರಾಮಚಂದ್ರಂ
ಸೀತೆಲಕ್ಷ್ಮಣರೊಡನೆ ತಂದೆಯೆಡೆಗೈದಿದನ್
ದಶರಥಪ್ರಿಯತನೂಜಂ. ಕಂಡೊಡನೆ ಕುವರನಂ
ಸಂತಾಪಕಲುಷೇಂದ್ರಿಯಂ, ಭೀತಿವಿಕ್ಲಬಂ,
ನಿಸ್ತೋಯಕಾಸಾರದೊಲ್ ರಿಕ್ತಮಾನಸಂ,
ಸಾಂದ್ರ ಭಸ್ಮಾಚ್ಛನ್ನ ಶಿಖಿಯೊಲಳಿತೇಜಸಂ
ಕೋಸಲ ಧರಾವಲ್ಲಭಂ ಮಗನನಪ್ಪಲ್ಕೆಳಸಿ
ಮೇಲೆಳ್ದುಮಿರದೆ ಕುಸಿದನು ಧರೆಗೆ ಮೂರ್ಛೆಯಿಂ
ತೊನೆದು. ಸೀತಾರಾಮಲಕ್ಷ್ಮಣರ್ ವೃದ್ಧನಂ
ಪರ್ಯಂಕಕೆತ್ತಿ ಸಂತೈಸುತಿರೆ, ವರ್ಧಿಸಿತೊ
ನೂಪುರ ರವಂವೆರಸಿ ಸ್ತ್ರೀಜನಾಕ್ರಂದನಂ,
ಪುಷ್ಪಪ್ರಭಾತದೊಳ್ ಕ್ರೌಂಚಪಕ್ಷಿಯ ಪಂಕ್ತಿ
ನೆರೆದು ಮುಗಿಲೆತ್ತರದಿ ದನಿಸಂತೆಗೈವಂತೆವೋಲ್!
ಮತ್ತೆ, ದೊರೆ ಮುಚ್ಚೆತಿಳಿದೆಚ್ಚತ್ತು, ತನುಜನಾ
ಕೇಳ್ಕೆಗತಿ ಕಷ್ಟದಿಂ ಕರ್ಬುನಂ ಭಾರಕ್ಕೆ
ಬಾಗುವೋಲೊಪ್ಪಿ, ಮಂತ್ರಿ ಸುಮಂತ್ರನಂ ಕರೆದು:
“ಚತುರಂಗ ಸೈನ್ಯಮಂ, ಪರಿವಾರಮಂ, ಧನಿಕ
ವರ್ತಕವ್ರಾತಮಂ, ಕಾಡ ಪರಿಚಯವುಳ್ಳ
ಬೇಡವಡೆಯಂ, ಚತುರ್ದಶ ವತ್ಸರಂಗಳ್ಗೆ
ಬೇಳ್ಪನಿತುಮಾಹಾರ ಭೋಗ ಸಾಮಗ್ರಿಯಂ
ಕಂದನೊಡನೆಯೆ ಕಳುಹಿಸಾತಂಗೆ ಕಾನನಂ
ಕೋಸಲಕ್ಕಿಂ ಸುಖದಮಪ್ಪಂತೆ.” ಕೇಳ್ದದಂ
ಕುಬ್ಜೆ ಕೈಕೆಯ ಮೊಗವನಿಂಗಿತದಿ ನೋಡುತಿರೆ,
ತಿಳಿದದಂ, ರಾಮನೆಂದನು ಮಂದಹಾಸದಿಂ
ಬೆಳಗಿ ಹೃದಯಂಗಳಂ:
“ತಪದ ಸಂಪದಕಾಗಿ
ವಿಪಿನಕೈದುತಿರೆ, ಸೇನೆಯ ಸೇವೆ ತಾನೇಕೆ?
ಧನಿಕ ವರ್ತಕರೇಕೆ? ಮೇಣ್ ಬೇಡಪಡೆಯೇಕೆ?
ನೀಡನಿತುಮಂ ಭರತ ಸೋದರಗೆ. ಮೇಣೆಮಗೆ

ನಾರುಮಡಿಯಂ ಬಿಟ್ಟು ಬೇಡಮಿನ್ನಾವುದುಂ.
ನೀಡುವೊಡೆ, ಕಾಡಿನೊಳ್ ಕಂದಮೂಲವನಗೆಯೆ
ಕುದ್ದಾಲವೊಂದಿರಲಿ. ಕೊಡಿಮೊಂದು ಬುಟ್ಟಿಯಂ
ಪಣ್‌ಫಲಂಗಳನಾಯ್ದು ತುಂಬಲ್ಕೆ.'' ಕೇಳ್ದದಂ,
ಕೈಂಕರ್ಯಮಂ ಸಲ್ಲಿಪೋಲ್, ಕುಬ್ಜೆ ಸಂಭ್ರಮದಿ
ತಂದು ನೀಡಿದಳೊಡನೆ ನಾರುಡೆಯನೆಲ್ಲರುಂ
ಶಪಿಸುತ್ತಿರಲ್ಕೆ. ತಾನುಟ್ಟಮಲ ವಸ್ತ್ರಮಂ
ಕಳಚಿಟ್ಟು ರಾಮನಾ ವಲ್ಕಲವನುಡಲಂತೆ
ಗೈದನ್ ಸುಮಿತ್ರಾತ್ಮಜಂ. ಪುಟ್ಟಿದಂದಿನಿಂ
ಪಟ್ಟೆಯ ದುಕೂಲಮಂ ಬಿಟ್ಟುಳಿದ ಬಟ್ಟೆಯಂ
ತೊಟ್ಟಳಲ್ಲದ ಬಾಲೆ, ಮಿಥಿಳೇಂದ್ರ ಸಂಭವೆ,
ತಪಸ್ತೇಜದಿಂ ಮುಂದೆ ನಿಂದಿನಿಯನಂ ನೋಡಿ,
ಕೆಚ್ಚನೆರ್ದೆಗೊತ್ತಿ, ನಾರುಡೆಗಳಂ ತೆಗೆದೆತ್ತಿ
ತೊಡಲರಿಯದೆಯೆ ಕೆಮ್ಮನಿರೆ, ಇತ್ತ ತಾರೆಂದ
ಪತಿಗೆ ನೀಡಿದಳದಂ, ತಾನರಿಯದುದರಿಂದೆ
ತುಡಿಸಿ ಮನ್ನಿಪುದೆಂದು ಕಣ್ಣಿಂಗಿತದಿ ಬೇಡಿ.
ತುಡಿಸುತಿರೆ ರಘುಕುಲೇಶಂ ಸತಿಗೆ ನಾರುಡೆಗಳಂ,
ಕಂಡ ಕೌಸಲೆಗುಕ್ಕಿ ದುಕ್ಕಮಳ್ತಳ್ ಮೊಗಂ
ಪುದುಗಲಂಜಲಿಗೆ. ಮಂಥರೆ ಗೆಂಟರೊಳ್ ನಿಂದು
ಸಂಕಟವನೀಕ್ಷಿಸಿರ್ದಳ್ ವಿಕಟ ಕಂಟಕಿತೆ!
    ರಾಜಧಾನಿಯ ಮೇಲೆ ಹೇಮಸುಂದರಿ ಸಂಧ್ಯೆ ತಾಂ
ಮಿರುಪ ಕುಂಕುಮದೋಕುಳಿಯನೆಂದಿನಂದದೊಳೆ
ಪೊನ್ನ ಜೀರ್ಕೋವಿಯಂ ಸಿಂಚನಂಗೈದಳೆನೆ
ರಂಜಿಸಿತು, ಹೊಮ್ಮಂಜು ಹಬ್ಬಿದಂದದಿ ಹಬ್ಬುತಾ
ಕೊಟ್ಟಿಗೆಗೆ ಬಹ ತುರು ಸಮೂಹದ ಖುರಂಗಳಿಂ
ಕಣ್ಗೊಳಿಸುತೇರ್ದ ಗೋಧೂಳಿ. ಆ ಧೂಳಿಯಂ
ಮೀರ್ದದಕ್ಕೆದುರಾಗಿ ಪರಿದುಬಂದಾ ಬೇರೆ
ಕೆಂದೂಳಿ ವೊನಲನೊಂದಂ ಕಂಡಾ ಕೃಷೀವಲಂ,
ಬೇಸಾಯದಾಯಾಸದಿಂ ಬಳಲಿ ಗುಡಿಸಲ್ಗೆ
ತನ್ನಾರಿನೆತ್ತುಗಳೊಡನೆ ಪಿಂತಿರುಗುತಿರ್ದ
ಪೊಲದೊಕ್ಕಲಿಗನೊರ್ವನಚ್ಚರಿವಡುತೆ, ತನ್ನ

ತಲೆಯ ಹುಲ್ಲಿನ ಹೊರೆಯನಿಳುಹಿ ಹೆದ್ದಾರಿಯೆಡೆ,
ನಿಂದನಾಲಿಸುತೆ ತೇರ್ಗಾಲಿಗಳ ಪೇರುಲಿಗೆ
ಮತ್ತೆ ಗೋಳಿಡುವಾಳ್ಗಳುಲಿಗೆ. ನೋಡುತ್ತಿರಲ್
ಕಣ್ಗೆವಿಳ್ದತ್ತು ಭೋಂಕನೆಯ, ನಡೆಗೊಂಡುದೋ
ಸಾಕೇತ ಪತ್ತನಮೆನಲ್ಕೆ, ಪೆರ್ವಟ್ಟೆಯಂ
ತುಂಬಿ ತುಳ್ಕುತೆ ಬರ್ಪ ಸೋಜಿಗದ ಮೆರವಣಿಗೆ.
ರಥಮೊಂದೆ ಪರಿದೋಡುತಿರ್ದತ್ತದಂ ಬೆಂಬಿಡಿದು
ವಿವಿಧ ವರ್ಗದ ಮಂದಿ ಸಂದಣಿಸಿ ಪರಿದುದಯ್,
ಪುಚ್ಚಮರ್ದಂತೆ. ಕೆಲರೆದೆಬಡಿದು ಕೂಗಿದರ್.
ಕಿಳ್ತು ನವಿರಂ ಮುಡಿಗೆಪರಿ ಗೋಳಾಡಿದರ್ ಕೆಲರ್.
ತೊಟ್ಟುಡುಗೆಯಂ ಪರಿದು ತತ್ತರಿಸಿದರ್ ಕೆಲರ್.
ಹೊಡೆಮೋದಿದರ್ ಕೆಲರ್. ವಿಸ್ಮಿತ ಕೃಷೀವಲಂ
ವಿಸ್ಮಯಸಮಾಧಿಯಿಂದೇಳ್ವನಿತರೊಳ್ ಮರೆಯಾಯ್ತು
ಚಿತ್ರಮಯದುನ್ಮಾದದುತ್ಸವಂ, ಪೊಳಲತ್ತಣಿಂ
ಪೊರಗಣ್ಗೆ ಪರಿದು.
ಮಂತ್ರಿ ಸುಮಂತ್ರನೆಸಗಲ್ಕೆ
ರಥಮಂ, ರಘೂದ್ವಹಂ ಸೀತೆಲಕ್ಷ್ಮಣರೊಡನೆ
ತೇರೇರಿ ಕಾಡಿಗೈದುತಿರೆ, ದಶರಥ ನೃಪಂ
ಪುರಜನಂ ಮತ್ತಮಂತಃಪುರ ಸ್ತ್ರೀಜನಂ,
ಕಣ್ಣ ಕಾರ್ಗಾಲದಿಂ ರೋದನ ಧ್ವಾನದಿಂ
ರಥ ಚಕ್ರ ಮೇಣಶ್ವಖುರಪುಟೋದ್ಧೂತಮಂ
ಧೂಳಿಯಂ ಮೇಣ್ ಚಕ್ರಚೀತ್ಕೃತಿಯುಮಂ ತವಿಸಿ,
ಪಿಂದೋಡಿದರ್, ಬೇಡಿ ಕೈ ನೀಡಿ. ಮುದಿಯರಸು
ವಾಯುವೇಗದಿ ಪರಿಯುತಿರ್ದಾ ರಥಜವಕೆ
ಜವಂಗುಂದಿ, ನಿಡುಸರದಿ ರಾಮನಂ ಕರೆದೊರಲಿ,
ರಥಜ ರಜಪಥವನೆವೆಯಿಕ್ಕದೀಕ್ಷಿಸುತೆ, ಕೇಳ್,
ನಿಂದನಲ್ಲಿಯೆ ಕಂಡರಿಸಿದಂತೆ. ನಿಟ್ಟಿಸಿರೆ
ನಟ್ಟಾಲಿ ಬೀಳ್ಪಿನಂ, ದೂಳ್ವಟ್ಟೆಯುಂ ಹಾ ಕಣ್ಗೆ
ಮರೆಯಾಯ್ತು: ಮರವಟ್ಟು ಬೀಳ್ದನಾ ಕೋಸಲೇಶಂ
ನಟ್ಟ ನಡುವೀದಿವಟ್ಟೆಯಲಿ! ಕೌಸಲೆ ಕೂಡೆ
ಕಂಡೋಡಿ ಪಿಡಿದೆತ್ತಲಾ ಕೈಕೆಯಂ ಕಂಡು,

ಚೀರಿದನುರಿವ ಕೋಪಿ:
"ಬಳಿಸಾರದಿರ್, ಪಾಪಿ!
ಕಣ್ಬೊಲದೊಳಿರದೆ ಸಾಯ್! ತೊಲಗು! ನೀನಿನ್ನೆನಗೆ
ಸತಿಯಲ್ಲ. ನಿನಗಾಂ ಪತಿಯುಮಲ್ಲ. ತರ್ಪಣಂ
ಕೊಟ್ಟೆನಿದೊ ನೀರೆಳ್ಳು ಕೊಳ್!" ಎನುತೆ ಮುಷ್ಟಿಯಿಂ
ನೆಲದ ಧೂಳಿಯನೆತ್ತಿ ಬೀಸಿದನ್.
ದೊರೆಯಿಂತು
ಚಿತ್ತವೈಕಲ್ಯದಿಂ, ದುಃಖಡಾಕಿನಿಯಿಂದೆ
ಪೊಯ್ವಡೆದನೋಲ್, ಕಿಳ್ತು ನವಿರಂ ಶರೀರಮಂ
ವಸನಂಗಳಂ, ಚರಿಸೆ ಬಟ್ಟೆಬೆಂತರನಂತೆ,
ಕೌಸಲ್ಯೆ, ಲಕ್ಷ್ಮಣನ ತಾಯ್ವೆರಸಿ, ಸಾಸದಿಂ
ತಂದಳವನಂ ರಾಜಮಂದಿರಕೆ. ಶೂನ್ಯಮಂ
ಕಂಡು ಪಳಯಿಸುತಿರ್ದನಂ ಸಜ್ಜೆಗುಯ್ಯಲ್ಕೆ
ಹೊರಳಿದನು ಮರುಳಮರಿದವನಂದದಿ ನರಳ್ದು
ಸುಯ್ದು. ಕರೆದನು ರಾಮನಂ. ಕಂಡವರನೆಲ್ಲರಂ
ಜನಕಜಾವಲ್ಲಭಂ ಗೆತ್ತು, ತಬ್ಬುಗೆಗೆಳಸಿ,
ಮುನ್ ನುಗ್ಗಿ ಮಂಚದಿಂದುರುಳಿದನ್! ಕೈಕೆಯಂ
ಪಳಿದು, ಬಯಲಂ ನಿಟ್ಟಿಸಾಕೆಗಂಡವನಂತೆ
ಥೂಯೆಂಜಲುಗುಳುತ್ತೆ, ವಿಕಲಮತಿ ದಶರಥಂ
ಕಡುಭಯಂಕರನಾದನತಿಸನ್ನಿಯೇರ್ದನೋಲ್:
ದವದ ದಳ್ಳುರಿ ದಹಿಸೆ ಬಿರುವೇಸಗೆಯ ಮಲೆಯ
ನೀರಸಾರಣ್ಯಮಂ, ಬೆಂಕಿಯ ಬೇಲಿ ಬಳಸಿ
ಬರೆ, ಕಿಚ್ಚುಗೋಂಟೆಯ ನಡುವೆ ಸಿಲ್ಕಿದೊಂದಾನೆ
ಮುಪ್ಪಿನಿಂದೋಡಲಾರದೆ ಹಿಂಡುದಪ್ಪುತ್ತೆ
ಘೀಂಕರಿಪುದೊರಲಿ. ದಾವಾಗ್ನಿ ಸುತ್ತಿಂದೊತ್ತಿ
ಮುತ್ತುವುದು, ತುತ್ತುಗೊಳ್ವಾತುರದಿ ಧಾವಿಸುವ
ಮಿತ್ತು ನೆತ್ತರ್‌ನಾಲಗೆಯ ಸೇನೆಯಂತೆ. ಆ
ಗಂಭೀರ ದಿಗ್ದಂತಿ, ತೊರೆದು ಗಾಂಭೀರ್ಯಮಂ,
ತರಳ ಚಂಚಲ ಚಿತ್ತದಿಂ ಬೀದಿವರಿವುದಯ್
ದೆಸೆದೆಸೆಗೆ. ಬಟ್ಟೆದೋರದಿರೆ, ಕವಿದಪುದು ಪೊಗೆ
ಕೆಟ್ಟಾಸೆಗತ್ತಲೋಲ್. ಮತ್ತೊಂದು ಮತ್ತೇಭದೋಲ್

ಭೀಮ ಧೂಮಸ್ತೋಮಮಮರೆಬಂಡೆಪಾಂಗುರುಳಿ
ಮೇಲ್ವಾಯೆ, ಮಲೆದೊಂದು ಮದಕರಿಗೆ ಕಾಳೆಗಂ
ಗೊಟ್ಟು ಮಾರ್ಮಲೆವಂತೆವೋಲ್ ಸೆಣಸಿ ಸೋಲ್ತುಸಿರಾರಿ
ಬೀಳುತಿರೆ, ಹೊಗೆಯಾನೆಯಿಂದುಗುವ ಮಿಂಚಿಂದೆ
ಸಮದ ಮೊನೆಯಿಟಿ ದಂತಗಳಂತೆ ಕೇಸುರಿಯ
ಜ್ವಾಲಾ ಕಠಾರಿಗಳ್ ತಿವಿಯೆ ಮೈಚರ್ಮಮಂ,
ಮರಸೊಂದುವುದು ವಾರಣಂ.–ಮೈಮರೆದನಂತೆವೋಲ್
ಸುತವಿರಹ ಸಂತಾಪದಗ್ಧ ವಸುಧಾಧಿಪಂ!
ಬೈಗುಗಪ್ಪಿಳಿಯುತಿರಲತ್ತ ರಾಮಂ ತನ್ನ
ರಥದ ಬೆಂಬಳಿವಿಡಿದು ಬರುತಿರ್ದ ಪೌರರಂ
ಪಿಂತಿರುಗಿಮೆಂದು ಬೇಡಿದೊಡಮದನೆರ್ದೆಗೊಳದೆ
ತೇರೊಡನೆ ಪರಿಯುತಿರಲವರಾಸೆಯೆಂಬಂತೆ
ಹಾದಿಗಡ್ಡಂ ಬಂದುದಾ ತಮಸೆ. ಮಸುಳ್ದುದು
ನಿಶಾಕೃತಿಯ ಮಸಿ ಸೂಸಿ ತೀರದ ವನಶ್ರೇಣಿ.
ಮಾರ್ಪೊಳೆಯೆ ಪೊಳೆಯೆದೆಯ ಕನ್ನಡಿಯೊಳಾಗಸದಿ
ಕಿಕ್ಕಿರಿದರಿಲ್‌ಚುಕ್ಕಿಗಳ್ ಖದ್ಯೋತಸಂಕುಲಂ
ವೆರಸಿ, ನಿಶ್ಶಬ್ದತೆಯ ಸಾಮ್ರಾಜ್ಯದಾಳ್ವಿಕೆಗೆ
ಶರಣಾಗೆ ಪೃಥಿವಿ, ಬೀಡಂ ಬಿಟ್ಟನಾ ನದಿಯ
ತಟದಲ್ಲಿ. ಮೂಡುಬಾನಿನ ಕರೆಯೊಳುಷೆವೆಣ್ಣು
ನಸುಗಣ್ದೆರೆವವೊಳ್ತು, ಮರಗಳಡಿ ಮಲಗಿಯುಂ
ನಿದ್ದೆಯಾಳದೊಳದ್ದಿ ಬಿದ್ದಿರೆ ದಣಿದ ಮಂದಿ,
ಸದ್ದಿಲ್ಲದೆಯೆ ತೇರನೇರಿ ನದಿಯಂ ಪಾಯ್ದು
ದಾಂಟಿ, ನಡೆದನು ರಾಮನಾ ಸ್ಯಂದನಂ ನಡಸೆ
ಮಂತ್ರಿ, ವಂಚಿತರಪ್ಪವೋಲಯೋಧ್ಯಾ ಜನಂ.
ಬನಮಲರ್ ತಂಬೆಲರ್ ಪೂವಿಸಿಲ್ ಪಕ್ಕಿಯುಲಿಗಳ್
ರಮಣೀಯ ತಮಸೆಯಂ ಕಮನೀಯಮಪ್ಪಂತೆ
ಗೆಯ್ಯೆ, ನಿದ್ದೆಯಿನೆದ್ದ ಮಂದಿ ರಾಮನನರಸಿ
ಕಾಣದಿರೆ, ಹಂಬಲಿಸಿ ಹುಡುಕಿ, ರೋದಿಸುತಿರದೆ
ಪಿಂತಿರುಗಿದರ್, ನೀರರತ ಕಡಲಂತೆವೋಲಿರ್ದ
ಸಾಕೇತಪುರಿಗೆ.

ನಾನಾ ವರ್ಣ ರಮಣೀಯ

ದಿನದೇವಿ ತಾಂ ಬಾಲಾರ್ಕ ಕಲಶದೀಪಂ ಬಿಡಿದು
ಹೊತ್ತರೆಯ ಹೊಸ್ತಿಲಂ ದಾಂಟುತಿರೆ, ಸೇರ್ದುದಾ
ತೇರಯೋಧ್ಯೆಯ ನಾಡಿನೆಲ್ಲೆಯಂ. ಜನಕಜೆಗೆ
ಕಣ್ಗೆಡ್ಡಮಾಗೆ ಮರೆತುದು ಮನಂ ಕ್ಲೇಶಮಂ
ವನವಾಸದಾ:
            ಕಣ್ಣು ಹೋದತ್ತಕಡೆ, ದಿಟ್ಟಿ
ಹೋಹನ್ನೆಗಂ ಹಬ್ಬಿ ಹತ್ತಿದ ಹಸುರು ಗದ್ದೆ,
ಬಿತ್ತರದ ತೋಂಟಸಿರಿ, ಬಗೆಯನೀಳ್ಕುಳಿಗೊಂಡು
ಚೆಲ್ವಾಯ್ತು. ಜುಳಜುಳನೆ ಪರಿವ ಪರಿಕಾಲ್ಗಳೆಡೆ,
ಬೆಳೆವುಲ್ಲ ನಡುವೆ, ಮೊಳಕಾಲ್ ಮುಚ್ಚುವನ್ನೆಗಂ
ನಿಂದಿರ್ದ ಬೇಸಾಯಗಾರರಚ್ಚರಿವಡುತೆ
ದಿಟ್ಟಿಸಿರುತಿರೆ ಸಿರವನೆತ್ತಿ, ಪರಿದುದು ರಥಂ
ಹೇಮಲಿಪ್ತಂ ರತ್ನಖಚಿತಂ, ಪ್ರಭಾತದಾ
ನೇಸರ್ಗೆ ಪಡಿನೇಸರೊಲ್ ಪೊಂಗದಿರ್ಗಳಂ
ಕಾರಿ, ಮಿಂಚುತೆ ನೋಳ್ಪ ಕಣ್ಗಳಿಗೆ. ತೇಜಿಗಳ್
ಕಟವಾಯಿಯಿಂದೆ ಬೆಳ್ನೊರೆ ಸೂಸಿ, ಮೈ ಬೆಮರಿ,
ತಮ್ಮ ನೆಳಲಂ ತಾಮೆ ತುಳಿದು ಮುಂದೋಡುತಿರೆ
ಮಂಗಳಂಬೆತ್ತ ವೇದಶ್ರುತಿಯನುತ್ತರಿಸಿ;
ತೆಂಕಣದೆಸೆಗೆ ತಿರುಗಿ ಗೋ ಸಮೂಹದ ತಟದ
ಗೋಮತಿಯ ದಾಂಟಿ; ಬರ್ಹಿಗಳ ಕೇಕಾಧ್ವನಿಯ
ಕೊಂಚೆಯಂಚೆಗಳುಲಿಯ ಸುಂದರ ಸ್ಯಂದಿಕೆಯ
ಹಿಂದಿಕ್ಕಿ; ಮೈದೋರಿದುದು ಮುಂದೆ ಶೈವಲಂ
ಲವಲೇಶಮಿರದ ನಿರ್ಮಲ ಸಲಿಲ ಸುರಧುನೀ
ತ್ರೇತಾಯುಗದ ಗಂಗೆ: ವಿಷ್ಣುಪಾದಚ್ಯುತೆಯ,
ಶಂಕರ ಜಟಾಜೂಟ ವಿಗಳಿತೆಯ, ನೀರುಲಿಯ
ನೊರೆನಗೆಯ ಜಡೆವೊನಲ ತೆರೆನಡೆಯ, ಒರ್ರೊರ್ಮೆ
ಗಂಭೀರ ಘೋಷದೋರ್ರೊರ್ಮೆ ಭೈರವ ರವದ
ಗದ್ಗದ ನದದ್ಗಮ ಸಮುದ್ರನೃಪ ಮಹಿಷಿಯಂ,
ತೀರರುಹ ಫಲಪುಷ್ಪ ನವ್ಯ ಕಿಸಲಯ ರಮ್ಯ
ಗುಲ್ಮ ತರುಪಂಕ್ತಿ ಮಾಲಾ ಜಹ್ನುಜಾತೆಯಂ
ದರ್ಶಿಸಿದೊಡನೆ, ತೇರಿಳಿದು ಮಣಿದರ್, ಪಣೆಗೆ

ತಿಲಕಮಿಡೆ ಮಣ್! ದಣಿದಶ್ವಗಳ್ಗೆ ನೀರಂ ತೋರ್ದು,
ಮೆಯ್‌ತಿಕ್ಕಿ ಮೀಯಿಸುತೆ, ಮರದಡಿ ನೆಳಲ್‌ತಣ್ಪಲೊಳ್
ಕಟ್ಟಿ, ಪಸಿವುಲ್ಲಗಳಂ ಕುಯ್ದಡಕಿದನ್ ಮಂತ್ರಿ.
ರಾಮನಿಂಗಳ ತರುವ ತಣ್ಣೆಳಲ್ ಮಡಿಲೊಳಗೆ
ಪವಡಿಸಿದನಾ ಸೀತೆಯೆಡೆಯೆ ಪಚ್ಚನೆ ನೆಲದ
ಮೇಲೆ. ಕೇಳ್ದಾ ವಾರ್ತೆಯಂ ಶೃಂಗಿಬೇರಪುರ
ನಾಮಧೇಯದ ಬೇಡರೂರಿಂಗರಸು ಗುಹಂ
ಬಂದನಲ್ಲಿಗೆ ಮನೋಮುದದಿ ಪಿರಿಯತಿಥಿಯಂ
ಸತ್ಕರಿಸೆ. ಮುಡಿಯಿಕ್ಕಿ ರಾಘವನ ಚರಣದೆಡೆ
ಕಾಣಿಕೆಯ ನೀಡಿದನು ತರತರದ ಪಣ್ಗಳಂ,
ಪೂಗಳಂ, ಮಾಂಸಾನ್ನಮಂ. ಭುಜಿಸಿ ಸರ್ವರುಂ
ತಣಿಯುತಂ, ತೊರೆಯ ತೀರದ ತಿರೆಯ ತೊಡೆಮೇಲೆ
ಮಗ್ಗುಲಿಕ್ಕುತೆ, ಕಳೆದರಾ ರಾತ್ರಿಯಂ ಸುಖದ
ನಿದ್ರೆಯಲಿ. ಮರುದಿನಂ ಕೋಕಿಲ ಭರದ್ವಾಜ
ಬರ್ಹಿ ಕೇಕಾ ಧ್ವನಿಗಳೊಡನೆ ಮೊಗಂದೋರುತಿರೆ,
ರಘುನಂದನೇಚ್ಛೆಯಿಂದದಿ, ಜಾಹ್ನವಿಯ ದಾಂಟೆ,
ಬಿಯದರೊಡೆಯಂ ಗುಹಂ ತರಿಸಿದನು ನಾವೆಯಂ,
ಪುಲಿ ಚಿರತೆ ಜಿಂಕೆಯ ತೊವಲ್ ಪೊಲಿದುದಂ. ಸೀತೆ ಮೇಣ್
ಲಕ್ಷ್ಮಣರನೇರಲ್ಕೆ ಬೆಸಸಿ, ತಾನೊಯ್ಯನೆಯೆ
ಪ್ರಿಯಮಂತ್ರಿಯೆಡೆಗೈದಿ, ಮೈದಡವಿ, ಸಂತೈಸಿ,
ಬೇಡಿದನು ಸಾಕೇತಪುರಿಗೆ, ದಶರಥನೆಡೆಗೆ,
ಕೌಸಲೆ ಸುಮಿತ್ರೆಯರ್ ಕೈಕೆ ಪುರಜನರೆಡೆಗೆ
ತಮ್ಮೊಲ್ಮೆಯಂ ಪೊತ್ತು ನಡೆವಂತೆ. ರಥವಾಜಿ
ರಾಮನಂ ನೋಡುತಿರೆ ಪುಲ್ಮೇವನೇವಯಿಸಿ,
ನಡೆದನವರೆಡೆಗೆ. ಮೈ ಚಪ್ಪರಿಸಿ ಮುಂಡಾಡಿ
ನುಡಿಸಲಾ ಮೂಕಜಂತುಗಳುಮರಿತಂತೆವೋಲ್
ಕುಣಿದುವಯ್ ಕೆನೆದು, ಸಿರದ ಕೇಸರ ಚವರಿಯಂ
ಬೀಸಿ. ತಾನಾ ಗುಹನೆ ಪುಟ್ಟೆಸಗುತಿರೆ, ದೋಣಿ
ಸೀತೆ ಲಕ್ಷ್ಮಣ ರಾಮರಂ ಪೊತ್ತ ಪುಣ್ಯಕ್ಕೆ
ಸಂಪದಕೆ ಪೆರ್ಮೆಗೆಂಬಂತೆ ತೆರೆಗಳ ಮೇಲೆ
ಕುಣಿಕುಣಿದು ತೇಲಿ ಸಾಗಿತು, ಪಟಂ ಸಂತಸಕೆ

ಡೊಳ್ಳೇರಿತೆನೆ ವಾಯುಹತಿಗುರ್ಬಿ. ನೋಡುತಿರೆ
ಮಂತ್ರಿ ದಡದಲಿ ನಿಂತು, ಬರಬರುತೆ ಕಿರಿದಾಗಿ,
ಕಡೆಗೆ ಕಣ್ಮರೆಯಾದುದಾ ದ್ರೋಣಿ, ಸೂಸಿರ್ದ
ಕಣ್ಬನಿಯ ಮರ್ಬಿನಲಿ. ಬಿಕ್ಕಿ ಬಿಕ್ಕಳುತಳುತೆ
ತೇರೇರಿ ಬಂದನು ಅಯೋಧ್ಯೆಗಾ ಸಚಿವೋತ್ತಮಂ,
ಮಸಣದಿಂ ಮಸಣಕೆ ಚರಿಪ್ಪೊಂದು ಬೆಂತರದವೋಲ್.
    ನೀರವ ಧ್ಯಾನವಧೂ ಹೇ ಊರ್ಮಿಳಾ ದೇವಿ,
ಸೌಮಿತ್ರಿಯರ್ಧಾಂಗಿ, ಹೇಳು ನೀನೆಲ್ಲಿರ್ದೆ
ಕಡೆದ ಕಡಲೋಲಯೋಧ್ಯಾನಗರಿ ಮಸಗಿದಾ
ಕ್ರಾಂತಿ ದಿನದಂದು? ನಿನ್ನೆರ್ದೆವೂವಿನಾ ವೇಧೆ
ಜಗುಳ್ದುದಿಲ್ಲವೆ ತುಳ್ಕಿ ನೇತ್ರಶತಪತ್ರದಿಂ?
ಪೆಣ್ತನಂ ತಾನೆ ನೀನಲ್ಲದೂರ್ಮಿಳೆಯಲ್ತು:
ಪೆಣ್ಣೆಂಬ ತಪಕೆ ನೀಂ ನಿರುಪಮಪ್ರತಿಮೆಯೌ!
ಕಾಂತನೊಡನಿರ್ದು ಕಾಂತಾರವೈವಿಧ್ಯಮಂ
ಸವಿವ, ಲಂಕೆಯೊಳಿರ್ದು ಹದಿಬದೆಯ ಸಾಹಸದ
ರಸಕೆ ಬಾಳಂ ಬೇಳ್ವ, ದೇವ ಮಾನವ ಸಕಲ
ಲೋಕ ಸಂಸ್ತುತಿಯ ಬೆಂಬಲದ ಸೀತೆಯ ತಪಕೆ
ಮಿಗಿಲ್ ನಿನ್ನ ಅಖ್ಯಾತಮಾ ದೀರ್ಘ ಮೌನವ್ರತಂ,
ಮೂಕಸತಿ ಹೇ ಗೋಚರಾತೀತೆ! ಕಲ್ಲಾಗಿ
ಬಿಳ್ದಹಲ್ಯೆಯ ಶಿಕ್ಷೆಗಿರ್ದತ್ತಚೇತನದ
ರಕ್ಷೆ: ನೀನುಸಿರೆಳೆದುಮರೆಬಂಡೆಯೋಲಂತೆ
ಪದಿನಾಲ್ಕು ಬರಿಸಮಾಶಂಕೆಯ ನಿರೀಕ್ಷಣೆಯ
ಭೀತಿ ಖಿನ್ನತೆ ಹತಾಶತೆಗಳೈವುರಿ ನಡುವೆ
ತಪವಿರ್ದುಮೊಡೆಯದಿರ್ದುದ ನೆನೆಯಲದೆ ಮಹಾ
ವ್ರತಮಪ್ಪುದಿತರ ಜೀವರಿಗೆ.—ಸೌಮಿತ್ರಿ ತಾಂ
ನಿನ್ನನುಮತಿಯನಣ್ಣನೊಡನಡವಿಗೈದಲ್ಕೆ ಪೇಳ್
ಬೇಡಿದನೆ? ಭ್ರಾತೃಭಕ್ತಿಯ ಸಂಭ್ರಮಾಧಿಕ್ಯದೊಳ್
ಪ್ರೀತಿಯಿಂ ಬೀಳ್ಕೊಳ್ವುದಂ ತಾಂ ಮರೆಯನಲ್ತೆ?
ಮರೆಯನೆಂದುಂ ಸುಮಿತ್ರಾತ್ಮಜಂ! ಪೇಳ್ದನೇನಂ,
ಪೇಳ್, ಬನಕೆ ನಡೆವಂದು? ಪೇಳ್ವಳೆಂತಯ್ ಮಂತ್ರಮಂ,
ತನ್ನ ಪತಿ ಗುರುತಪಕೆ ದೀಕ್ಷೆಯಿತ್ತುದನವಳ್,

ಸತಿ ಶಿರೋಮಣಿ, ಊರ್ಮಿಳಾದೇವಿ? ಪ್ರಾಣೇಶ
ಲಕ್ಷ್ಮಣಂ ರಾಮ ಸೀತೆಯರೊಡನಯೋಧ್ಯೆಯಂ
ಬಿಟ್ಟಂದುತೊಟ್ಟು, ಸರಯೂನದಿಯ ತೀರದೊಳ್
ಪರ್ಣಕುಟಿಯಂ ರಚಿಸಿ, ಚಿರ ತಪಸ್ವಿನಿಯಾಗಿ
ಕಟ್ಟಿದಳ್ ಚಿತ್ತಪೋಮಂಗಳದ ರಕ್ಷೆಯಂ
ಮೈಥಿಲಿಗೆ ರಾಮಂಗೆ ಮೇಣ್ ತನ್ನಿನಿಯ ದೇವನಿಗೆ!

## ಸಂಚಿಕೆ ೫

# ಭರತಮಾತೆ

ಪ್ರೇಯಸಿಯ ರೂಪ ಮೋಹಜ್ವಾಲೆಯೊಳ್ ಕುದಿದು
ಬೆಂದು, ಮೇಣ್ ಪ್ರಿಯಪುತ್ರವಾತ್ಸಲ್ಯ ಮಧುವಿನೊಳ್
ಮುಳುಗಿ ಮಿಂದಾ ನೃಪೋನ್ಮಾದವತಿ ವಿಷಮತೆಗೆ
ನೆಗೆದುದಯ್ ಭೀಷಣತೆವೆತ್ತು! ನಡುರಾತ್ರಿಯೊಳ್
ಸಜ್ಜೆಯಿಂ ನೆಗೆದೆಳ್ದು, ಕಣ್ಮುಚ್ಚದೆಯೆ ಕಾಯ್ದು
ಕುಳಿತಿರ್ದ ಕೌಸಲ್ಯೆಯಂ, ಕೈಕೆ ಬಾರೆನುತೆ,
ತುಡುಕಿ ತೊಡೆಯೇರಿಸುತೆ, ಬಿಗಿದಪ್ಪಿ ಮುತ್ತಿಡುತೆ,
ನಗೆತೊಡಗಿದನ್. ಕೂಡೆ, ತೊಲಗು ತೊಲಗೆಂದೊರಲಿ
ತಳ್ಳಿದನ್, ರಾಮನಂ ಕೂಗಿ ಗೋಳಾಡಿ. 'ಕರೆ
ಕೈಕೆಯಂ' ಎನಲಾಕೆ ಬರೆ, ಬೀಸಿದನ್ ಮೊಗಕೆ
ಮೋದಿ ಪರಿವಾಣಮಂ. ಶೂನ್ಯಮನೆ ಪಿಡಿದೆಳಸಿ
ಬೋಳೈಸಿದನ್ ಲಲ್ಲೆಗೈಯುತೆ ಕುಮಾರನಾ
ಮುದ್ದುವೆಸರಂ ಮೆಲ್ಲನುಚ್ಚರಿಸಿ. ಬೆಳಗಾಗಿ
ನೇಸರ್ಯೆತರೆ, ನಂದಿಸೆಂದಾಣತಿಯನಿತ್ತು
ಮೂದಲಿಸಿದನ್ ಗುರು ವಸಿಷ್ಠನಂ. ಕೂಗಿದನ್
ಪೆಸರಿಂ ಸುಮಂತ್ರನಂ. ಪೇಳೆ ಬರಲಿಲ್ಲೆಂದು,
ಶಪಿಸಿದನ್ ಸರ್ವರಂ ನೀಚವಾಕ್ಯಂಗಳಿಂ
ಬಾಯ್ಗೆಬಂದಂತೆವೋಲ್. ಬಯಲಿನಂಗಳದಲ್ಲಿ
ಕಂದನಂ ಕಂಡಂತೆ ಕೈಚಾಚಿ ಕರೆ ಕರೆದು,
ತಡೆದರಂ ಬಡಿದಿಕ್ಕಿ, ಮುನ್ನುಗ್ಗುತೋಡೋಡಿ
ದುಮುಕಿದನ್, ಕುಟ್ಟಿಮದಿನಾಳೆತ್ತರದ ಕೀಳ್ಗೆ,

ಮೆಯ್ಯೆಲ್ಲು ಕೀಲುಳ್ಕುವಂತೆ, ಹಾಹಾ ರವಂ
ನೆರೆದ ಪೆಣ್ಗಂಡುಗೊರಲುಗಳಿಂದಮೊಮ್ಮಿಂಗೆ
ಪೊರಪೊಣ್ಮುವಂತೆ. ಮಣ್ಣೊರಸಿ, ತೈಲಂಬಳಿದು,
ನೆತ್ತರುಗುವೇರುಗಳಿಗೊಳ್ಮರ್ದ್ದನಾವರಿಸಿ,
ನೆಗಹಿ ಮಲಗಿಸಿದರಾ ಮಾನಸಜ್ವರವೇರ್ದನಂ
ಪುರ್ಚುಗಿರ್ಚಿನ ಮೂರ್ಛೆಗಳ್ದ ವಸುಧೇಶನಂ
ಹಂಸಹೃದಯದ ತೂಲ ತಲ್ಪದಲಿ.
ರಾಮನಂ
ಗಂಗೆಯೆಡೆ ಬೀಳ್ಕೊಂಡು ಬಂದಾ ಸುಮಂತ್ರನಾ
ಕಂಡನೀ ಶೋಚನೀಯ ಸ್ಥಿತಿಯ ರಾಜೇಂದ್ರನಂ.
ಕಣ್‌ತೊಯ್ದು ಕರಪುಟಾಂಜಲಿಯೆತ್ತಿ ನಿಂದಾ
ಸುಮಂತ್ರನಂ ಗುರುತಿಸಲ್ಕಾರದಾ ಪೃಥಿವಿಪತಿ
ಮಂಕುಗಣ್ಣಿಂ ದಿಟ್ಟಿಸಿರ್ದನು ಶವಾಕ್ಷಿಯೋಲ್,
ನಿರ್ಜೀವವೆನೆ ನಿಶ್ಚಲಂ. ಪೇಳಲಾಟಿಸಲ್
ಮಂತ್ರಿ ರಘುರಾಮ ಸಂದೇಶಮಂ, ಮೌನದಿಂ
ಕೇಳ್ದನು ಶಿಲಾಪ್ರತಿಮೆಯೊಲ್. ಕೇಳುತಾಲಿಸುತೆ
ಶೋಕದಶನಿಯ ಹೊಯ್ಲಿಗುರುಳಿದನ್ ಮಂಚದಿಂ
ನೆಲಕೆ. ಹೋ ಎಂದೊದರುತಲ್ಲಿರ್ದ ಸ್ತ್ರೀಜನಂ
ತೋಳ್ಗಳೆರಡಂ ನೆಗಹಿ ಪಳಯಿಸಿರಲಾ ಗೋಳ್ಗೆ
ಪತ್ತನ ಸಮಸ್ತಮಾಬಾಲ ವೃದ್ಧರ್ವೆರಸಿ
ಕಡೆದುದ್ದೆ ರೋದನ ಸಮುದ್ರಮಂ. ಮೇಲೆತ್ತಿ
ಮಲಗಿಸಿದರರಸನಂ ಕೌಸಲೆ ಸುಮಿತ್ರೆಯರ್.
ತವಿಸಿದರ್ ಮುಚ್ಚೆಯಂ ಶಿಶಿರೋಪಚಾರದಿಂ.
ಸಂತವಿಟ್ಟರ್ ವಾಮದೇವನ್ ವಸಿಷ್ಠಾದಿ
ಗುರುವರರ್, ತಮ್ಮಾಡಿತಕೆ ತಾವೆ ದುಃಖಿಸುತೆ.
ಗುರುವರೇಣ್ಯರ ನುಡಿಗೆ ದೊರೆಯೆರ್ದೆಯಳಲ್‌ವೆಂಕೆ
ನೂರ್ಮಡಿಸುತುಕ್ಕಿದುದು, ತೆಕ್ಕನೆಯೆ ತಡೆಗೊಂಡ
ಹೊಳೆಯುರ್ಕಿ ದಡಗಳಂ ಮುಚ್ಚಿಕೊಚ್ಚುವ ತೆರದಿ,
ರಾಜೇಂದ್ರನಾತ್ಮಮಂ ಛಿದ್ರಛಿದ್ರಂಗೈವ
ರಭಸದಿಂ. ಬಳಿಯಿರ್ದ್ದರಂ ಬಡಿದು ಬಡಿದಟ್ಟಿ,
ಕೈಗಾರುಮೆಟುಕದಿರೆ, ಸಿಟ್ಟು ಸೀಕರಿಸುರಿಯೆ,

ತನ್ನ ಕಣ್ಣಂ ತಾನೆ ಕಿಳ್ತನಮಮಾ, ಭೀತಿ
ಬಡಿಯಲ್ಕೆ ನೋಳ್ಪರ್ಗೆ! ಕೂಗಿದನ್ ಕೈಕೆಯಂ
ಬೊಬ್ಬಿರಿದು. ನೆಣವಸೆಯ ನೆತ್ತರಂ ಸೋರಿರ್ದ
ಕಣ್ಣದಂ ಕೈಲಾಂತು, ಸುಟ್ಟಿದೋರ್ದು, ಕನಲ್ದು:
"ದೇಶ ಕೋಸಲವಿದೆಕೊ ಕರತಲಾಮಲಕಮೆನೆ
ಕಣ್ಗೊಳಿಸುತಿದೆ. ನನ್ನ ರಾಮನನೆನಗೆ ಕುಡಾ
ನಯನಾಭಿರಾಮನಂ! ಕಣ್ಣಾರ್ವಿನಂ ನೋಡಿ
ತೊರೆವೆನಸುವಂ, ಪ್ರಿಯತಮಾ ಪಿಶಾಚಿನಿ, ಕೈಕೆ!–
ಪಾಳ್ ಕಣ್ಗಳಿವೆ ಕಾರಣಂ, ನಿನ್ನ ರೂಪಲ್ತು,
ರಾಣಿ! ಈಗೆಲ್ಲಿ ಪೇಳಾ ನಿನ್ನ ರೂಪಪಾಪಂ?–
ಓ ಅಂಧತಾಪಸ, ನಿನ್ನ ಕಂದನಂ, ನೀರ್‌ಕುಡಿವ
ಕೋಳ್ಮಿಗಂಗೆತ್ತು, ಕಣ್ಣರಿಯದಾ ಕಳ್ತಲೊಳ್,
ಶಬ್ದವೇಧೀ ಧನುರ್ವಿದ್ಯಾ ಪ್ರತಿಷ್ಠೆಯಿಂ
ಕೊಂದುದಕೆ, ವಿಧಿ ನನಗೆ ವಿಧಿಸಿದೀ ಶಾಪಮಂ ಕಾಣ್!
ಕಾಣ್!–ಇದೇನ್ ಶಾಂತಿ ತುಂಬುತಿಹುದೆನ್ನಾತ್ಮಮಂ?
ಮತ್ತಿದೇನ್ ಕಾಂತಿ? ಅಃ! ಬೆಳಕೆ, ನೀಂ ಕಣ್‌ಕಿಡಲ್
ಕಣ್ದೆರೆವೆಯಲ್ತೆ? ಕುರುಡಿನ ಮಹಿಮೆ ಕುರುಡಂಗೆ
ಗೋಚರಂ! ಏಂ ದಿವ್ಯದರ್ಶನಂ! ಓ ರಾಮ,
ಇದಕೆ ನೀನಡವಿಗೊಲಿದುದೆ? ಈಗಳರಿತೆನಯ್
ಕ್ರತುಪುರುಷನಂದಿತ್ತ ಸಂದೇಶದರ್ಥಮಂ!
ನನ್ನ ಮಗನಾದುದಕೆ ನಿನಗಿದೊ ನಮಸ್ಕಾರಂ!
ಧನ್ಯನಾದೆನ್, ದೇವ!" ಓಡಿದಳ್ ನೆರವೀಯಲಾ
ಗೂನಿ ಮಂಥರೆಯೊರ್ವಳಾ ವಿಕೃತಿಗೆತ್ತಣಂ
ಬೀಭತ್ಸ ಭೀತಿ? ಕೈಕೆಯ ಕುಬ್ಜೆ ತನ್ನೆಡೆಗೆ
ಬರ್ಪನಿತರೊಳ್ ಬಂದುದ್ದೆ ಮೃತ್ಯು ದಶರಥಗೆ,
ವಿಕೃತಿಯಿದಿರೊಳ್ ಪ್ರಕೃತಿಯೊರ್ ಚೆಲ್ವು ಬರ್ಪಂತೆ.
ದೊರೆಯುರುಳ್ದನ್ ಧರೆಗೆ!
ಅತ್ತ ಕೇಕಯಪುರದಿ,
ಮಾತುಲ ಗೃಹದಿ, ಲಲಿತಸುಖದ ನಿದ್ರಾರತಿಯ
ತೋಳ್ತೊಡೆಯ ತಳ್ಕೆಯೊಳ್ ಬೆಚ್ಚನೆಯ ವಕ್ಷದೊಳ್
ಪಟ್ಟಿರ್ದ ಭರತದೇವಂ ದುಃಸ್ವಪ್ನಭೀತಿಯಿಂ

ಬೆಚ್ಚಿ ಬೆಬ್ಬಳಿಸೆದ್ದು ನೋಡಿದನ್: ನಡುರಾತ್ರಿ
ತಾರಾಖಚಿತ ನೀಲಿಮೆಯನುಟ್ಟು ನಿಂದತ್ತು
ನೀರವಂ. ತತ್ತಳಿಸಿ ನೋಡುತಿರ್ದಿರ್ದಂತೆ
ಪಜ್ಜಳಿಸುತರಿಲೊಂದು ಬಾನ್‌ಪಟದೊಳುರಿದುರಿದು
ಕರ್ಬಿತ್ತರಕೆ ಬೆಂಕೆಗೆರೆಯ ಚಿತ್ತಾರಮಂ
ಮೆತ್ತಿ ಬರೆದರಮನೆಯ ಕತ್ತಲೊಳ್ ಹುದುಗಿರ್ದ
ವಸ್ತುಗಳ್ಗಿತ್ತು ನೆಳಲಂ, ಜವಂಜವದಿಂದೆ
ಮರೆಯಾಯ್ತು ಮುಳುಗಿ. ನಿಡುಸುಯ್ದು ಶತ್ರುಘ್ನನಂ
ಕರೆದೆಳ್ಚರಿಸಿ ಭರತನೊರೆದನ್ ಕನಸನಿಂತು:
"ಬೆಕ್ಕಸವನೇನೆಂಬೆ, ಸೋದರನೆ; ಕಂಪಿಸಿದೆ
ತನು, ನೆನೆಯೆ ಕಂಡ ರಕ್ಕಸಗನಸದಂ. ಜಿಹ್ವೆ
ತೊದಲುತಿದೆ. ಬೆಮರುಕ್ಕುತಿದೆ. ಕದಡಿದೋಲಂತೆ
ಘೂರ್ಣಿಸಿದೆ ಬುದ್ಧಿ. ಕಳವಳಕಾತ್ಮ ಕುದಿಯುತಿದೆ:
ತಿಳಿಯದಾವುದೊ ನಾಡು. ನೇಸರಿಳಿದಿದೆ. ಕಪ್ಪು
ಕವಿಯುತಿದೆ. ನಿರ್ಜನತೆ ನಿಶ್ಚಲತೆ ನೀರವತೆಗಳ್
ಮೈಗೊಂಡವೊಲ್ ಬೈಗಿನಂಬರಕ್ಕೆದುರಾಗಿ
ಪೆರ್ಬೆಟ್ಟನೊಂದು ಕೋಡಿನ ಬಂಡೆ ನಿಂದತ್ತು
ದುಶ್ಶಕುನದಂತೆ. ನಾನೊರ್ವನೆಯೆ ಪರದೇಶಿ
ನಡೆದಿರಲ್ಕಾ ಗಿರಿಯ ಕಣಿವೆಯೊಳ್, ಪೇಳ್ವೆನೇಂ,
ಕಿವಿಗೆ ಬಂದುದು ಗೋಳುನೀಳ್ದನಿ, ವಿಪತ್ತೆಲ್ಲಮುಂ
ನೆರೆದು ಮೊರೆದುದೆನೆ ಮಸಗಿದ ಕಡಲ ಕಡೆಹದಾ
ಹೇರಾಳ ಘೋಷದಲಿ. ಬಿರುಗಾಳಿಗರಳಿಯೆಲೆ
ನಡುಗುವಂದದೆ ನಡುಗಿ ನಾನಿರದೆ ನೋಡುತಿರೆ,
ಬಾನ್ಗೋಡೆಗೆದುರಿನಾ ಕಲ್ಗೋಡಿನಗ್ರದೊಳ್
ಕಂಡುದೊಂದಾಳ್ತನಂ, ಮೆಯ್ಗೊಂಡ ಗೋಳೆಂಬ
ತೆರದಿ. ತೆರೆಗಣ್ಣಾಗಿ ನೋಡುತಿರೆ, ಗುರುತಿಸಿದೆನಯ್
ಪಿತನನಾ ಮಸಿಯ ಚಿತ್ತಾರದೊಳ್, ತಲೆಗೆದರಿ
ಕೊಳೆಮೆಯ್ಯೊಳಿರ್ದನಂ. ಬೆಟ್ಟದುದಿಗೋಡಿಂದೆ
ಹಾರಿ ಧುಮುಕಿದನು ತಳ್ಪಲೊಳಿರ್ದ ಹೇಸಿಗೆಯ
ಮಡುವಿನೊಳ್, ತಲೆಕೆಳಗೆ! ನೋಡುತಿರ್ದೆನೆ ಹೊರತು
ನೆರವೀಯಲಾರದಳುತಿರ್ದೆನತಿದೂರದಾ

ತೀರದಲಿ ನಿಂತು: ತೇಲಿದನವನ್ ದುರ್ಮಲದ
ಜಲಧಿಯಲಿ. ಮತ್ತೆ ಕಂಡೆನ್ ಬೊಗಸೆಗೈಯಲ್ಲಿ
ತೈಲಮಂ ಕುಡಿಯುತಿರ್ದುದನಲ್ಲದೇನೆಂಬೆ, ಕೇಳ್,
ತಿಂದನ್ ತಿಲಾನ್ನಮಂ ಮುಳುಮುಳುಗುತೆಣ್ಣೆಯೊಳ್.
ಕಡಲೊಣಗಿತುದುರಿದನ್ ಚಂದ್ರನಂಬರದಿಂದೆ
ನೆಲಕೆ. ಕವಿದುದು ಕತ್ತಲೆಯ ಕುರುಡದೆತ್ತೆತ್ತಲುಂ
ಮುತ್ತಿ. ಪಾತಾಳಕ್ಕೆ ಭೂಮಿ ಬೀಳ್ವಂತಾಯ್ತು.
ಪ್ರಲಯಾಗ್ನಿ ಪೊತ್ತಿ ಲೋಕಂ ದಹಿಸುತಿರೆ, ತಂದೆ
ಕಾಲಾಯಸಾಸನದೊಳಸಿತ ವಸನವನಾಂತು,
ರಕ್ತವರ್ಣದ ಪುಷ್ಪಮಾಲೆಯಂ ಧರಿಸಿ, ಮೇಣ್
ಕೆಂಗಂಧಮಂ ಪೂಸಿ, ಹಿಂದುಮುಂದಾಗುತ್ತೆ
ಕಳ್ತೆಯನಡರಿ ತೆಂಕಮೊಗಮಾಗಿ ಪೋಗುತಿರ್ದನ್.
ರಾಕ್ಷಸಸ್ತ್ರೀಯೊರ್ವಳಾತನಂ ಪಿಡಿದೆಳೆದು
ಕಿಲಕಿಲನೆ ನಕ್ಕು, ಕರ್ಮೊಗದೆಡೆಯ ಪಲ್ಗಳಂ
ಬೆಳ್ಪನೆಯೆ ಚಿಲಿವ ಘೋರಕೆ ಬೆದರಿ, ಗದಗದಿಸಿ
ನೆಗೆದೆದ್ದೆನೊಡೆಯುತಾ ದುಸ್ವಪ್ನಮಂ!''
ಸೋದರಗೆ
ಗಂಟಲೊಣಗಿತು ಕೇಳುತಾ ಸ್ವಪ್ನ ವೃತ್ತಾಂತಮಂ.
ಸಂಕಟಾಶಂಕೆಗಳ ಸೂಜಿಮೊನೆಮೇಲಿರುಳ್
ಕಳೆದುದೆ ತಡಂ, ಮಾತುಲಂಗೆ ಬಗೆಗುದಿಹಮಂ
ಪೇಳ್ದಾವ ಸಂತೈಕೆಗುಂ ಹೃದಯಮೊಪ್ಪದಿರೆ,
ತೇಜಿಗಳನೇರ್ದು, ಪರಿವಾರಮಂ ಪಿಂದಿಕ್ಕಿ,
ಮಿಂಚಿದರಯೋಧ್ಯಾಭಿಮುಖಮಾಗಿ ಭರತನುಂ
ಶತ್ರುಘ್ನನುಂ. ಸುದಾಮಾ ನದಿಯನುತ್ತರಿಸಿ,
ಹ್ಲಾದಿನೀ ನದಿಯನೇಲಾಧಾನ ಪಲ್ಲಿಯೆಡೆ
ದಾಂಟಿ, ಪಿಂತಿಕ್ಕಿದರ್ ಬಹುಸಂಖ್ಯೆ ನದಿಗಳಂ
ಗಿರಿಗಳಂ ಗ್ರಾಮನಗರಂಗಳಂ, ವನಗಳಂ
ಮೇಣರಣ್ಯಂಗಳಂ, ಪಗಲೇಳುಮಿರುಳುಮೇಳ್
ಕಳೆದು, ದಿಕ್ತಟದ ದೂರದೊಳಯೋಧ್ಯಾಪುರದ
ಮೇಘ ಚುಂಬಿತ ಸೌಧಗೋಪುರಂಗಳ ಪಂಕ್ತಿ
ಪ್ರಾಭಾತ ಸುಂದರಾರುಣ ಹೇಮಕಾಂತಿಯೊಳ್

ಮಿರುಮಿರುಗಿ ಕರೆದು ಕಾಣ್ಬನ್ನೆಗಂ. ಕಟವಾಯ್
ನೊರೆಯ ಚೆಲ್ಲೆ; ಬೆಮರಿಂದೆ ಕೂದಲೊಡಲಿಂಗಂಟೆ,
ಮೆಯ್ ತೊಯ್ದು ತೊಟ್ಟಿಡಲ್; ಹೊಟ್ಟೆ ನೆಲಮಂ ಕೀಸುವೊಲ್
ಮೆರೆಯೆ ಹಯಗತಿ ರಯಂ; ಮಣ್ವೊನಲ್ ಪರಿವಂತೆ
ದಾರಿ ಧಾವಿಸೆ ಪಡಿಮೊಗಂ, ಮಿಂಚಿದುವು ತೇಜಿ.
ವಾರುವಂಗಳ ಖುರಪುಟಧ್ವನಿ, ಸಮೀರಣಂ
ಕಿವಿವೊಗುವ ರಭಸಂ, ನಿರಂತರೋಚ್ಛ್ವಾಸದಿಂ
ತಿದಿಯೊತ್ತಿದಂತೇದುತಿರ್ದಳ್ಳೆಗಳ ರವಂ
ಕಿರಿದಾಗೆ, ಕುರಿತು ಶತ್ರುಘ್ನನಂ: ''ಸೋದರನೆ,
ಅರಳಿದೆ ಜಗನ್ನಯನಮಾದೊಡಂ, ಮನುನಗರಿ
ಮೂಗುವಟ್ಟಿದೆ ನಿದ್ದೆಯೊಳಗದ್ದವೋಲ್! ಜನದ
ಕೋಲಾಹಲಂ, ಗೀತ ವಾದ್ಯ ಮಧುರಸ್ವನಂ,
ಕೇಳದಿಹುದಿನಿತು ಬಳಿಸಾರ್ದೊಡಂ. ಮೇಣಗರು
ಚಂದನಂಗಳ ಧೂಪಧೂಮದಾಮೋದಮುಂ
ಮೂಗಿಂಗೆ ನಲ್ಗಂಪನೀಯದಿಹುದಿತ್ತಣ್ಗೆ
ತಾನೆಂದಿನಂದದೊಳೆ ತೀಡುತಿಹುದಾದೊಡಂ
ಮೆಲ್ಲುಸಿರ್ಗಾಳಿ. ಕೋಗಿಲೆ ಗಿಳಿಗಳುಲಿಯಿಲ್ಲಮಾ
ಪುರೋದ್ಯಾನತರುಗಳಲಿ. ಪೂಗಳ್ ಮೊಗಂಜೋಲ್ದು
ತೂಗುತಿವೆ ಬಾಡಿ. ಪಾಳ್ಮನೆಯಂತೆ ತೋರುತಿದೆ
ನಿರ್ಜನಂ, ನಿಶ್ಚಲಂ, ನೀರವಂ, ನಿರ್ಜೀವ
ನಿಸ್ತೇಜಮೀ ಮಹಾನಗರಿ. ನೋಡದೊ, ಅಲ್ಲಿ,
ವೈಜಯಂತಿಯ ಪೆಸರ ಪೆರ್ಬಾಗಿಲೀಚೆಯೊಳ್
ಶೂನ್ಯಮಾದಂತಿಹುದು ಪಿತೃದೇವ ಮಂದಿರಂ.
ಪೂಜ್ಯ ಪಿತೃದೇವತೆಗಳಿಗೆ ವಂದನಂ ಗೆಯ್ದು
ಪುರದೊಳಗೆ ಪೋಗುವಂ ಬಾ'' ಎನುತ್ತವರಜಂ
ವೆರಸಿ ಭರತಂ ಪೊಕ್ಕನಾ ದೇವನಿಲಯಮಂ,
ತುಳುಂಕೆ ಗುರುಭಕ್ತಿ.
ಪೊಕ್ಕುದೆ ತಡಂ, ಬೆಕ್ಕಸಂ
ಬಡಿದಂತವೊಲ್, ನಿಂದರಾಯಿರ್ವರುಂ, ನಟ್ಟು
ಮುಂದಕೆವೆಯಿಕ್ಕದಾ ದಿಟ್ಟಿ. ವಿಗ್ರಹಗೃಹದಿ
ಕೀರ್ತಿಶೇಷ ದಿನೇಶ ವಂಶದ ನೃಪಾಲರಾ

ಪ್ರತಿಮೆಗಳೊಡನೆ ತುತ್ತತುದಿಮೂರ್ತಿ ತಾನಾಗಿ
ಮೆರೆದುದದೊ ದಶರಥಪ್ರತಿಮೆ! ಓರೊರ್ವರಂ
ಮೊಗಂ ನೋಡಿದರ್ ಸೋದರರ್, ಮಾತುದೋರದಾ
ಭೀತಿ ಸಂಶಯ ದಗ್ಧ ಹೃದಯ ಸಂದಿಗ್ಧತೆಯ
ಮೌನಮುದ್ರೆಯಲಿ. ಬೆದರಿದರ್ ತಾಮಿರ್ವರುಂ
ತಮ್ಮೆರ್ದೆಯೊಳಿರ್ದ್ದಂಜಿಕೆಯ ಮೂಕತೆಗೆ ನುಡಿಯ
ನಾಲಗೆಯನೀಯೆ. ನಿಡುಸುಯ್ಯುತ್ತೆ ತಿರುಗಿದರ್;
ಕುದುರೆಗಳನೇರಿದರ್; ವಾಘೆ ರಾಘೆಯ ಬಲದಿ
ವಾಯು ವೇಗವ ಮೀರ್ದು ಪೊಕ್ಕರತಿ ತವಕದೊಳ್
ಪೊಳಲ ಪೆರ್ಬಾಗಿಲಂ: ಗುಡಿಸದಿವೆ ಬೀದಿಗಳ್.
ಮುಚ್ಚದಿವೆ ಮನೆಮನೆಯ ಬಾಗಿಲ್ಗಳುಂ, ಪೆಣಂ
ಬಾಯ್ಬಿಟ್ಟವೋಲಂತೆ, ಬದುಕಿರ್ಪ ಚಿಹ್ನೆಯನೆ
ನೀಗಿ. ರಂಗೋಲಿಗಳ ಕುರುಹಿಲ್ಲ; ಪೊಸತಳಿರ್
ತೋರಣದ ಸುಳಿವಿಲ್ಲ. ಕೇಳಿಸದು ಗುಡಿಗಳಲಿ
ಗಂಟೆದನಿ. ಪರಿಮಳದ್ರವ್ಯಗಳ ಕಂಪಿಲ್ಲ. ಮೇಣ್
ಮಂದಿಯ ಚಲನೆಯಿಲ್ಲ: ಹಾಳು ಹಂಪೆಯ ಹೊಕ್ಕ
ಕನ್ನಡಿಗರಂತಾದರೈ ಕುದಿವೆದೆಯ ಭರತನುಂ
ಶತ್ರುಘ್ನನುಂ! ದುರ್ದಿನದ ಮಂಕು ಕವಿದಂತಿರ್ದ
ಪತ್ತನದ ಪೆರ್ದಾರಿಗಳಲಿರದೆ ಪರಿದೋಡಿ
ತಂದೆಯರಮನೆಯಂ ಪ್ರವೇಶಿಸಲ್, ಮೈದೋರ್ದುದೈ
ಶೂನ್ಯತಾ ವ್ಯಾಘ್ರವದನಂ, ದಂಷ್ಟ್ರಮಯಮೆನಲ್
ಕಟು ವಿಕಟಹಾಸ್ಯೋಗ್ರ ಭೀಕರಂ.
ತಲ್ಲಣಿಸಿ,
ತನ್ನ ತಾಯರಮನೆಗೆ ಶತ್ರುಘ್ನನಂ ಕಳಿಪಿ,
ಭರತನೈದಿದನೊಡನೆ ಜನನಿ ಕೈಕೆಯ ರತುನ
ಮಂದಿರಕೆ. ಪಾಳ್ಮನೆಯ ತೆರದಿನೆಸೆದಳ್ ಮಾತೆ,
ನಿರ್ಜನೆ, ನಿರಾಭರಣೆ, ನಿಶ್ಚಲೆ, ರವವಿಹೀನೆ.
ವ್ಯಥೆತಿಮಿರ ಪರಿವೃತೆಯನಳ್ಕಜದಿನೀಕ್ಷಿಸುತೆ
ಬೆದರೆದೆಯ ಕಂದನಮ್ಮನ ಕಾಲ ಮೇಲುರುಳಿದನ್.
ಬೆಸಗೊಂಡನಯ್ಯನೆಲ್ಲಿದನೆಮ್ಮ ಪೊಳಲಿಗೇಂ
ಕೇಡಡಸಿತರಮನೆಯಿದೇಕೆ ಸಿರಿಗೆಟ್ಟಂತೆ

ಕಂದಿಹುದು? ನಿನ್ನಿರವಿದೇಕೆ ದುಶ್ಶಕುನಮಂ
ಸಾರುತಿದೆ?—ಕಂದನುಬ್ಬೇಗಮಂ ಕಂಡಬ್ಬೆ
ನುಡಿಗೆಟ್ಟವೋಲಳುತಳುತೆ ಸುತನನೆತ್ತಿದಳ್;
ಮತ್ತೆ ಬಿಗಿಯಪ್ಪಿದಳ್; ಮತ್ತೆ ಮುಂಡಾಡಿದಳ್;
ನೋಡಿದಳ್ ಪುರ್ಚ್ಚೇರ್ದ್ದರಂತೆವೋಲ್. ಬೆಕ್ಕಸದಿ
ಬಿಟ್ಟಾಲಿಯಾಗಿ ಭರತನಿರೆ, ಗದ್ಗದಕಂಠೆ ತಾಯ್:
"ಮನ್ನಿಸೆನ್ನನ್, ಮಗನೆ; ಪಾಪಿಯೆನ್!" "ಮಾಣ್, ತಾಯೆ,
ಮಾಣಾತ್ಮನಿಂದೆಯನ್. ನಿನ್ನಪ್ಪುಗೆಯ ಪಡೆಯೆ
ಪಾಪಮನಿತೇಂ ಪುಣ್ಯಶಾಲಿ? ಮೇಣೆನಗದೇಂ
ನೇರ್ಗಿರಿಯನೇಂ?" "ದಿವಂಗತ ದಶರಥ ಕುಮಾರ,
ವನವಾಸಿ ರಘುರಾಮ ಹೃದಯಚಂದ್ರ ಚಕೋರ,
ಪೆತ್ತಳೆಂದೀ ನೀಚಳನ್ನೇಕೆ ಪೊಗಳಿದಪೆ? ಕೇಳ್,
ಕೇಡನೆಸಗಿದೆ ಬೇಡಿ. ವರವೆನ್ನ ಭಾಗಕ್ಕೆ
ಶಾಪವಾದುದೊ, ಕಂದ. ಮುಂದುಗಾಣದೆ ತಂದೆನ್ನೆ
ತಂದೆಗಪಮೃತ್ಯುವಂ! ಮೇಣರಣ್ಯಕ್ಕಟ್ಟಿದೆನ್
ಕೌಸಲೆಯ ಕಂದನಂ. ಕಟ್ಟಿದೆನ್ ಕುತ್ತಿಗೆಗೆ
ತಿರೆಹೊರೆಯರೆಯನೆನ್ನ ಕಂದನ ಕಂದಳಕ್ಕೆ!
ಪುತ್ರಾಭ್ಯುದಯ ಮೋಹದ ತಮಸ್ಸು ತೀವಿರ್ದ
ಲೋಭ ಪೈಶಾಚಿಗೀ ಪಿರಿಯ ಬಲಿಯಹುದೆಂದು
ಮುನ್ನಮಾನರಿಯಲಾರದೆ ಹೋದೆ. ಹಾಳಾದೆ!
ನಿನ್ನ ಬಾಳಿನ ಪಾಲ್ಗೆ ವಿಷವಾದೆ! ರವಿಕುಲದ
ಚಂದನಶ್ರೀವನಕೆ ದಾವಾಗ್ನಿಯಾದೆ! ಹಾ,
ಲೋಕನಿಂದೆಯ ತೋರುಬೆರಳಿಗೆ, ಕರುಣೆ ವತ್ಸ,
ಹೇಸು ಗುರಿಯಾದೆ!"
ಕಾರ್ಮೊದಲ ಬಿರುಗಾಳಿಗುರೆ
ಬೇರದುರಿ ತಲೆದಿರುಗಿ ತೂಗಿತೊನೆಯುತ್ತಿರ್ಪ
ಮಲೆವಣೆಯ ಪೆರ್ಮರಕೆ ಸಿಡಿಲು ಬಡಿದಂತೆ ಆ
ಪಿತೃಮರಣವಾರ್ತೆಗಗ್ರಜನ ವನವಾಸದಾ
ಸುದ್ದಿ ಸಂಘಟ್ಟಿಸೆ ನೆಲಕ್ಕುರುಳ್ದುದು ಕೂಡೆ
ಹಡೆದೊಡಲಿನಡಿಗೆ ಭರತನ ಕರುಣಾಮಯವಿಗ್ರಹಂ.
ಕುಳಿರೆಲರಿಗನುಕಂಪಿಸುವ ಲತೆಯವೋಲ್ ಕೈಕೆಯುಂ

ನಡುನಡುಗಿ, ಕಂದನಂ ನೆಗಹಿ ಮೈಸೋಂಕಿನಲಿ
ಕುಳ್ಳಿರಿಸಿಕೊಂಡು ಸಂತೈಸುತೆಂದಳ್: "ಮಗನೆ,
ಸಾತ್ವಿಕ ಸರಳಜೀವಿ ನೀನೆಂತರಿವೆಯೆನ್ನ ಈ
ಹೃದಯಮಂ? ತಾಯಿಯೊಲ್ಮೆಗೆ ಮಗನ ಮೇಲ್ಮೆಗಿಂ
ಬಯಕೆ ಬೇರುಂಟೆ? ನಿಃಸ್ವಾರ್ಥದಾ ಬಯಕೆಗಿಂ
ಪೆರತು ಕಣ್ಣೇನೊಳದೆ ಧರ್ಮಕ್ಕೆ? ಕೇಳ್, ಕೌಸಲ್ಯೆ
ಪಡೆದಂಗೆ ನೀನಿಲ್ಲದಂದು ಪಟ್ಟಂಗಟ್ಟೆ
ಹೊಂಚಿ ಹವಣಿಸುತಿರ್ದುದಂ ನಿನ್ನೊಲುಮೆ ದಾದಿ
ಕೇಳ್ದು ಬಂದರುಹಿದಳ್. ಹುರಿದುಂಬಿಸುತ್ತೆನಗೆ
ತಿಳುಹಿದಳುಪಾಯಮಂ: ಮದುವೆ ನಿಲ್ವಂದೆನಗೆ
ರಾಜೇಂದ್ರನಿತ್ತ ವರಗಳನೊಡ್ಡಿ ತಡೆಯಲ್ಕೆ
ಪಟ್ಟಾಭಿಷೇಕಮಂ, ದೂರದೂರಿಂದೆ ನೀಂ
ಬರ್ಪಂಬರಂ. ಆ ಪ್ರಯತ್ನಮಿಂತಾದುದಯ್
ದುರ್ವಾರ ದುರ್ಜ್ಞೇಯ ದುರ್ವಿಧಿಯ ಲೀಲೆಯಿಂ.
ಕಂದ, ನಿನ್ನೆದೆಯನಾಂ ಬಲ್ಲೆನಾದೊಡಮೆನ್ನ
ತಾಯ್ಮಧುರ ವಾತ್ಸಲ್ಯದಾ ತಿಕ್ತ ಕರ್ತವ್ಯಮಂ
ಮಾಣ್ದೆಂತುಟಿರಲಿ? ದೊರೆಯೆನಗಿತ್ತ ವರಗಳಿಂ
ನಿನಗೆ ರಾಜ್ಯದ ಪಟ್ಟದಧಿಕಾರವಿರ್ಪುದಂ
ತೊರೆಯೆ ನಿನಗಲ್ಲದೆನಗದೇನಿದೆ ಪಸುಗೆಪಾಳಿ?–
ಬಿದಿಗೈದ ಹದನಕಿನ್ ರೋದಿಸಿದರೇನ್, ಮಗುವೆ?
ಕಡೆಗೆಲ್ಲರೈದುವೆಡೆಗೈದಿದನ್ ಮುದಿಯರಸು,
ರಾಮಲಕ್ಷ್ಮಣ ನಾಮಮಾತ್ರವನೆ ಜಪಿಸುತ್ತೆ,
ಮರೆತು ಕೈಕೆಯ ಕುವರನಂ. ರಾಮನಾದೊಡಂ
ನಡೆದನಡವಿಗೆ ಪಿತನ ವಾಕ್ಯಪರಿಪಾಲನೆಗೆ
ಪದಿನಾಲ್ಕು ಬರಿಸಂಬರಂ. ನೆಲಮರಾಜಕಂ.
ನೀನಲ್ಲದಿನ್ನಾರ್ ಸುಜನಮೂರ್ತಿಗಳೆಹರ್, ಪೇಳ್,
ಪ್ರಜಾಭ್ಯುದಯಕಾಂಕ್ಷಿಗಳ್ ಕೋಸಲಕೆ?"
"ನಿಲ್! ನಿಲ್!
ಕೊಲೆಗೈಯದಿರ್, ತಾಯೆ, ಹಾಲೂಡಿದೆದೆಯೊಳೆಯೆ
ಹಾಲಾಹಲವನುಗುಳಿ!" ಎನುತ್ತಬ್ಬೆಯಿಂ ಸಾರ್ದು
ದೂರಕ್ಕೆ "ಪೆತ್ತಂದೆ ಕೊರಳಂ ಮುರಿಯದೇಕೆ

ಕಾಯ್ದು ನೀನೀ ಪೊಳ್ತುಬರೆಗಂ? ಕುಮಾರನಂ
ಪಡೆದುಂ ನಿನಗೆ ಬಂಜೆತನಮೊದವಿದಂತಾಯ್ತೆ,
ಪೇಳ್, ಭರತಮಾತೆ? ನಿನಗನ್ಯನೆ ರಘೂದ್ವಹಂ?
ರಾಮನಂ, ದಶರಥಪ್ರಾಣನಂ, ಕಾನನಕೆ
ನೂಂಕಿ, ವೈಧವ್ಯ ದಿವಮಂ ಪಡೆದೆ ನೀನಲ್ತೆ,
ಧರೆಗೆ ಮೇಣೆಮಗನಾಥತ್ವಮಂ?–ಬದುಕೆನಗೆ
ಸಾವಿಗೆಣೆ ಅಣ್ಣದೇವನನುಳಿದು; ಪಾಳ್‌ಮಣ್ಣು ಈ
ಕೀಳ್ ನೆಲದ ಸಿರಿ! ತೀರ್ದಯ್ಯನುಸಿರನೆಂತುಂ ಪೆಡಂ
ಮಗುಳಿಸುವುದಸದಳಂ: ಪಿರಿಯಣ್ಣನಂ ಮರಳ್ಚಿ
ಕರೆದು ತಂದಪೆನಡವಿಯಿಂ. ಬರಲ್ಕೊಪ್ಪದಿರೆ,
ತಾಯಾತ್ಮದೊಳ್ಪಿಂಗೆ ಹೊಣೆ ಕಂದನದರಿಂದೆ
ರಾಮಸೇವೆಯೊಳಿರ್ದು ನೀಂ ಗೈದ ಕುಕೃತಮಂ
ತವಿಸುವೆನು, ಕೇಳ್, ವಿಪಿನಾಶ್ರಮದ ತಪೋಜೀವನದ
ಸುಕೃತ ತೀರ್ಥದಲಿ!''
ಎನುತ್ತಲ್ಲಿಂ ಜುಗುಪ್ಸೆಯಿಂ
ಪೊರಮಡುವ ತನುಜನಂ ಬಂದೆರಗಿ ಕಾಲ್ವಿಡಿದು
ಬಾಚಿ ತಬ್ಬಿದಳು ಮೊಳಕಾಲೂರಿ! ದೀನಾಸ್ಯೆ,
ಸುತ ತಿರಸ್ಕಾರ ಕಟು ಶೂಲದಾಘಾತದಿಂ
ಬಿರಿದೆದೆಯ ರಾಣಿ, ಮೇಣಶ್ರುಮಲಿನ ಕಪೋಲೆ ತಾಂ
ಮೊಗವೆತ್ತಿ ಮಗನ ಮೊಗಮಂ ಕರುಣದೈನ್ಯದಿಂ
ನೋಡಿ ಗೋಳಾಡಿದಳ್, ಬಿನ್ನಹಕೆ ಬಾಯ್ ಬಂದ
ತೆರದಿ: ''ಕೈಬಿಡದಿರೆನ್ನಂ, ಮಗನೆ, ಕೆಟ್ಟಳೆನ್!
ಜಗವೆ ಕೈಬಿಟ್ಟಳೆನ್! ನೂಂಕು ನರಕಕೆ; ಸಹಿಸಿ
ಬಹೆನೊ ಕೇಡಂ ತವಿಸಿ; ನೂಂಕದಿರೊ ಶೂನ್ಯತೆಗೆ!
ಹೊಲೆಗೆ ಹೊಲೆ ಮಡಿಯಲ್ತು; ಕೊಲೆಗೆ ಕೊಲೆ ಪಡಿಯಲ್ತು;
ನೋವು ನೋವಿಗೆ ಸಾವುಮಲ್ತು. ನಾಂ ಗೈದುದನೆ
ನೀಂ ಗೈದರೇಂ ತಪ್ಪು ತಪ್ಪಿನಿಂದೊಪ್ಪಮಂ
ಪೊರ್ದುವುದೆ? ಕಾಲ್ವಿಡಿದು ಬೇಡುತಿಹೆನಿದೊ, ಕಂದ.
ಬಂದಪೆನ್ ಕರೆದೊಯ್ಯೊ ನಿನ್ನ ಕೂಡೆನ್ನನುಂ
ಮಂಗಳದ ಮನೆಗೆ. ನಡೆದಪೆನೊ ನೀನೆಂದಂತೆವೋಲ್
ನೆಳಲಂತೆ, ಮೂಕವಿನಯದಲಿ! ಕೇಳ್, ಕೈಕೆಗಿನ್

ಬಾಯಿಲ್ಲೊ! ಕಲ್ಲಾದಹಲ್ಯೆಯಂ ನುಡಿಸಿದಾ
ರಾಮನಡಿ ಸೋಂಕಿಗುಂ ಕಿಡದೆನ್ನ ಕಲ್‌ತನಂ!
ಕೈಬಿಡದೆ ಕಾಪಿಡೆನ್ನಂ!''
                    ತನ್ನಡಿಗೆ ಮುಡಿಚಾಚಿ
ಕೆಡೆದಂಬೆಯಂ ಕರಗಿ ಕಂಬನಿಗರೆದು ಸುಯ್ದು
ಬಾಗಿ ಬಿಗಿಯಪ್ಪಿದುದು, ಜನನಿ ರಸವಶೆಯಾಗೆ,
ಭರತಕ್ಷಮಾ ಕಲ್ಪತರು ಮೃದು ಬಾಹುಶಾಖೆ:
ಬಗೆಯ ಮೈಲಿಗೆ ಮರುಗುವೆದೆಯ ಕುದಿಬೇನೆಯಿಂ
ಮಡಿಯಪ್ಪುದೊಳಸೋರದಿರ್, ಕೈಕೆ. ಕೇಡುಂಟೆ ಪೇಳ್
ತಿರೆಯೊಳ್ಪಿಗಿಂಬಾದ ರಾಮನನುಜನ ತಾಯ್ಗೆ?
ಕಣ್ಗೆಡದಿರಂಜದಿರ್. ಪಾಪಿಗುದ್ಧಾರಮಿಹುದೌ
ಸೃಷ್ಟಿಯ ಮಹದ್‌ವ್ಯೂಹ ರಚನೆಯೊಳ್, ಕೇಳ್, ತಾಯಿ:
ಬೆರಳಿಚದ ಕೂರ್ಮೊನೆಯ ಮಿಡಿವ ಹಿಂಸೆಗೆ ತಂತಿ ತಾಂ
ಬೀಣೆಯಿಂಚರವೀಯುವಂತೆ, ನೀನುಗುರಾಗಲಾ
ವೈಣಿಕ ವಿಧಿಯ ಕೈಗೆ, ಪೊಣ್ಮದತ್ತಿಂಪಾಯ್ತು ಮೇಣ್
ಭಗವದ್ ರಸಧಿಯಾಯ್ತು ರಾಮಾಯಣ ಬೃಹದ್‌ಗೀತೆ!

ಸಂಚಿಕೆ ೭

# ಅಗ್ನಿಯಾತ್ರೆ

ಶ್ರೀ ನದಿಯ ಸಲಿಲದಲಿ ಮಿಂದು, ಹೊಸ ಹಾಲ್ಮಡಿಯ
ನಾರುಡೆಯನುಟ್ಟು, ಮುನ್ನೇಸರೆಳಬಿಸಿಲಲ್ಲಿ
ಹಕ್ಕಿಯಿಂಚರದಡವಿ ವಟ್ಟೆಯೊಳ್ ದಿನದಿನಂ
ಬಂದೆನಗೆ ದರ್ಶನವನೀವ, ಓ ಕವಿಋಷಿಯೆ,
ಮುಡಿಮಣಿದು ಮೊಳಕಾಲೂರಿ ಬೊಗಸೆಗೈಯಿಂದೆ
ಕುಸುಮಾಂಜಲಿಗಳಂ ನಿವೇದಿಸುವೆನಡಿಗುಡಿಗೆ:
ರಸಮಂತ್ರ ತೀರ್ಥಮಂ ತಳಿ ಕಮಂಡಲುವಿಂದೆ
ಕವಿಕುಮಾರನ ಮತಿಗೆ ಕೃಪೆದೋರಿ, ಕವಿಗುರುವೆ,
ಕೃತಿವೇಳ್ವ ಚಿತ್ತಕ್ಕೆ ಚಮತ್ಕಾರಮಂ ನೀಡಿ.
ಕೇಳ್ದು ಭರತಂ ಬಂದುದಂ, ಮಂಥರೆಯ ಮನಂ
ಕೇಗಿ ಕುಣಿದುದು, ಹೀಲಿಗರಿಗೆದರಿ. ಪೆರ್ಮೆಯಿಂ,
ತಾಂ ನೆಗಳ್ದುಪಾಯದಿಂ ತನ್ನವಗೆ ದೊರೆತನಂ
ದೊರೆವುದೆಂಬುತ್ಸವಕೆ ನಗೆನಿರಿಯ ವಿಕೃತಿಯಿಂ
ಮೊಗಗೂಬೆ ವಿಕಟಮಾಗಿರೆ, ಸಂಭ್ರಮಾತುರದಿ
ಬರುತಿರ್ದಳಾ ಕುಬ್ಜೆ ತನ್ನೊಡತಿಯರಮನೆಗೆ.
ಕಥೆಯೆಲ್ಲಮಂ ಕೇಳ್ದು ಕೋಪಾಗ್ನಿರೂಪಾಗಿ
ಪರಿದಿರ್ದ ಶತ್ರುಘ್ನನಂ ಬಟ್ಟೆಯೊಳ್ ಕಂಡು
ಬೆಸಗೊಂಡಳಡವಿಗಿಚ್ಚಂ ದೂರದಿಂ ಬಳಿಗೆ
ತೊಡೆಯೇರಲಾಹ್ವಾನಿಸುವ ತರಗು ಲತೆಯಂತೆ:
"ಭರತನೆಲ್ಲಿದನಯ್ಯ?" "ರಾಮನೆಲ್ಲಿದನೆಲ್ಲಿ
ಲಕ್ಷ್ಮಣಂ? ಮತ್ತೆ ಪೇಳೆಲ್ಲಿಗಟ್ಟಿದೆ ದೇವಿ

ಸೀತೆಯಂ? ನೀಚೆ, ಪೇಳೇಕಯ್ಯನಂ ಕೊಂದೆ?
ಪೇಳ್ ಪೇಳ್, ಏಕೆ ರವಿಕುಲದ ಸುಖಮಂ ತಿಂದೆ,
ಮೃತ್ಯುಸ್ವರೂಪಿ, ಓ ಶುನಕಿ? ಭೂಕಂಪಮೆನೆ
ಮನುನಗರಿಯಂ ಮಣ್ಣುಗೂಡಿಸಿದೆ, ಪಾತಕಿಯೆ!
ನಿನಗುಮಾ ಗತಿಯಪ್ಪುದೆನ್ನಿಂದಿದೆಕೊ ಕಾಣ್!''
ಎನುತ್ತೆನುತೆ ಕಾಳಹಸ್ತದಿನವಳ ಕುಟಿಲತೆಯ
ಕೇಶಹಸ್ತವನಿಳ್ದು ಕಲ್ನೆಲಕೆ ಕುಕ್ಕಿದನ್,
ಮೆಯ್ ಪನಿಯಲಿಕ್ಕಿದನ್, ಗೂನ್ ಬಿರಿಯಲೊಕ್ಕಿದನ್,
ಮಂಥರೆಯ ಕರ್ಕಶದ ಚೀತ್ಕೃತಿಕ್ರಕಚದಿಂ
ಭರತ ಜನನಿಯ ಮೌನಶಿಲೆ ಘರ್ಘರಿಸುವಂತೆ.
   ಅಳಿವಗೆಯನುಳಿದೊಳ್ಪನೇಗೊಂಡಳಂ ಪೆತ್ತಳಂ
ಸಂತವಿಟ್ಟಲ್ಲಿಂದೆ ಪಿರಿಯಬ್ಬೆಯಂ ಕಾಣ್ಬ
ಕಾತರದಿ ಬರುತೆ, ಭರತಂ ಕೇಳ್ದನೆರ್ದೆಮರುಗಿದನ್,
ತನ್ನ ಪೆಸರಂ ಕೂಗಿ ಕರೆದೊರಲಿ ಚೀರಿಡುವ
ಮಂಥರೆಯ ನೀಳ್ದ ಗೋಳ್ದನಿಗೆ. ಕೇಳ್ದುದೆ ತಡಂ
ಕರುಳುರಿದುದೆರ್ದೆ ಕೊರೆದುದಯ್ ಕರುಣೆ ಭರತಂಗೆ:
ಪೆತ್ತ ತಾಯ್ಗಿರ್ಮಡಿಯೊಲುಮೆವೆತ್ತು, ಕೂಸಿಂದೆ
ಕೌಮಾರದನ್ನೆಗಂ, ಕಟ್ಟೆ ತನ್ನಳ್ಕರೆಯ
ತೊಟ್ಟಿಲನದರೊಳಿಟ್ಟು ಜೋಗುಳದುಲಿಗೆ ತೂಗಿ,
ನಿಚ್ಚಮುಂ ಸಾಕಿ ಬೆಚ್ಚಗೆ ಸಲಹಿದಾಕೆಯಾ
ಮಂಥರೆಯ ನೀಳ್ದ ಗೋಳ್ದನಿಯ ಕೇಳ್ದುದೆ ತಡಂ
ಕರುಳುರಿದುದೆರ್ದೆ ಕೊರೆದುದಯ್ ಕರುಣೆ ಭರತಂಗೆ!
ಬೇಂಟೆನಾಯ್ ಪಿಡಿಯೆ, ಮರಿಯೊರಲೆ, ತಾಯೆಕ್ಕಲಂ
ರೌದ್ರವೇಗದಿ ಗಜರಿ ನುರ್ಗುವೋಲ್ಚೈತಂದು
ಕಂಡನಾ ಗೂನಿಯಂ ಬಡಿವ ಶತ್ರುಘ್ನನಂ.
ಕಂಡೊಡನೆ, ನೆನಹು ಮರುಕೊಳಿಸಿ, ಗುರಿ ಬೇರಾಯ್ತು
ಕನಲಿಕೆಗೆ. ಕರುಣೆ ಸೆಡೆತುದು ಕಹಿಯನೆಡೆಗೊಂಡ
ನಾಲಗೆಯವೋಲ್. ''ಅಯ್ಯೊ ದಮ್ಮಯ್ಯ, ಬಾರಣ್ಣಯ್ಯ,
ರಕ್ಷಿಸೋ!'' ಎನುತೆ, ತನ್ನಂ ಮರೆವುಗಲ್ಕೋಡಿ
ಕೈನೀಡಿ ಬರುತಿರ್ದಳಂ ಆ ಪ್ರೇಮರಾಹುವಂ
ತೊಲಗಿಸುತ್ತಶ್ರುಗದ್ಗದದಿಂದೆ ಭರತಸೂರ್ಯಂ:

''ತೊಲಗೆಲೆ ಕುರೂಪಿ, ಓ, ತೊಲಗು ಕಣ್ಬೊಲದಿಂದೆ
ತೊಲಗಾಚೆ, ಪಾಪಿ! ಬಳಿಸಾರದಿರ್; ನಿಲ್ಲದಿರ್!
ಅಯ್ಯೊ ನಂಬುವೆನೆಂತುಟೀಯೊಲ್ಮೆವುತ್ತಿನೊಳೆ
ಹಗೆಯ ನಂಜಿನ ಹಾವು ಹೆಡೆಯೆತ್ತಿ ಹೊರಹೊಮ್ಮಿ
ಕಚ್ಚಿತೆಂಬುದನಯ್ಯೊ? ನಿನ್ನೊಳಿಂದಿನವರೆಗೆ
ವಿಕೃತಿಯಂ ಕಂಡೆನಿಲ್ಲಿಂದೇಕೆ ಪಲ್ಗಿರಿದು
ನಿಂದವೋಲಿದೆ ಕುರೂಪತೆಯ ಪೈಶಾಚಿಕತೆ
ಕರ್ಕಶಮೆನಲ್? ದಿಟಂ, ಮನಸಿಗಲ್ಲದೆ ವಿಕೃತಿ
ಬಾಹ್ಯಪ್ರಕೃತಿಗುಂಟೆ? ಪೆತ್ತವಳನಳುಪುವೊಲ್
ಕಾಣಿಸುತ್ತಳಿಗೆಯ್ತುಕದ್ದಿದ ತನ್ನ ಕಣ್ಗಳನೆ
ಕಿಳ್ತೆಸೆವನಂತೆ ನಾಂ, ಮಂಥರೆ, ಬಿಸುಟ್ಟೆನಿದೊ
ನಿನ್ನನೆಂದೆಂದಿಗುಂ. ಜಲಮಂ ತಿರಸ್ಕರಿಸಿ
ಪೊರಮಟ್ಟ ತಾವರೆಯೆರ್ದೆಗೆ ರವಿಯೆ ಗುರುವೈರಿ
ತಾನೆಂತುಟಂತೆ, ಕೇಳ್, ರಾಮನಂ ಬಿಸುಟೆರ್ದೆಗೆ
ಭರತನಹಿತಂ.–ನಿಲ್, ಪೊಯ್ಯದಿರ್, ಸೋದರನೆ.
ಪೆಣ್ಗೊಲೆಗೆ ಪೇಸುವಂ ಪಿರಿಯಣ್ಣನದರಿಂದೆಯುಂ
ಬಿಡು ಕೋಪಮಂ. ನಾಯ್ಗೆ ಬಡಿದರದು ಕಚ್ಚಿದಾ
ಗಾಯ ಗುಣಮಪ್ಪುದೇಂ? ದೊಡ್ಡಮ್ಮನೆಡೆಗೆ ಬಾ!''
ಎನುತೆ ತಮ್ಮಂಬೆರಸು ಪಿಂದಿರುಗಿ ನೋಡದೆಯೆ
ನಡೆದನಲ್ಲಿಂದೆ. ಮಂಥರೆ ಗುಂಡು ಬಡಿದಂತೆ
ಕೆಡೆದಳವನಿಯಲಿ: ರವಿಯಾಕರ್ಷಣೆಯನುಳಿಯೆ,
ನಿಚ್ಚನೇಮಂಗೆಟ್ಟು, ಬಟ್ಟೆ ನಿಟ್ಟೆಗೆ ತಪ್ಪಿ,
ತತ್ತರಿಸಿ, ನೀಲ ಶೂನ್ಯಕ್ಕುರುಳುರುಳುವಿಳೆಯಂತೆ,
ಭರತನಕ್ಕರೆಯೊಂದೆ ಪಿರಿಯ ನೆಮ್ಮಾಗಿರ್ದ
ಕುಬ್ಜೆಯಾತ್ಮಂ ತಳಂಗೆಟ್ಟುರುಳ್ದುದು; ಮತ್ತೆ
ಪುಡಿವುಡಿಯಾಯ್ತು, ಬೂದಿಯಾಯ್ತುಳ್ಕೆಯೋಲುರಿದುರಿದು,
ಭರತನಾಗ್ರಹ ಗ್ರಹದ ಘಾತಕ್ಕೆ!
ಓ ಪತಿತೆ,
ಓ ಕುಬ್ಜೆ, ಓ ಮಂಥರೆಯೆ, ಮರುಗುವೆನ್ ನಿನಗೆ
ಕವಿ ಸಹಜ ಕರುಣೆಯಿಂ. ಲೋಕಕ್ರೋಧ ಮದಹಸ್ತಿ
ಪದದಲನ ರೋಷದಾವಾಗ್ನಿಗಾಹುತಿಯಾಗಿ

ಬಿಳ್ದ ನಿನ್ನಾ ಭಸ್ಮರಾಶಿಯಂ ತೊಳೆವುದಿದೊ
ಕಣ್ಗಂಗೆ, ಕಾವ್ಯಮಹಿಮಾ ಸಿಂಧುತೀರ್ಥಕ್ಕೆ!
ಕಂಸನರಮನೆಗಾಗಿ ಪರಿಮಳದ್ರವ್ಯಮಂ
ಪೊತ್ತು ಪೊರಮಟ್ಟಿರ್ದ ಕುಬ್ಜಿಕೆಗೆ ದೇವಕಿಯ
ಮಗನ ಸೋಂಕಿಂದೆ ಸಿರಿಚೆಲ್ವು ದೊರೆಕೊಂಡಂತೆ,
ಕಾವ್ಯಕರುಣಾರಸದ ಲಹರಿಯ ಹರಿಯ ಸಿರಿಯ
ಕರಪದ್ಮ ಚುಂಬನಕೆ ನಿನ್ನ ಕೀಳ್ವರಿಜಳಿದು
ಮತ್ತೆ ಹೃದಯದ ಲಸದ್ರೂಪಂ ಮೆರೆಯದಿಹುದೆ?
ತನ್ನಾವ ಪುರುಷಾರ್ಥಕಿನ್ನಾವ ಸಂಪದಕೆ
ಮೇಣ್ ಸುಖಕೆ ಆ ಗೂನಿ ಪೇಳ್ದಳುಪದೇಶಮಂ
ಕೈಕೆಗೆ? ಜನಿಸಿದಂದಿನಿಂ ಪೆರರ ಚೆಲ್ವಿನೊಳೆ
ತನ್ನ ಚೆಲ್ವಂ ಕಂಡೊಲಿದು, ಪೆರರ ಸೊಗದೊಳೆಯೆ
ತನ್ನ ಸೊಬಗಂ ಕಂಡುಮುಂಡುಮಿರ್ದಾ ದಾಸಿ
ನಚ್ಚಿನೊಡತಿಗೆ ಮತ್ತೆ ಮೆಚ್ಚಿನಾಕೆಯ ಶಿಶುಗೆ
ತೊಳ್ತುಗೆಯ್ಮೆಯ ಪೆರ್ಮೆಗೊಳ್ಪನೆಸಗುವೆನೆಂದು
ಕಜ್ಜಮಂ ಕೈಕೊಂಡೊಡೇಂ ಸ್ವಾರ್ಥದೋಷಮಂ
ಕಾಣ್ಬರಾರಾಕೆಯ ಪರಾರ್ಥತೆಯ ಶುದ್ಧಿಯಲಿ?
    ಮಾಂಡವಿಯ ಮನದನ್ನನಾ ಶ್ರುತಕೀರ್ತಿಯೋಪನಂ
ಕೂಡಿಕೊಂಡವನಿಜಾತೆಯ ಪತಿಯ ಮಾತೆಯಂ,
ಮಾಗಿಯ ಕುಳಿರ್ವಗಿಯಲೆಲೆಯುದುರಿ, ಬರಿದಾಗಿ,
ಕುಡಿಮುರುಟಿ, ಸೊರಗುವಾ ಲತೆಯವೋಲ್ ಮ್ಲಾನೆಯಂ,
ಪತಿಪುತ್ರಹೀನೆಯಂ, ದುಃಖಾತಿ ದೀನೆಯಂ,
ಕೌಸಲ್ಯೆಯಂ ಕಂಡನಂತಃಪುರದ ನೆಲದ
ನಗ್ನದಲಿ. ಕೈಕೆಯ ಕುಮಾರನಂ ಕಾಣುತಂ
ಮರುಕೊಳಿಸಿದಳಲ ಹೊಡೆತವನಾನಲಾರದೆಯೆ
ಮೈಮರೆತೊರಗಲಾಕೆ, ಪಿಡಿದೆತ್ತಿ ಕುಳ್ಳಿರಿಸಿ
ತಣ್ಪೊಳಿಗವನೆಸಗಿ, ಕಾಲ್ಗಳೆರಡಂ ತಬ್ಬಿ
ಮುಡಿಯೊತ್ತಿ, ಕರ್ಚಿದನ್ ಕಣ್ಬನಿವೊನಲ್ಗಳಿಂ
ಭರತನಾ ರಘುರಾಮನಂಬಿಕೆಯ ಪುಣ್ಯಮಯ
ಪದ್ಮಪಾದಂಗಳಂ. ಭರತನ ಲಲಾಟದಾ
ಸಾತ್ವಿಕಸ್ಪರ್ಶನಕೆ ಮನಮಿಂಪನಾಳ್ದತ್ತು

ಕೌಸಲೆಗೆ, ರಾಮನೆ ಮರಳ್ದು ಬಂದಂತೆವೋಲ್.
ನಿರ್ನಿಮಿತ್ತಂ ತೋರ್ದುದೆರ್ದೆಗೆ ಧೈರ್ಯಜ್ಯೋತಿ,
ಭೀಷಣ ನಿರಾಶಾ ತಮದ ಮಧ್ಯೆ. ನಿಡುಸುಯ್ದು
ನೆಗಹಿದಳ್ ಪದತಲಕೆ ಪಣೆಚಾಚಿ ಕೆಡೆದಿರ್ದನಂ.
ನುಡಿಸಿದಳ್ ಬಿಕ್ಕಿಬಿಕ್ಕುತೆ: "ಬಾ, ಕಂದ; ಬಾ,
ಹೇ ಸಾಧು ಸುಕುಮಾರ! ಮುತ್ತಿದೀ ಕತ್ತಲೊಳ್
ದೀಪದೋಲ್ಬಿತಂದೆ. ಕಣ್ಗೆಟ್ಟ ಕುರುಡಿಂಗೆ
ಬಟ್ಟೆದೋರ್ಪೂರೆಗೋಲಾಗಿ ನೀಂ ಬಂದೆ. ಬಾ,
ತಂದೆ, ಬಾ! ನಾರುಡೆಯನುಟ್ಟಡವಿಗೈದಿದಾ
ಕಂದನಂ ನಿನ್ನೊಳೆಯೆ ಕಂಡು, ತವಿಸುವೆನೆರ್ದೆಯ
ತಾಪಮಂ. ಮರುಗದಿರ್. ತಪ್ಪು ತಾಯಿಯದಲ್ತು,
ನಾಚದಿರ್. ಮೂದಲಿಸಲೆಳಸಿದರೆ ದುರುಳ ವಿಧಿ
ಹಡೆದ ಕರುಳೇನ ಮಾಡುವುದಣ್ಣ? ಮಂಥರೆಯ
ಕೈತವಕೆ ತುತ್ತಾದರೆಲ್ಲರುಂ, ಕೇಳ್, ಮಗುವೆ,
ನೀನಿಲ್ಲದಾ ದುರ್ಮುಹೂರ್ತದಲಿ!" ಎನುತ್ತೆ ಆ
ತಾಯ್ತನದ ಗಂಭೀರ ಮೂರ್ತಿ ಭರತನನಪ್ಪಿದಳ್;
ಸಂತವಿಟ್ಟಳ್ ಕಂಬನಿಯನೊರಸಿ ಕದಪನೆಳವಿ.
"ಆಶೀರ್ವದಿಸು, ದೇವಿ, ಬನಕೆ ನಡೆದಣ್ಣನಂ
ಪಿಂತೆ ತರ್ಪುಜ್ಜುಗದೊಳಾಂ ಸಫಲನಪ್ಪಂತೆ.
ವಿಧಿವಂಚನೆಯ ಕೂಣಿಗಿಳಿಮೀನಿನೋಲಂತೆ
ಮಂಥರೆಯ ಮಾತಿನಗ್ನಿಯ ಮೋಹಕೊಳಗಾಗಿ
ದುಃಸ್ಥಿತಿ ನಿಮಿತ್ತಳಾದೆನ್ನ ತಾಯಂ ಕ್ಷಮಿಸಿ,
ಪೊರೆ ತಂಗೆಯಂ. ರಾಮನಿಲ್ಲದೀ ನೆಲಮನಗೆ
ಪಾಳ್ಮಣ್ಣದಲ್ತೆ? ತಂದೆಯಂ ಕೊಂದುಮಣ್ಣನಂ
ಕಾನನಾಂತರಕಟ್ಟಿಯುಂ, ಪೊತ್ತು ಪೆತ್ತಬ್ಬೆಯಂ
ಚಿರಪತಿತೆಯಂ ಮಾಡಿಯುಂ ಧರೆಯನಾಳ್ವನಿತು ನಾಂ
ಪತಿತನಲ್ತಂಬೆ. ಗುರುಕರುಣೆಯಿಂ, ನಿಮ್ಮಡಿಯ
ಕೃಪೆಯಿಂ ಶುಭಾಕಾಂಕ್ಷಿಯೆಂ; ಸರ್ವ ಮಂಗಲ ಕಾಮಿ;
ಮೇಣ್ ಸತ್ಯ ಸುಂದರ ಶಿವಪ್ರೇಮಿ!" ಎನುತ್ತೆನುತೆ
ತಂದೆಯಂ ನೆನೆನೆನೆದು ಮೈಮರೆತು ಬೀಳ್ವನಂ,
ರಾಮರಾಮೆಂದೂಳ್ವನಂ, ಮನ್ನಿಸಂಬೆಯಂ

ಮನ್ನಿಸೆಂದಡಿಗಡಿಗಳುತೆ ಬೇಡಿಕೊಳ್ವನಂ,
ಮೇಣಾರ ಸಂತೈಕೆಗುಂ ಮಳ್ಗಲಾರದತಿ
ಸಂತಾಪದಿಂದೆ ಬೆಂಡೇಳ್ವನಂ, ಭರತನಂ,
ಬಂದೆಳ್ಚರಿಸಿದತ್ತು ಗುರು ವಸಿಷ್ಠನ ವಾಣಿ.
ಕಾಣುತೆ ತಪೋಮೂರ್ತಿಯಂ ಮನೋರಣದಿಂದೆ
ಹಿಂಜರಿದುದು ಅಶಾಂತಿ, ಕೇಸರಿಯ ಕಣ್ಗಳ್ಕಿ
ಸೆಡೆತಡಂಗುವ ಬಗ್ಗನಂದದಿ ಹಣುಗಿ ಜುಣುಗಿ:
''ಧೀರಮತಿ ಪಾರ್ಥಿವ ಕುಮಾರ, ತಡೆ ಶೋಕಮಂ;
ಪ್ರೇತಕಾರ್ಯವನೆಸಗಿ ಪಿತೃಗೆ, ಕಳುಹಾತನಂ
ಲೋಕದುತ್ತಮ ಗತಿಗೆ. ದುರ್ದಮ ನಿಯಂತೃ ವಿಧಿ ತಾಂ
ತಂದೊಡ್ಡಿದೀ ಮಹತ್ ಕ್ಲೇಶಮಂ ಬುದ್ಧಿಯಿಂ
ಪರಿಹರಿಸೆ ಯತ್ನಮ್ಗೈ. ರೋದಿಸಿದರೇಂ ಫಲಂ
ಭಾವದಾವೇಶದಿಂ? ಪಳಯಿಸಿದ ಮಾತ್ರದಿಂ
ದೊರೆಕೊಂಡಪುದೆ ಮಂಗಳದ ಸಿದ್ಧಿ?'' ಮಂತ್ರಿಸಲ್
ಶ್ರೇಷ್ಠವಾಗ್ರುಷಿ ಗುರು ವಸಿಷ್ಠನೀ ಮಾಳ್ಕೆಯಿಂ,
ಭರತನಾತನ ಹಿಂದೆ ನಡೆದನಯ್ಯನ ಮೆಯ್ಗೆ
ಲೌಕಿಕವನೆಸಗೆ.
ಹಾ ಜೀವನ ದುರಂತತೆಯೆ,
ತಂದೆ ತಾಯಂದಿರಂ ನಲ್ಲರಂ ಮಕ್ಕಳಂ
ಪೂಜ್ಯರಂ ಮೇಣೆರ್ದೆಯೊಲಿದರಂ ಕಳೇಬರಂ
ಮಾಡಿ ತೋರುವ ನಿನ್ನ ನಿಷ್ಠುರತೆಯಂ ಸುಡಲಿ!
ಪ್ರೀತಿಯನೆ ಭೀತಿಯಂ ಗೈವ ಯಮಮುದ್ರೆಯಿಂ
ಗುರ್ಬಿದಯ್ಯನ ಮೆಯ್ಯನೆಳ್‌ನೆಯ್ಯ ದೋಣಿಯಿಂ
ತೆಗೆಯೆ ಕಂಡಳ್ಕಾಡಿದತ್ತು ಭರತನ ಮನಂ,
ಭಯದ ಮೂರ್ಛೆಯ ಮಿಂಚು ಮುಟ್ಟಿ ಬಿಟ್ಟಂತೆ ಮೆಯ್
ತರಹರಿಸೆ. ಕಾಣಲೊಡಮಯ್ಯನೊಡಲಂ ತಬ್ಬಿ
ಬಿಗಿದಪ್ಪಿ ಬಾಳ್ಗೆ ಜೇನಂ ಸೂಸುವೊಡಲಿಚಂ,
ಬೆಳ್ಪುಗಣ್ ಪೆಳ್ಪಳಿಸೆ, ಬೆರ್ಚಿ ನಿಂದನ್ ಬರ್ದುಂಕೆ
ಬೆಬ್ಬಳಿಸಿ. ಶೈಲಕಾನನ ಮನೋಹರತೆಯಂ
ಸವಿಯುತಲೆವ ವಿಪಿನ ವಿಹಾರಿ, ತೆಕ್ಕನೆ ಕಾಣೆ
ತನ್ನ ಕಾಲ್ದೆಸೆಯೆ, ನೆಟ್ಟನೆ ಮುಂದೆ, ಶೂನ್ಯತೆಯ

ಪಾತಾಳದಾಕಳಿಕೆ ಬಾಯಿ ತೆರೆದಂತಿರ್ದ
ಕಿಬ್ಬಿದರಿ, ವಿಸ್ಮಯದಶನಿ ಪೊಯ್ದುದೆಂಬಂತೆ
ಕಣ್ಣು ಕಾಲ್ಗೆಟ್ಟು ಮೇಣೊಳಸೋರಿ ಮರವಟ್ಟು
ನಿಲುವಂತೆ ನಿಂದನಾ ಭರತನಯ್ಯನ ಮೆಯ್ಗೆ
ಬದಲಾಗಿ ಜೀವಶೂನ್ಯಂ ಶವವನೀಕ್ಷಿಸುತೆ!
ಸಾವು, ಬಾಳಿನಮೇಲೆ, ತೆರೆಯೆಳೆದವೋಲಂತೆ
ಮುಚ್ಚಿರ್ದುವಾ ಕಣ್. ದೇವರಿಲ್ಲದ ಗುಡಿಯ
ಪಾಳ್ಗೆ ಬಾಗಿಲನಿಕ್ಕಿದಂತೆ ಬಿಗಿದುದು ಬಾಯಿ
ವಿಕಟಮೌನದ ವಜ್ರಮುದ್ರೆಯಲಿ. ಮೇಣ್ ಜಡಂ,
ಜೀವವನಣಕಿಪಂತೆ, ನಿಷ್ಪಂದಮಿರ್ದತ್ತು
ಸಾರ್ವಭೌಮಿಕ ಮಹೌದಾಸೀನ್ಯಮಂ ಮೆರೆದು
ಕ್ರೂರದರ್ಪದಲಿ. ಹಾ, ಕಂದನೆಳಗಣ್ಗಳಿಗೆ
ಹಿಂದಾವ ಮುದಿಯ ಮೆಯ್ಯಳ್ಕರೆಯ ತೊಟ್ಟಿಲೋಲ್
ಸಂತೋಷನಂದನದ ಕಲ್ಪತರುವಿಂ ಜೋಲ್ವ
ವಾತ್ಸಲ್ಯಭಾವದಾ ಹೆಜ್ಜೇನುಹುಟ್ಟಿಯೋಲ್
ಸುಖದಮಾಗಿರ್ದತ್ತೊ ತಾನದೆ ಇಂದು ಸೂಡಿನೊಲ್,
ಕೆಟ್ಟಾಸೆ ಬೀಡಿನೊಲ್, ಬಾಳ್ಗನಸುಗಳಿಗೆಲ್ಲ
ಕೊನೆಯ ಸುಡುಗಾಡಿನೊಲ್ ಕಾಣುತಿರೆ, ಬಾಲಋಷಿ
ಭರತನಾ ಶವದೊಳರಸುವನೆ ಪಿತೃದೇವನಂ?
ಭೂಪತಿತ ನಾಕ ಚಕ್ರಾಧಿಪತ್ಯಮೆನಲ್ಕೆ,
ತನ್ನ ತಾಯಿಯ ಲೋಭವೆಂತಂತಳಿದುರುಳ್ದ
ಭೂಪತಿಯ ದೇಹಮಂ ಕಂಡು, ಕೈಕೆಯಣುಗನ
ಮನದಿ, ತಲೆಸೆಡೆತುದಳಲಾಮೆ; ಸಾವಿನ ನೋವು
ಹುದುಗಿದುದು ದೃಢಮನೋನಿಶ್ಚಯದ ಖರ್ಪರದ
ಕೋಂಟೆಯ ಶಿಲಾರಹಸ್ಯದಲಿ. ಕಣ್ಣಳಲಿಗಿಂ
ಕಿವಿಯಳಲೆ ಪಿರಿದೊ? ಮೇಣೀ ನೋವನಾ ಗೋಳೆ
ತಿಂದು ತವಿಸಿದುದೊ? ಮೇಣಾತ್ಮಯಾತ್ರೆಯ ಮಹಾ
ಜ್ಯೋತಿರ್ಮಹದ್ದರ್ಶನಂ ಲಭಿಸಿದಾತಂಗದೇಂ
ಗುರುತರಾನಂದಕರ ಗುಹ್ಯಮಾಗುವುದೇನೊ
ದೇಹಯಾತ್ರೆಯ ದುರಂತಂ? ಭರತವಾಕ್ಯಮೀ
ಐಹಿಕದ ನಾಟಕಕೆ ತಾನಾದೊಡಂ ಮೃತ್ಯು ತಾಂ

ನಾಂದಿಯ್ಯೆಸಲೆ ಪೇಳ್ ಅಲೌಕಿಕಕೆ?

ಯಾಜಕರ್

ತಂದರಗ್ನಿಯನಗ್ನಿಶಾಲೆಯಿಂ. ತೈಲದೊಳ್
ನೆರೆ ನಾನ್ದುದಕೆ ಮೊಗಂ ಪಳದಿಗೊಂಡರಸನಾ
ಕಾಯಮಂ, ಕನಕ ಶಿಬಿಕೆಗೆ ನೆಗಹಿ, ಸುಡುನೆಲಕೆ
ಪೊತ್ತುಯ್ದರಾಕ್ರಂದಿಸುತೆ ಜನಂ. ಬಟ್ಟೆಯೊಳ್
ಪಟ್ಟಣಿಗರುರಿಸಿದರ್ ಚಂದನಾಗರು ಸರಳ
ಪದ್ಮಕದ ಚೂರ್ಣದಿಂದಲ್ಲಲ್ಲಿ ಧೂಪಮಂ
ರಾಜಭಕ್ತಿಗೆ, ಗೌರವಕೆ, ಮತ್ತೆ ಶೋಕಕ್ಕೆ.
ಚೆಲ್ಲಿದರ್ ಚಿನ್ನಮಂ. ರತ್ನವಸ್ತ್ರಂಗಳಂ,
ಮಣ್ಗೆ ಪೊನ್ನುಡೆ ಸಮನಿಪಂತೆ. ಸತ್ತಾನೆಯುಂ
ಪನೆಯೆಲ್ವುಗಳ ಸಿರಿಯನೀವುದೆನೆ, ಮಡಿದೊಡಂ ತಾಂ
ನೆಲೆಯಲ್ತೆ ಬೆಲೆಗೆ ಪಿರಿದೇಗಳುಂ?

ಮುಂಗಾರ್ಗೆ

ಮುನ್ನಮಾ ಮಲೆಯನಾಡಿನ ಪೆರ್ಗಡೆಯ ಮನೆಯ
ಕೋಂಟೆಯೊಳ್ ಕಾಡಂ ಕಡಿಯುತೊಟ್ಟೆ ಸೌದೆಯಂ
ತಂದು ಕೊಟ್ಟಿಗೆಗಡಕಿದಾ ಕಟ್ಟಿಗೆಯ ಕಟ್ಟಣಂ
ತೋರ್ಪಂತೆ, ಕಣ್ಗೆಸೆದುದಾ ಮುಂದೆ ಗಂಧಚಿತೆ
ರೌದ್ರಮಾ ರುದ್ರಭೂಮಿಯಲಿ. ಋತ್ವಿಜರೆತ್ತಿ
ಸೂಡಿಗಿಟ್ಟರ್ ದೊರೆಯ ದೇಹಮಂ. ಪ್ರಾಜ್ಞಮತಿ
ಭರತನುರಿಯಿಕ್ಕಿದನ್, ಕಣ್ಣರಿತು ಗುರುಸಂಜ್ಞೆಯಿಂ.
ರಾಣಿಯರ ರೋದನಕೆ ಮೇಣ್ ಸಾಮಗಾನದ ಲಯಕೆ
ಪರ್ವಿ ನೀಳ್ದುದು ಗಾಳಿವಟ್ಟೆಗೆ ಹುತಾಶನಂ,
ಸಗ್ಗಕೇರುವ ಬೆಂಕಿದೇರಂತೆ. ದಶರಥನ
ಕೀರ್ತಿಯೋಲುಳಿದುದಯ್ ಭಸ್ಮಧವಳಿಮ ರಾಶಿ,
ಕಣ್ಗೆ ಶಾಂತಿಯ ತಣ್ಪನೊತ್ತಿ. ಚಯನಂ ಮುಗಿಯೆ
ಬಲವಂದುಮೆಡವಂದುಮಾ ಚಿತೆಯನಲ್ಲಿದೆ
ದೀನಂ ಪ್ರಲಾಪಿಸುತೆ ಪರಿತಂದರನಿಬರುಂ
ಸರಯೂ ನದಿಯ ತಟಿಗೆ. ಜಲತರ್ಪಣಂ ಗೈದು
ದುಃಖದಿಂ ಬಿಕ್ಕಿಬಿಕ್ಕಳುತೆ ಪೊಕ್ಕುದು ಜನಂ
ಶಶಿಹೀನ ರಜನಿಗೆಣೆಯಾ ರಾಜಧಾನಿಯಂ,

ಶೂನ್ಯಮಂ ಪುಗುವ ಖಿನ್ನತೆಯ ಛಾಯೆಗಳವೋಲ್.
ಓ ಕುಬ್ಜೆ, ಮಂಥರೆಯೆ, ಓ ಪ್ರೇಮಭೈರವಿಯೆ,
ಶತ್ರುಘ್ನನಿಕ್ಕಿ ನೆಲಕಪ್ಪಳಿಸುವಾಗಳಾ
ಬಂದ ಭರತಂ ತಿರಸ್ಕರಿಸಿ ಬಯ್ದಲ್ಲಿಂದೆ
ತೊರೆದು ತೆರಳಲ್ಕೆ ನೀನಿಳೆಗುರುಳಿ ಮೈಮರೆಯೆ,
ಮಂದಿ ನೆರೆದಣಕದೀಂಟಿಯಿನಿರಿದರಲ್ತೆ? ಪೇಳ್,
ನಿರ್ಭಾಗ್ಯೆ, ಮೇಲೆ ನೀನೇನಾದೆ? ಅಲ್ಲಿಂದೆ
ನೀನೆತ್ತವೋದೆ? ತಿರೆ ನುಂಗಿದುದೊ? ಕರಗಿದೆಯೊ
ನೋವಿನುರಿವೊಯ್ಲಿಂದೆ? ತಿಂದುದೊ ನಿರಾಶೆ? ಮೇಣ್
ಮಾಯವಾದೆಯೊ, ಮಾಯೆ, ಪೇಳ್?
ಮೈತಿಳಿದು ಕಣ್ದೆರೆಯೆ,
ಮಂಥರೆಯ ಬಗೆಗೊರಳಿಗುರುಳಾಯ್ತು ನಿರ್ಜನದ
ನೀರವದ ಶೂನ್ಯತಾ ರಜ್ಜುಸರ್ಪಂ. ಕಣ್ಣಿಡಲ್
ಜನದ ಸುಳಿವಿಲ್ಲಾಲಿಸಲ್ ಸೊಲ್ಲು ಸದ್ದಿನಿತಿಲ್ಲ:
ಸದ್ದಿಲ್ಲದರಮನೆಯೆ ನಿಶ್ಯಬ್ದತೆಯ ಶವಕೆ
ಹೆಗ್ಗೋರಿಯಾಗಿ ನಿಂದತ್ತು, ದುಶ್ಶಕುನದೋಲ್,
ಹಾಸ್ಯ ಮೂಕಾಸ್ಯದಾ ಕಟು ವಿಕಟ ಭಂಗಿಯಿಂ!
ನಿಶ್ಶಬ್ದತಾ ಶವದವೋಲೆದ್ದಳಾ ಗೂನಿ:
ಮುಯ್ಗೆ ಮುಯ್ಯಾಗಿ ಕೊಲೆಯಾದವನ ಮೆಯ್ಯಿಂದೆ
ಪಸಿಯ ಗಾಯಂಗಳಿಂ ಬಿಸಿಯಾರ್ದ ನೆತ್ತರಂ
ಸೋರಿ ಭೀಕರಮಾಗಿ ಹೂಳಿನಿಂದೇಳುವಾ
ಪ್ರೇತಪ್ರತೀಕಾರ ಭೀಷಣಾಕೃತಿಯಂತೆ
ಸುಯ್ದೆದ್ದಳಾ ಗೂನಿ, ದೃಢಮನದ ಹೆಡೆಯೆತ್ತಿ
ತನ್ನ ನಂಜಂ ತಾನೆ ಹೀರಲೆಳಸುವ ಕಾಳ
ಸರ್ಪಿಣಿಯ ತೆರದಿ. 'ಹಾ, ತನ್ನ ಕೈಕೆಯ ಮಗುಗೆ,
ತನ್ನ ಜೀವಾನಂದ ಸಾಗರ ಸುಧಾಂಶುವಿಗೆ,
ಭರತದೇವಗೆ ನೆಲದ ಸಿರಿಯಕ್ಕೆ, ಸೊಗಮಕ್ಕೆ,
ಮುಡಿಗೆ ನೇಸರ ಬಳಿಯ ಮಕುಟಮಕ್ಕೆಂದಲ್ತೆ
ರಾಮನನಡವಿಗಟ್ಟಿದೆನ್? ಮತ್ತೆ ರಾಮನಂ
ಮನೆಗೆ ಕರೆತಂದೆನಾದೊಡೆ, ಕಂದ ಭರತಂಗೆ
ಮುದವಪ್ಪುದಪ್ಪುದಂತೆಯೆ ಕೈಕೆಗುತ್ಸವಂ.

ಮತ್ತೆ ಮರಳುವುದೆನಗೆ ಮೊದಲಿನಂದದೊಳವರ
ಹಿಂದಣೊಲ್ಮೆಯ ಬಂಡಿನೌತಣಂ!'–ನೆನೆಯುತಿಂತಾ
ಪುಣ್ಯದನ್ವೇಷಣೆಗೆ ಪೋಪ ಪಾಪದ ತೆರದಿ
ಪೊರಮಟ್ಟಳರಮನೆಯಿನಾ ಮುದುಕಿ, ಮಸಣದೊಳ್
ದಹನದುಃಖದೊಳಿರ್ದರಾರುಂ ತಿಳಿಯದಂತೆ.
    ಪ್ರೇತವನಕಾಗಿ ಸಂಭ್ರಮದಿಂದೆ ಪರಿದಿರ್ದ
ಮಂದಿ ಸಂದಣಿಸಿ ಸಾಲ್ಗೊಂಡಿರ್ದ ಬೀದಿಗಳ
ಗಡಿಬಿಡಿಯಲೈದುತಿರೆ, ಕಲ್‌ಮಣ್ಗಳಿಂದಿಕ್ಕಿದರ್
ಕೆಲರುಗುಳಿದರ್ ಮೊಗಕೆ. ಪರಿದರುವೆಯೇರ್ಗಳಿಂ
ಸುರಿವ ನೆತ್ತರ್ವರಸಿ ಆ ಗೂನಿ, ಆ ತೊನ್ನಿ,
ಆ ಕೋಸಲ ನಿರಸ್ತೆ, ಜರಠಾಸ್ತಿ ಚರ್ಮದಾ
ನರೆನವಿರಿನಾ ಸ್ಥವಿರೆ ತಾಂ ಮಂದಿಯನ್ಯಾಯಮಂ
ಕ್ರೌರ್ಯಮಂ ಲೆಕ್ಕಿಸದೆ ತೊಲಗಿದಳಯೋಧ್ಯೆಯಿಂ
ಸಂಧ್ಯೆಯೊಡಗೂಡಿ. ಹಾ, ಜೀವನದೊಳೆನಿತೆನಿತು
ದ್ವೇಷ ನಿಷ್ಠುರ ವೈರ ಕಷ್ಟಗಳಿಗೆಲ್ಲಮಾ
ಪ್ರೇಮವೆ ಪಿತಾಮಹನ್? ಅದೆಂತೆನೆ, ಸುಧಾಸುಕೆ
ಕಡಲ ಕಡೆದಾ ದೇವ ದೈತ್ಯರಿಂದಾಯ್ತಲ್ತೆ
ಹಾಲಾಹಲದ ಸೃಷ್ಟಿಯುಂ!
                    ಮುಂಬರಿಯುತಿರೆ ಕುಬ್ಜೆ
ಹೃದಯಾಬ್ಜದಲ್ಲಿ ರಘುರಾಮಚಂದ್ರನನಿರಿಸಿ,
ಬಾನ್ನೆತ್ತಿಯಿಂ ಧಾತ್ರಿಗವತರಿಸಿದುದು ರಾತ್ರಿ,
ಮಂಥರೆಯ ಚಿತ್ತಕೆ ಮರುಳ್ತನಮಮರ್ವವೋಲ್
ಕಣ್ಗೆ ಕುರುಡಂ ಮೆತ್ತಿ: ಬೆಳಗಿನಿಂದುಣಿಸಿಲ್ಲ;
ನೀರ್ಪನಿಯನೀಂಟಿಲ್ಲ; ಪೆಟ್ಟನಲ್ಲದೆ ಬೇರೆ
ತಿಂದಿಲ್ಲ; ಕಣ್ಣೀರನೊಂದಲ್ಲದಿನ್ನೇನುಮಂ
ಕುಡಿದಿಲ್ಲ. ಬೆನ್ನಿಗಂಟಿದ ಹೊಟ್ಟೆಹಸಿವಿಂದೆ
ಗಂಟಲೊಣಗಿದ ನೀರಡಿಕೆಯಿಂದೆ, ರಕ್ತಮಂ
ಬಸಿವ ಗಾಯದ ಪಸಿಯ ನೋವಿಂದೆ, ತನಗಾದ
ದುಃಸ್ಥಿತಿಯ ದುಃಖವೊದಗಿಸಿದೊಳಗಿನಾಸರಿಂ
ಮೇರೆ ಮೀರ್ದುಸಿರ ಸೇದೆಗೆ ಜೋಂಪಿಸಲ್ ಪ್ರಜ್ಞೆ,
ದೂಟಿಂದೆ ದೂಟಿಂಗೆ ಮರವಟ್ಟುಮಾ ಮುದುಕಿ

ತೊಟ್ಟ ನೋಂಪಿಯ ಬಲ್ಮೆಯೂರೆಗೋಲಂ ನೆಮ್ಮಿ
ಸಂಚಲಿಸಿದಳೊ ರಾಮನಂ ಕರೆದೊರಲಿ, ಕರೆದು
ಕೂಗಿ. ಕೆಡಲಿಲ್ಲ ಸದ್ದಿಲಿಯಿರುಳಿನಾ ನಿದ್ದೆಯುಂ:
ದನಿಯಿಹುದೆ ದಣಿವಿನುಸಿರಿಗೆ? ಕೇಳಿದತ್ತಡವಿ
ಕಿವುಡಾಗಿ: "ಓ ನನ್ನ ಭರತನಣ್ಣಯ್ಯ! ಓ
ರಾಮಯ್ಯ! ಹೇಳೆಲ್ಲಿರುವೆಯಯ್ಯ? ದಮ್ಮಯ್ಯ!—
ಓ ನನ್ನ ಭರತನಣ್ಣಯ್ಯ! ಓ ರಾಮಯ್ಯ!
ಹೇಳೆಲ್ಲಿರುವೆಯಯ್ಯ? ದಮ್ಮಯ್ಯ!—ಓ ನನ್ನ
ಭರತನಣ್ಣಯ್ಯ! ಓ ರಾಮಯ್ಯ! ದಮ್ಮಯ್ಯ!
ಹೇಳೆಲ್ಲಿರುವೆಯಯ್ಯ?" ಎಂಬ ಕರುಣಧ್ವನಿಯ
ಛಂದಸ್ಸಿಗೆಂಬಂತೆ ಚಲಿಸುತಿರ್ದಳ್ ವಿಕೃತೆ,
ತಾರಾ ಸಹಸ್ರಾಕ್ಷಿಯಾ ವ್ಯೋಮದೇವಿಯ ಮನಕೆ
ರೋಮೋದ್ಗಮಂ ಪಲ್ಲವಿಸುವಂತೆ: ತಿಳಿಯದಿರಲೇನ್
ತಿರೆಗೆ, ಬಾನರಿಯದೇನೆರ್ದೆಯ ಪರಿವರ್ತನೆಯ
ಪುಣ್ಯ ಸಂಕ್ರಾಂತಿಯಂ? ಬಾಹ್ಯ ಸಂಜ್ಞಾಶಕ್ತಿ
ಶೂನ್ಯತೆಯ ನೇಮಿಯುಯ್ಯಾಲೆಯಂ ತೂಗುತಿರೆ,
ಕಾಣಿಸಿತು ಕುಬ್ಬುದಿಟ್ಟಿಯ ಗೂನುಗಣ್ಣೆಗದೊ
ಗೆಣ್ಬರೊಳ್ ಜ್ಯೋತಿ. ಮಂಥರೆಯಂತರಾತ್ಮಕ್ಕೆ
ರಾಮನೆಸೆದಂತಾಗೆ "ಓ ಭರತನಣ್ಣಯ್ಯ,
ಓ ನನ್ನ ರಾಮಯ್ಯ, ಬಾರಯ್ಯ, ದಮ್ಮಯ್ಯ!"
ಎಂದೆರ್ದೆನವಿಲ್ ಕೇಗಿ ಗರಿಗೆದರಿ ಕುಣಿಯುತಿರೆ,
ಹಾರಿ ಮುಂದಕೆ ನುಗ್ಗಿ ನಡೆದೋಡಿದಳ್, ಅಹಾ,
ದಾವಾಗ್ನಿಯಂ ಗೆತ್ತು ರಾಮಂಗೆ!
ಆ ದಾವಾಗ್ನಿ
ಘನ ನಿಬಿಡ ಘೋರಾಂಧಕಾರ ತೀರದ ಮಧ್ಯೆ
ಪ್ರವಹಿಪಾ ವಿದ್ಯುತ್ಪ್ರವಾಹ ದೈತ್ಯಾಕೃತಿಯವೋಲ್
ಕೆದರಿದುದು ದಿಕ್ಕುದಿಕ್ಕಿಗೆ ತನ್ನ ಕೇಸುರಿಯ
ಕೇಶಪಾಶದ ರಾಶಿರಾಶಿ ವಿನ್ಯಾಸಮಂ.
ಬೆಂಕೆಗಣ್ಗಳೆನೆ ಸಿಡಿದೇಳ್ವ ಕೆಂಗಿಡಿಗಳಿಂ
ಸೂಸಿದುದು ತೋರ ತಾರೆಯ ಕೆಂಡ ಧಾರೆಯಂ.
ಶಿಖಿಬಕಾಸುರ ಬಾಹುಭೀಮರಿಂದೆಂಬಂತೆ

ತಿರುಪ್ಪಿದುದು ದೈತ್ಯ ದೇಹದ ತರುಪಿಡಿಂಬರಂ.
ನಿರಿನಿರಿ ನಿಟಿಲ್ಲೆಂದು ಮುರಿದರೆದು, ಬೂದಿಯಂ
ಬುತ್ತಿಗಳ್ ಮಾಡಿ ಮುಕ್ಕಿದುದು. ಕಾಡೆಲ್ಲಮಂ
ನುಂಗಿ ನೊಣೆಯುತ್ತೆ, ನಾಡೆಲ್ಲಮಂ ನೆಕ್ಕುತ್ತೆ,
ನಗಜಗದ ಖಗಮೃಗದ ಬನಸೊಗದ ಜೀವಮಂ
ಪಾರಿಸುತೆ, ಚೀರಿಸುತೆ, ಕೊಲ್ಲುತ್ತೆ, ಮೆಲ್ಲುತ್ತೆ,
ಪ್ರಳಯ ಫಣೆಯಗ್ನಿತನು ತಾಂ ಲಯಭೋಜನಕೆ ನೀಳ್ದ
ಶತಕೋಟಿಯೋಜನದ ಮಿಂಚಿನ ಮಹಾಜಿಹ್ವೆ
ನುಗ್ಗಿ ಮುಂಬರಿವಂತೆ, ಮೇಲ್ವಾಯ್ದು ಬೀಳ್ವಂತೆ,
ಬಂದಪ್ಪಳಿಸಿದಗ್ನಿಗಾ ಮಂಥರೆಯ ಮೂರ್ತಿ ಹಾ
ಸುಟ್ಟು ಸೀದುದೊ ಚಿಟ್ಟೆ ಸೀವಂತೆ!—ರೂಕ್ಷತಾ
ವಿಕೃತಿಯಿಂ ಗುಜ್ಜುಮೆಯ್ಯಿಂ ಕುರೂಪಂಬೆತ್ತ
ಶ್ರೀಗಂಧ ಕಾಷ್ಠ ವಕ್ರತೆಗಗ್ನಿಲಗ್ನದಿಂ, ಕೇಳ್,
ರೂಪಶೂನ್ಯತೆಯೊದಗಲೇಂ? ವಿಶ್ವದೇಶಮಂ
ಪರಿಮಳದ ಪುಣ್ಯಪವನಂ ಪಸರಿಪೋಲಂತೆ,
ತುಂಬದೇನಿರ್ದಪಳೆ, ಪೇಳ್, ಲೋಕಲೋಕಂಗಳೊಳ್
ದೇವಿ ಮಂಥರೆಯಂತರಾತ್ಮದ ದಯಾಲಕ್ಷ್ಮಿ ತಾಂ
ತನ್ನ ಕೀರ್ತಿಯ ಸುಯ್ಪಿನಮೃತಮಯ ಸೌಂದರ್ಯಮಂ?

## ಸಂಚಿಕೆ ೭

# ಚಿತ್ರಕೂಟಕೆ

ಕೈಕೆ ಭರತರಿಗಿರ್ಮಡಿಯ ಕಾತರತೆ, ಕೇಳ್, ಕವಿಗೆ
ಗಿರಿವನಪ್ರಿಯ ರಾಮ ಸಂದರ್ಶನಂ ಗೈಯೆ
ಕಾನನಾಂತರದಿ: ಕರೆತರಲಲ್ತು ಸಾಕೇತ
ಪುರಿಗೆ. ಮರಳಿಸಲಲ್ತು ಮಣಿಮಕುಟ ಧಾರಣೆಗೆ.
ಸೌಮಿತ್ರಿಯೋಲಂತೆ ರಾಮಸೀತಾ ಪುಣ್ಯ
ಸಂಗ ಮಂಗಲ ತುಂಗ ಶೃಂಗ ವನರಂಗಮಂ
ಚರಿಸಲಾನುತ್ಕಂಠಿತಂ! ಮಲೆಯ ನಾಡೆನಗೆ
ತಾಯಿಮನೆ. ಕಾಡು ದೇವರ ಬೀಡು. ಗಿರಿಯ ಮುಡಿ
ಶಿವನ ಗುಡಿ. ಬನವೆಣ್ಣೆ ಮೊದಲಿನಾ ಮನದನ್ನೆ.
ಕವಿ ರಾಮಚಂದ್ರನೀ ಸೀತಾ ಕಲಾಕಾಂತೆ
ನಿತ್ಯವನವಾಸಿಯದರಿಂದಮೀ ಕಬ್ಬಿಗಂ
ಗಿರಿವನ ಪ್ರೇಮ ಸಾದೃಶ್ಯದಿಂ ಸಮರಸಂ
ಸಮಹೃದಯಿ ರಾಮರಸಋಷಿಗೆ. ವನದೇಶಮಂ
ಸವಿದಪೆನ್ ಸೀತಾರಮಣನೊಡನೆ. ತೊಳತೊಳಲಿ
ಮೆಯ್ಯ ಮರೆದಪೆನೀಂಟಿ ಕಾನನಾವೇಶಮಂ.
ದೊರೆವಂತೆವೋಲ್ ಹೃದಯಜಿಹ್ವೆಗೆ ರಸದ ಮಧುತೃಪ್ತಿ
ಕೈಕೊಂಡಪೆನ್ ಪ್ರಕೃತಿಯಾತ್ರೆಯಂ. ರಮಣನಿರೆ
ಕಲೆಯ ವಧು ತಾನಯ್ದೆ. ಪುಣ್ಯಾತ್ಮ ರಾಮನಿರೆ
ಸೀತೆಯೊಲ್ ಪೂಜ್ಯೆ ಮಂಗಳೆಯೆನ್ನ ಕೃತಿಕನ್ಯೆ!
ರೆಂಕೆಗೆ ರಥದ ಹಂಗೆ? ಪಥಋಣವೆ ಕಲ್ಪನೆಗೆ?
ಕಾವ್ಯಯಾತ್ರೆಗೆ ತೇರುಕುದುರೆಯ ನೆರಂ ಬೇಕೆ?

ಧರೆಯ ನಿಮ್ನೋನ್ನತಂಗಳ ತಡಬೆಯೇನೊಳದೆ
ಪ್ರತಿಭೆಯ ವಿಮಾನ ಯಾನಕ್ಕೆ? ಪರಿವಾರದಾ
ಸಂಸಾರ ಭಾರ ಬಂಧನವಿಹುದೆ ದುರ್ದಮ್ಯ,
ನಿಸ್ಸೀಮ, ವಿಶ್ವಸಂಚರ ಶಕ್ತಿಯುಕ್ತ, ಕವಿ
ವೈನತೇಯನ ಮಹಾ ಪಕ್ಷ ವಿಸ್ಫಾಲನೆಗೆ?
ಕವಿ ವಿಹಂಗಮಗಲ್ತು; ಭರತಾದಿಗಳಿಗಿರ್ಕೆ
ರಥ ಪಥ ತುರಂಗ ವಾರಣ ಋಣಂ. ಬರಲವರ್
ಪಿಂಬಡಿಂ. ಮುನ್ನಮಾನ್ಯೆದುವೆನ್: ರಮಣೀಯ
ವೃಕ್ಷ ಸಂಕುಲ ವಸನ ಶೋಭೆಯಿಂ, ಕಮನೀಯ
ಕುಸುಮ ಕಿಸಲಯರಾಜಿ ರಾರಾಜಿಸುವ ದಿವ್ಯ
ಸೌಂದರ್ಯದಿಂ, ಕೋಟಿ ಪಕ್ಷಿ ಕಲಕಲ ತುಮುಲ
ಮಾಧುರ್ಯದಿಂ, ಪುಣ್ಯಗಣ್ಯ ಮಂದಾಕಿನಿಯ
ವಾಹಿನಿಯ ಕಂದರ ಕ್ರೀಡಾ ವಿಲೋಲತೆಯ
ನೀಲ ಲೀಲಾಶೀಲ ಸಲಿಲ ಕಲ್ಲೋಲದಿಂ,
ಶ್ರೀರಾಮ ಪರ್ಣಶಾಲಾ ಪೂಜ್ಯ ಸನ್ನಿಧಿಯ
ಸಂಗದಿಂ ಮಹಿಮೆಗಾಸ್ಪದಮಾಗಿ ಮೆರೆಯುವಾ
ಚಿತ್ರಕೂಟಾದ್ರಿಯದೊ ಕಣ್ಗೊಳಿಸುತಿಹುದಲ್ಲಿ,
ಮೇಘಮುದ್ರಿತ ಮಹಾ ಶೃಂಗ ಶಿವಲಿಂಗದೋಲ್,
ಸರ್ವೇಂದ್ರಿಯಂಗಳಿಗೆ ಮತ್ತೆ ಕವಿಯಾತ್ಮಕ್ಕೆ
ಮಧುರ ಮಧುಖನಿಯವೋಲ್ ಮತ್ತೆ ರಸಧುನಿಯವೋಲ್!
‘‘ಕ್ಷೇಮದಿಂ ಮರಳ್ವಂತೆ ಪ್ರೇಮದಿಂ ಪರಕೆಗೈ.
ಕಾಯಿ ಜೀವೇಶನಂ ಕರುಣೆಯಿಂದೋವಿ, ಓ
ತಾಯೆ. ಪಿಂತಿರುಗಿ ಬಂದಾಮೇಲೆ ನಿನಗೀವೆನಾ
ಮಾಂಸಭೂತೌದನ ಸುರಾಘಟ ಸಹಸ್ರದಾ
ನಿರ್ದುಷ್ಟ ಪುಷ್ಪ ಸಂತುಷ್ಟ ನೈವೇದ್ಯಮಂ
ನಿನಗಿಷ್ಟಮಂ, ದೇವಿ. ಕೈಮುಗಿದೆನಿದೊ, ಗಂಗೆ!’’
ಇಂತಾ ತರಂಗಿಣಿಗೆ ಬಿನ್ನೈಸುತಿರೆ ಸೀತೆ,
ಸಾರೆಬರೆ ದಕ್ಷಿಣ ಸಿಕತ ತಟ ವಿಪಿನಪಂಕ್ತಿ,
ಜಹ್ನುಜಾತೆಯನುತ್ತರಿಸಿ, ನಾವೆಯಿಂದಿಳಿದು,
ಬೀಳ್ಕೊಂಡು ಗುಹನಂ ನಿಷಾಧಪತಿಯಂ; ಪಿಂತೆ
ಸೋದರನಿರಲ್ಕೆ, ನಡುವೆ ಬರೆ ಸತಿ, ತಾಂ ಮುಂತೆ

ನಡೆಗೊಂಡನಡವಿ ಕೀಳ್ವಟ್ಟೆಯೊಳಿಳಾತ್ಮಜಾ
ವಲ್ಲಭಂ, ನೀಲ ನೀರದ ವಿಪುಲ ವಪುವಾಗಿ,
ಭೀಷಣ ಧನುಷ್ಪಾಣಿಯಾಗಿ. ಮಲೆತುದು ಮುಂದೆ
ಗಿರಿಗಹ್ವರ ಭ್ರೂಭ್ರುಕುಟಿಯಂತೆ, ಕರ್ಕಶಂ,
ಭೈರವಂ, ಜನಸಂಗಹೀನಂ ಮಹದ್ವನಂ,
ಪಂತಿದೇರನ ಸೊಸೆಯ ಕಣ್ಗೆದೆಗಳರ್ಕೆಯಂ
ಬೀರ್ದು. ಜನಕಜೆ ಸುತ್ತಲುಂ ಬೆಚ್ಚಿ ನೋಡುತಂ,
ಮತ್ತೆಯೆರೆಯನ ಬೆನ್ನ ತುಂಬು ಬತ್ತಳಿಕೆಯಂ
ಕಂಡಳುಕನೀಡಾಡುತಂ; ರಘೂದ್ವಹನೆರ್ದೆಯ
ಪಣ್ಣಾಗಲಿರ್ಪೊಂದು ಸಿರಿಯ ಪೂಗನಸಿಂದು
ತನ್ನಿಷ್ಟದಾದರ್ಶಮಂ ಪೂಜಿಸೋಲೈಸಿ
ಬೆಂಬಾಲಿಪುದೊ, ಲಕ್ಷ್ಮಣನ ಧರ್ಮವಾತ್ಸಲ್ಯ ತಾಂ,
ಪೇಳ್, ದಾರಿದೋರುತ್ತವನ ಮುಂದೆ ನಡೆದಪುದೊ
ಎಂಬವೋಲ್ ಸಾಗಿದಳು ಹಜ್ಜೆ ಹಜ್ಜೆಯನಿಟ್ಟು
ದಟ್ಟಪಳುವದ ಪಸುರ್ ನೆಳಲೊಳ್, ರಸಾವೇಶಂ
ಇಳಿದ ಸಮಯದ ಕವಿಯ ರಚನೆಯ ಉದಾಸೀನತಾ
ವೇಗದಲಿ. ಬಗೆವುಗದವೋಲ್ ಬಟ್ಟೆಯ ಬಳಲ್ಕೆ,
ರಘುನಂದನಂ ಸತಿಗೆ ನಾನಾ ವಿಚಿತ್ರಂಗಳಂ,
ತರು ಸುಮ ವಿಹಂಗಮ ಮೃಗಂಗಳಂ, ತೋರುತ್ತೆ
ವರ್ಣಿಸುತೆ ವಿವರಿಸುತೆ ನಡೆಯುತಿರಲೇರ್ದತ್ತು
ಪೊತ್ತು ಬಾನ್ನೆತ್ತಿಗೆ. ವಿದೇಹರಾಜನ ಕುವರಿ
ದಣಿದು ಸುಯ್ದಳು ಧಗೆಗೆ ಮೈಸುರ್ಕಿ. ಕೆಂಪೇರ್ದ
ಮೊಗಸಿರಿಗೆ ಪಣೆಯ ಮೇಲ್ ಮೂಡಿತು ಪನಿಯ ಪಂತಿ.
ನಾಂದಂಟಿದತ್ತು ಮುಂಗುರುಳೋಳಿ, ಬೆಳ್‌ಮೆಯ್ಗೆ
ಕಾಡುಗಣ್ದೆಟ್ಟಿ ಸೋಂಕದ ತೆರದಿ, ಕರ್ಮಸಿಯ
ಗೆರೆಯ ಚಿತ್ತಾರಮಂ ಮೆತ್ತಿಬರೆದೋಲ್. ಮನಂ
ಕರಗಿ ಹರಿದುದು ಕಣ್ಗಳಲಿ ರಾಮಚಂದ್ರಂಗೆ.
ನಿರುಪಮ ಬಲಾನ್ವಿತಂ ಲಕ್ಷ್ಮಣಗೆ ನಿರ್ಬಲತೆ
ಮೈದೋರಿದುದು ಕಾಣುತಾ ಕರುಣಾಕರ ದೃಶ್ಯಮಂ.
ದಾರಿಯೆಡೆ ರಾಮನೊಟ್ಟಿದ ತರಗೆಲೆಯ ಮೇಲೆ
ಸೀತೆ ದೊಪ್ಪನೆ ಕುಳಿತ್ತುಸ್ಸೆನುತ್ತೊರಗಿದಳ್

ಮರಕೆ. ಮುಚ್ಚಿದುವಕ್ಷಿ ತಾಳಲಾರದ ಸೇದೆಯಿಂ,
ಪೇಳೆಳ್ಚರಳ್ದುದೊ ಮುರ್ಚ್ಛೆಗೆಂಬಂತೆ. ಕೆಚ್ಚೆದೆಯ
ಬೀರರಿರ್ವರುಮಿಚ್ಚೆಗೆಟ್ಟು ಮರವಟ್ಟರೆನೆ
ಕುಳ್ತರೆದೆ ತಣ್ತು! ನೀರಳ್ಕೆಯಂ ಸನ್ನೆಯಿಂ
ಸೂಚಿಸಿ ತರಳೆ ನರಳೆ, ಬೇಗದಿಂದೋಡಿದನ್
ಊರ್ಮಿಳಾ ಸ್ವಾಮಿ, ಪಳುವಂ ನುಗ್ಗಿ, ದರಿಯಿಳಿದು,
ಸರುವಿಂಗೆ. ತಳಿರ ತೊಂಗಲ ಬಿಜ್ಜಣಿಕೆಯಿಕ್ಕಿ
ಮೆಲ್ಗಾಳಿವೀಸಿ ದಾಶರಥಿ ಸವಿಮಾತಿನಿಂ
ತನ್ನಾ ತಳೋದರಿಯನೋವಿದನ್. ಅನಿತರೊಳ್
ದೊನ್ನೆಗೈದೆಲೆಯೊಳಗೆ ಮೈದುನಂ ತಂದೀಯೆ
ತಣ್ಣೀರನೀಂಟಿ ಸೊಗಸಿದಳು ಶುಶ್ರೂಷೆಗಾ
ರಾಮನೆರ್ದೆಯನ್ನೆ. ಮೇಲಲ್ಲಿಂದೆ ನಡೆದರಾ
ಮೆಲ್ಲನೊಯ್ಯನೆ ಮೂವರುಂ. ಮೆರೆದುದನ್ನೆಗಂ
ವನರಮ್ಯಗಿರಿಪಂಕ್ತಿಯಿಂದೆ ಪರಿವೃತಮಾಗಿ,
ರವಿಕರೋಜ್ವಲ ಸಲಿಲ ಚಂಚಲತೆಯಿಂ ಮಿಂಚಿ,
ರಾಜೀವ ರಾಜಿಯಿಂ ರಾಜಿಪ ಸರೋವರಂ
ಮುಂದೆ. ಕಯ್‌ಕಾಲ್‌ಮೊಗಂ ತೊಳೆದರುಂಡರ್ ಗುಹನ
ಕೊಟ್ಟ ಬುತ್ತಿಯನಾಸರಂಗಳೆಯೆ ಮಲಗಿದರ್
ತೀರದೆಳಗರುಕೆ ಹಾಸಿನೊಳಲ್ಲಿ, ಕರಿನೆಳಲ
ಹಿರಿಕೊಡೆವಿಡಿದ ಹೆಮ್ಮರದ ಬುಡದಲ್ಲಿ, ತಿರೆತಾಯ
ತಣ್ಪು ಮಡಿಲಲ್ಲಿ. ತಾವರೆಹೂವಿನೆಸಳ್‌ಗಳಂ
ಕೆದರಿ, ಪೊನ್ನಿರಿಯೊಳಗಣಾಮೋದಮಂ ಸೂರೆ
ಮಾಳ್ಪಾ ಸರಸವಾಡಿ, ನರುಗಂಪುವೊರೆವೊತ್ತು
ಮಂದಮಂದಂ ತೀಡುವೆಳವೆಲರುಸಿರನೊಲ್ದು
ಬೀಸಿದಳ್; ಹಿಂಡುಹಿಂಡಾಗಿ ಬಂಡುಣಲೆಂದು
ತೇರುಗೊಂಡಲರ ಸಂತೆಗೆ ನೆರೆದು, ಮೊರೆದುಲಿವ
ನಸರಿ ಮೇಣ್ ತುಡುವೆ ಮೇಣ್ ಹೆಜ್ಜೇನ್ನೊಣಂ ಮೇಣ್
ಅಲರ್ವಕ್ಕಿಗಳ್ ಮತ್ತೆ ಕೊಂಚೆಯಂಚೆಗಳಿಮ್ಪು
ಜೋಗುಳವನುಲಿದಾಡಿದಳ್; ತೀರಮಂ ತಟ್ಟಿ
ತೆರೆಗೈಗಳಿಂದೆ, ಚಪ್ಪಳೆಯಿಕ್ಕಿದಳ್; ಮುದ್ದಾಡಿ
ತೂಗಿದಳ್ ನಿದ್ದೆದೊಟ್ಟಿಲೊಳಿಟ್ಟು ಆ ಮೂವರಂ

ಶ್ರೀಮಂತರಂ ಆ ಸರೋವರ ಶ್ರೀ.
                    ಜೀರ್ದುಂಬಿಗಳ್
ಚೀರಿಡಲ್ ತೊಡಗಿದವು. ದಟ್ಟಯ್ಸಿದುದು ಮಬ್ಬುರ್
ಕಾಡನೊಯ್ಯನೆ ನುಂಗಿ. ಬೈಗಾದುದಾ ಪಗಲ್.
ಇಳಿದುದೈ ಕಾಳಸರ್ಪಿಣಿಯಂತೆ ಕರ್ಪಿರುಳ್.
ಮರದಲೆಗಳೆಲೆಗೊಡೆಯ ನಡುನಡುವೆ ತಾರೆಗಳ್
ಮಿಣುಮಿಣುಕಿಣಿಕಿ ತೋರಿ ಮರೆಯಾದುವಿನ್ನೊಮ್ಮೆ
ಬೇರೊಂದು ತಾಣದೊಳ್ ಮಿನುಗಿದುವು, ಮಿಣುಕಿಣಿಕಿ
ಮರಳಿ ಮರೆಯಾಗಿ. ಚುಕ್ಕಿಗಳನಣಕಿಸಿ ಮಿನುಗಿ
ಮೆರೆದುವಯ್ ಮಿಂಚುಂಬುಳದ ಸೇನೆ, ಕಳ್ತಲೆಗೆ
ಕೋಟಿಕೋಟಿಯ ಕಿಡಿಯ ರೋಮಾಂಚನವನಿತ್ತು,
ಮತ್ತೆ ನೋಳ್ಪರಿಗೆ. ಪಗಲಿನ ಜಗದ ಸದ್ದಳಿದು
ಶವವಾಯ್ತು ನಿಶ್ಶಬ್ದಂ. ಓರೊರ್ಮೆ ನೀರವದ
ಕಗ್ಗಲ್ಲಿಗುಳಿಯೇಟನೊದೆವವೊಲ್ ದೆವ್ವದನಿ 'ಗೂ'
ಕೂಗಿದುದು ಗೂಬೆ. ಮೇಣೋರೊರ್ಮೆ ಜಾನಕಿಗೆ
ಜೀವ ಜೊಂಪಿಸುವಂತೆ, ಸದ್ದು ಹದ್ದುಗಳೆರಗಿ
ಶರ್ವರಿಯ ಸತ್ತ ಸದ್ದಿಲಿಮೆಯ್ಯ ಮಾಂಸಮಂ
ಮುದ್ದೆಮುದ್ದೆಯೆ ಕಿತ್ತೆಳೆಯುವಂತೆ, ಕೇಳ್ದುವಯ್
ಕೋಳ್ಮಿಗಗಳೊಳ್.
              ನಟ್ಟನಡುರಾತ್ರಿ ಸೌಮಿತ್ರಿಯಂ
ಕರೆದನಣ್ಣಂ:
              "ತಮ್ಮ, ಪಿಂತಿರುಗಯೋಧ್ಯೆಗೀ
ರಾತ್ರಿಯಂ ಕಳೆದು. ಊರ್ಮಿಳೆ ನಿನ್ನನೆಯೆ ಕರೆದು
ಗೋಳಾಡುತಿರ್ಪಂತೆ ಕಂಡೆ ಕನಸಂ."
                    "ಅಣ್ಣ,
ಕಾಂತೆ ಊರ್ಮಿಳೆ ತಪಸ್ವಿನಿ. ನಿನ್ನೊಡನೆ ಬರುವ
ಮುನ್ನಮಾಕೆಯ ಕೃಪೆಯನಾಂತೆ ಬಂದೆನ್. ನಿನಗೆ
ಚಿಂತೆಯಿನಿತಾ ದೆಸೆಗೆ ಬೇಡಯ್."
                    ಸುಮಿತ್ರಾತ್ಮಜಂ
ರಾಮನಿಂಗಿತವರಿತು ಶೋಕಗದ್ಗದನಾಗಿ
ಪಿಡಿದನಣ್ಣನ ಪಾದಮಂ. ದಿಂಡುರುಳ್ದನು ನೆಲಕೆ

ಮರುಮಾತಿಗೆಡೆಯಿಲ್ಲದೊಂದು ಮಾರುತ್ತರದ
ಬಡಿಗೆ ಬೀಳ್ವಂತೆ: ''ನೀನಿಲ್ಲದೆಂತತ್ತಿಗೆಗೆ
ಬಾಳಿಲ್ಲವೋ ಅಂತೆ ನನ್ನ ಬಾಳಾದೊಡಂ
ನಿನ್ನನುಳಿದಂದು ನೀರಂ ಪಳಿದ ಮೀನಂತೆವೊಲ್
ಗಳಿಗೆಗಳಿದಪುದಣ್ಣ! ತಂದೆ ತಾಯಂದಿರಂ
ನೋಳ್ಪ ಮಾತಿರಲಿ, ಪುಗಲೊಲ್ಲೆನಾಂ ಸಗ್ಗಮಂ,
ನೀನಿರದೆ ಮುಂದೆ!''
ಆ ಪುಣ್ಯರಾತ್ರಿಯೆ ಕಣಾ,
ಋಷಿ ಭರದ್ವಾಜಂ ಸಮಾಧಿಯೊಳಿರಲ್, ಸ್ವರ್ಜ್ಯೋತಿ
ಪೃಥಿವಿಗವತರಿಸಿ ತನ್ನಾಶ್ರಮಂ ಪುಗುತಿರ್ಪುದಂ
ಕಾಣುತಾನಂದದಿಂ ಹಾರೀತನಂ ಶಿಷ್ಯನಂ
ಕರೆದು:
''ನಾಳೆಯೆ ಬರ್ಪನತಿಥಿ ನಾರಾಯಣಂ,
ಹಾರೀತ! ಧನ್ಯಮಾಯ್ತೆಮ್ಮಾಶ್ರಮಂ; ಮತ್ತೆ
ಪುರುಷೋತ್ತಮಾಗಮನದಿಂ ಪರಮ ಪುರುಷಾರ್ಥಮುಂ
ಸಿದ್ಧಿಸಿತು ತಪಕೆ! ನೀನವನ ಸುಸ್ವಾಗತಕೆ
ನಮ್ಮೀ ತಪೋವನವನಣಿಗೆಯ್ದು, ಪಿರಿಯತಿಥಿಯಂ
ನಾಳೆ ಬೆಳಗಿಂ ಬಿಡಿದು ಬೈಗು ಬರ್ಪನ್ನೆಗಂ
ಕಾಯ್ದಿದಿರ್ಗೊಂಡು ಪೂಜಿಸಿ ಕರೆದು ತಾ ಪೂಜ್ಯನಂ!
ಬೆಳಗಾದುದೇಂ ಪೇಳ್ವುದಾಶ್ರಮದ ಶಾಂತಿಯಂ:
ಭ್ರಾಂತಿರಹಿತಾನಂದಶೀಲ ಕಾನನ ಶಾಂತಿಯಂ;
ಆದರ್ಶಸಾಧನೆಯ ಹರ್ಷದುಜ್ಜ್ವಲ ಶಾಂತಿಯಂ;
ಚಿಂತೆಗೆ ಅತೀತಮಪ್ಪಾ ಸೃಷ್ಟಿಯ ರಹಸ್ಯಮಂ
ಚಿಂತಿಸುವ, ಚರ್ಚಿಸುವ, ಸಿದ್ಧಾಂತಗೊಳಿಸಿಯುಂ
ಸಂದೇಹಗೊಂಡದಂ ಮತ್ತೊಂದರಿಂ ತಿದ್ದಿ,
ಮತ್ತೆ ಮುರಿದದನೆ ಮಗುದೊಂದರಿಂ ತಿದ್ದಿ, ಮೇಣ್
ತತ್ತರಿಸುವನ್ನೆಗಂ ಬುದ್ಧಿ ಜಿಜ್ಞಾಸಿಸುತೆ
ಮುನ್ನಡೆವ ಸಾಹಸದ ಮಂಥನ ಮನಶ್ಶಾಂತಿಯಂ!
ಸೋತು ಗೆಲ್ಲುವ ಮತ್ತೆ ಗೆಲಿದು ಸೋಲುವ ಶಾಂತಿಯಂ!
ಧ್ಯಾನ ಜಪತಪ ಶಾಂತಿಯಂ! ಹೋಮ ಧೂಮದ ಮತ್ತೆ
ಸಾಮಗಾನದ ವೇದ ಘೋಷದ ಚಿರ ಪವಿತ್ರತಾ

ಶಾಂತಿಯೆ ನಮೋ ನಿನಗೆ, ಓ ಋಷ್ಯಾಶ್ರಮದ ಶಾಂತಿ!
ಚಿಮ್ಮಿ ನೆಗೆಯುವ ಪೊನ್ನಚುಕ್ಕಿಯ ಕುರಂಗ ಶಿಶುಗಳ್
ನಲಿಯುತಿವೆ ಹರಿಣಚರಣಕ್ಷುಣ್ಣ ಶಾದ್ವಲದ
ಪಚ್ಚೆಸೊಂಪಿನ ವೇದಿಕೆಯನೇರ್ದು. ಹಸುರು ಹೂ
ಹಣ್ಣು ಕಾಯ್‌ವೊತ್ತ ತರುಗಳಲಿ ಶತಶತ ವಿವಿಧ
ಪಕ್ಷಿಚಿತ್ರಸ್ವನಂ ವರ್ಣವರ್ಣಸ್ವರ್ಣಮಯ
ರಂಗವಲ್ಲಿಯನಿಕ್ಕುತಿದೆ ಕರ್ಣಚೈತ್ರನಾ
ಪರ್ಣಶಾಲೆಯಲಿ. ಕೊಡಗೆಚ್ಚಲಾಕಳ್ ನೆಳಲ
ತಂಪಿನೊಳ್ ಮೇಯುತಿದೆ. ಮಲಗಿರ್ಪುದಿನ್ನೊಂದು.
ಮುದ್ದುಕರುವಂ ನೆಕ್ಕಿ ಜೊಲ್ಲಕ್ಕರೆಯ ಸೂಸಿ
ಸೊಗಸುತಿಹುದೊಂದು. ಗೂಳಿಯದೊಂದು ಕೋಡಾಡಿ
ಕೆಮ್ಮಣ್ಣುವುತ್ತಮಂ, ಮೆತ್ತಿಕೊಂಡಿದೆ ಮೊಗಕೆ ಮೇಣ್
ಕೊಂಬುಗಳ್ಗೆಲ್ಲಮೋಕುಳಿ ರಂಗು. ಕೋತಿಗಳ್
ತರಿತರಿದು ನೆಲಕೆಸೆವ ಪಣ್ಗಳಂ ಮೆಲ್ಲುತಿವೆ
ಮೊಲವಿಂಡು. ಪಾತಿಪಾತಿಯ ಕಾಲುವೆಯ ಪರಿವ
ನೀರ್ಗೆ ಕೊಕ್ಕಿಟ್ಟೊಡನೆ ಬಾನ್ಗೆ ಮೊಗಮೆತ್ತುತಂ,
ಮತ್ತೆ ಮತ್ತಂತೆಸಗಿ ವಾರಿಪಾನಾಸಕ್ತಿ ತಾಂ
ಮೂರ್ತಿಗೊಂಡಂತೆ ಕಣ್ಗೆಡ್ಡಮಾದಾ ನವಿಲ್
ನೀಳ್ದ ಪೀಲಿಯ ಚವರಿಯಿಂದಮದೊ ಗುಡಿಸುತಿದೆ
ಹತ್ತಿ ಹಸರಿದ ಹಸುರ ಮೆತ್ತೆಯಂ. ಅದೊ ಅಲ್ಲಿ:
ಹರಿಣಿಯ ಕೊರಳನಪ್ಪಿ ಪಿಡಿದು, ಸರಸಕೆ ಜೋಲ್ದು,
ಮಿಗತಾಯಿಗಳ್ಕರಿಂ ಪಾಲುಕ್ಕುವೋಲ್ ಕಾಡಿ
ಪೀಡಿಸುವ ಮುನಿಬಾಲಕಂ! ಏಣ ಶಾಬಮಂ
ಪುಟ್ಟ ತೋಳಿಂದಪ್ಪಿ ಸುತ್ತಿ ಪೊತ್ತದರ ತಾಯ್
ಹೋರಿಗೋಡುಗಳಿಂದೆ ಮೆಯ್ಯ ಕಂಡೂತಿಯಂ
ತೀರ್ಚಿಕೊಳುತಿರ್ಪ ತಾಣಕೆ ನಡೆದು, ಕೆಚ್ಚಲಂ
ಬಾಯ್ಗಿತ್ತು, ಪೀಯೂಷಪಾನದಾನದ ಸುಖದ
ಪುಣ್ಯಕ್ಕೆ ಸೋಂತಿರುವನದೊ ಮತ್ತದೊರ್ವನಾ
ತರುಣ ತಾಪಸತನೂಜಂ. ಗೋಮಯಂ ಬಳಿದು,
ಶೇಷಾಂಶಮಂ ಕರತಲದೊಳಾಂತು, ಇಂಗುದಿಯ
ಮರದ ಬುಡಕದನೆಸೆಯೆ ಬಂದಾ ಮುನಿಯ ಪತ್ನಿ

ತುಳ್ಕಿದಳ್ಕರೆಗಳ್ದು ನಿಂದು ನೋಡುತಿಹಳದೊ
ಮಿಗವರಿಗಳೊಡನಾಡುವೆಳಮಕ್ಕಳಂ!
                                        ದುಮುಕುತಿದೆ
ಆ ತಪೋವನದ ನೇಮಿಯೊಳೊಂದು ನಿರ್ಝರಿಣಿ
ತೆರೆಯ ತಾಂಡವವಾಡಿ, ನೊರೆಜಡೆಯನೆಣ್ದೆಸೆಗೆ
ಬೀಸಾಡಿ, ಮೊರೆಯ ಡಮರುಗ ಘೋಷದೋಂಕೃತಿಗೆ
ಪರ್ವತಾರಣ್ಯಮಂ ಪ್ರತಿನಾದಿತಂ ಮಾಡಿ.
ನಿಂದಿಹವು ಮುಗಿಲೊಡನೆ ಪರ್ಚಿ ಘನ ತರುಕುಲಂ
ಕಿಕ್ಕಿರಿಯುತಿಕ್ಕೆಲದೊಳುಂ. ನೆಳಲ ಕಳ್ತಲಿಂ
ಕರ್ಪುಗೊಂಡಿಹುದಿರ್ಪುಗೊಂಡ ಸೂರ್ಯಾತಪಂ.
ಜಲಶಿಲಾವೇಶದಾ ಧ್ವಾನದಿಂ ಫೇನದಿಂ
ನಟರಾಜ ನಾಟ್ಯಮಂ ನಟಿಪ ನಿರ್ಝರ ರೂಪಿ
ಧೂರ್ಜಟಿಯೆ ನರರೂಪಮಂ ತಾಳ್ದಿದನೆನಲ್ಕೆ
ಬ್ರಹ್ಮಸಂಲಗ್ನಮನನೊರ್ವ ತೇಜಸ್ವಿ ಋಷಿ
ಧ್ಯಾನಸ್ಥನಾಗಿರ್ದನಾ ಗಿರಿ ತರಂಗಿಣಿಯ
ನಾಭಿಯಿಂದುದ್ಭವಿಸಿದಂತಿರ್ದ್ದರೆಯ ಶಿರದಿ:
ಹೇ ವಿಶ್ವೇಶ ಮಾಯೆ, ನೀನೀಶ್ವರ ಮಹಚ್ಛಾಯೆ.
ಸೃಷ್ಟಿಯಿದು ನಿನ್ನೆರ್ದೆಯ ಪಾಲ್‌ಪಸುಳೆ, ಓ ತಾಯೆ.
ನಿನ್ನ ಸೌಂದರ್ಯ ಸಾನ್ನಿಧ್ಯಮಿರೆ, ಓ ಪ್ರಕೃತಿ,
ಮಿಂಚಿದಪುದಿಂದ್ರಿಯಮತೀಂದ್ರಿಯಕೆ. ಜಡಜಗಂ
ತೋರಿದಪುದಂತರಾತ್ಮದ ಸಿರಿಗೆ ಹೊರಮೊಗಂ
ತಾನಾಗಿ. ಲಯವಹುದು ಚಿತ್ತಚಂಚಲ ವಿಕೃತಿ
ರಸದ ಮಿಂಚಿನ ಮೀಹದಿಂಪಿನಲಿ. ದೊರೆಕೊಳ್ವ
ತನ್ಮಯತೆಯಿಂ ಹೃದಯದಿಂಗಡಲ್ಗಲೆ ನಲಿಸಿ
ಮೈದೋರ್ಪುದಾ ಸಚ್ಚಿದಾನಂದ ಶಾಂತಿ ಶಶಿ.
ಮೃಣ್ಮಯಂ ಮಾಸಿ, ನನೆಕೊನೆಯೇರಿ ಚಿನ್ಮಯಂ,
ಧ್ಯಾನಿಸುವ ಕವಿಮನಂ ಗಾಯತ್ರಿಯನ್ನೇರ್ದು
ಭೂರ್ಭುವಸ್ಸುವಗಳಂ ತುಂಬಿ ತುಳುಕುತೆ ಮೀರ್ದು
ಭೋಗಿಸುವುದಾ ಬ್ರಹ್ಮ ಹೃದಯ ಮಧುವಂ ಪೀರ್ದು
ಯೋಗಲಯ ನಿದ್ರಾ ಸಮಾಧಿಯೊಳ್ ತಾನಾರ್ದು!
ಹೇ ಪ್ರಕೃತಿ, ಎಲ್ಲಮಿರ್ದೇನಿಲ್ಲದಾ ಅಲ್ಲಿ, ಮೇಣ್

ಸರ್ವಮಿರ್ಪಾ ಸರ್ವಶೂನ್ಯತಾ ಸಂಪೂರ್ಣದಲಿ
ನಿನ್ನ ಕೃಪೆಯಿಲ್ಲದಿರೆ ಪೇಳ್ ಪುರುಷದರ್ಶನವೆಲ್ಲಿ?
ಬ್ರಹ್ಮಚರ್ಯದ ಸಂಯಮದ ತಪಕೆ ವೇದ್ಯಮಾ
ದಿವ್ಯದರ್ಶನದಿಂದಮವತರಿಸಿದನ್ ಯೋಗಿ,
ವ್ಯೋಮಾಂಡಮಂ ಚರಿಸಿ ಮೆಲ್ಲನೊಯ್ಯನೆ ನೆಲಕೆ
ವಿದ್ಯುದ್ವಿಮಾನವಿಳಿವಂತೆ. ಕಣ್ದೆರೆಯೆ ಹಾ
ಚೆಲ್ವಿನಿಳೆಗೇನೊ ಚೆಲುವಿರ್ಮಡಿಸಿದೋಲಾಯ್ತು!
ಕಾಸ್ತಾರ ಕಾನ್ತೆಗಾವುದೊ ದಿವ್ಯಯೌವನಂ
ಮೈದೋರಿದತ್ತು. ಹೊಮ್ಮಿತು ತೊರೆಯ ಮೊರೆಯಿಂದೆ
ದೇವತಾಹ್ವಾನದ ಸುಖಾಗಮ ಕವನ ಗೀತೆ.
ಹಕ್ಕಿ ತೆಕ್ಕನೆ ಹಾಡಿದುವು ವೃಂದ ಛಂದದಿಂ,
ಗಗನದಿಂ ಧುಮ್ಮಿಕ್ಕಿತೆನೆ ಗಾನ ಶಿವಗಂಗೆ.
ನರ್ತಿಸಿದುವೈ ಮಿಗಂ! ತನ್ನಾತ್ಮ ರಸ ಸುಖಕೆ
ಲೋಕಮೆ ರಸಂಬಡೆವುದೆಂದಾ ಋಷಿತಪಸ್ವಿ
ಮಂದಹಸಿತಂ ನೋಡುತಿರೆ, ನಾನ್ದ ಕಂಗಳಿಗೆ
ಗೋಚರಿಸಿತೊಂದದ್ಭುತಂ: ಅನತಿ ದೂರದೊಳ್,
ಕಣ್ಬೊಲದ ಕಾನನದ ಪಳುವದೊಳ್, ತನ್ನೆರ್ದೆಯ
ರಸ ಸುಖಮೆ ಹೆಪ್ಪುಗೊಂಡಾಳಾಯ್ತೊ, ಜಾನದೊಳ್
ತಾಂ ಕಂಡ ಕಾಣ್ಕೆಗೆ ಮನುಷ್ಯತೆ ಲಭಿಸಿದತ್ತೊ,
ತನ್ನ ಚಿಂತಾ ಬ್ರಹ್ಮವಸ್ತು ಸುಕೃತದ ಸೆರೆಗೆ
ಸಿಲ್ಕಿ ತನ್ನೆಡೆಗೆ ನಡೆತಂದಪ್ಪುದೆಂಬಂತೆವೋಲ್
ದೃಷ್ಟಿತೃಷೆಗಮೃತಮಂ ಕರೆಯುತ್ತೆ ಕಂಗೊಳಿಸಿ
ಬಂದುದಾ ಸೀತಾ ತೃತೀಯಂ ರಘೂದ್ವಹನ
ನೀಲ ಮಂಗಳ ಮನೋಹರ ದೇವವಿಗ್ರಹಂ!
ಬೈಗಾಗುತಿರ್ದೊಡಂ, ಬೆಳಗೆ ಮೈದೋರ್ದವೋಲ್,
ನಲಿದುದು ತಪೋವನಂ. ಮುಚ್ಚೆ ಕೈಮುಗಿದಿರ್ದ
ಪದ್ಮಿನಿಯ ಹೃದಯಮಲರಿದುದೊಡನೆ. ಮರನೆಳಲ್
ಮಾಯವಾದುದು: ಆತ್ಮಕಾಂತಿಗಪ್ರಾಕೃತಕೆ
ಪೇಳೆಲ್ಲಿಯದು ಛಾಯೆ? ಮಹಿಮೆ ಮಹಿಮೆಗೆ ಪೆರತೆ?
ಹಾರೀತನಾರೀತನೆನದೆ ಆ ತೇಜಸ್ವಿಯಂ
ಕಂಡೊಡನೆ ಗುರುತಿಸುತೆ ಮೇಲೆಳ್ದಿದಿರ್ವೋಗಿ

ಮುಗಿದನು ನಮಸ್ಕಾರಮಂ. ಸುಖಾಗಮನಮಂ
ನುಡಿದನ್: "ಮಹಾಮಹಿಮ, ಗುರು ಭರದ್ವಾಜಂಗೆ
ಶಿಷ್ಯನಾಂ. ಪಿರಿಯತಿಥಿಯೊರ್ವನಿಂದೀಯೆಡೆಗೆ
ಬರ್ಪನಾತಂಗೆ ಸತ್ಕರಿಪುದೆಂದೆನಗಾಜ್ಞೆ."
"ನೀನೆಮಗೆ ಪಿರಿಯನಯ್, ಗುರುವೆ. ಆಶೀರ್ವದಿಸಿ,
ತುಳಿಲಾಳ್ಗಳೆಮ್ಮ ತುಳಿಲಂ ಕೊಳ್ವುದದೆ ಕೃಪೆ!"
ಎನುತ್ತವಂ ಕಾಲ್ಗೆರಗುವನಿತರೊಳ್ ಪಿಡಿದಪ್ಪಿದನ್
ಜಡೆವೊತ್ತ ಕಿತ್ತಡಿ: "ವಯಸ್ಸಿಗೇಂ ಪಿರಿತನಮೆ?
ನಿನ್ನ ಪೆರ್ಮೆಗೆ ವಂದಿ ನಿನ್ನಾತ್ಮದೋಜೆ; ಮೇಣ್
ನಿನ್ನ ತೇಜಕೆ ಸಾಕ್ಷಿ ನಿನ್ನಕ್ಷಿ, ಕಮಲಾಕ್ಷ!
ಗುರು ಭರದ್ವಾಜನಿಂದಿನ ತೆರನನೀಕ್ಷಿಸಿದ
ನನಗೆ ಮೆಯ್ ಗುಡಿಗಟ್ಟಿದತ್ತು. ತಾನಿನ್ನೆಗಂ
ಸಾಧಿಸಿದ ಸಾಧನ ತಪಃಫಲಮೆ ಬಂದಪುದೊ
ಎಂಬುವೋಲಾನಂದದಾವೇಶದಿಂ ತನ್ನನೆಯೆ
ತಾಂ ಮರೆತು, ನೋಂಪಿಯುಪವಾಸಮಂ ಕೈಕೊಂಡು,
ನಿನ್ನನೆ ನಿರೀಕ್ಷಿಸುತಲಿಹನಯ್ಯ. ಬಾರಯ್ಯ,
ಪಿರಿಯತಿಥಿ!" ಎನುತೆ ಋಷಿ, ತನ್ನೆರ್ದೆಯ ದೇಗುಲಕೆ
ತನ್ನ ದೇವರನೊಯ್ವ ಭಕ್ತನಂದದಿ, ಬಾಗಿ
ಮುಂಬರಿಯಲಾ ಮೂವರುಂ ನಡೆದರೊಡನೊಡನೆ.
    ಕಣ್ಣಾಯಿತಾಶ್ರಮಕ್ಕಾಶ್ರಮವೆ: ಜಿಂಕೆ ತಾಯ್
ಗರಿಕೆಬಾಯಾಗಿ, ಕಿವಿಯೆತ್ತಿ, ಕಣ್ಗಳನರಳಿ
ನಿಂದತ್ತು. ಜಿಂಕೆಮರಿ ತಾಯ್ಗೆಚ್ಚಲಿನ ಮೆತ್ತೆ
ಬೆಚ್ಚಗಪ್ಪಂತೆ ಮೊಗಮೊತ್ತಿ, ಪಾಲಂ ಸೂಸಿ,
ನಿಷ್ಪಂದಮಿರ್ದುದಯ್ ಮರೆತಮೃತದೂಟಮಂ.
ಮೂಲಮಂ ಮುಂಗಾಲ್ಗಳಿಂ ಕೆದರಿ, ಶಿಖರಮಂ
ಮುರಿದು ಶೃಂಗಾಗ್ರದಿಂ, ಕೋಡಾಟದೊಳ್ ತೊಡಗಿ
ಪುತ್ತಿಗೆ ಗುಟುರ್ ಮಲೆತು, ಕೆಮ್ಮಣ್ಣು ಮೆಯ್ಯಾಗಿ
ಮೆರೆದಿರ್ದ ಗೂಳಿ ಕೆಮ್ಮನೆ ನಿಂದುದಚ್ಚರಿಗೆನಲ್,
ಬೆಚ್ಚು ಮೆಚ್ಚುಗಳಿರ್ಕುಳದ ನಡುವೆ. ಬಾಲಕಂ
ಮರಿಮಿಗವನೇರಲೊಂದಡಿ ನೆಗಹಿ ಬೆನ್ಗಿಟ್ಟು,
ಬರೆದಂತೆ ನಿಂದನಯ್, ನೋಟದೊಳೆ ಚಿತ್ತಂ

ಸಮರ್ಪಣಂ ಬಡೆದವೋಲ್.
ಕೈಮುಗಿದು ಪುಗಲೊಡಂ
ಮುನಿತಿಲಕನೆಲೆವನೆಗೆ, ದಾಶರಥಿಗಂದೊಮ್ಮೆ
ಗೌತಮ ಸತಿಯ ಶಾಪಮೋಚನದ ಸಮಯದೊಳ್
ತೂಣಗೊಂಡಂತಾಯ್ತು. ಸೀತೆ ಲಕ್ಷ್ಮಣರೊಡನೆ
ಮೈಚಾಚಿ ನಮಿಸಿದನ್, ನಾಗರಿಕ ಮಾನವರ
ಮರ್ಯಾದೆಯಂತೆಃ ಏನಿದು ಭರದ್ವಾಜಂಗೆ?
ವಿಸ್ಮೃತಿಯೊ, ಸ್ವಸ್ಮೃತಿಯೊ? ಬಿಟ್ಟ ಕಣ್, ತೆರೆದ ಬಾಯ್;
ಮೂಕನೊಲ್ ಮಂಡಿಸಿಹನಜಿನಾಸನದ ಮೇಲ
ಕಡೆದಿಟ್ಟ ಕಲ್‌ಪಡಿಮೆಯೋಲ್! ಭಾವ ವಶನಾಗಿ
ನಟ್ಟಾಲಿಯಾಗಿ ರಾಮನ ನೀಲಗಾತ್ರಮಂ
ನಿಟ್ಟಿಸುತೆ, ಭಕ್ತಿ ಬಾಷ್ಪಾರ್ಘ್ಯಾಭಿಷೇಕದಿಂ
ಮೌನ ಮಂತ್ರದ ಮಹಾ ಮಾನಸಿಕ ಪೂಜೆಯಂ
ಗೈದಿರ್ದನಂ ಕಂಡಾ ತಪೋಜ್ಜ್ವಲಿತ ತೇಜನಂ,
ಕಣ್ಣರಳಿ ನೋಡಿದನು ಸೌಮಿತ್ರಿ ತನ್ನಣ್ಣನಂ!
ಧ್ಯಾನಮಯ ಗಂಭೀರ ಭಂಗಿಯಿಂ ಭಾವದಿಂ
ಮೇಲೆಳ್ದ ಮುನಿವರೇಣ್ಯಂ ತರುಣ ರಾಮನಂ
ಇಂಗಿತದಿ ಸೆಳೆದೊಯ್ದನೊಳಗಣ ತಪದ ಕುಟಿಗೆ,
ಮತ್ತೆ ಬೆಂಗಡೆಗೆಲೆದೆರೆಯನೆಳೆದು ಬಾಗಿಲಂ
ಮುಚ್ಚಿದನ್. ಬೆರಗಾಗಿ ನೋಡುತಿರಲನಿಬರುಂ,
ತುಸುವೊಳ್ತನಂತರಂ, ಪೂಜೆಮನೆಯಿಂ ಮರಳಿದರ್
ಸಾಮಾನ್ಯರೋಲಿರ್ವರುಂಃ ತನ್ನ ವೃತ್ತಾಂತಮಂ
ಪೇಳುತಿರ್ದನ್ ದಾಶರಥಿ. ಪಂಚವತ್ಸರದ
ಪಸುಳೆ ಪರದೇಶದಿಂ ಮರಳಿದಣ್ಣನ ದನಿಗೆ
ಕಿವಿಗೊಡುವವೋಲ್ ಕೇಳುತಿರ್ದನ್ ಯತೀಶ್ವರಂ
ರಾಮಕಥೆಯಂ!
ಮಗಳೆ ಮನೆಸೇರ್ದಳೆನೆ ಮುನಿಯ ಸತಿ
ನೆಲಮಗಳನುಪಚರಿಸಿದಳ್. ಬಿಸಿಮಜ್ಜನಂಗೆಯ್ಸಿ,
ನಾರುಮಡಿಯುಡಿಸಿದಳ್. ನೊರೆಪಾಲು ತನಿವಣ್ಗಳಿಂ
ತಣಿಸಿದಳ್. ಮಿಕ್ಕಕ್ಕರೆಗೆ ಪಣತೆ ಸೊಡರಂ ಪಿಡಿದು
ನೋಡಿದಳಯೋನಿಜೆಯ ದೇವವಂದಿತ ರೂಪಮಂ!

ಎಲೆಮನೆಯ ಮಕ್ಕಳಿಗೊ? ಪೊಸತೊರ್ವಳಕ್ಕನೆಯೆ
ಸಿಕ್ಕಿದಂತಾಯ್ತು. ನಿದ್ದೆಯನೊಲ್ಲದೆದ್ದೆದ್ದು
ಗಳಪಿದರ್ ಗುರುಲಘುವನೊಂದನುಂ ಲೆಕ್ಕಿಸದೆ
ನಟ್ಟಿರುಳುರುಳ್ವನ್ನೆಗಂ. ಜನಕ ಜಾತೆಯುಂ
ಬಟ್ಟೆವರ್ಪಾಗಳ್ ತಿರಿದು ಮಡಿಲೊಳಿಟ್ಟಿರ್ದ
ಪಣ್ಪೂಗಳಂ ಕೊಟ್ಟು, ಮೃಗಚರ್ಮದಿಂ ಸಮೆದ
ತನ್ನ ಕೈಪೆಟ್ಟಿಯಂ ತೆರೆದಯೋಧ್ಯೆಯ ಸಿರಿಗೆ
ರಚಿಸಿದಳ್ ಕಿರಿದೊಂದು ಬೆಳಕಂಡಿಯಂ!
ದೂರದಿಂ
ಬಂದುದು ತಪೋವನಕೆ ಗಂಗೆಯಮುನೆಯರುಲಿವ
ಪುಣ್ಯಘೋಷಂ, ಪ್ರಯಾಗ ಕ್ಷೇತ್ರ ತೀರ್ಥೋದ್ಭವಂ.
ದಿವ್ಯದ್ರವನ್ತಿಗಳ್ ಕೂಡುವ ಮಹದ್‌ಧ್ವನಿಯ
ಜೋಗುಳವನಾಲಿಸುತೆ ನಿದ್ರಿಸಿದರಿನವಂಶಜರ್
ತೊಟ್ಟಿಲೊಳ್ ನೀರವ ತಪೋವನದಾ. ಮುನಿವರಂ
ಮರುದಿನಂ ಪ್ರತ್ಯುಷೆಗೆ ಕರೆದೊಯ್ದನವರಿರ್ವರಂ
ಕೂಡಲಿಯ ದರ್ಶನಕೆ. ರಾಮಲಕ್ಷ್ಮಣರದಂ
ಭಾವವಶರಾಗಿ ಕಣ್ಣೆವೆಯಿಕ್ಕದೆಯೆ ನೋಡಿದರ್.
ನೋಡಿ ಮಣಿದರ್. ರುದ್ರರಮಣೀಯಮಾದುದಾ
ಸಂಗಮಂ ಕಡಲವೊಲ್, ಕಡೆಯಿಲ್ಲವೆಂಬವೊಲ್,
ಕಡೆದವೋಲ್. ಸಲಿಲ ವೈಶಾಲ್ಯದಿಂ, ಭೋರ್ಗರೆವ
ಘೋಷದಿಂ, ಫೇನವೀಚಿಯ ಭೀಷ್ಮತಾಂಡವದ
ಸಂಮ್ಮೋಹದಿಂ ಕಾಣದಂಬುಧಿಯೆ ತೋಳ್‌ನೀಡಿ
ಸನ್ನೆಗೈವೀಸಿ ಕರೆದಂತಾಯ್ತು ರಾಮಂಗೆ,
ತನ್ನಾತ್ಮದತಿದೂರದಾ ಪಾರದಿಂ.
"ಇದೆ ಕಣಾ
ದಿವ್ಯತೀರ್ಥಂ ಪ್ರಯಾಗಂ. ಇಲ್ಲಿ ಕಳೆ ನಮ್ಮೊಡನೆ
ವನವಾಸ ಕಾಲಮಂ." ರಾಮನೆಂದನ್ ಋಷಿಗೆ:
"ಗುರುವರ, ವಿವಿಕ್ತಮಿದು ರಮಣೀಯಮಪ್ಪೊಡಂ
ಸಾಕೇತಕತಿ ಸಮೀಪಾಶ್ರಮಂ. ತಿಳಿದೊಡನೆ,
ಗುಂಪಾಗಿ ಬರ್ಪರಂ ಪ್ರಜೆಗಳಂ ಮಿತ್ರರಂ
ದರ್ಶನ ಕುತೂಹಲಿಗಳಂ ತಡೆಯಲಾಗುವುದೆ?

ಜನಪದಕೆ ದೂರಾಗಿ, ಜನಕೆ ದುರ್ಗಮವಾಗಿ,
ಮೇಣೆಮ್ಮ ಜೀವನಕೆ ದುಷ್ಪಮಲ್ಲದುದಾಗಿ,
ಸುಖಯೋಗ್ಯೆ ಜನಕಜೆಯ ಸುಖಕರ್ಹಮಾದೊಂದು
ಮತ್ತೊಂದು ತಾವನಾಲೋಚಿಸೆಮಗರುಹು; ನೀಂ
ವನಲೋಕ ಸಂಚಾರಿ!'' ತನ್ನ ನೆನಹಿನ ನಿಧಿಗೆ
ಕೈಯಿಕ್ಕಿ ಹುಡುಕಿದನೊ? ವಿಧಿಮನವನರಸಿದನೊ?
ಮುಂದಿರ್ದ ಗಿಡದ ಹೂವೊಂದರೊಳ್ ಕಣ್ ನಟ್ಟ
ಮುನಿ ತಲೆಯನೆತ್ತಿದನ್: ''ಆಲಿಸಾದೊಡೆ, ವತ್ಸ,
ಇಲ್ಲಿಗೀರೈದು ಹರಿದಾರಿ ದೂರದೊಳೊಂದು
ತಾನಿರ್ಪುದು ನಗಂ. ಪೆಸರದಕೆ ಕೇಳ್ ಚಿತ್ರಕೂಟಂ.''
ಕೇಳ್ದರೆದೆ ಸೊಗಸುವೋಲ್ ಋಷಿ ರಸಾವೇಶದಿಂ
ಬಣ್ಣಿಸಲ್ಕೊಪ್ಪಿ ರಘುಜಂ, ಚಿತ್ರಕೂಟಕ್ಕೆ
ಪಯಣಮಂ ತರಿಸಂದು, ಸೀತೆ ಲಕ್ಷ್ಮಣರೊಡನೆ
ಬೀಳ್ಕೊಂಡನಾಶ್ರಮಸ್ನೇಹಮಯ ವಲಯಮಂ
ಬಾಷ್ಪಲೋಚನನಾಗಿ. ಸಂಗಮಂ ಬಳಿಸಾರೆ,
ಋಷಿ ಪೇಳ್ದ ತೆರದಿಂದೆ, ತುಸು ಪಡುವಲಕ್ಕೊಲೆದು,
ಯಮುನಾ ನದಿಯ ತಟದ ಸಮೆದ ಕೀಳ್ವಟ್ಟೆಯಂ
ಪಿಡಿದು ನಡೆತರೆ, ದಾಂಟುದಾಣದಾ ಬಿರುವೊನಲ್
ಕಾಲ್ಗಡ್ಡಮಾಗಿ ಕಣ್ಗೆಡ್ಡಮಾದುದೊ ಮುಂದೆ
ಕಾಳಿಂದಿಯಾ. ಮುರಿದ ಪೆರ್ಮರಗಳಿಂ ತಂದ
ಕಾಷ್ಠೌಘಮಂ ಹರಡಿ, ಒಣಬಿದಿರನೋಳಿಯಿಂ
ಮೇಲೆ ಸಾಲಿಟ್ಟು, ಬೆತ್ತದ ಬಳ್ಳಿಮಿಣೆಗಳಿಂ
ಬಿಗಿ ಹೆಣೆದು ಕಟ್ಟಿ ರಚಿಸಿದರೊಂದು ತೆಪ್ಪಮಂ,
ಮೈಥಿಲಿಯ ನೆರಮಂ ನಿರಾಕರಿಸದೆ. ಲಕ್ಷ್ಮಣಂ
ಚಿಗುರೆಲೆಯನೊಟ್ಟಿ ಮಣೆಯಂ ಮಾಡೆ, ಲಲನೆಯಂ,
ಮೊಗಕೆ ನಾಣ್ಗೆಂಪೇರುತಿರ್ದಳಂ ಪಿಡಿದೆತ್ತಿ
ಕುಳ್ಳಿರಿಸಿದನು ರಾಮಚಂದ್ರಂ, ಉದಿಸೆ ಲಜ್ಜಾಸಂಧ್ಯೆ
ತನ್ನ ಮುಖದಿಶೆಯ ನೀಲಿಮೆಯೊಳುಂ. ಪಿಟಕಮಂ
ವಸನ ಭೂಷಣ ನಿಚಯಮನ್ನಾಯುಧಂಗಳಂ
ಪ್ಲವದೊಳಿಟ್ಟೇರಿದನ್ ದಾಶರಥಿ. ಲಕ್ಷ್ಮಣನದಂ
ದಡದೆಡೆಯ ತಳ್ಳಿ ನಿಲ್‌ನೀರಿಂದೆ ಹರಿನೀರ್ಗೆ

ನೂಂಕಿದನ್ ನೀಳ್ಗಳುಗಳಿಂ. ಬಿರುನಡೆಯ, ತೆರೆಯುಡೆಯ,
ಪೊಸತು ತೆಂಗಾಯ್‌ತುರಿಯ ಬಿಳಿಯ ಮುದ್ದೆಯ ನೊರೆಯ,
ಜಲಘೋಷದಾವೇಶದಿನಸುತಾ ಸ್ರೋತದೊಳ್
ತೇಲಿದುದು ಚಿಮ್ಮಿದತ್ತೋಡಿದತ್ತಾ ಪ್ಲವಂ
ಜಲತರಂಗ ತುರಂಗಗಳನೇರಿದೋಲಂತೆ,
ಸೀತೆಯ ಹೃದಯಕೊಂದು ರಮಣೀಯ ಭೀಷಣತೆ
ಬಿತ್ತೆ ಸುಖಭೀತಿಯಂ. ದಕ್ಷಿಣ ತಟಂ ಮುಟ್ಟಲಾ
ಉಡುಪದಿಂದಿಳಿದು ಯಮುನಾ ವನಂ ಬೊಕ್ಕರಾ
ಶೀತಲ ಶ್ಯಾಮ ಸೌಂದರ್ಯಮಂ. ಮೃಗಪಕ್ಷಿ
ಸುಮ ಸಮೂಹದ ವಿವಿಧ ಚೈತ್ರ ವೈಚಿತ್ರ್ಯಮಂ
ಸವಿಯುತೆಯ್ದಿದರೆರಡು ಹರಿದಾರಿ ದಾರಿಯಂ.
ಬೇಂಟೆಯಾಡಿದರಲ್ಲಿ ಮೇಧ್ಯಂಗಳಂ ಮೃಗಗಳಂ.
ಭೋಜನಂಗೈದೊರಗಿದರ್ ನದೀ ವಪ್ರದಾ
ಸಮತಲದೊಳೊಂದು ಶಾದ್ವಲದಿ. ಆ ವನರಾತ್ರಿ,
ನಿಶ್ಶಬ್ದತೆಯ ತೊಟ್ಟಿಲೊಳ್ ನದಿಯ ಮೊರೆಸಿಸುವನ್
ಇಟ್ಟು ತೂಗಿದವೋಲೆ, ತೂಗಿದುದು ಮೂವರಂ
ನಿದ್ರಾ ಸಮಾಧಿಗೆ. ವಿಹಂಗ ಮಂಗಲ ಸಂಘ
ಕಂಠ ವೀಣಾವಾಣಿ ರಾಮನನ್ನೆಳ್ಚರಿಸೆ,
ಲಕ್ಷ್ಮಣನನೆಳ್ಚಿಸಿದನಾತನುಂ ತಂದ್ರಿಯಂ
ಬಿಟ್ಟೇಳಲನಿಬರುಂ ತೊರೆಯ ಶಿವಸಲಿಲದೊಳ್
ಮೊಗಂದೊಳೆದು ಮುಂಬರಿದರಾ ಚಿತ್ರಕೂಟಕ್ಕೆ.
    ಬಿದಿರುಮೆಳೆಯಲಿ ಕಳಲೆಗಳನಿಳ್ದು ಲರಿಲರಿಲ್
ಲರಿಲೆಂದು ಮುರಿದು ತಿನುತಿರ್ದಾನೆಃ ನೆನೆಯದಂ;
ಚಿತ್ರಿಸಿಕೊ! ಮರವಲುಗಿ ಪಣ್‌ವೆರಸಿ ಕಾಯ್ಗಳುಂ
ಕೆಡೆಯುವೋಲ್, ಕೊಂಬೆಯಿಂ ನೆಗೆದು ಕೊಂಬೆಗೆ ಹಾರಿ
ಕೀರುತೋಡುವ ಬಣ್ಣಗಪಿವಿಂಡುಃ ನೆನೆಯದಂ;
ಚಿತ್ರಿಸಿಕೊ! ಹೂದಿಂಗಳ್ಕೆತರಲ್ಕೊಸಗೆಯಿಂ
ಬನದೇವಿ ದೀಪೋತ್ಸವಂಗೈವಳೆಂಬಂತೆ
ಮೊಗ್ಗುಗೊಳ್ಳಿಗಳಿಂದೆ ಪೊಂಜಿನುರಿವೂವಿಂದೆ
ರಂಜಿಸುವ ಮುತ್ತುಗದ ಮರಗಳಂಃ ನೆನೆ, ಮನವೆ;
ಚಿತ್ರಿಸಿಕೊ! ಬೆಟ್ಟಮಂಡೆಯ ಬಂಡೆಹಣೆಯಿಂದೆ

ಚಾಚಿದಾ ಕಲ್ಗೋಡಿನಿಂ, ಮತ್ತೆ ಹೆಮ್ಮರದ
ಹೆಗ್ಗೋಡಿನಿಂ, ನೇಲ್ದು, ತುಪ್ಪದ ಹೊರೆಗೆ ಜೋಲ್ದ
ಹೆಡಗೆಯೊಡಲಿನ ಹುಟ್ಟಿಹೆಜ್ಜೇನ್ಗಳಂ: ನೆನೆದು
ಸವಿ, ಮನವೆ; ಚಿತ್ರಿಸಿಕೊ! ನೆತ್ತಿಯಿಂ ಪರಿತಂದು
ಕಿಬ್ಬಿಗುರುಳ್ವಬ್ಬಿ ಬೆಳ್ಳಂಗೆಡೆವ ಚುಂಚಿಯಾ
ನೀರ್‌ಬೀಳಮಂ: ನೆನೆ ನವಿರ್ ನಿಮಿರಿ!—ಅದೊ ಅಲ್ಲಿ,
ಕಣ್‌ತುಂಬೆ ಕಾಣುತಿದೆ ಚಿತ್ರಕೂಟಂ! ಶಿವಾ,
ಸೊಗಸು ನೋಟಂ! ವಿಪಿನಶಿವ ಜಟಾಜೂಟಂ!
ಮೆಯ್ಮರೆತು ಕಂಡರಾ ದೃಶ್ಯದೇವೇಂದ್ರನಂ
ಮೆಯ್ಯೆಲ್ಲ ಕಣ್ಣಾಗಿ, ಕಣ್ಣಾರುಮೊಂದಾಗಿ,
ಕಣ್ಣೊಂದುಮಿಲ್ಲದಾತ್ಮಾನಂದ ರಸವಾಗಿ:
ಅಂತಹೀನ ಮಹಾಂತ ಸಂತತಮವಿಶ್ರಾಂತ
ಜಲಧಿಯ ಬೃಹನ್ನೀಲಿಮಾ ವಿರಾಡ್‌ರಂಗದೊಳ್
ತೆರೆಯನಟ್ಟುವ ತೆರೆಯನಟ್ಟುವ ತೆರೆಯ ತೆರದಿಂ
ಗಿರಿಯನಟ್ಟುವ ಗಿರಿಯನಟ್ಟುವ ಗಿರಿಯ ಪಂಕ್ತಿಗಳ್
ಪರ್ವಿದುವು ದಿಟ್ಟಿ ಹೋಹನ್ನೆಗಂ ಮೇಣ್ ಕಣ್ಣಲೆದು
ಸೋಲ್ವನ್ನೆಗಂ. ಸಾಂದ್ರ ರೋಮರಾಜಿಯ ರುಂದ್ರ
ಚರ್ಮದೊಂದತಿಪೂರ್ವ ಭೂ ಬೃಹಜ್ಜಂತುವೆನೆ
ಹಬ್ಬಿ ಹಸರಿಸಿತುಬ್ಬಿತಡವಿ ದಟ್ಟಯ್ಸಿದಾ
ದಿಟ್ಟ ಮಲೆಪೊಡವಿ. ಮಂದಾಕಿನಿಯ ಪೆರ್ವೊನಲ್
ಗಿರಿಗೆ ಮೇಖಲೆಯಾಗಿ ಕಂದರದ ಸೀಮೆಯಂ
ಸಿಂಗರಿಸಿದತ್ತು. ಕಿರುವೊನಲ ತೊರೆ ಮಾಲ್ಯವತಿ
ತಾನದ್ರಿಶಿರದಿಂ ರಜತರೇಖೆಯೋಲಿಳಿದು
ಕಂಗೊಳಿಸಿದತ್ತು, ಚಿನ್ನದ ಜನ್ನಿವಾರಮೆನೆ
ತಳತಳಿಸಿ, ಸಾಯಂ ಸಮೀಪ ದಿವಸೇಶ್ವರನ
ಕನಕಕಾಂತಿಯಲಿ. ಆ ಶೈಲ ಭೈರವ ಋಷಿಗೆ
ದರ್ಶನದಿನಾವೇಶವಶರಾದ ಮೂವರುಂ
ಕೈಮುಗಿದರರ್ಪಿಸಿದರಧ್ಯಾತ್ಮ ನೈವೇದ್ಯಮಂ!

## ಸಂಚಿಕೆ ೮

# ಕುಣಿದಳುರಿಯ ಉರ್ವಶಿ!

ವಾಣಿ, ಓ ಪ್ರಾಣವೀಣಾಪಾಣಿ, ಕವಿಯೆರ್ದೆಯ
ರಸರಾಣಿ, ಮಿಡಿಯೆನ್ನಾತ್ಮತಂತ್ರಿಯಂ; ನುಡಿಸೆನ್ನ
ಹೃದಯಮಂ; ನಡಸೆನ್ನ ಈ ಮಹಾಕಾವ್ಯಮಂ,
ತಾಯಿ ಕಂದನ ಕೈಯನಾನುತೆ ನಡೆಯಿಪಂತೆ.
ಬೇಡುತಿಹೆನಡಿಗಡಿಗೆ ನಿನ್ನಡಿಗೆ ಮುಡಿಚಾಚಿ:
ತಿಳಿಯದವರಾಡಿಕೊಳಲತಿಯೆಂದು! ಬಲ್ಲೆನಾಂ
ಮುಂದಿರುವ ಯಾತ್ರೆಯ ಮಹದ್ದೂರಮಂ, ಬೃಹದ್
ಭಾರಮಂ, ರುಂದ್ರ ಪಾರಾವಾರಮಂ: ಹಸುಳೆ
ಹೆಗ್ಗಾಡಿಗಳಕುವೋಲಳುಕಿದಸುಶಿಶು ಹೆದರಿ
ಬೇಡುತಿದೆ ನಿನ್ನನಡಿಗಡಿಗಿಂತು, ಓ ತಾಯೆ!—
ರಣದ ಸಾಹಸಕಥೆಯ ಬಣ್ಣನೆಗೆ ಬಡತನವೆ ಹೇಳ್?
ಹೇರಳಂ! ದಿನದಿನದ ಸಾಧಾರಣದ ಶಾಂತ
ಸರಳ ಜೀವಿತದ ವರ್ಣನೆಯೆ ವಿರಳಂ. ನಾನದನೆ
ಕೈಕೊಂಡೆಸಗಲೆಳಸುವೆಂ; ಪರಕೆಯಿರಲೆನಗೆ
ನಿನ್ನಮೃತ ವರದ ಕರದಾ, ದೇವಿ ಓ ಶಾರದಾ!
ಕೊಲೆಯ ಕಥೆ ಬಗೆಸೆಳೆಯುವಂತೆ ರಾಮನ ಮನದ
ಕಲೆಯ ಕಥೆ ತಾಂ ಬಗೆಗೊಳಿಪುದೇನಳಿವಗೆಯ ರುಚಿಯ
ದೀನರಿಗೆ? ನನ್ನೀ ಕೃತಿಯನೋದುವಾತ್ಮರಾ
ದಾರಿದ್ರ್ಯಮಂ ಪರಿಹರಿಸಿ, ಓ ಸರಸ್ವತಿಯೆ,
ನೆಲಸಲ್ಲರಸಿಯಾಗಿ, ಸಹೃದಯ ಸರಸಲಕ್ಷ್ಮಿ!
ತುಂಬಿದತ್ತೊಯ್ಯನೊಯ್ಯನೆ, ಕಣಿವೆಯಾಳಮಂ

ಮೇಣಗಲಮಂ, ಪಶ್ಚಿಮ ಶಿಖರಿ ಛಾಯೆ. ಯಾಮಿನಿಯ
ಸೀರೆಯಂಚಿನ ಸೆರಗು ಮುಸುಗಿದತ್ತಡವಿಯಂ
ಚಿತ್ರಕೂಟಾದ್ರಿಯಾ. ಗೂಡಿಗೋಡಿತು ಹಕ್ಕಿ;
ಹಕ್ಕೆಗೋಡಿತು ಮಿಗಂ. ಮೌನವಾಂತುದು ನಗಂ
ವಜ್ರರೋಮ ಮಹರ್ಷಿಯಾ ಧ್ಯಾನಗೌರವಕೆನಲ್.
ಮುಚ್ಚಲ್ಕೆ ಯೋಗೀಂದ್ರನಾ ಬಹಿರ್ ನಯನೇಂದ್ರಿಯಂ
ಬಿಚ್ಚುವಂದದೊಳಾತ್ಮದಕ್ಷಿಗಳ್ ಕೋಟ್ಯನುಕೋಟಿ,
ಹಗಲ ಕಣ್ಣದು ಮುಚ್ಚಲಿರುಳ ಕಣ್ಣುಗಳರಳುವೊಲ್,
ರಾಜಿಸಿದುವರಿಲ ಕಿಡಿಗಳ್ ಬಾನ್ ಪಟದೊಳಿಣುಕಿ
ಮಿಣುಕಿ. ಶಿಷ್ಯರನವರವರ ಪರ್ಣಕುಟಿಗಳ್ಗೆ
ಕಳುಹಿ, ತನ್ನಾಶ್ರಮದ ಮುಂದೆ ಬಂಡೆಯನೇರ್ದು
ಪದ್ಮಾಸನವನಿಕ್ಕಿ ಕುಳಿತಾ ವಜ್ರರೋಮಂ
ನೋಡುತಿರೆ ಕಣ್ಬೊಲದ ಕಂದರದ ಕಾಂತಾರ
ವಿನ್ಯಾಸಮಂ, ಕಂಡನೊಂದಿದಿರೆಳ್ದ ಗಿರಿ ಶಿರದಿ,
ಸಂಜೆ ಬಾನ್ಗೆದುರಾಗಿ, ಕೆತ್ತಿದೋಲಂತಿರ್ದ
ಮೂರು ನರರೂಪಿ ಮಸಿಯಾಕೃತಿಗಳಂ. ನೋಡಿ,
ಸಿಂಹಾಕೃತಿಯ ಮಹಾ ರೂಕ್ಷ ಶೈಲೋಪಮಂ
ಭೀಮಕಾಯಂ ಕಠಿನ ಗಂಭೀರನಾ ಯೋಗಿ,
ಕೌತುಕಂಬಟ್ಟರುಂ ವಿಸ್ಮಯಕ್ಕೆಡೆಗೊಡದೆ,
ಮಗ್ನನಾದಂ ಧ್ಯಾನದದ್ವೈತ ನಗ್ನತೆಗೆ!
    ವಜ್ರರೋಮನ ಚಿತ್ತವಜ್ರದ ಮಹಿಮೆಗಳ್ಕುತಾ
ವ್ರತಿಯ ಕೈಂಕರ್ಯಮಂ ನೋಂತಿರ್ದ ವ್ಯಾಘ್ರಮುಂ
ಧ್ಯಾನಸ್ಥಮುನಿಯ ಪಕ್ಕದೊಳರೆಯ ಮೇಲಿರ್ದು
ನೋಡುತಿರೆಯಿರೆ ಬೈಗುಮಬ್ಬು ತೀವುತ್ತಿರ್ದ
ದೃಶ್ಯವಿಸ್ತೀರ್ಣಮಂ, ಕಂಡುದೇನನೊ! ನಗಂ
ಶತಗುಹಾಧ್ವನಿಗಳಂ ಪ್ರತಿಘರ್ಜಿಪೋಲಂತೆ,
ನೀರವ ಮಹಾರಣ್ಯಮನುರಣಿತಮಪ್ಪಂತೆ,
ಕುಳ್ತ ಬಂಡೆಯುಮದುರಿ ಕಂಪಿಸುವಂತೆ, ಕೇಳ್ದರೆದೆ
ಹೆಪ್ಪುಗಡುವಂತೆ ಘರ್ಜಿಸಿದುದಾ ಅದ್ವೈತಿ ತಾಂ
ದ್ವೈತಿಯಪ್ಪಂತೆ! ಕಣ್ದೆರೆದ ಮುನಿ ಕೈಯೆತ್ತಿ
ತಟ್ಟಿ ತಲೆಯಂ ಸವರಿ ಬೋಳೈಸೆ, ಆ ಪ್ರಾಣಿ

ಕಂಠಘೋಷವನಕ್ಷಿರೋಷದಿಂ ತೋರ್ಪುದೆನೆ
ನೋಡುತಿರೆ, ಅತ್ತ ಕಣ್ಣಾದವಗೆ ಕಾಣಿಸಿತು
ಸೀತಾ ತೃತೀಯ ರಾಮಾಕೃತಿಯ ಧೀರಗಮನಂ.
ಪುಲಿ ಪುಲಿಯನರಿವಂತೆ, ಪುಲಿಯವೊಲೆ ಸಿದ್ಧನುಂ
ಪ್ರೀತಿಯಿಂದತಿಥಿಗಳನರಿತುಮುಪಚರಿಸಿಯುಂ
ಕಳೆದನಿರುಳಂ. ಮರುದಿನಂ ತಪೋವನ ಜನದ
ತನುಮನ ಸಹಾಯದಿಂ ಕಟ್ಟಿದನು ಸೌಮಿತ್ರಿ,
ಮಲೆಯ ಬಿರುಮಳೆಗಾಳಿಗಳಿಗೆ ಮಲೆತುಳಿವಂತೆ,
ಪರ್ಣಶಾಲೆಯನೊಂದನೆತ್ತರದೊಳಾ ಗಿರಿಯ
ದರ್ಶನಸ್ಥಾನಮುಂ ದೂರವಿಸ್ತಾರದಾ
ದೃಶ್ಯದಾಸ್ಥಾನದಧ್ಯಕ್ಷತಾ ಸ್ಥಾನಮುಂ
ತಾನೆನಿಪ ಗಿರಿಭುಜಸ್ಥಾನದಲಿ. ಅನಂತರಂ
ದೇವರಿಗೆ, ಗೃಹದೇವತೆಗೆ, ಚಿತ್ರಕೂಟ ಗಿರಿ
ದೇವನಿಗೆ, ಕಾಂತಾರದಧಿದೇವಿಯರಿಗೆ, ರವಿ
ಗಗನದಭಿಮಾನಿಗಳಿಗಖಿಲ ಪಿತೃಋಷಿಗಳಿಗೆ
ವಾಸ್ತುಕರ್ಮಾದಿ ಬಲಿ ಶಾಂತಿ ಕರ್ಮಂಗಳಂ
ನೆಗಳ್ದಾ ಜಿತೇಂದ್ರಿಯರ್ ಮರಬಳ್ಳಿಯೋರಣದ
ಹೂ ತಳಿರ್ ತೋರಣದ ದೇವಸುಖಕಾರಣದ
ಸುಪವಿತ್ರ ಪತ್ರವೇಶ್ಮಂ ಬೊಕ್ಕರಾತ್ಮಮಂ
ಪುಗುವ ಪುಣ್ಯಂಗಳೋಲ್.
ಅರಮನೆಯೊಳಿಹುದೇನೊ?
ಅರಸುತನಮೆದೆಯೊಳಿರೆ ಕಾಡರಮನೆಗೆ ಕೀಳೆ?
ರಸವಿಲ್ಲದಿಹ ಬಾಳಿಗರಮನೆಯೆ ಮರುಭೂಮಿ.
ರಸಿಕಂಗಡವಿ ಸಗ್ಗಕಿಂ ಮಿಗಿಲ್ ಸೊಗಸಲ್ತೆ,
ಜೊತೆಯಿರಲ್ಕೊಲಿದ ಪೆಣ್, ಮೇಣ್ ಕಾಣ್ಬ ಕಬ್ಬಿಗಣ್?
ಕಣ್ಣುಪೆಣ್ಣುಗಳೆರಡುಮಂ ಪಡೆದ ರಾಮಂಗೆ
ಎಲೆವನೆಯೆ ಕಲೆಯ ಮನೆಯಾಯ್ತು; ವಿಪಿನಾಂಗಣಂ
ರಸತಪೋರಂಗಕೆಣೆಯಾಯ್ತು. ದಿನಂಗಳೆದಂತೆ
ಮೊದಮೊದಲ್ ಪರಕೀಯಮಪರಿಚಿತಮಾಗಿರ್ದ
ಗಿರಿವನಂ ಪರಿಚಯದಿನಾತ್ಮೀಯ ಭಾವಮಂ
ತಳೆದುದು ಸಲಿಗೆವೆತ್ತು: ಅಂದು ಕಲ್ಲಾಗಿರ್ದ

ಕಲ್ಲೀಗಳಾದುದಯ್ ನೆನಹಿಗೆ ನಿಕೇತನಂ.
ಹಿಂದೆ ಬರಿ ಮರವಾದುದಿಂದವರ ಬಾಳ್ಗೊಂದು
ಸಂಕೇತವಾಯ್ತು. ಬಂದಂದು ಆ ಕಾಡಿನೊಳ್
ಬರಿ ಬಳ್ಳಿಯಾಗಿರ್ದುದಿಂದು ತಮ್ಮೆಲೆವನೆಯ
ಮುಂದಣಂಗಣದಂಚಿನಲ್ಲಿ ತಮ್ಮೆರ್ದೆಬಾಳ್ಗೆ
ನಿತ್ಯಸಾಕ್ಷಿಗೆ ನಿಂದದೊಂದು ಕೇತನವಾಯ್ತು.
ಅಪ್ರಮುಖ ವಸ್ತುಗಳ್ಗಲ್ಪತ್ವಮಳಿದುದಯ್
ಅನುಭವದ ಘನಮಹಿಮೆಯಿಂ. ಭಾವ ಪರಿವೇಷಮಂ
ಪಡೆದು, ಜಡವೇಷಮಂ ಪಿಂಗಿದಾವೇಶದಿಂ
ಪ್ರಾಣಮಯಮಾಗಿ ಮೇಣರ್ಥಮಯಮಾಗಿ ಕೇಳ್
ಸ್ಮೃತಿಕೋಶವಾದುವಯ್ ಆ ಒಂದೊಂದು ವಸ್ತುವುಂ
ತೊರೆದಚಿದ್ಭಾವಮಂ.
                    ಆ ಕಲ್ ಬರಿಯ ಕಲ್ಲಾಗಿ
ಕೆಡೆದಿರ್ದುದಲ್ಲಿ ಯುಗಯುಗಗಳಿಂ. ಸೀತೆ ತಾಂ
ಕಂಡಾ ಮೊದಲ್ ಕಲ್ಲಲ್ಲದೇನುಮಾಗಿರಲಿಲ್ಲ.
ಒರ್ದಿನಂ ಪರ್ಣಶಾಲೆಯ ಮುಂದೆ ಪತಿಯೊಡನೆ
ಮಾತಾಡುತತ್ತ ನೋಡಿದಳಯ್ಯೊ ಸೋಜಿಗಂ!
ಆ ಕಲ್ಗದೇನೊ ಆಕೃತಿ ಬಂದವೋಲ್ ತೋರಿ,
ಬೆರಗಾಗಿ ತೋರ್ದಳಿನಿಯಂಗಾತನುಂ ಕಂಡು
ಕೌತುಕಂಬಟ್ಟನಿರ್ವರುಮದಕೆ ಪೆಸರಿಟ್ಟು
ಕರೆಯತೊಡಗಿದರಂದಿನಿಂ 'ಕಲ್ದವಸಿ' ಎಂದು.
ಮತ್ತೊರ್ದಿನಂ, ಬೈಗುಗಪ್ಪಿಳಿಯುತಿರೆ, ಸೀತೆ
ಮರ್ಬಿನೊಳ್ ಕಂಡಳಾರನೊ ಕಲ್ಲ ನೆತ್ತಿಯೊಳ್;
ಪಣತೆಸೊಡರೊಳ್ ತಾನಗಂ ಓದುತಿರ್ದನಿಯನಂ
ಕರೆದು ತೋರಿದಳು ಹೆದರೆದೆಯ ಹೆಣ್. ರಾಮನುಂ
ಸೋಜಿಗಂಬಡುತೆ ಗುರುತಿಸೆ ನೋಡಿದನ್. ಕೂಡೆ
ಶೋಕ ಮುಖಭಂಗಿಯಿಂದಶ್ರುಲೋಚನನಾಗಿ
ನಿಡುಸುಯ್ದುಸಿರ್ದನೊಂದನೋಲ್. ಸೀತೆಗರಿವಾಯ್ತು
ತೆಕ್ಕನಾ ಕಲ್ಲ ನೆತ್ತಿಯ ಮೂರ್ತಿ ತಾನಾರೆಂದು:
ಸೌದೆಯಂ ಪೊತ್ತು ತಂದಲ್ಲಿ ವಿಶ್ರಮಿಸಿರ್ದನಾ
ಊರ್ಮಿಳಾ ವಲ್ಲಭನದೈಸೆ! ನೆನೆದಾಕೆಯಂ

ಬೇಯುತಿರುವನೆ? ಬೇಡುವನೆ ದೇವರಂ ತನ್ನ
ಸತಿಗಾಗಿ? ಸುಯ್ದರ್ ಕೃತಜ್ಞತಾಭಾರದಿಂ
ದಂಪತಿಗಳಿರ್ವರುಂ. ಮಾತನುಳಿದಳ್ ಸೀತೆ.
ಭಗವನ್‌ಮೌನಿ ರಾಮನಲ್ಲಿಂದೆ ತಮ್ಮನಂ
ನುಡಿಸಲೆಂದೈದಿದನ್ 'ಕಲ್ದವಸಿ'ಯೆಡೆಗೆ. ಆ
ಸಂಜೆಯಿಂದಾ ಬಂಡೆ, ಕಲ್ದವಸಿ, ಊರ್ಮಿಳೆಗೆ
ಮೇಣವಳ ಸಂಯಮಕೆ ಪಡಿಮೆಯಾದುದು; ಮತ್ತೆ
ಗುರುವಾದುದೆಚ್ಚರಿಕೆಯಾದುದೈ ಸತಿಗೆ ಮೇಣ್
ಪತಿಗೆ.

ಪರ್ಣಶಾಲೆಯ ಪೂರ್ವದ ಗವಾಕ್ಷದಿಂ
ಕಾಣುತಿಹುದದೊ ನೀಲದೂರಕ್ಕೆ ಮೃದುಲಮೆನೆ
ತೋರ್ಪ ಶಿಖರೇಶ್ವರಂ. ಸೀತೆಯ ಮನಕೆ, ಮತ್ತೆ
ರಾಮನ ಮನಕೆ, ಮತ್ತೆ ಲಕ್ಷ್ಮಣ ಮನಕೆ ಬೇರೆ
ಬೇರೆನಿತೆನಿತೊ ಗುಹ್ಯ ಭಾವಲೋಕಂಗಳಂ
ಸೃಷ್ಟಿಸಿಹುದದರಿಂದಮವರವರ ದೃಷ್ಟಿಗದು
ಮೆರೆಯುತಿದೆ ಬೇರೆ ಬೇರೆಯ ರಸಕೆ ನಿಧಿಯಾಗಿ,
ವಿಧಿಯಚಲ ಸಾನ್ನಿಧ್ಯಮಾಗಿಃ ಜನಕಜೆಯಡುಗೆ
ಮಾಡುತಿರಲತ್ತಣೆಂದೇಳ್ವನಾ ಉದಯರವಿ!
ಅಡುಗೆಯ ಮನೆಯ ಹೊಗೆಯ ನೀಲಿಗೆಳನೇಸರಾ
ಬಿಸಿಲ್‌ಪಸುಳೆ ತನ್ನ ನಳಿದೋಳ ಕಯ್‌ವೆರಳ್ಗಳಂ
ಕೋಲು ಕೋಲನೆ ಬೀಸುತೋಲಾಟವಾಡಿ ಬರೆ,
ಪಾಕ ಕಾರ್ಯವನುಳಿವಳೈ ದೇವಿ, ಸವಿಯಲಾ
ಸೊಗಮುಕ್ಕುವಾ ಕಣ್ಗಳೊಸಗೆಯಂ. ಮತ್ತೊರ್ಮೆ
ಬೆಣ್ಣೆ ಬಣ್ಣದ ನುಣ್ಣನುಣ್ಣೆಮುಗಿಲೈತಂದು
ಬೆಟ್ಟನೆತ್ತಿಯನಪ್ಪುತಾಲಿಂಗನದ ಸುಖಕೆ
ಪರವಶತೆವೆತ್ತು ನಿಂದಿರೆ ನಿಶ್ಚಲಂ, ತರಳೆ
ಗಗನದೌನ್ನತ್ಯಕೇರ್ದಾ ಶಿಖರಮೌಳಿಯಂ
ರಾಜರ್ಷಿ ಜನಕರಾಜಂ ಗೆತ್ತು, ತೆಕ್ಕನೆಯೆ
ತಂದೆಯನಿದಿರ್‌ಗೊಂಡವೋಲಾಗಿ, ಮಣಿದಳಾ
ಭವ್ಯಮುದ್ರೆಯ ರಜತಕೇಶಾದ್ರಿದೇವಂಗೆ.
ಮಗುದೊಂದಿರುಳ್ ಧರಣಿಪುತ್ರಿ ಪತಿ ಮೈದುನರ

ಕೂಡೆ, ಶಶಿಮೌಳಿಯೆಂಬೀರೈದು ವತ್ಸರದ,
ಚಂಚಲ ವಿನೋದಶೀಲದ, ಲಲಿತರೂಪದ
ಋಷಿಕುಮಾರನಾಶ್ರಮದ ಗೋವನಟ್ಟುತ ಬಂದು,
ತನ್ನೊಡನೆ ಗಳಪಿ, ತಾನಿತ್ತುಣಿಸನೊಲಿದುಂಡು,
ಬೇಡವೆನೆಯುಂ ಬಿಡದೆ ತನ್ನೊಡನೆ ಮುಸುರೆಯಂ
ತಿಕ್ಕಿ, ಕಯ್ ಮೆಯ್ ಮೋರೆ ಮಸಿಯಾಗಿ ಹೋದುದಂ
ಹೇಳುತಿರ್ದಳ್ ಭಾವವಶಳಾಗಿ. ಮತಿಭೂಮನಾ
ಶ್ರೀರಾಮನುದ್ದಾಮನಾ ವೀರಲಕ್ಷ್ಮಣನುಮಾ
ಅಲ್ಪಮಂ ಕೇಳುತಿರ್ದರ್ ಮಹೋಲ್ಲಾಸದಿಂ,
ನಡುನಡುವೆ ನಗುತಳ್ಳೆಬಿರಿವಂತೆ. ಮುದ್ದುಗತೆ
ಮುಗಿವ ಮುನ್ನಮೆ, ಕಿಟಕಿಯಾಚೆಯಾ ಕವಿದಿರ್ದ
ಕಗ್ಗತ್ತಲೊಳ್, ಜ್ವಾಲೆ ಮೆರೆದುದು ಮನೋಹರಂ
ಶಿಖರೇಶ್ವರನ ಶಿರದಿ. ರಾತ್ರಿಯಾಕಾಶದಾ
ತಾರಾ ಸಹಸ್ರಾಕ್ಷನೋಲಗದಿ ನರ್ತಿಸುವ
ಉರಿಯ ಉರ್ವಶಿಯೆನಲ್ಕಾ ಕಾಡುಗಿರ್ಚ್ಚೆಸೆಯೆ,
ನಿಟ್ಟಿಸಿದರಾ ಚೆಲ್ವನೆಳಮಕ್ಕಳೋಲಂತೆ
ಬಾಯ್ದೆರದ ಬೆಳ್ಳಚ್ಚರಿಗೆ ಮನಂ ಮಾರ್ವೋದವೋಲ್!
ಹೊರತೇನೊ ಹಾಸ್ಯರಸಮಖಿಲ ರಸನಿಧಿ ಚಂದ್ರ
ಸದೃಶಂಗೆ? ಒಂದು ದಿನಮಿನನುದಯದಲಿ ತರಳೆ,
ಸೀತೆ, ರವಿಕರ ಕಾಂತ ಕಾಂತಾರದಂತರದಿ
ನಲವಿಂದಿಳಿದು ಬಂದು, ವೇಗಗಾಮಿನಿ ಸಲಿಲ
ಯೌವನಾ ಮಾಲ್ಯವತಿಯಲ್ಲಿ ಋಷಿಸತಿಯರಂ
ಕಂಡು, ವಂದಿಸಿ, ನುಡಿಸಿ, ಸಂತೋಷದಿಂ ಮಿಂದು,
ಬೆಳ್ನಾರುಡೆಯ ತೆಳ್ಮಡಿಯನುಟ್ಟು, ಮುಗುಳಲರ್
ಪೆಣ್ಣಾಯ್ತೊ ಪೆಣ್ಣೆ ಮುಗುಳಲರಾಯ್ತೊ ಹೇಳೆಂದಡವಿ
ಸೋಜಿಗಂಬಡುತಿರಲ್ ತಮ್ಮೆಲೆವನೆಗೆ ಮರಳ್ದು
ಏರಿ ನಡೆದಡುಗೆ ತೊಡಗಿದಳು. ಪಸಿ ಸೌದೆಯಿಂ
ಪೊಗೆಯಲ್ಲದುರಿದೋರಲೊಲ್ಲದಿರೆ, ಧರಣಿಸುತೆ
ಮುಳಿದೊಲೆಯ ಮೋರೆಯಂ ತಿವಿದು ಕಟ್ಟಿಗೆಯಿಂದೆ,
ಕಣ್ನೊರಸಿ, ಮೂಗೊರಸಿ, ಮೊಗಮೆಲ್ಲ ಮಸಿಯಾಗೆ,
ಮಿಂದುಟ್ಟ ಮಡಿ ಮಾಸೆ, ಸಿಗ್ಗೇರ್ದು ಸಿಡುಕುತಿರೆ,

ವಜ್ರರೋಮಾಶ್ರಮದಿನಧ್ಯಯನಮಂ ಮುಗಿಸಿ
ರಾಮನೈತಂದನಲ್ಲಿಗೆ. ಕರೆದನರ್ಧಾಂಗಿಯಂ,
ಕಾಣದಿರೆ. ಹೊಗೆಯ ಹೊಟ್ಟೆಯೊಳಿರ್ದು ಓಕೊಂಡಳಂ
ಕುರಿತು ಬಿನದಕೆ: ಪಸಿದೆನ್ ಆನುಣಲ್‌ವೇಳ್ಕುಮೆನೆ;
ಮಡದಿ: ಪಸಿಸೌದೆಯಿಂದಡುಗೆಯಂತಪ್ಪುದಯ್?
ಪೊಗೆಯನುಣಿಮೆನೆ; ರಾಮನಾಕೆಯಂ ಬಳಿಸಾರ್ದು,
ಮಸಿಯಿಡಿದು ನಲ್ಮೊಗಂ ಮುಸುಡಿಯವತಾರಮಂ
ತಾಳ್ದಿರ್ದುದಂ ಕಂಡು, ನಗೆ ತಡೆಯಲಾರದೆಯೆ
ಹೊರಗೆ ಬಂದಳ್ಗೆ ಬಿರಿವಿರಿಯೆ ನಗೆ ತೊಡಗಿದನ್.
ಬಂದ ಲಕ್ಷ್ಮಣನಣ್ಣನಾ ಪರಿಗೆ ಬೆರಗಾಗಲಾ
ರಾಮನೆಂದನ್: "ನೋಡು, ನಡೆ ಒಳಗೆ. ಅತ್ತಿಗೆಗೆ
ಬದಲೊರ್ವ ವಾನರಿಯ......" ಎಂದರ್ಧ ವಾಕ್ಯದೊಳೆ
ಗಹಗಹಿಸಿ ನಗುತಿರೆ, ಸುಮಿತ್ರಾತ್ಮಜಂ ನಡೆದು
ನೋಡಿದನ್: ನಗಲಿಲ್ಲವನ್! ನಗೆಗೆ ಮೀರಿರ್ದುದಾ
ಧೂಮದೃಶ್ಯಂ! "ಕ್ಷಮಿಸಿಮೆನ್ನಂ, ಪಸಿಯ ಸೌದೆಯಂ
ತಂದೆನಪರಾಧಿಯಂ." ಎನುತ್ತೊಣಗು ಪುಳ್ಳಿಯಂ
ತಂದಡಕಿ, ಸತಿಯಂ ನೆನೆಯುತೂದಿದನ್. ಅಗ್ನಿ
ಧಗ್ಗನೆಯೆ ಚಿಮ್ಮಿದನ್ ಧೂಮತನುವಿಂ ಬುಗ್ಗೆಯೋಲ್.
ಚಿಮ್ಮಿದುದು ಸಂತೋಷಕಾಂತಿ ಚಿಂತಾಮ್ಲಾನ
ಮೈಥಿಲಿಯ ಮುಖಪದ್ಮದಿಂ!
ಕೊಂದ ಕತದಿಂದೇಂ
ಪೆರ್ಮನಾದನೆ ರಾಮನಾ ಮಾತನುಳಿ: ಪಗೆಯೆ?
ತೆಗೆತೆಗೆ! ಪೆರ್ಮೆಗೊಲ್ಮೆಯ ಚಿಹ್ನೆ. ಮಹತ್ತಿಗೇಂ
ಬೆಲೆಯೆ ಪೇಳ್ ಕೊಲೆ? ದೈತ್ಯನಂ ಗೆಲಿದ ಕಾರಣಕಲ್ತು,
ತನ್ನ ದಯಿತೆಯನೊಲಿದ ಕಾರಣಕೆ, ಗುರು ಕಣಾ
ರಾಮಚಂದ್ರಂ. ಕೋಲಾಹಲದ ರುಚಿಯ ಮೋಹಕ್ಕೆ
ಮರುಳಾದ ಮಾನವರ್ ರಾವಣನ ಕೊಲೆಗಾಗಿ
ರಾಮನಂ ಕೊಂಡಾಡಿದೊಡೆ ಕವಿಗುಮಾ ಭ್ರಾಂತಿ
ತಾನೇಕೆ? ಮಣಿಯುವೆನು ರಾಮನಡಿದಾವರೆಗೆ:
ದಶಶಿರನ ವಧೆಗಾಗಿಯಲ್ತು; ಮಂದಾಕಿನಿಯ
ತಿಳಿವೊನಲ ಮೀಯುತಿರಲೊರ್‌ದಿನಂ ತಾಂ ಕಂಡ

ದೃಶ್ಯಸೌಂದರ್ಯದಿಂದಾತ್ಮದರ್ಶನಕೇರ್ದ
ರಸಸಮಾಧಿಯ ಮಹಿಮೆಗಾಗಿ!
ಮೈದೋರಿದನ್.
ರಮಣೀಯ ಪೂರ್ವಗಿರಿವನರಮಾ ರಮಣನನೆ,
ಉದಯರವಿ. ಗಿರಿವನಪ್ರಿಯರಾಮನಾ ಪ್ರಕೃತಿ
ಪೂಜಾಸುಖದ ರಸಕ್ಕೋತು, ತಾನೊರ್ವನೆಯೆ,
ಹೊಂಬಿಸಿಲ ಚುಂಬನದ ಹಸುರು ಕಾಡಿನ ನಡುವೆ
ಪಿಕಳಾರ ಕಾಜಾಣ ಕಾಮಳ್ಳಿ ಕೋಗಿಲೆಯ
ಗಿಳಿಯ ಕೊರಲಿನ ದನಿಯ ಜೇನೀಂಟುತ್ತೈತಂದು
ನೋಡಿದನ್, ಮಂದಾಕಿನಿಯ ಸಿರಿಯ ಕಣ್‌ಸೆಳೆಯ
ಪೊನ್‌ನೋಟಮಂ: ತುಂಬಿ ಪರಿದುದು ಶುಭಜಲದ ರಮ್ಯ
ನದಿ, ತಾಯಿ ಕೌಸಲ್ಯೆಯಂತೆ, ರಾಮನ ಮನಕೆ
ಮಗುತನವನೊಡರಿಸುತೆ. ಮಾತೃದರ್ಶನ ದೀಪ್ತ
ಪ್ರೀತಿಗೌರವದಿಂದೆ ಕೈಮುಗಿದು ನಡೆದನಾ
ಪೂಜ್ಯೆ ಮಂದಾಕಿನಿಯ ಮಳಲೊಟ್ಟಿಲೊಳ್ದೊಡೆಯ
ತೊಟ್ಟಿಲಿಗೆ. ಕಣ್ಗೆ ಮುತ್ತಿಟ್ಟುದಿರ್ಕೆಲದಲ್ಲಿ
ತಾಯಕ್ಕರೆಯ ಸಕ್ಕರೆಯ ಪುಂಜಗೊಂಡಂತೆವೋಲ್
ಚಿತ್ರಮಯ ಧವಳಿಮ ಪುಳಿನರಾಶಿ. ತೀರರುಹ
ಫಲಪುಷ್ಪ ಭಾರಾವನತ ತರುಲತಾ ಶ್ರೇಣಿ ತಾಂ
ಮಣಿನಿಕಾಶೋದಕ ನದೀವಕ್ಷದರ್ಪಣದಿ
ಮಾರ್ಪೊಳೆವವೋಲ್ ಬಾಗಿ, ಕುಸುಮವೃಷ್ಟಿಯ ಸೂಸಿ,
ಸಿಂಗರಿಸಿದುದು ವೀಚಿವೀಚಿಯಂ, ತೆರೆತೆರೆಯ
ಕಯ್ಗಯ್ದು ಬಾಚಿದೋಲೆಸೆದಾ ಮನೋಹರದ
ಶರವೇಣಿಯಂ. ಕೊಂಬೆಗೈಗಳಿಂ ಪೂವಲಿಯ
ಚೆಲ್ಲಿ, ನಾನಾವರ್ಣ ಸ್ವರ್ಣಶೃಂಗಾರದಿಂ
ಮೆರೆದು, ಗಾಳಿಗೆ ತೊನೆದು, ಹಕ್ಕಿಯಿಂಚರದುಲಿಯೆ
ಕಾಲ್ಗೆಜ್ಜೆ ಕಿಂಕಿಣಿಯವೋಲಾಗೆ ನರ್ತಿಸುವ
ತರುತಿಲೋತ್ತಮೆ ಸೃಷ್ಟಿಸಿದಳಿಂದ್ರಲೋಕಮಂ
ಚಿತ್ರಕೂಟದೊಳೆ ಆ ರಸಋಷಿ ರಘೂದ್ವಹಂಗೆ.
ಮೆಯ್ಯೊಳ್ ಪರಿವ ನೆತ್ತರೆಲ್ಲಂ ಮಿಂಚುವೊನಲಾಗೆ
ಸವಿಯುತಾ ಬೆಳಗಿನೈಸಿರಿಯನಿಳಿದನ್ ನೀರ್ಗೆ

ಮೀಹಕ್ಕೆ. ಬಂಡೆಬಂಡೆಯ ನಡುವಣನವರತ
ಜಲಗದ್ಗದ ಶ್ರುತಿಗೆ ಉಪನಿಷತ್ತಿನ ಶ್ರುತಿಯ
ಮಂತ್ರಘೋಷಂ ಬೆರಸಿ ನೀರಾಡಿದನ್, ಪೃಥ್ವಿ
ಕಂಡು ಪುಲಕಂಗೊಂಡು ನಲಿಯೆ. ಮಿಂದಿರಲಿಂತು,
ಕಣ್ಗೆ ಪೊಕ್ಕನೆ ಪೊದಳ್ದುದೆನೆ ಚೆಲ್ವಿನ ಬುಗ್ಗೆ,
ಕಾಣ್ಕೆವೊಲದಂಚಿಂದೆ, ಬಾನ್ಮುಡಿಯ ಪೊಳೆಯಡಿಯ
ಬೆಟ್ಟದಡವಿಯ ತಡಿಯ ಚಿತ್ರಭಿತ್ತಿಯಿನುಣ್ಮಿ
ಹಾರುತೊಯ್ಯನೆ ತೇಲಿಬಂದತ್ತು ಸಾಲ್ಗೊಂಡು,
ಪಾಲ್‌ಬೆಳ್ಪನೆಯ ಬೆಣ್ಣೆನುಣ್ಪನೂರ್ ಬರೆಪಮೆನೆ,
ಬೆಳ್ವಕ್ಕಿಪಂತಿ. ನೋಡಿದನು ರಸವಶನಾಗುತಾ
ದಾಶರಥಿ. ನೋಡುತಿರೆ, ತಾನೆ ಹೊಳೆಯಾದಂತೆ,
ತಾನಡವಿಯಾದಂತೆ, ತಾನೆ ಗಿರಿಯಾದಂತೆ,
ತಾನೆ ಬಾನಾದಂತೆ, ತಾನೆಲ್ಲಮಾದಂತೆ,
ಮೇಣೆಲ್ಲಮುಂ ತನ್ನೊಳಧ್ಯಾತ್ಮಮಾದಂತೆ
ಭೂಮಾನುಭೂತಿಯಿಂ ಮೈಮರೆದನಾ ರಸಸಿದ್ಧಿ,
ಪೇಳ್, ರಾಮನಧ್ಯಾತ್ಮಮಂ ಸಕಲಲೋಕಕೆ ಸಾರ್ವ
ಭವ್ಯ ಭಗವತ್ ಸಾಕ್ಷಿಯೈಸಲೆ ಕಿರೀಟೋನ್ನತಂ!

## ಸಂಚಿಕೆ ೬

# ಪಾದುಕಾ ಕಿರೀಟಿ

"ಮೈಥಿಲಿ, ಗಿರೀಂದ್ರನಾಸ್ಥಾನದಂತೆಸೆಯುವೀ
ಕಾನನಶ್ರೀಯನಿದೊ, ನೋಡು, ಹಬ್ಬಿಹುದೆಂತು,
ಪ್ರಾತಃಸಮಯ ಸೂರ್ಯರಶ್ಮಿಸೂತ್ರಂಗಳಿಂ
ಕಯ್ಗಯ್ದ ಕಾನ್ತಿವಸನವನಾಂತು, ನೋಳ್ಪರ್ಗೆ
ರತಿ ಸಂಜನಿಸುವಂತು. ಕೇಳಾಲಿಸದೊ, ಭದ್ರೆ,
ರೋಮಹರ್ಷಣಕರಂ, ಮಂಜುಳ ಮನೋಹರಂ,
ಸಹೃದಯ ಸುಪೂಜಿತಂ ಬಹು ವಿಹಂಗಮ ತುಮುಲ
ರತ ಕೂಜಿತಂ! ತೇಲುತಿದೆ ಗರಿಹಗುರಮಾಗಿ
ಪರ್ಣವರ್ಣಾರ್ಣವದ ವಿಸ್ತೀರ್ಣದೊಳ್ ಮನಂ
ಪೂವಾಗಿ, ತಳಿರಾಗಿ, ಬಿಳಿದಾಗಿ, ಕೆಂಪಾಗಿ,
ಪಸುರಾಗಿ, ಪಳದಿ ನೀಲಿಗಳಾಗಿ, ತನಗೆ ತಾಂ
ರಂಗುರಂಗಿನೊಳಲೆವ ತರತರದಲೆಗಳಾಗಿ.
ಮರೆಯುತಿದೆ ಮನ್ಮನಮಯೋಧ್ಯೆಯಂ; ಮರೆಯುತಿದೆ
ಪುಟ್ಟಿದಿಳೆಯಂ ಬಿಟ್ಟ ದುಃಖಮಂ; ಮರೆಯುತಿದೆ
ಪುಟ್ಟುಗೆಳೆಯರನುಳಿದಳಲ ಬೇಗೆಯಂ. ಕಾಂತೆ,
ನೀಂ ಬಳಿಯಿರಲ್ಕೆ ಕಾಂತಾರಮಿದು ನಿನ್ನುಮಂ
ಮೀರ್ದಪುದು ಚೆಲ್ವಿನೊಳ್. ದಿಟಕೆ ಮಚ್ಚರಮೇಕೆ?
ನೋಡು ಅದೊ, ಪೊಳೆಯುತಿಹುದೆಂತುಟೆಳಬಿಸಿಲೊಳಾ
ಮಲೆಯ ಮಂಡೆಯ ಬಂಡೆಯಾಗಿರ್ಪ ರತ್ನಶಿಲೆ!
ವಾರಿಧಾರಾ ಕೇಸರಂಗಳಂ ಕೆದರುತದೊ ಕೇಳ್
ಸಿಂಹಗರ್ಜನೆಯುಡುಗೆ ಘೋಷಿಸುತ್ತಿಹುದಬ್ಬಿ

ಧುಮ್ಮಿಕ್ಕಿ. ಬಾ, ರಮಣಿ, ನೋಳ್ಪಮಾ ದೃಶ್ಯಮಂ,
ಭೀಷ್ಮ ಸಂಮ್ಮೋಹಮಂ, ಕಣಿವೆಗಿಳಿದದರಡಿಗೆ
ಸಾರ್ದು! ಕಮನೀಯಳಲ್ತೆ ಭಯಂಕರಾ ಪ್ರಕೃತಿ?''
  ತೇಜಸ್ವಿ ರಾಮಚಂದ್ರಂ ಚಂದ್ರಚಾರುಮುಖಿ
ಲಾವಣ್ಯವತಿಗೆ, ಸೀತಾ ಸತಿಗೆ, ತೋರುತ್ತೆ
ಚಿತ್ರಶೈಲದ ವಿಪಿನ ವಿಭವಮಂ ಬರಬರಲ್
ಮುಂದೆ ಮೆರೆದತ್ತು ಮಂದಾಕಿನಿಯ ಕರ್ವೊನಲ್,
ಕಣ್ಗಪ್ಪು ನೀರಾಯ್ತೊ, ಬಾನ್ನೀಲಿ ತೊರೆಯಾಯ್ತೊ,
ಗಿರಿವನ ಶ್ಯಾಮಲತೆ ಸೋರಿ ಕಣಿವೆಯ ಸೇರಿ
ವಾರಿರೂಪಿಂದೆ ಪರಿದಪ್ಪುದೆಂಬಂತೆವೋಲ್.
ದೃಶ್ಯ ಸೌಂದರ್ಯದಿಂದುದ್ದೀಪನಂಗೊಂಡು
ಗಿರಿವನಪ್ರಿಯ ಜನಕಜಾಪ್ರಿಯಂ ನಲ್ಲೆಯಂ
ನುಡಿಸಿದನು ಚುಬುಕಾಗ್ರಮಂ ಮುಟ್ಟಿ ಮುದ್ದಾಡಿ,
ಗಾನಗೈಯುವ ಮುನ್ನಮೊಯ್ಯನೆಯೆ ವೈಣಿಕಂ
ಬೀಣೆಯಂ ಮಿಡಿವವೋಲ್: ''ಜೇನ್ದಿಂಗಳೊಂದಾಯ್ತು
ನಾವಿಲ್ಲಿಗೈತಂದು, ಕೇಳ್ ಚೆನ್ನೆ, ಮನದನ್ನೆ.
ತಿಂಗಳೊಂದಾದೊಡಂ, ಜತೆಗೂಡಿ ನಲಿದಾಡಿ
ರಾಜಧಾನಿಯೊಳೆಮ್ಮ ಬಾಳ್ದುದಂ ಇನ್ನೊರ್ಮೆ
ಬಾಳ್ವಾಸೆ ಮೂಡುತಿದೆ ಮನಕೆ, ಮಂದಾಕಿನಿಯ
ನೋಟದಿಂ: ಒಲವು ಬಳಿಯಿರೆ ಚೆಲುವು ಬೇಟಮಂ
ಕೊನರಿಸುವುದಲ್ತೆ? ನಿನ್ನಂತೆವೋಲ್ ಚೆಲ್ವೆಯೀ
ಸ್ರೋತಸ್ವಿನೀ. ನೀರಸೀರೆಯ ತೆರೆಯ ನಿರಿ ಮೆರೆವ
ತೊರೆನೀರೆಯೀಕೆಯಂ ಕಂಡು ಕರುಬದಿರೆನ್ನ
ಮಾವನ ಮುದ್ದುಮಗಳೆ!''
                                ''ಕರುಬೇತಕೆರ್ದೆಯನ್ನ?
ಪೊಳೆಯ ಕನ್ನಡಿಯೊಳಗೆ ನಾನೆ ಮಾರ್ಪೊಳೆಯಲದೆ
ನಿನಗೆ ಬೆಮೆಯೀಯುತಿದೆ! ನಾನಲ್ಲದನ್ಯರಂ
ಕಾಣಬಲ್ಲನೆ ನನ್ನ ರಾಮಚಂದ್ರಂ ಪ್ರಕೃತಿ
ಲೋಕದಲಿ?'' ಮಡದಿಯಾ ನುಡಿ ಕಿವಿಗೆ ಜೇನಾಗೆ
ತೂಣಗೊಂಡುದು ರಘುಜಹೃದಯಂ ರತೋತ್ಸವಕೆ
ನಿಮಿರಿ.

“ನೋಡದೊ, ನಿತಂಬಿನಿ, ತೊರೆಯ ನಡುವಣಾ
ನಿನ್ನ ಮೈಬಣ್ಣದ ಪುಳಿನಪುಂಜದೆಡೆಯಲ್ಲಿ
ಬೆಳ್ದಾವರೆಯ ಬೆಳ್ಪು ಕನ್ನೈದಿಲೆಯ ಕರ್ಪು
ಕೆಂದಾವರೆಯ ಕೆಂಪುಗಳ್ ಬಣ್ಣಬಣ್ಣಂ ಕೋದು
ಬಾಸಿಂಗಮಂ ನೆಯ್ದುವೋಲೆಸೆಯುವಾ ರಾಸಿ
ಹೂ ಹಸೆಯಮೇಲೆ ನಿನ್ನೆರ್ದೆಗಳೋಲಂತವಳಿ
ಜಕ್ಕವಕ್ಕಿಗಳೆಂತು ಕೊಕ್ಕು ಕೊಕ್ಕಂ ಮುಟ್ಟೆ
ಮುದ್ದಾಡಿ, ಮುದ್ದಿನಿಂಚರಗೈದು ಲಲ್ಲೆಯಿಂ
ಮಾತಾಡಿ, ತೋರುತಿವೆ ಸಾರುತಿವೆ ಬೀರುತಿವೆ
ರತಿಕೇಳಿಯಾಸಕ್ತಿಯಂ! ನಾಣ್ಚದಿರ್, ನಲ್ಲೆ;
ನಿನ್ನ ನಾಚಿಕೆಯರ್ಥವೇನೆಂಬುದನ್ ಬಲ್ಲೆ.
ಬಾ, ನೀರೆ, ನೀರ್ಗಿಳಿದು ನೀರಾಟವಾಡುವಂ.
ನೋಡಲ್ಲಿ: ಹಳದಿಗೆಂಪಿನ ಹೂವಿನೆಸಳುದುರಿ
ಹೊಳೆಯ ಓಕುಳಿಯಾಡೆ ಕರೆಯುತಿದೆ. ಬಾ, ರಮಣಿ,
ನಾಮಲ್ಲಿಗೈದುವಂ ಸವಿಯೆ ನಲ್ಮೀಹಮಂ, ಬಾ.”
ನೀರಿಗಿಳಿದರು ರಾಮಸೀತೆಯರು. ಕಣ್ಣಾಯ್ತು
ಶೈಲಕಾನನಪೃಥಿವಿ ತಾನಾ ಸ್ನಾನದರ್ಶನಕೆ:
ಮಹಿಮೆ ತಾಂ ಮಾಳ್ಪುದನಿತುಂ ಮಹತ್‌ಕಲೆಯಲ್ತೆ!
ಮುಳುಗಿದರ್; ಮೂಡಿದರ್; ಸರಸಕ್ಕೆ ಕಾಡಿದರ್;
ಬಯಸಿ ನಿಡುನೋಡಿದರ್; ಬೆನ್ನಟ್ಟುತೋಡಿದರ್;
ಸುಖಖನಿಯ ತೋಡಿದರ್; ನೀರಾಟವಾಡಿದರ್:
ಹೃದಯ ಮಧುವನದಿ ಸುಧೆ ಹರಿವಂತೆ ಮಾಡಿದರೊ
ರಾಗರತಿ ಮಿಗುವ ಮಾನಸ ಭೋಗ ಯೋಗಿಗಳ್
ಸಂಯಮಿಗಳಾ ದೇವ ದಂಪತಿಗಳಿರ್ವರುಂ
ನಗಮೇಖಲಾ ನಿಮ್ನಗೆಯ ತಣ್ಪುತೀರ್ಥದೊಳ್
ಮನದಣಿಯೆ ಮಿಸ್ದು! ಘೋರಾಟವಿಯ ದೂರದಿಂ,
ಗಿರಿಭುಜ ಪ್ರತ್ಯಂತದಿಂ, ಕರೆದ ಲಕ್ಷ್ಮಣನ
ಕೊರಳುಲಿಯಸಾಲಿಸಿದನಂತರಂ, ನಡುಬಾನ್ಗೆ
ಪಗಲೇರ್ದುದಂ ಭೋಂಕನೆಯೆ ತಿಳಿಯುತೆಳ್ಚೆತ್ತುರ್,
ಸಲಿಲಕೇಳೀನಿರತರಾ ಇರ್ವರುಂ ಚೆಚ್ಚರಿಂ
ದಡಕಡರಿದರ್. ನಾರುಡೆಯನುಟ್ಟು, ಸುಖಮನದಿಂದೆ

ಗಿರಿಯೇರಿದರ್ ಲೆಕ್ಕಿಸದೆ ತನುವಿನಾಯಾಸಮಂ.
  ''ತಮ್ಮನದೊ ಕಾಯುತಿರ್ಪನ್ ನಿಡಿದು ಪೊಳ್ತಿಂದೆ,
ಮರಗಳಿಡುಕುರ್ ನಡುವಣಾ ಕಲ್ಲರೆಯ ಮೇಲೆ.
ನಲ್ಲಣಿಸುಗಳನಟ್ಟು ತಂದಿಹನ್. ಬಾ, ಅಣುಗಿ,
ಬೇಗ ಬಾ. ನಿನ್ನ ದೆಸೆಯಿಂದೆನಿತು ತಡವಾಯ್ತೊ?
ತಮ್ಮನೇನೆಂದಪನ್!''
                    ''ಆಃ! ಜಾಣ್ಣುಡಿದಿರಲ್ತೆ?
ತಳುವಿದುದಕಾನೆ ಕಾರಣಮಪ್ಪೆನಾದೊಡಂ
ನನ್ನಿಂದೆ ತಡಮಾಯಿತೆಂಬುದದು ದಿಟಮೆ, ಪೇಳ್,
ಸತ್ಯನಿಧಿ?'' ಎನುತೆ ಕಡೆಗಣ್ಣೆಸೆದ ತಿರೆಮಗಳ
ತಾತ್ಪರ್ಯಮಂ ತಿಳಿಯುತೆಳನಗೆ ಸುಳಿಸಿ ದಾಶರಥಿ:
''ತರ್ಕಸಿಂಹಿಣಿ, ಸಾಲ್ಗುಮೀ ಜಾಣ್ಮೆ; ಬೇಗ ಬಾ!''
ಎನುತೋಡುತಡರಿದನ್ ಲಕ್ಷ್ಮಣನೆಡೆಗೆ. ದೇವಿಯುಂ
ಪಿಂತಣಿಂದೇದುತೈತರೆ, ಸುಮಿತ್ರಾಜ್ಮಜಂ:
''ಅತ್ತಿಗೆಯನೇಕಿಂತು ದಣಿಸುವಿರಿ, ಅಣ್ಣಯ್ಯ,
ಕಾಡು ಕೊರಕಲನಲೆಸಿ?'' ಎನೆ, ಸೀತೆ ''ಮೈದುನನೆ,
ನೆಳಲಿಗೇನ್ ನಡೆವವನ ತೊಂದರೆಯೆ?'' ಎಂದೊಡನೆ
ಗಂಡನ ಕಡೆಗೆ ತಿರುಗಿ, ಸಿಡುಕುಮೋರೆಯ ಮಾಡಿ,
ನೆಲಗುಡುಗಿನಂತಾಡಿದಳ್: ''ಗಂಡು ಬರಿಹೊಟ್ಟೆ!
ಕೂಳಿರ್ಪೆಡೆಗೆ ಹರಣ ಹೋದುದನ್ ಲೆಕ್ಕಿಸದೆ
ಹಾರಿ ನುಗ್ಗಿದಪುದೇಂ ನಾಣ್ಗೇಡೊ!''
                              ''ಚೆನ್ನರಸಿ,
ನೋಡಿಲ್ಲಿ:'' ರಾಮನೆಂದನು ತೋರಿ ''ನೋಡಿಲ್ಲಿ!
ಮುನಿಸನೆಲ್ಲವನಳಿಸುವಿನಿದಾದ ಹೊಸತು ಜೇನ್
ಹೊಳೆಯುತಿಹುದೆಂತಲೆಯ ದೊನ್ನೆಯಲಿ! ಇದೊ ನೋಡು:
ಹೊಸ ಹಾಲು, ಹೊಸ ಹಣ್ಣು, ಹೊಸ ಕಂದಮೂಲಗಳ್!
ಮೃದು ಪಲಾನ್ನವಿದೊ ಕಮ್ಮಗೆ ಮೂಗನೊಲಿಸುತಿದೆ;
ಮನವನೆಳೆಯುತಿದೆ ಭೋಜನ ಭೋಗಕೆಳಸಿ. ಕೊಳ್,
ಮುಗ್ಧೆ. ಕುಡಿ ಮೊದಲೊಳೀ ದುಗ್ಧಮಂ. ತರುವಾಯ
ತಿನಲೀವೆನೀ ಹೊಚ್ಚ ಹೊಸ ಹಣ್ಗಳಂ...''
                                ಭೋಂಕನೆಯೆ

ಬೆದರಿ ನಿಂದಳ್ ಸೀತೆ: ಧಾವಿಸಿತ್ತತಿ ಜವದಿ
ಕಡವೆ ಹಿಂಡೊಂದು ಕಣಿವೆಯೊಳನತಿ ದೂರದಲಿ!
ಲೆಕ್ಕಿಸದೀ ಹೆಚ್ಚೇನನವರು ಮತ್ತುಣತೊಡಗಿರಲ್
ಕಿರುವೊತ್ತಿನೊಳೆ, ಮತ್ತೆ ಕಾಡು ಹಂದಿಗಳೊಂದು
ತಂಡವೋಡಿತು ನುಗ್ಗಿ ಹೂಂಕರಿಸಿ! ಬೆಕ್ಕಸದಿ
ಸೋಜಿಗಂಬಡುತಿರ್ದ್ದರನಿತರೊಳ್ ಮತ್ತೊಂದು
ಮಿಗವಿಂಡು ಬೆದರಿ ನುಗ್ಗುತ್ತೋಡಿ ಮರೆಯಾಯ್ತು!
''ಏನಿದಿಂತೇಕೆ ಜಂತುಗಳಿಂದು ಕೆಟ್ಟೋಡುತಿವೆ;
ಹಳುನುಗ್ಗಿ ಬೇಂಟೆಗಾರರ್ ಸೋವಿದಡವಿಯಂ
ತೊರೆದೋಡುವಂತೆ?'' ಎನೆ ರಾಮನೆಂದಳು ಸೀತೆ,
''ಕಾಣಲ್ಲಿ, ಪ್ರಾಣೇಶ, ಹೇರಾನೆಗಳ ಹಿಂಡು!
ಕಂಡು ಲಕ್ಷ್ಮಣನೆಂದನನಿತಳುಕಿ ''ಅಣ್ಣಯ್ಯ,
ಧಾವಿಸುತ್ತಿಹವೆಂತು ಪರ್ವತಾಗ್ರದಿನಯ್ಯೊ
ಬಂಡೆಗಳುರುಳುವಂತೆ! ದೇವಿಯರಿಗೋಸುಗಂ
ಪರ್ಣಕುಟಿಯೆಡೆಗೆ ನಡೆವಂ!'' ಮೂವರಲ್ಲಿಂದೆ
ಬೇಗಬೇಗನೆ ನಡೆದರಾ ಕ್ಷೇಮದೆಲೆವನೆಯ
ತಾಣಕ್ಕೆ: ತುಡುಕಿದುದು ಲಕ್ಷ್ಮಣನ ಕೈ ಧನುರ್
ಬಾಣಂಗಳಂ! ನೋಳ್ಪನಿತರೊಳ್ ನಡುಗಿದತ್ತಡವಿ
ಸಿಂಹ ಘರ್ಜನೆಯಿಂದೆ, ವ್ಯಾಘ್ರನಾರ್ಭಟೆಯಿಂದೆ,
ಗಜದ ಘೀಂಕೃತಿಯಿಂದೆ, ಸೂಕರಂಗಳ ಘೋರ
ಹೂಂಕಾರದಿಂದೆ! ಸೋದರನ ಕೋದಂಡದಿಂ
ಸಿಡಿಲೆಳ್ದ ಸಿಂಜಿನಿಯ ಠಂಕಾರಮಂ ನಿಲಿಸಿ
ಸನ್ನೆಗೈಯಿಂದೆ, ಕಿವಿಗೊಟ್ಟಾ ರಘೂದ್ವಹಂ
ಕಣ್ಣಾಲಿಯಾಗಿ ನಿಟ್ಟಿಸಿ ನುಡಿದನಿಂತೆಂದು:
''ನೆಲನಡುಗೊ? ಬಾನ್ಗುಡುಗೊ? ಕೇಳದೊ ಮಹಾಸ್ವನಂ
ಮೊಳಗುತಿದೆ, ದೂರದ ಸಮುದ್ರಘೋಷಮೆನಲ್ಕೆ.
ಹತ್ತೆ ಸಾರುತಿಹುದದೊ ಮತ್ತೆ ಮತ್ತುರ್ಬಿತೆನೆ,
ತುಮುಲ ಭೀಮಸ್ತನಿತಮತಿ ಭೈರವಂ ರವಂ!
ದಸ್ಯುಕೈರಾತ ಘೋಷವೊ? ರಕ್ಕಸರ ರಣದ
ದೈತ್ಯಕೋಲಾಹಲವೊ? ಕಾಣೆನೇನೆಂಬುದಂ.
ಕಾಣದೊ, ಗಗನಕೇಳುವಾ ಧೂಳಿ ಗಾಳಿಯಲಿ

ಹಬ್ಬುತಿದೆ; ಬೆಟ್ಟವೆರಡರ ನಡುವೆ ಕಣಿವೆಯಂ
ಮುಸುಗಿ ತಬ್ಬುತಿದೆ. ಕಾರಣವನರಿ, ಸೋದರನೆ,
ಕಾಣ್ಬೆಳ್ತರವನೇರ್ದು.''
                                    ಏರಿದನು ಸೌಮಿತ್ರಿ,
ಸಂತ್ವರಿತ ಮಾನಸಂ, ಪ್ರೋದ್ದೀಪ್ತತೇಜಸಂ,
ವಿರಳ ಪರ್ಣದ್ರುಮದ ಪುಷ್ಪಿತ ಶರೀರದಾ
ಸ್ವರ್ಗಚುಂಬಿತ ಸಾಲದುನ್ನತ ಶಿರದ ಕರದ
ಗೋಪುರಕೆ. ಪಕ್ಷಿರಾಜನ ತೀಕ್ಷ್ಣದಕ್ಷಿಯೋಲ್
ನೋಡಿದನು ಕಣ್ಣಟ್ಟಿ ದಿಗ್ದೇಶಮಂ. ನೋಡಿ,
ಮೂಡಣಿಂ ಬಡಗಣ್ಗೆ ಮೊಗಮಾಗೆ, ಕೆಚ್ಚೆದೆಯ
ಕಲಿ ಬೆಚ್ಚಿದನ್; ಕಂಡನಮಿತ ದಲ ಪದದಲಸಮಂ,
ಸಮೂದ್ಧೂತ ರೇಣುಪ್ರವಾಹಮಂ. ಕಾತರದಿ
ಕೂಗಿ ಹೇಳಿದನತ್ತ ನಟ್ಟ ದಿಟ್ಟಿಯನಿತ್ತ
ಹೊರಳಿಸದೆ: ''ಆರಿಸಗ್ನಿಯನಣ್ಣ ಶೀಘ್ರದಿ!
ಗುಹಾಂತರದಿ ದೇವಿಯಂ ಬೈತಿಟ್ಟು ಬಾ! ಜವದಿ
ತೊಡು ಕವಚಮಂ! ಚಾಪಮಂ ಪಿಡಿ! ನಿಷಂಗದಿಂ
ತೆಗೆ, ನಿಶಿತ ನಾರಾಚ ಮೃತ್ಯುವಂ!'' ''ಏನ್? ಏನ್?''
    ''ಏನೆ? ಬರುತಿದೆ ಸೇನೆ: ಕಾಲಾಳು ಹೇರಾನೆ
ತೇರು ಕುದುರೆಯ ಮಾರಿಬೇನೆ! ವೈರಿಯೆ ದಿಟಂ;
ಸಾರುತಿದೆ ಕೈದುಗಳ ಕಾಂತಿ. ನುಗ್ಗುತಿಹರದೊ
ರಾವುತರ್ ಮಾವುತರ್ ಲಗ್ಗೆಗೊಳ್ವಂತೆ. ಹಾ,
ತಡೆ ತಡೆ, ಅದೇನದಾ ಕೋವಿದಾರಧ್ವಜಂ!
ಆರ್ಯ, ಸಂದೇಹಮಿಲ್ಲಯ್; ಮಹೋನ್ನತಂ
ಭೀಮಕಾಯಂ ವಿಟಪಿಯಗ್ರದಿ ತೂಗಿ ಬರ್ಪುದದೊ
ರವಿಕುಲದ ಕೇತನಂ, ಮಂಗಳ ನಿಕೇತನಂ,
ನಿತ್ಯಪರಿಚಿತ ಕೋವಿದಾರಧ್ವಜಂ!–
                                              ''ಅಯ್ಯೊ,
ಕೇಡು ಬಂದತ್ತಾರ್ಯ! ತಿಳಿದೆನಿದರರ್ಥಮಂ
ಮೇಣೆಮ್ಮನರ್ಥಮಂ: ಪೂರ್ವಾಪಕಾರಿಯಾ
ರಾಜ್ಯಕಾಮುಕೆ ಕೈಕಯೀಸುತಂ ದುಷ್ಟಮತಿ
ಬಂದನಾ ಭರತಂ ದುರುದ್ದೇಶದಿಂ, ತನ್ನ

ರಾಜ್ಯಮಂ ನಿಷ್ಕಂಟಕಂಗೆಯ್ಯಲೋಸುಗಂ.
ತಳುವಿದೊಡೆ ಕೇಡೆಮಗೆ. ಬೇಗದಿಂದೀ ಗಿರಿಯ
ದುರ್ಗಪ್ರದೇಶವೊಂದಂ ಸೇರ್ದು, ರಕ್ಷೆಗಾಂ
ಯುದ್ಧಕಣಿಯಾಗುವಂ...ಹಸ್ತಿಭಗ್ನದ್ರುಮಕೆ
ಸಮನಪ್ಪನಿಂದವನ್, ಮತ್ತವನ ಸೇನೆಯುಂ!''
ಕುಟಜ ಕೂಟದಿನಿಳಿದು ಧುಮ್ಮಿಕ್ಕಿದನು ಧರೆಗೆ
ಸೌಮಿತ್ರಿ ತಾನುಳ್ಕೆಯೋಲ್.
''ತಾಳ್ಮೆ, ವತ್ಸಾ, ತಾಳ್ಮೆ;
ದುಡುಕದಿರ್. ಭರತದೇವಂ ಪ್ರಾಜ್ಞನವನಿಪತಿ;
ಮರೆಯದಿರ್. ಪ್ರಜೆಗಳಾಮೆಂಬುದಂ ನೆನೆ. ಹಿಂಸೆ
ಸಲ್ಲದಯ್, ನನ್ನಿಗಾಗಿಯೆ ನೆಲನನಿತ್ತೆಮಗೆ.
ಭರತನಂ ಕೊಂದರಪವಾದವಲ್ಲದೆ ಬೇರೆ
ಫಲವುಂಟೆ? ನಿನ್ನವೋಲೆನಗಾತನುಂ ಪ್ರಿಯಂ.
ನೆಲದ ಸಿರಿ ತಾನ್ ಒಲುಮೆಗೋಸುಗವಲ್ತೆ? ಕೊಂದದಂ
ಸಿರಿಗರಸರಾಗೆ ಮರುಭೂಮಿಯೊಡೆತನಮಲ್ತೆ?
ಸಾಗರಾಂಬರೆ ಪೃಥ್ವಿಯೆನ್ನಯ ಪರಾಕ್ರಮಕೆ
ದುರ್ಲಭಳೆ? ಪ್ರಾಣಕಿಂ ಪ್ರಿಯತರಮೆನಗೆ ಧರ್ಮಂ.
ಕ್ರೋಧಮೂರ್ಛಿತನಾಗುತಾರೋಪಣಂ ಗೆಯ್ವೆ ನೀಂ
ಭ್ರಾತೃವತ್ಸಲ ಭರತನಿಗೆ ದುರಭಿಸಂಧಿಯಂ.
ನಿನಗಾತನಾವಗಂ ನುಡಿದುದಿಲ್ಲಹಿತಮಂ.
ಧರ್ಮಶೀಲಂಗೇಕೆ ನಿಂದೆ?—ಬಂದಿಹನೇನೊ
ನೆಲವನೊಪ್ಪಿಸಲೆಮಗೆ? ಮೇಣೆಮ್ಮನೂರಿಂಗೆ
ಮರಳಿಸಲ್ ಕರೆದುತಂದನೊ ತಂದೆಯಂ? ಮತ್ತೆ
ಮೈಥಿಲಿಯನತ್ಯಂತ ಸುಖಸೇವಿನಿಯನೆಂತೊ
ಕಾನನಕ್ಲೇಶದಿಂದೊಯ್ಯಲೈತಂದಿಹನೊ?—
ನೋಡು, ವಾಹಿನಿಮುಖದೊಳೆಮ್ಮಯ್ಯನೊಲಿದಾನೆ
ರಾಜಗಾಂಭೀರ್ಯದಿಂದೆಂತು ಶತ್ರುಂಜಯಂ
ಬರುತಲಿದೆ! ಸೌಮಿತ್ರಿ, ತೋರದೇತಕೊ ಏನೊ
ಲೋಕಪೂಜಿತ ದೇವ ದಶರಥ ಸಿತಾತಪತ್ರಂ
ಮನಕೇನೊ ಸಂಭವಿಸುತಿದೆ ಸಂಶಯಂ...ಭದ್ರೆ,
ಕೈಮುಗಿವಮಿಲ್ಲಿಂದೆ ಪಿತೃಪದ ಪಯೋರುಹಕೆ.

ವತ್ಸ ಲಕ್ಷ್ಮಣ, ಅಯ್ಯೊ ಹನಿ ತುಂಬುತಿದೆ ಕಣ್ಗೆ;
ಕಾರಣವನರಿಯೆನೇತಕೊ ಕಂಠಕೊದಗುತಿದೆ
ಶಿಶುಗದ್ಗದಂ: ತಾಯಿತಂದೆಯರನಿನ್ನೊರ್ಮೆ
ಕಾಣ್ಬೆವೆಂಬುಲ್ಲಾಸಮದೆ ದಿಟಂ ಕಾರಣಂ!''
ಮೌನಿಯಾದನು ರಾಮನಿಂತೆಂದು. ಲಕ್ಷ್ಮಣಂ
ಲಜ್ಜಾವಿಷಾದಮಂ ತುಳಿದಿಕ್ಕಿ, ಮೋದದಿಂ
ಕಣ್ಣಾದನತ್ತಣ್ಗೆ. ಪತಿಯ ಕೆಲದಲಿ ಸೀತೆ
ನಿಂತು ನೋಡಿದಳಾತನಾತ್ಮದನುಕಂಪನಕೆ
ಪ್ರತಿಕಂಪಿಸುವ ವೀಣೆಯುಜ್ವಲ ತಂತ್ರಿಯಂತೆ.
    ತೋರೆನಗೆ, ಗುರುವೆ, ಮುಂದಣ ಕಥಾಲೋಕಮಂ,
ದಶರಥಾತ್ಮಜ ಮಹಾಶೋಕಮಂ. ಪೇಳೆನಗೆ
ಚಿತ್ರಕೂಟಕೆ ಭರತನಾಗಮನ ವಾರ್ತೆಯಂ,
ರಾಮಚರಣಕ್ಷೇತ್ರಯಾತ್ರೆಯಂ:—ನಗರಮಂ
ಪರ್ವಿದುದೊ ಭರತದೇವಂ, ಭ್ರಾತೃವತ್ಸಲಂ,
ಪೊಡವಿ ಪಟ್ಟವನೊಲ್ಲದೆಯೆ ರಾಮಚಂದ್ರನಂ
ಮರಳಿಸಿ ಪುರಕೆ ಮರಳಿ ಕರೆತರಲರಣ್ಯಮಂ
ನಡೆವನೆಂಬಾ ಶುಭಂ. ನಾ ಮುಂದೆ ತಾ ಮುಂದೆ
ಎಂದು ಸಂದಣಿಸಿತೈ ಮಂದಿ ಭರತನ ಹಿಂದೆ
ದಂಡುಗೊಂಡಂತೆ. ನಡೆಗೊಂಡುದಿಂತುಟಯೋಧ್ಯೆ.
ದಟ್ಟಡವಿಯೊಳ್ ಬಟ್ಟೆಯಂ ಕೊರೆಯುತಂ, ಕಟ್ಟೆ
ಕೆರೆ ಕಟ್ಟೆ ಬಾವಿಯಂ ಬೆಟ್ಟಿತು ನೆಲದೊಳಿರ್ಪ
ಪುಟ್ಟುವಂತೆಸಗುತಂ, ಪಳ್ಳಕೊಳ್ಳಂಗಳಿಗೆ
ಸೇತುಗಟ್ಟುತೆ ದಾಂಟಿ ನಡೆಯುತಂ, ಕ್ರಮದಿಂದೆ
ಪಯಣ ಪಯಣಂಗೊಟ್ಟು ಬೀಡು ಬೀಡಂ ಬಿಟ್ಟು,
ರವಿಕುಲದ ನಾಗರಿಕತೆಯೆ ವಿಪಿನದೇಶಮಂ
ವಿಕ್ರಮದೊಳಾಕ್ರಮಿಸಿತೆನೆ, ಪರಿದುದು ಅಯೋಧ್ಯೆ,
ದುಃಖಿ ಭರತನ ಹಿಂದೆಯುಕ್ಕಿ ನೂಂಕುತೆ ಮುಂದೆ
ರಾಮಚಂದ್ರೋನ್ಮಾದದಿಂದೆ! ಗುಹನಂ ಬೆರಸಿ,
ಜಾಹ್ನವಿಯನುತ್ತರಿಸಿ, ಋಷಿ ಭರದ್ವಾಜಂಗೆ
ಪಿರಿಯತಿಥಿಯಾಗಿ ನಿಂದಾತನಂ, ಜತೆಗೂಡಿ
ವಿಪಿನಸರಣಿಯನೊರೆಯುತ್ತೈತಂದನಂ, ಬೀಳ್ಕೊಂಡು

ನಡೆಯೆ ಭರತಂ, ಕರೆದು ಮೆರೆದುದಾ ಚಿತ್ರಕೂಟಂ,
ನೀಲಮೇಘಶ್ಯಾಮ ರಘುರಾಮ ಸಂಗದಿಂ
ಘನವಿಪಿನ ರೋಮ ತನು ನೀಲಿಮೆಯೆ ತಾಂ ಘನಿತು
ನಿಂದಂತೆವೋಲ್. ದೊರೆಯ ಮನವರಿತು ಜನಸೇನೆ,
ಮಂತ್ರಾಜ್ಞೆಯಿಂ ಮೊರೆಗಡಲ್ ಮೋನವಪ್ಪಂತೆ,
ನಿಶ್ಶಬ್ದವಾದುದಯ್: ಪೂಜ್ಯ ಸಾನ್ನಿಧ್ಯಮಿರೆ
ಚಂಚಲತೆಯುಂ ಸುಸ್ಥಿರತೆಯಪ್ಪುದಚ್ಚರಿಯೆ?
ಭಾವದಿಂ ಭರತಂಗೆ ಮಾತು ತೊದಲಾಯ್ತಂತೆ
ನಡುಗು ಮೊದಲಾಯ್ತೊಡಲಿಗಂತೆ ಕೊರಲಿಗೆ ದೀನ
ಗದ್ಗದಂ ತೊಡಗಿದುದು. ಸಕಲರಂ ನಿಲವೇಳ್ದು,
ಬಿಯದರರಸಂ ಗುಹನನಂತೆ ಶತ್ರುಘ್ನನಂ
ಮೇಣಾ ಸುಮಂತ್ರನಂ ತನ್ನೊಡನೆ ಬರವೇಳ್ದು,
ಚೀರವಲ್ಕಲವುಟ್ಟು ಜಡೆವೊತ್ತ ದೀನಮುಖಿ,
ತಾರುಣ್ಯಕಡಿಯಿಡುವ ಕೌಮಾರಮೂರ್ತಿಯಾ
ಬಾಲಋಷಿ ಕಾಡನೇರಿದನು ರಾಮಾಶ್ರಮಕೆ,
ಮಾತೃವಕ್ಷವನರಸುತರ್ಭಕನಡರುವಂತೆ.

ನಡುವಗಲ ಸುಡುಬಿಸಿಲ್ಗೆಲೆಗೊಡೆಯನೊಟ್ಟಯ್ಸಿ
ನೆಳಲ ಕುತ್ತುರೊಲಿರ್ದ್ದ ಪಳುವದೊಳ್ ನಡೆದಿರಲ್,
ಕಾಣಿಸಿತ್ತಂಬರದ ಬೆಳ್ಮುಗಿಲ್ಗಿದಿರೆಳ್ದ
ಧೂಮವಿನ್ಯಾಸದಗ್ನಿಧ್ವಜಂ ನಿಕಟದಾ
ಗಿರಿತಟದಟವಿಯಿಂದೆಃ ಬಯಕೆ ಬಾವುಟವೆತ್ತಿ
ಕರೆದಪುದೊ? ಪಿರಿಯ ಪಿತೃಕೃಪೆ ಪರಕೆಗೈಯಲ್ಕೆ
ಕೈವೀಸಿದಪುದೊ? ರಾಮನನರಸುತೈತಂದು
ತನ್ನೊಡಲನುರಿಗೆ ಬೇಳ್ದಾ ದೇವಿ ಮಂಥರೆಯ
ಪುಣ್ಯಾಂತರಾತ್ಮಪ್ರಣಯಲಕ್ಷ್ಮಿ ಭರತಂಗದೇಂ
ಕೌಸಲೆಯ ಕುವರನೆಡೆಯಂ ಪೊಗೆವೆರಳ್ ನೀಡಿ
ಸುಟ್ಟಿದೋರ್ದಪಳೊ? ಎನೆ ಕಂಡುದಾ ಕರ್ವಟ್ಟೆ
ಹೊಗೆಯ ಹಳವಿಗೆಯನಾ. ನಲ್ ಮೂಡಿ ಮುಂಬರಿಯೆ
ಮುಟ್ಟೆ ಬಂದುದು ಮುಂದೆ ಮಂದಾಕಿನಿಯ ತುಂಬು
ನೀರ್‌ದಾರಿ. ಕಟ್ಟಲಾಳ್ಗಳ್ ಕಟ್ಟಿಗೆಯನೊಟ್ಟೆ,
ತೇಲ್ದುದೋಡಂ ದಡಕೆ ಆ ಕಡೆಯಾ. ನಾವೆಯೊಳ್

ನಿಂದ ಭರತಂ ಧೂಮಲೇಖೆಯನೆ ನೋಡುತಂ
ತನ್ನೊಳಗೆ ತಾನ್: ''ಆರ ವದನಾರವಿಂದಮಂ
ನೋಡಿ, ಮಕರಂದಮಂ ಹೀರಿ, ಜನ ನಯನಾಳಿ
ತೃಪ್ತಿಯರಿಯವೊ ಅದನ್ನೊಸೆದು ನೋಳ್ಪನ್ನೆಗಂ
ಶಾಂತಿಯಿಲ್ಲೆನಗೆ. ಮತ್ತಾರ ಮಂಜುಳ ಮಧುರ
ಕಂಠದ ವಿಪಂಚಿಕಾ ನಾದಮಂ ಸವಿಸವಿದು
ಕಿವಿತಣಿಯವೋ ಅದನ್ನಾಲಿಪನ್ನೆಗಮಣಂ
ಶಾಂತಿಯಿಲ್ಲೆನಗೆ. ಮೇಣಾರಡಿಯ ನೈದಿಲೆಯ
ನೀಲಸಾನ್ನಿಧ್ಯದೊಳ್ ತೇಲಿ ತೇಂಕಾಡುವಾ
ಸೊಗಸಿಗುಳಿದೆಲ್ಲ ಸೊಗಮಂ ಬಿಟ್ಟು ಬೀಸಾಡಿ
ಬಂದಳೊ ವಸುಂಧರಾನಂದನೆ ಅದಂ ಪಿಡಿದು
ಮುಡಿಯೊತ್ತುವನ್ನೆಗಂ ಶಾಂತಿಯಿಲ್ಲೆನಗೆ. ದೊರೆ
ಪಿರಿಯಂಗೆ ತಿರೆಯಿತ್ತು ಪೊರೆಯಿಳಿಸುವನ್ನೆಗಂ
ಕುಸಿದು ಕುಗ್ಗಿದ ಬಾಳ್ಗೆ ಶಾಂತಿಯಿಲ್ಲೆನಗೆ.'' ಇಂತು
ಧೂಮ ಪ್ರತೀಕದಿಂ ರಾಮನಂ ಭಾವಿಸಿರೆ
ಬಂದು ಮುಟ್ಟಿತ್ತೋಡಮಾ ಪಾರಮಂ, ಶೈಲ
ಚರಣತಲ ವನಸೀಮೆಯಂ: ನಮಿಸಿದನು ಮುಟ್ಟಿ
ಮೃತ್ತಿಕೆಯನಾ ರಾಮ ಚರಣ ಸ್ಪರ್ಶ ಪೂಜ್ಯಮಂ.
''ಶತ್ರುಘ್ನ, ಇದೆ ತಾಣಮಿರವೇಳ್ಕುಮದೊ ಅಲ್ಲಿ
ತೋರ್ಪುದಾ ಮನುಜ ಸಂಚಾರ ಸೂಚಕ ಚಿಹ್ನೆ:
ಕಾಡುಬೆರಣೆಯನಾರೊ ರಾಸಿಗೈದಿಹರಲ್ತೆ
ಚಳಿಗೋಸುಗಂ?'' ಭರತನೆನೆ, ಗುಹಂ, ಕರಿಮೆಯ್ಯ
ಭೀಮಗಾತ್ರಂ, ಕಾಡನಿನ್ನೊಂದು ತನಗೆ ಪಿರಿ
ಮೆಯ್ಯಾಗಿ ತಿಳಿದವಂ: ''ದಿಟಮಯ್ಯ; ದಿಟಮೂಹೆ.
ಒಂದೇತಕೆನ್ನ ಕಣ್ಣಿಗೆ ಕಾಣ್ಬವೆನಿತೆನಿತೊ
ನರ ಕರ ಚರಣ ಚಿಹ್ನೆಗಳ್. ನೋಡಿಮಾ ಮುರಿದ ಹರೆ
ಸಾಲ್ಗೊಂಡು ಬಿದ್ದಿಹವು ಹೊದೆಹೊದೆಯೆಡೆಯೆ ಹಾದಿ
ಗುರುತಾಗಿ. ಕಾಣಿಮಾಳ್ಪಜ್ಜೆ, ತೊಯ್ದಾ ನೆಲದಿ...
ನಿಡುವುಲ್ಗಳಿರ್ಕಡೆಗೆ ಬಾಗಿರ್ಪವಾ ಪದಂ
ಮೃಗಪದಕ್ರಮವಲ್ತು...ನೋಡಿಮಾ ಬಣಗು ಪೊದೆ.
ಸಹಜ ಮೃತಿಯಲ್ತಾರೊ ಬುಡಗಡಿದರದನೇಕೊ,

ನಿನ್ನೆ, ತಪ್ಪಿತೊ ಮೊನ್ನೆ. ಓ ಈಗಳರಿವಾಯ್ತು:
ಹೊದೆಯ ಮೊದಲೊಳಗಿರ್ದ ನೂಲೆಯ ಗೆಣಸಿಗಾಗಿ
ಬಳ್ಳಿಗಳನಗೆದು ತೆಗೆದಿರ್ಪರದೊ ಕೆಮ್ಮಣ್ಣು
ಬಳಿಯೊಳೆಯೆ ರಾಸಿ ಬಿದ್ದಿದೆ! ನೋಡಿ ಓ ಅಲ್ಲಿ
ಬಿದಿರುಮೆಳೆಯೆಡೆ ಹುತ್ತಕೊತ್ತಿದೆ ಸವುದೆಗಟ್ಟು...
ಬಟ್ಟೆಯರಿಯಲದೊ ಕುಶಚೀರಗಳನಲ್ಲಲ್ಲಿ
ಕಟ್ಟಿಹರು, ಕೊಂಬೆ ಕೊಂಬೆಗೆ, ಕಣ್ಣ ಕುರುಹಾಗಿ...
ಇದೊ ಇಲ್ಲಿ ಹೂಗೊಯ್ದು ಹೋಹಾಗಳುದುರಿದಾ
ಒಂದು ಹೂವಲ್ತೆರಡು ಮೂರು ನಾಲ್ಕೈದಾರು!
ಚೆಲ್ಲಿ ಹೋಗಿಹರಯ್ಯೊ!...ಇತ್ತಲಿತ್ತಲ್ ಬನ್ನಿ;
ಅತ್ತ ಸರು, ಅತ್ತ ದರಿ. ಕಾಣಿರಿದೊ, ಇದೆ ಹಾದಿ
ಬಳಿಯಿರ್ಪುದಾಶ್ರಮಂ! ಕಂಪಿಂದೆ ಬೇಂಟೆನಾಯ್
ಮಿಗದಿರ್ಕೆಯರಿವಂತೆ ಅರಿತೆ ನಾನ್! ಅದೊ ಅಲ್ಲಿ,
ಆ ಎಳ್ತರದೊಳಾರೊ ಹೊಳೆದವೋಲಾಯ್ತೆನಗೆ!
ಭ್ರಾಂತಿಯೇಂ? ಭ್ರಾಂತಿಯಿನ್ನೆಲ್ಲಿಯದು? ಶಿವಶಿವಾ
ಅಗೊ ಅಲ್ಲಿ, ಅಗೊ ದೇವ ರಾಮಚಂದ್ರಂ! ಅಲ್ಲಿ
ಕಾಣಿರೇಂ? ದೇವಿ ಸೀತಾಮಾತೆ! ಅದೊ ಅಲ್ಲೆ,
ದೇವ ಸೌಮಿತ್ರಿ!''
ಕಂಡನ್; ನೋಡಿದನ್; ನುಗ್ಗಿ
ಮುಂದೋಡಿದನ್ ಭರತನುನ್ಮಾದವೇರ್ದನೊಲ್,
ಬೆಟ್ಟ ತಲೆಕೆಳಗಾಗಲುರುಳ್ವಂತೆವೋಲದರ
ತುಂಗ ಶೃಂಗಕ್ಕೆ! ಅಣ್ಣಯ್ಯ ಓ ಎಂದೊಂದೆ
ಸೊಲ್ಲೊರಲ್ದಡಿಯನೆಯ್ದುವ ಮುನ್ನಮೆ ಸಡಿಲ್ದು
ದೊಪ್ಪನೆ ಕೆಡೆದನಿಳೆಗೆ, ತನ್ನ ಭಾರಕೆ ತಾನೆ
ಬೇರು ಬಳಲಿದ ತರುಣತರು ಬೀಳುವಂತೆ: ಹಾ,
ಪ್ರಿಯ ವಿಯೋಗದ ನೋವಿಗೆಣೆಯುಂಟೆ? ಕಬ್ಬುನಂ
ಕರಗಿದಪುದಲರವೊಲ್ ಬಾಡುವುದು ವಜ್ರಮುಂ.
ಇಷ್ಟವಿರಹಕೆ ಮಿಗಿಲ್ ಸಂಕಟದ ಶಿಕ್ಷೆಯಂ
ಸೃಜಿಸಬಲ್ಲನೆ ನರಕ ಶಿಕ್ಷಾಚಾರ್ಯನಾದೊಡಂ?
ಮಣಿವುದು ಮಹಾ ಶೈಲಮುಂ ತಾಂ ಲತಾಂಘ್ರಿಗೆ
ಶಿರಂಬಾಗಿ. ಬೇರೆ ಕೋರೆಗಳೇಕೆ ನರಕದಾ

ವ್ಯಾಘ್ರಂಗೆ, ನರಹೃದಯ ರಕ್ತಮಾಂಸವನೀಂಟಿ
ತಿಂದು ತೇಗುವ ನಾಶದೌತಣಕೆ?
                                        ಹಿರಿಯನಿಗೆ,
ಕಿರಿಯರಿಗೆ, ದೂರದಿಂದಲೆ ಮಣಿದನೆಂಬಂತೆ
ಮೂವರಿಗೆ, ಭರತಂ ಯುಗಾಂತ ಭಾಸ್ಕರ ಸಮಂ
ದೀನಂ ವಿವರ್ಣ ವದನಂ ಕೃಶಂ ದಿಂಡುರುಳೆ,
ಪ್ರಸ್ವಿನ್ನ ಚೀರ ವಲ್ಕಲ ಜಟಾ ಜಟಿಲನಂ
ಕಷ್ಪದಿಂ ಗುರುತಿಸಿ ಮಹಾಕಾಶ ಸಂಕಾಶನಾ
ನೀಲೋತ್ಪಲ ನಿಭಾಂಗನಾ ರಾಮಚಂದ್ರಂ ಕೂಡೆ
ಬಿಡದೋಡಿ ಬಂದು ಪಿಡಿದೆತ್ತಿದನ್; ಸುಯ್ಯೆರ್ದೆಗೆ
ತಮ್ಮನಂ ಬಿಗಿದಪ್ಪುತೊತ್ತಿದನ್; ಮಂಡೆಯಂ
ಮುಂಡಾಡಿ ಪಣೆಗೆ ಮುತ್ತೊತ್ತಿದನ್. ಗದ್ಗದಿಸಿ
ಗುಬ್ಬಳಿಸಿದನೆನಲ್ಕೆ ನುಡಿಸಿದನ್, ಸಂಗಮಿಸೆ
ತನ್ನ ಕಣ್‌ಗಂಗೆ ತಮ್ಮನ ಕಣ್ಣ ಜಗುನೆಯಂ:
"ಏನಿದೇನವರಜನೆ? ತಂದೆಗಸುಖವೆ? ನೆಲಕೆ
ಕಂಟಕವೆ? ನೆಮ್ಮದಿಯ ಕೇಡೆ ತಾಯಂದಿರಿಗೆ?
ಬಾಧೆಯೇನಾದುದೇನೆಮ್ಮ ಕೋಸಲ ಜನಕೆ?
ಚೀರವಸನವಿದೇಕೆ? ಜಟೆಯೇಕೆ? ಮುಖವೇಕೆ
ಕಳೆಗುಂದಿಹುದು? ಮಲಿನಮಯ ಕೃಶತೆಯೇಕೀ ಮೆಯ್ಗೆ?
ಅಯ್ಯೊ ಈ ದುರ್ದರ್ಶ ಸಂಕಟಾಕೃತಿಯೇಕೆ?
ನಿನಗೇಕೆ? ಏಕೆ ಹೇಳಯ್ಯ, ಓ ಸೋದರನೆ,
ನನ್ನುಸಿರ ಸೋದರನೆ?" ಕುದಿದಪ್ಪಿದಣ್ಣನಾ
ತೋಳ್ತಳ್ಕೆ ತಾಯ ಮಡಿಲಾದುದೆನೆ ಭರತಂ,
ಬಳಲ್ದ ಶಿಶು ನೋವಂ ಮರೆತು ನೆಮ್ಮದಿಯನರಿತು
ಮುಗ್ಧ ನಿದ್ರಾಮುದ್ರೆಯಪ್ಪಂತೆ, ಜನಕಜಾ
ರಮಣ ಧೀರೋದಾತ್ತ ವಕ್ಷವಾರ್ಧಿಯ ನೀಲ
ನಾವೆಯೊಳ್ ತೇಲಿದನು ಶಾಂತಿಯ ತುರೀಯಕೆ!
ಮೈಮರೆತ ತಮ್ಮನಂ ಕರುಣೆಯಕ್ಕರೆಯುಕ್ಕಿ
ಮೇಲೆತ್ತುತಾ ರಾಮನೆಲೆವನೆಗೆ ನಡೆದನಯ್,
ಸೀತೆ ಸೌಮಿತ್ರಿ ಶತ್ರುಘ್ನ ಗುಹರೊಡನೊಡನೆ
ನೆರವಾಗಿ ನಡೆಯೆ:

ದೇವಾಸುರರ ಮಂದರದ ಮೇಣ್
ವಾಸುಕಿಯ ಮಥನ ದೈತ್ಯತೆಗೆಂತು ಮುನ್ನೊಮ್ಮೆ
ತಾನುಕ್ಕಿತಂತೆ, ಭೂ ಜಠರ ಜಠರಾಂತರದ
ಪಲ್ಲಟದ ಪರಿಣಾಮದಿಂದಂ ಪ್ರಕೋಪಿಸುತೆ
ಭೋರ್ಗುದಿದು ಮೇಲ್ವಾಯ್ದುವದಟ್ಲಾಂಟಿಕಾಂಭೋಧಿ
ಪೆಸಿಫಿಕಂಬುಧಿಯೊಡನೆ ಢಿಕ್ಕಿ ಹೊಡೆದುಕ್ಕಿ. ಆ
ಕಡಲೆರಡರೊಡಲೊಡಲ ನೀರವ್ವಳಿಕೆಗಡಿಯೆ
ಮೇಲಾದವೋಲೋಕರಿಪುದದ್ರಿಸಮ ಊರ್ಮಿ
ಮಾಲಾ ಭಯಂಕರ ಸಮುದ್ರಂ, ತಿಮಿಂಗಿಲಂ
ತೃಣದ ಕಣವಾಯಿತೆಂಬಂತೆ. ಪೊರಪೊಣ್ಮುತ್ತೆ
ಗೋಚರಿಪುದೊಂದದ್ಭುತಂ ದ್ವೀಪಖಂಡಮದೊ
ಸಸ್ಯಹೀನಂ ಪ್ರಾಣರಹಿತಂ. ಸಮುದ್ರಾಂಬೆ ತಾಂ
ದ್ವೀಪ ಪ್ರಸವವೇದೆಯಿಂದೊಯ್ಯನುತ್ತರಿಸಿ
ನೋಳ್ಪಳಾ ತನ್ನ ಪೊಸ ಪೆತ್ತ ಸಿಸುದೀವಿಯಂ,
ತಾಯ್ಮಳಲ ಬರುನೆಲದ ಬತ್ತಲೆಯ ಬೇಸರದ
ನಿರ್ಜೀವಿಯಂ. ಸುಯ್ದು ಮರುಗಿದಪಳಲೆಯಳ್ಳೆ
ತಿದಿಯೊತ್ತಿದೋಲೇಳುಬೀಳಾಗೆ. ಮೋಹವಶೆ
ಮುದ್ದಾಡುವಳ್ ತರಂಗಮ ಪರಿಷ್ವಂಗದಿಂ,
ಫೇನ ಮೃದುಚುಂಬನೋಚ್ಛ್ವಾಸದಿಂ, ತನ್ನುಸಿರ
ಚೇತನವನಾ ದ್ವೀಪವತ್ಸನ ದೇಹಕೆಳ್ಚರಿಸೆ
ನೋಂತು. ಸಂವತ್ಸರಗಳಾ ತಪೋದೀಪಕ್ಕೆ
ತಮ್ಮ ಜೀವನ ತೈಲಮಂ ಧಾರೆಯೀಯುತ್ತೆ
ಹರಿಯುವುವು ಕಾಲದಾಚೆಯ ನಿತ್ಯತೆಯ ನಿಧಿಗೆ,
ಬ್ರಹ್ಮಸನ್ನಿಧಿಗೆ. ಇಂತು ಯುಗಶತಂ ಗತವಾಗೆ,
ಕಡಲಮ್ಮನಾ ನೋಂಪಿ ಕೈಗೂಡಿದಪುದಹಾ
ದೀವಿಯೊಡಲೊಳಗುಸಿರ್ ಮಿಂಚು ಸಂಚರಿಸಿ! ಅದೊ
ಹೊಮ್ಮಿದಾ ಸಸ್ಯದೈಸಿರಿ ಪಸುರ್ ಚಿಮ್ಮುತಿದೆ
ತನ್ನ ಸೃಷ್ಟಿಗೆ ತಾನೆ ಬೆರಗಾಗಿ! ತುಂಬಡವಿ
ಕಳಕಳಿಸಿ ಮೆರೆಯುತಿದೆ ದೀವಿಯೊಡಲಂ ಮುಚ್ಚಿ
ಸಿಂಗರಿಸಿ. ಕಣ್ದೆರೆದರೇನಂತೆ, ಜೀವಕ್ಕೆ
ಬಾಯ್ದೆರೆಯದಿನ್ನುಮೆಂತೆನೆ, ಹಕ್ಕಿಮಿಗಗಳ್ಗೆ

ಹುಟ್ಟು ಮೂಡಿಲ್ಲದುದರಿಂದೆಸೆವುದಾ ದೀವಿ
ಮೂಗುವಟ್ಟಂತೆವೋಲ್.
ಶಿಶಿರೋಪಚಾರಕ್ಕೆ
ಕಣ್ದೆರೆದನಾ ಭರತನಣ್ಣನಾಲಿಂಗನದ
ನೀಲದೋಲದೊಳೊಂದು ನುಡಿಮೊಳೆಯದೆಳಹಸುಳೆ.
ಬೆಸಗೊಳೆ ನುಡಿಯಲಾರದಳುವಣುಗದಮ್ಮನಾ
ಮೌನಮುಖ ದೈನ್ಯದೊಳ್ ಸುಳಿಯೆ ಛಾಯಾಮೃತ್ಯು
ಛಾಯೆ, ಕಂಪಿಸಿ ಕಂಡು ದಾಶರಥಿ ನೋಡಲ್ಕೆ
ಶತ್ರುಘ್ನನಂ, ಆತನುಂ ಮೋರೆಯನಿಳಿಕೆಗೆಯ್ಯೆ,
ಮಂತ್ರಿಯ ಕಡೆಗೆ ತಿರುಗಲಾತನುಂ ಗದ್ಗದಿಸೆ,
ರಾಮನಿಂಗಿತವರಿತು ತುಟಿದೆರೆದನಾ ಗುಹಂ
ವಾರ್ತಾಕಠೋರಮಂ, ಪಿತೃದೇವ ಮರಣಮಂ,
ಭರತ ಸಂತಾಪಮಂ ವ್ರತಮಂ, ಪ್ರತಿಜ್ಞೆಯಂ
ವನಚರ ಸಹಜ ವಚನ ಕಾರ್ಪಣ್ಯದಿಂದಂತೆ
ಭಾವಮಯ ರಚನೆಯೌದಾರ್ಯದಿಂ: ಧೀರನೆದೆ
ಧಿಗಿಲೆಂದುದವನಿಜೆಗೆ ಕಣ್ಗತ್ತಲಾದತ್ತು;
ಚಳಿಗೆ ಮೆಯ್ ನಡುಗಿದತ್ತಂತೆ ಬೆಮರ್ದುದು ಸೆಕೆಗೆ
ಕದಡಿತು ಮನಂ; ಬೆದರಿತಾತ್ಮಂ; ರಘೂದ್ವಹಂ
ಸುಯ್ದೊರಗಿದನ್ ಗುಹನ ತೋಳ್ಗಳಿಗೆ. ಬಂಡೆಯಿಂ
ಬನದ ತೊರೆ ಸೋರ್ದುದೆನೆ ಕಣ್ಮುಚ್ಚಿದೆವೆಗಳಿಂ
ಸ್ರವಿಸಿದತ್ತಶ್ರು, ಶೋಕದ ಸಿಂಧುಶುಕ್ತಿಯಿಂ
ನಿಶ್ಶಬ್ದತಾ ಬಿಂದು ಮುಕ್ತಾಫಲಗಳುಕ್ಕಿ
ಸುರಿವಂತೆ. ಮೈತಿಳಿದೊಡಂ ರಾಮನನುಜಂಗೆ
''ತಂದೆ ಹೋದನೆ, ತಮ್ಮ, ಸೌಮಿತ್ರಿ?'' ಎನುತೆನುತೆ
ಮೈಥಿಲಿಯ ಮೊಗನೋಡಿ ಸುಯ್ದು ಕುಸಿದನು ಮತ್ತೆ
ವಿಸ್ಮೃತಿಗೆ. ಶೋಕಾಗ್ನಿಯುರಿಯ ಹೊಯ್ಲಿಗೆ ಸಿಲ್ಕಿ
ಸಿಡಿಮಿಡಿಗೊಳುತಲಿರ್ದನಂ ಭರತನಪ್ಪಿದಂ;
ನುಡಿದನೆಂತಾನುಂ ಸಮಾಧಾನಮಂ. ಪೇಳ್ದ
ಮಾತಿನರ್ಥಕ್ಕಲ್ತು, ತಮ್ಮನೊಲ್ಮೆಯ ದನಿಯ
ಸಂಪ್ರೀತಿಗೆರ್ದೆಯ ಕುದಿಹಂ ತವಿದುದಣ್ಣಂಗೆ:
''ಏಳ್, ಅಯ್ಯಗೆಳ್‌ನೀರೀಯಲಣ್ಣದೇವನೆ ಏಳು!''

ತಮ್ಮನೆಂದೊಳ್ನುಡಿಗೆ ಮಂತ್ರಶಾಂತನ ತೆರದಿ
ಮೇಲೆಳ್ದನಮೃತತತ್ವದರಿವಾದನೋಲ್.

ಮಂತ್ರಿ

ಕಯ್ಯಾಂತು ಕರೆದೊಯ್ದನಿಳಿಸಿದನು ರಘುಜರಂ
ಮಂದಾಕಿನಿಯ ಪುಣ್ಯತೀರ್ಥಕ್ಕೆ. ನದೀದೇವಿ
ಮೊರೆಯಿಂದೆ ಲಲ್ಲಯ್ಸಿ, ತೆರೆಯಿಂದೆ ಸಂತಯ್ಸಿ
ಪರಿದಳು ಚಿರಶ್ಯಾಮಲಾರಣ್ಯಗಳ ಮಧ್ಯೆ,
ತುಂಬಿ! ಕರ್ದಮ ರಹಿತ ತಟನಿಕಟ ವಾರಿಯಂ
ಮಿಂದರುದಕಂಗೊಟ್ಟರಯ್ಯಂಗೆ: ''ಪಿತೃದೇವ,
ಕೊಳ್ಳಿದಂ ಕುಸುಮ ಸುಂದರ ಸದಾ ರಮಣೀಯ,
ಶೀತಲ ಸುಗಂಧಮಯ, ಮಂದಾಕಿನಿಯ ದಿವ್ಯ
ತೀರ್ಥಮಂ. ವಿಮಲ ತೋಯಮಿದು, ನೃಪಶಾರ್ದೂಲ,
ಪಿತೃಲೋಕದೊಳಗಕ್ಕೆ ನಿನಗಕ್ಷಯಂ.'' ಶ್ರದ್ಧೆ ತಾಂ
ಸಪ್ರಾಣವಾಗುವೋಲಮೃತ ತರ್ಪಣವಿತ್ತು
ತೀರಕೇರ್ದನ್ ಸಹೋದರ ಸಹಿತ ತೇಜಸ್ವಿ; ಮೇಣ್
ಬದರಿಯ ಫಲಂಬೆರಸಿದಿಂಗುಳದ ಹಿಂಡಿಯಂ
ದರ್ಭಾಸ್ತರದೊಳಿಟ್ಟು ಪಿಂಡವಿತ್ತನ್: ''ತಂದೆ,
ತಾನುಂಬುದೇನಿಹುದೊ ತನ್ನಿಷ್ಟ ದೇವತೆಗೆ
ತಾನದೆ ನಿವೇದನಂ. ನಮ್ಮುಣಿಸನೆಯೆ ನಿನಗೆ
ಕೊಡುವೆವಡವಿಯ ಬಡತನದ ಬಿರ್ದನೊಪ್ಪಿಸಿಕೊ,
ಪೂಜ್ಯ ಹೇ ಕೋಸಲಾಧೀಶ.''

ತದನಂತರಂ

ಏರಿದರ್ ದುಃಖಿಗಳ್ ಪರ್ಣಕುಟಿಯಿರ್ದೆಡೆಗೆ,
ರಮ್ಯ ಸಾನು ಮಹೀಧರೋನ್ನತಿಗೆ. ಅನಿತರೊಳ್
ಗುರು ವಸಿಷ್ಠಂವೆರಸಿ ಪುರಜನರ್, ಪರಿಜನರ್,
ಗುರುಜನರ್, ಕೌಸಲೆ ಸುಮಿತ್ರೆಯರ್ ಮೇಣ್ ಕೈಕೆ
ಮೊದಲಪ್ಪ ಮಾತೆಯರ್, ಮಹಿಳೆಯರ್, ಕಾಲ್‌ನಡೆದೆ
ಬಂದರಲ್ಲಿಗೆ; ಕಂಡು ರಾಮನಿರವಂ ಸುಯ್ದು
ಗೋಳಿಟ್ಟರಿನ್ನೊಂದು ಪರಿದುದೆನೆ ಮಂದಾಕಿನಿ.
ಮಿಂದನು ರಘೂದ್ವಹಂ ಮತ್ತೊಮ್ಮೆ, ಹೃದಯದಿಂ
ಹೊಮ್ಮಿಹರಿದಾ ಕಣ್ಣ ಹೊಳೆಯಲ್ಲಿ. ಶೋಕಿಸುತೆ

ಕೌಸಲ್ಯೆಯಡಿಗೆರಗಲಾ ಬೆಂದೆದೆಯ ತಾಯಿ,
ಮಲಿನ ವಸನದ ಮಲಿನ ವದನದ ಕರುಣಮೂರ್ತಿ,
ಬಿಕ್ಕಿ ಬಿಕ್ಕಳುತಳುತೆ ತಬ್ಬಿದಳ್ ಕಂದನಂ,
ಪೋದಾಸೆ ಬರ್ಪಾಸೆಯಂ ತಬ್ಬುವೋಲ್. ಅಂತೆ
ನಮಿಸಿದರ್ ಸೌಮಿತ್ರಿಯುಂ ಜನಕಜಾತೆಯುಂ.
ಪಿರಿಯ ತಾಯಾತನಂ ಪರಸಿ, ಸೊಸೆಯಂ ನೋಡಿ
ಮುಂಡಾಡಿ ಗೋಳಿಟ್ಟಳರಸುಕುವರಿಯ ಗತಿಗೆ.
ರಘುಜಂ ಸುಮಿತ್ರೆಗಭಿವಂದಿಸಿ, ಹುಡುಕಿ ನೋಡಿ,
ದೂರದೊಳ್ ತಲೆಬಾಗಿ ನಿಂದ ಪಶ್ಚಾತ್ತಾಪ
ಶೋಕ ಭಾರಾಕ್ರಾಂತ ಗಾತ್ರೆಯಂ, ಕೈಕೆಯಂ,
ಕಿರಿಯಮ್ಮನಂ ಭರತನಂಬೆಯಂ ಕಂಡೊಡನೆ
ಬಳಿಗೆಯ್ದಿದನ್ ಕರುಣಿ. ಪಾಪಿಯಂ ಬೆಂಬಿಡದೆ
ಹಿಂಬಾಲಿಸಟ್ಟಿ ಹಿಡಿಯುವ ಕೃಪಾಕೇತುವೋಲ್
ಮುಟ್ಟಿಹಿಡಿದನು ಪಾದಯುಗ್ಮಮಂ. ಕೆಡೆದಳಾ
ಕೇಕಯ ನೃಪಕುಮಾರಿ ರಾಮಾಂಘ್ರಿಗಂಘ್ರಿಪಂ
ಸಗ್ಗದಗ್ಗಿಯ ಹೊಯ್ಲಿನುರುಬೆಗೆ ಸಿಡಿಲ್ದುರುಳಿ
ಬೀಳ್ವಂತೆ. ಪಿಡಿದೆತ್ತಿದನು ರಾಮನಾಕೆಯಂ,
ಭಕ್ತನಾತ್ಮವನೆತ್ತುವಂತೆ ಭಗವತ್ ಪ್ರೀತಿ.
ದಿವ್ಯಮಾ ಪ್ರೇಮಹಸ್ತಸ್ಪರ್ಶಕಾ! ಕೈಕೆ ತಾಂ
ಕಂಡಳೇನನೊ? ಶಾಂತವಾದಳ್! ಮಗನನೆಕ್ಕಟಿ
ಸನ್ನೆಗಣ್ಣಿಂ ಕರೆದು, ರಾಮ ಯತಿ ರೂಪಮಂ
ನಿಡಿದುನೋಡಿ ಕೈಮುಗಿದಳಲ್ಲಿ ಕಂಡವರೆಲ್ಲ
ಬೆರಗು ಬಿಲ್ಲಾಗೆ. ಮಾತೆಯ ಮೌನವೀಣೆಯನೆ
ಮಿಡಿವನೆಂಬೋಲ್ ಭರತನಾಡಿದನ್, ತೋಡಿದನ್
ತನ್ನೆದೆಯ ಭಾವಾಭಿಲಾಷೆಯ ಸರೋವನಂ
ಕೋಡಿವರಿಯಲ್ಕೆ. ಕೇಳ್ದಾ ವನೌಕಸರಿಗೆರ್ದೆ
ಮರುಗಿದತ್ತಂತೆ ನಲಿದತ್ತು, ದಾರುಣ ಕಥೆಗೆ
ಮೇಣಾ ಕಥನ ಕಲೆಯ ರಮ್ಯತೆಗೆ.

ಋಷಿಗೋಷ್ಠಿ
ಮೌನಮಿರೆ, ಜನಸಮೂಹಂ ಮೂಕಮಿರೆ, ಗಗನ
ನೀಲ ನಯನಂ ಸಾಕ್ಷಿಯಾಗಿರೆ, ಗಿರಿಶ್ರೇಣಿ

ಕೇಳುತಿರೆ, ವನಪಂಕ್ತಿಯಾಲಿಸಿರೆ, ನಲಿಯಲಾ
ತ್ರಿಭುವನಂ ಭರತನೊರೆದನು ವಚನವೇದಮಂ;
ರಾಮನಾಲೈಸಿದನು ಲೋಕ ರೋಮಾಂಚಕರ
ವಾಣಿಯಿಂ ಭವಿಸಿದಾ ಧರ್ಮದಾಮೋದಮಂ!
ತಾನಯೋಧ್ಯೆಯನುಳಿದ ದಿನದಿಂ ಮೊದಲ್ಮಾಡಿ
ಚಿತ್ರಕೂಟಕೆ ಭರತನಾಗಮನದಾ ವರೆಗೆ
ಕತೆಗೇಳ್ದನಶ್ರುವಿಗಳಿತ ಕಮಲ ಲೋಚನಂ,
ನಡುನಡುವೆ ನಿಡುಸುಯ್ದುಸುಯ್ದು. ಮಾರುತ್ತರದ
ಪನಿಮಳೆಗೆ ಜನಮನ ನಿರೀಕ್ಷಣಾ ಚಾತಕಂ
ತುದಿವೆರಳ ಮೇಲೆ ಕೊರಳೆತ್ತಿ ನಿಂತಿರೆ, ಮೌನಿ
ರಾಮನ ಮನಂ ಮಗ್ನಮಾದತ್ತು ಚಿಂತಾಬ್ಧಿ
ತಲಕೆ. ಪಿತೃವಾಕ್ಯ ಪರಿಪಾಲನಾ ನಿಗಳದಿಂ
ಧರ್ಮದಾಲಾನಕ್ಕೆ ಕಟ್ಟುಗೊಂಡಿನಕುಲನ
ಧೈರ್ಯದೈರಾವತಂ ಹೋರಾಡುತಿರ್ಪುದಂ
ಕಾಣುತೆ ಗುರು ವಸಿಷ್ಠನಾಡಿದನ್, ಮಾವುತಂ
ತೋತ್ರದಿ ತಿವಿಯುವಂತೆ: ''ನೆನೆ ನೈಜಧರ್ಮಮಂ
ಜನ್ಮದುದ್ದೇಶಮಂ, ತಪನಕುಲ ನೃಪಸೂನು.
ಕೆಡಿಸುವೆಯೊ ಕಾಡೊಳಲೆದಾಯುಃಪ್ರಯಾಣಮಂ?
ಲೋಕದುದ್ಧಾರಕ್ಕೆ ಮೇಣಾತ್ಮ ಸಂಸ್ಕೃತಿಗೆ
ನೈವೇದ್ಯವಾಗುವೆಯೊ? ನೆನೆ!'' ಶಿಷ್ಯನಾತ್ಮಮಂ
ಪೊಕ್ಕುದಾಚಾರ್ಯನಾ ವಾಗಿಂಗಿತಂ. ಸ್ವಪ್ರಜ್ಞೆ
ಪ್ರೋಜ್ವಲಿಸಿದತ್ತಸ್ಥಿರತೆ ಮಾಣ್ದುದಾತ್ಮದೊಳ್
ಮೂಡಿದತ್ತದ್ಭುತಂ ವಜ್ರಸುಸ್ಥಿರ ದೃಢತೆ.
ತಿರುಗಿದುದು ಬಿದಿಯ ಮೊನೆಯಂಕುಶದ ತಿವಿತಕ್ಕೆ
ರಾವಣಾರಿಯ ಮನದ ಮದಕರಿ ಅಯೋಧ್ಯೆಯಿಂ
ತೆಂಕಣಕ್ಕೆಸೆವ ಲಂಕೆಯ ಲಲಾಟದ ಲಿಪಿಗೆ
ಕಾಲಕಪಿಯಾಗಿ. ತಾಯಂದಿರುಂ, ಗುರುಗಳುಂ,
ಪರಿಜನಪ್ರಜೆಗಳುಂ, ನೆರೆದಿರ್ದ ಋಷಿಗಳುಂ,
ಬಾಲಋಷಿ ಭರತನುಂ ಕೇಳುತಿರೆ, ಋತದರ್ಶಿ ತಾಂ
ನುಡಿದನಪ್ರತಿವಾದ ವೇದಮಂ, ಸಮಹೃದಯ
ಸಂವೇದ್ಯಮಂ:

"ಧನ್ಯನಾಂ ನಿಮ್ಮ ಕರುಣಶಿಶು.
ಪೂಜ್ಯರಾಶೀರ್ವಾದ ಹಸ್ತದೋಲದಿ ಸದಾ
ಸುಕ್ಷೇಮಿ; ಕಲಿ, ಬಲಿ, ಸುಖಿ ನಿರಂತರಂ; ಮತ್ತೆ
ಧರ್ಮ ಸಂಪ್ರೇಮಿ. ಪಿತೃದೇವನಾ ದೈನ್ಯಮಂ
ದುಃಖಮಂ ನಿಧನಮಂ ಕೇಳ್ದೆನ್ನ ರಿಕ್ತಮತಿ
ತತ್ತರಿಸಿತಾದೊಡಂ, ಮಾತೃ ಶೋಕಾಗ್ನಿಯಂ
ಮುಟ್ಟಿದೆದೆ ಬೇಯುತಿಹುದಾದೊಡಂ, ಪ್ರಜೆಗಳೀ
ಪ್ರೀತಿಗಾತ್ಮಂ ಅಯೋಧ್ಯಾ ನಗರದತ್ತಣ್ಗೆ
ತೇಲುತಿಹುದಾದೊಡಂ, ಸರ್ವಕೆ ಮಿಗಿಲೆನಲ್ಕೆ
ಭರತ ಬಂಧುಪ್ರೇಮ ಫಣಿ ನನ್ನ ಸರ್ವಮಂ
ಬಿಗಿದೊತ್ತಿ ಸುತ್ತಿ ನುಂಗುತ್ತಿರ್ಪುದಾದೊಡಂ,
ಪಿತೃವಾಕ್ಯ ಪರಿಪಾಲನಾರ್ಥಮಾಂ ವನವಾಸಿ
ಪದಿನಾಲ್ಕು ಬರಿಸಂಬರಂ. ತಂದೆ ತೀರ್ದೊಡೇಂ
ತೀರ್ದುದೆ ತಂದೆಯಾಜ್ಞೆ? ತಂದೆಗಿಂ ಪೆರ್‌ತಂದೆ ದಲ್
ಧರ್ಮಂ; ಚಿರಂಜೀವಿ ಮೇಣ್? ವಿಧಿಯ ನಿಯತಿಯ ಪವಿಯ
ಘಾತಕೆ ಸಿಲುಕಿ ತಂದೆ ನನ್ನನಡವಿಗೆ ನೊಂದು
ಕಳುಹಿ ಬೆಂದುರಿದಳಿದನೈಸಲೆ? ಜಿತೇಂದ್ರಿಯಂ
ತಾನಂತೆಸಗುವೋಲೆಸಗಿದತ್ತಾ ವಜ್ರವಿಧಿ!
ಕುಬ್ಜೆ ಮಂಥರೆ ಬರಿಯ ಹುಲುನೆವಂ: ಮೂಡುವುದೆ
ಲೋಕ ಲಾವಣ್ಯನಿಧಿ ಮಾತೆ ಕೈಕೆಯ ಮನದಿ
ಕುಚರ ಬುದ್ಧಿಯ ಕುರೂಪಂ? ಪೊಣ್ಮುವುದೆ ವಿಕೃತಿ
ಸೌಂದರ್ಯದಿಂ? ಚೆಲ್ವಿನಭಿಲಾಷೆ ತಾನೇಗಳುಂ
ಚೆಲ್ವಿಂಗೆ ತಾಯ್. ಧರ್ಮದೇವತಾ ಕ್ರೌರ್ಯಕ್ಕೆ
ಕರುಣೆಯಲ್ಲದೆ ಬೇರೆ ಗುರಿಯಿಹುದೆ? ಕಿರಿಯ ತಾಯ್
ನಿಯತಿ ಹಸ್ತದೊಳೊಂದು ಕೈದು ತಾಂ. ಕೀರ್ತಿಯಂ
ಮೇಣ್ ಜನಪ್ರೀತಿಯಂ ತೆತ್ತಾಕೆ ತಾಂ ಧನ್ಯೆ,
ದೇವ ಸನ್ಮಾನ್ಯೆ: ಮರೆವುದು ತುದಿಯೊಳಾ ನನ್ನಿ!
ಕಜ್ಜಮಾವುದಕಾಗಿ ನೀಗಿದನೊ ತಂದೆಯಸುವಂ,
ತನ್ನ ತೇಜವನೆಲ್ಲ ತಾನೀಡಾಡಿದಳೊ ತಾಯಿ,
ದೇವದೇವತೆಗಳಾ ವ್ಯೂಹ ಸಂಯೋಜನೆಗೆ
ಬನ್ನಮೆನ್ನಿಂದಾಗದಯ್. ಕೇಳ್, ಸಹೋದರನೆ:

ರಾಮನೀ ಪೂಣ್ಕೆ ದಲ್ ಸುಸ್ಥಿರಂ ಮೇರುವೋಲ್!''
ಘೋಷಿಸಲ್ ಗೋಪುರಾಗ್ರದ ಗುಡಿಯ ಹೆಗ್ಗಂಟೆ,
ಆ ಲೌಹ ಭೀಮನಾದಂ ವಾಯುಮಂಡಲಕೆ
ಕಂಪ್ರನವನಿತ್ತುರ್ವಿ ಕೊರ್ವುತೊಯ್ಯನೆಯೆಂತು
ನಿಶ್ಶಬ್ದತಾ ಲೀನವಹುದೊ ಆ ಮಾಳ್ಕೆಯಿಂ
ನಿಂದುದಾ ಮಂದ್ರಗಂಭೀರ ಮೇಘಧ್ವನಿಯ
ಧೀರ ಸೀತಾನಾಥ ಭಾಷಣಂ. ಕಂದರದ
ದೂರದಿಂದೇರಿ ಬಂದತ್ತು ಮಂದಾಕಿನಿಯ
ಮೊರೆ. ಭಂಗಿಸಿತು ಭರತನಳುವ ಸುಯ್ಯುಸಿರೊಂದೆ
ಆ ವನ್ಯನೀರವತೆಯಂ, ಮತ್ತೆ ಮೌನಮಂ
ಜನ ಸಂಘದಾ.
"ಮುನ್ನಮೊರೆದನಿಲ್ಲವೆ ನಿನಗೆ
ಜಾಬಾಲಿ? ರವಿಯನಸ್ತಾದ್ರಿಯಿಂ ಮೂಡೆಂದು
ಪೀಡಿಪೊಲೆ ಕಾಡಿಸುತ್ತಿಹೆ ರಾಮಚಂದ್ರನಂ,
ಭರತೇಂದ್ರ. ವಿಶ್ವಶಕ್ತಿಸ್ಫೂರ್ತನೀತನುಂ
ತಿಳಿಯೆ ವಿಶ್ವವ್ಯಕ್ತಿ. ಶುಕ್ತಿಕೆ ಸಮುದ್ರಮಂ
ಒಳಕೊಳ್ವುದೇನ್? ಕೋಸಲಾಕಾಶವಿಸ್ತಾರಮೀ
ರಾಮನಾತ್ಮದ ವಿರಾಟ್ ಪಕ್ಷ ವಿಸ್ಫಾಲನೆಗೆ
ಸಾಲದಲ್ತಂ. ಅನಂತಾಕಾಶಯಾತ್ರಿ, ಕೇಳ್,
ರಾಮನಿಚ್ಛಾ ವೈನತೇಯಂ. ಅನಂತಮಂ
ಸಾಂತದಲ್ಪಕ್ಕೆಳೆವ ಸಾಹಸಂ ಸಾಲ್ಗುಮಿನ್. ಏಳ್,
ಶೋಕಮಂ ಬಿಟ್ಟೆನ್ನ ಪೇಳ್ವುದಂ ಗೆಯ್. ಮುಂದೆ
ತಾನಪ್ಪುದೊಳ್ಪು, ಕೇಳ್, ಲೋಕಕೆ, ನಿನಗೆ, ಕೋಸಲಕೆ.''
ಸಂತೈಸಿದನ್ ಗುರುವಸಿಷ್ಠನೆಂತಾದೊಡಂ
ಇಂತಿಂತುಟಾ ಕೈಕೆಯ ಕುಮಾರನಂ. ಇಭಂ
ದಂತದಿಂದಿರಿದೊಡಂ ಸೊಂಡಿಲಿಂದಪ್ಪಿತೆನೆ,
ರಾಮನುಂ ನುಡಿಪನೆಯಿನಿರಿದೊಡಂ ತೋಳ್ಗಳಿಂ
ತಬ್ಬಿದನ್ ತಾವಿರ್ವರೊಂದೆಂದು ತೋರ್ಪಂತೆ,
ಮತ್ತೆ ಗುರುವಾಕ್ಯದೊಳ್ ಶ್ರದ್ಧೆ ಸಂಭವಿಪಂತೆ
ಸೋದರಗೆ. ಮೇಲೆ ಮುನಿಯಾದೇಶಮಂ ವರಿಸಿ,
ರಾಮಪಾದ ಸ್ಪರ್ಶ ಮಹಿಮಾನ್ವಿತಂಗಳಂ

ದಿವ್ಯಪಾದುಕೆಗಳಂ, ದೇವನಡಿ ದೇವಂಗೆ
ಪಡಿಯೆನುತೆ, ಮುಡಿಗೇರಿಸುತ್ತೆ ಭರತಂ:
"ಆಲಿಸಿಂ,
ಅಮರರಿರ, ಗಗನ ಗಿರಿ ನದಿ ವನಸ್ಥಳಗಳಿರ,
ಮುನಿಗಳಿರ, ಆಚಾರ್ಯರಿರ, ಧರ್ಮದೇವರಿರ,
ಮಾತೃದೇವತೆಗಳಿರ, ಪರಿಜನ ಪ್ರಜೆಗಳಿರ,
ಪೂಜ್ಯ ಪಾದುಕೆಗಳಂ ಪೂಜ್ಯಪಾದಂ ಗೆತ್ತು
ಸಿಂಹಾಸನದೊಳಿಟ್ಟು ಪೂಜಿಸುವೆನಾಂ. ಸೇವೆ
ಭ್ರಾತೃದೇವಂಗೆಂದು ತಿರೆವೊಲಪೊರೆಯನಾನುವೆಂ
ಸಂವತ್ಸರ ಚತುರ್ದಶಂ ಬರಂ. ಮರುದಿನಂ,
ದೊರೆಕೊಳ್ಳದಿರಲೆನಗೆ ಶ್ರೀರಾಮದರ್ಶನಂ,
ಬೆಂಕೆಗೊಡಲಂ ನಿವೇದಿಪೆನಣ್ಣದೇವನಂ
ಸಂದರ್ಶಿಸಲ್ಕಾತ್ಮ ಲೋಕದಲಿ. ಅನ್ನೆಗಂ
ವ್ರತಿಯಾಂ ಜಟಾವಲ್ಕಲಾನ್ವಿತಂ. ನಿಚ್ಚಮುಂ
ರಾಮಾಭ್ಯುದಯ ತಪೋಮಗ್ನನಪ್ಪೆನಗೆ ನೀಂ
ಕರುಣಿಸಿಂ. ಪರಕೆಗೆಯ್ಯಿಂ!"
ಮಿಂಚಿತಾ ರಾತ್ರಿ
ಚಿತ್ರಕೂಟದೊಳವನಿಜಾರಮಣ ಸನ್ನಿಧಿಯ
ಶಾಂತಿಯಲಿ. ಕಟ್ಟುವನೊ ಕೃಪೆಯ ಪಾಥೇಯಮಂ
ಪದಿನಾಲ್ಕು ವರುಷದಾ ನಗರವನವಾಸದಾ
ದೀರ್ಘತರಯಾತ್ರೆಗೆನೆ, ಕೈಕೆಯ ತನೂಭವಂ
ತೊಯ್ಯುತಿರೆ ರಾಮಸಂಗದ ಸೊದೆಯ ಸೋನೆಯೊಳ್,
ಪ್ರಾಣಮಯ ಪೃಥಿವಿಯಾ ನವಜೀವನ ವ್ರತಕೆ
ಜೀವನ ನವೀನ ಚೇತನ ತೀರ್ಥಮೆರೆಯಲ್ಕೆ
ಕುಂಕುಮ ಕನಕ ನವ್ಯ ನವರತ್ನಕಾಂತಿಯಿಂ
ತೀವಿ ಮಿನುಗುವ ಕನತ್ಕಲಶಮಂ ಕೈಲಾಂತು
ಮೂಡುವೆಟ್ಟಿನ ಕೋಡನೊಯ್ಯನೆಯೆ ಏರಿದಳೊ
ಚಿರ ನೂತನಾ ಸೃಷ್ಟಿಲಕ್ಷ್ಮಿಯೆನೆ, ರತುನ ರವಿ
ರುಚಿಸಿದನು ಕೋಟೀರ ಕೋಟಿ ಕಿರಣ ಕಿರೀಟಿ
ತಾನಾಗಿ. ಪೊರಮಟ್ಟನಾ ಚಿತ್ರಶೈಲದಿಂ
ಭರತೇಂದ್ರನುಂ ರಾಜನಗರಾಭಿಮುಖನಾಗಿ,

ಪೂಜ್ಯಪಾದನ ಪೂಜ್ಯಪಾದುಕಾ ಕೋಟೀರ
ತೇಜದಿಂ ಸಮ್ರಾಜನಾಗಿ. ಸುಯ್ಪುನಿವೆರಸಿ
ಬೀಳ್ಕೊಂಡರೊರ್ವರೊರ್ವರನಳಲ್ ವೆಂಕೆಯಿಂ
ದಹಿಸಿ. ಗೋತ್ರಸ್ಕಂಧಮಂ ಮೆಟ್ಟಿ, ಕಣ್ದಿಟ್ಟಿ
ಮುಟ್ಟುವನ್ನೆಗಮಟ್ಟಿ ನೋಡುತಿರೆ ಸೌಮಿತ್ರಿ ಮೇಣ್
ರಾಮಸೀತೆಯರೊಡನೆ ನಿಂದ ಮುನಿಸಂಕುಲಂ,
ಭರತವಾಹಿನಿ ದಾಂಟಿದತ್ತು ಮಂದಾಕಿನಿಯ
ವಾಹಮಂ; ಘೋಷಮೊಯ್ಯನೆ ನಿಂದುದಾಲಿಸಿರೆ;
ಮೇಣ್ ಕಣ್ಗೆ ಮರೆಯಾಯ್ತು ಸೈನ್ಯಧೂಳೀ ಪಥಂ,
ಬೆಟ್ಟಸಾಲ್ಗಳ ನಡುವೆ ಕಣಿವೆವಟ್ಟೆಯ ಕೊನೆಯ
ದಿಗ್ದೂರಮಂ ಮರ್ಬುಗೈದು.
ಋಷ್ಯಾಶ್ರಮಂ
ಬಳಿಗೆವರೆ, ಗುರು ಭರಧ್ವಾಜನಡಿಗಳಿಗೆರಗಿ,
ನಡೆದುದಂ ಬಿನ್ನಯ್ಸಿ, ಪರಕೆಯಂ ಕೈಕೊಂಡು,
ಮುಂಬರಿದು, ಸೂರ್ಯತನಯೆಯನುತ್ತರಿಸಿ, ಮತ್ತೆ
ದಾಂಟಿ ಸುರನಿಮ್ನಗೆಯನಾ ಶೃಂಗಿಬೇರಮಂ
ಪೊಕ್ಕು, ಗುಹನಾತಿಥ್ಯಮಂ ಗ್ರಹಿಸುತಾತನಿಂ
ಬೀಳ್ಕೊಳುತ್ತಲ್ಲಿಂದೆ ಮುಂದೆ ನಡೆದುದು ಯಾತ್ರೆ
ಕೋಸಲಕೆ.
ಹಾ! ಭಾಗ್ಯಹೀನ ದೀನ ಅಯೋಧ್ಯೆ,
ನಿನಗುಂ ಅರಣ್ಯಗತಿಯಾಯ್ತಲಾ ರಾಮನಾ
ವನವಾಸದಿಂ, ದಶರಥನ ನಿಧನದಿಂ ಮೇಣ್
ಭರತನಾ ಪರಿತ್ಯಾಗದಿಂ! ಶ್ರೇಷ್ಠರಿಲ್ಲದಿರೆ,
ಏನಿರ್ದರೇನಂತೆ, ಮಸಣಮಾ ಪತ್ತನಂ
ತತ್ತ್ವ ವಿದ್ಯಾ ಕಲಾ ಸಂಗೀತ ಸಾಹಿತ್ಯ
ಸಕಲ ಸಂಸ್ಕೃತಿಗೆ. ಬಿತ್ತರದ ಬೀದಿಗಳೆರಡು
ಕೆಲದಿ ಮುಗಿಲಂ ಮುಟ್ಟಿ ಮೆರೆದೊಡೇಂ ಸ್ಪರ್ಧೆಯಾ
ಪ್ರಾಸಾದ ಪಂಕ್ತಿ? ರಂಜಿಸಿದೊಡೇಂ ರಜನಿಯಂ
ಪಗಲುಗೈದಾಗಸದ ಚುಕ್ಕಿಗಳನೇಳಿಸುತೆ
ಕಿಕ್ಕಿರಿದು ಕಣ್ಬೆರಗುಗೊಳಿಸಿ ಗೊಂಚಲ್ಗೊಂಡು
ಉರಿವ ವಿದ್ಯುದ್ದೀಪ ರಾಜಿ? ಬಣ್ಣದ ಬುಗ್ಗೆ

ಕಣ್ಗೆ ಕಾಮನ ಬಿಲ್ಗಳಂಗನೆಯರಾಟವೆನೆ
ಸಾಲ್ಗೊಂಡು ವಿವಿಧಗತಿಯಾ ಕಲಾಕೃತಿಯಿಂದೆ
ರಂಗುರಂಗಿನ ತೋಂಟರಂಗದಿ ಮನಂಗೊಳಿಸಿ
ಕುಣಿದೊಡೇಂ? ಪ್ರಾಸಛಂದಃಪೂರ್ಣಮಪ್ಪುದೇಂ
ಪುರುಷಾರ್ಥ ಶಾಶ್ವತದ ರಾಸಲೀಲಾ ಬೃಂದೆ?
ಜನಮನೋಮಂದಿರದ ಸುಸ್ವಪ್ನಗೋಪುರದ
ಕಲಶಂ ನಭಶ್ಚುಂಬಿಯಾಗದಿರೆ, ಋಷಿಹೃದಯ
ಮಂಗಳಾರತಿ ಬಾಳಿನಂಧತೆಯನಳಿಸದಿರೆ,
ಕವಿಕೃತಿಯ ವರ್ಣಗಾನಂ ಮಹನ್‌ನಿತ್ಯತಾ
ಸ್ವರ್ಣಸುಂದರ ಇಂದ್ರಿಯಾತೀತ ನಂದನದಿ
ನವರಸಾಪ್ಸರಿಯರಂ ನರ್ತನಂಗೈಸದಿರೆ, ಪೇಳ್,
ಏನಿದುರ್ಮೇನ್ ಅನಾಗರಿಕತಾ ಶ್ರೀ, ದಿಟಂ
ಮಸಣಮಾ ಪತ್ತನಮಯೋಧ್ಯೆ ತಾನಾದೊಡಂ!
    ಪ್ರೇತವನಮಂ ಪುಗುವನೇಂ ಪೂಜ್ಯಪಾದುಕಾ
ಚೇತನಂ? ಪಾಳ್ಮಸಗಿದಾ ದುಃಸ್ಮೃತಿಯ ನಿಧಿಗೆ
ಬೆನ್ದಿರುಹಿ, ಬಳಿಯ ನಂದಿಗ್ರಾಮಕೈತಂದು,
ಪಾದುಕಾ ಪಟ್ಟಾಭಿಷೇಕಮಂ ಗೆಯ್ದುವುಗಳನೆ
ಪೂಜ್ಯಾಗ್ರಜಂ ಗೆತ್ತು, ರಾಜ್ಯಭಾರವ್ರತದಿ
ನಿಂದನಯ್ ಭರತನನಿಶಂ ಶ್ರೀರಾಮ ಸುಕ್ಷೇಮ
ಚಿಂತನಾ ಪ್ರಾರ್ಥನೆಗೆ ತೆತ್ತು ತನ್ನಾತ್ಮಮಂ.

## ಸಂಚಿಕೆ ೧೦

# ಅತ್ರಿಯಿಂದಗಸ್ತ್ಯಂಗೆ

ಅತ್ರಿಮುನಿಯಾಶ್ರಮಕ್ಕಾರತಿಯನೆತ್ತಿತ್ತು
ರವಿಯ ಹೊಂದಳಿಗೆಯಿಂದೋಕುಳಿಯನೆರಚುವಾ
ತ್ರೇತಾ ವಿಪಿನಸಂಧ್ಯೆ. ಕೀರ್ತನಂಗೈದಿರ್ದುದಾ
ಆಶ್ರಮ ದ್ರುಮಶಿಖರ ನೀಡ ನಿಕಟಾಭಿಮುಖ
ಕಲಕಲ ತುಮುಲ ಪಕ್ಷಿಗಾನಂ. ಪವಿತ್ರಸತಿ,
ಅನಸೂಯೆ, ಸೃಷ್ಟಿಗೌರಿಯ ಕಲಾಪೂಜೆಯಂ
ಧ್ಯಾನಿಸುತ್ತಾನಂದ ಶಾಂತಿಯಿಂದಿರೆ, ''ಮಹಾ
ಮುನಿಸತಿಯೆ, ಕೃಪೆದೋರೆಮಗೆ ನಿನ್ನ ಮಕ್ಕಳಿಗೆ!''
ಎಂಬ ದನಿಗೇಳ್ದತ್ತಕಡೆ ತಿರುಗಿದಳ್. ಮುದುಕಿ
ಕಣ್ ಕೀಲಿಸೀಕ್ಷಿಸಿರೆ ಗುರುತನರಿಯಲ್, ''ರಾಮನಾಂ,
ಸೀತೆಯಿವಳೆನ್ನ ಸತಿ, ಲಕ್ಷ್ಮಣನೀತನೆನಗೆ
ಸಹೋದರಂ!'' ಎನುತೆ ತನ್ನಂ ತಾನೆ ಪರಿಚಯಿಸಿ,
ಮಣಿಯೆ ಮುಂಬರಿದಾತನಂ, ಕಿರುಗೈದ ಕಣ್ಗಳಿಂ
ಕಿರಿಹಿಡಿದು ದಿಟ್ಟಿಸುತ್ತಾ ಶಿಥಿಲೆಯಾ ವಲಿತೆ
ಆ ಸ್ಥವಿರೆ ಮೇಲೆಳ್ದಳತ್ರಿಭಾರ್ಯೆ. ಪಿಂತೊರ್ಮೆ
ತನ್ನಯ ತಪೋಮಹಿಮೆಯಿಂದೆ ಬರಗಾಲಮಂ
ತಡೆಗಟ್ಟಿ, ಶೀರ್ಣವಾರಿಯ ಜಾಹ್ನವಿಗೆ ಸಲಿಲ
ಸಂಪೂರ್ಣತೆಯನೆಸಗಿ, ಮೇಣೇರ‍್ಯೆದಿರುಳ್ಗಳಂ
ದೇವಕಾರ್ಯನಿಮಿತ್ತಮೊಂದಿರುಳ್ಮಾಡಿದಾ
ಪಾಂಡುರ ಜರಾ ಮೂರ್ಧಜೆಯ ವೇಪಮಾನಮಾ
ವ್ರತಗೇಹಮಂ ದೇಹಮಂ ಪಿಡಿದನೊಯ್ಯನೆಯೆ

ರಾಮಚಂದ್ರಂ. ವಂದಿಸಲ್ಕನಿಬರುಂ ಆರ್ಯೆ,
ಆ ನಮಸ್ಕಾರ್ಯೆ, ಪರಸಿದಳತ್ರಿಋಷಿಭಾರ್ಯೆ
ಕಣ್ ತೊಯ್ಯೆ ಸೊಗಸಿ.
"ಬಾ ಕಂದ, ರಘುರಾಮಾರ್ಯ;
ಬಾ ಮಗಳೆ, ವೈದೇಹಿ; ಬಾರ, ಲಕ್ಷ್ಮಣದೇವ;
ನಿಮ್ಮನತಿಥಿಗಳಾಗಿ ಪಡೆದ ನಮ್ಮಾಶ್ರಮಕೆ
ಬಾಳ್ ಪಣ್ತುದಿಂದು. ನೋಡದೊ, ಸಂಜೆ ನನ್ನವೊಲೆ
ರಾಮಾನುರಾಗದಿಂದುಜ್ವಲಿಸುತಸ್ತಗಿರಿಯಾ
ಪರ್ಣಶಾಲೆಗೆ ಪುಗಲ್ಕುಜ್ಜುಗಂಗೈಯುತಿದೆ!
ನೋಡಲ್ಲಿ: ಮಂದೈಪ ಕಳ್ತಲೆಯ ಮರ್ಬಿನೊಳ್
ಸ್ವಲ್ಪಪರ್ಣದ ಮಹೀರುಹಮುಂ ನಿರೀಕ್ಷಣೆಗೆ
ತೋರ್ಪುದು ಘನೀಭೂತಮಾಗಿ. ಆ ಬಂದರದೊ
ಸ್ನಾನಾರ್ದ್ರ ಸಲಿಲಸಂಪ್ಲುತ ವಲ್ಕಲರ್, ಕಲಶ
ಸಂಲಗ್ನ ಕರರಾ ತಪಸ್ವಿಗಳ್, ನದಿಯಿಂದೆ
ತಂತಮ್ಮ ಪರ್ಣಾಲಯಕ್ಕೆ. ಆ ಬಂದನದೊ
ಪತಿದೇವನಾತನೆ ಮಹರ್ಷಿ, ಭಗವಾನ್ ಅತ್ರಿ!"
ನಿರ್ವಿಕಲ್ಪ ಸಮಾಧಿಯೊಂದನಿರ್ವಚನೀಯ
ಮೌನಮಂ ಕರುವಿಟ್ಟ ಶಾಂತಿಯ ನಿಜಾಕೃತಿಯೊ
ಪೇಳೆನಲ್ಕೈತಂದನಾ ಸನಾತನ ಯೋಗಿ,
ಪ್ರತ್ಯಕ್ಷ ಪ್ರಾಚೀನತಾ ಪ್ರತಿಮನಾದೊಡಂ
ನವ್ಯ ಕಾಲತ್ರಯ ಜ್ಞಾನಿ. ಮಣಿದೆಳೆಯರಂ
ಪರಸಿದನು ಮಂತ್ರಿಸುತೆ ಓಂ ಶಾಂತಿಯಂ. ನುಡಿಸಿ
ನಲ್ಮೆಯಿಂ ಕರೆದೊಯ್ದನೆಲೆವನೆಗೆ.
ಭರತನಂ
ಬೀಳ್ಕೊಂಡನಂತರಂ, ರಾವಣ ಸಹೋದರನ
ಖರನಲಗೆ ಮುನಿಗಣಂ ಚಿತ್ರಾದ್ರಿಯಂ ತ್ಯಜಿಸೆ,
ಕಹಿನೆನಹಿಗವಚತ್ತು ರಾಮಚಂದ್ರನುಮದಂ
ಕಳೆದು ಬಂದಾ ಸುದ್ದಿಯಂ ಕೇಳಿದತ್ರಿಋಷಿ
ನೋಡಿದನು ತನ್ನ ಮಡದಿಯ ಮೊಗವನಾಕೆಯುಂ
ಸೀತೆಯ ದೆಸೆಗೆ ನೋಡಿ ಸುಯ್ದುಳಿರ್ದಗರಗಿ. "ಹಾ,
ವಿಧಿಯ ಕೃತಿಕೌಶಲಕವಧಿಯಿಹುದೆ?" ಎಂದೆನುತೆ

ತನಗೆ ತಾನಾಡಿಕೊಂಡಾ ಮುನಿ ಧರಾತ್ಮಜೆಯ
ಪತಿಗೆ, ''ಶಿಲ್ಪಿಯ ನಿಶಿತ ಟಂಕದ ಮೊನೆಯ ಕಠಿನ
ಶಿಕ್ಷೆಗಲ್ಲದೆ ಪೊಣ್ಮುವುದೆ ಕಲಾಪೂರ್ಣಮಹ
ದೇವತಾ ವಿಗ್ರಹಂ?'' ಎನುತನ್ಯವಿಷಯಮಂ
ನುಡಿದೊಡಗಿದನ್ ದಂಡಕಾರಣ್ಯದಾ ಮತ್ತೆ
ರಾಕ್ಷಸೋಪದ್ರವದ ಕಷ್ಟಕಥೆಯಂ. ಕೇಳ್ದ
ರಾಮನ ಮನದಿ ಸಾಹಸಂ ಕುತೂಹಲಿಯಾಗಿ
ಹೆದೆಯೇರಿದತ್ತು; ಲಕ್ಷ್ಮಣನ ಕೆಚ್ಚಿಗೆ ನಖಂ
ಮೂಡಿ, ಪರಚಿದತ್ತಾಶ್ರಮ ಮನದ ಮೃದುತನದ
ಮೆಲ್ಮೆತ್ತೆಯಂ; ಭೀಮಕಾಂತತೆಗೆ ಪುಲಕಿಸುತೆ
ಕಂಪಿಸಿದಳಾ ಸೀತೆ. ಕಂಡದಂ ಮುನಿಪತ್ನಿ
ಜನಕಸುತೆಯಂ ಬಿಗಿದು ತಕ್ಕೈಸಿ, ಮುಂದೊದಗಿ
ಬರಲಿರ್ಪ ಕಡುಪಿಗಿಂದೆಯೆ ಮಂತ್ರವರ್ಮಮಂ
ತೊಡಿಪವೊಲ್, ಪೇಳ್ದಳುಪದೇಶಮಂ ಪತಿವ್ರತಾ
ಪ್ರೇಮ ಮಹಿಮಾ ಶಕ್ತಿಯಂ. ಮೇಣ್ ಪ್ರೀತಿದಾನಮಂ
ಪೂವೊಂದನಿತ್ತಳಾಕೆಗೆ ಮಾನಸಿಕ ಸೃಷ್ಟಿಯಂ,
ಆಶೀರ್ವದಿಸಿ ರಕ್ಷಾಕವಚವೀವಂತೆವೋಲ್.
    ಅತ್ತ ಮುನಿಯಿಂದೆ ಲಕ್ಷ್ಮಣ ರಾಮರರಿಯುತಿರೆ
ಮುಂದಿರ್ದ ಮಾರ್ಗದ ಮಹಾರಣ್ಯಗಹನಮಂ,
ಆಶ್ರಮಸ್ಥಳಗಳನ್ ಮೇಣನಾರ್ಯರ ಮತ್ತೆ
ದಸ್ಯು ಕೈರಾತ ರುಧಿರಾಶನಪ್ರಿಯತೆಯಂ,
ಕೇಳ್ದಳಿತ್ತನಸೂಯೆ ಮಧುರಭಾಷಿಣಿ ಜನಕ
ಜಾತೆಯ ವದನದಿಂ ಸ್ವಯಂವರದ ವೃತ್ತಮಂ,
ವನವಾಸ ಕಾರಣಕಥೆಯನಂತೆ ಭರತನಾ
ಭ್ರಾತೃಭಕ್ತಿಯ ತಪೋನಿಷ್ಠೆಯಂ. ಅನ್ನೆಗಂ
ಕಾರ್ತಿಕಾಭ್ರದೊಳುದಿಸಿ ಬಂದನು ಸುಧಾಕರಂ
ಪರ್ಣಕುಟಿಯಾ ಕುಟಜಪರ್ಣಂಗಳೆಡೆಯಿಂದೆ
ರೌಪ್ಯಧಾರಾವೃಷ್ಟಿಯಂ ಸೂಸಿ, ಕಣ್ಮನಕೆ
ಮಾಯೆಯಂ ಬೀಸಿ. ಕಾಲಂ ನುಂಗಿ ನೊಣೆದಿರ್ದ
ತನ್ನೆಳವೆಯಂ ಮತ್ತೆ ಕಾಣ್ಬ ಮೋಹಕೆ ಮುಪ್ಪು
ಕಾತರಿಸಿತೆನೆ, ಅತ್ರಿಸತಿ ಸೀತೆಯಂ ತನ್ನ

ಕೈಗಳಿಂ ಕೈಗೈದು ನೋಡಿ, ಮನದಣಿ ಮೆಚ್ಚಿ,
ಕೊಂಡಾಡಿ, ಪರಸಿ ಕಳುಹಿದಳಾಕೆಯಂ ತನ್ನ
ರಾಮಾಭಿರಾಮ ಶಯ್ಯಾತಲಕ್ಕೆ.
ಕಳೆದರಯ್
ಅತ್ರಿ ಅನಸೂಯಾ ಪವಿತ್ರ ಸನ್ನಿಧಿಯೊಳಾ
ಋಷಿರಜನಿಯಂ. ಉಷಾ ಮುಖದ ಕಿತ್ತಿಳೆಗೆಂಪು
ಮಾರ್ಪೊಳೆವ ಪೊಳೆಯ ನೀರಂ ಮಿಂದು, ಮುನಿಗಣಂ
ಬೆರೆಸಿ ಹುತವಹ ಕಾರ್ಯಮಂ ಗೆಯ್ದು, ಕಂಪಿಡಿದ
ಪೊಗೆಗಾಳಿಯೋಲೆಳ್ದು ಬೀಳ್ಕೊಂಡರನಿಬರಂ
ವಾಚಂ ಯಮಿಗಳಂ. ಅರಣ್ಯಗೋಚರರೊರೆಯೆ
ಪಣ್ಪಲಂ ಪೂಗಳ್ಗೆ ತಾಂ ದಿನದಿನಂ ನಡೆದು
ಸಮೆದ ಬನವಟ್ಟೆಯಂ; ಜರೆಯ ಬೀಳ್ಕೊಳುವಂತೆ
ಜವ್ವನಂ, ನರೆಯನುಳಿವಂತೆ ಹರಯಂ, ಮತ್ತೆ
ಸಾಹಸಂ ಶಾಂತಿಯನಗಲ್ವವೋಲ್ ಸೀತೆಯುಂ
ರಾಮನುಂ ಸೌಮಿತ್ರಿಯುಂ ಬಿಟ್ಟು ಮುನಿಗಳಂ
ಪೊಕ್ಕರಯ್ ದುರ್ಗಮದ ದಂಡಕಾರಣ್ಯಮಂ,
ಪೊಗುವಂತಿನಂ ಸಾಂದ್ರ ವರ್ಷಾಭ್ರಗಹ್ವರಕೆ.
ಪುಲಕಿಸಿತು ನಿಶ್ಶಬ್ದ ರುಂದ್ರ ದಂಡಕ ವನಂ
ಕೂಡೆ ಪುಲಕಿಸುವಂತೆ ಲಂಕಾ ಲಲಾಟಸ್ಥ
ರಾವಣ ವಿಧಿಯ ಮನಂ. ಕಂಪಿಸಿತು ಕಾಯಲತೆ
ದಂಡಕಾರಣ್ಯ ದೈತ್ಯತೆಯನವಲೋಕಿಸುತೆ
ಭೂಸುತೆಗೆ. ಕಾಂತಾರ ಭೀಷಣಭ್ರುಕುಟಿಯಂ
ಪ್ರತಿಭಟನಮಂ ಕಂಡು ಕಣ್ಪೆಳರಿ ಲಕ್ಷ್ಮಣಂ
ನೋಡಿದನ್ ರಘುರಾಮನಂ ಧೈರ್ಯಭೀಮನಂ:
ಚಂಡಕರ ತೇಜಸ್ವಿ ಕೋದಂಡಧರನಾಗಿ
ನಡೆಯುತಿರ್ದನ್ ಧೀರ ಗಮನದಿಂ, ದೃಢತೆ ತಾಂ
ಮೈವೆತ್ತವೋಲ್ ಭಯಂಕರಂ ವಿಪುಲ ವಪು
ರಾಮಚಂದ್ರಂ.
ಪಕ್ಷಿ ನಿಷ್ಕೂಜಿತಂ. ನೀರವಂ.
ಝಿಲ್ಲಿಕಾ ನಾದ ಘರ್ಘರ ಘೋರ ಕರ್ಕಶಂ.
ತರು ಬೃಹದ್ಬಾಹುಕೃಷ್ಣಂ ಬಿಸಿಲ ಕಂಸನಂ

ಕೊರಳೊತ್ತಿ ಗೋಣ್ಮುರಿಯೆ ಗತಿಸಿದಾತಪ ಶವಂ
ಛಾಯೆಯೋಲುರುಳ್ದುದೆನೆ ಪರ್ವಿದ ವನಾಂಧತಾ
ಭಯ ಭೈರವಂ:—ಪುಗುತ್ತಾ ವಿಪಿನ ಮಧ್ಯಮಂ
ಪೋಗುತಿರೆಯಿರೆ, ಕೂಡೆ ತಾನೆಳ್ದುದೊಂದದ್ಭುತಂ
ಧ್ವನಿ, ಪೊಯ್ದುವೋಲಶನಿ. ನಡುಗೆ ವನಗಿರಿಯವನಿ,
ಪತಿಯಂ ಪಿಡಿದಳವನಿಜಾತೆ ಬೆಬ್ಬಳಿಸಿ. ತರು
ಮೂಲಾಗ್ರಮಳ್ಳಾಡಿದತ್ತು; ಲಟಕಟಿಸಿತ್ತು
ಬಣಗು ಪಳು; ವೇಗ ಸಂಜಾತ ವಾತಂ ಬೀಸಿ
ಕಸುಗಾಯಿ ಹಸಿಯೆಲೆಗಳುದುರಿ ಬಡಿದುವು ನೆಲಕೆ,
ಮುಗಿಲ್ಗವಣೆಯಾಲಿಕಲ್ಮಳೆಯಂತೆವೋಲ್. ನೋಡೆ,
ಗಿರಿಯ ಶೃಂಗವೆ ನಡೆದು ಬರ್ಪಂತೆ, ದಂಡಕಾ
ವಿಪಿನದ ವಿಪತ್ತೆ ವಪುವೆತ್ತಂತೆ, ಬಂದುದಯ್
ಹೆಗ್ಗಣ್ಣ ಹೆಬ್ಬಾಯ ಹೇರೊಡಲ ರಕ್ಕಸನ
ಬೀಭತ್ಸ ಛಾಯೆಯ ಭೀಮ ಭೀತಿ! ಪತ್ತೆಂಟು
ಸಿಂಹ ಕಾಳ್ಕೋಣ ಪೆರ್ಬುಲಿ ಜಿಂಕೆ ಮದ್ದಾನೆ
ಚರ್ಮಂಗಳಿಂ ಸಮೆದ ಚಿತ್ರಸೂತ್ರ ವಿಚಿತ್ರಮಂ
ವಸ್ತ್ರಜಾಲವನುಟ್ಟ ಕಾರ್ಗಪ್ಪು ಮೆಯ್ಯಿಂದೆ,
ತೆಂಗಿನ ಮರದ ತೆರನ ನೀಳ ತೋಳ್ ತುದಿಯಲ್ಲಿ,
ಕೌಂಗಿನುನ್ನತ ಶೂಲದುಗ್ರಾಗ್ರಮಿರಿದೆತ್ತಿ
ಚುರ್ಚಿ ಕೋದಿರ್ದೆರಡು ಬಿಸಿಯ ನೆತ್ತರ್ಬಸಿವ
ಕೋರೆ ಪೆರ್ಬಂದಿಗಳ್ ಕೂಗುತೊದ್ದಾಡುತಿರೆ
ತೂಗಿ ತೊನೆಯುತ್ತಿರ್ದ ಭೀಕರದ ಕರದಿಂದೆ
ಬಂದನು ವಿರಾಧನತಿ ವಿಷಮ ವಿಷಮೃತ್ಯುವೋಲ್
ಭರದಿಂದೆ. ತುಡುಕಿ ಜನಕಜೆಯಡಿಯನೆತ್ತಿದನ್
ಸೀಗೆಮುಳ್‌ಮೆಳೆಯಂತೆ ಹೊದೆಹೊದೆ ಕೆದರ್ದವನ
ಮುಳ್ಮುಡಿಗೆ, ಶಾಪಹತನಾ ಪಾಪನಾಶಿನಿಗೆ
ಚೈತನ್ಯರೂಪಿಣಿಗೆ ಶಕ್ತಿಮಾತೆಗೆ ನಮಿಸುವೋಲ್!
ಭೋರ್ಗರೆದನಿಂತೆಂದು ಮತ್ತೆ:

"ಜವ್ವನದೊಡನೆ,
ಜಟೆಯೊಡನೆ, ಕಪಟ ವಲ್ಕಲದೊಡನೆ, ಸಟೆಯೊಡನೆ,
ಪ್ರಮದೆಯೀ ಪೆಣ್ಣೊಡನೆ ಕ್ಷೀಣಜೀವಿತರಾಗಿ

ಬಂದಿರಯ್ ನೀಮೆನಗಶನಮಾಗಿ! ಜವ್ವನಕೆ
ಜಟೆಯೇಕೆ? ನಾರುಡೆಗೆ ನಾರಿಯಿವಳೇಕೆ? ಈ
ನಟ ತಪಸ್ಸೇಕೆ ಶರ ಚಾಪಾಸಿ ವೀರರಿಗೆ?
ಭಾರ್ಯೆಯಹಳೆನಗೀ ವರಾರೋಹೆ! ಬಾಳ್ವಾಸೆ
ನಿಮಗಿರಲ್ಕೋಡಿ ಬರ್ದುಕಿಂ!'' ಎನುತೆ ಶೂಲದಿಂ
ಗುರಿಯಿಡುತ್ತಿರೆ, ಮೂರ್ಛೆವೋದತ್ತಿಗೆಯ ನೋಡಿ
ಸೌಮಿತ್ರಿ ''ಅಗ್ರಜನೆ, ದೀರ್ಘದರ್ಶಿನಿ ದಿಟಂ
ಆ ಕೈಕೆ!'' ಎಂದಾರ್ಭಟಿಸಿ ಬಾಣಮಂ ಪೂಡಿ
ರಯವನೆಚ್ಚನ್ ರಾಕ್ಷಸಾಕೃತಿಗೆ. ಕೀಸಿದಾ
ಕೂರಂಬುಗಳಿಗೊಂದಿನಿತೆ ಘಾಸಿಯಾಗುತ್ತೆ
ಪಿಶಿತಾಶನುರಿದೆದ್ದನ್. ಇಳುಹಿದನಿಳಾತಳಕೆ
ಮಸ್ತಕದಿ ಧರಿಸಿದ ಧರಾತ್ಮಜೆಯನ್. ಎತ್ತಿದನ್
ಮಿತ್ತುಕೋರೆಯ ಕೈದುವಂ, ವಿಷಮ ಶೂಲಮಂ.
ಮುಂಬರಿದನದ್ರಿವೋಲ್ ರಾಮಲಕ್ಷ್ಮಣರೆಡೆಗೆ
ಯಮದೃಢಗಮನದಿಂದೆ. ''ಕಮಠ ಖರ್ಪರ ಸಮಂ
ರಕ್ಕಸನ ಮೆಯ್. ರೂಕ್ಷನಿಗೆ ಕಣ್ಗಳಲ್ಲದೆಯೆ
ಬೇರೆ ಗುರಿ ಸಲ್ಲದಯ್.'' ರಾಮನೆನೆ ಲಕ್ಷ್ಮಣಂ
ಗರಿಯ ರೆಕ್ಕೆಯ ಗರುಡವೇಗದ ಸರಳನೆಚ್ಚನ್,
ಕುರುಡುಗೈದನ್ ವಿರಾಧನ ಕಣ್ಗಳಂ ಬಸಿಮು
ತೋಡಿ. ಕೋಪಕೆ, ಕಣ್ಣಳಿಯಲಂಧರೋಷದಿಂ
ತೋಳ್ಗಳಂ ಬೀಸಿ, ಪಳುವಂ ಗುಡಿಸಿದನು ಸೋಸಿ
ರಾಕ್ಷಸಂ. ತಡವಿ ತುಡುಕಿದನಿರ್ವರಂ ಮೃತ್ಯುಮಯ
ಮುಷ್ಟಿಯೊಳ್. ಪೊತ್ತೋಡಿದಂ ಮಿಗಗಳಂ ಕಚ್ಚಿ
ಕೊಂಡುಯ್ವ ವ್ಯಾಘ್ರನೋಲಂತೆ. ಸೀತಾಕಾಂತೆ
ನೋಡಿ ನಡನಡ ನಡುಗಿ ಹಿಂಬಾಲಿಸೋಡಿದಳ್;
''ಓ ವಿಧಿಯೆ, ರಕ್ಷಿಸಯ್! ರಕ್ಷಿಸೋ ರಕ್ಷಿಸಯ್
ದಶರಥೇಂದ್ರ ಪ್ರಿಯ ಕುಮಾರರಂ! ಕೈಮುಗಿದು
ಬೇಡುವೆನೊ, ರಾಕ್ಷಸೋತ್ತಮ, ನನ್ನನಾದೊಡಂ
ನೀಡುವೆನೊ, ಬಿಡೊ ರಾಮಚಂದ್ರನಂ. ಕಾಪಿಡಯ್
ಊರ್ಮಿಳಾ ಪ್ರಾಣೇಶನಂ!'' ರಾಮಖಡ್ಗಕೆ ಮತ್ತೆ
ಲಕ್ಷ್ಮಣಾಸಿಗೆ ಬಿಳ್ದುವಸುರ ಬಾಹುದ್ವಯಂ

ದೊಪ್ಪ ದೊಪ್ಪನೆ; ಕೂಡೆ ಪಳುವರಚೆ ಕೆಡೆದುದಾ
ದೈತ್ಯನೊಡಲೊಂದು ಹೆಗ್ಗುಡ್ಡದೋಲ್. ಕಾಡ ಪಳು
ಕೆಸರೇಳೆ ಹೆಪ್ಪುಗಟ್ಟಿದುದು ನೆತ್ತರ್ ವೊನಲ್.
ಬೀಭತ್ಸದಿಂದೆಯುಂ ಸೌಂದರ್ಯಮುದ್ಭವಿಪಂತೆ
ಮೈದೋರ್ದನಮೃತಮಯ ಗಂಧರ್ವನೊರ್ವನಾ
ಮೃತದೇಹದಿಂದೆ: ''ಜಯ, ಜಯ, ಹೇ ಮಹಾಪುರುಷ!
ಮನ್ನಿಸೆನ್ನಂ; ನಾಂ ಕುಬೇರನಾಳ್ ತುಂಬುರಂ.
ರಂಭೆಯ ನಿಮಿತ್ತಮೊಳಗಾದೆನೀ ಶಾಪಕ್ಕೆ.
ಶಾಪಮೋಚನೆ ಗೈದಿರೆನಗೆ. ವಂದನೆ ನಿಮಗೆ.
ದಂಡಕಾರಣ್ಯಮಿದು ಭೀರುಗೆ ಭಯಂಕರಂ;
ರಸಿಕ ಧೀರಗೆ ಕಲಾಶಂಕರಂ: ನನ್ನಂತೆವೋಲ್!
ಮುಂಬರಿಯಿಮೆರಡು ಗಾವುದ ದೂರದಾಚೆಯೊಳ್
ಶರಭಂಗ ಋಷ್ಯಾಶ್ರಮಂ. ನಮಿಪೆನಿದೊ. ಪೋಪೆನಾಂ.
ಸೊಗಮಕ್ಕೆ, ಗೆಲಮಕ್ಕೆ, ತುದಿಗೆ ಮಂಗಳಮಕ್ಕೆ!''
　ಗಂಧರ್ವನಾದನಂತರ್ಧಾನಮಿಂತೆಂದು
ಪರಸಿ. ಸೂಚಿತ ಪಥಂಬಿಡಿದು, ಬನದಿಂ ಬನಕೆ
ಬೇಗವೇಗಂ ನಡೆದು, ಬೈಗುವೊಳ್ತಿನ ಕಡೆಗೆ
ಸಾರ್ತಂದರಾಶ್ರಮಕೆ ಶರಭಂಗನಾ. ದಸ್ಯು
ಹಿಂಸೆಗೆ ಸಿಲುಕಿ, ಮರಣ ಮುಖನಾಗಿ, ಮಾತಳಿದು
ಮಲಗಿರ್ದ ಚರ್ಮಾಸ್ಥಿಮಾತ್ರನಂ ಕರುಣಕರ
ಗಾತ್ರನಂ ಶರಭಂಗನಂ ಕಂಡು ಮರುಗಿದುದು
ರಾಮನಾತ್ಮಂ; ಕೋಪದೌರ್ವಾನಳಂ ಜ್ವಲಿಸಿ
ನೀಡಿದತ್ತರಸಿದತ್ತೇಳು ನಾಲಗೆಗಳಿಂ
ರಕ್ಕಸರ ಮೈಬೇಳ್ವೆಯಂ. ಕೇಳ್ದನನಿತುಮಂ
ದುಷ್ಟದಾನವ ಧೂರ್ತತೆಯ ಕಥೆಯನಾರ್ಯರಾ
ವ್ಯಥೆಯನತಿ ಕಷ್ಟಮಂ. ರಕ್ಷೆಯಂ ಬೇಡಿದಾ
ಯತಿಗಳಿಗಭಯವಿತ್ತನಿಂತೆಂದು:
　　　　　　　　　　''ಪೂಜ್ಯರಿರ,
ತನ್ನ ಕಜ್ಜಕೆ ಬಂದನಡವಿಗೆಂದರಿಯಿದಿರಿ.
ತಂದೆಯಾಣತಿ ನೆವಂ. ದಿಟಮೊರೆವೆನಾಲಿಸಿಂ.
ಭೀಮಕರ್ಮಿಗಳಾರ್ಯವೈರಿಗಳ್ ಅನಾತ್ಮರಂ

ಋಷಿಕಂಟಕರನಿರಿವುದೆನ್ನಯ ಮನಂ. ನಿಜಕೆ
ನಾಥರೀ ಪೃಥಿವಿಗಿನಕುಲರಲ್ತೆ? ಪ್ರಜೆಗಳಂ
ಪಾಲಿಪುದವರ ಪರಮ ಕುಲಧರ್ಮವೆನೆ, ನಿಮ್ಮ
ರಕ್ಷೆಗೋಸುಗಮೆನಗೆ ದುಷ್ಟಶಿಕ್ಷಣಮರಂ.''
ಕೆಲದಿನದನಂತರಂ ತೀರ್ದ ಶಾಂತಾತ್ಮಂಗೆ
ಶರಭಂಗ ಋಷಿಗಪರಕರ್ಮಂಗಳಂ ರಚಿಸಿ,
ಕಂಗೆಟ್ಟ ಕಿತ್ತಡಿಗಳಿಗೆ ಧೈರ್ಯಮಂ ಪೇಳ್ದು
ಪೊರಮಟ್ಟರಲ್ಲಿಂ ಸುತೀಕ್ಷ್ಣ ಋಷ್ಯಾಶ್ರಮಕ್ಕೆ.
    ಒಡನೊಡನೆ ಬಂದ ವೈಖಾನಸರನೊಡಗೂಡಿ,
ಮಲೆಯ ಪಳುವಟ್ಟೆಯಂ ಕೊಂಡು ನಡೆತರೆ ಮುಂದೆ
ಮೂಡಿದತ್ತೊಂದು ಶೈಲಂ ವಿಪುಲಮದ್ಭುತಂ,
ಕಾರ ಮೊದಲೊಳ್ ಬಾನ ಕರೆಯಿಂದಣಂ ತೋರಿ
ಮೆಲ್ಲನೊಯ್ಯನೆ ಭೀಮಗಾತ್ರಕ್ಕುರ್ಬಿ ಬೆಳೆದು
ಗಗನ ಶಿಖರಕ್ಕೇರ್ವ ಮೇಘಗೋಪುರದಂತೆ
ನೀಲೋನ್ನತಂ ಮಹಾ. ಪೊಕ್ಕದರ ತಳ್ಪಲಂ
ಬಹುಪುಷ್ಪಪೂರ್ಣ ಫಲಕುಜಕೀರ್ಣಮಟವಿಯಂ
ಕಂಡರು ಸುತೀಕ್ಷ್ಣನಾಶ್ರಮವನೇಕಾಂತಮಂ
ಭಯಕಾಂತಮಂ. ನಮಿಸಿದರು ತಪೋರುದ್ರಂಗೆ,
ಚಿತ್ರಕೂಟಕೆ ರಾಮನೈತಂದ ವಾರ್ತೆಯಂ
ಕೇಳ್ದಂದಿನಿಂದಾತನಂ ಪ್ರತೀಕ್ಷಿಸುತಿರ್ದ
ಕೆಂಜೆಡೆಯ ಕಿತ್ತಡಿಗೆ. ಋಷಿಸಂಗ ಮಂಗಲದಿ
ತಿಂಗಳೊಂದಂ ನಿಂದು, ಕೋಳ್ಮಿಗಗಳಟ್ಟುಳಿಯ
ಕೊಂದು, ಸುತ್ತಣ ಮಲೆಯ ಸೀಮೆಯಂ ಮೇಣಲ್ಲಲ್ಲಿ
ಸಿಂಗರಿಸಿ ಪರ್ವಿದ ತಪೋವನ ಸಮೂಹಮಂ
ಆರ್ಯಾಶ್ರಮಂಗಳಂ ನೋಡುವಾಶೆಗೆ ಮುನಿಯ
ಹರಕೆಯ ಹಿತಾಶಂಸೆಯಂ ಪಡೆಯುತಲ್ಲಿಂದೆ
ಪೊರಮಟ್ಟರವರು ಯಾತ್ರಿಕ ಮುನಿಗಣಂವೆರಸಿ,
ಮೊದಲ ಮಳೆ ಮೀಯಿಸಿದ ಮಲೆಯನಾಡಿನ ಸಿರಿಯ
ಚೆಲುವನೀಂಟಲ್ಕೆಲೆವ ಕಲೆ ನೋಂತ ಕಬ್ಬಿಗನ
ಕಣ್ದಿಟ್ಟಿಯಂತೆ. ಐತರೆ ಮುಂದೆ, ಏನೆಂಬೆ?
ಅಕ್ಷಿಗೌತಣವಾಯ್ತು; ಹೂವಾಯ್ತು; ಜೇನಾಯ್ತು;

ಪಕ್ಷಿಯಿಂಚರವಾಯಿತಿನಿಯಳಪ್ಪುಗೆಯಾಯ್ತು;
ಪುಣ್ಯಸಲಿಲಪ್ರಸನ್ನತೆಯಾಯಿತಾ ನೆಲಂ:
ವನದೇವಿಯೋಲಗವೊ, ಜಲದೇವಿಯಾಲಯವೊ,
ಸೌಂದರ್ಯಲಕ್ಷ್ಮಿ ನಿರತಂ ಕ್ರೀಡಿಪುಯ್ಯಲೆಯೊ,
ಇಂದ್ರಧನುರಿಂದ್ರಿಯಗಳಿಂದ್ರನಾಡುಂಬೊಲವೊ,
ರತಿಮದನರೋಕುಳಿಯ ಶೃಂಗಾರಮಂಟಪವೊ,
ರಸ ಋಷಿಗಳಾನಂದ ನಂದನವೊ, ಮಂದಿರವೊ
ಚಂದ್ರ ಚೈತ್ರರಿಗೆಂಬವೋಲಪ್ಪುತಾತ್ಮಮಂ
ಶೈಲ ಕಂದರ ವಿಪಿನ ವೈಭವದಿನೆಸೆದುದಾ
ತೆರೆತೆರೆಯಲೆವ ಮಲೆಯಸೀಮೆ! ಆ ಸೊಬಗಿಗೆರ್ದೆ
ಸೋಲ್ದುರ್ಕಿದತ್ತು ಸೀತೆಗೆ ಮೈತ್ರಿ. ಸ್ವಾಮಿಯಂ
ಪ್ರೇಮದಿಂ ನೋಡಿ ನುಡಿದಳ್ ನಗೆಮುಗುಳ್ಮಲರೆ
ನಯದಿಂದೆ:
"ಬಗೆಯೊಂದು ಶಂಕೆಯನರುಹಿದಪೆನಾಂ,
ಹೃದಯಪ್ರಿಯ, ಬಾಲಭಾಷಿತವನಾದರದಿಂದೆ
ಕೇಳಿ ಕರುಣಿಪುದೆನಗೆ: ಋಷಿಗಳ್ಗೆ ನುಡಿಗೊಟ್ಟೆಯಯ್;
ರಾಕ್ಷಸ ವಧೆಗೆ ಪೂಣ್ದೆಯಯ್; ವೈರಮಂ ವ್ರತವಾಂತೆಯಯ್,
ಹೇ ಸ್ನೇಹನಿಧಿ! ಒರ್ವನನ್ಯಾಯಿಯಾದೊಡೇಂ
ಸರ್ವರಾಕ್ಷಸರೆಂತು ಸಂಹಾರಕರ್ಹರಯ್?
ಕ್ಷಾತ್ರಕೇಂ ಕ್ರೌರ್ಯಂ ಕಿರೀಟಮೇ?"
"ದರಹಸಿತೆ,
ರಾಜಋಷಿ ಜನಕಸುತೆ, ಆ ತಂದೆಯ ಮಗಳ್ಗೆ
ತಕ್ಕುದನೆ ನುಡಿದೆ. ವಿಶ್ವಪ್ರೇಮ ಸಿದ್ಧನಿಂ
ಪಡೆದಿರ್ಪ ಕರುಣೆಯನ್ನೊರೆಯುತಿಹೆಯಾದೊಡಂ,
ಪೂಜ್ಯಮಹುದಾದೊಡಾ ತತ್ವಂ ಪೂರ್ಣದರ್ಶನಕೆ
ಪೊರ್ದದಿರ್ಪುದು, ಸರಳೆ. ಸಾತ್ವಿಕವ್ರತಿಗಳ್ಗೆ
ಸಂಕಟವನೊಡರಿಸುವರೆನ್ನ ಬಾಣಕ್ಕೆ ಬಲಿ.
ಬಾಣಮೊಂದೆಯೆ ಚುರ್ಚಿ ಕೊಲ್ವುದಾದೊಡಮದಕೆ
ಬಿಲ್ಲು ಹೆದೆ ಕೊಪ್ಪು ಕೈಯನಿತುಮುಂ ನೆರಮಾಗಿ
ಕೊಲೆಗೆ ಹೊಣೆಯಪ್ಪವಂತೆಯೆ ದುಷ್ಟಘಾತುಕಂ
ತಾನೊರ್ವ ರಕ್ಕಸನಾದರೇನವಗೆ ಬೆಂಬಲಂ

ಸರ್ವ ರಾಕ್ಷಸರಲ್ತೆ? ಕೃತಿ ಏಕಮಾದೊಡಂ
ಮಾಳ್ಪಾತನಿರ್ಪ ಸೀಮೆಯ ಜನದ ಸಂಸ್ಕೃತಿಗೆ
ಕುರುಪಲ್ತೆ ತಾಂ? ಆರ್ಯ ಸಂಸ್ಕೃತಿಯ ಸುಕೃತಮಂ
ರೂಕ್ಷರೀತಿಯೊಳಡ್ಡಗಟ್ಟುವೀ ರಾಕ್ಷಸರ
ಗಾಮ್ಪತನಮಂ ಮುರಿಯಲಾಂ ಪೂಣ್ದೆನಿನ್ನದಂ,
ಆ ನುಡಿಯ ಸಿಡಿಲಂ, ತಡೆವರಿಹರೆ? ಶರಭಂಗ
ಋಷಿಗಾದ ಗತಿಯೆ ಮುನಿಗಳಿಗೆಲ್ಲಮಪ್ಪುದೌ,
ಮಿಥಿಳೇಂದ್ರ ಸಂಜಾತೆ, ಬತ್ತಳಿಕೆಯಂ ಬಿಟ್ಟು
ನಾಂ ಕಮಂಡಲುವಿಡಿಯೆ! ಶರಧಿ ಮೇಖಲೆಯಾದ
ಪೃಥಿವೀಶ ಭರತೇಂದ್ರನಾರ್ಯರಕ್ಷಾವ್ರತಂ.
ಪ್ರತಿನಿಧಿಗಳವಗೆ ನಾಂ. ಕರ್ತವ್ಯವೆಮಗಾಯ್ತು
ಋಷಿ ರಕ್ಷಣಂ. ಇಷ್ಟಮುಂ ಮತ್ತೆ ನಿಷ್ಠೆಯುಂ
ಗೋಷ್ಠಿಗೊಂಡೊರೆಯುತಿಹವೀ ದಸ್ಯುಹನನಮಂ!''
ಪತಿಯ ದೃಢವಾಣಿಯಂ ವಾದಮಂ ಕೇಳ್ದು ಸತಿ
ಪೇಳ್ದಳಿನಿತಂಜಿದೋಲಿಂತು: ''ತೊದಲಾಗುತಿದೆ
ನನ್ನ ನಾಲಗೆ ನಿನ್ನ ದನಿಗೇಳ್ದು, ಮನದನ್ನ.
ಪುಣ್ಯಾಶ್ರಮಂಗಳಂ ನೆವವೊಡ್ಡುತೈತಂದು
ತಮ್ಮ ನೆಲಮಂ ಸುಲಿಯುತೊಯ್ಯನೆ ವಸತಿಗೈದು,
ದಿನದಿನಕೆ ತಮ್ಮನೊತ್ತುವರಾರ್ಯರಾದೊಡಂ
ದಸ್ಯುಗಳೆ ದಿಟಮಲ್ತೆ?''
''ತಿಮಿರಕ್ಕೆ ರವಿ ದಸ್ಯು.
ಜ್ಞಾನಮಜ್ಞಾನಕ್ಕೆ ದಸ್ಯು. ಮಾಯೆಯನಳಿಸಿ
ಮನುಜಹೃದಯವನಾಕ್ರಮಿಸುತಾತ್ಮಮಂ ತನ್ನ
ಕೃಪೆಗುಯ್ವ ಪರಮಾತ್ಮನುಂ ದಸ್ಯು. ನಾಂ ನಿನಗೆ
ನೀನೆನಗೆ ದಸ್ಯು. ಕೇಳಂತೆವೋಲಾರ್ಯರುಂ
ದಸ್ಯುಗಳ್ ದಂಡಕಾರಣ್ಯ ದಕ್ಷಿಣ ಜನದ
ನಯಕೆ. ಪಿರಿತನಕೆ ಮಣಿವುದೆ ಕಿರಿಯ ಸಂಸ್ಕೃತಿಗೆ
ಮೇಲ್ಮೆ. ಪುಣ್ಯಂ ವಿಪತ್ತಿನ ತೆರದಿನೋರೊರ್ಮೆ
ದೈತ್ಯನೋಲಾಕ್ರಮಿಪುದಾತ್ಮಮಂ ಜನತೆಯಂ
ನಾಡೂರ್ಗಳಂ. ಕೃಪಾಬಾಹು ನೀಡಲ್ಕದರ
ನೆಳಲಲ್ತೆ ಪೇಳ್ ರಾಹು!''

ಮಥಿಸುತೆ ಮನದಿ ವಚನಮಂ
ಪತಿದೇವನಾ, ಮುಂದೆ ಗಮಿಸಿದಳು ವೈದೇಹಿ
ಬೆಟ್ಟ ಕೆರೆ ಕಾಡು ಹೊಳೆ ಮಿಗವಕ್ಕಿ ಹಂದಿ ಹುಲಿ
ತರತರದ ನೋಟಮಂ ಬೆದರುಮಿಗದೋಟಮಂ
ಕೌತುಕದ ಕೂಟಮಂ ಕಣ್ಗೆ ತಣಿವಿಲ್ಲವೆನೆ
ಕಂಡು, ಬಣ್ಣಿಸಿ, ಸವಿದು, ತೋರಿ. ನಡೆದಿರಲಿಂತು,
ಕಂತು ಕೂರ್ತಾತ್ಮರತಿಯೊಡನೆ ಈಸಾಡಲ್ಕೆ
ರಾಗಮಗ್ಗಲಿಸಿತೆನೆ, ಸಂಜೆ ಓಕುಳಿಗೈದ
ಸಲಿಲ ಸುಂದರ ಯೋಜನಾಯತ ತಟಾಕಮಂ
ಕಂಡರೆದುರಿನಲಿ. ಏಕಾಂತತಾ ವೈಣಿಕಂ
ಮಿಡಿವನೊ ವಿಯದ್ವಿಪಂಚಿಕೆಯ ನಿಶ್ಯಬ್ದತಾ
ತಂತ್ರಿಯನೆನಲ್ಕೆ, ಬಂದತ್ತಲೆದು ಸುಶ್ರುತಿಯ
ಗೀತ ವಾದಿತ್ರ ಮಧುಮಧುರ ಘೋಷಂ. "ನೋಡೆ
ಸುತ್ತಣೀ ವನದೇಶಮೆತ್ತಲುಂ ನಿರ್ಜನಂ.
ವಾದಿತ್ರ ನಿಸ್ವನಮ್ ಇದೆತ್ತಣಿಂ ಬಂದಪುದೊ?
ಸೋಜಿಗಂ!" ಎಂದೆಲ್ಲರಾ ಕಿವಿಸವಿಯ ದನಿಗೆ
ಮಾರುವೋಗಿರೆ, ಧರ್ಮಭೃತನೆಂಬ ಸಹಚರಂ
ಮುನಿಃ
"ಈ ಸರೋವರಂ, ಇಕ್ಷ್ವಾಕು ಕುಲಮಣಿಯೆ,
ಪಂಚಾಪ್ಸರಂ. ಮಾಂಡಕರ್ಣಿಯ ಮಹಾಮುನಿಯ
ಭೋಗಮಂದಿರಮಿರ್ಪುದಿದರಂತರಂಗದೊಳ್.
ಆತನುಗ್ರ ತಪಸ್ಯೆಗತಿಭೀತರಾಗುತಾ
ತ್ರಿದಶರಟ್ಟಿದರೈದು ಮಿಂಚುಮೆಯ್ ಪೆಣ್ಗಳಂ.
ಭೋಗವಶನಾದನಯ್ ಯೋಗಿ. ಗೃಹಮಂ ರಚಿಸಿ
ಕಾಣ್ಬೀ ತಟಾಕ ತೀರ್ಥದ ಮಧ್ಯೆ, ಯೋಗದಿಂ
ಚಿರಯುವಕನಾಗಿ ಪಂಚಾಪ್ಸರೆಯರಂ ಕೂಡಿ
ಸುಖಿಸುತಿರುವನು ಕಣಾ. ಪೊಣ್ಮೆದಪುದಲ್ಲಿಂದೆ
ಈ ಗೀತವಾದಿತ್ರ ಮೇಳಗಾನಂ."
ಬೈಗುಬಾನ್
ಕಿತ್ತಿಳೆರಂಗನುಳಿಯೆ, ಕತ್ತಲೆಯ ನೇರಿಳೆಯ
ಪಣ್ಗಾಪು ಕಣ್ಮುಸುಗುತಿಳಿತರೆ ತಿರೆಯನಪ್ಪಿ,

ಗೋಚರಿಸಿತೊಂದಾರ್ಯವಸತಿ. ಇಂಗುದಿಯೆಣ್ಣೆ
ಜೀವದಾನಂಗೈದ ವಲ್ಕಲದ ಬತ್ತಿಯಂ
ಪೊತ್ತುತುರಿದಾ ಸೊಡರ ಬೆಳಗಿನೊಳ್ ಸಾದರದ
ಸತ್ಕಾರಮಾದುದು ಅತಿಥಿಗಳಿಗೆ. ತಿಂಗಳಂ
ತಂಗುತಾಯೆಡೆ, ಮತ್ತೆ ಮುಂದಣಾಶ್ರಮಕೈದಿ
ತಿಂಗಳಾರಂ ಕಳೆಯುತಲ್ಲಿಂದೆ ಮುಂಬರಿದು
ಆಶ್ರಮದಿನಾಶ್ರಮಕ್ಕೈದಿದರು, ಒಂದೊಂದು
ಎಡೆಯೊಳುಂ ಪಲವಾರು ತಿಂಗಳ್ಗಳಂ, ಮತ್ತೆ
ಒಮ್ಮೊಮ್ಮೆ ವರ್ಷಮಂ, ಕಳೆದು.
ಇಂತಿಂತಿಂತು
ಪತ್ತು ಸೂಳಿಳೆ ನೇಸರಂ ಸುತ್ತುವರಿದತ್ತು.
ಅಂತೆಯೆ ಇಳಾತ್ಮಜೆ ಇನಕುಲಾತ್ಮಜನ ಅಡಿಯ
ಪಜ್ಜೆವಟ್ಟೆಯ ನಡೆಯೆ, ತರಳೆಯತನಂ ಪಣ್ತು
ತುಂಬಿದುದು ಮೈಗೆ ಮಹಿಳಾ ಮಹದ್‌ಗೌರವಂ,
ಮೇಣಂತೆ ನಡೆನುಡಿಗೆ ಬಗೆಗೆ. ದಿನದಿನ ಚರಿಸೆ
ಕಲ್ಲುಮುಳ್ಳಿಡಿದ ಪಳುವಟ್ಟೆಯುಂ ಸಮೆಸಮೆದು
ನುಣ್ಣತಪ್ಪುದೆನಲ್ಕೆ ಸೀತೆ, ಜನಕ ಕುಮಾರ್ತೆ,
ಋಷಿಸಂಗದಿಂ ತಪಸ್ವಿನಿಯಪ್ಪುದಚ್ಚರಿಯೆ?
ದಶರಥನ ಸೂನುಗಳ್ಗೀರೈದು ಬರಿಸದಾ
ಸಾಹಸದ ರಸಯಾತ್ರೆಯಾದುದಕ್ಷಯ ಪಾತ್ರೆ
ವೀರ ಸುಂದರ ವಿವಿಧ ಭಾವಾನುಭವಗಳಿಗೆ.
ಒರ್ದಿನಂ ಸಂಜೆ, ಪಡುವಲ್ ಪಣೆಯಮೇಲೆ, ಪನಿ
ಕಿಡಿಯಾದ ಮಾಳ್ಕೆಯಿಂ, ತಳತಳಿಸುತಿರೆ ಬೆಳ್ಳಿ,
ದಣಿದು ಕೋಳ್ಮಿಗವೇಂಟೆಯೊಳ್ ಮಲೆಯ ತಲೆಯಿಂದೆ
ತಳ್ಪಲಿನೆಲೆಯಮನೆಗೆ ಬರುತಲಿರ್ದಗ್ರಜಂ
ಊರ್ಮಿಳಾವಲ್ಲಭನ ಬೆಮರ್ದ ಮೊಗಮಂ ಕಂಡು
ಕನಿಕರಂಗೊಂಡು ಸುಯ್ದನು, ತನ್ನ ಮಡದಿಯಂ
ಬೆಚ್ಚನೆಯ ನೀರ್ವಿಡಿದು ಪತಿಸೇವೆಗಣಿಯಾಗಿ
ಪರ್ಣಶಾಲೆಯ ಬಾಗಿಲೊಳೆ ಕಾಯುತಿರ್ಪಳಂ
ನೆನೆದು. ಬೆಮರಿನ ಮರೆಯೊಳೊಂದು ಕಂಬನಿ ಹೊಂಚಿ
ಸಮಯಮಂ ಕಾಯುತಿರೆ ತಮ್ಮಂಗೊರೆದನಿಂತು:

‘‘ವನವಾಸದವಧಿ ಕೊನೆಸಾರುತಿದೆ, ಸೌಮಿತ್ರಿ;
ಮನೆಯ ನೆನೆದೊಮ್ಮೊಮ್ಮೆ ಬಯಕೆ ಬಾಯಾರುತಿದೆ;
ಸರಯೂ ಜಲವನೀಂಟಲಾಶೆ ಸೊಂಡಿಲನೆಳೆದು
ಚಾಚುತಿದೆ! ಕೋಸಲಕೆ ಕಿರಿದಲ್ಲದಿರ್ದೊಡಂ
ಮತ್ತೆ ಕೀಳಲ್ಲದಿರ್ದೊಡಮೀ ವಿಪಿನ ಧರಾ
ಸಾಮ್ರಾಜ್ಯಮಗಲಿಕೆಯನನುಭವಿಸುತಿದೆ ಮನಂ
ತಾಯ್ನಾಡಿನಾ. ವರ್ಷಮಿನ್ನೆರಡು ತೀರ್ವಿನಂ
ಸೇರ್ದಪೆವಯೋಧ್ಯೆಯಂ. ಆ ಪೊಳ್ತಿನನ್ನೆಗಂ
ಸತ್ಸಂಗಮೆಯೆ ಮಂಗಳಂ ತಪಂ!’’
ನುಡಿದನನುಜಂ
ತನ್ನಗ್ರಜಾತನ ಕೊರಳ ಖಿನ್ನತೆಯ ತವಿಸಿ:
‘‘ಚರಿಸಿದೆವು ನಾವೆನಿತೊ ಋಷ್ಯಾಶ್ರಮಂಗಳಂ.
ಕಂಡೆವೆನಿತೆನಿತೊ ಕಿತ್ತಡಿಗಳಂ. ಮೇಣಂತೆ
ಕೇಳ್ದೆವೀಂಟಿದೆವೆನಿತೊ ತತ್ವಪೀಯೂಷಮಂ.
ಚಿತ್ತಕೆತ್ತರವಾಯಿತೆದೆಗೆ ಬಿತ್ತರವಾಯ್ತು;
ದೊರೆಕೊಂಡುದಾತ್ಮಪ್ರಸನ್ನತೆ. ವಸಿಷ್ಠಗುರು
ಮತ್ತೆ ವಿಶ್ವಾಮಿತ್ರದೇವರಿರ್ವರುಮಿತ್ತ
ಕಲ್ಪಿಗೆ ಕಿರೀಟಮಾದತ್ತು. ವಿಪಿನಾಯನಂ,
ಹೇ ಆರ್ಯ, ನಿನ್ನ ಸಂಗದಿನಂತೆ ದೇವಿಯರ
ಸೇವೆಯಿಂ ನನ್ನಾತ್ಮಕೊಂದಮೃತ ಕೃಪೆಯಾಯ್ತು!’’
‘‘ಆರ್ಯವಸತಿಗಳನೇಕಮಂ ಕಂಡೆವಾದೊಡಂ
ಕಂಡೆವಿಲ್ಲಾಮ್ ಅಗಸ್ತ್ಯ ಋಷ್ಯಾಶ್ರಮವನಿನ್ನುಂ.
ಬಡಗಣಿಂ ತೆಂಕಣ್ಗೆ ಮೊತ್ತಮೊದಲೈತಂದ
ಮುನಿಯಾರ್ಯನಾತನ್. ಅತಿ ದಕ್ಷಿಣದೊಳಿಹುದಂತೆ
ದಿವ್ಯಾಶ್ರಮಂ. ನಾಳೆ ಪೊರಮಡುವಮಿಲ್ಲಿಂದೆ
ತೆಂಕಣಕೆ. ಸೌಮಿತ್ರಿ, ಆ ಮುನಿಯ ಮಹಿಮೆಯಂ
ಕೀರ್ತಿಸುವ ಕಥೆಯೊಂದನರುಹಿದಪೆನಾಲಿಸಾ!’’
ಬೆಳ್ಳಿ ಮುಳುಗಿತ್ತು; ಕತ್ತಲೆ ಮುಚ್ಚಿ ಮುಸುಗಿತ್ತು;
ಮಿನುಗುತಿರ್ದುವು ಮಲರಿ ಬಾನ್ನೆಲದೊಳರಿಲ ಹೂ.
ಕಾಡುದಾರಿಯೊಳಿಳಿಯುತಿರೆ, ರಾಮನೊರೆಯುತಿರೆ,
ಕೇಳ್ದನಾ ಲಕ್ಷ್ಮಣಂ ಕಿವಿನಿಮಿರ್ದು:

"ಇರ್ದರಯ್
ಮುನ್ನಿರ್ವರಿಲ್ವಲಂ ವಾತಾಪಿಗಳ್, ಪೆಸರ್ವೆತ್ತ
ರಾಕ್ಷಸ ಸಹೋದರರ್: ನೀತಿಯಿಂ ರಾಕ್ಷಸರ್;
ಪ್ರೀತಿಯಿಂ ಸೋದರರ್. ಭೀಮಕರ್ಮಿಗಳವರ್
ಮಾಯಾವಿಗಳ್, ಕಾಮರೂಪಿಗಳ್. ಇಲ್ವಲಂ
ಬ್ರಾಹ್ಮಣನ ವೇಷದಿಂ, ಶ್ರಾದ್ಧಮಂ ನೆವವೇಳ್ದು,
ಪಿಂಡಕೆ ನಿಮಂತ್ರಿಸುವನಾರ್ಯರಂ. ವಾತಾಪಿ ತಾಂ
ಮೇಷರೂಪವನಾಂತು ತಮ್ಮ ಮನೆಯಂಗಣದಿ
ಸೊಪ್ಪು ಮೇಯುತ್ತಿಹನ್, ಕಟ್ಟುಗೊಂಡವನೋಲೆ
ನಟಿಸಿ. ಹೋಂತದ ಗಾತ್ರಮಂ ಕಾಣುತುಬ್ಬುವರ್
ಅತಿಥಿಗಳ್! ಶುದ್ಧ ಸಂಸ್ಕೃತವಾಡುತಿಲ್ವಲಂ
ಮಂತ್ರಪೂರ್ವಕವಾಗಿ ಸುಲಿಯುವನು ಚರ್ಮಮಂ;
ಬಿಡಿಸಿ ಬೀವಂ ಕುಯ್ಯುವನು ಮಾಂಸಮಂ. ಶಂಕೆ
ಪುಟ್ಟದಭ್ಯಾಗತರ್ ಪಿಂಡಮಂ ತಣಿವುಂಡು
ತೇಗುವರ್, ಬೆಂದ ಬಾಡಿನ ಕೂಳರಗಲೆಂದು.
ಅನ್ನೆಗಂ ಸಂಸ್ಕೃತವನಾಡುತಿರ್ದಿಲ್ವಲಂ
ತೆಕ್ಕನೆ ಪಿಶಾಚಿ ನುಡಿಯಿಂದೆ ದುರ್ಮಂತ್ರಮಂ
ಕಾಕು ಹಾಕುತೆ ಕೂಗಿ ಕರೆಯುವನ್ ತಮ್ಮನಂ:
'ವಾತಾಪಿ ಹೊರಗೆ ಬಾ!' ಕೇಳ್ದು, ಒಡನೆಯೆ ಹೊಟ್ಟೆ
ಕಂಪಿಸುವುದತಿಥಿ ದೇವರಿಗೆ. ಮೇಕೆಯ ಗೊರಸೊ
ಕೊಂಬೊ ತಿವಿದಂತಾಗಿ, ಕರುಳರಚಿದಂತಾಗಿ
ಪಾರ್ವರೆದ್ದೆದ್ದು ಕುಣಿದಾಡುತಿರಲಾ ಇಲ್ವಲಂ
'ಹೊರಗೆ ಬಾ! ಹೊರಗೆ ಬಾ! ಬಾ ಹೊರಗೆ!' ಎಂದೆಂದು
ಕೂಗುವನ್ ವಾತಾಪಿಯಂ. ಗುಳ್ಳೆಯೊಡೆವಂತೆ
ಹೊಡೆ ಬಿರಿದಪುದು ಪಿಂಡವುಂಡರಿಗೆ...ಅಃ...ಇನಿತು ನಿಲ್,
ಸೌಮಿತ್ರಿ, ಮುಳ್ ಮುದ್ದಿಸಿದೆ ಮತ್ ಪಾದಪದ್ಮಮಂ!
ಕೀಳಲನುಗೈದಪೆನ್."
ತಡೆಯಲಾರದೆ ಕಥೆಗೆ
ನಗುತಿರ್ದ ಲಕ್ಷ್ಮಣಂ ನೆರವಾದನಣ್ಣಂಗೆ,
ಪಾದಪದ್ಮವ ಮುದ್ದಿಸಿದ ಮುಳ್ಗೆ ಮುಗುಳ್ನಗುತೆ:
"ಏನ್ ಕತ್ತಲೆಯೊ, ಕಾಡಿಗೆಯನೊತ್ತುತಿದೆ ಕಣ್ಗೆ!"

“ಆಲಿಸಾ! ವನಮೌನಮಿದೆನಿತ್ತು ಭೀಕರಂ,
ಪುಲಿನಿದ್ದೆಯೋಲ್!...ಧೂರ್ತರೀ ತೆರದಿನಾರ್ಯರಂ
ಕೊಲುತಿರ್ದರ್. ಅಂತೆಯೆ ಅಗಸ್ತ್ಯನಂ ತೀರ್ಚಲ್ಕೆ
ಕರೆದರೌತಣಕೆ. ಮೇಕೆಯ ತೆರನ ತಮ್ಮನಂ
ಕಡಿದು ಬೇಯಿಸುತಿಲ್ವಲಂ ಬಡಿಸಿದನು ಮುನಿಗೆ.
ಅಗ್ನಿಗಾಜ್ಯಾಹುತಿಯನಿತ್ತದಂ ಮತ್ತೊಮ್ಮೆ
ಪಡೆಯಲಾಸಿಪ ಗಾಂಪನಾದನಾ ರಾಕ್ಷಸಂ.
‘ಹೊರಗೆ ಬಾ, ವಾತಾಪಿ!’ ಎಂದೆನಿತ್ತೊರಲ್ದೊಡಂ
ಬರಲಿಲ್ಲವನ್: ‘ಜೀರ್ಣಿಸಿಹುದೆನ್ನ ಜಠರಾಗ್ನಿ!
ನಿನ್ನ ಕರೆಗಿನ್ನೆತ್ತಣಿಂ ಬರ್ಪನಯ್?’ ಎನುತೆ
ಮುನಿ ನಗಲ್ಕಾತನನಳಿಸಲೆಂದು ಮೇಲ್ವಾಯ್ದ
ರಕ್ಕಸನುರಿದು ಬೂದಿಯಾದನಾ ತೇಜದಿಂ
ಋಷಿದೇವನಾ!”
ತೆರಳ್ದರಲ್ಲಿಂದೆ ಮರುಪಗಲ್.
ದಾರಿಯೊಳಗಸ್ತ್ಯನ ಸಹೋದರನ ಕಣ್ಗೊಳಿಪ
ದಿವ್ಯಾಶ್ರಮಂಬೊಕ್ಕು, ಮುಂದಣ ಮಾರ್ಗಮಂ ತಿಳಿದು,
ಪಯಣಗೈದರ್ ದಕ್ಷಿಣಾರಣ್ಯ ನಿಬಿಡತೆಗೆ
ನುಗ್ಗಿ. ಬರೆವರೆ, ನಿಬಿಡಮಾದುದು ಅಡವಿ; ಅದ್ರಿ
ಕಡಿದಾದುದೆತ್ತರಂ ನಿಡಿದಾದುದಾಳಮುಂ
ತಾನಾಯ್ತಲಾ ಅದ್ಭುತಂ. ತರಂಗಿಣಿಯ ಮೊರೆ
ಗುಹ್ಯಮಾದುದು ಭೀತಿಯಿಂ; ಹಕ್ಕಿಗಳ ಕೊರಳ
ಸರದಿಂಪು ಎದುಗಿದುದು ಹೆದರಿ. ಬನವೂಗಳುಂ
ಕಂಪನಡಗಿಸುತವಿತುಕೊಂಡುವೆಲೆಯಾಶ್ರಯಕೆ
ತಮ್ಮ ಸರ್ವಸ್ವಮಂ ತ್ಯಜಿಸಿ. ಓಡಾಡಿತಯ್
ಕರ್ನೆಳಲ ಮೆಯ್ಯ ನಿಶ್ಯಬ್ದತೆಯ ಸುಯ್ಯುಸಿರ
ಭೀತಿಭೂತಂ!
ಸೇರ್ದರಾಭೀಳ ಘೋರದಾ
ಕಾಂತಾರದಂತಮಂ. ರಮ್ಯಮಾಯ್ತಾ ಮುಂದೆ
ಆಶ್ರಮವಗಸ್ತ್ಯನಾ. ಬಾಳೆದೋಂಟಗಳಿಂದೆ
ತೆಂಗುದೋಂಟಗಳಿಂದೆ ಮೇಣಡಕೆ ಏಲಕ್ಕಿ
ಕಬ್ಬುದೋಂಟಗಳಿಂದೆ ಹಬ್ಬಿದಾ ನೋಟಮಂ

ಕಂಡುಬ್ಬಿದುದು ಮನಂ ರಾಮಂಗೆ, ಲಕ್ಷ್ಮಣಗೆ,
ಮತ್ತೆ ಮೈಥಿಲಿಗೆ. ಕಾರಣಪುರುಷನಾತನಂ
ಕಂಡೊಡನೆ ಗುರುತಿಸಿದನತಿಥಿಯನಗಸ್ತ್ಯಮುನಿ
ದೇವ ಸೀತಾನಾಥನಂ. ಮಣಿದ ಮೂವರಂ
ಪರಸಿದನ್, ಸತ್ಕರಿಸಿದನ್ ಧನ್ಯಮಾಯ್ತೆಂದು
ತನ್ನಾಶ್ರಮಂ. ಕೆಲಕಾಲಮಲ್ಲಿ ಗುರುವರನ
ಸನ್ನಿಧಿಯೊಳಿರ್ದು, ತೆಂಕಣನಾಡ ಸೊಬಗಂ
ಸವಿದುಮರಿತುಮಲ್ಲಿಂದೆ ಮುಂದೆ ತೆರಳಲ್ಕೆಳಸಿ
ಬೇಡಿದನಗಸ್ತ್ಯನಂ, ಮುಂದಣವಧಿಯ ವನದ
ವಾಸಮಂ ಕಳೆಯೆ ನೆಮ್ಮದಿಯ ನಲ್ದಾಣಮೊಂದಂ
ಕೃಪೆಯಿಂ ಬೆಸಸಿಮೆಂದು. ಜಾನಿಸಿದನಂತರಂ
ಕಿರುನಗೆಯ ಮೊಗದ ಕಿತ್ತಡಿ ನುಡಿದನಿಂತೆಂದುಃ
''ದಂಡಕಾರಣ್ಯದೀ ಕಂಟಕದ ಬೀಡಿನೊಳ್
ನೆಮ್ಮದಿಯ ಮಾತೇಕೆ, ಪೇಳ್, ಕ್ಷತ್ರಿಯ ಧನುರ್ಧರಗೆ
ನಿನಗೆ? ಬಗೆಗೆಡ್ಡಮಾಗಿರ್ಪೊಂದು ತಾಣಮಿದೆಃ
ನಾತಿದೂರಂ ಶ್ಲಾಘನೀಯಮಾ ಪಂಚವಟಿ;
ಬಹುಮೃಗ ಮನೋಹರಂ, ಬಹುಪಕ್ಷಿ ಮಂಜುಳಂ,
ನಿತ್ಯಪುಷ್ಪಿತ ವನ ಸುಶೋಭಿತ ತಟಾನ್ವಿತಾ
ಸಲಿಲ ಗದ್ಗದ ನಿನದೆ ಆ ಪುಣ್ಯ ಗೋದಾವರಿಯ
ಸಂಗದಿಂದತಿಮಂಗಳಂ. ರಾಜಯೋಗ್ಯಮುಂ
ಮತ್ತೆ ಋಷಿಯೋಗ್ಯಮುಂ ಸ್ಥಳಮದು ಮಹತ್‌ಕಥಾ
ಕಾರಣಂ ತಾನಪ್ಪುದದು ದಿಟಂ ನಿಮ್ಮಿಂದೆ,
ರಘುನಂದನಾ. ದ್ವಿಯೋಜನ ದೂರಮೀಯೆಡೆಗೆ
ನಿಕಟಮಾಗಿದೆ ಪಂಚವಟಿ. ಕಾಣ್ಬುದದೊ ಅಲ್ಲಿ
ಓ ಆ ಮಧೂಕ ವನಂ. ಅದನುತ್ತರಿಸೆ ಮುಂದೆ
ಗೋಚರಿಪುದೊಂದು ನ್ಯಗ್ರೋಧ ಭೂರುಹಂ. ಅದಂ
ಮೀರಿ ನಡೆಯುತ್ತೊಂದು ತೆಮರನೇರಲ್ಕೊಡಂ
ತೋರಿದಪುದೊಂದೆತ್ತರದ ಕಾಡಿಡಿದ ಮಲೆಯ
ನೆತ್ತಿ. ಆ ಗಿರಿಚರಣ ತಲಮೆ ತಾಂ ಪಂಚವಟಿ!
ದಾಶರಥಿ, ಶರಧಿಯಾಗಲಿ ನಿನ್ನ ಸಾಹಸಂ.
ಸಾರ್ಥಕಂ ಗೆಯ್ ನನ್ನ ಕೊಟ್ಟಾ ಧನುರ್ಬಾಣಮಂ,

ದಿವ್ಯ ತೂಣೀರಮಂ. ನೆರವಾಗು, ಸೌಮಿತ್ರಿ,
ನಿನ್ನಣ್ಣದೇವಂಗೆ. ಮಗಳೆ, ಸೀತಾದೇವಿ,
ನಿನ್ನಳಲ ಲೆಕ್ಕಿಸದೆ ಪತಿ ಹಿತಂಕರಿಯಾಗು;
ಲೋಕ ಶಂಕರಿಯಾಗು; ಮೇಣ್ ಯಮ ಭಯಂಕರಿಯಾಗು
ಲೋಕ ಮೂರಕೆ ಶೋಕವಾಗಿಹ ನಿಶಾಚರರ
ನಿಷ್ಠುರ ನೀಚಕುಲಕೆ!''
ಪರಸುತಿರೆ, ಕೊರಳ ಸೆರೆ
ಬಿಗಿದು ಗದ್ಗದವಾಯ್ತು ಮುನಿಗೆ; ಕಣ್ಬನಿಯುಕ್ಕಿ
ಪರಿದಿರೆ, ಜನಕಜಾತೆಯನೆ ನೋಡುತಳ್ತನಾ
ಸೂರ್ಯವರ್ಚಸ್ವಿ! ನಮಿಸುತೆ ಪೂಜ್ಯ ಋಷಿಪದಕೆ
ಬೀಳುಕೊಂಡರು ಮೂವರುಂ ಪಂಚವಟಿಗಾಗಿ.

ಸಂಚಿಕೆ ೧೧

# ಪಂಚವಟಿಯ ಪರ್ಣಕುಟಿ

ಮಹಾಟವಿಯ ವಟವರ ಶಿರಾಗ್ರದೊಳಿರೆ ಜಟಾಯು
ನೋಡಿದನ್, ಬಿಸಿಲು ನೆಳಲಿನ ರಂಗವಲ್ಲಿಯಿಂ
ರಾಜಿಸುವ ಪಸುರುವುಲ್ಲಿನ ಪಚ್ಚೆಯೊಳ್ನೆಲದೆ
ಸೊಬಗು ಕಣ್ಗೊಳಿಪರಂ, ಮೂವರಂ ಮನುಜರಂ,
ಪಂಚವಟ್ಯಭಿಮುಖಿಗಳಂ. ಬೃಹದ್ ಗಾತ್ರದಾ
ಭೀಮವಿಕ್ರಮ ವಿಹಂಗೇಂದ್ರನಂ ವೀಕ್ಷಿಸುತೆ
ಶಂಕೆ ಪುಟ್ಟಿತು ನಿಶಾಚರರೊಂದು ಛದ್ಮನೆಯ
ಭಯಕೆ. ಪೇಳ್, ಪಕ್ಷಿ, ನೀನಾರೆಂದು ಕೇಳಲ್
ಜಟಾಯು ನುಡಿದನು ಮಧುರವಾಕ್ಯಂಗಳಂ: ''ವತ್ಸ, ನಾಂ
ನಿನಗನ್ಯನಲ್ಲಯ್ಯ; ಪಿತೃಸಖಂ! ಸಂಪಾತಿ ತಾಂ
ಪಿರಿಯಣ್ಣನೆನಗೆ. ಪೆಸರಿಂದಾಂ ಜಟಾಯುವೆಂ.
ದುಷ್ಟ ರಾಕ್ಷಸ ಸೇವಿತಂ ಈ ದುರ್ಗಕಾನನಂ.
ನಿಮಗಾಂ ಸಹಾಯನೆಂ ನೀನನುಮತಿಯನೀಯೆ.''
ಪ್ರಿಯ ವಾಕ್ಯಮಂ ಕೇಳಿದೊಡನೆಯೆ ಮುದಂ ಮೊಳೆತು
ಮೂವರುಂ ನಮಿಸಿದರು ದಶರಥಸ್ನೇಹಿತಗೆ,
ಆ ಶ್ಯೇನಿಪುತ್ರಂಗೆ. ಮತ್ತಾತನುಂ ಕೂಡೆ
ಕಾವಲ್ಗೆತರೆ ಮುಗಿಲವಟ್ಟೆಯ ಬೇಹಿನಾಳಾಗಿ,
ಬಟ್ಟೆವಿಡಿದರ್ ಪಂಚವಟಿಗೆ, ಗೋದಾವರಿಯ
ತಟಿಗೆ.
''ಕಂಗೊಳಿಸುತಿದೆ ಇದೊ ಮುಂದೆ, ಸೌಮಿತ್ರಿ,
ಆ ಅಗಸ್ತ್ಯನ ವರ್ಣನೆಯ ಮನೋಹರಂ ವನಂ.

ಏಂ ಶಾನ್ತಿ ಸಾಮ್ರಾಜ್ಯವಾಳುತಿದೆ ನೋಡು, ಪ್ರಿಯೆ!
ಚಿತ್ರಕೂಟದ ಸೊಬಗಿಗಿರ್ಮಡಿ ಸೊಬಗಿದಲ್ತೆ?
ಪಿಂತಾವಗಂ ನಾಂ ಪಡೆಯದೊಂದು ಸೊಗಮಿಲ್ಲಿ
ಕಾಯ್ದಿಮಗೆ ಬಯಸಿದಪ್ಪುದು ಸುಖಾಗಮನಮಂ:
ತರುಚಾಮರದ ಕರದ ತೋಳ್‌ವೀಸಿ, ಕಾಣ್, ಕರೆಯುತಿದೆ
ಗಿರಿ. ಸೂಸಿ ಪೂವಲಿಯನಾಹ್ವಾನಗೈವಳಿದೊ ಈ
ವಿಪಿನರಾಜೇಶ್ವರಿ. ತರಂಗ ಮಂಜುಳ ರುತಿಯ
ವಾಣಿಯಿಂದೆಮಗೆ ಸುಸ್ವಾಗತವನುಲಿವಳದೊ
ಚಂಚಲಾಂಚಲ ಗತಿಯ ಗೋದಾವರಿ!''
''ಅದೊ ಅಲ್ಲಿ,
ವೈಡೂರ್ಯಗಳೆ ರಾಸಿಗೊಂಡಂತೆ, ದಡಂಮುಚ್ಚೆ
ಪಸುರ್ಮಿಡಿದು ಸಾಲ್ಗೊಂಡಿಹವು ಹೊಂಗೆ!''
''ಪಡಿನೆಳಲ್,
ಕನ್ನಡಿವಿಡಿದ ತೆರದಿನೆಸೆಯಲ್ಕೆ, ಅಃ ಕಾಣ್ಬುದದೊ
ಗರಿಗರಿಯೆಲೆಯ ಬಿದಿರ ಮೆಳೆಚವರಿ!''
''ಅದೊ ನವಿಲ್;
ಹೊಳೆಯ ನೀರಿಗೆ ಬಾಗಿದೊಂದು ಕೊಂಬೆಯ ಮೇಲೆ
ಕುಳಿತೀಂಟುತಿಹುದೆಂತು!''
''ಅಗೊಗೊ ನೀರ್ವಕ್ಕಿಗಳ್;
ಏಂ ಕ್ರೀಡೆಯಿಂಚರಂ!''
''ಏನೆತ್ತರದ ಸಾಲಮಿದು!
ಕಣ್ಣೆತ್ತಿ ನೋಡಿ ಪೂರೈಸಲಾರದೆ ಕೊರಲ್
ದಣಿಯುತಿದೆ!''
''ನೋಡು ವಲ್ಮೀಕ ಗೋಪುರಮಿದಂ:''
''ಕೈಯ ಬಿಲ್ಲನ್ನೆತ್ತಿದೊಡಮದರ ಕೊಪ್ಪಿಗುಂ
ನೆತ್ತಿ ನಿಲುಕದು ಹುತ್ತದಾ!''
''ಅತ್ತ ನೋಡತ್ತಲ್:
ಕಳಿತ ಪಣ್ಮಳೆಗರೆದು ನೆಲಂ ಕೆಸರೇಳುತಿದೆ
ಸೋರ್ದ ರಸಕೆ.''
''ಏನಮಂಗಳಮೊ? ಕಾಲ್ ಜಾರುತಿದೆ
ನನಗೆ!'' ಮೈಥಿಲಿ ತನ್ನೊಳಗೆ ತಾನೆ ಗೊಣಗುತಿರೆ,

ಬಳಿಗೆ ಬಾರದೆ ದೂರ ಸಾರದೆ ಕುರಂಗಶಿಶು
ಸುಳಿದಡಗಿದುದ ಕಂಡಳೆಂದಳ್ ಮನಃಪ್ರಿಯಗೆ:
"ಈ ತಾಣಮೆಲೆವನೆಗೆ ನಲ್ದಾಣಮೇ ದಿಟಂ
ಸಾಧುಮೃಗದೀ ಸ್ಥಲಂ ತಾನೇಗಳುಂ ಸಾಧು!"
"ನಿನಗೆ ಕಾಲ್ದಣಿದೆಡೆಯೆ ನಮಗಕ್ಕುಮಾಶ್ರಮಂ!"
ಅತ್ತಿಗೆಯನಂತಣಕವಾಡಿದಣ್ಣಗೆ ಲಕ್ಷ್ಮಣಂ:
"ಮನ್ನಿಸೆನ್ನಂ, ಜೀಯ. ದೇವಿಯರೆಣಿಕೆ ನನ್ನಿ.
ಬಿತ್ತರಂ ಈ ನೋಟಮೀ ಪೀಠಮೆತ್ತರಂ;
ವನರಾಮಣೀಯಕಂ, ಜಲರಾಮಣೀಯಕಂ,
ಪುಷ್ಪಫಲಮೂಲ ವಿಪುಲಂ. ಮೇಣ್ ಕ್ಷೇಮಸಂವೇದಿ:
ನಾತಿದೂರಂ ನಾತಿನಿಕಟಮದೊ ಕಾಳ್ಮಿಗಂ
ಸುಳಿಯುತಿವೆ ಮನಮೋಹಕಂ. ನಿನಗೆ ಬಗೆಯೊಪ್ಪೆ
ರಚಿಸುವೆನನುತ್ತಮಂ ಪರ್ಣಕುಟಿಯಂ." "ನಿಮಗೆ
ರುಚಿಸಿದುದೆ ನನಗೆ ಪಥ್ಯಂ. ಬನ್ನಿ, ನಾಮೆಲ್ಲರುಂ
ಕೂಡಿ ಕಟ್ಟುವಮದಂ ಪರ್ಣಪಾಥೇಯಮಂ!"
    ಬನ್ನಿಗಂಬವ ಹೂಡಿ, ಬಿದಿರಗಳು ತೊಲೆಮಾಡಿ,
ಹುಲ್ಲೆಲೆಗಳಂ ಹೊದಿಸಿ, ಹೆಡಗೆವಳ್ಳಿಯ ಸೀಳಿ
ಸಲಕಂ ಬಿಗಿದು ಕಟ್ಟಿ, ಹಂಬು ಬೆತ್ತವ ಕಡಿದು,
ಸಿಗಿದು, ತಟ್ಟಿಯ ಹೆಣೆದು, ತಡಿಕೆ ಗೋಡೆಯನಿಟ್ಟು,
ಬೆಳಕಂಡಿಯಂ ಬಿಟ್ಟು ಹುತ್ತದೆರೆಯಂ ಮೆತ್ತಿ,
ಕಣೆ ನೆಯ್ದು ಬಾಗಿಲಂ ಬಲಿದು, ಸುತ್ತೆತ್ತಲುಂ
ಮುಳ್ಬೊಡ್ಡನಡಕಿ, ಮೇಣ್ ತಡಬೆಯುಣುಗೋಲ್ಗಳಂ
ಪೂಡಿ, ವಿರಚಿಸಿದರಾಶ್ರಮವನತಿಶ್ಲಾಘ್ಯಮಂ
ವನಭೋಗ್ಯಮಂ!
                    ಪರ್ಣಶಾಲೆಗೆ ಸಮೀಪಮಾ
ನಿಮ್ನದೊಳ್ ದೃಷ್ಟಿಸೀಮೆಗೆ ಸಲಿಲನೇಮಿಯಂ
ಸೃಷ್ಟಿಸುತ್ತನವರತಯಾತ್ರೆಯಂ ಪರಿದಿರ್ದ
ಗೋದಾವರಿಯ ತೆರದಿ ಪರಿದಿರಲ್ ಕಾಲನದಿ,
ಬತ್ತಿಯುರಿಯಲ್ಕೆಣ್ಣೆ ಬತ್ತುವಂದದಿ ಬತ್ತಿ,
ಹತ್ತೆಸಾರುತ್ತಿರ್ದುದಯ್ ವನವಾಸದವಧಿ.
ಹೆಚ್ಚಿದುದು ಮನೆನೆನಹು; ಮೇಣಯೋಧ್ಯೆಯ ಕುರಿತ

ಮಾತು ಮಿಗಿಲಾದುದು; ಏನುತ್ತಮಂ ಕಂಡರದು
ಮನಕೆ ತಂದುದು ಉಪಮೆಯೋಲನ್ಯ ಚಿತ್ರಮಂ:
"ಗೋದಾವರಿಯ ಜಲಂ ರುಚಿರ ನಿರ್ಮಲವಲಾ?"
"ಸರಯೂ ಸಲಿಲದಂತೆ!" "ಈ ತಾವರೆಯ ಹೂವು
ನೋಡೆನಿತು ಚೆಲ್ವು," "ನೀನಂದು ಗಂಗಾನದಿಗೆ
ಮೀಯೆ ಹೋದಂದು ತಂದಲರಿನೋಲಿಹುದಿದರ
ಸೊಂಪು!" "ಕೇಳದೊ, ಕೊಂಚೆವಿಂಡುಲಿಯುತಿದೆ." "ಅಹಾ!
ನಮ್ಮರಮನೆಯ ತೋಂಟದೊಳ್ ಕುಳಿತು ನಲಿವಂದು
ಈ ತೆರನ ದನಿಹನಿಯ ಸೋನೆಗಿಂತುಟೆ ವಲಂ
ಕಿವಿ ತಣಿದೆವಲ್ತೆ?" "ನೋಡಾ ಮರದ ತಳಿತೆಸೆವ
ಪೆಂಪು." "ಅಯೋಧ್ಯಾ ಪುರದ್ವಾರದೆಡೆಯಿರ್ಪ ತರುವುಂ
ಈ ಶರತ್ ಸಮಯದೊಳಗಿಂತೆ ಶೋಭಿಪುದಲಾ!"–
    ಇಂತೆಲ್ಲಮುಂ ಪ್ರತೀಕಂಗೊಳ್ಳಲೊರ್ದಿನಂ
ಹೊಳೆಯ ನುಣ್ಮಳಲ ಬೆಣ್ಣೆಯ ದಿಣ್ಣೆಮೇಲಿರ್ದು,
ಸೀತೆ ತಾಂ ಪತಿ ಮೈದುನರ ಕೂಡೆ ಮಾತಾಡುತಿರೆ,
ಕಂಡು, ತೋರಿದಳಾಗಸದ ನೀಲಿಗೆದುರಾಗಿ
ಬೂರುಗದರಳೆರಾಸಿ ಹಂತಿಗೊಂಡೊಪ್ಪಿರ್ದ
ತೆರದ ಶರದದ ಮುಗಿಲ ಬೆಳ್ಪಿನೊಡ್ಡಂ. "ನಮ್ಮ
ನಾಡಿನಾ ಹಸುರು ಹಬ್ಬಿದ ಬಯಲಮೇಲಿಂತೆ
ರೊಪ್ಪವಪ್ಪುವು ಬೆಳ್ಳಿಯುಣ್ಣೆಯ ಕುರಿಯ ಹಿಂಡು."
ಸೌಮಿತ್ರಿಯೆನೆ ರಾಮನೆಂದನ್: "ಅಗ್ನಿಕ್ರಿಯಾ
ಚಿಹ್ನೆಯಿದು ಶರದೃತುಗೆ. ಪ್ರೇತಭೂಮಿಯೊಳಿಂತು
ಶ್ವೇತಭಸ್ಮವೆ ರಾಸಿಹಬ್ಬಿದೆ ಶರನ್ಮೇಘೌಘ
ವೇಷದಲಿ! ಇನ್ನೇನದಿಂದೊ ನಾಳೆಯೊ ನೆಲಕೆ
ಮಂಜಾಗಿ ಬೀಳೆ, ಮೊದಲಹುದು ಹೇಮಂತಋತು!"
ಎಂದ ರಘುನಂದನನ ಮುಖಭೀಷ್ಮತೆಗೆ ಸೀತೆ
ಬೆಚ್ಚುತಿರೆ "ತಂದೆಯಂ ನೆನೆದಿರ್ದನದರಿಂದೆ
ಆ ಉಪಮೆ!" ಎಂದು ಸಂತೈಸುತಿರೆ ಭಾರ್ಯೆಯಂ,
ಕೆಂಪೆರಚಿದುದು ಬೈಗು ಆ ಮುಗಿಲ ಮೊತ್ತಕ್ಕೆ.
ಮೌನಗೌರವದಿಂದೆ ನೋಡುತಿರಲಾ ಚಿತಾ
ಪ್ರತಿಕೃತಿಯ ಚಿತ್ರಂ ವಿಚಿತ್ರತರಮಾದುದಯ್

ತಾಳ್ದು ನಾನಾಕೃತಿಗಳಂ: ಕಪಿಯಾಯಿತೆನ್ನುತಿರೆ,
ಪುಲಿಯಾಯ್ತು! ಪುಲಿಯೆನ್ನುತಿರೆ ಕರಡಿಯಾಯ್ತು. ಕಾಣ್
ಕರಡಿಯೆಂಬನಿತರೊಳೆ ಭೀಮರಾಕ್ಷಸನಾಯ್ತು!
ಕಳ್ತಲೆಯ ಮರ್ಬಿನಲಿ ದುಶ್ಯಕುನ ಭೀಕರದ
ಮೇಘದೈತ್ಯಾಕೃತಿಗೆ ಕಂಪಿಸುತವನಿಜಾತೆ
ಕಣ್ದೆರುಹೆ, ಗೋಚರಿಸಿತಾಯು ತನ್ನೆಡೆಗಿಳಿದು
ಬರ್ಪಂತೆ ಬಂದಾ ಜಟಾಯು ಧೈರ್ಯಾಕೃತಿ.
ನಭಃಪರ್ಯಟನದಿಂದಮಿಳಿದ ಪಕ್ಷೀಂದ್ರನಂ
ಸಖನನುತ್ಸಾಹದಿಂ ಸ್ವಾಗತಿಸಿ, ಕುಶಲಮಂ
ಕೇಳ್ದೊಸೆದು ನುಡಿಸಿ, ಸಂತೋಷದಿಂದೆಲ್ಲರುಂ
ಮೇಲೆಳ್ದು ತೆರಳ್ದರೆಲೆವನೆಗೆ...
ಕಳೆದತ್ತೊಂದು
ವಾರಂ. ಸಾರ್ತಂದುದಿನದಿನಂ. ಇನೋದಯಕೆ
ಮುನ್ನ ಮೈಥಿಲಿ ಪನ್ನಗುಡಿಯ ಕಣೆಯೆಲೆವಾಗಿಲಂ
ತೆರೆದು ನೋಡಿದಳಹಾ! ಬೆಚ್ಚಿದಚ್ಚರಿವೆರಸಿ
ಮತ್ತೆ ನೋಡಿದಳು: ಕಂಡಳೆ ಜಗತ್ ಶೂನ್ಯತಾ
ದೃಶ್ಯಮಂ? ಕೂಗಿ ಕರೆದಳ್ ಮಲಗಿದಿನಿಯನಂ.
ತೋರಿದಳ್ ಬೇಗವೇಗೆಳ್ದು ಬಂದಾತಂಗೆ
ಒಡವೆ ಝುಣೆರೆನೆ ಕೈಯ ಬೀಸಿ. ಪ್ರಕೃತಿಪ್ರಿಯಂ
ನೋಡಿದನು ಸೃಷ್ಟಿಯ ಅಭಾವವನೆ ಚಿತ್ರಿಸಿದವೋಲ್
ನೀಹಾರ ರಚಿತಮಾ ಹೇಮಂತ ಮಂಜುಕಲೆಯಂ:
ಗಿಡವಿಲ್ಲ, ಮರವಿಲ್ಲ; ಮಲೆಯಿಲ್ಲ, ಕಾಡಿಲ್ಲ;
ನೆಲವಿಲ್ಲ; ಬಾನಿಲ್ಲ; ಬಿಳಿಯ ಬಣ್ಣವನುಳಿದು
ನೋಟಕೇನೊಂದಿಲ್ಲ. ಬೆಳ್ಪೊಂದೆ ಜಗವೆಲ್ಲಮುಂ!
ಕಡಲ ಕಡೆಹದೊಳುದಿಸಿ, ಮಂಥನದ ರಭಸಕ್ಕೆ
ಸಿಡಿದು, ತುಂತುರು ತುಂತುರಾಗಿ, ನಾನಾ ದೆಸೆಗೆ
ಪರ್ವಿದಾ ಕೇಂದ್ರಾತಿಗಾಮೃತಂ ಪರ್ವತದ ಮೇಣ್
ಫಣೆಯ, ಮೇಣಸುರಾಮರಾಕಾರದಿಂ ಪ್ರವಹಿಸಿತೊ
ಶೀಕರ ತುಷಾರದೋಲೆಂಬಂತೆ ಬಿಳಿಮಂಜು ತಾಂ
ರೌಪ್ಯಧೂಳಿಯ ಸಾಂದ್ರ ಧೌತಧವಳವನೆರಚಿ
ಮುಚ್ಚಿ ಮುಸುಕಿದುದು ಗಿರಿವನ ಭುವನಮಂ. ಮೇಣ್ ಮಳಲೆ

ಹೊಗೆಯಾಯ್ತೊ, ನೊರೆಯೆ ಇಬ್ಬನಿಯಾಯ್ತೊ ತಾನೆಂಬ
ಕಡಲಾಗೆ ದಟ್ಟೈಸಿತ್ತೈಕಿಲ್ ಸೋನೆ, ಬಳಿಯಿರ್ದುಮಾ
ಬಳಸಿರ್ದ ಮುಳ್ಳಿನೊಡ್ಡುಂ ಮಂಜಿನೊಳ್ ಮಸುಳೆ,
ತೆಪ್ಪವಾದುದು ತೇಲ್ದುದವರಾಶ್ರಮಂ! ಮತ್ತೆ,
ನೋಡುತಿರೆಯಿರೆ, ಕೊಡಹಿದರಳೆ ಪಸರಿಸುತುರ್ಬಿ
ಪರ್ಬುವೋಲೊಯ್ಯನೆ ಪಳಂಚುತಲೆದಾ ಹಿಮಂ
ತಬ್ಬಿತೆಲೆವನೆಯನಂತೆಯೆ ತುಂಬಿತೊಳಗುಮಂ
ತೆರೆವಾಗಿಲಿಂದೆ ಬೆಳಕಂಡಿಯಿಂದೊಳವೊಕ್ಕು,
ಲೆಕ್ಕಿಸದೆ ಮಡದಿಯೊಡನೆಯೆ ಕಾಪುಗೊಂಡಿರ್ದ
ದಿನಕರ ಕುಲದ ಕಲಿ ಕುಮಾರನಂ!
                                  ''ಮೈದುನಂ
ಪೊಳೆಗೆ ಪೋದವನಿನ್ನುಮೈತರನೆ!'' ''ದಟ್ಟೈಸಿ
ಹಿಟ್ಟಿಳಿಯುವೈಕಿಲೊಳ್ ಬಟ್ಟೆದಪ್ಪಿದನೊ? ಮೇಣ್...''
''ಏನೊ ಸದ್ದಾಗುತಿಹುದಾಲಿಸಿಂ.''
                                  ಕಿವಿಗೊಟ್ಟು,
ತಡಬೆಯಿರ್ದೆಡೆಗೆ ಕಣ್ಣಾಲಿಯಾಗಿರೆ, ಸುಳಿದು
ಗೆಣ್ಬರಿಂ ಬಳಿಗೆ ಸಾರ್ತಂದುದಾಳ್ವರಿಜೊಂದು,
ಮಿದುಳ್‌ಬಿಳಿಯ ಮಂಜುವಗೆಯಿಂ ಮೂಡಿ ಬಂದುದೆನೆ
ಬೆಳ್‌ಗನಸು. ಇರ್ಪಿಂದೆ ನಾರುಡೆ ತೊಯ್ದು, ಕೇಶಮಂ
ಮೀಸೆಯಂ ರಜತರಜಸಮ ಹಿಮಕಣಂ ಪತ್ತಿ
ಬೆಳ್ಪಸೆಯೆ ಮೈದೋರಿದುದು ಮೈದುನನ ಮೂರ್ತಿ:
''ಏನು ಮಂಜಿದೊ ಕಾಣೆ! ಕಣ್ದಪ್ಪಿದತ್ತೆನಗುಮಾ
ನಿತ್ಯಪರಿಚಿತ ಪಥಂ: ಗೋದಾವರಿಯನರಸಿ
ತೊಳಲುವಂತಾಯ್ತುಲಾ! ಕಡೆಗೆ, ಕೊಂಚೆಗಳುಲಿಯ
ಮತ್ತೆ ಸಾರಸ ರುತಿಯ ಕೈಮರವನಾಲಿಸುತೆ
ತೊರೆಯ ದಡಕೈದಿದೆನ್ ಕಾಲೂಹೆಯಿಂ! ಪುಳಿನ
ಶೈತ್ಯದಿಂದಮೆ ಸಲಿಲ ಶಿಶಿರತೆಯನನುಭವಿಸಿ
ಮಿಂದೆನಿಲ್ಲಾ ಚಳಿಗೆ ಸೆಡೆತು! ಈ ಮರ್ಬಿನೊಳ್
ಬಟ್ಟೆಗೆಡುವುದೆ ದಿಟಂ ಪೊಳೆವೊನಲ್‌ಗುಂ! ಹು ಹು ಹು!''
ನಡುನಡುಗಿ ನಡೆದನೊಲೆಯೆಡೆಗೆ, ಮುದುಗಿದ ಮೆಯ್ಯ
ಲಕ್ಷ್ಮಣಂ.

ಪೊಳ್ತಿನಿತನಂತರಂ ಪೊಳ್ತೇರೆ,
ಪೊಳ್ತರೆಯ ಕದಿರುಗಳಿಗಿಟ್ಟಣೆಸಿದ್ಯೆಕಿಲಿಗೆ
ಗೊಟ್ಟಿಗಾಳೆಗವಾಗಿ, ಸೋಲ್ತ ಮಂಜಿನ ಸೇನೆ
ಸಾಂದ್ರತೆಯನುಳಿದು, ವಿರಳತೆಯಾಂತುಮೊಳಸೋರ್ದು
ಚೆದರಿ, ದಳದಳಮಾಗಿ, ಗಿರಿಶಿಖರ ಸೀಮೆಯಿಂ
ಮೆಲ್ಲನೆ ಪೆಡಂಮೆಟ್ಟಿ ಸರಿಯತೊಡಗಿತು ಸಾನು
ನಿಮ್ನತೆಗೆ. ತೂಲಸಮ ಪೀಯೂಷ ಕೋಶದಿಂ
ಕೇಶ ತನುತರ ತಂತುವನ್ನೆಳೆದು ಕುಶಲದಿಂ
ನೆಯ್ದಮೃತ ಕೌಶೇಯ ಯವನಿಕಾಚ್ಛಾದಿತಂ
ಮೆರೆದಿರೆ ಮನೋಹರಾಸ್ಪಷ್ಟ ಕಾನನ ಭೂಮಿ,
ಹೊಳೆಗಾಗಿ ಹೊರಹೊಂಟನಾಶ್ರಮವನಿನಕುಲಂ
ಸೀತಾ ಸಮೇತಂ. ಸಲಿಲ ಕಲಶಮಂ ಪಿಡಿದು
ಜೊತೆ ನಡೆದನೂರ್ಮಿಳೇಶಂ.
ಪಟ್ ಟಪಟ್ಟ್ ಎಂದು
ಹಿಮಸಿಕ್ತ ಪತ್ರದಿಂ ಬಿಳ್ದುವು ತುಹಿನಬಿಂದು,
ತೋರ ಮಳೆಹನಿಗಳೋಲ್. ತೂರಿ ಬಂದೆಳವಿಸಿಲ್
ಕೋಲುಕೋಲಾಗಿ ಕಾಡಿನ ನಡುವೆ ಚೆಲ್ವಾಯ್ತು,
ಛಾಯೆಮಾಯೆಯ ಸೃಜಿಸಿ. ನಿಡು ಬೆಳೆದ ಮರನೆಳಲ್
ನಸುನೀಲಿಯಾಗಿ ಮಂಜಿನ ಮೆಯ್ಗೆ ಚಿತ್ತಾರಮಂ
ಕಂಡರಿಸಿದತ್ತು. ಮೂಡಿದುವು ಮಳೆಬಿಲ್ಗಳುಂ
ತಾಮಲ್ಲಲ್ಲಿ. ಋತದ ಕಲ್ಪಿತಮಿಳಿದು ನನಸಾಗೆ
ಪೊರಮಟ್ಟುಮರ್ಧಮಾರ್ಗದೊಳೆಂತೊ ನಿಂದವೋಲ್
ಇಂಬಾದಳಾ ತುಹಿನ ತನುವಸನೆ, ತನ್ವಂಗಿ,
ಸಸ್ಯಶಾಲಿನಿ ಪೃಥಿವಿ!
"ನೋಡು, ಮೈಥಿಲಿ, ಅಲ್ಲಿ!
ಪನಿ ತಳ್ತ ಶಾದ್ವಲ ಶ್ಯಾಮವೇದಿಕೆಯಲ್ಲಿ
ತೃಣಸುಂದರಿಯ ಮೂಗುತಿಯ ಮುತ್ತುಪನಿಯಂತೆ
ಮಿರುಮಿರುಗಿ ಮೆರೆವಾ ಹಿಮದ ಬಿಂದು! ಜ್ವಲಿಸುತಿದೆ
ನೋಡೆಂತು ಬಣ್ಣದೆಣ್ಣೆಯ ಹಣತೆ ಸೊಡರಂತೆ
ಸಪ್ತರಾಗೋಜ್ವಲಂ! ಸರ್ವಸೃಷ್ಟಿಯ ದೃಷ್ಟಿ ತಾಂ
ಸೆರೆಯಾಗಲೊಪ್ಪಿರುವುದಾ ಹನಿಯ ಹೃದಯದಾ

ಪುಟ್ಟ ಜೋತಿಯಲಿ! ದೇವರ ಮುಖದ ದರ್ಶನಕೆ
ಸಾಲದೇನಾ ಹನಿಯ ಕಿರುದರ್ಪಣಂ? ನಿಲ್ಲಿಮ್; ಆ
ಇರ್ಬನಿಯ ಕಿಡಿಗುಡಿಯೊಳಾರಾಧನೆಯನೆಸಗಿ
ಮುಂಬರಿಯುವಂ!''
                        ''ದೇವಿ, ಹೇಮಂತಮಿಷ್ಟಮಿಹುದು
ತಾನ್ಯೆಸೆ! ದೂರಸೂರ್ಯನೆ ಚಂದ್ರನಾತಪಮೆ
ಕೌಮುದಿ. ಸುಖಾಸ್ಪದಂ ಹಿತಕರಂ ಶೀತಲಂ
ಮಧ್ಯಾಹ್ನಮುಂ. ಸುಭಗನಗ್ನಿ. ದುರ್ಭಗಮ್ಯೆಸೆ
ನೆಳಲ್ ನೀರ್‌ಗಳೆರಡುಂ...'' ''ಐಕಿಲಿರ್ಪಿಂ ತೊಯ್ದು
ಪೊನ್ದನೆಯ ಮುಡಿವೊರೆಗೆ ಬಾಗಿ ಶೋಭಿಪವಲ್ತೆ
ಗದ್ದೆಗಳಯೋಧ್ಯೆಯೊಳ್!'' ''ಕಾಣಿಮಾ ಕಾಡಾನೆ
ಜೊಂಡುವುಲ್ಗೆಳಸಿ ಸೊಂಡಿಲ ನೀಡಿ, ಮತ್ತೊಡನೆ
ಕರ್ಚ್ಚುವೈಕಿಲ್ ಕುಳಿರ್‌ಗಳುಕಿ ಸೆಡೆಯುತೆ, ಬಾಯ್ಗೆ
ಪುಗಿಸುತಿದೆ ರಿಕ್ತಹಸ್ತವನುಸಿರ ಬಿಸುಪಿಂಗೆ
ಬಯಸಿ!'' ''ಸರಯೂ ನದಿಯೊಳವಗಾಹನಂ ಗೆಯ್ಯೆ
ನೋಂತ ಭರತನದೆಂತೊ ಈ ಪೊತ್ತಿನೀ ಚಳಿಗೆ
ಮನದಂದಪಂ!'' ''ಜಿತೇಂದ್ರಿಯನಾತಗಾ ವ್ರತಂ
ಅಪ್ರಿಯಮೆ?'' ''ಧರ್ಮಜ್ಞನಾತನಾ ಕೈಕಯೀ
ಕ್ರೂರದರ್ಶಿನಿಯ ಗರ್ಭದಿನೆಂತುಟುದಿಸಿದನೊ
ಸೋಜಿಗಂ!'' ''ಸೌಮಿತ್ರಿ, ನಿಂದಿಸದಿರಂಬೆಯಂ.
ನುಡಿಯುವೊಡೆ ನುತಿಸು ತಮ್ಮನ ಗುಣಗಣಂಗಳಂ.
ಈ ಪ್ರಕೃತಿಸೌಂದರ್ಯಮೆಮಗೆ ಪೇಸುವುದಲ್ತೆ
ನಿಂದಾ ರತರ್ಗೆ! ನೋಡದೊ ಮಲೆಯ ನೆತ್ತಿಯಿಂ
ಹಿಂಜರಿದ ಮಂಜೆಂತು ಓಡುತಿದೆ ಆ ಹೊಳೆಯ
ಹರಿವ ಹೊನಲಿನ ಕಣಿವೆವಟ್ಟೆಯೊಳ್! ನೀರ್ವಕ್ಕಿಗಳ್
ಕೀರ್ತಿಸುತ್ತಿವೆ ಮೂಡುನೇಸರಂ. ಬಿಸಿಯುಸಿರಾವಿ
ಮರ್ಬುಗೈದೊಂದು ಮುಕುರಂಬೋಲೆ ಮಲಿನಮದೊ ಕಾಣ್
ತಪನ ಬಿಂಬಂ. ಮಗ್ನಮೆಂಬವೋಲಸ್ಫುಟಂ
ಸುಸ್ಥಿರಮಪುಷ್ಪ ವನರಾಜಿಗಳ್. ಅದೊ ನದಿಯ ನೀರ್
ಮಿರುಗುತಿದೆ ಪಾದರಸದೋಲ್, ಪ್ರತಿಕೃತಿಸಿ ದಿವಾ
ಕೀರ್ತಿಯಂ!''

ಮಿಂದು ನಾರ್ಮಡಿಯುಟ್ಟು ಹಿಂದಿರುಗಿ
ಬರ್ಪಾಗಳಗ್ರಜಂ ಜಲಪೂರ್ಣಕಲಶಮಂ
ಪೊತ್ತು ನಡೆದಿರ್ದವರಜಂಗೆ: ''ನಾಮಿಲ್ಲಿಂದೆ
ಪಿಂತೆ ಮರಳುವ ಪೊಳ್ತು ಸನಿಹಮಾದುದು, ತಮ್ಮ.
ನಾಳೆ ನಾಡಿದರೊಳಗೆ ಮಂಗಳ ಮುಹೂರ್ತಮಂ
ಪಾರ್ದು ಪೊರಮಟ್ಟರವಧಿಯ ಕೊನೆಗೆ, ಭರತಂಗೆ
ಪೂಣ್ಕೆನುಡಿಗೊಟ್ಟಂತೆ, ಮುಟ್ಟುವೆವಯೋಧ್ಯೆಯಂ.
ಬಂದ ಮಾರ್ಗಂಬಿಡಿದು ಋಷಿವರ್ಯರಂ ಕಂಡು,
ವಂದಿಸಿ, ನುಡಿಸಿ ಮುಂದೆ ತೆರಳುವಂ.''
ದಾರಿಯೆಡೆ
ಹೊಮ್ಮಿದೆಳಹೊಂಬಿಸಿಲ್ ಬಿಳ್ದೊಂದು ಬಿದಿರ್ಮೆಳೆಯ
ತುದಿಗಣೆಯೊಳಿರ್ದೊಂದು ಕಾಮಳ್ಳಿಗಳ ಹಿಂದು
ಹಾರಿದುದು ಗುಂಪುಲಿಯನೆಸೆದು. ಆ ದನಿಯಿಂಪೆ,
ಹೆಪ್ಪುಗಟ್ಟುತ್ತೆಕಿಲಿಗೆ, ಹನಿಹನಿಯವೋಲೆ
ಹೊಳೆವ ಮುತ್ತಿನಮಳೆಯ ಸೂಸಿತೆನೆ, ಗರಿಗರಿಯೆಲೆಯ
ಹಿಮಮಣಿಗಳುದುರಿದುವು ಸೀತಾ ಶಿರೋರುಹಕೆ.
''ದೇವಿಯರನಭಿನಂದಿಸುತ್ತಿಹಳರಣ್ಯಸಖಿ!''
''ಅಲ್ತಲ್ತು. ತಂಗಿ ಊರ್ಮಿಳೆಯ ಕಣ್ಣೀರುಗಳ್, ಮುನ್
ಬರ್ಪ ಸೊಗಕುರ್ಕಿ, ಮುಂಗಾಣ್ಕೆಗಳನರ್ಪಿಸಿಹವೈ
ಪ್ರಾಣೇಶ್ವರನ ಚರಣತಲಕೆ!'' ''ಏಂ ಜಾಣ್ಮೆನುಡಿ!''
ಎನುತೆ ನಾಣ್ಚಿದ ಲಕ್ಷ್ಮಣಂ, ಮತ್ತೆ: ''ಅಣ್ಣಯ್ಯ,
ನಿಮ್ಮ ಪಟ್ಟಾಭಿಷೇಕಕ್ಕೆ ಇಂತುಟೆ ವಲಂ
ಮುತ್ತಿನ ಮಳೆಗಳಕ್ಕೆ ಎಂದು ಪರಸಿದಳಲ್ತೆ
ಸರ್ವಮಂಗಳೆ, ಜಗಜ್ಜನನಿ!'' ''ತಾತ್ಪರ್ಯಮಂ
ಪೇಳ್ವೆಯಾದೊಡಮೇಕೊ ತಳ್ಳಂಕಗೊಳ್ಳುತಿದೆ
ಮನ್ಮನಂ! ಲೋಕದನುಭವಮಿಂತೆ: ಗುರಿ ಬಳಿಗೆ
ಸಾರಿ ಬರೆ, ಪೆರ್ಚಿದಪುದೆರ್ದೆಯ ಕುದಿದಾಟಮುಂ!''
ಮುಂದೆ ನುಡಿದೋರ್ದರಿಲ್ಲೊರ್ವರುಂ. ತಂತಮ್ಮ
ಚಿತ್ತ ಚಿಂತೆಯ ಭಾರಮಂ ಪೊತ್ತ ಮೌನದಿಂ
ಪೊಕ್ಕರಾ ನಿರ್ಜನ ಜನಸ್ಥಾನದಾ ಕುಟಿಗೆ.
ಪೂರಯಿಸಿ ಪೂರ್ವಾಹ್ನ ಕರ್ಮಂಗಳಂ, ಭುಜಿಸಿ

ವನಜನ್ಯ ಪಲಫಲಂಗಳನೆಲೆವನೆಯ ಹೊರಗೆ
ಲಘುಕುಟ್ಟಿಮಸ್ಥಳದಿ ವಿಶ್ರಮಿಸಿಕೊಳ್ಳುತಿರೆ,
ರಘುಕುಲರೆಡೆಗೆ ಬಂದುದಾ ಜನಸ್ಥಾನಕ್ಕೆ
ಸುತ್ತಣ ತಪೋವನದೊಳಲ್ಲಲ್ಲಿ ನೆಲೆಸಿರ್ದ
ಕಿತ್ತಡಿಗಳೊಂದು ಕೂಟಂ:
"ಅಶುಭವಾರ್ತೆಯಂ
ಪೊತ್ತು ತಂದೆವೊ ನಿನಗೆ, ಶುಭದರ್ಶಿ. ನೀನಿಲ್ಲಿ
ನಿಂದ ಮೊದಲಿಂದಮಿಂದಿನವರೆಗೆ ನಮಗಾಯ್ತು
ನೆಮ್ಮದಿಯ ಬಾಳ್ಕೆ. ಮೊನ್ನೆಯ ಸಂಜೆ, ಬೇರ್ಗಳಂ
ತರವೋದ ನಮ್ಮವರನಾರೊ ಮಾಯಾವಿಗಳ್,
ಪೆಣ್ವರಿಜುವೊತ್ತವರ್, ತಿಣ್ಣನೆ ಬಡಿದರಲ್ತೆ!
ರಕ್ಕಸರ ಪೆರ್ತಂಡವೊಂದಿತ್ತೀಚೆಗಿತ್ತಣ್ಗೆ
ನುಗ್ಗುತಿರ್ಪಾಶಂಕೆಯೆಮಗೆ. ಪಿಂತಿರುಗಿ ನೀಂ
ಪೋಪೆಯಪ್ಪೊಡೆ, ಕೆಲದಿನಂಗಳಿಲ್ಲಿಯೆ ತಳುವಿ,
ಪೃಥಿವಿಪತಿ, ನಿನ್ನ ಬಿಲ್ಲಿನ ಜೇವೊಡೆಯ ದನಿಯ
ದುರ್ದಮ್ಯರಕ್ಷಣೆಯನೆಮಗಿತ್ತು ತೆರಳಯ್ಯ!"
ಅಭಯವಚನವನಿತ್ತು ಕಳುಹಿದನ್ ಬೆದರಿದಾ
ಜಡೆವೊತ್ತರಂ. ಕಳವಳವನುಳಿದು ತಮ್ಮನಂ
ಬೆಸಸಿದನ್: "ಸೌಮಿತ್ರಿ, ಸುತ್ತಣ ಅರಣ್ಯಮಂ
ಸುತ್ತಿ ಬಾ...ಬೆನ್ನಿರಲಿ ಋಷಿ ಅಗಸ್ತ್ಯನ ಕೊಟ್ಟ
ಶರಧಿ...ಶರಭಂಗಮುನಿಯಿತ್ತ ಕೋದಂಡಮಂ
ಕೈಕೊಂಡು ನಡೆ... ಮತ್ತೆ ಮೊದಲಾಗುವಂತೆವೋಲ್
ತೋರುತಿಹುದೆಮ್ಮ ಕಾಂತಾರ ಕಷ್ಟಂ!" ಸುಯ್‌ಸುಯ್ದು
ನುಡಿದಣ್ಣನಾಭೀಳ ಮುಖಮುದ್ರೆಯಂ ಕಂಡು
ಬೆಕ್ಕಸವಡುತೆ ಲಕ್ಷ್ಮಣಂ ಪೋದನಾಜ್ಞೆಯಂ
ಮೇಣಂತೆ ಪೊತ್ತು ಕೋದಂಡಮಂ.
ಕಾಡನಲೆದಾ
ಬೇಹುಕಾರಂ ಬಳಲಿ, ಬೈಗುದಂಪೆಲರ್ಗಳಸಿ
ಸೊಗಸಿ, ಮಲೆದಲೆಗೋಡಿನೊಂದರೆಯ ತುದಿಗೇರಿ
ಕುಳಿತು ವಿಶ್ರಮಿಸಿಕೊಳುತಿರ್ದೂರ್ಮಿಳಾಪ್ರಿಯಂ
ಬೆರಗಾದನೊಂದದ್ಭುತವನನುಭವಿಸಿ: ಕಿವಿಗೆ

ಜೇನಿಳಿದುದೊಂದು ಬಹುದೂರಗೇಯಂ! ಮತ್ತೆ
ತುಂಬಿತು ವಿಪುಷ್ಪವನರಾಜಿಯಂ ಪರಿಮಳಂ
ಹೇಮಂತದಾ! ಅಂತೆ ಮೇಣ್ ಕಣ್ಗೊಳಿಸಿತಚ್ಚರಿಯ
ಸುರಚಾಪ ವರ್ಣಜಾಲಂ ಬೈಗಿನಾಕಾಶಮಂ
ಬಾಸಣಿಸುತದ್ರಿವನ ಪೃಥ್ವಿಯನಲಂಕರಿಸಿ!
ಏನಿದೇನೆಂದು ನೋಡುತಿರೆ, ದಕ್ಷಿಣ ದಿಶಾ
ವಾಯುಪಥಮಂ ನಡೆವ ರಥವೋ ಎನಲ್ಕೊಂದು
ಬಣ್ಣ ಬಣ್ಣದ ಮುಗಿಲ್, ಮಳೆಬಿಲ್ಲ ತೇರಿನೊಲ್,
ಬಳಿಸಾರ್ದುದೊಯ್ಯನೆ ತೇಲಿತೇಲಿ. ಬಳಿಬಳಿಗೆ
ಸಾರಿ ಬರೆವರೆ ಮುಗಿಲತೇರು, ನೆರೆಯೇರ್ದುದಾ
ಹೊನಲಿಂಚರಂ; ಕಮ್ಪುಮುಕ್ಕಿತುಜ್ವಲವಾಯ್ತು
ಮಂಜು ಸಂಧ್ಯೆಯ ಕಾನ್ತಿಯುಂ. ನೋಡುತಿರ್ದಂತೆ
ಗಂಧಮಂ ಗಾನಮಂ ಸೋನೆ ಸೂಸುತ್ತಮಾ
ವರ್ಣಮಯ ಮೇಘಮಿಳಿದುದು ಜನಸ್ಥಾನದಾ
ಕಾಡುಕಣಿವೆಯೊಳಿರ್ದವರ ಪರ್ಣಕುಟಿಯಿರ್ದ
ದಿಕ್ಕಿನಲಿ: ಹಬ್ಬಿ ತುಂತುರ್ ಮಂಜು, ಮಬ್ಬಾಯ್ತು
ತುಹಿನರ್ತು ಸಂಧ್ಯೆ! ಕಳವಳಗೊಂಡು ಲಕ್ಷ್ಮಣಂ
ಬೇಗಬೇಗನೆ ಇಳಿದನಾ ಅಚಲಚೂಡಮಂ
ತ್ಯಜಿಸಿ.
 ಕೌತುಕದಿ ಸೀತಾರಾಮರೀಕ್ಷಿಸಿರೆ,
ಮಂಜಿನೊಲ್ ಪಸರಿಸಿದ ಮುಗಿಲ ತೇರಿಂದೊಂದು
ಮೂಡಿದುದು ಮಂಜುಮ ಸ್ತ್ರೀಮೂರ್ತಿ. ಒಯ್ಯನೆಯೆ,
ನಯ ವಿನಯಮೊಯ್ಯಾರ ಸಂಸ್ಕೃತಿಗಳೊಂದಾಗಿ
ಮೆಯ್ವೆತ್ತವೊಲ್ ಬಂದಳಾ ವಿಯಚ್ಚರ ಯೋಷೆ,
ಪಜ್ಜೆಗೆಜ್ಜೆಗಳುಲಿಯ ಬಿಂಕಂ ಬಲೆಯ ಬೀಸೆ:
"ಸುಸ್ವಾಗತಂ ನಿನಗೆ, ಕೋಸಲೇಶ್ವರ. ನಮ್ಮ
ದಕ್ಷಿಣಾವನಿಗೆಮಗೆ ನೀನತಿಥಿ. ಚಂದ್ರನಖಿ ನಾಂ;
ಲಂಕೇಶ್ವರನ ಭಗಿನಿಯೆಂ!" ಕಳವಳಿಸಿ ಸೀತೆ
ಕಂಡಳಿನಿಯನ ಕಣ್ಣ ಭಾವಮಂ. ರಾವಣನ
ನಾಮಶ್ರವಣ ಮಾತ್ರದಿಂ ತನ್ನ ಮನಕೆಂತು
ತೋರ್ದುದೊ ಭಯಾನಕಂ, ತನ್ನ ರಮಣಂಗಂತೆ

ಮೊಗದೊಳೆಸೆದುದು ಮಚ್ಚರದ ಕಿಚ್ಚು. ತುಟಿಗೊಂಕಿ
ಬೀಸಿದನ್ ನುಡಿಗತ್ತಿಯಂ: ''ರಾವಣನ ತಂಗೆ,
ತಳುವಿ ಬಂದೆಯಲಾ ಸುಖಾಗಮನಮಂ ಬಯಸೆ!
ನಾಳೆಯೋ ನಾಡಿದೋ ಬೀಳ್ಕೊಂಡಪೆವು ನಿಮ್ಮ
ಈ ಅಡವಿ ಪೊಡವಿಯಂ. ಅಯ್ಯೊ, ಆತಿಥ್ಯಮಂ
ಸವಿವ ಸೌಭಾಗ್ಯಮೆನಗಿಲ್ಲಾಯ್ತುಲಾ!'' ನಕ್ಕು
ಮಾರ್ನುಡಿದಳಿಂತಾ ದನುಜನನುಜೆ: ''ಹೊಣೆ ನಮತು,
ನಂಟರ ಮನೆಗೆ ಹೋಗುವನ್ನೆಗಂ; ಹೋದಂದು
ನಾವವರ ಸೆರೆಯಲ್ತೆ ಬಿರ್ದ್ದನಿಕ್ಕುವವರೆಗೆ,
ಮೇಣವರೆ ಬೀಳುಕೊಡುವನ್ನೆಗಂ? ನೀಮೆಂತು
ಪಿಂತಿರುಗುವಿರಿ ಬಿರ್ದ್ದನುಣ್ಣದೆಯೆ ನಾಮಿಕ್ಕುವಾ?
ನಿಮಗುಮದು ತಗದು; ನಮಗಪಕೀರ್ತಿ!'' ''ವಿಚಿತ್ರಮೀ
ದಾಕ್ಷಿಣಾತಿಥ್ಯಂ ಬಲಾತ್ಕಾರ ಸತ್ಕಾರಂ!''
''ದಿಟದೊಲ್ಮೆ ಹಠವಾದಿ. ಔಪಚಾರಿಕಮಲ್ತು, ಕೇಳ್,
ರಾಕ್ಷಸ ಕುಲದ ಛಲದ ದೃಢನಿಶ್ಚಲ ಪ್ರೀತಿ.
ಊಟದೊಳ್ ಕದನದಾಟದೊಳಂತೆ ಬೇಟದೊಳ್
ಬಲನಿಷ್ಠೆಯೆಮ್ಮ ಸಲ್ಲಕ್ಷಣಂ! ಮಾಳ್ಪುದಂ
ರಸಪೂರ್ಣಮೆನೆ ರಾಗಪೂರ್ವಕಮಾಗಿ ಮಾಳ್ಪುದದೆ
ನಮಗೆ ನಲ್! ಕೋಸಲೇಶ್ವರ, ನಮ್ಮ ಪ್ರೇಮಮಂ
ತಣಿಯುಣದೆ ನೀಂ ಪಿಂತಿರುಗಿ ಪೋಪುದಸದಳಂ!''
''ಬಿರ್ದ್ದಿನೌತಣಮೇಕೆ? ಮೇಣರಸು ಸೊಗಮೇಕೆ?
ನಾಡಿನೊಳವೆಲ್ಲಮಂ ತೊರೆದು, ನೋಂಪಿಗೆ ನೋಂತು
ಕಾಡನಲೆವೆಮಗೆ?'' ''ಮೈತ್ರಿಯೆ ಕೊಡುಗೆಯಾಗುವೊಡೆ
ನೋಂಪಿಗದರಿಂ ಕೇಡೆ?'' ''ಉಂಟೆ? ನೋಂಪಿಯ ಮುಡಿಗೆ
ಪರಿಮಳದ ಪೂವಲ್ತೆ ಮೈತ್ರಿ! ಅದಕೋಸುಗಮೆ,
ಹಗೆತನವನಳಿಸುತಕ್ಕರೆಯನುಕ್ಕಿಸಲಿಕಾಂ
ತೊರೆದು ದೊರೆಗದ್ದುಗೆಯನಿಲ್ಲಿಗೈತಂದೆನ್ನೈಸೆ!''
''ನಿನ್ನವೋಲಾನುಮದನರಸಿ ಬಂದಿಹೆನಿಂದು
ನಿನ್ನೆಡೆಗೆ, ಕೇಳ್, ಸರಸಿ. ನೀಂ ಕರುಣಿ, ಧರ್ಮಮತಿ,
ದಾನರುಚಿ. ನಾಥನಿಲ್ಲದ ತರುಣಿಯಾಂ. ನನ್ನ ಬಾಳ್
ಬರಿಯ ಪಾಳ್. ಮಡಿದನೆನ್ನಾಣ್ಮನೆನ್ನಣ್ಣನಿಂ

ತನ್ನ ಕಿರುವರೆಯದೊಳ್: ಪಾತಾಳಯುದ್ಧದೊಳ್
ತೊಡಗಿರ್ದರಿರ್ವರುಂ. ಕಳ್ತಲೆಯ ಕುರುಡಿಂದೆ
ಒರ್ವರೊರ್ವರನರಿಗೆ ಗೆತ್ತು ಪುರುಡಿಸಿ ಕಾದಿದರ್.
ಗಂಡನಳಿದನ್ ಗಂಡುಗಲಿ ರಾವಣನ ಕೈಯ
ಕೈದುವಲಿಯಾಗಿ. ನಾನಂದಿನಿಂದೀವರೆಗೆ
ಮಳೆಯ ನೀರ್ಗಾಣದೆಯೆ ಬಂಜರಾದೊಳ್ನೆಲದ
ಪಾಂಗಿಂದೆ ಬರ್ದುಕುತಿಹೆನೆಂತೊ ರಿಕ್ತತೆಗತ್ತು
ಸತ್ತು ಬೇಸತ್ತು. ನನ್ನೆರ್ದೆಯ ನೀರಸದಿಳೆಗೆ ನೀಂ
ಮಳೆಯಾಗಿ ಕರೆಯಯ್ಯ, ಹೊಳೆಯಾಗಿ ಹರಿಯಯ್ಯ;
ಹಚ್ಚನೆಯ ಹಸುರು ಪಯಿರಿನ ಬೆಳೆಯ ಸಿರಿಯಾಗಿ
ಬಾರಯ್ಯ. ಕಲ್ಪತರು ನೀನಲ್ತೆ ಬೇಳ್ಪರಿಗೆ?''
ಮಿಂಚಿನಂಚಿನ ಮೋಡದೊಲ್ ಬಳಿಗೆ ಬರ್ಪಳಂ,
ಮೇಘಾಂಗಿಯಂ, ಪರ್ವತಂಬೋಲ್ ತಡೆದು: ''ಅನಾರ‍್ಯೆ,
ನೀನನ್ಯಭಾರ‍್ಯೆ! ರಾಕ್ಷಸ ವಿವಾಹಕ್ರಮಂ, ಕೇಳ್,
ಸಮಗಸಹ್ಯಂ!'' ರಾಮನಿಂತು ಕಿರುನಗೆವೆರಸಿ
ನುಡಿದು, ತನ್ನರಸಿಯಂ ನೋಡಿ, ಕಣ್ಣರಿತಂತೆ
ಪರಿಹಾಸ್ಯಮನನಾಗಿ ಚಂದ್ರನಖಿಯಂ ಕುರಿತು,
''ಪತ್ನಿಯಿಹಳೆನಗಿವಳ್; ಪ್ರಿಯೆಯುಂ ವಲಂ; ಮೇಣ್
ಚೆಲ್ವಿಗೇನಲ್ಲಿ ಕೊರೆಯಿಲ್ಲ! ತುಂಬಿಹ ಹೊಡೆಗೆ
ಸೇರದಮೃತಾನ್ನಮುಂ'' ''ಒಪ್ಪಿದೆನ್. ಈ ಸತಿಗೆ
ಹೆಗಲೆಣೆಯನಾಂ ಕಂಡೆನಿಲ್ಲ. ನನ್ನತ್ತಿಗೆಯ
ರೂಪಿರ್ಪುದಿದಕೆ ಹೊಯಿಕೈಯಪ್ಪುದಾದೊಡಂ
ಗುಣಕೆ ಮಚ್ಚರಮೇಕೆ?—ಸಿಹಿಗೆಂತು ರುಚಿಯಿಹುದೊ
ಕಹಿಗುಮಂತೆಯೆ ಬೇರೆ ರುಚಿಯಿರದೆ? ಭೋಜನದ
ರಸಿಕಂಗೆ ಬೇರೆ ಬೇರೆಯ ರುಚಿಯ ರಸಗಳೊಳ್
ಭೇದಭಾವಮದೇಕೆ? ನಿಮ್ಮುತ್ತರದ ರತಿಯ
ಸಾತ್ವಿಕ ರಸದ ಜೊತೆಗೆ ನಮ್ಮ ದಕ್ಷಿಣ ರತಿಯ
ರಾಜಸವನನುಭವಿಸಿ ನೋಳ್ಪೊಡೆ ಕಳಂಕಮೇಂ
ರಾಜ ರಸಿಕತೆಗೆ?'' ನಗೆಗೊಂಕಿನಾ ಚಂದ್ರನಖಿ
ಹೂವಿನಾಕೃತಿವೆತ್ತ ಹಾವಿನಂದದಿ ನಿಂತು
ಹೆಡೆ ನಲಿಯುತಿರೆ, ಹುಬ್ಬುಗಂಟಿಕ್ಕಿದನ್ ಮೈಥಿಲಿಯ

ಮನದನ್ನನಿಂತು: ''ನಿಲ್, ನುಡಿಯದಿರ್ ಪೊಲ್ಲಮಂ.
ಸಾಲ್ಗುಮೀ ಪಾಣ್ಬೆಜಾಣ್. ನೀನೆತ್ತಣಿಂದರಿವೆ,
ಸಿತಗೆ, ಹದಿಬದೆತನದ ನಿರ್ಮಲಾನಂದಮಂ?
ಹದಿಬದೆಗೆ ತೋರ್ದಪುದು ತನ್ನಿನಿಯನೊರ್ವನೊಳೆ
ಸರ್ವ ಮನುಜರ, ಮತ್ತೆ ಸರ್ವಲೋಕದ ಸರ್ವ
ವೈವಿಧ್ಯಮುಂ. ಪ್ರೇಮನಿಷ್ಠೆಯ ಪತಿಗುಮಂತೆ
ತನ್ನ ಸತಿಯೊಳೆ ತೋರ್ದಪುದು ಸರ್ವ ಲಲನೆಯರ
ಸರ್ವಶೃಂಗಾರಮುಂ! ಲಂಕೇಶ್ವರನ್ನ ತಂಗೆ
ನೀನಾಗಿಯುಂ ನುಡಿವೆ ನಾಡಾಡಿ ಬೆಲೆವೆಣ್ಗಳುಂ
ನಾಣ್ಚುವಳಿನುಡಿಗಳಂ; ಸೋಜಿಗಂ!...ಇಹಳಿಲ್ಲಿ
ಮರ್ಯಾದೆವೆಣ್, ಜನಕ ರಾಜರ್ಷಿಯ ಕುಮಾರ್ತೆ.
ಮಾತು ಸಾಕಿಲ್ಲಿರದೆ ನಡೆ, ಸಹೋದರ ಲಕ್ಷ್ಮಣಂ
ಬರ್ಪನಿತರೊಳ್. ಬಂದೊಡಪ್ಪುದು ನಿನಗೆ ತಗುವವೊಲ್
ಮದುವೆ ಮರಿಯಾದೆ!''
ದೂರದಿ ಕಂಡುದಾ ಮೂರ್ತಿ
ಬೈಗು ಮರ್ಬಿನ ಮಂಜಿನೊಳ್. ಬೇಗಮೈತಂದು,
ಶಂಕೆಯಿಂ ದಿಟ್ಟಿಸಿದನಾಪಾದ ಮಸ್ತಕಂ,
ಕುಡುದಿಂಗಳಂತೆವೋಲ್ ನಿಂದಾ ನವಾಂಗಿಯಂ.
ಪುಲಕಿಸಿತು ತನು ಚಂದ್ರನಖಿಗೆ, ರಾಜಸ ಗುಣದಿ
ತನಗೆಣೆಯೆ ದೊರೆತಂತೆ; ಮೇಣ್ ಸತಿಯಿಲ್ಲದಾತಂಗೆ
ರತಿಯಾಗುವಾಸೆಗೆ ಮನಂ ಮಿಂಚಿತೆಂಬಂತೆ!
ಹೆಣ್ಣಿನಿಂದಣ್ಣಂಗೆ ಕಣ್ದೆರುಹಿ ನೋಡಲ್ಕೆ
ನಗೆಗೂಡಿ ಬಣ್ಣಿಸಿದನಾತನಾ ನಡೆದನಿತುಮಂ.
ಕೇಳ್ದು ಕಿಚ್ಚುರಿದೆದ್ದು ''ತೊಲಗೆಲೆ ನಿಶಾಚರಿಯೆ!''
ಎನುತೆ ತೋಳಂ ಬಾಣಸಹಿತಮಂ ಬೀಸುತಿರೆ
ಕೆತ್ತಿತು ಪ್ರಮಾದದಿಂ ರಕ್ಕಸಿಯ ಮೋರೆಯಂ,
ನೆತ್ತರ್ವೆರಸಿ ಕೋಪವುಕ್ಕಲ್ಕೆ.—ತೆಕ್ಕನೆಯೆ
ಶೂರ್ಪನಖಿಯಾದಳಾ ಚಂದ್ರನಖಿ: ಗುರ್ವಿತ್ತು
ಭೀಷಣಾಕೃತಿ. ಭೀತಿ ಜೊಂಪಿಸಿತು ಸೀತೆಯಂ.
ಮೋಹದಿಂದಾಕೆಗೊದಗಿದ ಮೋಹನಾಕೃತಿಗೆ
ವೈರದಿಂ ವೈರೂಪ್ಯಮಾದುದೆನೆ, ನಖಚಯಂ

ಮೊರದವೋಲಗುರ್ವಾದುವಾ ಸ್ವೈರ ರಾಕ್ಷಸಿಗೆ.
ಕಾಮರೂಪಿಣಿ ಭೀಮ ಭೀಕರಾಕಾರಮಂ
ತಾಳ್ದದೆ ತಡಂ, ಕೆತ್ತಿದುದು ಲಕ್ಷ್ಮಣನ ಕತ್ತಿ
ಮಾಯಾವಿನಿಯ ಮೋರೆಯಂ, ಮೂಗರಿಯುವಂತೆ.
ಸಿಡಿದಳಂಬರಕೊಡನೆ ವರ್ಷಾಭ್ರವೇಷದಿಂ
ರೋಷರವದಿಂದಶನಿ ಘೋಷದಿಂ, ನೆಲಂ ನಡುಗಿ
ಗುಡುಗೆ ಗಿರಿಗಹ್ವರಂ!
ತುಂಬಿದತ್ತೊಯ್ಯನೆಯೆ
ಪಂಚವಟಿಧಾತ್ರಿಯಂ ಹೇಮಂತರಾತ್ರಿಯಾ
ಶ್ರೀಮಂತ ಶಾಂತಿ. ಸೀತಾಕಾಂತನಂತರದಿ
ಘೂರ್ಣಿಸಿತ್ತೊಂದನತಿದೂರಂ ಮನಃಕ್ರಾಂತಿ!

## ಸಂಚಿಕೆ ೧

# ಲಂಕೇಶನೊಲಿಸಿದನು ಮಾರೀಚನಂ

ಏಳು, ವೀಣೆಯೆ; ಏಳು, ವಾಕ್ಸುಂದರಿಯ ಕಯ್ಯ
ತ್ರೈಭುವನ ಸಮ್ಮೋಹಿನಿಯೆ, ಕವನ ಕಮನೀಯೆ!
ಮಂತ್ರದಕ್ಷಿಗಳಿಂದೆ ನೋಳ್ಪ ನೀಂ ಸರ್ವಕ್ಕೆ
ಸಾಕ್ಷಿ. ಕಂಡುದನೆಮಗೆ ಗಾನಗೆಯ್ ಶ್ರೀಕಂಠದಿಂ
ಶತತಂತ್ರಿಯಾ. ಪ್ರತಿಭೆ ತಾಂ ಪ್ರಜ್ವಲಿಸುಗೆಮ್ಮೆರ್ದೆಗೆ
ನಿನ್ನ ದರ್ಶನವೆಮ್ಮ ದರ್ಶನಂ ತಾನಪ್ಪವೋಲ್!
ನಾರಣಪ್ಪಂಗಂತೆ ರನ್ನಂಗೆ ಮೇಣ್ ಪಂಪರಿಗೆ,
ನಾಗವರ್ಮಗೆ ರಾಘವಾಂಕಗೆ ಲಕುಮಿಪತಿಗೆ,
ವಾಲ್ಮೀಕಿ ವ್ಯಾಸರಿಗೆ ಹೋಮರಗೆ ಮಿಲ್ಟನಗೆ
ದಾಂತೆ ಮೊದಲಹ ಮಹಾಕವಿಗಳಿಗೆ ನೀನೊಸೆದು
ಕೃಪೆಗೈದ ವೈದ್ಯುತಪ್ರತಿಭೆಯಂ, ಹೇ ದೇವಿ,
ಕಲ್ಪನಾಶಕ್ತಿಯಂ ವಾಙ್ಮಂತ್ರದುಕ್ತಿಯಂ
ಆಯುರಾರೋಗ್ಯಮಂ ಶಾಂತಿ ಸೌಭಾಗ್ಯಮಂ
ದಯಪಾಲಿಸೌ ನಿನ್ನ ಕನ್ನಡ ಕಂದನೀತಂಗೆ,
ಸುರುಳಿಗುರುಳಂದಮೆಸೆವಾತ್ಮ ಸೌಂದರ್ಯಮಂ
ಮುಡಿಪನರ್ಚಿಸಿ ಮಣಿಯುವೀ ಕವಿ ಕುವೆಂಪುವಿಗೆ!
ಊರ್ಮಿಳೇಶನ ಕರಶರ ವಿಘಾತಿಗಸುರ ಸತಿ
ಮುರಿದ ಬೇಟಕೆ ಕೆರಳಿ, ಪಡಿಗೆಯ್ಮೆಗುಜ್ಜುಗಿಸಿದಳ್;
ಪೊಕ್ಕಳ್ ಜನಸ್ಥಾನದಾಸ್ಥಾನಮಂ, ಮೂವರಂ
ಲಂಕೇಶನರಿವ ಮುನ್ನಮೆ ಕೋಸಲಕೆ ಮರಳಿ
ಪಿಂತೆರಳಲೀಯದೆಯೆ ತಡೆಯಲ್ ನೆರಂಬಡೆಯೆ; ಮೇಣ್
ಪಡೆವಳರ್ ಸೋದರರ್ ಖರದೂಷಣರ ಚಿತ್ತದೊಳ್

ಕಾದಾಟಮಂ ಕಡೆಯೆ. ವಿಷಮಂ ಕುಡಿವರಂತೆ, ಕೇಳ್,
ತಂಗೆಯ ನುಡಿಯನೀಂಟಿ, ರಾಮಲಕ್ಷ್ಮಣರೊಡನೆ
ಸೆಣಸಿ, ಸೈನ್ಯಂ ವೆರಸಿ ಪಾಳ್ಗೋದರನಿಬರುಂ! ಮೇಣ್
ಬೆಂಕೆ ಬಿಂಕಕೆ ತಗುಳಿದೋಲಂತೆ ಆ ಚಂದ್ರನಖಿ
ಲಂಕೇಶ್ವರನ ತಂಗೆ, ಬಾನ್ಗೆ ದಳ್ಳುರಿ ನೆಗೆವವೊಲ್
ಧಾವಿಸಿದಳಗ್ರಜನ ಬಳಿಗತ್ಯುಗ್ರ ಮನದಿಂದೆ!
ಏಳು ವೀಣೆಯೆ, ಏಳು ಹೇ ಅಮೃತಭಾಷಿಣಿಯೆ,
ಹೇಳು ಮುಂದಣ ಕಥಾಕಾವ್ಯಮಂ, ಕೇಳ್ವರ್ಗೆ
ರಸವಶತೆಯಿಂ ಕಲಾಪುಲಕಂ ಪಲ್ಲವಿಪ್ಪಂತೆ!
    ತನ್ನಯ ಮನೋಹರಿಯ, ಲಂಕೇಶ್ವರಿಯ, ದಯಿತೆ
ಮಂಡೋದರಿಯ ಮೆಯ್ಯ ಮೋಹ ಸರಸಿಯೊಳಾಡಿ
ತಡಿಗೇರ್ದ ಮತ್ತೇಭ ಸನ್ನಿಭ ಪುಲಸ್ತ್ಯಜಂ
ಮೀಸೆಗಯ್ಯಾಗಿ, ಕಿರುನಗೆವೆರಸಿ, ತಂಬುಲಂ
ಹೃದಯರಾಗಮನಧರಕಿತ್ತಂತೆ ಕೆಂಪೆಸೆಯೆ,
ಒರೆದನಿಂತೋಪಳಿಗೆ: ''ಪ್ರಿಯೆ, ಪಯಣಮಿದೆ ನಾಳೆ;
ದೂರಂ, ಮಹತ್ತರಂ; ಅನಿವಾರ್ಯಮುಂ ದಿಟಂ.
ನಿನ್ನ ದಾಸಿಯರಿತರ ಮಹಿಷಿಯರಿಗದನರುಹಿ
ನನಗಾಗಿ ಮುಂದೆತಳ್ತೌತಣದ ಕೂಟಮಂ,
ವೇಲಾದ್ರಿಸಾನುವನದ ವಿಹಾರಯಾತ್ರೆಯಂ
ಪುಷ್ಪಕವಿಮಾನದಾ. ಬಂದೊದಗಿತೊಯ್ಕನೆಯೆ
ನಿನಗೇತಕಾ ರಾಜಕಾರಣಂ, ಬರಿ ಗಂಡು
ಹಗರಣಂ?'' ಪತಿಯ ಸುಖಮುದ್ರಿತ ಮುಖಕೆ ವಿಕೃತಿ
ತನ್ನ ಛಾಯೆಯನೀಯೆ ಮಯನ ನಂದನೆಯದಂ
ಕಂಡು: ''ಏನದು ರಾಜಕಾರಣಂ, ದೈತ್ಯೇಂದ್ರ?
ನಮ್ಮೌತಣಕೆ ಮಿಗಿಲುಗಜ್ಜಮಿನ್ನುಂ ನಿನಗೆ
ತಾನೊಳದೆ, ಕೃತಕೃತ್ಯನಿಗೆ, ಜಗಜ್ಜೇತಂಗೆ?
ಇಂದ್ರನುದ್ಧಟತನವೆ? ವಿತ್ತೇಶನವಿನಯವೆ?
ಯಮನ ಗರ್ವವೆ? ಮರ್ತ್ಯರಾಜರವಿಧೇಯತೆಯೆ?''
''ಹಿರಿಯರಿಗೆ ಹಿರಿಯಕೋಟಲೆ ಹಿರಿದೆ? ಕಿರುಕುಳರ
ಕಿರುಕುಳಮೆ ಪಿರಿದು! ಮೃಗರಾಜನೇಂ ಮದಕರಿಯ
ದಂತಮಂ ಲೆಕ್ಕಿಪನೆ? ನೊರಜು ನುಸಿಗಳ ಕಿರಿಯ

ಕಿರಿಕರಿಗೆ ರೋಸಿದವನಲ್ತೆ? ಆ ದಶರಥನ
ಮಗಂ ರಾಮನೆಂಬೊನಿಂ ನಮ್ಮಾ ಜನಸ್ಥಾನಮ್
ಅಜನಮಾಯ್ತೆಂದು ಬಂದಿದೆ ವಾರ್ತೆ. ಸೋದರರ್,
ಕದನಕೀನಾಶರಾ ಖರದೂಷಣರ್, ನಮ್ಮ
ಕುಲ ಭೂಷಣರ್, ಕಾದಿ ಮಡಿದರಲ್ಲದೆ, ತಂಗೆ
ಚಂದ್ರನಖಿಗವಮಾನಮಾದತ್ತು! ಪ್ರತಿಫಲಂ
ಮಾರ್ಕೊಳ್ಳದೆಯೆ ಬರಿದೆ ಬಿಟ್ಟಪುದೆ ಭಗಿನಿಯಂ
ಭಂಗಿಸಿದನರ್ಧಾಂಗಿಯಂ? ಮತ್ತಮನುಜರಂ
ಕೊಂದ ಆ ಮನುಜರಂ ಕೊಂದುತಿನ್ನದೆ ಬರಿದೆ
ಬಿಟ್ಟಪುದೆ ದನುಜವೈರಂ? ನಿನಗೆ ದಾಸಿಯಂ
ಮತ್ತೊರ್ವಳಂ ತರ್ಪೆನಾ ಜನಕಜಾತೆಯಂ
ನೆಲದರಿಕೆವೆಸರ ಆ ಸೀತೆಯಂ!—ನೆನಪಿದೆಯೆ,
ಜೀವಿತೇಶ್ವರಿ, ಸ್ವಯಂವರದ ಆ ತಿಕ್ತಕಥೆ?
ಮತ್ತೆ ಬಂದೆತ್ತಿ ಬಿಲ್ಲಂ ನಾಣನೇರಿಸುವೆ
ಕೊಪ್ಪಿಗೆಂದಾಂ ಸೂರುಳಂ ತೊಟ್ಟು ಪಿಂತಿರುಗಿ
ಬಂದೆ. ತಪಮಂ ಚರಿಸುತುಗ್ರಮಂ, ರುದ್ರನಿಂ
ಆ ಚಂದ್ರಚೂಡ ಕೋದಂಡಮಂ ತುಂಡೆಸಗೆ
ಬಲ್ಮೆಯ ಬರಂಗಳಂ ಪಡೆದೆ. ಪಡೆದೆಂ ಬರಿದೆ!
ಮಿಥಿಳೆಗಾಂ ಮರಳಿ ಪೋಪನಿತರೊಳೆ, ರಾಜರ್ಷಿ
ತನುಜೆಯಂ ದಶರಥಕುಮಾರಂಗೆರೆದ ವಾರ್ತೆ
ಬಂದತ್ತೆನಗೆ! ಜನಕನಾ ಗೆಯ್ಮೆ ಸೋಜಿಗಮೆ?
ಆರ್ಯರಾದರಿಗೆಮ್ಮ ಕೂಡೆ ಕೊಳುಕೊಡೆ ನಂಟು
ಪೇಸಂತೆ! ನಾವು ರಾಕ್ಷಸರಂತೆ! ನೀನರಿಯೆ
ನಮ್ಮನೆಂತವರು ಬಣ್ಣಿಪರೆಂಬುದಂ! ದಶಶಿರಂ
ಎಂಬೆನ್ನ ಬಿರುದನವರೀರೈದು ತಲೆಯೆಂದು
ಚಿತ್ರಿಪರ್! ದಶರಥನನಂತು ನಾಂ ಚಿತ್ರಿಪೆವೆ?
ಪತ್ತು ತೇರೊಳ್ ಪತ್ತು ಸೂಳೆರಡು ಕಾಲ್ಗಳನಿಟ್ಟು
ಚರಿಸುವೊಲ್ ಬಣ್ಣಿಪ್ಪೆವೇಂ? ನಮ್ಮ ಪೆಣ್ಗಳನವರ್
ಕೋರೆಗಳ್ ಕೋಡುಗಳ್‌ವೆರೆಸಿ ಬರೆದಪರಂತೆ!
ಸಾವು ನರರಂ ಕಡಿದು, ಬಿಸಿನೆತ್ತರಂ ಕುಡಿದು
ಬರ್ದುಕುವವರಂತೆ! ಸಂಸ್ಕೃತಿ ನಮ್ಮೊಳಿನಿಸಾನುಮೇನ್

ಇಲ್ಲಂತೆ! ರಾಕ್ಷಸ ಕುಲದ ನಾವು ರಾಕ್ಷಸರೆ
ದಿಟಮಂತೆ! ಸೂರ್ಯಕುಲದವರೆಲ್ಲ ರವಿಯವೋಲ್
ದುಂಡೆಂದು ಬಿಸಿಯೆಂದು ನಾವವರನಾಡುವೆವೆ?
ನಮ್ಮ ಮಾತಂತಿರ್ಕೆ: ವಾನರಧ್ವಜರೆಲ್ಲರುಂ
ದಿಟದಿ ಕೋತಿಗಳಂತೆ!—ತೋರ್ಪೆನವರಿಗೆ ನಮ್ಮ
ಸಂಸ್ಕೃತಿ ರುಚಿಯನಿನಿತು! ಸೀತೆಗೋಸುಗಮೆ ನಾಂ
ತಪದಿಂ ಪಡೆದೆನೆನಿತೊ ಶಕ್ತಿಯಂ; ತವಿಯಲಾ
ಸಂಪದಂ ಸೀತೆಗಾಗಿಯೆ!'' ಎಂದು ಮಚ್ಚರಂ
ಕಿಚ್ಚೇಳೆ ಕೆಚ್ಚುನುಡಿದಾಣ್ಮನಂ ನೋಡುತಾ
ಸತಿ ಕಣ್ಣನೀರಂ ಮಿಡಿದಳೊಂದೆ ಸುಯ್ ಸುಯ್ದು.
ಪತಿ ನುಡಿಸೆಯುಂ ತನ್ನ ಹೃದಯವನೊರೆಯಲಾರದೆಯೆ
ನಡೆದಳಲ್ಲಿಂ ಮನೆಯ ದೇಗುಲಕೆ!
''ಪೆಣ್ತನಕೆ
ಸಾಜಂ ಸವತಿಮಚ್ಚರಂ!'' ಪೆರ್ಮೆವೆಂಡಿತಿಯ
ಬಗೆಯ ನೋವಿಂಗನ್ನೆಯದ ಟೀಕೆಯಂ ಮಾಡಿ,
ಚಂದ್ರನಖಿಯಿರ್ದೆಡೆಗೆ ನಡೆದನೇಕಾಂತಕ್ಕೆ
ಲಂಕಾಧಿಪಂ. ಚುಂಗುಳಂ ತಿನೆ ಮೊಗಂಗೆಟ್ಟು
ಸಂಮ್ಲಾನಮಾದ ಮಲರಂತಿರಿರ್ದಾಕೆಯಂ
ಕಾಣುತೆರ್ದೆಯುರಿದುದಣ್ಣಂಗೆ, ತನ್ನರಸಿಕ್ಕೆ
ಮೂಗು ಮುರಿದಂತೆವೋಲ್. ಸಂತೈಸಿದನು ಇಂತು
ನುಡಿಗಿಡಿಯನುಗುಳಿ: ''ಸೋದರಿ, ಸತ್ತನೆಂದೆ ತಿಳಿ
ಈ ನಿನ್ನ ವದನ ವಲ್ಮೀಕಮಂ ಕಿಳ್ತೆನ್ನ
ಚಿತ್ತಫಣಿಯಂ ಕೆರಳ್ಚಿದಾತನ್. ಉರಗವನಿರಿದು
ಹೆಡೆಮಣಿಯನಿಳ್ಕುಳಿಗೊಳುವವೋಲೆ ಸೀತೆಯಂ
ಸುಲಿವೆನವಮಾನಕವಮಾನವನೆ ಮುಯ್ಯೊಡ್ಡುವೆನ್.
ಈ ಪೊಸತು ನೋವ್‌ಗಾಳಿಗಾ ಪಳೆಯಳಲ್‌ವೆಂಕೆ
ದಳ್ಳುರಿಯುತಿದೆ, ತಂಗೆ, ದಹಿಸಿ ಕಾನ್ತಾರಮಂ
ಮತ್ಪ್ರಾಣದಾ!'' ರಾಮಲಕ್ಷ್ಮಣರ ತಾರುಣ್ಯಮಂ
ನೆನೆದು ನುಡಿದಳ್ ಪ್ರಣಯ ಕಾರುಣ್ಯದಿಂ: ''ಕಯ್ಯೆ
ಸಾಲ್ವುದಕೆ ಕಯ್ದು ಹಂಗೇಕೆ? ಶಂಕಿಸೆ ಶಕ್ತಿ,
ಗೆಲುವವೋಲಿರೆ ಯುಕ್ತಿ, ಬಿಂಕದಂಕದ ಕೆಚ್ಚು

ಬರಿ ಸಾಹಸಂ. ಗಂಡುಗಲಿ ನೀನಪ್ಪೆಯಾದೊಡಂ,
ಯಮನಂ ಕುಬೇರನಂ ದೇವದೇವೇಂದ್ರನಂ
ಬಾಯ್ಕೇಳಿಸಿಪ್ಪದಟನಾದೊಡಂ, ದಾಶರಥಿ
ಕದನ ಮುಖದಲಿ ಸುಲಭನೆಂದರಿಯದಿರೊ, ಅಣ್ಣ!
ಕಂಡಿಪ್ಪೆನಾನಾತನಸ್ತ್ರಪ್ರಳಯದಿಂದಮಾ
ದಶಸಹಸ್ರರಿಗಾದ ಪರಿಣಾಮಮಂ! ಪ್ರಕೃತಿ
ಮಾತ್ರನಲ್ಲಯ್ ರಾಮನೊರ್ವನೆಯೆ ತಾನೊಂದು
ಪಿರಿಯ ಪಡೆ; ಪೇಳ್ವುದೇನವನೊಡನೆ ಬೆರಸಿ ಬರೆ
ಲಕ್ಷ್ಮಣಂ; ತಾಮಜಿಂಕ್ಯರೆ ದಿಟಂ! ಪೆಣ್ ಪೆಳರೆ
ಗಂಡು ನಗುವುದೆ ಸಾಜಮಾದೊಡಂ, ಅಣ್ಣಯ್ಯ,
ದುಡುಕದಿರೊ ನನ್ನ ಮೇಣೆಮ್ಮ ಖರದೂಷಣರ
ಕೇಡಿಂಗೆ ಕೆರಳಿ.'' ''ಪೆಣ್ಣಾದೊಡಂ ನೀನೆನಗೆ
ಮತಿಯೊಳುಂ ಧೃತಿಯೊಳುಂ ಗಂಡಿಗೆಣೆ. ನಿನ್ನೆಣಿಕೆ
ಹಗುರವಲ್ತೆನಗೆ. ಕಳುಹಿದೆನು ನಾನದನರಿತೆ
ನಿನ್ನನವರಿರ್ಪೆಡೆಗೆ ತಿಳಿಯಲವರಾಳ್ಮೆಯಂ.''
''ಕೈತವದೊಳವನಿಜಾತೆಯನೆಂತುಟಾದೊಡಂ
ಕವರ್ತೆಗೊಳ್. ಬೇರುಗೊಯ್ದವನೀರುಹಂಬೋಲೆ
ನಿಸ್ತೇಜನಾದಪಂ, ನಿರ್ವೀರ್ಯನಾದಪಂ,
ತನಗೆ ತಾಂ ಮಳ್ಗುವನೊಣಗಿ ಬಾಡಿ. ಶುಷ್ಕತರು ದಲ್
ದಹನಕೆ ಸುಲಭಸಾಧ್ಯಂ? ಕಜ್ಜಮೆರಡುಂ ನಿನಗೆ
ಕೈಗೂಡುವುವು: ಪಡೆವೆ ಲಲನೆಯಂ; ವೈರಿಯುಂ
ಹತನಹನ್. . .ಹೇ ದೈತ್ಯರಾಜೇಂದ್ರ, ನನ್ನದಿದೊ
ಒರ್ ಬಿನ್ನಪಂ: ನಿನಗೆ ಕೈಸೆರೆಗಳಾಗುವೊಡೆ
ಆ ಇರ್ವರಂ ಬಿಕ್ಕೆ ನೀಡೆನಗೆ. ನನ್ನಿಚ್ಛೆರತಿ
ಹೊಡೆತಣವವೊಲ್ ಆ ಧೂರ್ತರಸು ರಸವನೀಂಟೀಂಟಿ
ತೃಪ್ತಿಗೆ ತನಿಯನೆರೆವೆ!''
ಭಗಿನಿಯುಪದೇಶಮಂ
ಕೇಳ್ದನಾವೇಶದಿಂ. ಸಮನಿಸಿತು ಕೋಪಕ್ಕೆ
ಕಾಮದ ಹದಂ. ಕಣಿವೆಗುರುಳುವ ಝರಿಯ ಜಲಕೆ
ಕಾಲುವೆ ರಚಿಸಿದಂತೆ, ಲಭಿಸಿದುದು ರಾವಣನ
ಸಹಜಕಾಮದ ಕಪಿಗೆ ರಾಜಕಾರಣಫಣಿಯ

ಮಿಣಿಯೇಣಿ. ರೋಮಂಥಿಸಿತು ರತಿರೋಮಹರ್ಷಣದಿ
ಭಾವಜಪ್ರಾಣಪಶು ತಾಂ ಚಂದ್ರನಖಿಯಿಂ ಕೇಳ್ದ
ವೈದೇಹಿ ವರ್ಣನೆಯ ಮೃತ್ಯುಪಾಥೇಯಮಂ
ಮನಂಮಿಕ್ಕು ಮೇದುಃ ತನುಮಧ್ಯಮೆ! ವರಾರೋಹೆ!
ತಪ್ತಕಾಂಚನ ವರ್ಣೆ! ಪೀನಕುಚೆ! ಸುಶ್ರೋಣಿ!
ಜಘನ ವಿಸ್ತೀರ್ಣೆ! ಮೇಣಿಂದ್ರಿಯಗಳಿಂದ್ರಾಣಿ!–
ನೆನೆನೆನೆದನೊಂದೊಂದು ಪದಮಂ ಸಚಿತ್ರಮಂ,
ಮೋಹಸುರೆಯೀಂಟಿ ಕಲ್ಪನೆ ಕೆರಳಿದಾತ್ಮಕ್ಕೆ
ಸಾಹಸೋನ್ಮಾದಂ ಮದಿಸುವಂತೆ.
                    ಚಿಂತಿಸಿದನ್
ಏಕಾಂತದೊಳ್ ಉಕ್ಕೆವದ ಕವರ್ತೆವಟ್ಟೆಯಂ.
ತರಿಸಂದನೊಂದು ಹರುವಂ. ಪಳೆಯ ಸಚಿವರುಂ
ಹಿತವರುಂ ತಮ್ಮಂದಿರುಂ ತಿಳಿಯದಂದದೊಳೆ
ಯಾನಶಾಲೆಗೆ ನಡೆದನೇರಿದನು ಧನದನಿಂ
ಗೆಲ್ದು ತಂದಾ ಕಾಮಗಮನದ ವಿಮಾನಮಂ,
ಪುಷ್ಪಕವೆಸರ ಗಗನರಥಮಂ. ದಿಗಂತದಿಂ
ತರತರದ ಬಣ್ಣದುರಿಮುಗಿಲ ಸಿಂಗರದಿಂದೆ
ರಯ್ಯನೊಯ್ಯನೆ ಚೈತ್ರರವಿಭೈತ್ರಮೇರ್ವವೋಲ್,
ಗಿರಿವಿಪಿನ ಹರ್ಮ್ಯ ರಮಣೀಯಮಾ ಲಂಕೆಯಿಂ
ಮೇಲೇರ್ದುದಾ ನಭೋನೌಕೆ. ತೇಲುತ್ತಿಹುದೊ
ತೈಲವರ್ಣಾಳಿಯಿಂ ಸಮೆದ ಚಿತ್ರಂಗಳಿಂ
ಕೈಗಯ್ದು ಕಲೆಯಮನೆ ಎಂಬವೋಲ್ ಎಸೆದುದಾ
ಪುಷ್ಪಕಂ, ಕೊರಳೆತ್ತಿ ಕಂಡ ನಗರದ ಜನದ
ಕಣ್ಮನಕೆ. ಹೇಮಲಿಪ್ತಂ ರತ್ನಖಚಿತಮದು
ಮಿಂಚಿದತ್ತಿನರಶ್ಮಿಯೊಳ್, ಕಣ್ಮುಗುಳೆ ನೋಳ್ಪರ್ಗೆ.
ಬಳಸಿ ಸುತ್ತುಂ ಆ ವಿಮಾನದ ವಿತಾನಮಂ
ಮಾಲೆಯೆಳಲಿದ ಕನಕ ಲಘುಘಂಟಿಕಾ ಶ್ರೇಣಿ
ದೂರದೆತ್ತರಕೆಸೆದುವೈ ಅರಿಲ್ಗಳೋಲಂತೆ,
ನಾದ ಬಿಂದೂತ್ಕರದ ಸೋನೆ ಜೇನ್ಪನಿ ಸೋರ್ವ
ರುಕ್ಮಬಿಂದುಗಳಂತೆವೋಲ್. ಮುಗಿಲ ಕೆನ್ನೆಯಂ
ಮುದ್ದಿಸುವ ಮಾರುತನ ಕೈ ಎನಲ್ಕೊಪ್ಪಿತಾ

ಬಾನ್ದೇರಿನುತ್ತಮಾಂಗದೊಳತ್ತಮಿತ್ತೊಲೆದಿರ್ದ
ಬಾವುಟಂ: ರಾಕ್ಷಸ ಕುಲದ ಬಲದ ನೆಲದೊಲಿದ
ಚಂಡಿಕಾಧ್ವಜ ಚಿತ್ರಚಿಹ್ನೆ. ಪುಷ್ಪಕ ಚಲನೆ
ತಾನುಣ್ಮಿದೆಲರಿಗೆ ಕೆದರಿದುದು ಅಶೋಕೋದ್ಯಾನ
ತರುಕುಸುಮ ರೇಣು ಆಸಾರ; ಚೆದರಿದುದಂತೆ
ಚಕಿತ ಖಗ ಚೀತ್ಕಾರ; ಕಡಲ ತಡಿಯಂ ತುಂಬಿ
ಲಂಕೆಗಂಚಂ ಕಟ್ಟಿದೊಲ್ ಬೆಳೆದ ತೋಂಟದಿಂ
ಮೂಡಿದತ್ತಡಕೆ ತೆಂಗಿನ ಗರಿಯ ಮರ್ಮರ
ಮನೋಹರ ಚಮತ್ಕಾರ! ಮಲೆಯ ಪಳುವದೊಳಟ್ಟಿ
ಬೇಂಟೆಯೋಡುವ ಪುಲಿಯ ಪಾಂಗಿನಿಂ, ತೋರ್ದಡಗಿ
ಮತ್ತೆ ಮತ್ತಡಗಿ ತೋರುತೆ, ಮುಗಿಲ ನಡುನಡುವೆ
ತೇಲುತೊಯ್ಯನೆ ದೂರಮೆಯ್ದಿ ಮರೆಯಾದುದಾ
ಬಣ್ಣ ಬಣ್ಣದ ಗಾಳಿದೇರ್, ಲಂಕೆಯ ಜನಕ್ಕೆ
ಸೋಜಿಗದ ಶಂಕೆಯನೊಡರ್ಚಿ!
ವಿಷಯೇಂದ್ರಿಯಂ
ವಿಹ್ವಲಿಸಲಿಂ ಮನಂಗೊಳಿಸುಗುಮೆ ಕಡಲಡವಿ
ಬಾನ್‌ಬಯಲ್ ನಿರತೆ? ಹಾರಿದನು ಕರ್ಬುರ ನೃಪಂ
ಕಣ್‌ಗೆಟ್ಟನೊಲ್ ಪಾರದೇನೊಂದುಮಂ ಪ್ರಕೃತಿ
ಭವ್ಯಂಗಳಂ. ದಾಂಟಿದನು ಮೇಘಮಾರ್ಗದಿಂ
ಸಾಗರದ ನೀಲ ವೈಶಾಲ್ಯಮಂ. ತೀರಮಂ,
ಕಾನನಾಚಲ ವಿಪುಲ ವಿಸ್ತಾರ ಧೀರಮಂ,
ಕಂಡನಾ ಮಾರೀಚನಾಶ್ರಮಸ್ಥಾನಮಂ:
ಬಾಳೆ ಏಲಕ್ಕಿಯಿಂ ತೆಂಗಿನಿಂ ಕೌಂಗಿನಿಂ
ಕಳ್ತಲಿಸಿದೊರ್ ಮಲೆಯ ಮುಡಿಯೊಳೊಪ್ಪಿರ್ದೊಂದು
ಪನ್ನಗುಡಿಯಂ. ಪೃಥಿವಿಗಿಳಿದತ್ತತುಲಮಾ ಪೃಥುಲ
ಪುಷ್ಪಕಂ. ಪೊಕ್ಕನೆಲೆವನೆಗಾ ಶಕ್ರವೈರಿ!
ಚಿತ್ರಭಾನುಗ್ರಸ್ತ ಚೈತ್ರಸುಂದರ ಮಹಾ
ಚಂದನಶ್ರೀಗಂಧ ಕಾನನೋಜ್ವಲನನಾ
ದೈತ್ಯೇಂದ್ರನಂ ನೋಡಿ ಕಂಡಿದಿರೆಳ್ದುವೋಗಿ
ಬಯಸಿದನು ಸೊಗಬರವನಾ ತಾಟಕಾ ಸುತಂ;
ದೊರೆಯನುಪಚರಿಸಿದನು ದೊರೆನಿರಿಗೆಯಿಂ; ಮತ್ತೆ

ನುಡಿಸಿದನ್: ''ರಕ್ಕಸವಳಿಗೆ ಪೆರ್ಮೆ ನೀನಾಗಿಯುಂ
ನನ್ನಾಶ್ರಮಕ್ಕೆಯ್ತಂದುದೆಯೆ ದಿಟಂ ತಪಕೆ
ತಾನಿಂದೆ ಸಿದ್ಧಿ ದೊರೆತಂತೆ!'' ಋಷಿಸಂಕಟಕೆ
ಕಂಕಣಂಗಟ್ಟಿ ಪೂಣ್ದಿರ್ದಾರ್ಯಕಂಟಕನ
ಸಾತ್ತ್ವಿಕ ಜಟಾವಲ್ಕಲದ ಮುನಿಯ ವೇಷಮಂ
ಕಂಡು, ಕಿರುನಗೆವೆರಸಿ ಲಂಕೇಶ್ವರಂ: ''ಮಾವ,
ನಿನ್ನನೆಂತುಂ ಮರೆಯಲಕ್ಕುಮೆ? ಕೃತಜ್ಞನೆಂ
ನಿನಗೇಗಳುಂ. ಓ ಮಹಾಮತಿಯೆ, ಬಾಳ್ವರ್ಗೆ
ಮೇಣುಮಾಳ್ವರ್ಗೆ ನಿನ್ನನ್ನರುಸಿರುಸಿರಲ್ತೆ? ಕೇಳ್,
ದೊರೆಬಲ್ಮೆಗಿಲ್ಲದಿರೆ ಮಂತ್ರಿಜಾಣ್ಮೆಯಮರ್ಕೆ, ಪೇಳ್,
ಗೆಲ್ಗುಮೇನೆರೆತನಂ? ಪಿಂತೆನಿತೆನಿತೊ ಸೂಳ್ಗೆ
ರಾಜಕಾರಣದೊಳುಂ, ರಣದೊಳುಂ, ಮೇಣಂತೆ
ಸ್ವಂತ ಸಂತೋಷಕಾರಣದೊಳುಂ ನನಗೆ ನೀಂ
ನೆರವಾದುದಂ ಮರೆಯೆನಾಂ. ನಿನಗುಮಾನಂತೆ
ನೆರವಿತ್ತೆನೆಂಬುದೆ ನನಗೆ ಪೆರ್ಮೆ. ಕಷ್ಟದೊಳೆ
ನವೆದೆ ನೀಂ; ಸಾಹಸಕೆ ಬರ್ದುಕನೆ ಬಲಿಯನಿತ್ತೆ,
ತೆತ್ತೆ. ಕಲಿಯಾದೊಡಂ ಬಳಲಿದೆ, ಬಿದಿಗೆ ಸೋತೆ;
ಯತಿವೃತ್ತಿಯಂ ಪಿಡಿದೆ. ಮಾರೀಚ ಮುನಿವರ್ಯ,
ಮರುಗುವೆನು ನಿನಗೆ. ನಿನ್ನಂಬೆಯಂ ಕೊಲ್ಲಿಸಿದ
ತವಸಿಯುಂ, ಮೇಣ್ ಕೊಂದ ಆ ಬಡವು ಬಡಗನುಂ
ತವಿಯದೊಳರಿನ್ನುಮೆನೆ, ನಮ್ಮ ದುರ್ವಿಧಿಗೆಲ್ಲೆ
ತಾನೆಲ್ಲಿ? ಜಡೆಗೆ ನಾರುಡೆಗೊಲಿಯದೇನಿಹರೆ
ಪೇಳಿನ್ನದಾರಾದೊಡಂ? ತೀರ್ಚಲಾರದಿರೆ
ನೀಂ ಮುಯ್ಗೆ ಮುಯ್ಯನಾನಾದೊಡಂ ತೀರ್ಚಲ್ಕೆ
ನೀನೊಪ್ಪುವಯ್? ಪ್ರೇತ ಲೋಕದೊಳ್ ತಣಿವವೋಲ್
ತಾಯಿ ತಾಟಕೆ, ನೀಂ ನೆಗಳುವಯ್? ನಪುಂಸಕತೆ ದಲ್
ಹೀನಬಲನೊಂದು ಸಾತ್ವಿಕತೆ ಕೇಳ್; ಮೇಣಾ ತಪಂ
ಹೆಂಬೇಡಿತನಕೊಂದು ಬರಿ ನೆಪಂ!''

ಕಣ್ಮುಚ್ಚಿ
ತಲೆಬಾಗಿ ಕೇಳಿದನಳಿಯನೆಂದುದಂ. ನಾಣ್ಚೆ
ನಿಡುಸುಯ್ದನಾ ಮರೆನುಡಿಗಳೀಟಿಯಿರಿತಮಂ

ತಾಳಲಾರದೆ ತಾಳ್ದು. ಪಿರಿದು ಬೇಗಂ ಕಲ್ಲ
ಮೋನದಿಂ ಜಾನಿಸಿದನೆಲ್ಲಮಂ. ರಾಮನಿಂ
ಹತಳಾಗಿ, ಭೂಮಿಗತಳಾಗಿ, ಕುರಿದರಿವೋಗಿ,
ದಹನ ಸಂಸ್ಕಾರಮಿಲ್ಲದೆ ಕಾಡಿನೊಳೆ ಕೊಳೆತು
ನಾರ್ದಬ್ಬೆಯಾ ಪೆಣಂ ಕಣ್ಗೆ ಕಟ್ಟಿತು ಘೋರ
ಚಿತ್ರಮಂ. ಮೂಗಳ್ಕೆಯಳ್ತನಾ ರಾಕ್ಷಸಂ;
ಪೊಣ್ಮೆದತ್ತಶ್ರುಧಾರೆ! ದಿಗ್ಗಜ ಬಲಾನ್ವಿತಂ,
ಕೆಮ್ಮೀಸೆವೊತ್ತ ಪುಲಿಮೊಗದುಗ್ರಗಾತ್ರದಾ
ಮಾಯಾ ಸಮರ್ಥನಾ ಮಾರೀಚದೈತ್ಯನುಂ
ಗೋಳಿಡುವುದಂ ಕಂಡು, ಲಂಕಿಗಂ ಭೋಂಕನೆಯೆ
ಮೇಲೆಳ್ದನಪ್ಪಿದನ್, ಸಂತೈಸಿದನ್ ಮರಳಿ
ಮರಳಿ. ಪುಲಿ ಪುಲಿಯ ಮೋರೆಗೆ ಮೋರೆಯನ್ನಿಟ್ಟು
ನೆಕ್ಕಿ ಮುಂಡಾಡುವೋಲಾಡಿ, ಮಾರೀಚನಂ
ಸೂರೆಮಾಡಿದನಸುವನಿಂತುಃ
"ಮಾಣ್, ಮಾವ, ಮಾಣ್
ತಿಣ್ಣಳಲಿನಳ್ಕೆಯಂ! ದಿಕ್ಕಿಲ್ಲದಾತನೊಲ್
ದುಕ್ಕಿಸುವೆ ಏಕೆ? ಲಂಕೆಗೆ ಲಂಕೆಯುರ್ಕೆಳ್ದು
ನಿನಗೆ ನೆರಮಂ ನೀಡೆ ತನ್ನ ತೋಳ್ ಚಾಚುತಿದೆಃ
ಇದೆಕೊ ನಾನ್ ಆ ತೋಳ್! ತಪೋಮಗ್ನನಯ್; ನಿನಗೆ
ತಿಳಿದಪುದದೆಂತು ಲೌಕಿಕರ ಸಂಕಟವಾರ್ತೆ?"
ಸುಯ್ದೊರೆದನೆಲ್ಲಮಂ, ಚಂದ್ರನಖಿಯಿಂ ಕೇಳ್ದ
ಪಂಚವಟಿ ಮೇಣ್ ಜನಸ್ಥಾನದವಮಾನಮಂ,
ದಾರುಣ ಪರಾಜಯದ ದುಮ್ಮಾನಮಂ. ಕೇಳ್ದು
ಮಾರೀಚನಕ್ಷಿಗಳ್ಗೇನೊ ಭೀತಿಯ ಛಾಯೆ
ಸುಳಿದತ್ತು. ಬೆಳ್ಪೇರಿದುದು ಮೊಗಂ. ಬೆಳ್ಪಾಗಿ
ನೋಡಿದನ್ ಲಂಕೇಶನಂ. ಕಂಡದಂ, ಖತಿಗೆ
ಕಿಡಿಕಿಡಿವೋಗಿ, ಕೂಗಿದನ್ ರಾಕ್ಷಸೇಶ್ವರಂ,
ವ್ಯಾಘ್ರ ಘರ್ಜನೆಗೆ ಮಲೆ ನಡುಗುವಂದದಿ ನಡುಗೆ
ಮಾರೀಚ ಪರ್ಣಶಾಲೆಃ "ತೆಗೆ, ತೆಗೆ! ಅಧೈರ್ಯಮಂ
ಬಿಡು! ಹೇ ಕರೀಂದ್ರಬಲಶಾಲಿ, ವೀರಶ್ರೀಯ
ಓಕುಳಿಯ ಒಸಗೆಮಂಚವ ದುಮುಕಿ ಓಡದಿರ್,

ಹೆಂಬೇಡಿಯಾಗದಿರ್; ಕುಲಗೇಡಿಯಾಗದಿರ್;
ಧೈರ್ಯದ್ರುಮದ ಬೇರ್ಗೆ ಬೆನ್ನೀರನೊಯ್ಯದಿರ್;
ಕೊಯ್ಯದಿರೊ ಕರ್ಬುರ ಕುಲದ ಬಲದ ಗೌರವದ
ಗೋನಾಳಿಯಂ!'' ಏಳುತುಬ್ಬೇಗದಿಂ, ಬೆನ್ಗೆ
ಕಯ್ಗಳನಮರ್ಚಿ, ಶತಪಥಮಲೆದನೊದೆವವೋಲ್
ಕ್ಷ್ಮಾವಕ್ಷಮಂ. ತಾಟಕಾತ್ಮಜನಿನಿತ್ತಳುಕಿ
ಲಂಕೇಶನಾವೇಶಮಂ, ಕುರಿತೊರೆದನಿಂತು
ದೃಢವಾಣಿಯಿಂ: ''ಮುಟ್ಟದಿರ್ಪಂಗೆ ಕೆಂಡಮುಂ
ಕಿಡಿಮಾಣಿಕಮೆ! ರಾಮನ ಪರಾಕ್ರಮದ ರುಚಿಯ
ಸವಿದೆನಗೆ ನಿನ್ನಣ್ಮುನುಡಿ ಬರಿಯ ಸೊರ್ಕಾಗಿ
ತೋರುತಿದೆ. ಬಾಲ್ಯದಿಂ ಬಲ್ಲೆನಾನಾತನಂ.
ಮಾಡಿಹೆನೊ ಪುರುಷಪ್ರಯತ್ನಗಳೊಳನಿತುಮಂ
ದಾಶರಥಿಯದಟಂ ಮುರಿಯಲೆಂದು. ಕಯ್‌ಬಲ್ಮೆ,
ಮೆಯ್‌ಬಲ್ಮೆ, ಬಿಲ್‌ಬಲ್ಮೆ, ಮಾಯೆಯೊಂದತಿಬಲ್ಮೆ,
ಕೈಗೂಡಲಿಲ್ಲಾವುದುಂ. ಅಯ್ಯೊ, ಕೊಲಲೆಳಸಿ
ನನ್ನ ತಾಯ್‌ಗುಲಿಗನಂ, ಕೊಲೆಯಪ್ಪುದೊಂದುಳಿಯೆ, ಕೇಳ್
ಮತ್ತೆಲ್ಲಮಂ ಪಾಡುಪಟ್ಟಿಹೆನೊ! ಖರವೈರಿ
ಸೋಲನೆಂದುಂ; ಗೆಲಲಸಾಧ್ಯನಯ್! ದೈವಮುಂ
ರಾಮಪಕ್ಷದೊಳಿರ್ದು ಪೊಣರ್ವುದೆನೆ, ಬರಿಬಲುಮೆ
ಸಲ್ಲದಯ್. ಧರ್ಮವರ್ಮವೆ ರಕ್ಷೆಯಾದಾತನಂ
ಧರ್ಮದಿಂದಲೆ ಜಯಿಸವೇಳ್ಕುಮೆಂದಾನಿಂತು
ತಪಕೆ ನೋಂತೆಂ. . .'' ''ಬಡಗರ ಮರುಳ್ಗೆ ಮಂಕಾದೆ
ನೀನೆಲವೊ ಮಾರೀಚ! ನರಮಾತ್ರನಂ ಪರಮ
ದೈವಮೆಂದಾ ಮೂರ್ಖರಾಡಿದರೆ, ಶಿವಶಿವಾ,
ಬೆಳ್ಪ ನೀನದನೆ ದಿಟಮೆಂದಿಂತು ನಂಬುವುದೆ?
ಆ ನಂಬುಗೆಯೆ ನಿನ್ನ ನೂರಾನೆ ಮೆಯ್ಮೆಯಂ
ಹೊಳ್ಳುಗೈದಿದೆ ಕಣಾ. ಹರುವನೊಂದಂ ನೆನೆದು
ಬಂದೆನೀಯೆಡೆಗೆ. ನಾವಿರ್ವರುಂ ದುಃಖಿಗಳ್:
ತಾಯ ಕೊಲೆಯಿಂದೆ ನೀನೊಡಹುಟ್ಟು ಕೊಲೆಯಿಂದೆ
ನಾಂ. ತಂಗಿಗೊದಗಿದಪಮಾನವೆಮ್ಮಯ ಕುಲಕೆ
ನಾಣ್ಗೇಡು: ಬಡಗಲೆಸೆದಿಹ ಮಲೆಪು, ತೆಂಕಣದ

ಗೌರವಕೆ! ಕೆಮ್ಮನಿರೆ ನಾವೆಮ್ಮ ದಕ್ಷಿಣಂ
ಸೂರೆಯಪ್ಪುದೆ ವಲಂ ದಸ್ಯುಶೀಲೋತ್ತರಕೆ.
ದಂಡನೀತಿಯನೊಂದನೆಯೆ ನೆಮ್ಮಿ ನೀಂ ಸೋಲ್ತೆ,
ಮಾರೀಚ. ಬೇರೆ ತಂತ್ರಗಳಿರ್ಪವೆನಿತೆನಿತೊ,
ವೈರಿಯಂ ನಿರ್ವೀರ್ಯಗೊಳಿಸೆ. ಸೀತೆಯನೊಯ್ಯೆ
ಮಾನಹಾನಿಗೆ ಹೃದಯದೀನನುಂ ಮೇಣಂತೆ
ಶಕ್ತಿಹೀನನುಮಾಗಿ ನಿಸ್ತೇಜನಾದಪಂ
ದಾಶರಥಿ. ನೀರೊಣಗೆ ಪಿರಿಯ ಪೇರಾಲಮುಂ
ಕಿರಿಯೊರಲೆಗುಣಿಸಪ್ಪುದೆನೆ, ರಾಮವಿಕ್ರಮಂ
ಜಳ್ಳಪ್ಪುದೆಮ್ಮ ಕಡುಪಿಗೆ ಸಿಲ್ಕಿ. . ." "ಹದನಿದೆಯೊ
ನೀಂ ನೆನೆದುದೆಂದುದದು? ನೀತಿವೇಳ್ದವರಾರೊ
ನಿನಗಿದಂ, ಹದಿಬದೆಯ ಹರಣಮಂ, ನಿನ್ನ ಮೇಣ್
ಸಕಲ ಲಂಕೆಯ ಮರಣಮಂ? ಚಂದ್ರ ಮೌಳಿಯಂ
ಕುರುಡುಗೈದಾ ಬಳಿಕ್ಕವನನಶ್ರಮದಿಂದೆ
ಗೆಲ್ವೆನೆಂದುರಿಯ ಹಣೆಗಣ್ಗೆ ಕೈಯಿಕ್ಕೆಳೆದು
ಕೀಳ್ವೆಗ್ಗನೋಲೊಣರುತಿರ್ಪೆ; ಮುಂದರಿಯೆಯೈ ನೀಂ,
ಓ ಕೈಕಸಿಯ ಕಂದಾ! ರಾಮನ ಪರಾಕ್ರಮಂ
ತಾನೇಕೆ? ಪಾವನ ಪತಿವ್ರತಾ ಹರಣಮದೆ, ಕೇಳ್,
ನಿನ್ನ ಬಾಳ್ಗುರಿಯಿಕ್ಕುವುದು ಕಣಾ!"

ನಕ್ಕನಾ
ಮಾತಿಗೆ ಕಿಲಕ್ಕನೆ ದಶಗ್ರೀವನೆಕ್ಕಲಂ
ಹೂಂಕಾರ ಮಾತ್ರದಿಂ ಜಾಯಿಲಂಗಳನಟ್ಟೆ
ಕೆದರುವೋಲಿರಿದು ಮಾರೀಚನೊಳ್ನುಡಿಗಳಂ.
ಕಿರಿದು ಬೇಗಂ ತಳುವಿ, ಮತ್ತೆ: "ಶಿಶುಮತಿಗಳಿಗೆ
ಹೇಳಯ್ಯ, ನಿನ್ನ ಹದಿಬದೆತನದ ಹಿರಿಮೆಯಂ!
ಕಟ್ಟುಕತೆಯೊಳಗಲ್ಲದೆಲ್ಲಿಹಳೊ ಪೃಥಿವಿಯಲಿ, ಪೇಳ್,
ನಿನ್ನಾ ಪತಿವ್ರತಾ ಸ್ತ್ರೀ? ಜಗತ್ರಯಮುಮಂ
ದಹಿಸಿದೆ ಮಮಪ್ರತಾಪಜ್ವಾಲೆ; ಸರ್ವಮಂ
ಶೋಧಿಸಿರ್ಪುದು ನನ್ನ ಸಾಹಸದ ಕಯ್. ನಿನ್ನ ಈ
ವರ್ಣನೆಯ ವರವರ್ಣನಿಯನಾವೆಡೆಯೊಳುಂ ನಾಂ
ಸಂಧಿಸಿದೆನಿಲ್ಲಿನ್ನೆಗಂ. ಇನ್ನುಮಾ ಬಯಕೆ ತಾಂ

ಪೆರ್ಬಯಕೆ ಮಾತ್ರಮಾಗುಳಿದಿರ್ಪುದಯ್. ಅಯ್ಯೊ,
ಮಾವಯ್ಯ, ಕೇಳೊರೆವೆನೆನ್ನಾತ್ಮಚರಿತಮಂ,
ಮನ್ಮನೋ ದುರಿತಮಂ. ಪುಟ್ಟುವಾಗಳೆಯೆ ನಾಂ
ನೆತ್ತರೊಳೆ ಪೆಣ್ಣೊಡಲಿನಾಸೆಯಾ ಬೇಟಮಂ
ಪೊತ್ತು ಪುಟ್ಟಿದೆನ್ನೆಸೆ! ಜನ್ಮದೌರ್ಬಲ್ಯಮಂ
ಜಯಿಸಲೆಂದಾನೆನಿತೆನಿತೊ ನಿಟ್ಟೆಯಂ ಪಟ್ಟು
ಬೇಯಿಸಿದೆನಾತ್ಮಮಂ. ಪಾತಿವ್ರತ್ಯವ ನಂಬಿ,
ಪತ್ನೀವ್ರತಕ್ಕೆಳಸಿ ಕಳೆದೆನಯ್ ತಾರುಣ್ಯಮಂ
ಮುಗ್ಧಬುದ್ಧಿಯಲಿ. ನಾಂ ಬಯಸಿ ಮೋಹಿಪ ಮೊದಲೆ
ಪೆಣ್ತನಂ ಬಯಸಿತೆನ್ನಂ. ಕಾತರಿಸಿತಯ್ಯೊ
ಮೇಲ್ವಾಯುತಾತುರದಿ! ತತ್ತರಿಸುತಂಚಿನೊಳ್
ದಣಿದುಯ್ಯಲಾಡುತಿರ್ದೆನ್ನಾತ್ಮಮೊಯ್ಯನೆಯೆ
ದುಮ್ಮಿಕ್ಕಿದುದೊ ಮನ್ಮಥ ರುಚಿಯ ರಸಾತಳಕೆ!
ಕೇಳಂದಿನಿಂದೆ ಪೆಣ್ತನದೊಳೆನಗಿರ್ದೊಂದು
ಸುಂದರ ಪವಿತ್ರತಾ ಭಾವಂ ಶಿಥಿಲಮಾಗಿ,
ಭೋಗಭಾವಮೆ ಪೃಥುಲಮಾಯ್ತಯ್. ದಡಕ್ಕಡರೆ
ಸಾಹಸದೊಳೀಜುವುದನಾನುಳಿಯದಿರ್ದೊಡಂ,
ತೇಲಿ, ಹೋರುತೆ, ಕೊಚ್ಚಿಹೋದೆನಾ ಹುಚ್ಚುಹೊಳೆ
ಹೊನಲಿನಲಿ! ವಶವಾಗದಿರ್ದವರನೊರ್ವರಂ
ಕಂಡೆನಿಲ್ಲಾಂ: ರಾಕ್ಷಸೇಶ್ವರನ ಮೈಸಿರಿಗೆ,
ವಿತ್ತೇಶ ಚೇತನ್ಯೆಸಿರಿಗೆ, ದಿಕ್ಪಾಲರಂ
ಗೆಲ್ದ ಪೆಂಪಿಗೆ, ನಿಖಿಲ ಭೂಮಿನಾಥರನೊತ್ತಿ
ಬಾಯ್ಕೇಳಿಸಿದ ಯಶೋವೈಭವಕೆ, ರಾವಣನ
ರಸಿಕತೆಗೆ, ಸತ್ತ್ವಕ್ಕೆ, ವೀರ್ಯಕ್ಕೆ, ತೇಜಕ್ಕೆ,
ಜೌವನಕೆ ಕಂಡೆನಿಲ್ಲಾನೊರ್ವಳಂ, ನನಗೆ
ಮೆಚ್ಚಿ ವಶವಾಗದಿರ್ದಾ ಪವಿತ್ರಾಂಗಿಯಂ!
ಹದಿಬದೆಯರೆಂದು ಹೆಸರಾಂತ ಹೆಣ್ಮಣಿಗಳಂ
ಪರಿಕಿಸಿದೆನವರುಂ ಸುಲಭಮಾದರಯ್. ಕಡೆಗೆ, ಕೇಳ್,
ಹದಿಬದೆಯರಿಹರೆಂಬ ನಂಬುಗೆ ಸತ್ತುದೆನ್ನೆದೆಗೆ!''
ಮೌನವಾಂತನು ರಾವಣಂ. ತಾಟಕಾತ್ಮಜಂ
ನೋಡುತಿರ್ದನ್ ಬೆರುಗುಬಡಿದು ನಡಪಾಡುತಿರ್ದಾ

ದೈತ್ಯನೃಪನಂ! ಮತ್ತೆ ಪೊಳ್ತಿನಿತನಂತರಂ
ಸೋದ್ವೇಗದಿಂ: "ಇಲ್ಲ, ಬಿಡು, ಮಾರೀಚ, ಎಲ್ಲಿಯೂ
ಇಲ್ಲ, ಆ ನನ್ನ ತಾಯ್! ಪುಸಿಯ ಪೊಗಳಲ್, ಅಯ್ಯೊ,
ಪೇಸಿದಪುದೆನ್ನ ಬಾಯ್. ಸಲ್ಲದಯ್ ಪುಸಿಗೆನ್ನ
ಪೂಜೆ: ಪಾವನೆಯೆನಗೆ ತೋರ್ದಂದು ಧನ್ಯನಾಂ;
ಧನ್ಯೆ ತಾಂ! ಕೇಳೊರ್ಮೆ ಧನ್ಯನಪ್ಪಾ ಪುಣ್ಯಮುಂ
ದೊರೆಯಿತೆಂದಿರ್ದೆನ್. ಆ ಸ್ವಪ್ನಮುಂ ಬಿರಿದುದು ಕಣಾ;
ಮೇಣೆರ್ದೆಗೆ ನಿಚ್ಚಮುಂ ನೆತ್ತರಂ ಸೋರ್ವೊಂದು
ಪಿರಿದಾದುದೇರ್. ವೇದವತಿವೆಸರ ಋಷಿಪತ್ನಿ
ಪುಣ್ಯಸತಿ ತಾನಿರ್ದಳಯ್. ಪಾತಿವ್ರತ್ಯದೊಳವಳ್
ಮೂಜಗದ ಕಣ್ಗೆ ಗುರಿಯರಿಲಾಗೆ,—ದುರ್ಲಭಕೆ
ಪಿರಿದು ಕುದಿಗೊಳ್ವೆನ್ನ ತೃಷೆ ಬಯಸಿತಾಕೆಯಂ.
ಪೆಣ್ಣನಿತು ಮೇಲಿರ್ದರನಿತೆನಗೆರ್ದೆಯ ಕಾಯ್ಪು
ಪಿರಿದಪ್ಪುದೆನಗದು ಸಹಜಗುಣಂ. ಅಯ್ಯೊ, ಆ
ದುರ್ಭಾಗ್ಯೆ ಚಿತೆಯೇರ್ದ್ದಳಾತ್ಮಹನನಕೆ ಮನಂ
ಮಾಡಿ. ನಾನೆಂದುಂ ಬಲಾತ್ಕರಿಸೆನೆಂಬುದಂ
ತಿಳಿಯದೆಯೆ ಕೊಂದುಕೊಂಡಳೊ! ಬಾಳ್ವೆರಸಿ, ನನಗೆ
ವಶವಾಗದಿರ್ದೊಡೆ ನಮಸ್ಕಾರಮಂ ಪದಕೆ,
ಕೇಳ್, ನಿವೇದಿಸುತಿರ್ದೆ ನೈವೇದ್ಯಮಂ. ಸುಲಭಶುಚಿ
ಸಾವನಪ್ಪಿದಳಾದಳ್ ತಿರಸ್ಕಾರ್ಯೆ!—ಮತ್ತೊರ್ಮೆ,
ಹದಿಬದೆಯರರಸಿ ತಾನೆಂಬಳಿನ್ನೊರ್ವಳಂ
ತಂದೆನವಳರಸನಂ ಸೋಲಿಸಿ ಸೆರೆಗೆ ನೂಂಕಿ.
ಧಾನ್ಯಮಾಲಿನಿಯಾಕೆಯಂ ಬಲ್ಲೆ ನೀನೆನ್ನ
ಮೆಚ್ಚಿನುಪಪತ್ನಿಯಂ. ರಾವಣನ ಬೇಟಕ್ಕೆ
ಸೋಲದವಳೊರ್ವಳಂ ಕಾಣ್ಬೆನೆಂದಿರೆ, ಕಟ್ಟ
ಕಡೆಗಾಕೆಯುಂ ಸೋಲ್ತಳೆನಗೆ. ಸ್ತ್ರೀ ಗೌರವದ
ಲವಲೇಶದವಶೇಷಮುಂ ಮಳ್ಗಿದತ್ತೆನಗೆ
ನಿಶ್ಶೇಷಮಾಗಿ. ಲಂಕೇಶ್ವರನ ಸಜ್ಜೆಯಂ
ಪಳಿದು, ದಿಟದಿಂ ಪೇಸುವಂಗನೆಯರಿಲ್ಲ, ಕೇಳ್,
ಮಾರೀಚ, ನರಸುರಾಸುರ ಲೋಕದೊಳ್!—ಅದಿರ್ಕೆ.
ರಾಮನಂ ನಿಸ್ತೇಜನಂ ಮಾಡೆ ಸೀತೆಯಂ

ತರ್ಪೆನದು ರಾಜಕೀಯಂ; ಧರ್ಮದ ವಿಷಯಮಲ್ತು.
ನೀನೆನಗೆ ನೆರವಾಗವೇಳ್ಕುಮಲ್ಲದೆ ಮೀರ್ದು
ನಡೆಯದಿರ್ ಪ್ರಜೆಯ ಕರ್ತವ್ಯಮಂ!—ಬೇಗ ತಾಳ್
ಕನಕ ಮೃಗ ರೂಪಮಂ. ಸುಳಿ ಜನಕಜೆಯ ಮುಂದೆ,
ಬಗೆಸೆಳೆದೆಳಸಿ ಬೇಡುವಂತಿನಿಯನಂ. ಪಿಡಿಯೆ
ಬೆನ್ನಟ್ಟಿ ಬರೆ ದಾಶರಥಿ, ದೂರ ದೂರಕ್ಕೆ
ಸೆಳೆದೊಯ್ಯುತಾತನಂ, ಕೂಗು ಸೌಮಿತ್ರಿಯಂ
ದೀನರವದಿಂ. ಬೆಚ್ಚುತೋಡಲ್ಕೆ ಲಕ್ಷ್ಮಣಂ
ರಾಮನಿರ್ಪೆಡೆಗೆ, ನಾಂ ಕಳ್ದುಯ್ವೆನಾ ಜನಕ
ಜಾತೆಯಂ. ವ್ಯರ್ಥಮೆಂದರಿಯದಿರ್ ನಿನ್ನ ಈ
ಕರ್ತವ್ಯಮಂ: ನಿನಗೆ ಖರನ ಧರೆಯನೆ ಕೊಟ್ಟು
ವಿರಚಿಸುವೆ ಪಟ್ಟಾಭಿಷೇಕಮಂ!''
                                        ''ಏಗಳುಂ
ನಿನ್ನಾಶೆ ನಿನಗೆ ಮತಿ. ಗತಿಯನ್ಯಮಂ ಕಾಣೆ
ನೀನಾವಗಂ. ದುಷ್ಟವಾಸನೆಗೆ ತರ್ಕಮಂ
ಸೃಷ್ಟಿಸುವೆ. ಶಿಷ್ಟತಾಭ್ರಾಂತಿಯಿಂದಾತ್ಮವನೆ
ವಂಚಿಸುತ್ತಿರ್ಪೆಯಯ್. ಕಾಮನಿಂತುಟೆ ವಲಂ
ತಾರ್ಕಿಕಾಗ್ರೇಸರಂ!—ಹಿತವೇಳ್ವೆನಾಲಿಸಾ:
ಮಂಡೆ ಬಲ್ಲಿತ್ತೆಂದು ಬಂಡೆಯಂ ಪಾಯ್ವಂತೆ
ನುಗ್ಗುತಿಹೆ ನೀಂ ರಾಘವನ ಸತಿಯ ಶಾಪಕ್ಕೆ;
ದಂಡಧರ ಕಾಲಸಮ ಕೋದಂಡಧರ ರಾಮ
ಕೋಪಕ್ಕೆ; ಪಾಪಕೂಪಕ್ಕೆ! ಎಲವೊ ಲಂಕೇಶ,
ಮುಂಗಿಡಿಯನಿಕ್ಕದಿರೊ ಲಂಕೆಯ ವಿನಾಶಕ್ಕೆ!—
ಮಡಿಯಲೆನಗಾಸೆಯಿಲ್ಲಯ್ ರಾಮಬಾಣಕ್ಕೆ
ಸಿಲ್ಕಿ. ರಕ್ಕಸವಳಿಯ ಕೊಲೆಗೆ ನೆರವಾಗೆನಾಂ
ನೀನೆಂದುದಂ ಗೆಯ್ದು. ಪಟ್ಟಾಭಿಷೇಕಕ್ಕೆ
ದೂರದಿಂ ಕೈಮುಗಿವೆನಿಲ್ಲಿಂದೆ. ದನುಜೇಂದ್ರ,
ತೃಪ್ತನಾಂ; ನಿನ್ನಾ ಕೃಪೆಯನೊಲ್ಲೆ!''
                                        ಮುಖವಿಕೃತಿ
ಭೀಷ್ಮವಾದತ್ತು, ಕೋಪಗ್ರೀಷ್ಮವೊಯ್ಲಿಂದೆ,
ರಾಕ್ಷಸೇಂದ್ರನಿಗೆ. ಸುಯ್ ಸುಯ್ ಸುಯ್ದನಿಂತೆಂದು:

''ರಾಮಶರದಿಂದಾದೊಡಂ ಬರ್ದುಕಿ ಬರ್ಪೊಂದು
ದೂರಾಶೆಯಿರ್ಪುದಯ್. ಬೆಸಕಯ್ಯದಿರಲೆನಗೆ
ನೀನುಳಿ ಬರ್ದುಕಿನಾಸೆಯಂ!'' ಎನುತ್ತುರಿದೆಳ್ದು
ಪೊರಮಟ್ಟನೆಲೆವನೆಯಿನುಸಿರೆ ಮಾರೀಚನಿಂ
ಜಗುಳ್ದುದ್ಣ್ಮೆದೋಲ್. ತೆರಳ್ದುಸಿರನಂತೆ ಮರಳ್ಚುವೋಲ್
ರಿಕ್ಕನೆರ್ದೋಡಿದನ್; ಚಕ್ರವರ್ತಿಯ ಕಯ್ಯ
ಬೇಡಿದನ್: ''ಕಯ್ಯಿದನೆ ಕಾಲೆಂದು ತಿಳಿಯಯ್ಯ.
ನನ್ನೆಲೆವನೆಯೊಳಕ್ಕೆ ಬಾರಯ್ಯ. ಬೆಸಕಯ್ವೆ
ನಿನ್ನಾಣೆಯಂ. ಮರಣಮೆಂತಾದೊಡಂ ದಿಟಂ
ನನಗೆ. ರಾಮನೊ ನೀನೊ ಸಂಹರಿಸಲೆನ್ನಾಯ್ಕೆ
ರಾಮಬಾಣಂ! ನಿನ್ನ ಪೇಳ್ದಂತೆಸಗಲದುವೆ ದಲ್
ನಿನಗುಮೆನಗುಂ ಮೇಲ್ಮೆ. ತಾಯ್ಗುಲಿಗನಿಂದಳಿಯೆ
ಮಾತೆಗಾದಂತಾಯ್ತು ಸೇವೆ; ಮೇಣರಸಂಗೆ
ಬೆಸಕಯ್ದುಳಿದ ಜಸಂ. ನಿನ್ನಿಂದೆನಗೆ ಮುಕ್ತಿ;
ನನ್ನ ಸಾವಕ್ಕೆ ನಿನ್ನಾತ್ಮದುದ್ಧಾರಕ್ಕೆ
ಮೊತ್ತಮೊದಲಣ ಜನ್ನ ಬೇಳ್ವೆ!''–ಲಂಕೇಶ್ವರಂ
ತಕ್ಕೈಸುತುಕ್ಕಿದನ್; ತನ್ನ ಕರ್ಮಕ್ಷಯಕೆ
ಕಾರಣವನಪ್ಪುವೋಲಪ್ಪಿದನ್ ಮಾವನಂ,
ಪರಮ ಮಾಯಾನಿಪುಣನಂ, ಕಾಮರೂಪಿಯಂ,
ಮಾರೀಚನಂ. ಪುಷ್ಪಕಕ್ಕೊಯ್ದನಾತನಂ
ಮೃತ್ಯುರಥಕುಯ್ವಂತೆವೋಲ್. ಪ್ರಾಣಮೇರ್ವಂತೆ
ಪಾರಿದತ್ತಾ ವಿಮಾನಂ ಶ್ರೀರಾಮನಾಶ್ರಮಕೆ.

## ಸಂಚಿಕೆ ೨

# ಓ ಲಕ್ಷ್ಮಣಾ!

  ''ಟುವ್ವಿ ಮಾಗಿಗೆ ಟುವ್ವಿ! ಸುವ್ವಿ ಸುಗ್ಗಿಗೆ ಸುವ್ವಿ!''
ಪಂಚವಟಿಗೈತಂದು ಪರ್ಣಕುಟಿಯಂ ಕಟ್ಟುವಾ
ಪೊಳ್ತಂದು ಸೀತಾರಮಣಿ ನಟ್ಟು, ಕಟ್ಟೊಲ್ಮೆಯಿಂ
ನೀರ್ವೊಯ್ದು ನಡಪಿದಳ್ಕರೆಗುರ್ಬ್ಬಿ ಪರ್ವುತಾ
ಪನ್ನಗುಡಿಯಂ ತಳ್ಬಿದೋಲಂತೆ ಸುತ್ತಣಿಂ
ಮುತ್ತಿ ಮುತ್ತೊತ್ತುದಿರ್ದ್ದಡವಿವಳ್ಳಿಯ ಮಲರ್ದ
ಹೊದರೆದೆಯೊಳುಲಿಯತೊಡಗಿತು ಚುಕ್ಕಿವೂವಕ್ಕಿ:
''ಟುವ್ವಿ ಮಾಗಿಗೆ ಟುವ್ವಿ! ಸುವ್ವಿ ಸುಗ್ಗಿಗೆ ಸುವ್ವಿ!''
ಮಂಜು ಹಿಂಜರಿದತ್ತು; ಮಾಗಿಯ ಚಳಿಯುಸಿರ್ಗೆ
ತಾನಳಿಯುವಳಲಿಂದಮೆನೆ ತೋರಿದುದು ಕಾಯ್ಪು,
ಬಿಸುಸುಯ್ಯೆನಲ್ಕೆ. ಬೇರಿಂದೇರಿದುದೊ ಮರದ
ಕೊಮ್ಬೆಗೆ ವಸಂತನಾವೇಶಮೆನೆ, ಕೊನೆಗೆ ನನೆ
ಕೊನರಿದುದು. ಹಂತಿಗೊಂಡುದು ಗಗನ ನೀಲಿಮೆಯ
ನುಣ್ಜಗಲಿಯೊಳ್ ನೀರ್ವೊರೆಗಳೆದ ಬೆಳ್ಳಿಯುಣ್ಣೆಯಾ
ಮುಗಿಲ ಹಗುರಂ. ಕೋಗಿಲೆಯ ಕೊರಳ ತೂರ್‍ಯಂ
ಮರುದನಿಯನೇರಿ ಅಲೆದುದು, ಮಲಗನೆಳ್ಚರಿಸಿ,
ಅಡವಿಯಿಂದಡವಿದೊಟ್ಟಲಿಗೆ. ಮರಗಬ್ಬದಿಂ
ಹರೆಯ ತಾಯ್ತೊಡೆಗಿಳಿದ ಮೊಗ್ಗೆಯ ಪಸುಳೆನಿದ್ದೆ
ಕಣ್ದೆರೆದುದಲರ ಬೆಳ್ನಗೆ ಬಿರಿಯೆ, ಪೊಸಗಂಪು
ಪರಮೆಮೊರೆಯಂ ಬಳಿಗೆ ಕರೆಯೆ. ಗರಿಪುಕ್ಕಮಂ
ಕುಣಿಕುಣಿಸಿ ಸಿಳ್ಳನೂದಿತು ಸಿಪಿಲೆ. ಮಿಗಗಳಿಗೆ
ಸುಖದಮಾದುದು ನದಿಯ ಮುಳುಗುಮೀಹಂ. ಮಾಗಿ

ಪೋಗಿ ಮೈದೋರಿದುದು ಹಕ್ಕಿ ಹೂಗಳ ಸುಗ್ಗಿ
ಹಿಗ್ಗಿ!
ನಿಚ್ಚಯಿಸಿದರು ರಾಮಲಕ್ಷ್ಮಣ ಸೀತೆಯರ್
ಮರಳಲ್ಕಯೋಧ್ಯೆಯಂ. ತೆಂಗಾಳಿ ಕಮ್ಮನೆಯೆ
ಕೇದಗೆಯ ಹೊಂದೂಳಿಯಂ ದೆಸೆದೆಸೆಗೆ ಚೆಲ್ಲಿ
ಮೆಳೆಯ ಗರಿಚವರಿಯಂ ಬೀಸೆ, ಪಿಕಳಾರ
ಕಾಜಾಣ ಕಾಮಳ್ಳಿ ಗಿಳಿವಿಂಡುಗಳ ಕೊರಳ
ಕೈವಾರಮುಲಿಯೆ, ಪಗಲಾಣ್ಮನೊಡನೊಡನೆಳ್ದು
ಗೋದಾವರಿಯ ಮಿಂದರರ್ಘ್ಯಮೆತ್ತಿದರಿನಗೆ,
ವಂಶಾಧಿದೇವತಾ ಪ್ರತಿಮನಿಗೆ. ಮೇಣಂತೆ
ಬೀಳ್ಕೊಂಡರಾ ಪರಿಚಯದ ವನಸ್ಥಲಿಗಳಂ,
ಪುಲಿನಸ್ಥಲಿಗಳಂ, ಜಲಸ್ಥಲಿಗಳಂ ಮತ್ತೆ
ಪರ್ಣಶಾಲೆಗೆ ವಂದ ಕಿತ್ತಡಿಗಳಂ. ಪಕ್ಷಿ
ವರ್ಯಂಗೆ ಪೇಳ್ದರ್ ಜಟಾಯು ಮಿತ್ರಂಗೆ. ಮೇಣ್
ಪಂಚವಟ್ಯಾರಣ್ಯದೊಳ್ ಸಂಗ್ರಹಂಗೈದಿರ್ದ
ಪುಲಿಯ ಪಲ್ಲಂ, ಪಂದಿಕೋರೆಯಂ, ಪೇರಾನೆ
ದಂತಮಂ, ನಖಗಳಂ, ಚರ್ಮಂಗಳಂ, ವಿಪಿನ
ಜೀವನ ವಿಶೇಷಂಗಳಂ ಮೂವರುಂ, ತಂತಮಗೆ
ಸವಡಿಗಟ್ಟಿದರರ್ತಿಯಿಂ ತನಗೆ ಬೇಳ್ಪನಿತುಮಂ.
ಕಟ್ಟಿದಳು ಬುತ್ತಿಯಂ ಸೀತೆ. ತದನಂತರಂ
ಮುಡಿಗಟ್ಟಿದಳು ಮಂಡೆಯಂ, ಬಾಚಿ ಹೆರಳಿಕ್ಕಿ.
ಮುಡಿವಾಸೆಯಿಂದೆ ಪೂದಿರಿಯಲೆಂದೆಲೆವನೆಯ
ಮುಳ್ಳಿನೊಡ್ಡಂ ದಾಂಟುತಲ್ಲಿ ಬೇಲಿಯ ಮೇಲೆ
ಹರಹಿದೊಂದೊದ್ದೆಮಡಿಯಂ ನೋಡಿ ಕೂಗಿದಳ್
ಸೌಮಿತ್ರಿಯಂ: "ನಾರುಡೆಯಿದಾರದಯ್? ಹೋಹ
ಹೊಂಗಿಂದಿದಂ ಮರೆದಿರೇಂ?" ಹೊರಗೆ ತಲೆಯಿಣಿಕಿ
ನೋಡಿ ಕಂಡೂರ್ಮಿಳೇಶಂ: "ಅಯ್ಯೊ ಮರೆವೆನೇಂ?
ಛಿದ್ರಮಾದೊಡಮದಂ ಕೊಟ್ಟವಂ ಮುನಿಯಲ್ತೆ?
ಖರನ ಕೊಲುವಂದದನೆ ಮೈಜೋಡನೆಸಗಿರ್ದೆನಾಂ.
ಶೂರ್ಪಣಖಿಯಿಂ ಪೊರೆದ ಬನದ ಬಾಳ್ಕೆಯ ಶುಚಿಯ
ಕಾಣ್ಕೆಯೆಂದದನೀವೆನೆನ್ನಾ ತಪಸ್ವಿನಿಗೆ!. . . . .

ಒಣಗಿರ್ಪುದೇನ್ ಒದ್ದೆ?'' ''ಏಂ ಜಾಣನಯ್? ತಣ್ಪಾಲೊಳ್
ಪರಪಿದೊಡೆ ಬೇಗಮಾರುವುದಲ್ತೆ ಪೇಳೊಲ್ಲಣಿಗೆ?''
''ಆಗಳಿರ್ದತ್ತಲ್ಲಿ ಬಿಸಿಲ್.'' ''ಇದೇನಯ್ ಇಂದು
ಎಂದಿಲ್ಲದೀ ಮೋಡವೀ ಪಚ್ಚೆಬಾಂಬೊಚ್ಚದೊಳ್?''
ಸೀತೆ ಕಣ್ಣಾದೆಡೆಗೆ ಮೊಗಮೆತ್ತಿ ಲಕ್ಷ್ಮಣಂ
ನೋಡೆ, ಮುಗಿಲಿನ್ನೆಲ್ಲಿಯುಂ ಸುಳಿಯದಾಗಸದ
ನೀಲ ನೀರಧಿಯೊಳಾ ಏಕಾಕಿ ನೀರದಂ
ನೇರ್ಗೆ ನಿಂದುದು ನೇಸರಂ ಮುಚ್ಚಿ. ಪಂಚವಟಿ
ಧರೆಯೆಲ್ಲಮಂ ಪರ್ವಿರಲ್ಕದರ ದುಶ್ಶಕುನ
ಸೂಚಕ ಬೃಹಚ್ಛಾಯೆ, ರಾಕ್ಷಸ ರುಧಿರ ಸಿಕ್ತ
ವಲ್ಕಲವನಾರಿಸಲ್ಕೆಲ್ಲಿ ಪೇಳ್ ಸೂರ್ಯಾತಪಂ?
ಲಕ್ಷ್ಮಣನೊಳಗೆವೋದನವನಿಜಾತೆಯುಮಲ್ಲಿ
ತಿರುಗತೊಡಗಿದಳಲರನರಸುತ್ತಾ. ನಿಂತುದಾ
ಜೀಮೂತಛದ್ಮನೆಯನಾಂತ ರಾವಣರಥಂ
ನಿಶ್ಚಲಂ, ಕೆರೆಯ ಮೇಲ್ಗಡೆ ನಭದಿ ಹಾರಿಯುಂ
ಮೀನಿಗೆರಗುವ ಮುನ್ನ ನಿಲ್ಲುವ ಕುರರಿಯಂತೆ!
ಮೇಘರೂಪಂಬೆತ್ತು ನಿಂದ ಪುಷ್ಪಕದ ಆ
ನೆಳಲೆ ಸೇತುವೆಯಾಗೆ, ಕಾಮಧನು ತನುವಾಗೆ,
ರಾಮಸತಿಯಲರ್ಗೊಯ್ಯುತಿರ್ದ್ದಡವಿಗಿಳಿದನಾ
ಮಾರೀಚನುಪಮಾತೀತ ಕಾಮರೂಪಿ. ಪೇಳ್,
ಏನೆಂಬೆನದ್ಭುತಂ! ಛಾಯಾ ರಚಿತ ರಾತ್ರಿ
ತಾನಾಯ್ತೊ ಚಂದ್ರೋದಯೋಜ್ವಲಿತಮೆಂಬವೋಲ್
ಛೋಂಕನೆಯೆ ವಿಸ್ಫುಲಿಂಗಿಸಿದುದು ವನಧರಿತ್ರಿ.
ನೋಡುತಿರಲಲರಳುಗಣ್ಣಾಗಿ ವಿಸ್ಮಿತೆ ಧರಾ
ಸುತೆ, ಲೋಕಲಾವಣ್ಯವೇ ಮೂರ್ತವಾದುದೋ
ಎನೆ, ತರುನಿಚಯ ಮಧ್ಯೆ ಸುಳಿದಾಡಿದತ್ತೊಂದು
ರಂಕು ರೂಪದ ಕನಕ ಕಾಂತಿ. ಕರ್ದಿಂಗಳಂ
ಬೆನ್ಗೆ ಬೆಳ್ದಿಂಗಳಂ ಪೊದೆಗಜಿನಮಂ ಮಾಡಿ
ತಿಂಗಳ್ಮನೆಯ ಮಿಗಮೆ ದಂಡಕಾಟವಿಯಲ್ಲಿ
ದಾರಿತಪ್ಪುತ್ತಲೆದು ಬರುತಿರೆ, ಧರಾತ್ಮಜಾ
ವದನಮಂ ತನ್ನ ಸದನಂಗೆತ್ತು, ಶಂಕೆಯಿಂ

ಪಿಂತೆ ಮುಂತೆ ತೊಳಲ್ವವೋಲಾಡಿತಾ ಜಿಂಕೆ.
ಇರುಳ ಬಾನಿನೊಳೆಸೆವ ಚಿನ್ನ ಚುಕ್ಕಿಗಳಂತೆ,
ಕುರುಡುಗಳ್ತಲೆಯ ಕಲ್‌ಮೆಯ್ಗೆ ಕಿಡಿಕಿಡಿ ನವಿರ್
ಕೆತ್ತಿಸುವ ಮಿಂಚುಂಬುಳುಗಳಂತೆ, ಚರ್ಮಮಂ
ಸಿಂಗರಿಸಿದುವು ರುಕ್ಮಬಿಂದೂತ್ಕರಂ, ಕೋಟಿ
ಕೋಟಿ. ಮಾಗಿಗೆ ಬರಲುವೋದ ಬೂರುಗ ಮರಂ
ಕೋಡುಕೋಡಿನ ಕವಲ್ಗಣೆಗಳಿಂ ಮಲೆತಲೆಗೆ
ಕೋಡುಮೂಡಿದ ತೆರನ ತೋರ್ಪಂತೆ, ನಿಡು ಸೊರ್ಕ್ಕಿ
ಮಲೆತು ನಿಮಿರಿದುವದರ ಹೇಮರತ್ನಪ್ರಭೆಯ
ಚಾರು ಶೃಂಗದ್ವಯಂ, ತರುವರಸ್ಪರ್ಧಿಗಳ್
ತಾಮೆಂಬವೋಲ್. ಕಿವಿಯ ಕುಣಿಸುತ್ತೆ, ಕಣ್ಮಲರ
ಮಿಂಚಿಸುತೆ, ಪೊಳೆವ ಕೊಳಗಿನ ಜಾನುಜಂಘೆಯಂ
ತೆಗೆತೆಗೆದಿಡುತೆ ನಲಿದು ನರ್ತಿಸುತೆ, ಕೊಂಕಿಸುತೆ
ಕೊರಳ ಬಿಂಕವನಕ್ಷಿಯಕ್ಷಿಣಿಯ ಬೇಟದಿಂ
ಬನಮೆಲ್ಲಮಂ ಗೋರಿಗೊಳ್ಳುತೆ ಕುರಂಗತನು
ಮಾರೀಚನಭಿನಯಿಸಿದನು ತನ್ನ ಪಾತ್ರಮಂ:
ಸೂರೆಗೊಂಡನು ನೋಳ್ಪರಿರ್ವರಾ ನೇತ್ರಂಗಳಂ
ಲಂಕೇಶ್ವರನ ಮತ್ತೆ ಜಾನಕಿಯಾ. ವಾಸಂತ
ಕಾಂತಾರ ರಂಗಮಂ ಶೃಂಗಾರಗೈಯಲ್ಕೆ
ಬಂಗಾರದಂಗದಾ ಶೃಂಗಿ, ಕೋಳುಹೋದಳೆ,
ಹಾ, ದಶರಥನ ಸುತನ ತನ್ವಂಗಿ, ರಾವಣನ
ಬಾಳ್ದಿಟ್ಟಿ ಮೈಥಿಲಿಯ ಬೈತಲೆಯ ಬಟ್ಟೆಯೊಳ್
ಕಣ್ಣೆಟ್ಟವೋಲ್, ನೋಡಿ ನೋಡಿ!
ಸಾರ್ದುದು ಹತ್ತೆ;
ದೂರವೋಡಿತು ಮತ್ತೆ. ಮೋರೆಯನಿಳೆಗೆ ಸಾರ್ಚಿ
ಮೇದುದು ಪಸುರನೊರ್ಮೆ; ಪಿಂಗಾಲ್ಗಳಿಂ ನಿಂತು
ಮುಂಗಾಲ್ಗಳಿಂದಡರಿ, ಕವಲೊಡೆದ ಕೊಂಬುಗಳ್
ಬರಿಗಳಂ ಕೀಸುವೋಲ್ ಬೆನ್ನಿನಿರ್ಕೆಲದೊಳುಂ
ಚೆಲ್ವಾಗೆ, ಮೊಗಮೆತ್ತಿ ಚೆನ್ನಾಲಗೆಯ ಚಾಚಿ
ಮೇದುದು ಮರನ ನಳನಳಿಪ ಪೊಸ ತಳಿರನೊರ್ಮೆ.
ಕುಣಿಸಿದತ್ತಲ್ಪಲಾಂಗೂಲಮಂ ಶಕ್ರಧನು

ರಮಣೀಯಮಮಂ, ವಿಸ್ಮಯೋತ್ಫುಲ್ಲಮಾಗಲ್ಕೆ
ರುಚಿರಾನನಾ ರಾಮದಯಿತೆಯಾ ಮದಿರೇಕ್ಷಣಂ.
ಸೀತಾಪ್ರಲೋಭನಂ ದೀಪಿಸುವ ಮಾಳ್ಕೆಯಿಂ
ಕಕ್ಕೆವೂಗೊಂಚಲಡಿ ಮೈನೆಕ್ಕಿಕೊಳ್ಳುತ್ತೆ
ತೋರಿದತ್ತೊಮ್ಮೆ; ಕಣ್ಮರೆಯಾದುದಿನ್ನೊಮ್ಮೆ
ನೀರೆಯ ಬಯಕೆ ನೀರಡಿಸಿ ಕಳವಳಿಸುವಂತೆ.
ಕುಸುಮಿತ ಲತಾವಿತಾನಂ ಬೊಕ್ಕು, ಅದೊ ಮತ್ತೆ
ಮೂಡಿದುದೆನಲ್ಕೆ ಮೈದೋರಿದುದು, ಶೃಂಗಾಗ್ರಮಂ
ಸುತ್ತಿದುಗನಿಯ ಬಳ್ಳಿ ಮಾಲೆ ಸೂಡಿದವೋಲೆ
ಜೋಲೆ. ಮರುಳಾದಳಾ ಬಾಲೆ, ರಸರುಚಿ ಶೀಲೆ,
ಸೌಂದರ್ಯ ಲಾವಣ್ಯಲೋಲೆ. ಇಂತಿಂತಿಂತು,
ಗಮಕಿವರ್ಯನ ವೇಣುವಾಣಿಗೆ ಕಲಾರಮಣಿ
ವರ್ಣ ಲಯ ರಾಗಮಯ ನವರಸಾವೇಶದಿಂ
ಮಮಕಾವ್ಯ ವೇದಿಕೆಯನೇರಿ ನರ್ತಿಸುವಂತೆ
ನಲಿದುದಾ ಪೊನ್ಮಿಗಂ, ಸೀತಾಮನಂ ಮುಳುಗೆ
ಮೋಹದೋಕುಳಿಗೆ!
                              ಕೈತವವರಿಯದಾ ದೇವಿ
ಸಾಧುಮೃಗಮಂ ಪಿಡಿಯಲೆಳಸಿ ಮುಂಬರಿಯಲಾ
ಪ್ರಾಣಿ ವಂಚಿಸಿತಾಡಿತಲ್ಲಲ್ಲಿ. ತಳ್ವಿದೊಡೆ
ನುಸುಳಿ ಓಡುವುದೆಂದು ಬೆದರಿ ಕರೆದಳ್ ಕೂಗಿ
ಕೂಗಿ, ಕಂಪಿಸಲಟವಿ ವನಿತೆ: "ಓ ಲಕ್ಷ್ಮಣಾ,
ಓ ಬಾರ! ತಾರ ಬಿಲ್‌ಬಾಣಮಂ; ನೋಡ ಆ
ಏಣಮಂ! ಹಿಡಿಯ, ಬಾ; ಬಾ, ಬೇಗ, ಓ ಲಕ್ಷ್ಮಣಾ!"
ಮೆಯ್ಗೆ ಕುದಿನೀರೆರಚಿದಂತಾಗೆ, ರಾಮನುಂ
ಲಕ್ಷ್ಮಣನುಮೆದ್ದೋಡಿ ಬಿದ್ದು ಬಂದರು ದುಡುಕಿ,
ಶರಧನುಗಳಂ ತುಡುಕಿ. ಸುರಧೀರ ವಪುಗಳಂ
ಸುರಚಾಪ ಸಮ ಧನುರ್ಧರ ರಿಪುಗಳಂ ಕಂಡು
ಚಂಡದೋರ್ದಂಡ ಬಲಿ ರಾಕ್ಷಸೇಂದ್ರಂಗೆ ಮೆಯ್
ಪುಲಕಿಸಿತು. ಮೆಚ್ಚಿದನ್; ಬೆಚ್ಚಿದನ್; ಕಿಚ್ಚೆದ್ದು
ತುಟಿಗಚ್ಚಿದನ್, ತರತರದ ಭಾವಜಟಿಲತೆಯ
ಜಾಲಜೇಡನ ಕುಟಿಲದೊಳ್ ಜೀವಪುಳು ಸಿಲ್ಕಿದೋಲ್!

“ದಿಟಮಲಾ ನೀನೊರೆದುದೆಲೆ ತಂಗೆ, ಚಂದ್ರನಖಿ!”
ಎನುತೆ ತನ್ನೊಳಗುಸುರಿಕೊಳುತೆ, ಕಿವಿಗೊಟ್ಟನಾ
ನೆಲದೆಡೆಯ ಮಾತಿನೌತಣಕೆ.
ತನ್ನತ್ತಿಗೆಯ
ಕೋರಿಕೆಯ ಕೇಳ್ದು ಮಾರುತ್ತರಿಸಿದನ್ ನಗುತೆ
ಊರ್ಮಿಳೇಶಂ: “ಕೋಳು ಹೋಹರೆ, ಅತ್ತಿಗೆ, ಈ
ಕಾಳ್ಮಿಗದ ಕಾಂಚನ ಕೈತವತೆಗೆ? ಕಾಣಿರೇಂ
ಕೃತಕಮಂ? ಕನಕ ರಚಿತಂ ರತ್ನಖಚಿತಮೀ
ಮಿಗದವೋಲೆಲ್ಲಿಯಾದೊಡಮಿರ್ಪುದೇಂ ಸಹಜ
ಸೃಷ್ಟಿ? ಸಂಧ್ಯಾಶಿಲ್ಪಿ ಬಾನ್‌ಪಟದಿ ಕಲ್ಪಿಸುವ
ಸುಂದರ ಜಲದಕೃತಿಯ ಗಂಧರ್ವ ನಗರಮೆನೆ
ಸಲಸಲಕೆ ಸಂಚಲಿಸುವಾಕೃತಿಯ ಈ ಮೃಗಂ
ಮಾರೀಚ ಮಾಯೆಯೆ ದಿಟಂ. ಕಾಮರೂಪಿಯಾ
ಕಿತವಕಲಿ ಕೋಣಪನ ಕೂಟಯಂತ್ರಕೆ ಸಿಲ್ಕಿ
ಕೋಳುವೋಗಿಹರಾರ್ಯರೆನಿತೆನಿತೊ. ಕಾಣಿಮದೊ
ದಿಟದ ಮೃಗತತಿಯದರ ಬಳಿ ಸುಳಿಯಲೆಂತಂಜಿ
ಹಿಂಜರಿದು ಮೂಗಾಳಿವಿಡಿದು ನಿಂತಿಹವಲ್ಲಿ
ಸಾಲ್ಗೊಂಡು ಬೆರ್ಚಿ ಗಾರಾಗಿ!”
ಮೈದುನನಿಂತು
ನುಡಿಯಲದನವಚತ್ತು ಸೀತೆ ಕಾಂತನ ಕಡೆಗೆ
ತಿರುಗಿದಳು; ಮರುಗಿದಳು; ಕಾಡಿದಳು; ಬೇಡಿದಳು;
ಮಾರ್ನುಡಿಯನಿಚ್ಛಿಸದಲಂಪಿನಿಂ ನೋಡಿದಳು
ರಾಮಚಂದ್ರನ ಮನಂ ತನ್ನ ಮನಮಪ್ಪುವೋಲ್!
ತಿರುಗಿ ನೋಡಿದನನುಜನಂ; ನುಡಿದನಿಂತೆಂದು:
“ಪೊರಮಡುವೆವಾವಿಂದೆ, ಸೌಮಿತ್ರಿ. ದೇವಿಯೀ
ಕೊಸೆವಯಕೆಯಂ ತೀರ್ಚಿದಪ್ಪೆನಶ್ರಮದಿನಾಂ
ಶೀಘ್ರದಿಂ. ಮುಗ್ಧೆಯೀ ಮುಗ್ಧಕಾಂಕ್ಷೆಗೆ ಭಯದ
ವಿಘ್ನಮೇತರ್ಕೆಮಗೆ? ನಗರದೊಳದಂ ತೋರ್ದು
ಸೊಗಯಿಸುವೆನೆಂಬುದಾಗಿರಲಾಸೆ, ನಮ್ಮಿಂದೆ
ತಡೆಯೇತಕದಕೆ? ನೀನೆಂದಂತೆ ರಕ್ಕಸನೆ
ಮೃಗರೂಪಿಯಾಗಿರ್ದೊಡಾತನಂ ಕೊಲ್ಪುದುಂ

ಕರ್ತವ್ಯಮಲ್ತೆ? ಪಿಡಿದಪೆನಲ್ಲದಿರೆ ಕೊಂದೆ
ತಂದಪೆನ್. ನೀಂ ನಡೆಯಿಮಾಶ್ರಮಕೆ. ಚಚ್ಚರಿಂ
ಬರ್ಪೆನಾನಿನಿತುವೊಳ್ತಿನೊಳೆ. ನೀನೆಚ್ಚರದಿ
ಕಾಯುತಿರ್ ಜನಕಸುತೆಯಂ!''
                                        ಮಲ್ಲಗಚ್ಚೆಯಂ
ಕಟ್ಟಿ, ಆ ಸಿಡಿಲಾಳ್, ಧನುರ್ಬಾಣ ಪಾಣಿಯುಂ
ಕಟಿಖಡ್ಗ ಭೀಕರನುಮಾಗಿ, ಮೃಗನೀಚನಂ
ಬೆಂಬತ್ತಿದನು ದೈತ್ಯಮಾರೀಚನಂ. ಪಳುವದೊಳ್
ಮರೆಯಾಗೆ ರಘುಕುಲ ಯಶಶ್ಚಂದ್ರಶೇಖರಂ
ನಡೆದಳೆಲೆವನೆಗೆ ಮೈಥಿಲಿ ಮೈದುನನ ಮುಂದೆ,
ಲಂಕೇಶ್ವರನ ಶಂಕೆ ಸುಯ್ವಂತೆಃ
                                        ಬೇಂಟೆಯಂ
ಬಣ್ಣಿಪನೆ ಕವಿ, ಕಲಿ ದಿಲೀಪ ಕುಲ ತಿಲಕನಾ?
ಬೇಂಟೆಗಾರನುಮಂತೆ ಬೇಂಟೆಮಿಗಮುಂ ದಿಟಂ
ಮಹೋದ್ದಾಮರೆನೆ, ನೋಟಮಾಗದೆ ದೇವದೇವರಿಗೆ
ಆ ಮೃಗಯೆ? ರಾವಣನುಮಾ ಲಸದ್ದೃಶ್ಯಮಂ
ನೋಡದಿರಲಾಪನೇಂ? ನೋಡಿದನ್, ಮೆಯ್‌ನವಿರ್
ನಿಮಿರಿ!
        ಪೊಂಬಿಡಿಯಸಿಯನಿರುಕಿ ಕಟಿಕೋಶದೊಳ್,
ನಿಶಿತ ನಾರಾಚಮಯ ತೂಣೀರಮಂ ಧರಿಸಿ
ಬೆನ್ನೊಳಾ ಸದೃಢ ಜಂಘೆಯ ನಡೆಯ ಕಲಿಧನ್ವಿ
ಹಳುವ ಹೊಕ್ಕನು ಹೊಮ್ಮರೆಯ ಹಿಂದೆ. ಮೃಗವೇಷಿ
ಮಾರೀಚನಾಕರ್ಷಿಸುತ್ತಾ ವನಪ್ರೇಮಿಯಂ
ಸೆಳೆದನು ಮುಂದೆ ಮುಂದೆಃ ಒಮ್ಮೆ ತೋರಿದುದಿಲ್ಲಿ;
ಒಮ್ಮೆ ತೋರಿದುದಲ್ಲಿ. ಮರೆಯಾದುದೇನಿಲ್ಲಿ?
ಎಂಬನಿತರೊಳೆ ಹೊಳೆದುದಲ್ಲಿ! ಕಣ್ಣೊಳೆ ಮುಂದೆ
ಹೊದರಿನಲಿ ಹೊಕ್ಕು ಜುಣುಗಿದುದೆಂದು ನೋಡುತಿರೆ,
ಏನೊ ಬೆನ್ನೆಡೆ ಸದ್ದು? ತಿರುಗಿ ನೋಡಿದರೆ, ಅದೊ
ಪಸುರ ಗಬ್ಬದಿನುಣ್ಮೆ ಚಿಮ್ಮುತಿದೆ! ಮರೆಯಾದುದೀ
ಕುತ್ತುರ್ ಮರೆಯೊಳಡಗಿ ಎಂದೆಚ್ಚರಿಕೆವೆರಸಿ
ತುದಿವೆರಳ ತವಕದುಬ್ಬೇಗದಿಂ ನಡೆನಡೆದು,

ಸುತ್ತಿ, ಹತ್ತಿರೆ ಸಾರಿ, ಕಣ್ಣಿಟ್ಟು, ಕೈನೀಡಿ,
ಪಿಡಿವ ಚಾತುರ್ಯದಿಂದಿರೆ, ಚೆಂಗನೆಯೆ ಚಿಮ್ಮಿ
ದಡದಡನೆ ಪೊದೆ ನಡುಗುವಂದದೊಳಿಳೆಯನೊದ್ದು
ನೆಗೆದೋಡೆ, ಬೆಚ್ಚಿ ಸುಯ್ದಟ್ಟುವನ್ ಬೇಂಟೆಗಂ
ಬಿಡದೆ ಬೆಂಬತ್ತಿ! ಇಳಿದುದೆ ತಗ್ಗನಾ ಮಿಗಂ?
ರಾಮನುಮಿಳಿದನದಂ! ಉಬ್ಬನೇರ್ದುದೆ ಜಿಂಕೆ
ಕೂಡೆ ಏರಿದನದಂ! ದರಿಯಾಳದಗಲಮಂ
ನೆಗೆದುದೆ ಕುರಂಗಂ ತುರಂಗದೋಪಾದಿಯಿಂ
ನೆಗೆದನಂತುಟೆ ತಾನುಮಾ ವಿಹಂಗಮ ಕುಲಂ!
ಮಲೆಯ ಗೋಡೆಯೊ ಎನಲ್ ಕಡಿದಾಗಿ ಮೇಲೆಳ್ದ
ಗುಲ್ಮ ಶೋಭಿತ ಸಾನುದೇಶಮಂ ನೋಡು ಅದೊ
ಏರುತಿಹುದೆಂತು! ಮುದುರುತಿದೆ, ನೀಳುತಿದೆ ಮೆಯ್.
ಒಮ್ಮೆಯೆದ್ದಂತೊಮ್ಮೆ ಬಿದ್ದಂತೆ ತೋರುತಿವೆ
ಶೃಂಗದ್ವಯಂ. ಖುರಪುಟಾಘಾತದಿಂದುಣ್ಮಿ
ಸಿಡಿಯುತಿವೆ ಪುಲ್‌ಮಣ್‌ಗಳಟ್ಟಿ ಬೆಂಬರ್ಪಂಗೆ
ಕಣ್ಗೆ ದೂಳಿಕ್ಕುವೋಲ್. ಜೊಲ್ ಸೋರ್ವ ಜಿಹ್ವೆಯಂ
ಜೋಲ್ದೇದುತಿರ್ದಪ್ಪುದಳ್ಳೆ ತಿದಿಯೊತ್ತುವೋಲ್:
ಆ ಹಿಡಿವನಾ ಹಿಡಿದನದರ ಹಿಂಗಾಲನೆನೆ
ದಾಶರಥಿ ತೋಳ್‌ನೀಡಿ ತುಡುಕಲೆರಗಲ್ಕಯ್ಯೊ
ವ್ಯರ್ಥಮಾದುದು ಶೂನ್ಯತಾ ಮುಷ್ಟಿ! ಪೊನ್ಮಿಗಂ
ಪೊಕ್ಕನೆ ಕೆಲಕ್ಕೆ ಪೊರಳ್ದಕ್ಕಟ ಪೆಡಂಮೆಟ್ಟಿ
ಧಾವಿಸಿತು ಪಳುವಿಡಿದ ಕಿಬ್ಬಿಯಿಳಿಜಾರಿಗದೊ,
ದುಮುಕಿತೆನೆ ಮಳೆಯ ಬಿಲ್ಲಿನ ನೀರಿನಬ್ಬಿ. ಹಾ,
ತೊಯ್ದು ನಾರುಡೆಯುಂಗಿ ನಿಂತನಾ ರಾಘವಂ
ಪಲ್ಗಚ್ಚಿ ನೋಡಿ; ಮಿಂಚುತ್ತೋಡಿತಾ ಶೃಂಗಿ.
ಮುಗಿಲೊಳಗಡಗಿ ತೋರಿ ತಿಂಗಳೋಡುವವೋಲೆ
ಪಳುಗಾಡಿನೊಳಗೋಡುತಿರೆ ಮೃಗಂ, ಬಾಳ್ವೆರಸಿ
ಹಿಡಿವ ಹಂಬಲಸುಳಿದು ಬಿಲ್ಲೆತ್ತಿದನ್ ಬಾಣ
ಪಾಣಿ, ಮುಕ್ತಿಗೆ ಸೇರ್ದುದೆನೆ ರಾಕ್ಷಸಪ್ರಾಣಿ!
ತೆಕ್ಕನೆಯೆ ಬಿಲ್ಲಿಳುಹಿದನ್: ಮುಂದೆ ಕಂಡುದಾ
ಗೋದಾವರಿಯ ಬಿತ್ತರದ ಪೊಸಲಡ್ಡಗಟ್ಟುವೋಲ್!

''ನದಿಯನೀಸಲೆವೇಳ್ಕುಮಾ ಜಂತು. ಆ ದಡಕೆ
ಹಾಯ್ವ ಮುನ್ನಮೆ ಹಿಡಿವೆನೆಂತಾದೊಡಂ ದಿಟಂ!''
ಮತ್ತೆ ಬೆಂಬತ್ತಿದನ್ ರವಿವಂಶಜಂ. ಜಿಂಕೆ
ದುಮುಕಿತು ದುಢುಮ್ಮನೆ, ನದೀಜಲಂ ಮುತ್ತೆಳ್ದು
ಸಿಡಿಯೆ. ಬೆನ್ನೊಳೆ ದುಮುಕಿದನ್ ರಾಮನಾ ಹೊಳೆಗೆ
ನೀರ್ನವಿರ್ಗಳೇಳ್ವಂತೆ! ಮುಂದೆ ಸಾಗಿತು ಮಿಗಂ
ಕೊಂಬೆಕೊಂಬೆಯ ಕೊಂಬಿನಿಂಬಿನ ಮೊಗಂ ಮಾತ್ರ
ತಾನಾಗಿ ತೇಲಿ. ಹಾಯ್ದನು ಹಿಂದೆ ಕೌಸಲೆಯ
ಸೀತಾಪ್ರಿಯಂ ಬೀಸುಗೈವೀಸಿ, ತಲೆಯೆತ್ತಿ,
ಪೊತ್ತ ಬಿಲ್ ಬತ್ತಳಿಕೆ ಕತ್ತಿಗಳನೊಂದುಮಂ
ಬಗೆಗೊಳ್ಳದಾಕ್ರಮಣ ಬುದ್ಧಿಯೊಂದನೆ ಪಿಡಿದು,
ನೀರೆರ್ದೆಯನಿರದೆ ಸೀಳ್ದೀಸಿ! ಮಾಯೆಯನೆಂತು
ಸಂಹರಿಸದೆಯೆ ಪಿಡಿವುದಯ್ ನನ್ನಿ? ಅಕ್ಕಟಾ,
ದಡವೇರ್ದುದಾ ಚತುಷ್ಪಾದಿ; ನುಗ್ಗಿತ್ತೋಡಿ
ಮತ್ತೆ ದಟ್ಟಡವಿಯಂ. ಮೈಗಂಟಿದೊದ್ದೆಯಿಂ
ರಾಮನಟ್ಟಿದನು ಪೌರುಷ ರೋಷವೇಗದಿಂ.
ಓಡಿದನು ಮಾರೀಚನಟ್ಟಿದನು ದಾಶರಥಿ;
ಮುಟ್ಟಿದರು ನೀರದಾಕೃತಿವೆತ್ತ ಪುಷ್ಪಕಜಮಂ
ಛಾಯಾ ವಲಯ ನೇಮಿಯಂ. ದಾಂಟಿದುದೆ ತಡಂ
ಕಾಂತಿ ಸುರಿದುದು ಸೂರ್ಯನಾಃ ರಕ್ಕಸಂ ಬೆಚ್ಚಿ
ಒಳಸೋರುತಲ್ಲಿಂ ತಿರಿಕ್ಕನೆ ಪೆಡಂಚಿಮ್ಮಿ
ನೆಗೆಯುತಿರೆ ಕರ್ನೆಳಲ ಮರೆಗೆಳಸಿ, ರವಿವಂಶಜಂ
ಕಣೆಯನೆಳೆದನು ಕೈಗೆ; ಹೂಡಿದನದಂ ಹೆದೆಗೆ;
ವ್ಯಾಕರಣ ಛಂದಸ್ಸಲಂಕಾರ ಸೂತ್ರಂಗಳಿಂ
ಕಬ್ಬವೆಣ್ಣಂ ಕಟ್ಟುವೆಗ್ಗತನಮಂ ಬಿಟ್ಟು
ಹೃದಯದಾವೇಶಮನೆ ನೆಚ್ಚುವ ಮಹಾಕವಿಯ
ಮಾರ್ಗದಿಂ, ಮಾರ್ಗಣವನೆಚ್ಚನೇಣನ ಮೆಯ್ಗೆ,
ಗೋಣ್ತೆರಿದು ಪಲವುರುಳುರುಳಿ ಬೀಳುವೋಲಂತೆ!
    ಶಾಶ್ವತವನರಿಯಲ್ಕೆ ನಶ್ವರದ ಹೃದಯಮಂ
ಭೇದಿಸುವ ಕವಿಯ ದರ್ಶನದಂತೆ, ಖರಶರಂ
ಛಿದ್ರಿಸಲ್ಕಾ ಕಿತವ ಪಶುಕಳೇಬರದಿಂದೆ

ಜಗುಳ್ದುದು ನಿಶಾಚರಾಕೃತಿ, ಮಿಥ್ಯೆ ಬಿರಿಯಲ್ಕೆ
ಸತ್ಯಂ ಪ್ರತ್ಯಕ್ಷಮಪ್ಪಂತೆವೋಲ್. ಕಣ್ ಬೆರ್ಚಿ
ನೋಡುತಿರಲಾಯ್ತು ಕಿವಿಯುಂ ಬೆರ್ಚುವಂತೆ: ''ಓ
ಲಕ್ಷ್ಮಣಾ! ಓ ಲಕ್ಷ್ಮಣಾ! ಓ ಲಕ್ಷ್ಮಣಾ, ಓ!''
ಎಂಬಾ ಮಹಾಧ್ವಾನಮಸುರನುಸಿರಿಂದುರ್ಕಿ
ರೋದಿಸಿತು. ಗಗನಗಿರಿವನ ಗುಹಾಮುಖಂಗಳಿಂ
ಪ್ರತಿರಣಿತಮಾಗಿ! ಧಿಗಿಲೆಂದುದೆದೆ ರಾಮಂಗೆ.
''ಓ! ಲಕ್ಷ್ಮಣಾ, ಲಕ್ಷ್ಮಣಾ, ಲಕ್ಷ್ಮಣಾ, ಓ!''
ಕೂಗನಾಲಿಸಿ ನಡುಗಿದಳ್ ಪೃಥ್ವಿ; ತರುಶಿಲಾ
ಗರ್ಭಂಗಳುಂ ತಲ್ಲಣಂಗೊಂಡುವಾ ಕರೆಯ
ಮೊರೆಗೇಳ್ದು; ನಿಲ್ಲಿಸಿದುವುಲಿಗಳಂ ಚಕಿತ ಖಗ
ಸಂಕುಲಂ; ಮಧ್ಯಾಹ್ನಮಾಲಿಸಿತು ನಿಶ್ಶಬ್ದ
ವಿಸ್ಮಯಭ್ರೂಮುದ್ರೆಯಿಂ; ಆ ತೆರೆತೆರೆಯ ನಡೆಯ
ದನಿಗುದುರೆ ಮುಟ್ಟಿತೆಲೆವನೆಗೆ, ನೆಗೆನೆಗೆದೋಡಿ
ಕೊನೆಗೆ: ಓ ಲಕ್ಷ್ಮಣಾ ಲಕ್ಷ್ಮಣಾ ಲಕ್ಷ್ಮಣಾ ಓ!
    ಪಗಲೆನಿತ್ತೇರ್ದೊಡಂ ಪೊಳ್ತೆನಿತೊ ಮೀರ್ದೊಡಂ
ಪಿಂತಿರುಗದಿರೆ ರಾಘವಂ, ಜಾನಕಿಗೆ ಚಿಂತೆ
ತೊಡಗಿದುದು. ನಾನಾ ದುರಂತಮಂ ನೆನೆನೆನೆದು
ವಿಹ್ವಲಿಸಿದುದು ಮನಂ ತನ್ನಿಚ್ಛೆಯಂ ಮೀರ್ದು.
ಮೈದುನಂಗರುಹಲಾರದೆ ತನ್ನ ಕುದಿಹಮಂ,
ನಿಶ್ಶಂಕಿ ವೀರನಾತನ ನಗೆಗೆ ನಾಣ್ಚೆಯುಂ,
ಮರೆಸಲಾರದೆ ತನ್ನೆರ್ದೆಯ ಭೀತಿಯಂ, ಭೀರು,
ಕೋಮಲೆ, ಅಬಲೆ, ಸೀತೆ ತಾನೆಲೆಮನೆಯ ಹೊರಗೊಳಗೆ
ನಿಂತಲ್ಲಿ ನಿಲ್ಲಲಾರದೆ ಹಿಂದು ಮುಂದಕ್ಕೆ
ಪರಿದಾಡುತೊಣಗು ತುಟಿಯಂ ಮತ್ತೆ ಮತ್ತೆಯುಂ
ನಾಲಗೆಯ ನೀರಿಂದೆ ಸವರಿಕೊಳುತಿರೆ, ಕಂಡು,
ಪಯಣದವಸರಕಾಗಿ ಪಿಂಡಿಗಟ್ಟುತ್ತಿರ್ದ
ಲಕ್ಷ್ಮಣಂ: ''ತವಕಿಸುವುದೇಕಿಂತು? ಬಿಟ್ಟದಂ
ಬಂದಪನೆ? ಪಿಡಿವನಲ್ಲದೊಡದರ ಚರ್ಮಮಂ
ತಂದಪನ್ ಕೊಂದಾದೊಡಂ. ಪಿಡಿವ ಸಾಹಸದಿ
ತೊಡಗಿರ್ಪನೆಂದೆ ತೋರ್ಪುದು. ಕೊಂದು ತರ್ಪುದಕೆ

ಪೊಳ್ತಿನಿತ್ತೇತಕಣ್ಣನ ಬಾಣವೇಗಕ್ಕೆ?''
ಎನುತ್ತೆ ಕೈಗಜ್ಜಮಂ ಮುಂಬರಿಸಿದನು ಮತ್ತೆ
ಪಿಂಡಿಗಟ್ಟುತ್ತೆ. ಲಕ್ಷ್ಮಣನೆಂದುದಕೆ ಮರಳಿ
ನುಡಿಯದೆಯೆ, ನಡೆಯುತೆಲೆವನೆಯಂಗಳಕ್ಕಲ್ಲಿ
ನಿಂದಳು ಧರಣಿಜಾತೆ. ನೋಡಿದಳು ಕಾತರಿಸಿ
ಪಳುವನಿನಿಯಂ ಪೊಕ್ಕ ದೆಸೆಯ ಬನವಟ್ಟೆಯಂ:
ದಟ್ಟಯಿಸಿದಡವಿಮಲೆ ದೂರಕಲೆಯಲೆಯಾಗಿ
ಪರ್ವಿರ್ದುದಕ್ಷಿಯಲೆವನ್ನೆಗಂ. ಗಗನದೊಳ್
ನಿಂದಿರ್ದುದಾ ಮುಗಿಲ್ಬಿತ್ತರಂ, ನೇಸರ್ಗೆ
ಕಣ್‌ಕಟ್ಟಿದಂತೆ. ಆ ಮ್ಲಾನ ಮಧ್ಯಾಹ್ನದಾ
ಮೌನ ಭಾರಕ್ಕೇದುತಿರೆ ಖಿನ್ನಮುಖಿಯಾಗಿ
ಶ್ರೀರಾಮಭಾರ್ಯೆ, ನಿಶ್ಶಬ್ದತಾ ನಿದ್ರೆಯಂ
ಹರಿದು ಹೊಡೆದೆಬ್ಬಿಪೋಲೆದ್ದುದೊಂದೋವೋ ಸದ್ದು,
ಕಾಡೊರಲ್ದವೋಲ್: ''ಓ ಲಕ್ಷ್ಮಣಾ! ಓ ಲಕ್ಷ್ಮಣಾ!
ಓ ಲಕ್ಷ್ಮಣಾ ಓ!'' ಎಂದು ಲೋಕಶೋಕವನೆಲ್ಲ
ಕರೆವಂತೆ ಸಂಪ್ಲವಿಸಿತಾ ರೋದನಂ, ವಿಪಿನಜಂ
ಬಹುದೂರದಾ!
                    ಬೆಚ್ಚಿದಳ್; ಬೆವರಿದಳ್; ಹಲುಬಿದಳ್;
ಹಾರಿ ಹಮ್ಮೈಸಿದಳು ಸೀತೆ. ಮೈದುನನೆಡೆಗೆ
ತತ್ತರಿಸುತಿರೆ, ಕಂಡಳಾತನಂ, ಬಾಗಿಲಿಂ
ಪೊರಮಡುತ್ತಿರ್ದನಂ. ಸನ್ನೆಯಿಂ ಕೆಮ್ಮನಿಸಿ,
ಕಿವಿಗೊಟ್ಟನಾತನುಂ. ಕೇಳ್ದರಾಯಿರ್ವರುಂ
ನೀಳ್ದ ಗೋಳ್ದನಿಯನೋ ಲಕ್ಷ್ಮಣೋ ಲಕ್ಷ್ಮಣೋ
ಲಕ್ಷ್ಮಣೋ ಎಂದಲೆದುದಂ. ಕೇಳ್ದಂಗೆ ಲಕ್ಷ್ಮಣಗೆ
ಮುಖವಿಸ್ಮಯಂ ಮಾಣ್ದು ಮೆಯ್ದೋರುತಿರಲೊಂದು
ಮಂದಸ್ಮಿತಂ, ಭೀತಿ ಬೆಳ್ಪಂ ಬಡಿದ ಮೊಗದ
ಮೈಥಿಲಿ ಗದ್ಗದಿಸಿ ನುಡಿದಳಿಂತು: ''ಅಯ್ಯಯ್ಯೊ
ಕೆಟ್ಟೆನಯ್, ಲಕ್ಷ್ಮಣಾ! ಕೇಡಾಯ್ತು ಆರ್ಯಂಗೆ!
ಓಡು, ನಡೆ! ನಡೆ ಬೇಗ! ನೆರವಾಗು, ನಡೆ, ಹೋಗು
ರಾಘವಂಗೇನಾಯ್ತೊ ಕಾಣೆನಾನಯ್ಯಯ್ಯೊ!''
ಅತ್ತಿಗೆಯ ದುಃಸ್ಥಿತಿಗಿನಿತು ಕಿನಿಸಿ ಮೈದುನಂ:

“ತಾಳ್ಮೆ, ತಾಯೀ, ತಾಳ್ಮೆ. ರಕ್ಕಸನಸುರ ಮಾಯೆ
ಕೂಗುತಿದೆ; ಅಗ್ರಜಧ್ವನಿ ಅದಲ್ತು. ಭ್ರಾಂತಿಯಿಂ
ನಡೆಯದಿರಿತರೆಯಂತೆ.” “ಅಯ್ಯಯ್ಯೊ, ಆಲಿಸದೊ;
ನಿನ್ನಣ್ಣನುಲಿಹವೆ ದಿಟಂ. ನಿನ್ನನೆ ಪೆಸರ್ವಿಡಿದೆ
ಕೂಗುತಿಹುದಾಲಿಸಾ! ಕಿವಿಗೆಟ್ಟುದೇಂ; ನಿನಗೆ
ಮತಿಗೆಟ್ಟುದೇಂ? ಓಡು ನೆರವಾಗು, ನಡೆ, ಹೋಗು;
ದಮ್ಮಯ್ಯ, ಹೋಗು!” “ಅಣ್ಣನ ಆಜ್ಞೆ. ನಿಮ್ಮಡಿಯ
ರಕ್ಷಣೆಗೆ ನನ್ನನಿಲ್ಲಿಟ್ಟು ಹೋಗಿಹನದಂ
ಮೀರಿ ನಡೆಯಲ್ಕೆನಗೆ ಬಾರದು ಮನಂ.” “ಕರುಳೆನಗೆ
ಬೇಯುತಿಹುದೆನ್ನಾತ್ಮ ಸೀಯುತಿಹುದಯ್ಯಯ್ಯೊ
ದಮ್ಮಯ್ಯ, ಲಕ್ಷ್ಮಣಾ, ಕಾಲ್ವಿಡಿವೆನೋಡು ನಡೆ;
ರಕ್ಷಿಸೆನ್ನಿನಿಯನಂ, ಪ್ರಾಣಸರ್ವಸ್ವನಂ,
ಕೌಸಲೆಯ ಕಂದನಂ, ಕೋಸಲಾನಂದನಂ,
ನಿನ್ನಣ್ಣನಂ!” ಸಿಟ್ಟುರಿದುದೂರ್ಮಿಳೇಶನಿಗೆ.
“ಹೆಣ್ಣಿನ ಹಣೆಯ ಬರಹಮಿಂತುಟೆ ವಲಂ!” ಎನುತೆ
ತನ್ನೊಳಗೆ ತಾನಾಡಿಕೊಂಡು, ನುಡಿದನು ಮರಳಿ
ಸಂತೈಕೆಯಂ: “ದೇವಿ, ರಾಮನಪ್ರಾಕೃತಂ!
ರಾಮನಕ್ಷಯ ಮಹಿಮಸಾತಂಗೆ ಪೇಳೆಣೆಯೆ
ದೇವರ್ಕಳುಂ? ದನುಜರಾವ ಹೊಯಿಕೈ? ತಮ್ಮ
ನಿಧಿಯ ಬೆಲೆ ತಮಗರಿಯದವರವೋಲಾಡುವಿರಿ!
ಸಾಲ್ಗುಮೀ ಕಳವಳಂ; ಮಾಣ್ಬುದಾಶಂಕೆಯಂ;
ಬಿಡಿಮನ್ನೆಯದ ಭೀತಿಯಂ.” ಎನುತ್ತಿರೆ ಮತ್ತೆ
ಚೀರ್ದುದಾ ನೀಳುದನಿ ಕೇಳ್ದಿರ್ದಸೀಳುವಂತೆ: “ಓ
ಲಕ್ಷ್ಮಣಾ! ಓ ಲಕ್ಷ್ಮಣಾ! ಓ ಲಕ್ಷ್ಮಣಾ ಓ!”
  ಕೇಳ್ದದಂ ಲಕ್ಷ್ಮಣನೆ ಬೆಬ್ಬಳಿಸಿದನೆನಲ್ಕೆ
ಸೀತೆಗಿನ್ ಗತಿಯುಂಟೆ? ಮತಿಯುಂಟೆ? ಹಾಯೆನುತೆ
ಹೌಹಾರಿ ಹಮ್ಮೈಸಿದಳು; ಹೆಪ್ಪುಗಟ್ಟಿದುದೊ
ಮೆಯ್ ನೆತ್ತರೆನಲು ನಿಂದಳು ಮರಂಬಟ್ಟವೋಲ್;
ಮರಳಿ ಸಂಜ್ಞಾಲಬ್ಧೆಯಾಗಿಯುಂ, ಕಣ್ಕೆರಳಿ,
ವಿಕಟಮುಖಿಯಾವಿಷ್ಟೆಯಾಗಿ, ಭೂತಿನಿಯಂತೆ
ಸೌಮಿತ್ರಿಯಂ ನೋಡಿ: “ಭ್ರಾತೃಘಾತಕ ಪಾಪಿ,

ಸಾಯಿ, ನಡೆ, ತೊಲಗು ಕಣ್ಬೊಲದಿಂ! ಸುಮಿತ್ರಾತ್ಮ
ಜಾತ ಪಾತಕವೊ ನೀಂ! ಗೋಮುಖವ್ಯಾಘ್ರನೊಲ್
ಬಂದೆಯೆಮ್ಮೊಡಗೂಡಿ, ಪೂರ್ವಜನ್ಮದ ಪಾಪದಾ
ಕರ್ಮಪಾಕಂ ಬರ್ಪವೋಲ್!'' ಎನುತ್ತಿರೆ ಸೀತೆ,
ಮುಂದೆ ಮಾತಾಡಲೀಯದೆ ಸದೃಢಬುದ್ಧಿಯಿಂ
ರಾಮಾನುಜಂ: ''ಸಾಲ್ಗುಮೀ ನಿಂದೆ, ರಾಜರ್ಷಿ
ಜನಕಸುತೆ!'' ಎನುತಾಕೆಯಂ ದುರದುರನೆ ನೋಡಿ
ನಿಡುಸುಯ್ಲ್ವೊಯ್ಲಿಂದಮೇದುತಿರಲೆರ್ದೆಯಳ್ಳೆ:
''ನೀಮಣ್ಣನಂ ಪ್ರೀತಿಸುವ ಮೊದಲೆ ಪ್ರೀತಿಸಿದೆ
ನಾನಾತನಂ! ಪೊಲ್ಲನುಡಿಗೆಡೆಗೊಟ್ಟರೀಗಳಾ
ಬಳಿಕ್ಕೆ ನೀಂ ನೋವನುಣ್ಬರಿ...'' ''ಎಲವೊ ಲಕ್ಷ್ಮಣಾ,
ಎಳೆಯ ಮುಳ್ ಚುಚ್ಚಲ್ಕೆ ನೋವಲ್ತದುವೆ ಮೆಚ್ಚು;
ಬೆಳೆದರಾ ಮುಳ್, ಅದರ ಕಚ್ಚು ಮುತ್ತಹುದೆ ಪೇಳ್?
ಎಳೆಯ ಕರು ಬೆಳೆದ ಮೇಲದರ ತಾಯನೆ ಬೆದೆಗೆ
ಬಯಸಿದಪುದಯ್ಯೊ!...ಮನದನ್ನ, ನಿನ್ನಂ ನಾನೆ
ಕೊಲಿಸಿದೆನೆ? ತನ್ನೈದೆದಾಳಿಯಂ ತನ್ನ ಕಯ್
ಕಿತ್ತೆಸೆದುದಯ್ಯಯ್ಯೊ!'' ಬಾಯ್ಬಡಿದುಕೊಳ್ವಳಂ
ಮತಿವಿಕಲೆಯಂ ಕಂಡು ತತ್ತರಿಸಿದುದು ಬುದ್ಧಿ
ಲಕ್ಷ್ಮಣಗೆ. ಹಾ ಬೇರ್ಗೊಯ್ದುದತ್ತಿಗೆಯ ಬಾಯ್ಗತ್ತಿ
ಊರ್ಮಿಳಾ ಪ್ರಿಯನ ನಿಶ್ಚಲತೆಯಂ! ''ಪೆಣ್ತನದ
ಕಲ್ತನಕ್ಕೆಲ್ಲಿ ಮೇಣೆಣೆಯುಂಟೆ?—ಹೆ ದೇವಿ,
ಹೇ ಮಾತೆ, ಮನ್ನಿಸೆನ್ನಂ. ರಾಮನಾಣೆಯಂ
ಮೀರಲಾರದೆ ಪೇಳ್ದೆನಾದೊಡಂ, ನಿಮ್ಮಾಣೆ!
ಹೋಗಿ ಬರುವೆನು ಬೇಗದಿಂ; ನಡೆಯಿಮೆಲೆವನೆಗೆ!''
ಹಿಂದುಹಿಂದಕೆ ನೋಡುತೋಡಿದನ್. ಕಾಡಿನೊಳ್
ಮರೆಯಾಯ್ತು ಮೈದುನನ ಮೂರ್ತಿ. ಏಕಾಂತಮಂ
ನೆನೆದು ತನು ಕಂಪಿಸಿತು ಜಾನಕಿಗೆ. ನಿಂದಳಾ
ಮುಳ್ಳುಬೇಲಿಯ ತಡಬೆಯಂ ನೆಮ್ಮಿ, ಶೂನ್ಯಮಂ
ತನ್ನ ಬಾಳಡವಿವಟ್ಟೆಯ ಪಾಳನೀಕ್ಷಿಸುವವೋಲ್!

ವ್ಯೋಮಗಸ್ಯಂದನದೊಳಡಗಿ ರಥಿ ರಾವಣಂ
ನೋಡಿದನು ಮನ್ಮಥ ಸತಿಯ ರತಿಯ ಹೆಗಲೆಣೆಯ

ದಶರಥ ಸುತನ ಸತಿಯನೋರ್ವಳಂ. ಚಾತಕಂ
ಮಳೆಗೆ ಕಾತರಿಪಂತೆ, ಸೀತೆಯ ಚೆಲುವನೀಂಟೆ
ತವಕಿಸಿತಸುರನಕ್ಷಿಪಕ್ಷಿ. ಬನದಿಳೆಗಿಳಿಯೆ
ಹವಣಿಸಿದಮರವೈರಿ ದಶಶಿರಂಗೇನಾಯ್ತೊ?
ತಾನೆಂದುಮನುಭವಿಸದೊಂದೇನೊ ಕಳವಳಂ
ಕ್ರಮಿಸಿದತ್ತಾಂತರ್ಯಮಂ: ಯತ್ನದಿಂದದಂ
ತುಳಿದೊತ್ತಿ, ನೆಲಕಿಳಿದನೊಂದು ಸುಟ್ಟುರೆಯಾಗಿ
ತಿರ್‍ರನೆ ಸುಳಿದು ಸುತ್ತಿ. ನೋಡಿದಳವನಿಜಾತೆ
ತನ್ನ ಕಣ್ಬೊಲದ ಕಾಡಿನೊಳಿದ್ದಕಿದ್ದಂತೆ
ತರಗೆಲೆಯ ಸದ್ದುಗೈದೆದ್ದನಿಲನೂರ್ಧ್ವಗಮ
ಸರ್ಪೋಪಮಾವರ್ತಮಂ. ಭೂತನರ್ತನಂ
ತಾನೆನಲ್ಕಾವರ್ತಿಸಿತು ಗಾಳಿ: ಕುಣಿದಿಲ್ಲಿ,
ನೆಗೆದಲ್ಲಿ, ಹಾರುತ್ತಮೋಡುತ್ತಮಾಡುತಂ,
ನಿಲುತೊಮ್ಮೆ ಹೆಡೆಯೆತ್ತಿ ನಾಗರದವೋಲಾಡಿ,
ಮತ್ತೊಮ್ಮೆ ನಡುಬಳುಕಿ ನಟಿಯಂತೆವೋಲಾಡಿ,
ಒಮ್ಮೆ ತುಂಬುರುಗೊಳ್ಳಿಯೆನೆ ಚಿಮ್ಮಿ, ಮತ್ತಂತೆ
ಗಣಬಂದವನ ತೆರದಿ ರಿಂಗಣಗುಣಿದು ಹೊಮ್ಮಿ
ರಯ್ಯನೊಯ್ಯನೆ ಹತ್ತೆ ಹರಿತಂದುದಾ ಗಾಳಿ,
ಸೀತೆಯೊಡಲಿನ ನಾಳನಾಳದಲಿ ಹೆದರಿಕೆಯ
ಚಳಿ ಹರಿಯುವಂತೆ. "ಏನಿದು ದುರ್ದಿನವೊ ನನಗೆ!"
ಎನುತೆನುತೆ ಜನಕಸುತೆ ಎಲೆವನೆಯನೊಳವೋಗೆ
ಬಾಗಿಲಿಗೆ ನಡೆದಳಾಗಳೆ ಪಜ್ಜೆಸಪ್ಪುಳಂ
ಕೇಳ್ದವೋಲಾಗಿ ತಿರುಗಿದಳಯ್ಯೊ ತನ್ನವರೆ
ಬಂದರೆಂಬೊಂದತಿಯ ಹರ್ಷಧೃತಿಯಿಂದೆ: ಹಾ
ಕಂಡಳಿನ್ನೊರ್ವನಂ, ಸುಪವಿತ್ರವೇಷನಂ,
ಮುನಿವರ್ಯನಾ!

ಜಟಾಧಾರಿಯಂ ಕಾವಿಯಂ
ಕಂಡೊಡನೆ ಮನಕೆ ನೆಮ್ಮದಿಯಾಗಿ, ಚಂದ್ರಮುಖಿ
ನಿಂತು ಸಂವೀಕ್ಷಿಸಿದಳಾ ತನ್ನೆಡೆಗೆ ಬರ್ಪ
ಸನ್ಯಾಸಿಯಂ. ಮತ್ತಮೊಡನೆಯೆ ಭಯಾಶಂಕೆ
ತಗುಳಿದತ್ತಾತ್ಮಕ್ಕೆ: ಗರ್ವಮಯಮಾ ನಡೆಗೆ

ಯತಿ ಗತಿ ವಿನಯಮಿಲ್ಲ; ಮುನಿಯ ನಿಲುವಿನ ಭಂಗಿ ತಾಂ
ನೃಪದರ್ಪ ಸಂಗಿ; ಕೊಡೆಯುಂ ಕಮಂಡಲುಮೇಕೊ
ಪರಿಚಿತ ಪದಾರ್ಥಂಗಳಂತಿಲ್ಲ; ಅಪರಿಚಿತನ್
ಆ ಮುನಿ ಜನಸ್ಥಾನದವನಲ್ಲ! ನೋಡುತಿರೆ
ಬಳಿಸಾರ್ದನುಣುಗೋಲ್ಗಳಂ ಕೆಲಕ್ಕೊತ್ತರಿಸಿ
ದಾಂಟಿದನೊಳಗೆ ಬೇಲಿಯಂ. ಮಂತ್ರಘೋಷಮಂ
ತೊಡಗಿದನ್. ಗೀರ್ವಾಣಭಾಷೆಯೊಳೆ ಸ್ವಸ್ತಿಯಂ
ವಾಚಿಸಿದನೋಂಕಾರವೆರಸಿ. ಬಕಧ್ಯಾನಮಂ
ನಿಂದಿಪೋಲಲ್ಲೆ ನಿಂದನು, ಬಗೆಯ ಬಾವಿಯಂ
ರೆಪ್ಪೆವುಲ್ಲಿಂದಡಕಿ ಮುಚ್ಚಿ.—ಏನಿದು ಕಮ್ಪು
ಯತಿಗುಚಿತಮಲ್ಲದುದು? ಎಂದು ಸಂಶಯಭೀತೆ
ಸುತ್ತೆತ್ತಲುಂ ನೋಡಿ ಪೆಳ್ಪಳಿಸುತಿರೆ ಸೀತೆ,
ಕಣ್ದೆರೆದನಾ ರಸಿಕ ರಾಕ್ಷಸಂ. ಪರವಧೂ
ಪ್ರೇಮಿ ಆ ಚೆಲ್ವಿಯಂ ನೋಡಿದನು, ನೋಟದಿಂ
ಬೇಟಮಂ ಸಾರ್ವವೋಲ್, ಪೀರ್ವವೋಲ್. ಆ ಕಣ್ಗೆ
ನಡನಡನೆ ನಡುಗಿ, ಮರವಟ್ಟಂತೆ, ನಟ್ಟಂತೆ,
ತಾಂ ನಟ್ಟು ನಡಪಿದಾ ಬಳ್ಳಿಯನಿರದೆ ನೆಮ್ಮಿ
ತಳ್ಕಯಿಸಿ ನಿಂದಳು ಲತಾಂಗಿ.
ನಿಂತುದು ಗಾಳಿ
ಬೆದರಿ. ಗೋದಾವರಿಯ ಹೊನಲ ನಡೆ ಹೆಪ್ಪಾಯ್ತು.
ಚಲನೆಗಳನುಡುಗಿದುವು ಮರಬಳ್ಳಿಗಳ್. ಖಗಗಳಿಗೆ
ಮಳ್ಗಿದತ್ತಿಂಚರಂ. ಪರ್ವತಾರಣ್ಯಗಳ್
ಸ್ತಬ್ಧಮಾದುವು ರೌದ್ರಮಾ ದೈತ್ಯ ದೃಷ್ಟಿಯ ಭೀತಿ
ಬಡಿದಂತೆ. ನಿಂದಳಯ್ ಪ್ರಕೃತಿ ತಾಂ ಜನಕಜಾ
ಹೃತ್ಕೃತಿಯೆನಲ್ ಪ್ರತಿಯೆನಲ್ ಚೇತನಂಗೆಟ್ಟು!
"ಬೆದರಿದೋಲಿದೆ ಭದ್ರೆ, ನಿನ್ನಂಗಮುದ್ರೆ. ಭಯಂ
ನಿಷ್ಕಾರಣಂ. ಮಂಗಳಾಂಗಿ, (ನವನೀತ ನವ
ಕೋಮಲಾಂಗಿಯೆನಲ್ಕೆ ನನ್ನುಡೆಯದೊಂದೆ ತಡೆ!)
ನಿನ್ನವೋಲತನು ಮೋಹನ ನಿತಂಬಿನಿಯಿಂತು
ನಿರ್ಜನಾಟವಿಯೊಳೆಂತೊರ್ವಳೆಯೆ ಬರ್ದುಕುತಿಹೆ?
ರಕ್ಷೆಯಿಲ್ಲವೆ ನಿನಗೆ?..." ಕಪಟವನರಿತು ಸುದತಿ

''ಅಕಟಕಟ ಕೆಟ್ಟೆನಿವನಾರೊ ಮಾಯಾವಿ ಯತಿ!
ಕೆಟ್ಟುದನೆಣಿಸಿ ಬಂದಿಹನು ದಿಟಂ. ಪತಿಯೊಡನೆ
ಮೈದುನಂ ಬರ್ಪನ್ನೆವರಮೀತನಂ ನುಡಿಯ
ನೆವವೊಡ್ಡಿ ತಡೆದಪೆನದುವೆ ನೀತಿ!'' ಬಗೆದಿಂತು
ನಗೆಗೂಡಿ ನುಡಿದೋರಿದಳು, ರಾವಣನ ಮನಕೆ
ರಾಗಮುರ್ಕನುರಾಗದೋಕುಳಿಯೆರಚುವಂತೆ.
''ಸಂಕಟದ ಸಮಯಕ್ಕೆ ಬಂಧುವೋಲೈತಂದೆ,
ಯತಿವರ್ಯ. ರಾಜರ್ಷಿ ಜನಕಂಗೆ ಕುವರಿಯಾಂ;
ಸೊಸೆ ದಶರಥಂಗೆ.'' ಎಂದಿಂತು ಮೊದಲಾಗಿ ತಾಂ
ಬನಕೆ ಬಂದಾ ಕಥೆಯನಾದ್ಯಂತವಾಗೊರೆಯ
ತೊಡಗಿದಳು. ನಡುನಡುವೆಯಡಿಗಡಿಗೆ ಕಣ್ಬೆರ್ಚಿ
ಹಾದಿನೋಡುತ್ತಿರ್ದಳಯ್ ಕಾಡುದಾರಿಯಂ,
ಕೈತವಕ್ಕುಚಿತವಲ್ಲದವೋಲೆ, ಕವಡರಿಯದಾ
ಮುಗುದೆ ಬಾಲೆ. ತಿಳಿದದಂ ಮುಗ್ಧೆಯಾ ತಂತ್ರಮಂ
ಮುಗುಳುನಗೆ ನಕ್ಕನು ವಿದಗ್ಧಲಂಕೇಶ್ವರಂ.
ಕಾಲವಂಚನ ಚಂಚಲಾಕೇಕರಾಕ್ಷಿಯಂ
ಕುರಿತೆಂದನಿಂತುಃ ''ಏಣಾಕ್ಷಿ, ನಿನ್ನನ್ನರಂ
ವಂಚಿಪುದುಚಿತಮಲ್ತು. ನಿನಗಮೀ ಕೀಲಣೆ
ತಗದು ರಮಣಿ. ನಾಂ ಲಂಕೆಗಧಿಪಂ; ದಶಗ್ರೀವ
ಬಿರುದುವೊತ್ತಂ; ನೆಗಳ್ದ ರಾವಣಂ; ದಶರಥನ
ಸುತನಿಗಿಂ ಮೊದಲೆ ನಿನ್ನಂ ಮೆಚ್ಚಿ ಬಂದವಂ!
ಬಿಲ್ಮುರಿವ ಬಲ್ಮೆಯಂ ಪಡೆದು ಬರ್ಪನಿತರೊಳೆ
ನಿನ್ನ ಪಿತೃವಿಂದೆ ವಂಚಿತನಾದೆನಲ್ಲದಿರೆ,
ಜನಕಸುತೆ, ನೀನಿಂದರಸಿಯೆನಗೆ! ನನ್ನಳಂ,
ಮೋಸದಿಂ ರಾಮನೊಯ್ದೆನ್ನಾಕೆಯಂ, ಮರಳಿ
ನಾನುಯ್ಯಲೈತಂದಿಹೆನು, ಸೀತೆ ಭಿಕ್ಷುಕಂ
ವೇಷದೊಳುಮಾವೇಶದೊಳುಮಾಂ; ನಿತಂಬಿನಿಯೆ,
ಕೃಪೆಗೈದೆನಗೆ ಲಂಕೆಗೆನ್ನೊಡನೆ ಬಾ. ಮರೆವೆ ನೀಂ
ರಾಮನಂ ಮರುದಿನಮೆ!''
ಇಂತೆಂದು ದಶಶಿರಂ
ತೋರಿದನು ಲೋಕವೈಭವಮೆಲ್ಲ ಮೆಯ್ವೊತ್ತ

ನಿಜರೂಪಮಂ. ಪೇಸಿ ಮೊಗದಿರುಹಿದಳು ಯುವತಿ.
ಭೀತಿ ಮರೆಯಾಯಿತುರಿದುದು ಕೋಪನಜ್ವಾಲೆ
ಪಾರ್ಥಿವಾಂಗನೆಗೆ:
“ಮಾಣ್, ಆಡದಿರಸಹ್ಯಮಂ,
ನಿಶಾಚರ ಕುಲೇಶ್ವರ. ಸೊಲ್ಲದಿರಧರ್ಮಮಂ,
ಕೋಣಪ ಕುಲಕುಠಾರ. ಸ್ವಾನಮೈರಾವತಕೆ
ಮಲೆವವೋಲೆನ್ನ ಮನದನ್ನಂಗೆ ಕರುಬುತಿಹೆ
ನೀನ್. ಲೇಪಿಸಿದ ಜೇನಿನಾಸೆಗಸಿಧಾರೆಯಂ
ನೆಕ್ಕಲೆಳಸುತಿಹೆ. ಕಾಮಿಸಿದೆ ನರಿ ಕೇಸರಿಯ
ಪೆಣ್ಗೆ; ನವಿಲಿನ ಸಂಗಸುಖಕೆಳಸುತಿದೆ ಹದ್ದು.
ಪೊನ್ನೆನ್ನ ಮನದನ್ನನಯ್; ನೀನೊ ಕಬ್ಬುನಂ.
ಶ್ರೀಗಂಧದನುಲೇಪನಕ್ಕೆಣೆ ರಘೂದ್ವಹಂ;
ಹೊಲಗೆಸರಿಗೆಣೆ ನೀನ್!”
ತಿರಸ್ಕೃತಿಯ ಕೈದುವಂ
ಸಮ್ಮಾರ್ಜನಂಗೆಯ್ಯುತಿರ್ದೊಡಂ ನಡನಡನೆ
ನಡುಗುತಿರ್ದಾ ಬೆಚ್ಚುಗಣ್ಣಬಲೆಯಂ ಹುಬ್ಬು
ಗಂಟಿಕ್ಕಿ ನೋಡಿದನ್ ಸಂರಕ್ತಲೋಚನ
ನಿಶಾಚರೇಂದ್ರಂ: “ಮಾಣ್, ಎಲೌ ಮುಗ್ಧೆ, ಸಾಲ್ಗುಮಾ
ನಿನ್ನ ಉಪಮಾ ಪ್ರತಾಪಂ! ಪೆಣ್ಗೆ ಬೈಗುಳಮಲ್ತೆ
ಪೇಳ್ ವಿಕ್ರಮಂ? ಚುಂಬನಕ್ಕೆಣೆ ಉಪಾಲಂಭಮುಂ
ಪ್ರಣಯಪ್ರಸಂಗದೊಳೆನಲ್ಕೆ, ವರವರ್ಣಿನಿಯೆ,
ಮುನಿಯೆನಾಂ ನಿನ್ನ ಕೊರಳಿನ ಸುಧೆಯ ಗರಳಕ್ಕೆ.
ನಲ್ಲೆಯೊಪ್ಪಿಗೆ ‘ಒಲ್ಲೆ’–ಎಂಬ ನಾಣ್ನುಡಿಯಂತೆ,
ನಿನ್ನ ತುಟಿ ನಿನ್ನೆರ್ದೆಯನಾಡುತಿರ್ಪುದು, ನಟಿಸಿ
ನಿಂದೆಯಂ ಬೇಟಕೆ ಬಲಾತ್ಕಾರಮೋರೊರ್ಮೆ
ಇಷ್ಟಸತ್ಕಾರಮೆಂಬರೆಲೆ ಯೌವಲಾವಣ್ಯೆ.
ವಂದಿಸುವೆ ನೀನೆನ್ನನೀ ದಿನದ ಕೃತಿಗಾಗಿ
ಮುಂದೆ. ಬಾ, ನನ್ನ ಲಂಕಾಲಕ್ಷ್ಮಿ, ಬಾ!” ಎನುತೆ
ಪಾಪಕೆ ಲಸತ್ಕೃತಿಯ ಲೇಪಮಂ ಬಳಿಯುತಾ
ಮಾಯಾವಿ ಚಪ್ಪಳಿಸಿದನ್ ಕೈಗೆ ಕಯ್ ತಟ್ಟಿ! ಪೇಳ್
ಏನೆಂಬೆನದ್ಭುತಂ? ಕೈಕುಟ್ಟಿದುದೆ ತಡಂ

ಪುಟ್ಟಿದತ್ತೊಂದು ಮಂಜಿನ ಮೋಡಮೆತ್ತಲುಂ
ದಟ್ಟೈಸಿ. ತೇಲುಗಣ್ಣಾದುದಾ ಕೋಮಲೆಗೆ.
ಕಾಣದೇನೊಂದುಮಂ ತಬ್ಬಿದಳು ಬೆಬ್ಬಳಿಸಿ
ಪರ್ಣಶಾಲೆಯ ಲತಾಭಗಿನಿಯಂ! ಹೇ ಹತಭಾಗ್ಯೆ,
ಲಕ್ಷ್ಮಣ ಮಹಾಬಾಹು ರಕ್ಷೆಯಂ ನೂಂಕಿದಾ
ನಿನಗೆ ಪೇಳೆಂತು ರಕ್ಷಣೆ ಬಳ್ಳಿತೋಳಯ್ಯೊ
ಕೈಲಾಸಮಂ ನೆಗಹಿ ತೂಗಿತೊನೆದಾ ಬಾಹು
ರಾಹುವೋಲೆಳೆಯೆ? ಪರಪರಪರನೆ ಪರಿದುವಾ
ಮಾಡನಪ್ಪಿರ್ದ ಬಳ್ಳಿಯ ಕೈಗಳೊಲ್ಮೆಯಂ
ನಲ್ಮೆಯಪ್ಪುಗೆಯಿಂದೆ ಬಿರುಬಿಂದಗಲ್ಚುವೋಲ್.
ಬಳ್ಳಿಯಪ್ಪಿದ ಬಳ್ಳಿಯಂ ಮತ್ತ ವಾರಣಂ
ಸೊಂಡಿಲಿಂದೆಳೆವವೋಲ್ ಅಲರ್ವಳ್ಳಿಯಂ ವೆರಸಿ
ಮತ್ತಕಾಶಿನಿಯನೆಳೆದುನ್ಮತ್ತ ರಾವಣಂ
ನೆಗೆದನಂಬರಕೆ. ಬಿಳ್ದುದು ಬಳ್ಳಿಯಂಗಳಕೆ,
ಮುಳುವೇಲಿಯುಂ ಬರಂ ನೀಳ್ದು!
"ಓ ಲಕ್ಷ್ಮಣಾ!
ಲಕ್ಷ್ಮಣಾ! ಲಕ್ಷ್ಮಣಾ! ಲಕ್ಷ್ಮಣಾ ಓ!" ಎಂದೆಂದು
ಬಗ್ಗನಿಂ ಪಿಡಿಗೊಂಡೆರಳೆವೆಣ್ಣೊರಲ್‌ವಂತೆವೋಲ್
ಹೊಮ್ಮಿತುಕ್ಕಿತು ಹರಿದು ಹಬ್ಬಿತಾಕ್ರಂದನಂ
ದೇವಿಯ ಕೊರಲ್‌ಬುಗ್ಗೆಯಿಂ ನೆತ್ತರೋಲಂತೆ
ಚಿಮ್ಮಿ. ಲೆಕ್ಕಿಪನೆ ಲಂಕೇಶ್ವರಂ? ಝುಗಝುಗಿಪ
ಕೆಂಡದುರಿಚೆಲ್ವಿಗೆ ಮರುಳುಗೊಳುತ್ತದನೋತು
ಸೆರಗಿನೊಳಿರುಂಕಿ ಕದ್ದೋಡುವಣುಗಿಯ ತೆರದಿ
ಹಾರಿದನು ಬಾನ್ದೇರನೇರಿ. ಬಿಸಿಲೆಸೆದತ್ತು
ಪಂಚವಟಿ ಧಾತ್ರಿಯಂ ಪರ್ಣಕುಟಿ ಶೂನ್ಯಮಂ
ಗೋದಾವರಿಯ ತೀರ್ಥವೈಶಾಲ್ಯಮಂ ಮರಳಿ
ಬೆಳಗಿ.
ಕೇಳ್ದಳ್ ವಿಪಿನವನಿತೆ; ಖಳ ಕಾರ್ಯಮಂ
ಕಂಡು ಹಮ್ಮೈಸಿದಳ್; ಹೆದರಿ ದಿಗ್ಭ್ರಮೆಯಾಗಿ
ಕೂಗಿದಳದ್ರಿದೇವನಂ. ಪರ್ವತೇಂದ್ರನುಂ
ತಲ್ಲಣಿಸಿ ಬೊಬ್ಬೆಯಿಟ್ಟಬ್ಬರಿಸಿದನ್; ಕೂಗಿ

ಕರೆದನಾಕಾಶಮನಖಿಲಲೋಕಸಾಕ್ಷಿಯಂ.
ಕೂಗಿದುವು ಕಾಡು ಮಲೆ ಬಾನೆಲ್ಲಮೊಕ್ಕೊರಲ್
ಓ ಲಕ್ಷ್ಮಣಾ ಲಕ್ಷ್ಮಣಾ ಲಕ್ಷ್ಮಣಾ ಓಓ
ಓ ಎಂದು! ಕೇಳಿದನು ದೂರದ ಮರದ ಮಂಚದೊಳ್
ಹಗಲುನಿದ್ದೆಯೊಳಿದ್ದುಮೆದ್ದಾ ಜಟಾಯು ಆ
ಪ್ರಕೃತಿ ರೋದನ ತೂರ್ಯಮಂ. ಕುಳಿತ ಪೆರ್ಮರಂ
ನಡುಗೆ, ಪಕ್ಷಧ್ವನಿಗೆ ಗಿರಿಗಹ್ವರಂ ಗುಡುಗೆ,
ಚೀರ್ದನಿಗೆ ಮಾರ್ದನಿಸೆ ಪುಷ್ಪಕಾಭ್ಯಂತರಂ
ಹಾರಿದನು ಭೀಮಚಂಚೂಪುಟಂ ಭಯಂಕರಂ:
ಖಗರಥವನರೆಯಟ್ಟಿದನ್ ಭೀಷಣಾಭೀಳ ಖರ
ನಖ ಕಲಿ ಜಟಾಯು! ಬಿರುಗಾಳಿಯುರುಬೇಗದಿಂ
ಬೆಂಬತ್ತಿ, ಮುಂಚುವ ವಿಮಾನಮಂ ಮುಸಲಸಮ
ಪದಗದಾಘಾತದಿಂದಪ್ಪಳಿಸಿದನ್, ರಪ್ಪ
ರಪ್ಪನೆ, ಒರ್ಮೆ ಇರ್ಮೆ: ಒದೆ ಬೀಳಲೊರಲಿದುದೊ
ಪುಷ್ಪಕಮೆನಲ್ಕೆ ಘೈಲೆಂದುದೊರ್ಮೊದಲುಲಿದ
ಲಘುಘಂಟಿಕಾ ಶ್ರೇಣಿ. ಎರಗಿದುರುಬೆಗೆ ತೇರ್
ತತ್ತರಿಸಿ ಉಲ್ಲೋಲಿಸಿತು; ಇಳೆಗುರುಳಿತೆನಲ್
ಕೆಳಕೆಳಕೆಳಗೆ ಬೀಳುತೊಯ್ಯನೆಯೆ ನಿತ್ತರಿಸಿ,
ಮತ್ತೆ ರೊಯ್ಯನೆ ರಯದಿನೇರ್ದುದು ವಿಯತ್ತಳಕೆ
ಸರಳ ಸೂಟಿಯಲಿ. ಹೊರಸಿಗೆ ಡೇಗೆಯೆರಗಲ್ಕೆ
ಪರಿತಿಪ್ಪುಳುದುರ್ವವೋಲುದುರಿತು ವಿಮಾನದಿಂ
ಕಲೆಯ ಕಾಳಸೆ ಕೆಟ್ಟುಕೆದರಿ!
                                        ಜನಕಾತ್ಮಜೆಗೆ
ಜರಣ ಮರಳಿತು ಹೃದಯವರಳಿ. ದೈತ್ಯೇಂದ್ರಂಗೆ
ಬೆಕ್ಕಸಂ ಮೂಡಿ ಕೆರಳಿದನೊಡನೆ ಕಟಿಯುಸಿಗೆ
ಕೈ ತುಡುಕಿ ಬೀಸಿದನ್. ತಪ್ಪಿ ಚಿಮ್ಮಿ ಜಟಾಯು
ಸಿಡಿದನು ಕೆಲಕ್ಕೆ. ಮತ್ತೆರಗಿದನು ನಖಗಳಿಂ
ರಕ್ಕಸನ ಮಂಡೆಯಂ ಜಕ್ಕಿ. ರತ್ನವ್ರಾತ
ರಾಜಿತ ಪುಲಸ್ತ್ಯಜ ಕಿರೀಟಸ್ಥ ಮಣಿಗಣಂ
ಸಿಡಿದುರುಳ್ದುವು ಕಿಡಿಗಳಂ ಕಾರಿ. ದಾನವನ
ದೀರ್ಘ ಸುಂದರ ನೀಲ ದೇಹದಿಂದೊಸರ್ದತ್ತು

ಕೆನ್ನೆತ್ತರೊಳ್ಕು. ಸಳವಂ ಕುಟುರವಕ್ಕಿಯಂ
ಬಿಡದಿರದೆ ಬೆಂಬತ್ತುತೆಳ್ಚಟ್ಟುತೊದೆವಂತೆ,
ಮತ್ತೆ ಮತ್ತಪ್ಪಳಿಸಿದನು ಆ ನಭೋನೌಕೆ,
ಪಕ್ಷ ಸಂಜಾತ ಝುಂಝಾವಾತ ಗರ್ತಕ್ಕೆ
ಸಿಲ್ಕಿ, ತಿರ್ರನೆ ಪುಚ್ಛ್ರತಿರುಗಂ ತಿರುಗುವಂತೆ.
ತಲೆಗೆದರೆ, ತೊಡವುಗಳುದುರೆ, ಪರಿಯಲುಟ್ಟುಡುಗೆ
"ಲಘುವೆಣಿಸಿ ಗುರುವಾಯ್ತುಲಾ! ಹಾಳಿದೆಲ್ಲಿಯ ಹದ್ದು?
ಕೊಲ್ವೆನೊರ್ಕಡಿತದಿಂ" ದೆನುತೆ, ವಾಸಿಯನೊದರಿ,
ರಾಮನ ಸುವಾಸಿನಿಯನೊರ್ಕಯ್ಯೊಳವುಂಚಿಟ್ಟು,
ಘೋರ ವಿಷ ವಜ್ರಾಸಿಯಂ ಕೊಂಡು ಖೇಚರಂ
ಪಾಯ್ದನ್ ವಿಹಂಗೇಶನಂ. ಬೆದರಿದಳ್ ಸೀತೆ;
ಚೀತ್ಕರಿಸಿದಳ್ ಭೀತೆ! "ರಕ್ಷೆಯಾದಳೆ ದೇವಿ
ರಾಕ್ಷಸಗೆ? ಹಾ" ಎನುತೆ ಸಂಪಾತಿಯವರಜಂ
ಸಡಿಲಿಸಿರೆ ಸಿಡಿಲಂದದುಗುರು ಕೊಕ್ಕಿನ ಮಿಳ್ತುಗಯ್
ವೊಯ್ಲನಯ್ಯಯ್ಯೊ, ಕಾಣ್, ಆ ಕತ್ತರಿಸಿದುದು ಕತ್ತಿ
ಎರಂಕೆಯಂ! ಕಣ್ಮುಚ್ಚಿ ಗೋಳಿಡುತ್ತಿರ್ದಳಾ
ಜಾನಕಿಯುಮಾಲಿಸಿದಳಾ ಬಿದ್ದ ಸದ್ದನೆನೆ
ಮರಂ ಮುರಿದು, ಪಳು ನಡುನಡುಗಿ, ಕಾಡುಗೋಳಾಗಿ
ಬಿದ್ದನು ಜಟಾಯು, ರಾವಣನಾಯು ಬೀಳ್ವಂತೆ!
ಇತ್ತಲೋಡಿತು ಪುಷ್ಪಕಂ. ಅತ್ತಲಾ ಸೌಮಿತ್ರಿ
ಓಡಿದನರಸಿ ಜನಕಜಾನಾಥನಂ ಕೂಗಿ
ಕರೆದು. ಮಲೆಯಿಂದಲೆದು ಮಲೆಗೆ, ಪೊಳ್ತೇರಲೊಡಮ್
ಅತ್ತಿಗೆಯ ಕ್ಷೇಮಕ್ಕೆ ಪಿಂತಿರುಗಲೆಳಸಿಯುಂ
ಅಣ್ಣನಂ ಕಾಣದೆಯೆ ಮರಳಲಂಜುತೆ, ನಿಂತು
ನಿಂತು ಓ ಲಕ್ಷ್ಮಣಾ ಕೊರಲೊರಲ್ ಕೇಳ್ದೆಡೆಯನ್
ಊಹೆಯಿಂ ಗೊತ್ತುಹಚ್ಚುತೆ, ಮತ್ತೆ ಮುಂದೋಡಿ
ಪರಿದು, ಶಂಕಿಸಿ ನಿಂದು ಕರೆದು, ಮನದೊಳಗೇನೊ
ಮಹದ್‌ಭೀತಿ ಚರಿಸೆ, ಕಂಪಿತ ಗಾತ್ರನೂರ್ಮಿಳೆಯ
ಕಾನ್ತನುಕ್ಕುವ ದುಕ್ಕದಿಂದೆ 'ಓ ಲಕ್ಷ್ಮಣಾ!'
ಎಂಬ ಪೆಸರಿಂ ತಾನೆ ಶಪಿಸಿಕೊಂಡನು, ತನ್ನ
ಹಣೆಯ ಬರಹವ ಬಯ್ವ ತೆರದಿಂದೆ! ಅನಿತರೊಳ್

ತನ್ನ ದನಿಯಿಂದೆ ಸೌಮಿತ್ರಿಯಂ ಕರೆದೊರಲಿ
ಮಾರೀಚನಳಿಯೆ, ಗತಿಯೇನಿದಂ ಕೇಳ್ದೊಡಾ
ಲಲನೆ ಲಕ್ಷ್ಮಣರೆಂದು ರಾಕ್ಷಸ ಮಾಯೆಗಳುಕಿ,
ಕೇಡಿಂಗೆ ಕಳವಳಿಸಿ, ಕೇಡಡಸುವಾ ಮೊದಲೆ
ಪರ್ಣಶಾಲೆಗೆ ಹೋಹೆನೆಂದಾಸರಂ ಅಣಂ
ಲೆಕ್ಕಿಸದೆ ಓಡೋಡಿ ಬರುತಿರ್ದ ರಾಘವಂ
ತಮ್ಮನ ಕರೆವ ದನಿಯನಾಲಿಸಿದನು: ''ಅಕ್ಕಟಾ
ಕೇಡಾಯಿತಯ್ಯಯ್ಯೊ! ಕೋಳುಹೋದಳೆ ಲಲನೆ?
ಮೋಸವೋದನೆ ಮಹಾಮತಿ ಊರ್ಮಿಳೇಶನುಂ?''
ಎನುತ್ಯೆದುತಿರೆ, ಮರಳಿ ಕೇಳ್ದುದೇನೆಂಬೆನಾ
ದುಶ್ಶಕುನದೋಲಕ್ಷ್ಮಣಂ! ಮತ್ತಿದೇನಿದು ಮಾಯೆ?
ನೋಳ್ಪೆನೆಂದೋಡಿದನ್. ಓ ಲಕ್ಷ್ಮಣಾ ಎಂದು
ಕೂಗಿದನು ತಮ್ಮನಂ. ಓಕೊಂಡನಾತನುಂ
ಪಳುಗಾಡೊಳೋಡೋಡಿ ಬರುತೆ. ''ಓ ಲಕ್ಷ್ಮಣಾ,
ಕೇಡಾಯ್ತುಲಾ! ದೇವಿಯೊರ್ವಳಂ ಬಿಟ್ಟೇಕೆ
ಬಂದೆ? ಕೊರಳಂ ಕೊಯ್ದೆ! ಹಾ ಕೊಂದೆ ನೀ ಕೊಂದೆ
ಪಿಂತಿರುಗು; ನಡೆ ಬೇಗಮೆಲೆವನೆಗೆ! ಶಿವ ಶಿವಾ
ಸೂರೆವೋದೆವೊ ನಾಂ ನಿಶಾಚರರ ಕೈತವಕೆ!''
ಶೀಘ್ರ ಸಂಕ್ಷೇಪದಿಂ ತಂತಮ್ಮ ನಡೆದುದಂ
ಮಾತಾಡುತಿರ್ವರುಂ ಧಾವಿಸಿದರತಿಜವದಿ
ಪಂಚವಟಿ ಪರ್ಣಕುಟಿಗೆ:
''ಕೂಗಿದುದು ನೀನಲ್ತೆ?''
''ಸತ್ತನಾ ರಾಕ್ಷಸಂ!''
''ಅದು ನಿಶಾಚರ ಮಾಯೆ
ಎಂದು ನಾನೆಂತೆಂತೊ ಪೇಳ್ದೊಡಂ...''
''ಅಂತಾಡಿ
ನಿನ್ನನೆಳ್ಚಿದಳೆ?''
''ಅಲ್ಲದಾನಿಂತು ಬಂದಪನೆ?''
''ಎಂತಾದೊಡಂ ತಪ್ಪಿ ನಡೆದೆ. ಪೆಣ್ಣೊಂದುದಕೆ
ಮುನಿದೆ; ನನ್ನಾಣೆಯಂ ಮೀರ್ದೆ.''
''ಅಹುದಣ್ಣಯ್ಯ.

ತಪ್ಪಾಯ್ತು. ಬಗೆಯಂ ಕದಡಿತತ್ತಿಗೆಯ ನುಡಿಯ
ಕೂರ್ಪು."
"ಕೌಸಲ್ಯೆಯಾಶೀರ್ವಾದಮಿರ್ಕೆಮಗೆ!
ಸತಿಗೆ ಕೇಡಾಗದಿರ್ಕೆ!"
"ಅಣ್ಣಾ, ಜಟಾಯುವಿರೆ
ರಕ್ಷೆಗೆಮಗೇವುದಯ್ ಭೀತಿ?"
"ಆದೊಡಮೇಕೊ,
ಸೌಮಿತ್ರಿ, ನಾನೆಂದುಮನುಭವಿಸದೊಂದಳ್ಕು
ಕರುಳಂ ಕಿಮುಳ್ಚುತಿದೆ!"
"ನನಗುಮಂತೆಯೆ ಭಯಂ!"
"ಸದ್ದದೇನದು, ತಮ್ಮ?"
"ಭೋರ್ಗರೆಯುತಿದೆ ದೂರ
ಬಿರುಗಾಳಿ!"
"ಚೀತ್ಕಾರಮಾಯ್ತಲ್ತೆ?"
"ಅಲ್ತಲ್ತು.
ಕೊಂಬೆಗುಜ್ಜಿತು ಕೊಂಬೆ!"
"ಆರೊ ಕರೆದಂತಾಯ್ತು!"
"ಮಂಗಟ್ಟೆವಕ್ಕಿ ಕೂಗಿತು; ಬೇರೆಯೇನಲ್ಲಯ್!"
"ಆಗಳಿರದಾತಪಂ ಈಗಳೆಂತಳುರುತಿದೆ!
ಏಂ ಸೇದೆ!"
"ಪಾಳ್ದಿನಂ!"
"ಊರ್ಗೆ ಮರಳುವ ದಿನಮೆ
ಏಂ ಕಷ್ಟಮೊದಗಿತಯ್!". . .
"ಬಳಿಸಾರ್ದುದಾಶ್ರಮಂ!"
"ಪೆರ್ಚುತಿಹುದೆನ್ನೆರ್ದೆಯ ಕಳವಳಂ!". . .
"ಅದೊ ಅಲ್ಲಿ!
ಶಾಂತಿಯಿಂದಿಹುದೆಂತು ಪರ್ಣಕುಟಿ! ಸಾಲ್ಗುಮಾ
ದುಃಸ್ವಪ್ನಮ್; ಇನ್ನೆಂದುಮುಲ್ಲಂಘಿಸೆನ್ ನಿನ್ನ
ಕಟ್ಟಾಣೆಯಂ! ಇದುವೆ ಮೊದಲ್; ಇದುವೆ ಕೊನೆ!"
"ದೇವಿ
ಕಾಣೆಸಳೆ!"

"ಒಳಗಿರಲ್ ಪೇಳ್ದು ಬಂದೆನ್."
"ಅದೇಕೆ?..."
"ಏನು?"
"ನೋಡಲ್ಲಿ ಆ ಬಳ್ಳಿ!"
ರಾಘವನಿಂತು
ಕಣ್ಪೆಳರಿ ಪೇಳೆ, ಲಕ್ಷ್ಮಣನತ್ತ ನೋಡಲಾ
ಕಾಣಿಸಿತು ಪರಿಗೊಂಡ ಪರ್ಣಶಾಲೆಯ ಲತಾ
ಭಗಿನಿ! ಪರಿದೋಡಿದರ್, ಕಂಡರುಣುಗೋಲನದೊ
ತೆರೆದುದಂ! ದಾಂಟುತುದ್ವೇಗದಿಂ ತಡಬೆಯಂ,
ಕಂಡರಂಗಳದುದ್ದಮಾ ಬೇಲಿಯನ್ನೆಗಂ
ದಿಂಡುರುಳಿ, ಪರಿದೆಲೆ ತರಂಟಾಗಿ, ನಿಡುಚಾಚಿ
ಕೆಡೆದಿರ್ದ ಬಳ್ಳಿತೋಳಿನ ಬೆರ್ಚುಸಾಕ್ಷಿಯಂ!
ನೀರಡಿಕೆ ಪಸಿವು ಬಳಲಿಕೆ ಚಿಂತೆಯಿಂ ಮೊದಲೆ
ತತ್ತರಿಸುತಿರ್ದಂಗೆ ತಲ್ಲಣಿಸಲೆರ್ದೆ ಹಾರಿ
ಹೆಪ್ಪುಗಟ್ಟಿತು ನೆತ್ತರಾ ಕ್ಷಾತ್ರವೀರಂಗೆ:
ಜಗುಳ್ದುದಯ್ ರಘುರಾಮ ಧೈರ್ಯಮುಂ! ಹಮ್ಮೈಸಿ
ಕರೆಯುತೋಡಿದನೊಳಗೆ 'ಹಾ ಸೀತೆ! ಹಾ ಸೀತೆ!
ಹಾ ಸೀತೆ!' ಎಂದೆಂದು ಸುಯ್ದು. ಮಾರುತ್ತರಂ
ರಣರಣಕದಾ ಶೂನ್ಯದಿಂದೆ ಮಾರ್ದನಿಯಾಗಿ
ಬಂದುದಲ್ಲದೆ ದೇವಿ ಓಕೊಂಡಳಿಲ್ಲ. ಮೂಲೆ
ಮೂಲೆಯನರಸಿ ನೋಡಿದನು. ಬೆಳ್ಪರೋಲಂತೆ
ಸಂಧಿ ಸಂಧಿಯೊಳಿಣಿಕಿ, ಚಾಪೆ ಮಣೆಗಳನೆತ್ತಿ,
ನಿಂದನೇನೊಂದುಮಂ ಕಾಣದರಿಯದೆ, ಪುರ್ಚು
ಮೂರ್ಛೆಗೆ ಸಂದನಂತೆ. ಬೆದರಿದನು ಲಕ್ಷ್ಮಣಂ
ತನ್ನಣ್ಣನಾ ರುದ್ರ ದುಃಸ್ಥಿತಿಗೆ: "ತಾಳ್ಮೆ ತಾಳ್ಮೆ,
ಹೇ ಆರ್ಯ! ದೇವಿ ಗೋದಾವರಿಗೆ..." ಎನ್ನುತಿರೆ
"ಗೋದಾವರಿಗೆ ದಿಟಂ! ಗೋದಾವರಿಗೆ ದಿಟಂ!"
ಎಂದು ಕುಣಿಕುಣಿದಟ್ಟಹಾಸಮಂ ಗೆಯ್ಯುತ್ತೆ
ಧಾವಿಸಿದನನುಜನೆಂದುದನಿನಿತು ಗಮನಿಸದೆ,
ತಗ್ಗುಬ್ಬುಗಳನೆಡವಿ, ಮರಮಂ ಪಾಯ್ದು, ಬಳ್ಳಿ
ತೊಡರ್ವುದಂ ಲೆಕ್ಕಿಸದೆ, ಮುಳ್ಳು ನಾಂಟಿರ್ದೊಡಂ

ಕಿಳ್ತಿಸೆಯದಾನಂದದುನ್ಮಾದಿಂದೆ ಆ
ರಮಣೀಯ ಗೋದಾವರಿಯ ಪುಳಿನಮಯ ಶುಭ್ರ
ತಟಿಗೆ. "ಓ ಸೀತೆ! ಓ ಸೀತೆ! ಓ ಸೀತೆ! ಓ
ಓ ಸೀತೆ!" ರಾಮನ ಕೊರಲ ಕೂಗನಾಲಿಸುತೆ
ನೆರವೀಯಲೆಂದು ವಿಶ್ವವೆ ಜನಕಜಾತೆಯಂ
ಪೆಸರ್ವಿಡಿದು ಕರೆದುದೆನೆ, ಮರುದನಿಗಳೆದ್ದುವಯ್
ಮರದಿಂದೆ ಗಿಡದಿಂದೆ ಲತೆಯಿಂದೆ ನದಿಯಿಂದೆ
ಪರ್ವತಾರಣ್ಯಂಗಳಿಂದೆ. ದಶದಶ ಕೋಟಿ
ಕಂಠಂಗಳಿಂದೆ ದೆಸೆದೆಸೆ ತಲ್ಲಣಿಸುವಂತೆ
ಕೂಗಿತನುಕಂಪದಿಂ ಸೃಷ್ಟಿ, ದಶಕಂಠಂಗೆ
ಮೃತ್ಯು ಡಿಂಡಿಮ ಭೇರಿಯಂ ಪೊಯ್ವವೋಲಿಂತು:
"ಓ ಸೀತೆ! ಓ ಸೀತೆ! ಓ ಸೀತೆ! ಓ ಸೀತೆ! ಓ!"
ಕಿವಿಗೊಟ್ಟದಂ, ಸತಿಯ ಮಾರುತ್ತರಂ ಗೆತ್ತು,
ತಾಳಿದನು ಮುದಮಂ! ಅರಣ್ಯದತ್ತಂ ಪರಿದು
ಹುಡುಕತೊಡಗಿದನಿಣುಕುತಲ್ಲಲ್ಲಿ. ಕಾಣದಿರೆ
ತಮ್ಮಗೊರೆದನು ಸನ್ನೆಗಣ್ಮಾಡಿ: "ಕಂಡೆಯಾ,
ಸೌಮಿತ್ರಿ, ಮೈಥಿಲಿಯ ಮಾಯೆಯಂ? ಪುಸಿಯಲ್ತು
ದಿಟಮಾಕೆ ಭೂಮಿಜಾತೆಯೆ ವಲಂ! ತಾಯ್ಮರೆಗೆ
ಮಗು ನಿಂತು ಕಣ್ಣುಮುಚ್ಚಾಲೆಯಾಡುವವೋಲೆ
ನಮ್ಮೊಡನಣಕವಾಡುತಿಹಳಲ್ತೆ? ಶೈಲಗತೆ
ತಾನೊರ್ಮೆ, ಕಾಂತಾರಗತೆಯೊರ್ಮೆ, ತರುಗತೆಯೊರ್ಮೆ:
ಒರ್ಮೆ ಖಗಗತೆ, ಒರ್ಮೆ ಮೃಗಗತೆ, ತರಂಗಗತೆ
ಇನ್ನೊರ್ಮೆ! ಒರ್ಮೆ ಖಂಜನ ಪಕ್ಷಿಕೂಜಿತಳ್;
ಒರ್ಮೆ ಕೋಕಿಲ ಕಂಠ ಭಾಷಿತಳ್. ಅದೊ ಅಲ್ಲಿ
ಸುಸಮೀರ ಲೋಲ ಕುಸುಮಿತ ಲತಾ ರಾಜಿತಳ್;
ಇದೊ ಇಲ್ಲಿ. . . ಕಣ್ಬನಿಗರೆವೆಯೇಕೆ, ಲಕ್ಷ್ಮಣಾ?"
ರಘುವರನ ಲಘುವರ್ತನೋನ್ಮಾದಮಂ ನೋಡಿ
ಗದ್ಗದಿಸುತೂರ್ಮಿಳೇಶಂ: "ಇದೇನಣ್ಣಯ್ಯ,
ಮತಿವಿಕಲರಂತಾಡುತಿಹೆ? ವಿಷಮ ಸಮಯದೊಳ್
ಸಮತೆಗೆಟ್ಟುದೆ ನಿನ್ನ ಮೇರುಸಮ ಸುಸ್ಥಿರತೆ?
ದೇವಿ ತಾನೆಲ್ಲಿರ್ದಳೇನಾದಳೆಂದರಿವುದಂ

ಮಾಣ್ದಿಂತು ಕಾಲಹರಣಂ ಗೆಯ್ವುದನುಚಿತಂ
ಭಾವಜಭ್ರಾಂತಿಗೆ ಮಾರುವೋಗಿ.'' ನೆನೆವವೋಲ್
ಪೋದ ಭವಮಂ, ನಿಂತು ಜಾನಿಸಿದನಾ ರಾಮನೊರ್
ಕರುವಿಟ್ಟ ವಿಗ್ರಹಂಬೋಲ್. ಮೌನದಿಂದಿರ್ದು,
ಇರ್ದಂತೆ, ಚೀರ್ದೊರಲಿದನ್ ತಾರ ನಿಸ್ವನದಿಃ
''ಅಯ್ಯೊ ಓ ಲಕ್ಷ್ಮಣಾ! ಏನು ಮಾಡಿದೆಯಯ್ಯ?
ನನ್ನ ಸೀತೆಯನಯ್ಯೊ ಏನು ಮಾಡಿದೆಯಯ್ಯ?
ಎಲ್ಲಿ ಬೈತಿಟ್ಟೆಯಯ್? ಹೇಳಯ್ಯ, ದಮ್ಮಯ್ಯ,
ಓ ನನ್ನ ಲಕ್ಷ್ಮಣಾ! ನಿನಗೆ ಕೈಯೆಡೆ ಮಾಡಿ,
ನಿನ್ನ ರಕ್ಷೆಯೊಳಿಟ್ಟು ಹೋದೆನೆಲ್ಲಿಹಳೊರೆಯೊ
ನನ್ನ ಮನದನ್ನೆ? ಕೊಂದರೊ ಕೋಮಲಾಂಗಿಯಂ?
ತಿಂದರೊ ನಿಶಾಚರರ್? ಹಾ ಸೀತೆ! ಹಾ ಸೀತೆ!
ಹೋದೆಯೆಲ್ಲಿಗೆ ತೊರೆಯುತೆನ್ನಂ?'' ಎನುತ್ತೆನುತೆ
ಬಿಳ್ದನವನಿಗೆ ಶಿಶುವಿನೋಲಳುತೆ. ಸಂತಪಿಸಿ
ಪಿಡಿದೆತ್ತಿ ಸೋದರಂ ಕೊಂಡೊಯ್ದನೆಂತಾನುಮಾ
ಕುಟೀರಕೆ. ಶಿಶಿರೋಪಚಾರ ಶುಶ್ರೂಷೆಯಿಂ
ಚೇತರಿಸಿದಾತಂಗೆಃ ''ಶಾಂತಿ, ಹೇ ಧೀರಮತಿ!
ಕಾತರಿಸದಿರೊ, ದಾಶರಥಿ! ವಿಹಂಗೇಂದ್ರನಿಂ
ದೇವಿ ಎಲ್ಲಿಹಳೆತ್ತಲೈದಿದಳೆನಿಪ್ಪುದಂ
ತಿಳಿವಮಲ್ಲಿಂ ಬಳಿಕಮೇಂ ಕಜ್ಜಮೆಂಬುದಂ
ನಿಚ್ಚಯಿಸುವಂ. ಬರಿದೆ ಪಲವಂ ಪಲುಂಬಿದೊಡೆ
ಫಲವೇನ್?'' ತಮ್ಮನೊಳ್ನುಡಿಗೇಳ್ದು ಪೊಸ ನೆಚ್ಚು
ಮಲರಿದತ್ತಣ್ಣಂಗೆ. ತೆಕ್ಕನೆಯೆ ನೆಗೆದೆಳ್ದು
ಧಾವಿಸಿದನಂಗಳಕೆ. ತಲೆಗೆದರಿ, ಮೊಗಮೆತ್ತಿ,
ಪಂಚ ವಟ ಕುಟಜರಾಜಿಯ ನೆತ್ತಿಯಂ ನೋಡಿ
ಕೊರಳೆತ್ತಿ ಕೂಗಿದನ್, ದಿಗ್ದಿಗಂತೋದ್ಭವಂ
ಮರುದನಿ ಮೊಳಗುವಂತೆಃ ''ಜಟಾಯೂ! ಜಟಾಯೂ!
ಓ ಜಟಾಯೂ!'' ಕರೆದೊನುಸಿರು ಮೇಲುಸಿರಾಗಿ
ಖಗವೀರನಂ. ಕಂಡನಿಲ್ಲೋಕೊಂಡನಿಲ್ಲವಂ.
ಕೆಂಡವಾದನು ದಂಡಧರನಂತೆ ಕೋದಂಡ
ಪಾಣಿಃ ''ಲಕ್ಷ್ಮಣ, ತಿಳಿಯಿತೀಗಳಾ ಖಳಖಗಮೆ

ಕಾರಣಂ ಸತಿಯಿಲ್ಲಮೆಗೆ.'' ''ಅಯ್ಯೊ, ಅಣ್ಣಯ್ಯ,
ಏನ್ನಾತನಾಡುತಿಹೆ?'' ''ಸಾಕು ಬಿಡು, ಸೌಮಿತ್ರಿ,
ಜಗಮನಿತುಮಾ ಕೈಕೆ! ಕೈತವಮದರ ಹೃದಯಂ!
ಪಸುಮೊಗದ ಬಗ್ಗನಾ ಖೂಳನಾತನ ಕುಲಕೆ
ತಕ್ಕುದನೆ ನೆಗಳ್ದುದಾ ರಣಹದ್ದು! ಅಯ್ಯೊ ಹಾ
ದುರುಳ ಪರ್ದಿಗೆ ಮರುಳುವೋದಳೆ ದಿಲೀಪಕುಲ
ಸಂಭವನ ಸತಿ? ಕೊಲ್ವೆನಾತನಂ; ನೀಚನಂ,
ಮಾರೀಚಗಿಂ ಮಿಗಿಲ್ ಪಾಪಿಯಂ, ಜವನೆಡೆಗೆ
ಜವದಿಂದೆ ಕಳುಹದಿರೆ ಸುಡಲಿ ನನ್ನೀ ಬಾಳ್ಕೆ.
ಓ ಬಾರ ಲಕ್ಷ್ಮಣಾ; ಈ ಮಹದ್ವಿಪಿನಮಂ
ಸೋದಿಸುವಮೆಲ್ಲೆಲ್ಲಿಯುಂ. ಕಂಡೊಡನೆ ಪರ್ದ್ದ
ಗಂಟಲಂ ಮುರಿದು, ಕಾಲಂ ತಿರುಪಿ, ತಿಪ್ಪುಳಂ
ಪರಿದು, ಬರಿಯಂ ಬಗಿದು, ಮೂಳೆಯಂ ನುರಿಗೆಯ್ದು
ಕ್ರಿಮಿಕೀಟಕಂಗಳಿಗೆ ಬಿರ್ದ್ದಿಕ್ಕುವೆನ್, ಬಸಿದು
ಕೆನ್ನೆತ್ತರಂ!'' ಎಂದ ಕ್ರೋಧಾಂಧ ಸೋದರನ
ಭೀಷಣ ಮನಃಸ್ಥಿತಿಯನಳುಕಿ, ಪಡಿವೇಳದಾ
ಕಿರಿಯನಣ್ಣನ ಹಿಂದೆ ಹೊರಮಟ್ಟನೆಂತಾದೊಡಂ
ಕೋಸಲದ ರಾಣಿಯನರಸಲೆಂದು.
                                        ಇಳಿವಗಲ್;
ಸುಡುವಿಸಿಲ್; ಆಳ್ಗೇಡಿ ಕಾಡೊಳಲೆದಿರ್ವರುಂ
ಕರೆಕರೆದು ಹುಡುಕಿದರು ಸೀತೆಯಂ, ಮೇಣಾ
ಜಟಾಯುವಂ. ಪರಿಚಿತಸ್ಥಾನಂಗಳಂ, ಮತ್ತೆ
ವಿಶ್ರುತಗಳಂ, ಶ್ರುತಗಳಂ, ಮತ್ತಮನ್ನೆಗಂ
ಪಿಂತೆ ಕಂಡರಿಯದೆಡೆಗಳನಂತೆ ದೂರಮಂ
ನಿಕಟಮಂ, ಮೇಣಂತೆ ಪೂವೆಡೆಗಳಂ ಮತ್ತೆ
ಪಣ್ಣೆಡೆಗಳಂ ಪುಡುಕಿದರ್ ಕುದಿವೆದೆಯೊಳಲೆದು
ತೊಳಲಿ. ರಾಮನ ಶೋಕವಳುರಿತೊ ಅರಣ್ಯಮಂ?
ಮತ್ತೆ ರಾಮನ ಕೋಪವಳುರಿತೊ ಜಟಾಯುವಂ?
ಎಂಬವೋಲಿಳಿನೇಸರಿಳಿಯೆ ಬೈಗಿನ ಕೆಂಪು
ಪರ್ವಿತೆರಚಿತು ಚೆಲ್ಲಿತುರಿನೀರಿನೋಕುಳಿಯ!
ಬರುತಲಿರೆಯಿರೆ ಕಂಡರಾಯಿರ್ವರುಂ: ಅನತಿ

ದೂರದ ಗಿರಿನಿತಂಬ ಸದೃಶದೊಂದೆಳ್ತರದಿ,
ವೈಡೂರ್ಯ ಸಮ ಶಾದ್ವಲದ ಮೇಲೆ, ಪರಪಿದರೊ
ವಜ್ರಗಳನೆನೆ ತಪನ ಕೋಟೀರ ಕಾಂತಿಯೊಳ್
ಕಿಡಿಕಿಡಿ ಪೊಳೆದುದೇನೊ ಕೌತುಕಂ! ಓಡಿದರ್;
ನೋಡಿದರ್: ಕಂಡರು ಜಟಾಯು ನಖಘಾತಕ್ಕೆ
ಕೆದರಿ ಚೆಲ್ಲಿದ ಮಣಿಯಲಂಕೃತಿಯನಾ ರಾವಣ
ವಿಮಾನದಾ. ಲಲನೆಯ ನೆಲೆಗೆ ಮೊದಲ ಸಾಕ್ಷಿ ತಾಂ
ದಿಟಮೈಸೆ ಲಭಿಸಿತೆಂಬೂಹೆಯಿಂ, ನೆಚ್ಚುದಿಸಿ
ಮುಂಬರಿದರದೊ ಮತ್ತೆ! ಓಡಿದರ್; ನೋಡಿದರ್:
ಕಂಡರು ಜಟಾಯು ಪದಗದೆಯ ಘಾತಕೆ ಕೆಡೆದ
ಪುಷ್ಪಕದ ಕನಕ ಲಘುಘಂಟಿಕಾ ಸ್ತಬಕಮಂ,
ಮತ್ತಂತೆ ಗುರುಗಾತ್ರದೊಂದೆರಳ್ ಮೂರ್ ನಾಲ್ಕು
ಐದಾರು ಗರಿಗಳಂ! "ಏನಿದಯ್, ಸೌಮಿತ್ರಿ?
ಸಾಹಸಿ ಜಟಾಯುವಂ ಬಯ್ದುದನ್ನೆಯಮೆಂದು
ತೋರುತಿದೆ!" ರಾಮನಂತಾಡುತಿರೆ ಮುಂಬರಿದ
ಲಕ್ಷ್ಮಣಂ ಚೀತ್ಕರಿಸಿದನ್ "ಅಯ್ಯೊ ಅಣ್ಣಯ್ಯ!"
ಓಡಿದರ್, ನೋಡಿದರ್: ಕಂಡರು ಜಟಾಯುವಂ,
ಮಡುಗಟ್ಟಿ ನಿಂದ ಕೆನ್ನೀರ ಕೆಸರೊಳ್ ಮಿಂದ
ಕಡಿದೆರಂಕೆಯ ಪರಿದ ತಿಪ್ಪುಳ ಗತಾಯುವಂ!
ಕೋಪಮನಿತುಂ ರಾಮಗನುತಾಪಮಪ್ಪಂತೆ
ಕರುಳಿರಿದುದಾ ಘೋರದರ್ಶನಂ: ಸಹ್ಯಾದ್ರಿ
ಶಿಖರ ವಿಸ್ತೃತ ವಿಪಿನ ಮಧ್ಯೆ, ಶತಮಾನ ತತಿ
ಮೆಯ್ಗೊಂಡು ಮೂಡಿತೆನೆ, ಗುರುಗಾತ್ರ ಭವ್ಯದಿಂ
ಪರ್ವತ ಸಹೋದರತೆಯಾಂತುದು ವಿಯಚ್ಚುಂಬಿ
ಭೈರವ ಬೃಹತ್ತರುವರಂ. ಆ ವನಸ್ಪತಿಗೆ
ಗೌರವಂದೋರ್ದು ಬೆಸಗೆಯ್ವಳಾರಣ್ಯಸತಿ,
ನಾಗರಿಕ ನಗರಂ ಮಹಾಕವಿಯನೋಲೈಸಿ
ಮನ್ನಣೆಯನೀವಂತೆವೋಲ್. ವಿಹರಿಸಿದರೆನಿತೆನಿತೊ
ಸಾರಿ; ತಣಿಯದೆ ಬಂದು ವಿಹರಿಸುವರಿಂದುಮಾ
ತರುಶಿರದಮರ ನಂದನದಿ ನಿಂದು ರವಿ ಇಂದು
ಉದಯಾಸ್ತ ಸಂಧ್ಯೆ. ಚೈತ್ರರುಮೆನಿತೊ ಬಂದಲ್ಲಿ

ನೀಡಿಹರು ಶುಕ ಚಂಚರೀಕ ಪಿಕದಿಂಚರದ
ನೈವೇದ್ಯಮಂ. ವರ್ಷಶತರಲ್ಲಿಗೈತಂದು
ಮಿಂಚುದೀವಿಗೆವಿಡಿದು, ಸಿಡಿಲ ತಂಬಟೆ ಬಡಿದು,
ಮೇಘ ಕುಂಭಂಗಳಿಂದಭಿಷೇಕಮಂ ಗೈದರಾ
ಭೂರುಹ ನೃಪೇಂದ್ರಂಗೆ. ಹೇಮಂತ ಶಿಶಿರರುಂ
ಶ್ವೇತ ಛತ್ರಿಯನೆತ್ತಿ, ಶ್ವೇತಾಂಬರಂ ಸುತ್ತಿ,
ಶ್ವೇತ ಚಾಮರವೀಸಿ, ಮಂಜಿನಿರ್ಬ್ಬನಿ ಮಣಿಯ
ಶ್ವೇತ ಮುತ್ತಿನ ತಾರಹಾರದಿಂ ಸಿಂಗರಿಸಿ
ಸೇವಿಸಿಹರಾ ತರು ಮಹಾರಾಜನಂ. ಪ್ರಕೃತಿ
ದೇವಿಯುಂ ಗ್ರೀಷ್ಮದಾತಪ ತಾಪಮಂ ಕಳೆಯೆ,
ತಾಂಡವಂ ಕುಣಿವ ಭೈರವ ಭುಜಾದಂಡಸಮ
ಬಾಹು ಶಾಖೆಯ ತಳಿರಿನುಯ್ಯಾಲೆಯಂ ಏರಿ
ರಮಿಸುವಳ್ ಮಂದಮಾರುತ ಭೋಗಮಂ. ಇಂತು
ಸಹ್ಯರಸಋಷಿ ದೃಷ್ಟಿಸೃಷ್ಟಿಯೆ ಬೃಹತ್ತಾಗಿ
ನಿಂತಾ ಮಹದ್ ವೃಕ್ಷಮಂ ದುರ್ಗದರಮನೆಯ
ಪೆರ್ಗಡೆಯ ನೇಮಿಸಿದ ಪರಶುಧರರೈತಂದು
ಕಡಿಯಲನುಗೈದಪರ್. ವಸಂತರವಿ ಮೂಡುತಿರೆ,
ನೆತ್ತಿಗೊಂಬೆಯನೇರಿ ಕಾಜಾಣಮುಲಿಯುತಿರೆ,
ಬೆಚ್ಚಿಬೀಳುವುದಿದ್ದಕಿದ್ದಂತಟವಿ ಮೌನಂ!
ಮರುದನಿಗಳೇಳುವುವು ಕೋವಿಯೀಡುಗಳಂತೆ
ಕೊಡಲಿಯೇಟುಗಳಾ. ವಿಹಂಗಮಂ ಚೀತ್ಕರಿಸಿ
ಪಾರಿದಪುದೊರಲುವುದು ಕಾಡು ಹೋಹೋ ಎಂದು,
ಕೊಲೆಗಬ್ಬರಿಸುವಂತೆ. ತಲೆಯನಿನಿತೊಲೆಯದೆಯೆ
ನಿಲ್ವುದಾ ಸುಸ್ಥಿರಂ ಮರಂ. ಬಹುಳ ಬಲಯುತಂ
ಬಹುಸಂಖ್ಯೆ ಪರಶುಘಾತಕೆ ಸಿಡಿಯುವುದು ಕೆಲಕೆ
ತೊಗಟೆ. ಬೀಳ್ವುದು ರಾಶಿರಾಶಿ ದೂರಕೆ ತೂರಿ
ಸುತ್ತಲುಂ. ಕೆಂಪು ಸೊನೆ ಸೋರುತಿರೆ ಹಸಿಗಂಪು
ಹಸರುವುದು, ಕಡಿವಾ ಬಡಗಿಗಳ್ಗೆ ಹಾಲ್ಮಡ್ಡಿ
ಹೊಗೆ ಧೂಪವಾಗಿ. ಕಡಿದಪರಿನ್ನುಮುರ್ಕುತ್ತೆ!
ತೊಗಲಂ ಸುಲಿಯೆ ಬಾಡು ತೋರ್ಪಂತೆ ಮಿದುಗೆಮ್ಪು
ಕಾಣಿಸಲದಂ ಕಡಿಯೆ, ಗೋಚರಿಸಿತೆನೆ ಮೂಳೆ,

ಕಡುಗೆಂಚುಕಡುಪು ಕೊಡಲಿಯ ಬಾಯ್ಗೆ ಕಲ್ಲಾಯ್ತು.
ಬಾಯಳಿಯಲೊರ್ಕೊಡಲಿ ಕಡಿದುದೆಂತುಂ ಬಿಡದೆ
ಪೊಸ ಕೊಡಲಿ. ಮಧ್ಯಾಹ್ನದೂಟಮಂ ಬುತ್ತಿಯಂ
ತಿಂದು ಬಂದಿನ್ನೊಮ್ಮೆ ತೊಡಗಲ್ಕೆ, ಮರನೆತ್ತಿ
ಅದೊ ನಡುಗುತಿಹುದಲ್ತೆ? ದಿಟಮ್ಮೆಸೆ! ಅಯ್ಯೊ ಹಾ
ಮುಪ್ಪುದಲೆಯಂತೆ ಕೊಡಲಿಯ ಹತಿಗೆ ಕಂಪಿಸಿದೆ
ಕಾಣದೊ ಬೃಹನ್ಮಸ್ತಕಂ! ಹಿಗ್ಗುತಿರಲಾಳ್ಮಂದಿ,
ಕುಗ್ಗುತಿರಲಾ ಮಲೆಯ ಪೆರ್ಮೆ, ತೂಗಿತ್ತೆಡಕೆ;
ತೂಗಿತದೊ ಬಲಕೆ; ಹಿಂದಕೆ ತೊನೆಯಿತದೊ; ಮತ್ತೆ
ತೊನೆಯಿತಿದೊ ಮುಂದಕ್ಕೆ! ಕೇಳ್ವುದದೊ ನಿರಿಲೆಂದು
ಲರಿಲರಿ ಮುರಿವ ರಾವಮುಂ! ದೂರಕೋಡಿದರ್;
ನೋಡಿದರು ವನವೈಭವದ ಕಲಶಗೋಪುರಂ
ಕೆಡೆದು ಬೀಳುವ ವೈಭವದ ಭೀಮ ರಮಣೀಯ
ದೃಶ್ಯಮಂ: ಕೊಂಬೆಯನಲಂಕರಿಸಿ ಜೋಲ್ದಿರ್ದ
ಹುಟ್ಟಿಯಿಂ ಭೋರೆನುತ್ತೆದ್ದುವದೊ ಹೆಜ್ಜೇನುಗಳ್
ಹಿಂಡು! ಬೆಳ್ಳನೆ ಹಲ್ಲೆಯಿಂ ಸುರಿಯುತಿದೆ ಚಿಂಜೇನ
ಸವಿಸೋನೆ! ಕಾಣ್! ಬಳಿಯ ಮರವದೊ ಮುರಿಯುತಿದೆ! ಮಲೆಯೆ
ಬಾಯ್ಬಿಡಿದುಕೊಂಡು ಗೋಳಿಟ್ಟಿತೆನೆ ಸದ್ದೊದರಿ
ಬಿದ್ದುದಾ ಪೆರ್ಮರಂ, ಪಳುವೆ ಬಯಲೆದ್ದವೋಲ್
ಬೆಳಕಿಳಿದು ನೆಲಕಾಯ್ತೊ ಯುಗಯುಗದನಂತರಂ
ಗಗನ ಸಂದರ್ಶನಮೆನಲ್ಕೆ: ಸಂಧ್ಯಾದೇವಿ
ಎಂದಿನೋಲೈತಂದು ನೋಡಿದರೆ, ಹಾ ಎಲ್ಲಿ ಹೇಳ್
ವಿಪಿನ ಸಾಮ್ರಾಜ್ಯದಾ ತರುಚಕ್ರವರ್ತಿ? ಅದೊ
ಕಳ್ತರಿಸಿದಂಗಾಂಗದಿಂದುರುಳಿಹನ್, ಸೋಲ್ತ ಪಡೆ
ಕಡಿಕಡಿ ಕೆಡೆದುರುಳ್ದ ಕಣದಂತೆ!

ಖರಸೂದನಂ

ಕಂಡನಾ ಕಡಿದ ಪೆರ್ಮರನ ತೆರನ ಜಟಾಯು
ಖಗವರನ. ಪಿತೃವಯಸ್ಯನ ದಾರುಣಸ್ಥಿತಿಗೆ
ಮರುಗುತಿರ್ ಕೈಗಳಿಂ ರಕ್ತಮಯ ಕಂಠಮಂ
ಸ್ನೇಹದಿಂ ತಳ್ಕೈಸಿದನ್, ತೋಳ್ಗಳೆರಡುಮುಂ
ತುಂಬುವೋಲ್: "ಏನಿದಯ್, ವಿಹಗೇಂದ್ರ, ಏನಿದೀ

ಸ್ಥಿತಿ ನಿನಗೆ? ಪೂಜ್ಯನೆ, ಪರಾಭವಂ ನಿನಗೆಂತೊ?
ಪೇಳಾವನಿಂದಾದುದೀ ಘೋರಕೃತಿ? ಏಕೆ?
ನಿನ್ನ ಮಗಳೆಲ್ಲಿ? ಪೇಳಯ್ಯ, ದಶರಥ ಮಿತ್ರ,
ರಘುಕುಲದರಸಿಯೆಲ್ಲಿ? ರಾಮನ ಮಡದಿಯೆಲ್ಲಿ?
ಪೇಳೆತ್ತವೋದಳೊ ನನ್ನ  ಮನ್ನದನ್ನೆ? ರಾಜರ್ಷಿ
ಜನಕದೇವನ ಧರಾಕನ್ಯೆ?'' ಇಕ್ಷ್ವಾಕುಜಂ
ರೋದಿಸುತ್ತೆಂತೆಂತೊ ಪಳಯಿಸುತ್ತಿರಲಿಂತು,
ಸೋಂಕಿಗೊಯ್ಯನೆ ಸಂಜ್ಞೆ ಸಂಜನಿಸಿತಾ ಶ್ಯೇನಿ
ಸೂನುವಿಗೆ. ತೆರೆದುದೆವೆ. ಮೂಡಿದುದುಸಿರ ಸುಯ್ಲು.
ಬಾವಿಯಾಳದಿ ನಿಂತು ನುಡಿವವನ ದನಿಯವೋಲ್
ಮಾತು ಹೊಮ್ಮಿತು ಕೊರಳ ಗುಹೆಯಿಂದೆ. ಗದ್ಗದಿಸಿ
ತಡೆತಡೆದು ನುಡಿದನಸ್ಪಷ್ಟಮಂ: ''ದೇವಿಯಂ. . .
ನೈ. . .ಋ. . .ತ್ಯ. . .ವಿತ್ತೇಶನವರಜಂ. . .'' ತೆಕ್ಕನೆಯೆ
ಮಾತು ನಿಂದತ್ತು. ಕುತ್ತಿಗೆ ಕಾರಿದುದು ಮುದ್ದೆ
ನೆತ್ತರಂ. ಪತ್ತಿದುದೆ ಹಾ ಅಯೋಧ್ಯೆಯ ಮೆಯ್ಗೆ
ಪಳಿಯೆನಲ್ಕಪ್ಪಿರ್ದ ರಾಮಂಗೆ ಮೆತ್ತಿದತ್ತಾ
ಸ್ನೇಹಾರುಣಂ!'' ''ಮುಂದೆ, ಹೇಳಯ್ಯ; ನಿಲ್ಲಯ್ಯ,
ಖಗವರ್ಯ!'' ರಾಮನೆನುತಿರೆ, ಕೊರಲ್ ಜೋಲ್ದತ್ತು;
ಕಣ್ಮಲರ್ ಮುಚ್ಚಿದುದು; ಸಂಪಾತಿ ಸೋದರನ
ಹರಣ ಹಾರಿತು ಹಸ್ತದೊಳೆ ದಶರಥನ ಸುತನಾ!
    ಬೈಗಿನಡವಿಯ ಕಿವಿಗೆ ರಾಮಲಕ್ಷ್ಮಣರಳುವ
ದನಿ ಬಂದುದತಿದಾರುಣಂ. ಶೋಕಿಸಿತು ಸಂಧ್ಯೆ
ತಾನುಮಾರಣ್ಯಾದ್ರಿ ಸಾಂದ್ರ ಸಾಯಂ ಧ್ವನಿಯ
ಮಂದ್ರದಿಂ. ಖಗಚಕ್ರವರ್ತಿಯ ಕಳೇಬರದ
ದಹನ ಸಂಸ್ಕಾರದಾ ಶವಧೂಮಮಂ ಕಂಡು
ಬೆದರಿದಳ್ ದಿನಲಕ್ಷ್ಮಿ. ನೆಗೆದಳಸ್ತಾದ್ರಿಯಿಂ;
ಮರೆವೊಕ್ಕಳಂಬುಧಿಗೆ. ದಿನವನಿತೆ ಧುಮ್ಮಿಕ್ಕೆ
ಪಶ್ಚಿಮ ಸಮುದ್ರಕ್ಕೆ, ಚಿಮ್ಮಿದುವು ರತ್ನಾಳಿ
ತಳದಿಂ ನಭೋಂಗಣಕೆ. ಮೇಣ್ ಮೇಲಿಂದೆ ಬೀಳುತಿರೆ
ಸಿಲ್ಕಿದುವೆನಲ್ಕೆ ರಜನಿಯ ಕುರುಳ ಧಮ್ಮಿಲ್ಲಕ್ಕೆ
ಪೂವರಿಲ್ಗಳಂತೆವೋಲಲ್ಲಲ್ಲಿ ತೋರ್ದುವಯ್

ಮಿನುಗುವ ಮಿಸುನಿ ತಾರೆ! ನರಳ್ವ ನೆರಳುಗಳಂತೆ
ಮಸಣದಿಂ ಮರಳಿದರು, ಮತ್ತೊಂದು ಮಸಣಕೆನೆ,
ಪರ್ಣಶಾಲೆಯ ಶವದ ಶೂನ್ಯಕ್ಕೆ, ಜನಕಜಾ
ಶೂನ್ಯರಾ ದೀನದುಃಖಿಗಳಣ್ಣತಮ್ಮದಿರು!
   ನಿದ್ರೆಯಿನ್ನೆತ್ತಣಿಂ? ನಿದ್ರೆ ಸತ್ತುದೊ ರಾಮ
ಭದ್ರಂಗೆಃ ಅಯ್ಯೊ ಮೈದೋರ್ದುದಾ ರಾತ್ರಿ! ಹಾ,
ಚಂದ್ರ ಸುಂದರ ದಿವ್ಯರಾತ್ರಿ! ಉನ್ಮಾದಕ್ಕೆ
ಮದಿರೆಯಂ ಪೊಯ್ದುದಾ ಸಾಂದ್ರ ಚಂದ್ರಿಕೆ ಸೂರ್ಯ
ವಂಶಜಗೆಃ ಪ್ರಿಯೆಯೊಡನೆ ಪವಡಿಸಿದ ಪಳ್ಕೆಯಂ
ತಳ್ಕೈಸಿ ಕುಳಿತು ಕಳೆದನ್ ಜಾವಮಂ, ಶೈಲತಾ
ಮೌನದಿಂ. ನಟ್ಟಿರುಳೊಳೆದ್ದೋಡಿದನ್ "ಸೀತೆ!
ಓ ಲಕ್ಷ್ಮಣಾ, ಸೀತೆಯಂ ನೋಡಲ್ಲಿ, ನೋಡಲ್ಲಿ!"
ಎಂದೆಂದು ಕೂಗಿಃ ಹೊದರಂ ತಬ್ಬಿದಣ್ಣನಂ
ತಮ್ಮನೆಂತಾನುಮೆತ್ತಿತಂದನು ಕುಟಿಗೆ. ಮೇಣ್,
ಪುಲಿಯಬ್ಬರಂ ದೂರದಡವಿಯಿಂ ಕೇಳೆಃ "ಓ
ಲಕ್ಷ್ಮಣಾ, ಸತಿಯನಸುರಂ ಕೊರಳ್ಮುರಿವನದೊ!
ಕೂಗುತಿಹಳಯ್ಯೊ! ಕೋಮಲೆ, ಹೆದರದಿರು; ಬಂದೆ!"
ಎಂದು ಧನುವಂ ತುಡುಕುತೆದ್ದೋಡುವಾತನಂ
ಬಿಗಿಯಪ್ಪಿ ಪಿಡಿದು ಸಂತೈಸಿದನು ಸೋದರಂ,
ತಾನುಂ ಸುಯ್ಯುತಳುತೆ. ಮತ್ತೆ ತಿಂಗಳ್ವಕ್ಕಿ,
ತೇನೆ, ತನ್ನೆಣೆವಕ್ಕಿಯಂ ಕರೆದು ಕೂಗುತ್ತೆ
ಜೊನ್ನಂಬರದೊಳಲೆವುದಂ ನಿಮಿರ್ಗೇಳ್ದುಃ "ಓ
ಲಕ್ಷ್ಮಣಾ, ನಿನ್ನನಯ್ಯೋ ಕರೆವಳದೊ ದೇವಿ!
ಏಕೆ ಕಲ್ಲೆರ್ದೆಯಾಗಿ ಕೆಮ್ಮನಿಹೆ? ಓಡು ನಡೆ,
ಓಡು ನಡೆ!" ಎನುತೆ ಹಣೆಬಡಿದುಕೊಂಡುರುಳಿದಾ
ಅಗ್ರಜಗೆ, ಕೇಳ್, ಗಾಳಿಬೀಸುವ ಊರ್ಮಿಳೇಶನಾ
ಬಗೆಯ ಬಣ್ಣಿಸೆ ಬಾಯಿಹುದೆ ಹಾ ಕವಿಯ ಕಲ್ಪನೆಗೆ?

## ಸಂಚಿಕೆ ೩

# ಶಬರಿಗಾದನು ಅತಿಥಿ ದಾಶರಥಿ

ತೊಲಗಿತಾ ಓ ಲಕ್ಷ್ಮಣಾ ದಿನಂ; ಕಳೆದುದಾ
ಓ ಲಕ್ಷ್ಮಣಾ ರಾತ್ರಿ; ಮರುದಿನಂ ಬಿಟ್ಟರಾ
ಓ ಲಕ್ಷ್ಮಣಾ ಸ್ಮೃತಿಯ ಪಂಚವಟಿ ಧಾತ್ರಿಯಂ.
ಶಕುನಿ ವಾಣಿಯೆ ಶಕುನವಲ್ತೆ? ನಡೆದರೊ ನೆಮ್ಮಿ
ನೈರುತ್ಯಮಂ. ನಡೆಯೆ, ಪಳು ನಿಬಿಡಮಾದತ್ತು;
ಕಾಡುಗಳ್ತಲೆ ಕರಂಗಿದತ್ತು; ಕಟುವಾದುದಯ್
ಝಿಲ್ಲಿಕಾ ಕಂಠಕೃತಿಕರ್ಕಶಂ; ಬೆಬ್ಬಳಿಸಿ
ಬೆದರೆ ಕಿವಿ, ಘೂಗ್ಯೆದುದಡವಿಯಂ ರವವಿಕೃತಿ
ಮಂಗಟ್ಟೆವಕ್ಕಿಯಾ. ಇದು ನಿರ್ಜನತೆಯಲ್ತು:
ನೈರಾಶ್ಯದಾಕಳಿಕೆ! ಇದು ಮೌನಮಲ್ತಲ್ತು:
ರವಶವಂ! ಎನಲ್ ರಾಮಂಗೆ ತನ್ನ ಅಂತಃಸ್ಥಿತಿಯ
ರಣರಣಕಮಲ್ಲಿ ಬಹಿರಂಗವಾದಂತಾಗಿ
ಕಡಿದು ಕುಳಿತನ್ ಹತಾಶೆಯ ಮಂಕು ಬಡಿದಂತೆ:
''ಏತಕೆಲ್ಲಿಗೆ ಎತ್ತ ಹೋಗುತಿಹೆವಾವಿಂತು,
ಸೌಮಿತ್ರಿ?'' ''ದೇವಿಯನ್ವೇಷಣೆಗೆ!'' ''ಆರವಳ್
ಆ ದೇವಿ?'' ಎನುತ್ತೆ ನಗೆದೋರ್ದಣ್ಣನಕ್ಷಿಯೊಳ್
ಬೆಳ್ಪನಲ್ಲದೆ ಮತ್ತೆ ಬೇರೇನುಮಂ ಕಾಣದಾ
ಲಕ್ಷ್ಮಣಂ: ''ಬೇಡ, ಬೇಡಣ್ಣಯ್ಯ; ನಿನ್ನಚಲ
ಧೈರ್ಯಮಂ ನೈರಾಶ್ಯಕೌತಣಂಗೆಯ್ಯದಿರ್.
ನೆನೆ ಭರದ್ವಾಜ ಋಷ್ಯಾಶ್ರಮದ ದೃಶ್ಯಮಂ;
ವಜ್ರರೋಮನ ಚಿತ್ರಕೂಟಮಂ; ಅತ್ರಿಯಂ,
ಅನಸೂಯೆಯಂ; ನೆನೆ ಅಗಸ್ತ್ಯ ಗುರುದೇವನಂ;

ಬಗೆಗೆ ತಾರಯ್ಯ ವಿಶ್ವಾಮಿತ್ರ ಮಂತ್ರಮಂ!
ನಿನ್ನ ಮೈಮೆಯ ನೀನೆ ಮರೆವೆಯೇನ್? ತನಗೆ ತಾಂ
ನಿಂದೆಯಪ್ಪುದೆ ಕೊಂದುಕೊಂಡಂತೆ; ನನ್ನನುಂ
ಕೊಂದಂತೆ! ನಿನ್ನ ಮಹಿಮೆಯ ನೆನಹೆ ನನಗಿಂತು
ವಜ್ರ ಚಿತ್ತವನಿತ್ತು ಹೊರೆಯುತಿರೆ, ನೀನಿಂತು
ಕಳವಳಿಸುತಾಸೆಗೇಡಿನ ಕಿಬ್ಬಿಗುರುಳುವೆಯ,
ಚಂದ್ರಚೂಡನ ರುಂದ್ರ ಕೋದಂಡಮಂ ಮುರಿದು
ಮೈಥಿಲಿಯನೊಲಿದ ಜಗದೇಕೈಕವೀರ, ಹೇ
ಲೋಕ ಸಂಗ್ರಹ ಶಕ್ತಿಯವತಾರ?''

ಲಕ್ಷ್ಮಣಂ
ನುಡಿಯುತಿರಲಿಂತು, ರಾಮಂಗಾದುದನುಭವಂ
ಮಾನಸಿಕದೊಂದದ್ಭುತಂ: ತುಂಬಿದುದು ಮಂಜು
ಕಾಡೆಲ್ಲಮಂ. ಸೃಷ್ಟಿಯಸ್ಫುಟಮಾಯ್ತು. ಭೀತಿ,
ಆಕಾರವಾಧಾರವೊಂದನರಿಯದ ಭೀತಿ ತಾಂ
ಛಾಯೆ ಛಾಯೆಗಳಾಗಿ ರಾಹುವೋಲಲೆದತ್ತು
ಕುಳಿರ್ಚಳಿಗಳಂ ಸುಯ್ದು. ನೋಡುತಿರೆ ರಾಘವಂ,
ಮೂಡಿತೊಂದಕಶೇರು ಕಶ್ಮಲ ಸರೀಸೃಪಂ,
ಮಂಜೆ ಮೈಗೊಂಡಂತೆವೋಲ್. ಶ್ಲೇಷ್ಮಚರ್ಮದಿಂ
ಭೀಕರತೆವೆತ್ತುದಾ ವಿಕೃತ ತಿರ್ಯಗ್ಯೋನಿ,
ಕುಕ್ಷಿಗಂ, ವ್ಯಾಳಾಕೃತಿಯ ರಾಕ್ಷಸಂ: ಇಲ್ಲ ಕಯ್,
ಇಲ್ಲ ಕಾಲ್, ಎಲ್ಲ ಮೆಯ್! ಹೊಟ್ಟೆ ತಾನದೆ ಮಂಡೆ!
ಕಾಲುಗಳೊ? ತೋಳುಗಳೊ? ಕಿವಿಗಳಿರ್ಪೆಡೆಯಿಂದೆ
ಚಾಚಿದುವು ಯೋಜನಂ, ಪಂಚ ನಖ ನಿಶಿತಾಗ್ರಗಳ್
ದೀರ್ಘ ಬಾಹುದ್ವಯಂ! ಹೊಟ್ಟೆ ಮಂಡೆಯ ಮಧ್ಯೆ
ಭೀತಿ ಭೂತಗಳೆರಡು ತೂನ್ತಿನವತಾರಮಂ
ನೋಂತುವೆನಲಾಭೀಳಮಾದುವು ಮಹಾ ಗುಹಾ
ಕುಕ್ಷಿ ಕುಹರಾಕ್ಷಿ! ತನ್ನಾ ನಿರಾಶೆಯೆ ತನಗೆ
ಕಾಣಿಸಿತೆನಲ್ಕಾ ಕಬಂಧನಂ ಕಂಡೊಡನೆ
ನಡುಗಿದುದು ತನು ತಪನಕುಲಗೆ. ಹದುಗಿತು ಬಲ್ಮೆ.
ಹಿಮ್ಮೆಟ್ಟಿದುದು ಹೆಮ್ಮೆ; ಹೆಡೆಮುಚ್ಚಿ ಸೆಡೆತುದಯ್
ಪೌರುಷದ ಫಣೆ. ಪಲಾಯನ ತೇಜಿಯನ್ನೇರಲ್ಕೆ

ತವಕಿಸಿತು ಜೀವಮಾ ಜಾನಕಿ ಜೀವಿತೇಶ್ವರಗೆ!
ಓಡಲೆಳಸಿದನಾದೊಡೇಂ? ಕಾಲ್ ಕೀಳಲಾರದೆ
ಕೆಡೆದುರುಳ್ದನು ಬಡಿದು ಭಯಮೂರ್ಛೆ. ಮೌನದಿಂ
ದೃಢತೆಯಿಂದೆರೆಗೊಳ್ವ ರಾಹುಛಾಯೋರಗಂ
ತೆವಳಿಕೊಂಡುರುಳಿದುದು ಹೊಡೆಗಾಲಿ ತೇರಂತೆ,
ಹೆಬ್ಬಂಡೆಯಂತೆ, ದುಶ್ಶಕುನ ಕೇತುವಿನವೋಲ್.
ನೈರಾಶ್ಯರಾಕ್ಷಸ ಕಬಂಧನೊಯ್ಯನೆ ಮುಂದು
ಮುಂದಕ್ಕೆ ಗಮಿಸಿದನ್; ಮೊನೆಯುಗುರ್ ಬೆರಳ್ಗಳಾ
ತೋಳ್ಗಳಿಂದಾಕ್ರಮಿಸಿದನ್ ದಶರಥನ ಸುತನ
ದೇವ ಗಾತ್ರವನಂತೆ ಕೌಸಲೆಯ ಕಂದನಾ
ಕೋಮಲ ಶರೀರಮಂ:
"ಕೆಟ್ಟೆನಯ್, ಲಕ್ಷ್ಮಣಾ!
ಪಿಡಿದನಸುರಂ. ಕೈಯೆ ಬಾರದಯ್. ನೆಗಹಲೆಳಸಲ್
ಮೇಲೇಳದಿದೆ ಕತ್ತಿ. ಓಡಲುಮಾರೆನಯ್ಯಯ್ಯೊ
ಕೆಟ್ಟುದಯ್ ಕಾಲ್ ಬಲಂ. ದೂರ ಸಾರ್, ದೂರ ಸಾರ್;
ಬಾರದಿರೆನಗೆ ಹತ್ತೆ. ನಿನ್ನನುಂ ಪಿಡಿವನೀ
ರಾಕ್ಷಸಂ. ನೀನಾದಡಂ ಪೋಗಯೋಧ್ಯೆಯಂ
ಸೇರಯ್ಯ. ಸಂತಯ್ಸು ಭರತನಂ, ಮಾತೆಯಂ.
ನನಗಿದೆ ವಲಂ ಒಲಿದ ಗತಿ. ಮೈಥಿಲಿಯನುಳಿದು
ನನಗಿನ್ನಯೋಧ್ಯೆಯೇಂ ಮರಣಮೇಂ? ಸಾವೆ ದಲ್
ದಿಟಮೆನಗೆ ಬಾಳ್ಕೆ!" ರಘುವರನೊರಲುತಿರಲಿಂತು
ಮೇಲ್ವಾಯ್ದನೂರ್ಮಿಳಾವಲ್ಲಭಂ. ಖಡ್ಗದಿಂ
ಕಡಿಯತೊಡಗಿದನಸುರ ಬಾಹುವಂ. ಕತ್ತರಿಸೆ
ತೋಳ್, ಇರಿದನಕ್ಷಿಯಂ, ಕುಕ್ಷಿಯಂ. ನೋಡುತಿರೆ
ರಾಮನಾ ರಕ್ಕಸಂ ಮಾಯವಾದನು ಬಿರಿದ
ದುಃಸ್ವಪ್ನದಂತೆ. ನೈರಾಶ್ಯದಿಂದುದ್ಭವಿಸಿ
ತೋರ್ಪವೋಲಾಶಾಮರೀಚಿ ತಾಂ, ಬೃಂದಾರಕಂ
ಮೈದೋರ್ದನೊರ್ವನ್; ಮತ್ತೆ ಕೈದೋರಿದನ್, ಶಬರಿ
ಕಾಯುತಿರ್ದಾಶ್ರಮ ದಿಶಾಶಾ ದಿಗಂತಕ್ಕೆ!
ಬೆಮರ್ದು ನೆಗೆದೆಳ್ದನ್ ರಘೂದ್ವಹಂ ಕಣ್ದೆರೆದು,
ಮೈತಿಳಿದು ಭಯಮೂರ್ಛೆಯಿಂ. ಸುಯ್ದನಿಂತೆಂದು:

“ಬದುಕಿದೆನೊ ನಿನ್ನಿಂದೆ, ಸೌಮಿತ್ರಿ.” “ತಿಳಿದವಂ
ತನ್ನ ನೆರಳಿಗೆ ತಾನೆ ಹೆದರುವನೆ?” “ತಿಳಿದವಂ!
ತಿಳಿದ ಮೇಲಲ್ತೆ?” “ಪೃಥ್ವಿಗೆ ರಾಹು ಬೇರೆಯೇಂ
ತನ್ನ ನೆಳಲಲ್ಲದೆಯೆ?” “ಅದ್ರಿಯಾದೊಡಮೊರ್ಮೆ
ಭೂಮಿ ಕಂಪಿಸೆ ದೃಢತೆ ಹಿಂಗದಿರ್ಪುದೆ? ಅಂತೆ ತಾಂ
ನಡುಗುತಿದೆ ರಾಮಧೈರ್ಯಂ, ತಮ್ಮ, ಆ ಭೂಮಿ
ಸುತೆಗಾಗಿ. ನಿಲ್ಲುವುದು ನಿನ್ನ ನೆಮ್ಮಿರಲದ್ರಿ, ಕೇಳ್,
ಸುಸ್ಥಿರಂ. ನಿನ್ನಿಂದೆ ಸತ್ತನೊ ನಿಶಾಚರಂ;
ಕೊಂದೆನೊ ನಿರಾಶೆಯಂ; ಗೆಲ್ದೆನೊ ಕಬಂಧನಂ;
ಹತವಾದುದೊ ಹತಾಶೆ. ಕಿರಣದೋರಿದುದಾಶೆ.
ಬಾ, ನಡೆವಮಿಲ್ಲಿಂದೆ; ಬಲ್‌ಗಜ್ಜಮಿದಿರಿರ್ಪುದಯ್
ಮುಂದೆ, ಸೌಮಿತ್ರಿ!” ಎಂದಪ್ಪಿದಣ್ಣನನಪ್ಪಿದನ್;
ಸಂತೈಸಿದನ್ ಲಕ್ಷ್ಮಣಂ. ಮೇಲೆ ಮುಂಬರಿದು
ತೆರಳ್ದರವರಿರ್ವರುಂ, ಮೂಡಿದಾಸೆಗಳವಳಿ
ಜೋಡಿನಡೆವಂತೆಃ
ಆ ಬೆಳ್ದಿಂಗಳಿರುಳಿನೊಳ್
ಮುಪ್ಪು ಜೌವನಗನಸು ಕಾಣ್ಬೊಂದು ಮಾಳ್ಕೆಯಿಂ
ಮುದುಕೆ ಕಂಡಳ್ ಕನಸನಾ ಶಬರಿ. ನಡುರಾತ್ರಿ
ಮುಗುಳುನಗುತೆದ್ದು ಕುಳಿತಳ್ ತನ್ನ ಮಲಗಿರ್ದ
ಪುಲ್ವಾಸಗೆಯ ಮೇಲೆ. ಗಗನ ನೀಲಾಭನಂ
ಮರಳಿ ಚಿತ್ರಿಸಿಕೊಂಡಳಾ ಸ್ವಪ್ನದರ್ಶನದ
ಶ್ರೀಮೂರ್ತಿಯಂ. ತುಂಬಿ ತುಳುಕಿತೆರ್ದೆ ಮುದಿಯಳ್ಗೆ.
ಹರಿಸವುಕ್ಕುವ ಮೊಗಕೆ ಸುಕ್ಕು ತೆರೆತೆರೆಯಾಗೆ
ಪುಡಿನಾರಿನ ತೆರನ ಬೆಳ್ನರೆ ನವಿರ್ದಲೆಯ,
ಬಚ್ಚು ಪಲ್ಲಿಲಿವಾಯ, ಕುಡುಬೆನ್ನ ಹಣ್ಮುದುಕಿ
ಶಬರಜ್ಜಿ ನಡುಗಿ ನಡೆದಳ್; ಗುಡಿಯ ಬಾಗಿಲಂ
ತೆರೆದು ನೋಡಿದಳು; ಆ ಚಂದ್ರಸುಂದರ ರಾತ್ರಿ
ಮುದುಕಿಯಂ ಕಂಡು ಕನಿಕರದಿಂದೆ ಕರಗಿತೆನೆ
ತಿಂಗಳ್ ಬೆಳಕು ಚೆಲ್ಲಿ, ಶಬರಿಯ ಕುಟೀರಮಂ
ಸುತ್ತಲೆತ್ತೆತ್ತಲುಂ ಹಸರಿ ಹಬ್ಬಿದ ಹಸಲೆ
ರಾಜಿಸಿತು ಮುದುಕಿಯ ತಲೆಯವೋಲೆ, ತೃಣಮೌನಿ

ತಾನಾಗಿ. ತೃಷಿತ ದೃಷ್ಟಿಯನಟ್ಟಿ, ನಿಸ್ಸೀಮ
ಘಾಸ ಸೀಮಾರ್ಣವದ ವಿಸ್ತೀರ್ಣದೊಳ್ ಮನಂ
ಲಯಮಾಗೆ ನೋಡಿ, ನಿಡುಸುಯ್ದು, ತನ್ನೊಳಗೆ ತಾಂ
ಶಬರಿ: ''ನೀನೆಂದಿಗೆ ಬರುವೆಯಯ್ಯ, ಓ ನನ್ನಯ್ಯ,
ಕಂದಯ್ಯ, ರಾಮಚಂದ್ರಯ್ಯ? ಗುರುದೇವನಾ
ಮುನಿ ಮತಂಗನ ಮಾತು ಬೀತಪುದೆ? ನಿನಗಾಗಿ
ಕಾದಿರುವೆನೀರ್ಶೈದು ವತ್ಸರಗಳಿಂ, ವತ್ಸ.
ಪಣ್ಪಲಂಗಳನೆಲ್ಲ ಬಿತ್ತಿ ಬೆಳೆದಣಿಮಾಡಿ
ಕಾಯುತಿಹುದೆನ್ನಾಶ್ರಮಂ. ನೋಯುತಿದೆ ಮನಂ,
ನನ್ನ ಓ ಇಷ್ಟಮೂರ್ತಿ, ನೀಂ ಬರ್ಪ ಮುನ್ನಮೆಯೆ
ಕಾಯವಳಿವಳ್ಕಿಂದೆ. ಹಣ್ಣುಹಣ್ಣಾದ ಈ
ಮುಪ್ಪಿನೊಡಲಿನ್ನೆನಿತು ತಾಳುವುದೊ? ಬಾಳುವುದೊ?
ಬಾಳ್ದೊಡೇನೀ ಒಡಲ್? ಕಣ್ಣಾಗಳೆಯೆ ಮಬ್ಬಾಗಿ,
ಮಂಜಾಗಿ, ಹಿಂಜರಿಯುತಿದೆ ದಿಟ್ಟಿ! ಕಣ್ಣಳಿದ
ಮೇಲೆ ನೀ ಬಂದರಯ್ಯಯ್ಯೊ, ಕಣ್ಣಾರ್ಪಿನಂ
ನಿನ್ನನೆಂತಯ್ ನೋಳ್ಪೆ? ಕೈಯಿಂದ ಮೈಯೆಳವಿ
ಸಂತಸಂಬಡುವೆನಾದೊಡಮೆಂತು ತಣಿಸುವೆನೊ ಪೇಳ್
ಕಣ್ಗಳೀ ನೀರಳ್ಕೆಯಂ? ಬಾರ, ಓ ಕಂದಯ್ಯ,
ಕಣ್ಕೆಡುವ ಮೊದಲೆ; ಬಾರಯ್ಯ, ಈ ಬಾಳ್ಕೆಡುವ
ಮುನ್ನಮೆನ್ನೆರ್ದೆಗೆ ತಾರಯ್ಯ ನಿನ್ನಾ ಶಾಂತಿಯಂ!''
ನಿಶೆಯ ನಿಶ್ಶಬ್ದತೆಗೆ ಭಂಗ ಬಾರದ ತೆರದಿ
ತನ್ನೊಳಾಳಾಪಿಸುತೆ ಗುಡಿಸಿಲೊಳಗಾದಳಾ
ಶಬರಜ್ಜಿ, ಬೇಡಿತಿ, ಮತಂಗಮುನಿವರ ಶಿಷ್ಯೆ.
   ಇರುಳಳಿದುದುಷೆ ಮೂಡಿತೊಯ್ಯನೆಯೆ ಬೆಳಗಾಯ್ತು.
ಬಿಲ್ಲೆತ್ತರದ ಕರಡವುಲ್ ಬಿತ್ತರದ ಬಯಲ್
ಮಿಳಿರ್ದತ್ತು ಕುಳಿರ್ಪನಿಗಳಿಂದೆ, ತುರುಗೆಮೆಗಳಂ
ಪೋಲ್ದು. ಮಾತಂಗಿಯೊಲೆ ಪಸಲೆಯುಂ ಪಾರ್ದುದೆನೆ
ನಿಡುಬಯಸಿ, ನಿಡುಸುಯ್ದುರಿರ್ವರುಮೊಂದುಗೂಡಿ.
ಮುದುಕಿಗೇಂ ಕಳವಳಂ? ಏಕೆ ತಲ್ಲಣಮೇಕೆ
ಉಲ್ಲಸಂ? ಒಳವೊಗುವಳೆಲೆವನೆಗೆ. ಒಯ್ಯನೆಯೆ
ಹೊರಚಿಮ್ಮಿ ನಿಂತು ನೋಡುವಳೆನಿತೊ ಕಾಲಮಾ

ಬುವಿಯ ಬಯ್ತಲೆಯಂತೆ ಬಯಲ ನಡು ನಿಡುಪರಿದು
ಸಮೆದ ಕಾಲ್ದಾರಿ ಕೀಳ್ವಟ್ಟೆಯಂ. ತನ್ನೊಳಗೆ
ಗೊಣಗುವಳ್; ಗುಣಿಸುವಳ್; ಮತ್ತೆ ಮತ್ತೊಳವೊಕ್ಕು,
ತೆಂಗಿನ ಗರಿಯ ಪೊರಕೆಯಂ ತಂದು, ಮನೆ ಮುಂದೆ
ಗೋಮಯಂ ಬಳಿದ ಜಗಲಿಯ ತರಗು ಸದೆ ಗುಡಿಸಿ,
ಸೊಂಟಗೈಯಾಗಿ ನಿಲ್ವಳ್. ಮತ್ತೆ ನಿಡುನಟ್ಟು
ನಿಟ್ಟಿಪಳ್ ದೂರ ವನ ಸೀಮಾಂತ ಸೀಮಂತ
ರೇಖೆಯೆನಲೊಪ್ಪುವಾ ಬಟ್ಟ ಬಯಲ್ವಟ್ಟೆಯಂ.
ಶಬರಿಗಿಂತಿರೆ ನಿರೀಕ್ಷಣೆಯ ನೋಂಪಿ, ಪೊಳ್ತೇರ್ದು
ಪಗಲಾಯ್ತು. ಬಾನ್ಗಾವಲಿಯ ಮಧ್ಯೆ ಕಿರಣರವಿ ತಾಂ
ಬೆಳ್ಪಹನಿಯಾಗಿ ಕರೆದುದು ಬಿಸಿಲ ಕೆಂಬೇಗೆಯಂ.
ಪುಲ್ಗಾವಲಿನ ನಡುವೆ ಮುದುಕಿಯ ಕಣ್ಣಿಗಾರೊ
ಬರ್ಪವೊಲ್ ಭ್ರಾಂತಿ! ನಿಂತಳ್ ಶಬರಿ ಡೊಂಕಾಗಿ!
ಕಟಿಗೊಂದು ಕೈಯಾಗೆ, ಪಣೆಗೊಂದು ಕೈಯೆತ್ತಿ,
ಸುಕ್ಕಿರ್ದ ತಾಂ ಪುರ್ಬಿನ ತೋಲ್ಗೆ ತೆರೆಗಳನೊಡರ್ಚಲ್ಕೆ
ನೋಡಿದಳ್. . .ನೋಡಿದಳ್. . .ಕಣ್ಮೊಳೆಯ ಕೀಲ್ಮಾಡಿ
ದೇಶದೇಹವನಂತೆ ತನ್ನ ಸಂದೇಹಮಂ
ಕೊರೆದಳ್, ತಿರುಪ್ಪಿ ಕೊರೆದಳ್, ಮರಳಿಮರಳಿ! ಹಾ,
ಕಂಡರಿವಳೇಂ ಶಬರಿ ರಾಮಲಕ್ಷ್ಮಣರನಾ
ದುಃಸ್ಥಿತಿಯ ವೇಷದಲಿ?
ಭಗವದಾಗಮನಮೇಂ
ಭಕ್ತನ ನಿರೀಕ್ಷಿಸಿದ ರೂಪದಿಂ ಬಂದಪುದೆ?
ಸುಖದವೋಲಾಶಿಸಲ್ ದುಃಖದೊಲ್ ಮೈದೋರಿ,
ಭಕ್ತನನಿತಂ ಸುಲಿದು ನೈವೇದ್ಯಮಂ ಕೊಳದೆ
ಪೇಳ್ ಅಹಂಕಾರಮಂ ದಿವ್ಯಶೂನ್ಯತೆಗದ್ದುವೊರ್
ಸಂಪೂರ್ಣತಾ ಸಿದ್ಧಿಯೋಲ್!
ಹೊದೆಹೊದೆಗೆದರ್ದ ತಲೆ,
ಕೊಳೆ ಬೆವರ್ ಪತ್ತಿದುಡೆ, ತೇಜಂ ಮಸುಳ್ದ ಮೊಗಂ,
ಖಿನ್ನತೆಯ ಕೋರೆಯುತ್ತಿದ ಕಪೋಲದ ಪೊಲಂ,
ದಯಿತಾ ವಿಯೋಗಾಗ್ನಿಯಿಂಧನ ಶರೀರನಂ,
ರೂಕ್ಷರೂಪದ ರಾಮನಂ ಕಂಡು ಮಂದಾಕ್ಷಿ,

ಶಬರಿ, ಬೇಡಂಗೆತ್ತಳೆನೆ, ಮೈಥಿಲೀ ಪ್ರಿಯನ
ದಾರುಣ ಸ್ಥಿತಿಗೇತಕಿನ್ ಬೇರೆ ಸಾಕ್ಷಿ? ಆ
ಬಿಲ್ಲೊಪ್ಪೆತ್ತರಂ ತನ್ನ ಬಿಯದ ನಂಟರ್ಗೆತ್ತು,
ಕೋಗಿಲೆಯ ಮರಿಯೆಂದು ತುಡುಕಿದರೆ ಕಾಗೆಮರಿ
ಕೂಗಿದವೊಲಾಯ್ತೆಂದು ಬಗೆಯುಲ್ಲಸಂ ಕುಗ್ಗಿ,
ಮುದುಕಿ ಆ ಬಂದರಂ ಭೀಕರಾಕಾರರಂ
ನೋಡುತಿರೆ, ಲಕ್ಷ್ಮಣಂ:
"ದಣಿದು ಬಂದಿಹೆವಜ್ಜಿ;
ಬಿಸಿಲಳುರುತಿದೆ; ಗುಡಿಸಲೊಳಗಿನಿತು ತಾವಿತ್ತು,
ತಿನಲಿತ್ತು, ಕರುಣಿಸೈ ನಿನ್ನ ಈ ಪರದೇಶಿ
ಕಂದರಂ ಚರಣಿಯಣಿಗಳಂ!"
"ಕಂಡವರ್ಗೆಲ್ಲ,
ಬರ್ಪ ಬೇಡರ್ಗೆಲ್ಲಮುಣಿಸಿತ್ತು, ಬೀಡಿತ್ತು,
ಮೆಲ್ಪಾಸನೀಯೆ ನಾನೇನು ಅಡುಗೂಳಜ್ಜಿ
ಅಲ್ಲ ಕಾಣಯ್ಯ!" ಇಂತು ನಿಷ್ಠುರವೆಂದೊಡಂ
"ಬಡವಳಿದ್ದುದನೀವೆ; ಬನ್ನಿಂ!" ಎನುತ್ತಾ ಅಜ್ಜಿ
ನಡೆದಳೊಳಯಿಂಕೆ. ಲಕ್ಷ್ಮಣನಣ್ಣನಂ ನೋಡಿ
ನಸುನಕ್ಕನಿರ್ವರುಂ ಮುದುಕಿಗೆ ಮನಂ ಕರಗಿ
ಪದೆದು ಪೊಕ್ಕರು ಪರ್ಣಶಾಲೆಯಂ.
ಉರಿಬಿಸಿಲ
ಝಳದಿಂ ಗುಡಿಸಲೊಳಗೆ ಬಂದಿನಿತನಂತರಂ
ಕಣ್‌ತಂಪು ಶಾಂತಿಯಂ ಪಡೆದ ಬೇಡಿತಿ ಮರಳಿ
ನೋಡಿದಳ್ ಬಂದತಿಥಿ ಮಕ್ಕಳಂ; ಮೇಣ್ ಶಂಕೆಯಿಂ:
"ನೀಮೆತ್ತಣಿಂದಮೈತಂದಿರಯ್? ನೀಮಾರೊ,
ಕಂದರಿರ? ನನ್ನ ಈ ಕಣ್ ಮಬ್ಬು; ಬಗೆ ಮಂಜು;
ತಿಳಿಯೆನೇನೊಂದುಮಂ."
ಊರ್ಮಿಳೇಶಂ: "ಅಜ್ಜಿ,
ಮನೆಯಿಲ್ಲ ಮಾರಿಲ್ಲ; ಮನೆಗೆಟ್ಟು ನೆಲೆಗೆಟ್ಟು
ಕಾಡು ಬೀಡಾದರೆಂ. . . ಮೀಹಕೇಂ ಕೊಳಮಿಹುದೆ
ಇಲ್ಲೆಲ್ಲಿಯಾದೊಡಂ, ತಾಯಿ?"
ಅಚ್ಚರಿವಡುತೆ

ಶಬರಿ: ''ಮೀಹಕ್ಕೆ? (ಬೇಡರಿಗೇಕೊ ಮಜ್ಜನಂ!)
ಕೊಳಮಿರ್ಪುದಲ್ಲಿ ಆ ಪೇರಿಳೆಯ ಮರದ ಅಡಿ.–
ನಿಮ್ಮಂತೆ ಮನೆಗೆಟ್ಟು ನೆಲೆಗೆಟ್ಟು ತೊಳಲುವರ್
ಈ ನಾಡೊಳೆನಿಬರೋ? ಏಂ ಕೇಡುಗಾಲಮೋ?
ಅರಗುಲಿಗಳೊರ್ವನ ಸತಿಗೆ ಮತ್ತೊರ್ವನಳುಪುವಂ!''
ಬೆಚ್ಚಿ ನುಡಿದನ್ ದಾಶರಥಿ ಮೊಳಗು ದನಿಯಿಂದೆ:
''ಆರ ಸತಿಗಾರಳುಪಿದರು, ಅಜ್ಜಿ?''
''ಹೋಗು, ಮಗು,
ಮಿಂದು ಬಾ. ಕತೆವೇಳ್ವೆನುಂಡಮೇಲಾ ಹೊಲಸು
ವಾರ್ತೆಯಂ.''
ಮೀಯಲೈದಲ್ಕಿರ್ವರುಂ ಕೊಳಕೆ,
ಮುದುಕಿ ಕೌತುಕಕಾಗಿ ಮುಟ್ಟಿ ನೋಡಿದಳವರ
ಪಿಟಕಮಂ, ಬಿಲ್ಗಳಂ, ಬತ್ತಳಿಕೆಯಂ, ಮತ್ತೆ
ನಾರುಡೆಗಳಂ. ವಸ್ತುವೊಂದೊಂದರಿಂದಾಕೆ
ಬೆಚ್ಚುತಚ್ಚರಿವಟ್ಟಳಾದೊಡಂ, ತನ್ನೂಹೆ
ರಚಿಸಿರ್ದ ರಾಮನಂ ಕಂಡಳಿಲ್ಲಾ ಬಂದ
ಕೈರಾತ ರೂಕ್ಷಾವತಾರರಲಿ.
ಅನಿತರೊಳ್
ಮಿಂದು ಬಂದರು ರಾಮ ಸೌಮಿತ್ರಿ. ಕರ್ಪ್ಪಿರ್ದ
ಕನಕಮಂ ಕೂರ್ಚಿಸಿದವೋಲಾಗೆ, ಸೋಜಿಗದ
ಸೂಜಿಮೊನೆ ಏರಿದತ್ತಜ್ಜಿಯ ಕುತೂಹಲಂ.
ಬೇಡರ್ಗದೆತ್ತಣಿಂದಾ ತೇಜಮಾಳ್ತನಂ, ಮೇಣ್
ನುಣ್ಪುನುಡಿ, ನಯದ ನಡೆ? ದೊರೆಮಕ್ಕಳಿರವೇಳ್ಕುಮ್
ಎಂದಾ ಮತಂಗಮುನಿ ಶಿಷ್ಯೆ, (ಸೀತೆಯನುಳಿದು
ಬಂದನೀತಂ ರಾಮನಲ್ಲೆಂದು ತರಿಸಂದು,)
ನಳನಳಿಪ ಸುಳಿದಳಿರ ಕುಡಿವಾಳೆಯಂ ಪಾಸಿ;
ಗೀಕುಚಾಪೆಯ ಮಣೆಗಳಂ ಕುಳಿತುಕೊಳಲಿಕ್ಕಿ;
ಪಸುರ್ದೊನ್ನೆಗಳಲಿ ತಿಳಿನೀರ್ಗಳಂ, ಸಸಿಯಡಕೆ
ಹೊಂಬಾಳೆಗಳಲಿ ಕೆನೆವಾಲ್ಗಳಂ ಜೇನ್ತುಪ್ಪಮಂ
ತಂದಿಟ್ಟು; ನೂಲಿಗೆಣಸಂ, ಬಾಳೆವಣ್ಗಳಂ,
ಕಂದಮೂಲಂಗಳಂ, ಹಣ್ಣುಹಂಪಲ್ಗಳಂ,

ಸೌತೆ ಪಚ್ಚಡಿಗಳಂ, ಮಣಿಹೆಂಬೆಯಂ, ಮತ್ತೆ
ಹಚ್ಚನಕ್ಕಿಯ ಬೆಚ್ಚನನ್ನಮಂ ಮೊಸರುಮಂ
ಬೆಲ್ಲಮಂ ಬೆಣ್ಣೆಯಂ ಬಡಿಸಿ, ಸವಿನುಡಿ ನುಡಿಸಿ,
ಮುಗುಳುನಗುತೆಂದಳಿಂತು:
"ಆರ ಸಂಪದಮಾರ್ಗೊ?
ನಿಮ್ಮ ಸಯ್ಪಿದನವರಿಗಾಂ ಬಡಿಸಲೇನಳವೆ?
ತಣಿಯುಂಡು ತಣಿಯಿರಯ್, ಮಗುಗಳಿರ. ಬಂದತಿಥಿ
ಯಾರಾದರೇನಂತೆ?"
"ಆರ ಸಂಪದಮಾರ್ಗೆ
ಹೇಳಜ್ಜಿ? ನಾವುಣುತ್ತಿರ್ಪ ಈ ಸಯ್ಪಾರ್ಗೆ
ಮೀಸಲಾಗಿರ್ದತ್ತು? ಪುಣ್ಯವಂತನೆ ವಲಂ
ನಿನ್ನರಕೆಯಾ ಅತಿಥಿ!"
"ದಶರಥ ಕುಮಾರನಯ್!"
ರಾಮಲಕ್ಷ್ಮಣರೊರ್ವರೊರ್ವರಂ ದೃಷ್ಟಿಸುತೆ
ಮುದುಕಿಯಂ ನೋಡುತಿರೆ:
"ಲಕ್ಷ್ಮಣಾಗ್ರಜನವಂ
ನೆಲವೆಣ್ಮಗಳಿಗಿನಿಯನಯ್!"
ಅತ್ತಲಾ ಶಬರಿ
ಹೆಸರ ಹೇಳುವ ಹರುಷಕುಕ್ಕಿಬರಲುಮ್ಮಳಂ:
"ಕಾಯುತಿಹೆನೀರ್ಯೆದು ವತ್ಸರಗಳಿಂ, ಕಂದರಿರ,
ರಾಮಲಕ್ಷ್ಮಣಸೀತೆಯರಿಗಾಗಿ, ನಿಚ್ಚಮುಂ
ನಿಮಗಿಕ್ಕಿದುಣಿಸನಣಿಮಾಡಿ. ಗುರುವಾಣಿಯುಂ
ಪುಸಿಯಪ್ಪುದೇಂ?" ಹೇಳಿದಳು ಮತ್ತೆ ಮಾತಂಗಿ
ಮುನಿ ಮತಂಗನ ಪೇಳ್ದ ರಾಮಾಗಮನ ಪುಣ್ಯಮಂ
ವಾರ್ತಾ ಭವಿಷ್ಯಮಂ. ಕೇಳಿದಳು: "ನೀವಾರೊ
ಬಡಗರಂದದಿ ತೋರುತಿರುವಿರಿ, ಕುಮಾರರಿರ;
ಕಂಡಿರೇ, ಕೇಳ್ದಿರೇ, ರಾಮನೆಲ್ಲಿದನೆಂದು,
ಎಂದಿಗೈತಹನೆಂದು? ಬಾಳ್ಪಯಣಮಂ ಮುಗಿಸಿ
ಹೋಹ ಮುನ್ನಮದೊರ್ಮೆಯಾದೊಡಂ ರಾಮನಾ
ದೊರೆಕೊಳ್ಳದಿಹುದೆ ಸಿರಿಮೊಗದ ಸಂದರ್ಶನಂ?
ಶಾಂತಿನಿಧಿಯಾತನಂ ಕಾಣ್ಬುದೆ ಪರಮಶಾಂತಿ!"

ಸಜಲ ನಯನಂ ರಾಮನಾಲಿಸಿದನಜ್ಜಿಯಂ.
ನುಡಿದನು ಸಗದ್ಗದಂ:
''ಶಾಂತಿನಿಧಿಯಾತಂಗೆ
ಶಾಂತಿಯಿಲ್ಲದೆ ತೊಳಲುತಿಹನಲ್ತೆ? ಮನೆಗೆಟ್ಟು
ಹೇರಡವಿ ಮನೆಯಾದನಂ ಶಾಂತಿನಿಧಿಯೆಂದು
ಬರಿದೆ ಬಣ್ಣಿಪೆಯೇಕೆ, ತಾಯಿ? ಸಾಮಾನ್ಯನಂ
ದೇವಮಾನ್ಯಂಗೆತ್ತುದಜ್ಜಿ, ನಿನ್ನಳ್ಕರೂಹೆ!''
''ತೆಗೆ ತೆಗೆ! ಮಹಾತ್ಮನಂ ತೆಗಳದಿರ್!''
''ಬಲ್ಲೆನಾಂ
ರಾಮನಂ!''
''ನೀನರಿಯೆಯಾತನಂ!''
''ನಾನರಿಯೆನೇಂ?
ನನ್ನನಾನರಿಯೆನೆಂದಾಡುತಿಹೆ!''
ಶಬರಜ್ಜಿ,
ಬೆರಗುಹೊಡೆದಂತೆ, ರಾಮನ ಕಣ್ಗೆ ಕಣ್ಣಿಟ್ಟು
ನೋಡಿದಳ್. ರಾಮನೊಯ್ಯನೆ ಮೊಗವನಿಳುಹುತ್ತೆ,
ಕಣ್ಣೆತ್ತದುಣತೊಡಗಿದನ್ ಮತ್ತೆ. ಮುಕ್ತಾಶ್ರುಗಳ್
ಕೈ ತುತ್ತಿಗುದುರಿದುವೆ? ಕಾಣ್ಕೆಯೋ? ಕಲ್ಪನೆಯೊ?
ಮಾತನುಳಿದಳ್ ಮುದುಕಿ: ತನಗರಿಯದರ್ಥದಿಂ
ಕಾಣ್ಬುದೆಂತಿತ್ಯರ್ಥಮಂ?
ತಣಿದನಂತರಂ
ದಣಿವಾರೆ ಮಲಗಿದರ್ ಮಧ್ಯಾಹ್ನ ವಿಶ್ರಾಂತಿಯಂ.
ಬಿಳಿಮೆಯ್ಯನೆಳ್ಚತ್ತು ಹೊರಗೆ ಹೋಗಿರೆ, ನೀಲಿ
ಮೆಯ್ಯವಂ ಕನವರಿಸಿದನ್ 'ಸೀತೆ, ಬಾ ಇಲ್ಲಿ;
ಬಾ, ಪ್ರಿಯೆ, ಜನಕಜಾತೆ!' ಗುಡಿಸಲೊಳಗಾ ಬಳಿಯೆ
ಬೆಲ್ಲ ಬೇಲದ ಪಣ್ಗಳಂ ಬೆರಸಿ ಪಾನಕಂ
ಗೆಯ್ಯುತಿರ್ದಜ್ಜಿ ಬಂದಳು ಓಡಿ. ಸಜ್ಜೆಯೆಡೆ
ನಟ್ಟು ನಿಂತವಧರಿಸಿದಳ್ ದೇವಗಾತ್ರನಂ,
ಕನಸಿನಲ್ಲಿಯೆ ಮುಗುಳುನಗುತಿರ್ದನಂ. ನೋಡಿ
ಬಗೆಯಿಂಪನನುಭವಿಸಿದಳ್: ತನ್ನಾ ಸೌಮ್ಯನಂ
ಕಂಡರಿತಳಾ ಮಂದಹಸಿತ ಮುಖಕಮಲದೊಳ್!

ಆದೊಡೇನದು ಮತ್ತೆ? ನೋಡುತಿರೆ, ಹಿಂಗಿತಾ
ಮುಖಸೌಮ್ಯತಾ ಮುದ್ರೆ! ಸಂಕ್ಷೋಭಿಸಿತೆ ನಿದ್ರೆ?
ವೈರದಿಂ ವಿಕಟ ಕರ್ಕಶಮಾಗೆ, ಕೋಪದಿಂ
ಕಾಕು ಕೂಗಿದನಳ್ಕಿ ಸರಿವಂತೆ ಶಬರಿ: 'ನಿಲ್, ನಿಲ್,
ರಾಕ್ಷಸಾಧಮ, ನಿಲ್! ಪೇಳೆಲ್ಲಿಗುಯ್ದಪಯ್
ನನ್ನ ಸೀತೆಯನೆಲವೊ ನೀಚ!' ಬದ್ಧಭ್ರುಕುಟಿ,
ಸೆರೆ ಬಿಗಿಯುವೋಲೌಡುಗಚ್ಚಿ, ನಿದ್ದೆಯನೊದ್ದು,
ಸೀಳ್ದು ದುಃಸ್ವಪ್ನಮಂ, ಕುಳಿತೆದ್ದನಬ್ಬರಿಸಿ,
ತನ್ನ ಸುತ್ತಂ ನೋಡಿ ಬೆಬ್ಬಳಿಸಿ. ಬೆದರೆದೆಯ
ಶಬರಜ್ಜಿ ಕಾಣಲೊಡಮಿಳುಹಿದನ್ ಮೋರೆಯಂ,
ನಾಣ್ಚಿ: "ತಪ್ಪಿದೆನಜ್ಜಿ. ಕಂಡ ಕನಸಂ ನನಸು
ಗೆತ್ತು, ಕೆಮ್ಮನೆ ನಿನ್ನನಂಜಿಸಿದೆ." ದೊಪ್ಪನೆಯೆ
ಮುದುಕಿ ಬಿಳ್ದಪ್ಪಿದಳ್ ರಾಮನಂ: "ದಮ್ಮಯ್ಯ,
ಸಾಕಿನ್ನು, ಮರೆಮಾಡಬೇಡಯ್ಯ, ಓ ನನ್ನ
ಕಂದಯ್ಯ, ರಾಮಚಂದ್ರಯ್ಯ! ಏನಾಯ್ತಯ್ಯ
ನನ್ನ ಮಗಳಿಗೆ? ಹೇಳು! ಸೀತೆ ಎಲ್ಲಿಹಳೆಲ್ಲಿ
ಕೇಡಾಯಿತೇನಾಯಿತಯ್ಯಯ್ಯೊ, ನನ್ನ ಈ
ಪಾಳ್ಗಣ್ಗಳರಿಯಲಾರದೆ ಹೋದುವಯ್! ಅಯ್ಯೊ,
ನಾನಾಗಳೆಯೆ ನಿನ್ನ ತೆರೆದ ಪಿಟಕದೊಳೊಂದು
ಸೀರೆಯಂ ಕಂಡೆನಾದೊಡಮರಿವುದೆಂತಯ್ಯ, ಪೇಳ್,
ಈ ಮುಪ್ಪುಬೆಪ್ಪು?" ತಾಯಪ್ಪುಗೆಯ ತೊಟ್ಟಿಲೊಳ್
ಸಿಸುವಾಗುತಾ ರಾಮನಿಂತುಃ "ನಿರ್ಭಾಗ್ಯನೆಂ;
ರಾಮನಾಂ! ಸೀತೆಯನಸುರನುಯ್ದನಾಕೆಯಂ
ಹುಡುಕಲೆಂದಲೆಯುತಿಹೆನಜ್ಜಿ, ಲಕ್ಷ್ಮಣನೊಡನೆ
ತೊಳಲಿ!" ಶಬರಿಯ ತೋಳ್ಗಳಪ್ಪಿರ್ದ ತಳ್ಕೆಯೊಳ್
ಆ ದುಃಖಿ ಬಿಕ್ಕಿ ಬಿಕ್ಕಳ್ತನತಿ ದೈನ್ಯದಿಂ: ಕೇಳ್,
ತಾಯ್ಮಡಿಲೊಳಾರಾದೊಡೇಂ ತಾಂ ಬರಿ ಶಿಶುಗಳಲ್ತೆ!
ತಾಳಲಾರದ ಶೋಕಭಾರದಿಂ ದಾಶರಥಿ
ಏಳಲಾರದೆ ಶಯ್ಯೆಯಿಂ ಶಬರಿಶುಶ್ರೂಷೆಯಂ
ಬೇಳ್ಪತಿಥಿಯಾದನ್. ಪೇಳಲೇಂ? ಮನೋರೋಗಕಾ
ಪ್ರೇಮವೆ ಭಿಷಗ್ವರಂ. ಪ್ರಾಣದೇರ್ಗಾ ಪ್ರೀತಿ ತಾಂ

ಪರಮೌಷಧಮೆನಲ್ಕೆ, ಪ್ರೀತಿಯಲ್ಲದೆ ಬೇರೆ
ಭೇಷಜಂ ಪೋ ಭ್ರಾಂತಿಯೆಂಬಿನಂ, ಕೇಳಾರೈಕೆ
ಮಾಡಿದಳೊ ತನ್ನಿಷ್ಟದೇವತಾ ಮೂರುತಿಗೆ
ಆ ತಪಸ್ವಿನಿ ಶಬರಿ. ಹಗಲೆನ್ನದಿರುಳೆನ್ನದೆಯೆ
ಮೇಣೆಚ್ಚರೆನ್ನದೆ ನಿದ್ದೆಯೆನ್ನದೆ ನಿರಂತರಂ
ರಾಮಸೇವಾ ಸಾಧನೆಗೆ ಸವೆಸಿದಳ್ ಮುದುಕಿ
ತನ್ನಾಯುವಂ. ಕೇಳುವಳು, ಹಾಸಗೆಯ ಬಳಿಯೆ
ಕುಳಿತು, ರಾಮನ ಮೆಯ್ಯನೆಳವುತ್ತೆ, ವನವಾಸದಾ
ಕಥೆಯೆಲ್ಲಮಂ; ಅಂತೆ ಸಂತೈಸುವಳು ಮನೋ
ವ್ಯಥೆಯೆಲ್ಲಮಂ ಧೈರ್ಯವಾಕ್ಯಂಗಳಿಂ. ಮತ್ತೆ
ಹೇಳುವಳು ತನ್ನ ಬಾಳಿನ ಕತೆಯ ವಿವರಮಂ,
ಕೇಳ್ವಗೆ ಕುತೂಹಲಂ ಖೇದವನಳಿಸುವಂತೆ.
  ಹಿಂಗಲೊಲ್ಲದೆ ಹೋಯ್ತು ರಾಮನ ವಿಚಿತ್ರರುಜೆ.
ತೇಜಂ ಮಸುಳಿದತ್ತು. ಭೀಮವಪು ಕೃಶವಾಯ್ತು.
ದಿನದಿನಕೆ ರಾವಣನ ರಾಜತಂತ್ರದ ಬಯಕೆ
ಕೈಗೂಡಿದತ್ತೆಂಬಿನಂ ಮುರುಟಿದುದು ಮನದ
ಕೆಚ್ಚು; ಮೊಗಂಬಾಡಿ ಬಿಳ್ದುದು ನೆಚ್ಚು. ಒರ್ದಿನಂ
ಕರ್ದಿಂಗಳಿರುಳಲ್ಲಿ ಲಕ್ಷ್ಮಣನೊರ್ವನೆಯೆ ಹೊರಗೆ
ನಡೆಯುತೊಂದರೆಯಗ್ರದೊಳ್ ಸುಯ್ದುಸುಯ್ದಳ್ತಳ್ತು
ಕುಳ್ತು, ಸಪ್ತರ್ಷಿ ಮಂಡಲಮೊಯ್ಯನೇಳ್ವುದಂ
ನೋಡುತಿರೆ, ಬೆನ್ನಡೆಯೊಳಾರೊ ಬಂದಂತಾಯ್ತು!
ಕತ್ತಲೊಳ್ ಕಣ್ಣರಿಯದಿರ್ದೊಡಂ ಶಬರಿಯಂ
ತಿಳಿದನವಳುಂ ಕೈಯನಿಟ್ಟಳ್ ಪೆಗಲ್ಗೆ: "ಇದೇನ್,
ಕಂದ, ಲಕ್ಷ್ಮಣ, ನೀನುಮಿಂತೇಕೆ ಪೇಳೆರ್ದೆಗೆಟ್ಟು
ಕೊರಗುತಿಹೆ?" ಗದ್ಗದಿಸುತೆಂದನ್ ಸುಮಿತ್ರಾತ್ಮಜಂ:
"ಅಜ್ಜಿ, ಅತ್ತಿಗೆಗಂತು ಪಾಡಾಯ್ತು. ಅಣ್ಣಂಗೆ. . .
ಅಣ್ಣಂಗೆ. . .ಅಣ್ಣನುಂ. . ." ರೋದಿಸುವನಂ ತಡೆದು
ಕಣ್ಬನಿಯನೊರಸಿ: "ಬಾ ಒಳಗೆ, ಬಿಡು ದುಃಖಮಂ,
ಸೌಮಿತ್ರಿ. ನಿನ್ನಣ್ಣನುಸಿರಿಗಾಂ ಹೊಣೆಗಾರ್ತಿ.
ನನ್ನ ಗುರುಕೃಪೆಯಿಂದೆ ರಾಮನ ರುಜೆಯನೆಲ್ಲಮಂ
ಹೀರಿ ಬಿಸುಡುವೆ, ನೋಡು ಬಾ!" ನಡೆದರಿರ್ವರುಂ

ಒಳಗೆ. ತೋಲೆಲ್ಳುಗೂಡಾಗಿ ಸಜ್ಜೆಯ ಮೇಲೆ
ಮಲಗಿರ್ದ ಮೂರ್ತಿಯಂ ಬಲಗೊಂಡಳಾ ಮುದುಕಿ,
ಧ್ಯಾನಿಸುತೆ ತನ್ನ ಗುರುವಂ. ತನ್ನ ಮೋಕ್ಷಕ್ಕೆ
ತನ್ನ ದೇವತೆಯಂ ಪ್ರದಕ್ಷಿಣಾಪೂರ್ವಕಂ
ಪ್ರಾರ್ಥಿಸುವಳೆಂಬಂತೆ ಮಂತ್ರಘೋಷಂ ಗೈದು
ಕೈಮುಗಿದಳಡ್ಡಬಿದ್ದಳ್ ರಾಮನಂಘ್ರಿಯಂ
ಮುಟ್ಟಿ. ಲಕ್ಷ್ಮಣನೆಡೆಗೆ ತಿರುಗಿದಳ್. ಬೆರಗಾಗಿ
ನೋಡುತಿರ್ದಾತಂಗೆ ನುಡಿದಳ್ ನಗುತೆ: "ವತ್ಸ,
ರಾಮನಿನ್ ಸುಕ್ಷೇಮನಯ್! ಪತ್ತುವಿಡು ನಿನ್ನ
ದುಕ್ಕಮಂ!" ಮರುದಿನಂ ಬೆಳಗಾಗಲೇನೆಂಬೆ?
ರಾಮನೆದ್ದನ್ ಸುದೃಢಕಾಯದಾರೋಗ್ಯದಿಂ:
ಉಜ್ವಲ ಲಸನ್ನೇತ್ರನಂ, ಸುಪ್ರಸನ್ನಾನನಂ
ಶೋಭಿಸುವಮಲ ಗಾತ್ರನಂ ಕಂಡು ಸೌಮಿತ್ರಿ
ಕೆಡೆದನೊ ಕೃತಜ್ಞತೆಗೆ ಶಬರಿಯ ಚರಣತಲಕೆ!
ಹಾಸಗೆ ಹಿಡಿದಳಾ ದಿನವೆ ಶಬರಿಯುಂ. ತನ್ನ
ಶುಶ್ರೂಷೆಯಿಂ ನಿದ್ದೆಗೆಟ್ಟಳಂ, ದಣಿದಳಂ,
ಬೆಂಡಾದಳಂ ರಾಮನುಪಚರಿಸಿದನ್, ಮರೆತು
ತನ್ನಳಲಂ. "ಮಗುವೆ, ಮರುಗದಿರೆನಗೆ. ಪಸುರೆಲೆಗೆ
ವೇಳ್ಕುಮುಪಚರ್ಯೆ; ಪಣ್ಣೆಲೆಗೇಕೆ?" ಮಾತಂಗಿ
ಸಂತವಿಟ್ಟಳ್ "ಧನ್ಯೆಯಾಂ, ರಾಮಚಂದ್ರ, ನೀಂ
ಪ್ರೀತಿ ಪರಿಚರ್ಯೆಗೆಯ್ಯುತಿರಲಾಂ ಶಾಂತಿಯಿಂ
ಸೇರಿದಪೆನಧ್ಯಾತ್ಮಮಂ. ಮಿಗಿಲಿದಕೆ ಸಯ್ಪು ತಾಂ
ಬೇರೇನೊಳದೆ?–ಮಾಳ್ಪ ಕಜ್ಜಂ ನಿನಗೆ ಮುಂದೆ
ಬೆಟ್ಟವಿದೆ: ಬೆಟ್ಟಿತಾಗಿದೆ. ಕನಸನಾಂ ಕಂಡೆ, ಕೇಳ್:
ವಿತ್ತೇಶನವರಜನ ದಶಕಂಠ ರಾವಣನ
ಲಂಕೆಯುದ್ಯಾನದೊಳ್ ಸೀತೆ ಸೊರಗಿರ್ದಳಯ್,
ಮರುಗಿರ್ದಳಯ್. ಕಂದ, ನಿನಗಂದು ಪೇಳ್ದೆನಾಂ
ನಿನ್ನಂತೆ ಮನೆಮಡದಿಗೆಟ್ಟು ಕೆಳೆಯರ್ವೆರಸಿ
ಕಾಡುಪಾಲಾದನಂ ಸುಗ್ರೀವನಂ. ನೋಡು,
ಓ ಅಲ್ಲಿ, ದಿಙ್ಮೇಖಲಾ ರೇಖೆಗಿದಿರೆದ್ದು ಕಾಣ್
ಭವ್ಯಮಾಗಿಹುದೆಂತು ಋಶ್ಯಮೂಕಂ, ದಿವ್ಯಮಾ

ಪರ್ವತಂ! ತಳ್ಪಲದಕಿರ್ಪುದು ಮತಂಗ ಮುನಿ
ಕಾನನಂ. ರಂಜಿಸುವುದದಡವಿಯಂಚಿಂದಲ್ಲಿ
ಪಂಪಾ ಸರೋವರಂ. ತುಂಗಭದ್ರೆಯ ಮೇಲೆ
ಬಳಿಯೊಳಿದೆ ಕಿಷ್ಕಿಂಧೆ, ವಾನರ ರಾಜಧಾನಿ.
ವಾಲಿಯದನಾಳ್ವನವನಿಂದೆ ನಿರಸನವೊಂದಿ
ನೆಲೆಗೆಟ್ಟ ಸುಗ್ರೀವನಿಹನ್ನೈ, ಗುಹಾವಾಸಿ
ತಾನಾಗಿ, ಗುರು ಮತಂಗನ ಶಾಪರಕ್ಷೆಯಾ
ವಾಲಿ ದುರ್ಗಮ ಋಶ್ಯಮೂಕದಲಿ. ಪೋಗಿ ನೀಂ
ಪಡೆಯವನ ಸಖ್ಯಮಂ. ದುಃಖಿಗೆ ನೆರಂ ದುಃಖಿ.
ಗೆಲ್ಗೆ ದೈವೇಚ್ಛೆ; ನಿನ್ನಿಚ್ಛೆಯುಂ ಸಲ್ಗೆ!'' ಕೇಳ್,
ನುಡಿ ನುಡಿಯುತತಿಹರ್ಷಮುಖಿಯಾಗಿ, ಸೌಮಿತ್ರಿ
ರಾಮರಂ ಸುಖಬಾಷ್ಪನೇತ್ರದಿಂ ನೋಡುತ್ತೆ
ನೋಡುತ್ತೆ, ಕಣ್ಮುಚ್ಚಿದಳ್ ಆ ಅಮರ ಸನ್ಮಾನ್ಯೆ,
ದೇವ ಸೀತಾನಾಥ ದಿವ್ಯಾಶ್ರು ತೀರ್ಥಜಲ
ಸಂಸ್ನಾತೆ, ಸಂಪೂತೆ, ಮೇಣ್ ಶಿವಕಳೇಬರೆ, ಧನ್ಯೆ!

ಸಂಚಿಕೆ ೪

# ಅತ್ತಲಾ ಕಿಷ್ಕಿಂಧೆಯೊಳ್

ಏಕಳುವೆ, ತೇಜಸ್ವಿ? ಕಲ್ಪನೆಯೆರಂಕೆಯಂ
ಏರಿ ಬಾ ನನ್ನೊಡನೆಃ ಕಾಣ್ಬುದೇನದೊ ಅಲ್ಲಿ
ಕಿಷ್ಕಿಂಧ ಗಿರಿವನ ಗುಹಾದ್ವಾರದೆಡೆಯಲ್ಲಿ?
ನಿಂದಿರ್ಪನೋರ್ವ ಹರ್ಯಕ್ಷ ವಕ್ಷಾನ್ವಿತಂ
ವೃಷಭ ಸನ್ನಿಭ ಗಮನನಿಭಸಮ ದೃಢ ಶರೀರಿ!
ಮತ್ತೆ ಶತಪಥಮಲೆವನೇಕಮಂ, ಏಕಾಂಗಿ?
ಬಾಹುದಂಡದಿ ಗದಾದಂಡಮಂ ಪೊತ್ತೇಕೆ, ಪೇಳ್,
ಪುಲ್ಮೀಸೆ ಕವಿದಿರ್ಪ ಗವಿಯ ಬಾಯನೆ ನೋಡುವನ್;
ಸುಯ್ವನಾಳೋಚಿಸುವನೊಯ್ಯನೆ ಗದೆಯನಿಳಿಸಿ
ತಳ್ಪಲಡವಿಯನೊರ್ಮೆ, ಬೆಟ್ಟನೆತ್ತಿಯನೊರ್ಮೆ,
ನೋಡದೆಯೆ ನೋಡಿ? ವಾನರ ಕುಲಂ, ನರವರಂ,
ವಾಲಿಯ ಸಹೋದರಂ ಸುಗ್ರೀವನಲ್ತೆ ಆ
ಓಜೋನ್ವಿತಂ? ಬಿಲಮುಖದೊಳೇಂ ತಪಂಗೆಯ್ವನೇಂ?
ಕಳೆದತ್ತು ಶತದಿನಂ. ಕಳೆದತ್ತು ಶತರಾತ್ರಿ.
ದೀರ್ಘ ದಶದಶ ದಿನಂ. ದೀರ್ಘ ದಶದಶ ರಾತ್ರಿ.
ದಿನರಾತ್ರಿ ರಾತ್ರಿದಿನಮನಿಶಂ ಗುಹಾಮುಖದಿ
ವಾಲಿಯನುಜಂಗದೇನಾ ಪರಿವ್ರಾಜನಂ?
ಧವಳಿಸಿತವುಂಚಿ ಕೌಮುದಿ ಧೌತ ಧಾತ್ರಿಯಂ
ಸುಪ್ತಜನ ರಾತ್ರಿ. ನಿಶ್ಶಬ್ದಾಬ್ಧಿಯಾಳಕ್ಕೆ
ಕಂತಿರ್ದುದೈ ಕಿಷ್ಕಿಂಧೆ. ಇರ್ದಕಿರ್ದಂತೊಂದು
ವೈರಭೈರವ ಅಟ್ಟಹಾಸಂ ಕೊಡಂಕೆಯಂ
ಇರಿದುದು; ಕಲಂಕಿದುದು ಪುರಮೌನಮಂ. ಕಿವಿಗೆ

ಕೆಪ್ಪುಮಂತೆಯೆ ಬಗೆಗೆ ಬೆಪ್ಪುಮೊದವಿರೆ ಜನಕೆ,
ಬಂದನು ಜನೇಂದ್ರನಾ ರಿಪುನಿಷೂದನ ವಾಲಿ
ತನ್ನರಮನೆಯನುಳಿದು. ತನ್ನ ತಂದೆಯ ಕೊಂದ
ಮುನ್ನಿನ ಹಗೆಗೆ ತನ್ನನೊಕ್ಕುವ ಬಗೆಗೆ ಸೊಕ್ಕಿ
ಗರ್ಜಿಪಸುರನನರಿತನಾ ದುಂದುಭಿಯ ಮಗಂ
ಮಾಯಾವಿಯೆಂದು ದುಂದುಭಿಯ ದುಷ್ಕೃತಿಯಲಾ
ನೀನೆಂದು ಪ್ರತ್ಯಟ್ಟಹಾಸಮಂ ಗರ್ಜಿಸುತೆ
ಬೆನ್ನಟ್ಟಿದನ್ ಯಮೋಪಮಂ, ಶಿಖರೋಪಮದ
ಬಂಡೆ ಮಂಡೆಯ ಗದೆಯನೆತ್ತಿ. ಬೆನ್ಬಲಮಾಗಿ
ತನ್ನಣ್ಣನೊಡಲೆಯೆನೆ ಚರಿಸಿದನ್ ಸುಗ್ರೀವನುಂ.
ಕಾಣಲಿರ್ವರನೆಳೆತಟಂ ಮಾಡಿ ನೆಲೆಗೊಯ್ದು
ಕೊಲ್ಲಿಸುವೆನೆನ್ನವರ ಕೈಯಿಂದಮೀ ಮಹಾ
ಕಪಿಕೇತನರನೆಂದು, ಓಡಿದನ್ ಮಾಯಾವಿ,
ಬೆಳ್ದಿಂಗಳಿರುಳಿನೊಳ್ ನೆಳಲ ಕರ್ದಿಂಗಳಂ
ಮೆಯ್ಯ ಕರ್ದಿಂಗಳಿನಿಳಿಕೆಗೈದು. ಅರೆಯಟ್ಟಿದನ್
ರೋಷವಶನಿಂದ್ರಸಂಭವಂ, ವಾಲಿ; ಬೆಂಬಲಂ
ಸಂಚಲಿಸಿದನ್ ಸೂರ್ಯಸಂಭವಂ, ಸುಗ್ರೀವ.
    ಓಡುತಾ ಮಾಯಾವಿ ತಾಂ ಮೆಯ್ಗರೆದನೊಯ್ಕನೆಯೆ
ನುಗ್ಗಿ ತೃಣಸಂಛನ್ನ ಧರಣಿಯ ಮಹಾ ಗುಹಾ
ವಿವರಮಂ. ''ನಿಲ್ಲಿಲ್ಲಿ, ಸುಗ್ರೀವ, ಅಸುರನಂ
ಒಕ್ಕಿ ಬಹೆನನ್ನೆಗಂ ಬಿಲದ ಬಾಯೆಡೆಯಿರ್ದು
ಕಾಯುತಿರ್!'' ಇಂತಾಣತಿಯನೊದರಿ ಆ ವಾಲಿ
ವಾನರ ಮಹಾವೀರನಿರದೆ ನೆಗೆದನ್ ಬಿಲ
ರಸಾತಲಕೆ! ಕಾಯುತಿಹನಣ್ಣನಾಣತಿಯಂತೆ
ಸುಗ್ರೀವನಾ ಬಿಲದ್ವಾರಮಂ. ನೂರ್ಪಗಲ್
ನೂರಿರುಳ್ ಉರುಳ್ಪುವಾದೊಡಮಯ್ಯೊ ಅಣ್ಣನಂ
ಕಾಣದೆಯೆ ಕಾತರಿಸುತಿರ್ಪನದೊ ನೋಡಲ್ಲಿ
ಕಿಷ್ಕಿಂಧ ಗಿರಿವನ ಗುಹಾದ್ವಾರದೆಡೆಯಲ್ಲಿ!
ಕಳೆದತ್ತು ಶತದಿನಂ. ಗತಿಸಿತ್ತೆ ಶತರಾತ್ರಿ.
ದೀರ್ಘ ದಶದಶ ದಿನಂ. ದೀರ್ಘ ದಶದಶ ರಾತ್ರಿ.
ದಿನರಾತ್ರಿ ರಾತ್ರಿದಿನಮನಿಶಂ ಗುಹಾಮುಖದಿ

ವಾಲಿಯನುಜಂ ಕಾಯ್ದನಣ್ಣನಳಿವಂ ಮನದಿ
ಶಂಕಿಸುತೆ. ನಿಶ್ಚಯಿಸುತಿರೆ, ನೊರೆಯ ನೆತ್ತರಂ
ಕಾರ್ದುದೈ ಗುಹೆಯ ಬಾಯ್! ಭೂಗರ್ಭದಾಳದಿಂ
ಕೇಳ್ದುದಾರ್ಭಟೆ, ನಿರಾಕಾರದೂಹೆಗೆ ಕಣ್ಣು
ಕೈ ಕಾಲುದಿಸುವಂತೆ! ವಾಲಿ ಮರಣಂ ಗೆತ್ತು,
ಪೆಣದಿನಿಗಳಳಿಗೆಂದು, ಬಿಲದ ಬಾಯಿಗೆ ಗಿರಿಯ
ಗುಂಡು ಹೆಬ್ಬಂಡೆಯನಿಡಿದು, ಜಡಿದು, ಬಲಿದಡಕಿ,
ಮರಳಿದನ್ ಕಿಷ್ಕಿಂಧೆಗೆ. . . ಮೇಲೆ ಕಟ್ಟಳೆಯಂತೆ
ಸುಗ್ರೀವನೆರೆಯನಾದನ್ ಕಪಿಧ್ವಜ ಕುಲಕೆ
ಮತ್ತೆ ಮೇದಿನಿಗೆ.
ಅತ್ತಲಾ ರಿಪುಭೈರವಂ,
ವಾಲಿ, ಕದನದೊಳೊತ್ತಿ ಮುರಿದು ಮಾಯಾವಿಯಂ
ಮತ್ತಿತ್ತಲಿಳೆಯತ್ತಲೈದಿದನ್, ಗೆಲ್ಸಿರಿಗೆ
ತನ್ನ ತೋಳೊಡ್ಯಾಣಮಂ ಮಾಡಿ ಪೊತ್ತುಯ್ವ
ಮತ್ತ ಚಿತ್ತೋತ್ಸಾಹದಿಂ. ಬಂದನಾದೊಡೇಂ?
ಸುತ್ತಲೆತ್ತೆತ್ತಲುಂ ಕೆತ್ತ ಕಲ್ಗತ್ತಲೆಗೆ
ಕಣ್ ಬತ್ತಲಾದತ್ತು. ಬಟ್ಟೆಗಾಣದೆ ಕಿನಿಸಿ
ಹುಡುಕಿದನು ವಾನರಂ. ಹುಡುಕಿ ತಡವಿದೊಡಹಾ
ಬಂಡೆಗಳನೆಡವಿದನ್. ತೋರದಾದುದು ಹಾದಿ
ಬಿಲದಾದಿ. ಕೂಗಿದನ್ ಮುನಿದು ಕೆಚ್ಚನೆ ಕೆಚ್ಚು
ಕಿಚ್ಚುರಿದು ಸುಗ್ರೀವನಂ, ಗವಿಯದುರುವಂತೆ.
ಮಾರೊರಲ್ದತ್ತು ತಾರಗ್ರೀವದಿಂ ಗುಹೆಯ
ಗೋನಾಳಿ. ಸುಗ್ರೀವನುತ್ತರವನಾಲಿಸದೆ
ಮತ್ತೆಮತ್ತೊರಲಿದನ್. ರವದ ರೌದ್ರಕೆ ಗುಹಾ
ತಾಲವ್ಯದಿಂ ಭೀತಿಶಿಥಿಲಂ ಜಗುಳ್ದುವೆನೆ
ಮೃಚ್ಛಿಲಾರೂಪುವೆತ್ತಕ್ಷರಗಳೆಂಬಿನಂ
ಕಲ್ಲು ಮಣ್ಣಕ್ಷತೆಯನೆರಚಿದತ್ತಣಕದಿಂ
ವಾಲಿಯ ತಲೆಯ ಮೇಲೆ! ಮದಹಸ್ತಿ ಬಲಯುತಂ
ಹಸ್ತದಿಂ ಮಸ್ತಕದಿನಂತೆ ಪದಗದೆಯಿಂದೆ
ತಳ್ಳಿದನ್, ನೂಂಕಿದನ್, ಕುಟ್ಟಿದನ್, ಗುದ್ದಿದನ್,
ಬೈದನೊದೆದನ್, ಕರೆದನುರಿದನ್, ತಪಿಸಿ, ಶಪಿಸಿ,

ಬಲಶಾಲಿ ವಾಲಿ. ಕಂಬನಿಗರೆದನೈ ಕಡೆಗೆ,
ತಾರೆಯಂ, ತನ್ನೊಲಿದ ಹದಿಬದೆಯ ನೀರೆಯಂ,
ನೆನೆದು. ನೆನೆದುದೆ ತಡಂ, ಸಂಚರಿಸಿದುದು ಮಿಂಚು
ಧಮನಿಧಮನಿಯೊಳುಜ್ವಲಂ ಪರಿದು! ಕಪಿಕುಲಂ
ಚಿಮ್ಮೆಳ್ದನತಿಬಲಂ! ರುದ್ರಾಟ್ಟಹಾಸದಿಂ
ಕೂಗಿ ಗರ್ಜಿಸಿ ನುಗ್ಗಿದನ್ ತಳ್ಳಿ! ಶೀಶೆಯಂ
ಕಾಯಿಸೆ ತಟಿಲ್ಲೆಂದು ಮುಚ್ಚಳಂ ಸಿಡಿವವೋಲ್
ಚಂಡವಾನರ ಗಂಡುಗಂಡಕೆ ಸಿಡಿಲ್ದುದಾ
ಬಂಡೆ; ತೋರ್ದುದಾ ಕಂಡಿ; ಅದೊ ಕಂಡುದಾಕಾಶ!
ಹೊರಹೊಮ್ಮಿದನೊ ವಾಲಿ! ಸುಗ್ರೀವನಂ ಹುಡುಕಿ,
ಕಾಣದೆಯೆ, ತುಟಿಗಚ್ಚಿದನ್ ರಕ್ತಸೋರ್ವಂತೆ.
ಗಿರಿ ನಡುಗೆ ಗರ್ಜನೆಗೆ, ಧರೆ ನಡುಗೆ ಪದಹತಿಗೆ,
ಸಿಡಿಲುಳ್ಕೆಯಾಗಿ ಹೊಕ್ಕನ್ ವಾಲಿ ಬಿದಿಗೆಟ್ಟ
ಕಿಷ್ಕಿಂಧೆಗೆ. ತನ್ನರಸಿ ತಾರೆಯನರಸಿದನ್. ತಪಂ
ಬಡುತಿರ್ದಳಂ ಕಂಡನರಿತನ್ ಕುಮಾರನಿಂ
ಸುಗ್ರೀವನರಸುಗೆಯ್ವಂದಮಂ. ಕರೆಸಿದನ್
ತನ್ನವರನೆಲ್ಲರಂ. ಹೇಳಿದನು ತಾಂ ಪಟ್ಟುದಂ
ಪಾಡೆಲ್ಲಮಂ, ಕರುಣೆ ಕಿಡಿದೋರೆ ಕೇಳ್ದರಿಗೆ.
ಸಾರಿದನು ಸೋದರದ್ರೋಹಿಯೆಂದನುಜನಂ;
ಹೊರಿಸಿದನು ರಾಜ ವಿದ್ರೋಹದಪರಾಧಮಂ;
ರೋಷಪ್ರತೀಕಾರ ಛಲ ಬಲಾನ್ವಿತನಾಗಿ
ನಡೆದನೋಲಗಕೆ ಸುಗ್ರೀವನಾ! ಸಾತ್ವಿಕಂ
ಸುಗ್ರೀವನತಿಹರ್ಷ ವಿಸ್ಮಿತಂ ವಾಲಿಯಂ
ಕಂಡೊಡನೆ ಸಿಂಹಾಸನವನೊದ್ದು ಬಿಸುಟೆದ್ದು
ಬಂದಪ್ಪಿದನ್ 'ಬಂದೆಯಾ' ಎನುತೆ, ಪ್ರೀತಿಯಂ
ತೊದಲು ತೊದಲಾಡಿ. ಕೆಲಂ ತಳ್ಳಿದನ್ ತಮ್ಮನಂ
ವಾಲಿಃ "ನೀಚನೆ, ಕಪಟಿ, ಸೋದರದ್ರೋಹದಿಂ
ರಾಜ ವಿದ್ರೋಹದಿಂ ಪತಿತನಾಗಿಹ ಪಾಪಿ,
ಮರಣಮೆ ನಿನಗೆ ಶಿಕ್ಷೆ. ಮೇಣ್, ಕ್ಷಮೆಗೇಳ್ದೊಡಂ,
ದೇಶ ಚ್ಯುತಿಯೆ ಭಿಕ್ಷೆ!" ನಡೆದ ದಿಟವೊರೆಯಲ್ಕೆ
ಸುಗ್ರೀವನೆಳಸುತಿರೆ "ಎಲವೆಲವೊ ಸಾಲ್ಗುಮೀ

ಕಥೆಯ ಕಪಟಂ. ಕೇಳ್ದೆನೆಲ್ಲಮಂ. . .'' ರವಿಸುತಂ
ನೋಡಿದನು ಸನ್ಮಿತ್ರನಂ ಅಂಜನಾಪುತ್ರನಂ.
ಕಾರ್ಯಪಟು, ಮಿತಭಾಷಿ, ವಾಕ್ಯಕೋವಿದನವಂ
ವಾಲಿಯಂ ಕುರಿತು: ''ಹೇ ಕಪಿವೀರ, ವೈರದಿಂ
ಧರ್ಮಸಾಧನೆಯಾಗದೈ. ನಂಬು ಸೋದರನ
ನುಡಿಗಳಂ. ನೀನಳಿದೆಯೆಂದಂತು ಕಲ್ಮುಚ್ಚಿ
ಬಂದನಲ್ಲದೆ ಬೇರೆ ಬಗೆಯೇನುಮಂ ಕಾಣೆ.
ನನ್ನಿಗೆ ಬಲಮೆ ಸಾಕ್ಷಿಯೆಂಬುದಾಗಿರೆ ನಿನ್ನ
ಮತಮೆನಗದುಂ ಸಮ್ಮತಂ. ನೋಳ್ಪಮ್.'' ಎನೆ ಕೇಳ್ದು
ಸುಗ್ರೀವನ್ ''ಆಗದಾಗದು, ಸಮೀರ ಕುಮಾರ,
ತಗದೆನಗೆ ಭ್ರಾತೃಕಲಹಂ ತಾಂ ದೇಶನಾಶಕಂ!''
ಕೇಳ್ದನಾ ಕ್ರೋಧಾಂಧ ವಾಲಿ. ಸುಗ್ರೀವನಂ
ಮೇಣವನ ಕೆಳೆಯರಂ ನಾಡಿನಾಚೆಗೆ ನೂಂಕಿ
ಬಲ್ಮೆಯಿಂದಟ್ಟಿದನ್. ಒಡವೋಗಲೀಯದೆಯೆ
ಸೆರೆಯಿಟ್ಟನನುಜಸತಿ ರುಮೆಯಂ. ಪ್ರತೀಕಾರ
ಬುದ್ಧಿಗೆಲ್ಲಿಹುದೆಲ್ಲೆ? ಪುಣ್ಯರೇಖೆಯೆ ಕೊಂಕಿ
ಪುಟ್ಟಿತೆನೆ ಪಾಪಚಕ್ರದ ವಕ್ರತಾ ದ್ರುತಂ,
ಇಂದೊ ನಾಳೆಯೊ ಎಂದೊ ಗೆಲ್ಲದಿರ್ಪುದೆ ಋತಂ
ತನ್ನ ಮುನ್ನಿನ ಋಜುತೆವೆತ್ತು?

ರಾಜ್ಯಚ್ಯುತಂ,
ನೆಲವನುಳಿದೊಡಮೊಲವನುಳಿಯಲಾರದೆ, ವಿರಹಿ
ಸುಗ್ರೀವನೆಂತಾದೊಡಂ ರುಮೆಯನುಯ್ಯಲ್ಕೆ
ಗೆಯ್ದ ಸಾಸಂ ವಿಫಳಮಾದುದಲ್ಲದೆ ವಾಲಿ
ಬೇಂಟೆಯಾಡಿದನವನನೆಲ್ಲಿಯುಂ ನಿಲಗೊಡದೆ.
ಕಡೆಗೋಡಿದನ್ ಋಶ್ಯಮೂಕಕೆ, ಮತಂಗ ಮುನಿ
ಶಾಪದಿಂ ವಾಲಿದುರ್ಗಮವಾದ ಮಾತಂಗ
ವನ ಮೇಖಲಾ ಶೈಲ ಶೃಂಗಕ್ಕೆ. ಆ ಮಲೆಯ
ಮುಗಿಲಪ್ಪಿದಡವಿ ಮುತ್ತಿದ ತಲೆಯ ಕೋಡಿನ
ತಪಸ್ವಿಯೋಲಿರ್ದ ಬಂಡೆಯ ಜಟಾಜೂಟದಿಂ
ನೋಡೆ ಕಾಣ್ಬುದು ಅನಂತತೆಯ ಬಿತ್ತರದೊಂದು
ಕಣ್ಬೊಲಂ: ಸುತ್ತುಂ ಮತಂಗವನಮತ್ತಲಾ

ಪರ್ವತ ತರಂಗಕೃತ ರಂಗ ವಿರಚಿತ ರಮ್ಯ
ಕಂದರದಿ ಪರಿದುದು ತರಂಗಿಣಿ ತುಂಗಭದ್ರೆ.
ಪರಿಯುತಿರಲದ್ರಿಬಾಹುವ ಪರಿಷ್ವಂಗದಿಂ
ತಡೆದು ತುಂಬುತ್ತುಬ್ಬಿಹಬ್ಬುತೆ, ಗಿರೀಶಂಗೆ
ಹಡೆದ ಹಂಪೆಯ ಸರೋವರ ಸುಂದರಿಯನಿತ್ತು,
ನೃಪ ಸಮುದ್ರನ ನೆರೆಯೆ ನಡೆದಳ್ ನದಿಯ ವನಿತೆ.
ಸಹ್ಯಾದ್ರಿ ಕಾನನ ಕ್ಲೇಶ ಯಾತ್ರೆಗೆ ದಣಿದ
ತುಂಗಭದ್ರೆಯ ನೀರ ನಿದ್ರೆಗೆ ನಿಸರ್ಗರಮೆ ತಾಂ
ಮಾರ್ಗ ಸತ್ರದಿ ಸಮೆದ ವಿಶ್ರಾಂತಿ ಮಂಚಮೆನೆ
ಶೋಭಿಸಿತು, ಬೆಟ್ಟದಡವಿಯ ಕಣಿವೆತಳ್ಪಲಿನ
ತುಂಬುಗಣ್ಣೆಂಬಿನಂ, ಕಣ್ತುಂಬೆ ತುಂಬಿದಾ
ಪಂಪಾ ಸರೋವರದ ಸಲಿಲದರ್ಪಣ ದೀರ್ಘ
ವಿಸ್ತಾರ ಸರ್ಪಶ್ಶೈಲಿ. ಕೊಲ್ಲಿಕೊಲ್ಲಿಗಳಾಗಿ
ಕಳ್ತರಿಸಿದಾ ಸರಸ್ತೀರದಿಂದಲ್ಲಲ್ಲಿ,
ಮೊದಮೊದಲ್ ತೆಳುವಾಗಿ, ಮೇಲೆ ದಟ್ಟೈತ್ತಾಗಿ,
ಬರಬರುತೆ ಕಡಿದಾಗಿ, ಮತ್ತೆ ತೆರೆತೆರೆಯಾಗಿ,
ಕೆಳಗಿಳಿದು, ಮೇಲೇರಿ, ದುಮುಕಿ, ನೆಗೆಯುತೆ, ಹಾರಿ,
ಹಜ್ಜೆಹಜ್ಜೆಗೆ ಹೋರಿ ಲಗ್ಗೆಯೇರ್ದುದು ಕಾಡು,
ಹಗೆಯ ಕೋಂಟೆಗೆ ಮುಗ್ಗುವರಿಸೇನೆಯೋಲಂತೆ:
ಗಜಸೇನೆಯೆನೆ ಬಂಡೆವಿಂಡು; ರಥಸೇನೆಯೆನೆ
ತುಮುಲ ತರುಪಂಕ್ತಿ; ಕಾಲಾಳ್ಗಳೆನೆ ಹಿಣಿಲಾಗಿ
ಹೆಣೆಗೊಂಡ ಕುರುಚುಪಳು; ಬೆಳ್ಗೊಡೆಗಳೋಲ್ ಮುಗಿಲ
ತುಂಡು; ಸಿಡಿಮದ್ದಿನಿಂದೇಳ್ವ ಹೊಗೆಯೆನಲಿಲ್ಲಿ
ಅಲ್ಲಿ ದರಿ ಫೂತ್ಕರಿಸುವುಸಿರಾವಿಯೋಲುಣ್ಣೆ
ಮಂಜು!
ವಾನರ ಕಲಿಗಳಾ ದೃಶ್ಯಮಹಿಮೆಯಿಂ
ದಿನದಿನಕೆ ಮಹಿಮರಾದರ್ ತಪಶ್ಚರಣೆಯಿಂ.
ಅವರೊಳಾ ಪ್ರಾಣದೇವನ ಸುತಂ ತಾನಾಜನ್ಮ
ಬ್ರಹ್ಮಚರ್ಯದಿ ಸಹಜಯೋಗಿ, ಅಂಜನಾದ್ರಿಯೆ
ತವರುಮನೆಯಾದಾಂಜನೇಯಂಗೆ, ಕೇಳ್, ಲಭಿಸಿತೈ
ಸಿದ್ಧಿಗಳಲೌಕನಿಧಿ. ಬಹಿರಂಗ ಸಾಮಾನ್ಯನ್

ಅಂತರಂಗದಿ ದೇವಮಾನ್ಯನಾದಾತನ್ ಆ
ಮಲೆಯ ನೆತ್ತಿಯೊಳೊರ್ದಿನಂ ಬೈಗುವೊಳ್ತಿನೊಳ್
ಧ್ಯಾನನೇತ್ರಂಗಳಂ ತೆರೆದು ತನ್ನೆದುರಾಗಿ
ಕೆಳಗೆ ಪರ್ವಿರ್ದ ಚೇತೋಹಾರಿ ದೃಶ್ಯಮಂ
ದರ್ಶಿಸುತ್ತಿರೆ, ಅಮೃತ ರಚಿತ ವಿಹಗಾಕೃತಿಯ
ಉಲ್ಕಮೆನೆ, ಬೆಳ್ವಕ್ಕಿಯೊಂದು ಪಸುರೆದುರಾಗಿ
ಪಾರಿಬಂದಿಳಿದೇರ್ದು ತೇಲ್ದು ಸುತ್ತುತ್ತೊಯ್ಯ-
ನೆರಗಿತು ಸರೋವರಕೆ. ಮರೆಯಾದುದಾ ಖಗಂ
ಸಂಜೆ ಹೊನ್ನೆರಚಿರ್ದ ನೀರ್ಬಣ್ಣಗಳ ಮಧ್ಯೆ:
ಮತ್ತೇನೊ ಮೆರೆದುದು ಮರುತ್ಸುತಗೆ: ದೂರದೊಳ್,
ಪಂಪಾ ಸರೋವರದ ತೀರದೊಳ್, ಬೈಗಿರುಳ್
ಮರ್ಬಿನೊಳ್, ನಡೆಯುವ ನರಾಕೃತಿಗಳೆಂಬಿನಂ
ಮೊಳೆತುದಾಶಂಕೆ! ತಿಳಿಯಲ್ಕೆಳಸುತಿರೆ, ಮಸಿಯಿರುಳ್
ಸೆರಗುವೀಸಿತು ಕರ್ಪನಿಳೆಬಾನ್ ಮಸುಳ್ವಂತೆ.

## ಸಂಚಿಕೆ ೫

# ಪೂಣ್ದೆನಗ್ನಿಯೆ ಸಾಕ್ಷಿ!

ಬೀಳುಕೊಟ್ಟಳು ನಿಶೆಯನಾ ಸರೋವರ ಲಕ್ಷ್ಮಿ ತಾಂ
ಕುಮುದ ಮುಖದಿಂ; ಕಮಲ ಕೋಮಲವದನೆಯಾಗಿ
ಮತ್ತಮೊಯ್ಯನೆ ತಿರುಗಿದಳ್ ಸೊಗಂಬಯಸಲುಷೆಗೆ.
ಮೂಡುವೆಣ್ಣಿನ ನಿದ್ದೆಗಣ್ಣು ತನ್ನಿರುಳೆವೆಯ
ಕರ್ವು ರೆಪ್ಪೆಯನರಳಿಸಲ್, ಬೆಸುಗೆ ಬಿರ್ಚಿದುದೊ
ಬಾನ್ ಬುವಿಗೆನಲ್, ಬಿರುಕುದೋರ್ದೊಳ್ಕಿದುದು ಪೊನಲ್
ಚೆಂಬಳದಿಯಾ. ಮತಂಗನ ಪೆಸರ ಮಡುವಿನೊಳ್
ನೀರು ಓಕುಳಿಯಾಯ್ತು. ಮಳಲದಿಣ್ಣೆಯ ಮೇಲೆ
ಕೊಡೆವಿಡಿದವೋಲೆದ್ದ ಬಂಡೆಯಡಿ ರಾತ್ರಿಯಂ
ಕಳೆದ ರಘುಜರ್, ಪ್ರಕೃತಿಕೃತ ಸಹಜಘಟ್ಟಮೆನೆ
ನೀರ್ಗೆ ನೀಡುಂ ಚಾಚಿ ಮಲಗಿರ್ದ ಪಾಸರೆಯ
ತುದಿಗೈದಿ, ಪ್ರಾಭಾತವಿಧಿಗಳಂ ಪೂರಯಿಸಿ,
ಋಶ್ಯಮೂಕದ ಕಡೆಗೆ ಮೊಗದಿರುಹಿ ಕುಳಿತರ್ಕೈ,
ಗಗನ ನಗ ಕಾನನ ಸರೋವರಂಗಳನೊಂದೆ
ಕಣ್ಬೊಲಂಬಡೆದು.
ಒಯ್ಯೊಯ್ಯನೆ ದಿವಾಕರಂ
ತ್ರೈಲೋಕ್ಯ ಸೌಂದರ್ಯ ಸೌವರ್ಣ ಕಲಶಮೆನೆ
ಮೈದೋರಿ, ಮೇಲೇರಿ, ಕನಕಜಲ ಕಾಂತಿಯಂ
ಸಿಂಚನಂಗೈದು ಕಾಂಚನಿಸಿದನು ಕಾನನ
ಶ್ಯಾಮಾಂಬರಂ ಪೀತಮಪ್ಪಂತೆ. ವನಪಕ್ಷಿ

ಜಲಪಕ್ಷಿ ಕಂಠಕೃತ ತುಮುಲ ನಾನಾ ಸ್ವನಂ
ಬುಗ್ಗೆಯೋಲುಣ್ಮಿ ಪರಿದುದೊ ಸರೋವರಕೆನಲ್,
ನೀರು ತಾಂ ನೀರುಗಳಾಯ್ತು, ಬೇರೆ ಬೇರೆಯ ರಂಗು
ರಂಗಿಂದೆಃ ಕರ್‌ನೀಲಿ ಬೆಳ್‌ನೀಲಿಯಾಯ್ತಿಲ್ಲಿ;
ಬೆಳ್‌ನೀಲಿ ಹೂಹಳದಿಯಾಯ್ತಲ್ಲಿ. ಹೂಹಳದಿ
ಹೊನ್ನಾದುದಿಲ್ಲಿ; ಹೊನ್ನಸುಗೆಗೆಂಪಾದುದದೊ
ಅಲ್ಲಿ. ಪಚ್ಚೆಯ ರಾಗಮೊಯ್ಯನೆಯೆ ಕಿಚ್ಚಾಯ್ತು;
ಕಿಚ್ಚು ಕಣ್ಣೆಡೆ ತಿರುಗಿದುದು ಪುಷ್ಯರಾಗಕ್ಕೆ
ಮರಳಿ. ಅದೊ ಇಲ್ಲಿ ಗೋಮೇದಿಕಂ; ನೋಡಲ್ಲಿ
ವೈಡೂರ್ಯಮತ್ತಲದೊ ವಿದ್ರುಮಂ! ರವಿಶಿಲ್ಪಿ ತಾಂ
ಸಪ್ತರಾಗದ ಕಿರಣಟಂಕ ಕವಿಕರ್ಮದಿಂ
ಕೆತ್ತಿ ಕಲ್ಪಿಸಿದನೊ ಅನೇಕ ರತ್ನಂಗಳಂ
ಪಂಪಾ ಸರೋವರದ ಬೃಹದೇಕ ನೀಲದಿಂ
ಪೇಳೆಂಬಿನಂ, ವಿವಿಧ ರಾಗ ರುಚಿರಂ ಹ್ರದಂ
ರಾರಾಜಿಸಿತು ರಾಮಹೃದಯಕೆ ವಿರಹದುರಿಯಂ
ಕೆರಳ್ವ ಕಾಮನ ಬಿಲ್ಲಿನೋಕುಳಿಯವೋಲ್!
                                        ‘‘ವತ್ಸ,
ಲಕ್ಷ್ಮಣಾ, ವೈವಾಹ ಮಂಟಪ ಸ್ಮರಣೆಯಂ
ಬಗೆಗೊಳಿಸುವೀ ಮನೋಹರ ಚಿತ್ರ ದೃಶ್ಯಮಂ
ನೋಳ್ಪೆನಗೆ ಬಾಳಿನುರಿ ನೂರ್ಮಡಿಸುತಿದೆ. ನಾಳ
ನಾಳದೊಳ್ ಜ್ವಾಳೆವರಿದಿದೆ ಮನ್ಮನೋಹರಿಯ
ಚಿಂತೆ. ಅದೊ ದಡದ ಮರದುಯ್ಯಾಲೆಯಿಂ ಗಾಳಿ
ಮಳೆಯೆರಚುತಿದೆ ಚಿನ್ನವೂಗಳಂ; ಬಂಡೆಯುಂ,
ಪುಳಿನಮುಂ, ಶಿಖರಗೋಪುರದಂತೆ ನೀರಮೇಲ್
ನೀಳ್ದು ಮಲಗಿಹ ಬಂಡೆಕರ್ನೆಳಲುಮೆಸೆಯುತಿವೆ
ಸುಮರಂಗವಲ್ಲಿ ಚಿತ್ರಿತ ರತ್ನ ಕಂಬಳಿಯವೋಲ್!
ಬಿರಿವ ನೀರ್ವೂಗಳೊಳ್ ಬಂಡುಣುವ ಪರಮೆ ಮೊರೆ
ನೀರ್ವಕ್ಕಿಗಳ ಬೇಟದಿಂಚರದೊಡನೆ ಹೊಂಚಿ
ನನ್ನನೇಳಿಪುದಲ್ತೆ? ಅಃ ಕೇಳಾಲಿಸದೊ ಕೂಗುತಿದೆ,
ಆ ದರಿಯ ದುಮುಕುತಿಹ ವನನಿರ್ಝರದ ಮೊರೆಯ
ಮೀರಿ, ದಾತ್ಯೂಹಕಂ! ವಿರಹದುಲಿ! ಕರೆಯುತಿದೆ

ಪೆಣ್ವಕ್ಕಿಯಂ! ಮೂದಲಿಸುತಿದೆ ನನ್ನನಯ್ಯೊ ಹಾ,
ಸೌಮಿತ್ರಿ: ಪಂಚವಟಿ ಪರ್ಣಶಾಲೆಯೊಳಂದು
ಈ ಉಲಿಯನಾಲಿಸಿದೊಡನೆ ದಯಿತೆ ತಾನುಮಾ
ಕೊರಳನನುಕರಿಸಿ, ಹಾ, ಕರೆಯುತಿರ್ದಳೊ ನಿನ್ನ
ಈ ನಿರ್ಭಾಗ್ಯನಂ. . . ತಮ್ಮ, ಗತಿಶೂನ್ಯನಾದೆ!
ಮತಿಶೂನ್ಯನಾದೆನಗೆ ಸ್ಮೃತಿಯಲ್ಲದೆಯೆ ಬೇರೆ
ಸತಿಯಿಹಳೆ? ಪೇಳಿಹಳೆ?. . . ಇನ್ನೆನಗೆ ವಿಸ್ಮೃತಿಯೆ
ಪರಮಾಶ್ರಯಂ, ಶಾಂತಿ, ಸದ್ಗತಿ, ಮಧುರ ಮೃತ್ಯು!''
   ಲಕ್ಷ್ಮಣಂ ಕ್ಷಣಕಾಲಮುಂತಿರ್ದನಂತರಂ:
''ಅಜ್ಜಿ ಪೇಳ್ದಾ ಮಲೆ ಇದೆಂದೆ ತೋರ್ಪುದು ಕಣಾ
ಋಶ್ಯಮೂಕಂ. ದೂರದಿಲ್ಲಿಂದಮೆತ್ತರದ
ಆ ಬಂಡೆಮಂಡೆಯ ನೆತ್ತಿ ಮಲೆತಿರ್ಪುದೆಂತು
ಮುಗಿಲನಂಡಲೆದು! ಪರ್ವತದ ಪಕ್ಷಿಯ ಕೊಕ್ಕು
ಕುಕ್ಕುತಿದೆ ನೀಲಾಂಡಮಂ; ಮಲೆಯ ಗೂಳಿಯ ಕೋಡು
ಮಲೆತು ತಿವಿದಿದೆ ಮೋಡಡುಬ್ಬಮಂ; ಗೂಳಿಯಾ
ಗುಟುರುಗಳೆ ಗುಂಡುಗುಂಡಾದಂತೆ ಹಿಂಡೆದ್ದು
ಮತ್ತೆ ಛಲದಿಂ ಲಗ್ಗೆಯೇರುವಂತಿವೆ ತಮ್ಮ
ಮೊದಲಿನುನ್ನತಿಗೆ! ಏಂ ನಿಶ್ಚಲಂ? ಏಂ ಛಲಂ?
ಏಂ ಧೈರ್ಯಮೇಂ ಬಲಂ? ಈ ಗಿರಿಯೊಳಾಂ ದಿಟಂ
ಪಡೆದಪೆವು ಛಲ ಬಲಾನ್ವಿತ ಮಹಾಧೈರ್ಯಯುತನಂ
ಸನ್ಮಿತ್ರನಂ, ದಿಟಂ!''
                    ವ್ಯಂಗ್ಯ ವಚನದಿ ತನಗೆ
ಧೈರ್ಯಮಂ ಪೇಳ್ದಿಂಗಿತವನರಿತು ದಾಶರಥಿ
ತಾನಿನಿತು ನಾಣೆಂ ತಮ್ಮನಂ ನೋಡಿ, ದರಹಸಿತ
ಮುಖಿಯಾಗಿ, ಸುಯ್ದು, ಧ್ಯಾನಸ್ಥನಾದಂ, ಮರಳಿ
ಮಲೆನೆತ್ತಿಯಂತೆ ತಲೆಯೆತ್ತಿ. ಸರೋವರದಿಂದೆ,
ಮರಳ್ದಾಸೆಯುಸಿರವೊಲ್, ಏರ್ದುದಾವಿಯ ಮಂಜು,
ತೆಳ್ಳನೆ ಹೊಗೆಯ ಹೋಲಿ. ಬಂಡೆಗೋಪುರ ನೆಳಲ್,
ನೀರ ಮೇಲೊರಗಿರ್ದುದೆದ್ದುದಾವಿಯ ಮೇಲೆ
ನೀಲಿರಂಗೋಲಿಯೋಲ್ ಚಿತ್ತಾರಮಂ ಮೆತ್ತಿ
ಕೆತ್ತಿ. ಮೇಣಲ್ಲಲ್ಲಿ ಮಂಜುಮೆಯ್ ರವಿಕಿರಣ

ರಾಗದಿಂ ಕಿಂಜಲ್ಕ ಪಿಂಜರಿತಮಾಯ್ತು. ಆ
ನೋಟಮಂ ನಿಡುವೊಳ್ತು ನೋಡುತಿರ್ದಿನಕುಲಗೆ
ಮನದೊಳೇನೊಂದಾಯ್ತೊ! ''ಆರಲ್ಲಿ, ಕಾಣ್ ಸೌಮಿತ್ರಿ?''
ಬೆಸಗೊಳುತ್ತೆಳ್ದು ತೆಕ್ಕನೆ ಬಂಡೆ ಬಂಡೆಯೆಡೆ
ನುಸುಳ ತೊಡಗಿದನರಸುನೋಟದಿಂದಾರನೊ
ಹುಡುಕುವಂತೆ. ''ಎಲ್ಲಿ?'' ಎನೆ ಲಕ್ಷ್ಮಣಂ ''ಇಲ್ಲಿಯೋ
ಮೇಣೆಲ್ಲಿಯೋ ಅರಿಯೆನಾಂ, ವತ್ಸ! ಕಾಣದು ಕಣ್ಗೆ;
ಬಗೆಗೆ ಸುಳಿದಿದೆ ಬರವು ಬಾಳ್ಗೆಳೆಯನೊರ್ವನಾ!''
ಎನುತೆನುತೆ, ತನ್ನ ಬೆಳ್ಪಿಗೆ ತಾನೆ ಬೆರಗಾಗಿ,
ನಿಂದನು ಅನಾಥನೊಲ್ ಸೀತಾನಾಥ ದಾಶರಥಿ,
ಕಣ್‌ತೊಯ್ದು ಸುಯ್ದು. ನಿಂದಿರೆ, ಬಿಳ್ದುದೈ ದಿಟ್ಟಿ
ಮುಂದಿರ್ದೊಂದರೆಯ ಮೇಲೆ. ಆ ನಿಡುನೀಳ್ದ
ಪೇರಾನೆಯೊಡಲ ಬಂಡೆಯನಿರದೆ ನಿಟ್ಟಿಸುತೆ,
ಇಂಗಿತವರಿತನಂತೆ, ಸೌಮಿತ್ರಿಯಂ ನೋಡಿ:
''ಕಂಡೆ, ಕಂಡೆನೊ, ಕಂಡೆ! ಬಂಡೆಯಂದದೊಳಿಂತು
ಕಂಡರಣೆಗೊಂಡ ಮಾತ್ರದೊಳೆನಗೆ ಕುರುಡಹುದೆ?
ಏಳು, ಗೆಳೆಯನೆ, ಏಳು; ತಾಳು ನಿಜರೂಪಮಂ;
ಸೀಳು, ಒಡೆ, ಬಾಳ್ಬಂಡೆಯಂ; ಬುಗ್ಗೆಯುಕ್ಕುವೋಲ್
ಮೂಡಿ ನಿಲ್ ಕಣ್ಮುಂದೆ, ಕಳ್ತೆಸೆದು ಕಲ್ತನದ
ಈ ವೇಷಮಂ!''
ಮಾತು ಮುಗಿವನಿತರೊಳಗಾ ಬಂಡೆ
ಮಾತಾಡಿತೆಂಬವೊಲ್ ಕೇಳಿಸಿತ್ತೊಂದು ದನಿ.
ರಾಮಲಕ್ಷ್ಮಣರಿರ್ವರಚ್ಚರಿಯೊಳೀಕ್ಷಿಸಿರೆ,
ಋಶ್ಯಮೂಕ ಮಹತ್ತೆ ಮೈವೆತ್ತವೋಲಂತೆ,
ಪಳುವಪ್ಪಿದರೆಯ ನೆತ್ತಿಯನೇರಿ, ಬಾನ್ಪಟದಿ
ಮಸಿಯ ಚಿತ್ತಾರಮಂ ಕಂಡರಿಸಿದರೆನಲ್ಕೆ,
ಗೋಚರಿಸಿದನ್ ಬೃಹದ್ ಭವ್ಯನೊರ್ವಂ. ರಾಮಂಗೆ
ತನ್ನ ಗತಿಸಿದ ಧೈರ್ಯಮೈತಂದಿದಿರ್ ನಿಂದು
ಧೀರ ವಾಣಿಯೊಳಾರಿಪೋಲಾಗೆ, ಗುಡಿಗಟ್ಟಿ
ಕಿವಿಗೊಟ್ಟನಾ ಕಲಿ ಮಲೆಯನುಲಿಗೆ:
''ಗೆಲಮಕ್ಕೆ;

ಸೊಗಮಕ್ಕೆ; ನಿಮಗೆ ಮಂಗಳಮಕ್ಕೆ! ನಿಮಗೆಮಗೆ
ಕೆಳೆಯಕ್ಕೆ! ನಮ್ಮ ತೌರೀ ಮಲೆಗೆ ನಿಮಗಕ್ಕೆ
ನಲ್ಬರಂ! ಸುಗ್ರೀವನನುಚರಂ ಹನುಮನೆಂ;
ಮಾರುತನ ಮಗನಾಂಜನೇಯನೆಂ! ನರವರಂ,
ವಾನರಂ, ಕಪಿಕೇತನರ ಕುಲಕೆ ಚೇತನಂ,
ದೇವ ಸುಗ್ರೀವನಟ್ಟಿದನೆನ್ನನೀಯೆಡೆಗೆ
ನಿಮಗೊಳ್ಪುವೇಳಲ್ಕೆ. ಶಬರಿಯಾಶ್ರಮಕೆ ನೀಂ
ಬಿಜಯಗೆಯ್ದುದನರಿತೆವಾವೆಮ್ಮ ಬೇಹಿಂದೆ.
ನಿಮ್ಮ ದುಃಖವನರಿತೆವಾವೆಮ್ಮ ದುಃಖಮುಂ
ಸದೃಶಮೆನೆ, ನೀಮೆಮಗೆ ನಾಂ ನಿಮಗೆ ನಂಟರಯ್!
ರವಿಸುತಂ ನಮ್ಮೆರೆಯನಟ್ಟಿದನ್ ರವಿಕುಲದ
ನಿಮ್ಮ ಕೆಳೆಯಂ ಬಯಸಿ ಬೇಡಿ!''
ಆ ಮಲೆಯನಾ
ಕೊರಳ ಸಂಸ್ಕೃತಿಗೆ, ಮೆಯ್ಯಾಕೃತಿಗೆ, ಶಿತಮತಿಗೆ,
ಯೋಗ ನಯನದ್ಯುತಿಗೆ ಸೋಲ್ತನೈ ರಾಘವಂ:
ಮಲರಿಗೆರಗಿದ ಪರಮೆ ಬಂಡುಣುವ ಸೊಗಸಿಂಗೆ
ಮೊರೆಯಂ ಮರೆಯುವಂತೆ ರಾಮನೇನೊಂದುಮಂ
ನುಡಿಯಲಾರದೆ ನೋಡುತಿರ್ದನ್ ಮನೋಜ್ಞನಂ,
ವಾನರ ಮಹಾ ಪ್ರಾಜ್ಞನಂ! ಸಮೀರಾತ್ಮಜಂ
ತಾನುಮಂತೆಯೆ ನೋಡುತಿರ್ದನ್ ಸಮುದ್ರಸಮ
ಗಂಭೀರನಂ, ನಭಃಸನ್ನಿಭ ಶರೀರನಂ, ಮೇಣ್
ಗಿರಿವನಪ್ರಿಯ ರಾಮಚಂದ್ರನಂ! ನೆಲದರಿಕೆ
ವೆಸರ ಕಬ್ಬಿಗರಿರ್ವರೊರ್ವರೊರ್ವರನರಿತು
ಮೆಚ್ಚಿ ನೋಳ್ಪಂದದೊಳೆ ರಾಮಾಂಜನೇಯರುಂ
ದಿಟ್ಟಿಯಿಂದಪ್ಪುವೋಲೊರ್ವರೊರ್ವರನೊಪ್ಪಿ
ನಿಟ್ಟಿಸಿದರಲ್ಲಿ ನಿಬ್ಬೆರಗಾಗೆ ಲಕ್ಷ್ಮಣಗೆ!
ದೂರಾಂತರ ವಿಭಿನ್ನ ಗಿರಿಗಳಿಂದುದ್ಭವಿಸಿ,
ತಂತಮ್ಮ ಬೇರೆಬೇರೆಯ ಬಟ್ಟೆಯಂ ಪಿಡಿದು
ಪರಿದು, ಜೀವಿತ ಮಧ್ಯಮಾರ್ಗದೊಳೊಲಿದು ಕಲೆತು,
ಜೀವನೋದ್ದೇಶದಿಂದೈಕತಾ ಭಾವಮಂ
ತಳೆದು ಮುನ್ನಡೆವೆರಡು ಪೊಳೆವೊನಲ್ಗಳೋಲಂತೆ

ಲಕ್ಷ್ಮಣ ಸಹಿತ ರಾಮನಾಂಜನೇಯಂ ವೆರಸಿ
ಏರ್ದನಾ ಋಶ್ಯಮೂಕಕ್ಕೆಡೆಗೆ ಸುಗ್ರೀವನಾ.
ಮಾರ್ಗಮೇರ್ವಾಗಳನಿಲಾತ್ಮಜಂ, ಮಿತಭಾಷಿ,
ವಾಕ್ಕೋವಿದಂ ಧನುರ್ಧ್ವನಿಯ ಗಾಂಭೀರ್ಯದಿಂ,
ಬ್ರಹ್ಮಚರ್ಯಜ ದೃಢಪ್ರತ್ಯಯ ಮಹೋದಾರ
ಶಾಂತಿಯಿಂ ಪರಿಚಯಿಸಿದನು ದಶರಥಾತ್ಮಜಗೆ
ಕಿಷ್ಕಿಂಧೆಯಂ, ಋಶ್ಯಮೂಕಮಂ, ವಾಲಿಯಂ,
ಸುಗ್ರೀವನಂ, ನೀಲ ನಳ ಜಾಂಬವಂತರಂ,
ವಾನರ ಕುಲದ ಕಥಾಮಹಿಮೆಯಂ, ಕೀರ್ತಿಯಂ,
ಮೇಣೊದಗಿದಪಕೀರ್ತಿಯಂ! ಕೇಳ್ದು ರಾಘವಂ:
''ಅನಿಲಸುತ, ನೀಂ ಬಣ್ಣಿಸಿದ ಬಲ ಸಮುದ್ರರಾ
ಸೇನಾನಿಗಳ ನೇಹಮಿರ್ದೊಡಂ. . . ವಾಲಿಯೇಂ
ಪಾಪದಿಂ ಕಲಿಯಾದನೇಂ?'' ''ಪಾಪಮಂತಿರ್ಕೆ;
ಕಲಿ ದಿಟಂ! ವಾನರ ಕುಲಕೆ ಪೆರ್ಮೆಯಾತನಂ
ನಾಮೆಲ್ಲರಾರಾಧಿಸುತ್ತಿರ್ದೆವಯ್! ರವಿಸುತಂ
ಸುಗ್ರೀವನಖಿಲಮಂ ನಿಮಗೊರೆದಪಂ. ಲೋಕೈಕ
ವೀರನೆಂದೆನಿಸಿದಾ ದಶಕಂಠನುಂ ಬೆದರಿ
ದೂರಮಿರ್ಪಂ ಬಳಿಗೆ ಬರಲಂಜಿ!'' ''ದುಷ್ಟಂಗೆ
ದುಷ್ಟನೆ ಭಯಂ! ಶಿಷ್ಟ ಸಾತ್ವಿಕಕೆ ಸೆಡೆಯುವುದೆ
ಭ್ರಷ್ಟ ರಾಕ್ಷಸ ನೀತಿ? ಕಣ್ಗೆ ಕಣ್, ಪಲ್ಗೆ ಪಲ್;
ದಂಡಮೇ ದಲ್ ಧರ್ಮಮಂತಪ್ಪ ನೀಚಕ್ಕೆ!''
    ಸೇರಿದರು ಬಂಡೆಯಿಡುಕುರ್ ನಡುವೆ ನಡೆದೇರಿ
ಕಾಡುಬೀಡಿನ ಮಲೆಯ ನೆತ್ತಿಯ ಗುಹಾಮುಖದ
ನಿರ್ಜನಕೆ. ನಿಲ್ಲಿಮೆಂದೊರೆದುದೆ ತಡಂ, ಕಲ್ಲ
ಪೆರ್ದೆರೆಗಳೊಳ್ ಪೊಕ್ಕು ಮರೆಯಾದನಾಂಜನೇಯಂ.
ಬಿಸವಂದದಿಂದಮಾ ಸೌಮಿತ್ರಿ: ''ಏಂ ನಿರ್ಜನಂ
ಈ ವನಂ! ಶಂಕೆಗೆಡೆಯಾಗುತಿಹುದಣ್ಣಾ! ಇದು
ವಾನರೇಶಂಗಿರ್ಕೆಯಪ್ಪೊಡೇಕಿಂತು ಪಾಳ್
ಸುರಿಯುತಿದೆ?'' ಮಾತು ಮುಗಿವನಿತರೊಳೆ, ಆಲಿಸದೊ,
ನಾತಿದೂರದೊಳೊಂದು ಪೊಣ್ಮಿದುದು, ಸೀಳ್ವವೋಲ್
ವನ್ಯ ನಿಶ್ಶಬ್ದಮಂ, ದೀರ್ಘಶ್ರುತಿಯ ಶೀಳ್!

ಬೆಚ್ಚಿ ಸುತ್ತುಂ ನಿಟ್ಟಿಸಿರೆ ರಾಮಲಕ್ಷ್ಮಣರ್
ಸಿಲೆ ಬೆಸಲೆಯಾದುವೆನೆ, ಬಂಡೆಯೊಂದೊಂದರಿಂ
ಮೂಡಿದರ್ ವಾನರರ್ ಒಂದೆರಳ್ ಪತ್ತು ನೂರ್
ಲಕ್ಕಲೆಕ್ಕದ ಬೆಮೆಯನುಕ್ಕಿಸುತೆ! ಬಳ್ಳಿ ವೂ
ನವಿಲ ಗರಿ ಕಯ್ಗಯ್ದ ತಲೆಯುಡೆಯ, ಪುಲಿ ಚಿರತೆ
ಮಿಗದ ತೋಲಂಗಿ ಸಿಂಗರಗೈದ ನವಿರಿಡಿದ
ಮೆಯ್ಯ, ಬಣ್ಣದ ನಾರ್ಗಳಿಂ ಸಮೆದ ವಸ್ತ್ರದಿಂ
ಶೋಭಿಸುವ ಮಲ್ಲಗಚ್ಚೆಯ ಕಟಿಯ ಆ ಮಲೆಯ
ಸಿಡಿಲಾಳ್ಗಳಂ ಮೆಚ್ಚಿ ನೋಡುತಿಹ ರಾಘವನ
ಬಳಿಗಾಂಜನೇಯನೈತಂದೊರೆದನಿಂತೆಂದು:
''ಸುಗ್ರೀವನಾಳ್ಗಳೀ ಕಾಣ್ಬರನಿಬರುಮ್. ಇದರ್ಕೆ
ನೂರುಮಡಿಯಿಹರಲ್ಲಿ ಕಿಷ್ಕಿಂಧೆಯೊಳ್. ವಾಲಿ
ಬಂಧಿಸಿಹನವರೆಲ್ಲರಂ ಭಯದ ಪಂಜರದ
ವಜ್ರದೊಳ್. ವಾಲಿಬೇಲಿಯ ಮುರಿಯೆ ನಮ್ಮದಯ್
ತೋಂಟಮನಿತುಂ; ನಿನ್ನದುಂ ಕಣಾ!'' ಎನುತ್ತೆ ಕಯ್
ಸನ್ನೆಗೆಯ್ಯಲ್ಕೊಡನೆ ಮರೆಯಾದುದಾ ಸೇನೆ,
ಮಾಯವಾದಂತೆ! ಮೂವರೆ ಪೊಕ್ಕರಾ ಗುಹಾ
ಕಿಷ್ಕಿಂಧೆಯಂ!
ಮರ್ಬಿನೊಳ್ ಚರಿಸಿ, ಕೆಲದೂರ
ನಡೆಯೆ, ತೋರ್ದುದು ರೂಕ್ಷತರ ಗುಹಾಮಂದಿರಂ.
ಕಂಡಿಕಂಡಿಗಳಿಂದೆ ಬಿಸಿಲ ಕೋಲುಗಳಿಳಿದು
ಪರ್ಬಿದತ್ತೊಂದು ಗುಹ್ಯತಾ ಕಾಂತಿ. ಅಲ್ಲಲ್ಲಿ
ಮಲಗಿದೊಲ್ ಕುಳಿತವೊಲ್ ನಿಂತವೊಲ್ ಕಲ್‌ಬಂಡೆ,
ರೂಪಾಂತರಂಬೆತ್ತು ಹೊಂಚಿರ್ಪ ಛದ್ಮನೆಯ
ಕಾಪಿನೋಲಂತೆ, ನಾನಾ ನ್ಯಾಸಮಂ ರಚಿಸಿ
ಚಿತ್ರಮಾದುವು ಕಣ್ಗೆ. ಗುಹೆಯ ಗೋಡೆಯ ಮೇಲೆ
ಮೆರೆದುವಾಯುಧ ಪಂಕ್ತಿ, ಫಣೆ ಭಯಂಕರಮಾದ
ಪುತ್ತುಮನಿಳಿಕೆಗೈದು; ಮೇಣಂಗಣದ ನಡುವೆ
ದಂಡಾಗ್ರದೊಳ್ ಧೀರಮಿರ್ದತ್ತು ವಾನರರ
ಕೀರ್ತಿಯ ಕಪಿಪತಾಕೆ. ಅಲ್ಲಿ ಮಿತ್ರರ್ವೆರಸಿ
ಮಂತಣದೊಳಿರ್ದ ಸುಗ್ರೀವನುತ್ಸಾಹದಿಂ

ಮೇಲೆಳ್ದು, ಕೈಮುಗಿದತಿಥಿಗಳ್ಗೆ ಕಯ್ಮುಗಿದು,
ಸಾದರದಿ ಕೈವಿಡಿದು ತಳಿರ ತೊಂಗಲ್ ಮಣೆಗೆ
ಕರೆತಂದನವರ್ಗಳಂ ತುಂಬು ಗಾಂಭೀರ್ಯದಿಂ
ಶೋಭಿಪ ವಿನಯದಿಂದೆ. ''ಧನ್ಯನಾಂ, ದಾಶರಥಿ,
ನಿನ್ನ ಕೆಳೆಯಂ ಪಡೆದೆನಿನ್ನೆನ್ನ ಬಾಳ್‌ಮಬ್ಬುರ್
ಮಳ್ಗಿ ಬೆಳಗಾದತ್ತು; ತೊಲಗಿತಿನ್ನಾಪತ್ತು,
ನನಗುಮೀ ನನ್ನ ನನಗಾಗಿ ನೆಲೆಗೆಟ್ಟಲೆವ
ನಳ ನೀಲ ಜಾಂಬವ ಹನುಮರಾದಿಯಾದೆಲ್ಲ
ಮಿತ್ರರ್ಗೆ. ನಾಂ ತಿಳಿದೆನಾಂಜನೇಯನ ಪೇಳ್ದ
ವಾರ್ತೆಯಿಂ ನಿಮ್ಮಖಿಲ ದುಃಖಕಥೆಯಂ. ನನ್ನ
ಪರಿಭವ ಪರಾಭವಂಗಳನೆಲ್ಲಮಂ ನಿಮಗೆ
ತಿಳಿಪಿರ್ಪನೆನ್ನ ನಚ್ಚಿನ ಮಂತ್ರಿ. ಕಷ್ಟದಿಂ
ಮೇಣಿಷ್ಟ ಜನ ನಷ್ಟದಿಂದೆಮಗಿರ್ಪರಿಗೆ ಸಮತೆ
ಸಮನಿಸಿದೆ. ದುಷ್ಟ ಸಂಹಾರಮುಂ ಸುವ್ರತಂ
ಇಲ್ಲಿ ನೆರೆದೆಮಗನಿಬರಿಗೆ. ಅಯೋಧ್ಯಾ ನಗರಿ
ಕಿಷ್ಕಿಂಧೆಗಕ್ಕೆಮ ಸಹೋದರಿ! ರಘುಜ ಸೂನು, ಕೇಳ್,
ನಿನಗೆ ನಾಂ, ನನಗೆ ನೀಂ! ಪೂರ್ಣ್ಣೆನಗ್ನಿಯೆ ಸಾಕ್ಷಿ:
ನಿನ್ನರಸಿಯನ್ನರಸಿ ಕಳ್ದೊಯ್ದನನ್ನೊರಸಿ,
ಸಮೆಸುವೆನ್ ನಿನ್ನ ಸೇವೆಗೆ ನನ್ನ ಸರ್ವಮಂ!—
ನನ್ನ ಸರ್ವಂ? ಅಯ್ಯೊ, ನನ್ನ ಸರ್ವಮದೆಲ್ಲಿ?
ಕಡವರವನೀವೆನೆಂಬುವ ಕಡು ಬಡವನಂತೆವೋಲ್
ಬರಿದೆ ಕೊಡುಗೆಯ ನುಡಿಯನಾಡುತಿಹೆನಾಂ!'' ನಾಣ್ಚೆ
ತಲೆಬಾಗಿ ಕಣ್ಣೀರ್ಬಿಡುವ ಕಪಿಕುಲೇಂದ್ರಂಗೆ
ರಾಮಚಂದ್ರಂ: ''ಪತ್ತುವಿಡು ಮನ್ಯುಮಂ ದೈನ್ಯಮಂ,
ವಾನರೇಂದ್ರ, ನಿನ್ನದೆಂದರಿ ಸಕಲ ಕಿಷ್ಕಿಂಧೆ!
ಪರಪತ್ನಿಗಳುಪಿದಾತಂ ಸತ್ತನೆಂದರಿ ದಿಟಂ!
ಪೂರ್ಣ್ಣೆನಗ್ನಿಯೆ ಸಾಕ್ಷಿ!'' ಒಡನೊಡನೆ ನಡುಗಿತಯ್
ನಾಲ್ವರ್ಗೆ ವಾಮನೇತ್ರಂ, ಕಾಮಿನಿಯರಿರ್ವರ್ಗೆ
ಮೇಣ್ ಕಾಮಾಂಧರಿರ್ವರಿಗೆ!
ಮಿಂದು ದೊಣೆನೀರ್ಗಳಂ,
ಪಣ್ಫಲಂ ಬೇರುಬಿಕ್ಕೆಗಳೌತಣವನುಂಡು,

ತುಸುವೊರಗಿ, ದಣಿದ ನಡುವಗಲಾಸರಂ ಕಳೆದು,
ಅನಂತರಂ ಕರೆದೊಯ್ದನತಿಥಿಗಳನಾ ಗಿರಿಧರಾ
ವ್ಯೂಹಮಂ ತೋರೆ. ಕಂದರದಾಳಮಂ, ವಿಪಿನ
ನಿಬಿಡತೆಯನದ್ರಿಯೌನ್ನತ್ಯಮಂ, ಕಡಿದಪ್ಪ
ಬಂಡೆ ನಿಂದಿಹ ತೆರನ ದುರ್ಗತೆಯನೆಲ್ಲಮಂ
ಪೇಳ್ದು, ಬಣ್ಣಿಸಿ, ತೋರ್ದು, ಕಿಷ್ಕಿಂಧೆಯಿರ್ದೆಡೆಗೆ
ಕಣ್ಣಾಗಿ ನಿಂದ ಸುಗ್ರೀವನಂ ಕಾಣುತಂ
ಕೌತುಕದೊಳಿರ್ದ ರಘುನಂದನನ ಕಿವಿಗಳ್ಗೆ
ಪರ್ಚಿದನನಿಲಜಾತನಿಂತೆಂದು: ‘‘ಅತ್ತಲಾ
ಕಿಷ್ಕಿಂಧೆಯಿರ್ಪುದಯ್, ಮಲೆಯ ತೋಳ್ ತಕ್ಕೆಯೊಳ್
ಪಟ್ಟವೋಲ್. ನೋಡು ಅದೆ ರುಮಾದೇವಿಯಂ ವಾಲಿ
ಸೆರೆಯೊಳಿಟ್ಟಚಲಚೂಡಂ! ತನ್ನ ಅರ್ಧಾಂಗಿ
ನಮೆಯುತಿರ್ಪೆಡೆಯನವಲೋಕನಂಗೈದೆಮ್ಮ
ದೊರೆ ನಿಂದನೀ ಮಾಳ್ಕೆಯಿಂ ಸುಯ್ದು. . .’’ ರಾಮಂಗೆ
ತನ್ನ ದಯಿತೆಯ ನೆನಹು ಮರುಕೊಳಿಸಿದಂತಾಗೆ:
‘‘ಅಯ್ಯೊ, ಮರುತಾತ್ಮಜನೆ, ನನಗೆ ಆ ಪುಣ್ಯಮುಂ
ಇಲ್ಲಾಯ್ತುಲಾ!’’ ಕೇಳ್ದದಂ ಮುದಿಯ ಜಾಂಬವಂ:
‘‘ದೇವ, ನೀನಿಂತೇಕೆ ಮರುಗುತಿಹೆ? ಸಂಪಾತಿ
ಸೋದರಂ ನಿನಗೊರೆದ ವಿತ್ತೇಶನವರಜಂ
ದಶಕಂಠ ಬಿರುದಿನಾ ಲಂಕೇಶ ರಾವಣನೆ
ದಿಟಂ; ಭುವನದೊಳ್ ಬೇರೆ ಧೂರ್ತರಿನ್ನನ್ನರಂ
ಕಾಣೆನಾಂ, ಕೇಳ್ದುಮರಿಯೆಂ. ತಿಂಗಳಾಯಿತ್ತಿಲ್ಲ;
ನಡೆದೊಂದಪೂರ್ವಮಂ ಪೇಳ್ವೆನ್. ಒರ್ಪಗಲೆಮ್ಮ
ವಾನರರ್, ಭಲ್ಲೂಕ ವಂಶಜರುಮಂತೆ ಕಪಿ
ವಂಶಜರುಮಾರಣ್ಯ ವ್ಯಾಯಾಮ ಸಕ್ತಿಯಿಂ
ವಿಹರಿಸುತ್ತಿರೆ, ಮೇಲೆ ಬಾಂದಳದಿ ಪಳಯಿಸುವ
ಧ್ವನಿ ಕೇಳ್ದುದಂತೆ. ಕೊಂಚೆಗಳೆಂದು ಸರ್ವರುಂ
ತಲೆಯೆತ್ತಿ ನೋಡಲ್, ವಿಮಾನವೊಂದೆತ್ತರದಿ,
ಹತ್ತಿಮೋಡಗಳಾಚೆ, ಜವದಿಂ ಪರಿದು ನುಸುಳಿ
ಮರೆಯಾಯ್ತು. ಬಿಸವಂದದಿಂದೆಲ್ಲರೀಕ್ಷಿಸಿರೆ,
ಬೆರಗಿಗೆ ಬೆರಗನಿತ್ತು ಬಿಳ್ದತ್ತವನಿಗೊಂದು

ಪೊನ್ನೊಡವೆ.'' ಸುಯ್ಪಿನುಬ್ಬೇಗದಿಂ ದಾಶರಥಿ:
''ನೋಳ್ಪಮೆಲ್ಲಿರ್ಪುದಾ ಬೀಳ್ಕೆ!'' ಎನೆ ಜಾಂಬವಂ:
''ಬಿಳ್ದ ಬೇಗಕೆ ನುರ್ಗ್ಗುನುರಿಯಾದುದದರ ಕೃತಿ.
ನಿನಗವಿನ್ನಾಣಮಪ್ಪುದೆ?'' ''ಸಾಲ್ಗುಮತಿ ಬುದ್ಧಿ!
ತೋರಯ್ಯ ತೋರೆನಗೆ ಬೇಗದಿಂ!'' ''ರವಿಸುತನ
ವಶಮಿರ್ಪುದವತಂಸಮ್.''

ಬರಿಸಿದನ್ ಬೇಗದಿಂ
ಪೊನ್ನೊಡವೆಯಂ. ನೀಡಿದನ್. ರಾಮನಾ ಕಯ್ಯ
ಕಂಪನಮೊಡನೆ ಬಿಸಿಯ ಸುಯ್ಲಾಯ್ತು. ಸುಯ್ಯೊಡನೆ
ಕಣ್ಣೀರವೊನಲಾಯ್ತು. ಮುಳುಗಿ ಕಣ್ಬನಿಯಲ್ಲಿ
ಮುಚ್ಚೆವೋದುದು ಮನಂ. ಹನುಮ ವಕ್ಷದೊಳೊರಗಿ
ಸೊರಗಿದುದು ರಾಮತನು, ಸೀತಾವಿರಹದುರಿಯ
ಹೊಯ್ಲಿನಲಿ. ಕಿರಿದು ಬೇಗದೊಳರಿವು ಮರಳಲ್ಕೆ,
ದುಃಖ ವಲ್ಮೀಕದಿಂ ರೋಷಫಣೆಯುರ್ಕ್ಕೇಳ್ವ
ತೆರದಿಂದೆ, ಸುಯ್ದೆಳ್ದನವನಿಜಾ ವಲ್ಲಭಂ:
''ಪೇಳೆಲೆ ಕಪಿಧ್ವಜ ಕುಲೇಂದ್ರ, ಹೇ ಸುಗ್ರೀವ,
ದೈತ್ಯನೆತ್ತಣ್ಗುಯ್ದನೆನ್ನುಸಿರ ದಯಿತೆಯಂ?
ನಾಡೆಲ್ಲಿ? ಬೀಡೆಲ್ಲಿ? ನೆಲೆಯಾವುದಾತಂಗೆ?
ತಡವೇಕೆ? ಚಿಂತಿಸಿನಿಯಳ ಗತಿಯನೆಂತಿಂತು
ತಳ್ವುವೆನೊ? ತೋರಾತನಿರ್ಪೆಡೆಯನೀಗಳೆಯೆ
ಮಿಳ್ತುವನೆವಾಗಿಲಂ ತೆರೆವೆನಾ ನೀಚಂಗೆ.–
ನುರ್ಗಾದ ನೀಂ ಪ್ರತಿಕೃತಿಯೆ ವಲಂ, ಪೊನ್ನೊಡವೆ,
ನನ್ನ ಸೀತಾ ಸ್ಥಿತಿಗೆ!'' ಇಂತಿಂತು ಮೊದಲಾಗಿ
ಪಳಯಿಸುತ್ತಿರ್ದ ಮಳೆಮುಗಿಲ್ ಮೆಯ್ಯ ಬಣ್ಣಂಗೆ
ಸಮದುಃಖಿ ಸುಗ್ರೀವನಿಂತು: ''ಹೇ ಅರಿಂದಮ,
ಮಸೆಯದಿರ್ ನೆನಹುಸಾಣೆಯೊಳಳಲ ಕತ್ತಿಯಂ.
ನೆನಹು ಹಿಂದಿಹುದಳುಕು ಮುಂದಿಹುದು; ಇರ್ಬ್ಬಾಯಿ
ನಿನ್ನ ಸಂಕಟದಸಿಗೆ. ತಾಳ್ಮೆಯೊರೆಗಿರುಕದೆಯೆ
ಬರಿದೆ ಬೀಸಿದರೆನ್ನ ಮೇಣ್ ನಿನ್ನ ಮೇಣವರೆಲ್ಲ
ಬಾಳ ಗೋಸಾಳಿಯಂ ತರಿವುದೆ ದಿಟಂ. ಸೀತೆ ಮೇಣ್
ರುಮೆಯಿರ್ವರಿಗೆ ಸರ್ವನಾಶಮಪ್ಪುದೆ ಫಲಂ!–

ನೀನಾರ್ಯನಾಂ ವಾನರಂ. ನನಗೆ ನಿನ್ನಂತೆವೋಲ್
ಮನೆ ಮಡದಿಗೆಟ್ಟ ಗತಿಯಿಪ್ಪುದಯ್. . . ಧೈರ್ಯನಿಧಿ
ನೀನೆಲ್ಲರಾದರ್ಶಮಂತುಟೆ ಮಾರ್ಗದರ್ಶಿ.
ದೋಣಿ ಬಿರಿದರೆ ಪುಟ್ಟು ಪೊರೆಯುವುದೆ? ನಿನ್ನೆರ್ದೆಯ
ನೆಚ್ಚಳಿದು ಕೆಚ್ಚುಗೆಟ್ಟರೆ ನಮ್ಮ ನೆಮ್ಮೆತ್ತಣಿಂ?—
ಪೇಳ್ವೆನಾಂ; ತಾಳ್ಮೆಯಿಂದಾಲಿಸಾ. ಕಳ್ದುಯ್ದ
ನೀಚಂ ದಶಗ್ರೀವನೆಂಬುದೆಮ್ಮೆಲ್ಲರೂಹೆ.
ಕೇಳಿ ಬಲ್ಲೆವು ಲಂಕೆಯಂ, ತೆಂಕಣದ ಕಡಲ
ನಡುವಣ ದೀವಿನಾಡಂ. ಆದೊಡಂ, ದಾಶರಥಿ,
ಸುಲಭಮಲ್ತಸುರಪುರಿ. ಕಳುಹುವೆನ್ ಕಲಿಗಳಂ,
ಗೂಢಚರ ವನಚರ ಸಮರ್ಥರಂ, ಪುಡುಕಲ್ಕೆ.
ತಡೆಯೆಮಗೆ ವಾಲಿಯಲ್ಲದೆ ರಾಕ್ಷಸೇಶ್ವರಂ
ತಾನಲ್ತು. ವಾಲಿಯ ತಡೆಯನಳಿಸುವುದೆ ತಡಂ. . .''
''ಕಿಷ್ಕಿಂಧೆಯಂ ಮುತ್ತಿ ಲಗ್ಗೆಯೇರ್ವಂ ನಾಳೆ.
ತಡವೇಕೆ?'' ಎಂದ ಲಕ್ಷ್ಮಣಗೆ ಸುಗ್ರೀವಂ:
''ದಶ ದಶಗ್ರೀವರಾತಂಗೊಂದು ಸೀರ್ಪುಲ್ಗೆ
ಸಾಟಿ, ಶತಕೋಟಿ ಬಲಶಾಲಿ ವಾಲಿಗೆ ಕಣಾ!
ಸಮ್ಮುಖ ಸಮರನೀತಿಯಿಂದಾತನಂ ಜಯಿಸೆ
ಶತಮಾನಗಳೆವೇಳ್ಕುಮಯ್. ಪಿಂತೆ ನಾಮೆನಿತೊ
ಸೂಳ್ ಕಂಡಿರ್ಪೆವಾತನ ಚಂಡ ವಿಕ್ರಮದ
ದುರ್ದಮತೆಯಂ. ಬ್ರಹ್ಮವರಬಲಮಿರ್ಪುದೈ,
ಮಾರಾಂತು ನಿಲ್ವ ವೈರಿಯ ಬಲದೊಳರ್ಧಮಂ,
ಕಂಡೊಡನೆ, ಕೊಳ್ಗೆ ನಿನ್ನದಟೆಂದು. ಇಂದ್ರನುಂ
ಕರುಣಿಸಿ ಕುಮಾರಂಗೆ ಕೊಟ್ಟಿಹನು ರಕ್ಷೆಯಂ
ವಜ್ರವರ್ಮೋಪಮಂ. ಹಿಂದೆ ದುಂದುಭಿವೆಸರ
ದೈತ್ಯಂ, ಸಮುದ್ರಮಂ ಗಗನಮಂ ಗಿರಿವರ
ಹಿಮಾದ್ರಿಯಂ ಕೆಣಕಿ ಕಾಳೆಗಕೆ ಸೆಣಸಿದ ಮಹಾ
ಧೂರ್ತದೈತ್ಯಂ, ಬೃಹನ್ಮಹಿಷರೂಪವನಾಂತು
ಮಲೆತು ಗರ್ಜಿಸಿ ವಾಲಿಯಂ ಕಾಲ್ಕೆರೆಯೆ,—ಪೇಳ್ವೆನೇಂ?
ಸಾಕ್ಷಿಯಿವರೆಲ್ಲರುಂ—ಧಂ ಧಂ ಧಮೆಂಬುವಾ
ಭೇರಿ ದುಂದುಭಿ ರವಕೆ ನಡುಗೆ ಗಿರಿವನ ಗುಹಾ

ಕಿಷ್ಕಿಂಧೆ, ಪೂಡಿತ್ತೆ ದ್ವಂದ್ವಯುದ್ಧಂ ಭಯಂ
ಕರಂ ಕಲಿಗಳಿರ್ವರಿಗೆ! ಆ ಭೀಮ ಕರ್ಮಿಯಾ
ಎರ್ಮೆವೋರಿಯ ಮೆಯ್ಯ ರಕ್ಕಸನ ಶಿಖರಸಮ
ಕೋಡೆರಡನಿರ್ಕಯ್ಗಳಿಂದಡಸಿ ಪಿಡಿದೊತ್ತಿ,
ತಿರ್ರನೆ ತಿರುಪ್ಪಿ, ನೆತ್ತರ್ ಕಾರಿ ಗೋಣ್ಮುರಿಯೆ,
ತೆಗೆದೊಗೆದನೈ ಮುಗಿಲ ಮೊಗಕೆ! ಬಿಳ್ದತ್ತು ಆ
ರಕ್ಕಸ ವೆಣಂ ಮತಂಗನ ವನವನುತ್ತರಿಸಿ
ಯೋಜನದತ್ತ ದೂರಕ್ಕೆ. ಬಿಸುಟ ಶವದಿಂದೆ
ಮುದ್ದೆಮುದ್ದೆಯೆ ನೆತ್ತರೊಳ್ಕಿ ಮುನಿಯಾಶ್ರಮದಿ
ಬೀಳೆ, ಶಪಿಸಿದನು ಋಷಿ. ಆ ಶಾಪಭೀತಿಯಿಂ
ವಾಲಿಯೈತರನಿಲ್ಲಿಗದರಿಂದೆಮಗೆ ರಕ್ಷೆ!—
ಭೀಮಬಲವೊಂದೆಯಲ್ತಾತಂಗೆ, ಸಿದ್ಧಿಸಿದೆ
ಬಿಲ್ಬಲ್ಮೆಯುಂ. ಅಲ್ಲಿ, ಪಂಪಾ ಸರಸ್ತಟದಿ
ಬಲ್ಬೆಳೆದ ತಾಲತರುವೊಂದೊಂದುಮವನೊಂದೆ
ಬಾಣದಿಂ ಜರ್ಜ್ಜರಿತಮಾಗಿ ಕೆಡೆವುವು ಕಣಾ!—
ಸಮ್ಮುಖ ಸಮರ ನೀತಿಯಿಂದಾತನಂ ಜಯಿಸೆ
ಶತಮಾನಗಳೆವೇಳ್ಕುಮದು ದಿಟಂ!''

ಕೆಟ್ಟಾಸೆ
ನಿಟ್ಟುಸಿರನೆಳೆದ ಸುಗ್ರೀವನಂ ನೋಡುತ್ತಿನಿತು
ಕಿನಿಸಿಂ ಧನುರ್ಧರ ವರೇಣ್ಯಮ್: ''ವಾನರೇಂದ್ರ,
ಬಾಯ್‌ತುಂಬಿ ಬಣ್ಣಿಸಿರ್ಪಯ್ ನಿನ್ನಣ್ಣನಣ್ಮಮ್.
ನೀಂ ಗುಣಗ್ರಾಹಿಯೆ ವಲಂ! ಕಂಡ ಬಲ್ಮೆಯಂ
ಕೊಂಡಾಡುವುದೆ ಬೀರರಿಗೆ ತಗುವ ಸಿರಿಗೆಯ್ಮೆ.
ಕಾಣದುದನಿಳಿಕೆಗೆಯ್ವುದುಮಂತೆ ಕೀಳ್‌ಗೆಯ್ಮೆ.
ನಮ್ಮ ಬಲ್ಮೆಯನರಿಯದಾಡುತಿಹೆ. ನಿನ್ನೆರ್ದೆಯ
ಶಂಕೆ ಬಯಲಪ್ಪವೊಲ್ ತೋರ್ಪೆನೆನ್ನಣ್ಮುಮಂ, ಮೇಣ್
ಬಿಲ್‌ಜಾಣ್ಮೆಯಂ.'' ಬಾಗಿ ನಾಣ್ಚುತ್ತಿನಾತ್ಮಜಂ
ಕಯ್ಮುಗಿದೊರೆದನಿಂತು: ''ಮನ್ನಿಸೆನ್ನಂ, ದೇವ,
ನಿನ್ನ ಜಸಮಂ ಕೇಳ್ದೆನಾದೊಡಂ ಬಗೆಯಳ್ಕು
ನುಡಿಸಿತ್ತು. ವಾಲಿಯಿಂದೆನಿತೊ ಸೂಳಾಂ ಸೋಲ್ತು
ಮೆಯ್‌ಮುರಿಸಿ ಕೊಂಡಿರ್ಪೆನದರಿಂದೆ ಮತ್ತೊರ್ಮೆ

ಪುಸಿಬಲ್ಮೆಯಂ ನೆಚ್ಚಿ ಮಾರಾಂಪಲೊಲ್ಲೆನಯ್
ಮಿಳ್ತುವಿಗೆಣೆಯ ಬೀರಂಗೆ!'' ''ನಾನೇನನೆಸಗೆ ಪೇಳ್
ನಿಶ್ಶಂಕಿ ನೀಂ?'' ''ಮೈಬಲ್ಮೆ ಬಿಲ್ಜಾಣ್ಮೆಗಳ್ ಮೆರೆಯೆ
ವಾಲಿಯಂ ಮೀರ್ವಂತೆ ತೋರ್!'' ''ತೋರ್ಪೆನೇಳಂಜದಿರ್!''
ಪರಿಪಡುವವೊಲ್ ನುಡಿದು, ಕೋದಂಡಮಂ ಪಿಡಿದು
ಮೇಲೆಳ್ದನಾ ಮಿತ್ರವತ್ಸಲಂ. ತಾಮೊಡನೊಡನೆ
ಮೇಲೆಳ್ದರಿತರರುಂ. ಮಲೆಯನಿಳಿದರ್ ಕುರಿತು
ಪಂಪಾ ಸರಸ್ತೀರ ತಾಲವನಮಂ. ನಡೆಯೆ,
ದಾರಿಯೆಡೆ ನಿರ್ಮಾಂಸದಸ್ಥಿಪಂಜರಮಾಗಿ
ಕೆಡೆದಿರ್ದುದಚಲೋಪಮಂ ದುಂದುಭಿಯ ಶವಂ.
ಕಂಕಾಲ ಭೀಕರಮದಂ ಕಂಡು ಸೌಮಿತ್ರಿ:
''ನೀಂ ಪೇಳ್ದುದಿದೆ ಕಣಾ ನಿನ್ನಗ್ರಜಂ ಕೊಂದು
ಬಿಸುಟ ದುಂದುಭಿ? ರಾಮಚಂದ್ರಂಗೆ ಕಿರಿಯನೆಂ!''
ತನ್ನಣ್ಣನಾರ್ಪನಾಶಂಕಿಸಿದ ವಾನರನ
ಕೀಳ್ಮೆಗವಹೇಳನಂ ಮಾಳ್ಪವೋಲ್, ಲಕ್ಷ್ಮಣಂ
ಕೊಂಕುನುಡಿಯಿಂದಿರಿದು ಕಿರುನಗುತ್ತಶ್ರಮದಿ
ಬಿಲ್ಲ ಕೊಪ್ಪಿಂ ಚಿಮ್ಮಿದನ್ ಕಳೇಬರ ಗಿರಿಯ
ಭಾರಮಂ. ಸದ್ದೊಡನೆ ಧೂಳಿ ಗಾಳಿಗಳೇಳೆ
ಕವಣೆಗಲ್ಲೆಸೆದಂತೆ ರೊಂಯ್ಯನೆದ್ದಾ ಪೆಣಂ
ತೂಂತಿಟ್ಟುದು ಮುಗಿಲ್ಗೆ; ಮತ್ತೆ ತಿರ್ರನೆ ತಿರುಗಿ
ಪತ್ತು ಯೋಜನದಾಚೆ ಬಿಳ್ದತ್ತು! ಕಂಡದಂ
ವಾನರರ್ಗಚ್ಚರಿಯುಮಾನಂದಮಾದೊಡಂ
ಮೃದುಹಾಸ್ಯಕೆಂಬಂತೆ ಸೂರ್ಯ ಸೂನುಃ ''ತಿಳಿಯಯ್ಯ:
ಮಾಂಸಲಂ ರಕ್ತಾರ್ದ್ರಮಾಗಿರ್ದುದಾ ಶವಂ
ವಾಲಿ ಬಿಸುಟಂದು!'' ನಗುತಿರೆ ರಾಮನೊಡಗೂಡಿ
ನಳ ನೀಲ ಜಾಂಬವರ್, ಹನುಮನೆಂದನ್ ಹಸನ್
ಮುಖಿಃ ''ಸುಮಿತ್ರಾತ್ಮಜನೆ, ನಮ್ಮ ವಾನರ ಬಲಕೆ
ಹೆಣದ ಹೊರೆ ಹಿರಿದಲ್ತು! ನೀಂ ಗೈದ ಕಜ್ಜಮಂ
ಕಿರುಳರೆಸಗುವರೆಮ್ಮ ಸೇನೆಯಲಿ!'' ನೆರೆನಾಣ್ಚೆ
ನಸುಮುನಿದು ಕೆಂಪೇರ್ದ ತಮ್ಮನಂ ಮೊಗಂನೋಡಿ
ರಾಘವಂಃ ''ಸೋದರನೆ, ಕಪಿಗಳಿವರಸಾಮಾನ್ಯರ್.

ಇವರ ಕೆಳೆಯಿಂದೊಳ್ಪು ಕಯ್ಗೂಡಿದಪುದೆಮಗೆ.
ಬಿನದದಿಂ ಕಾಣ್ ಇವರ ಸರಳ ಸೌಜನ್ಯಮಂ.''
ಹಂಪೆಯ ಸರೋವರಂ ಪೆಂಪಿನೋಕುಳಿಯಾಗೆ
ಕೆಂಪೆರಚಿದುದು ಸಂಜೆ. ನಿಂದುದಪ್ರತಿಹತಂ
ತೀರರುಹ ದೈತ್ಯಗಾತ್ರದ ತಾಳತರುಪಂಕ್ತಿ.
ಬೈಗುವಿಸಿಲಾನ್ತದರ ನೆತ್ತಿಯ ನೆಳಲ ನೀಳ್ಪು
ಜಂಗಮತೆವೆತ್ತಿರ್ದುದುದಯಗಿರಿ ಯಾತ್ರಿ: ಹಾ,
ಭಂಗವಾದುದೆ ಯಾತ್ರೆ? ಕಳ್ತರಿಸಿದಂತೆವೋಲ್
ಒರ್ಮೊದಲ್ ಕುನಿದುದು ತರುಚ್ಛಾಯೆ! ಮರಮುಡಿಯ
ಗೂಡು ಗೊತ್ತುಗಳಿಂದೆ ಪಾರ್ದ್ದಾರ್ದ್ರ ಪಕ್ಕಿಗುಂಪಂ
ಕೇಳೊರೆವುದಾ ನಡೆದುದಂ: ಕಾರ್ಮುಕಪ್ರಳಯದೊಲ್
ಜ್ಯಾಜಿಹ್ವೆಯಿಂದುಜ್ಜ್ವಲಂ ಪೊಣ್ಮಿದುದೆ ತಡಂ, ಕೇಳ್,
ರಾಮನೆಚ್ಚಂಬು ತಾಂ, ದೆಸೆದೆಸೆ ನಡುಗೆ, ಪಡಿಗುಡುಗೆ
ಬೆಟ್ಟ ದರಿ ಕಾಡುಗಳ್, ತಲ್ಲಣಿಸೆ ಕಿಷ್ಕಿಂಧೆಯುಂ,
ಪಗಲುಳ್ಕೆವೋಲ್ ಮಿಳ್ತುಬೇಗದಿಂ ಪರಿತಂದು
ತುಂಡಿಸಿತು ಒಂದೆರಡು ಮೂರು ನಾಲ್ಕೈದಾರು
ಏಳೆಣಿಕೆಯಿಂ ಸಾಲುಗೊಂಡಿರ್ದ ತಾಳತರು
ಷಂಡಮಂ, ಕರಡಮಂ ಕುಡುಗೋಲ್ ಸವರುವಂತೆ!
ಮುಂಡಗಳುಡಿಯೆ ಪರ್ಣಚಂಡಿಕೆವೆರಸಿ ಕೆಡೆದವಂ
ತಾಳತರು ಸಪ್ತರುಂಡಂಗಳಂ ಕಂಡು ಕಪಿಕುಲ
ಪುಂಗವಂ ನಾಣ್ಪೆರೆದ ಮೆಚ್ಚಿಂ ಮುದಂಗೊಂಡು:
''ನಿನ್ನುರ್ಕನ್ ಆಶಂಕಿಸಿದೆನಲ್ಪಬುದ್ಧಿಯೆಂ;
ಮನ್ನಿಸಯ್, ಹೇ ಸೂರ್ಯತೇಜಸ್ವಿ.'' ಎನುತೆ ಕಯ್
ಮುಗಿದೆರಗಿದನ್ ಕೊರಳ ಸರಮಿಳೆಗಳಲ್ವವೋಲ್.
ಮಲೆಮುಡಿಯ ಮರೆಗೊಂಡು ಮುಳುಗಿದುದು ಪೊಳ್ತು. ಮೇಣ್
ಬಾನ್‌ತಲೆಗೆ ಮಲರಿದುವರಿಲ್. ಹಾಡುವಕ್ಕಿಯ ಕೊರಲ್
ನಿದ್ದೆಗೈದುದು ತಿಪ್ಪುಳಿರ್ಕೆಯೊಳ್. ಬಂಡೆಯೆಡೆ,
ಮರಗಳೆಡೆ, ಪಳುವಿನೆಡೆ, ಮೆಳೆಗಳೆಡೆ, ಗವಿಗಳೆಡೆ
ಹನುಮ ಜಾಂಬವ ನೀಲ ನಳ ರಾಮ ಸುಗ್ರೀವ
ಲಕ್ಷ್ಮಣರ ಮಂತ್ರಣ ರಹಸ್ಯವನುಸಿರ್ವವೋಲ್
ಮೆಲ್ಲಮೆಲ್ಲನೆ ಸುಯ್ದು ಹೊಂಚಿ ತೀಡಿತ್ತೆರಲ್,

ವೈರಿ ವಾಲಿಯ ಬೇಹುವೋಲಂತೆ. ನಿಂದುದಯ್
ವಿಶ್ವಧರ್ಮ ಸಹಸ್ರಾಕ್ಷ ಸಾಕ್ಷಿಯೆಂಬಂತೆವೋಲ್
ನಾಕ ಚುಂಬಿತ ಋಶ್ಯಮೂಕದ ಮೂಕರಾತ್ರಿ!

ಸಂಚಿಕೆ ೬

# ನೀಂ ಸತ್ಯವ್ರತನೆ ದಿಟಂ!

ಮುಗಿದುದಾ ಮಂತ್ರಣದಿರುಳ್; ಇಂದ್ರ ದಿಙ್ನಯನಕ್ಕೆ
ನೀರುರ್ಕ್ಕಲೆಮೆದೆರೆದುದೊಯ್ಯನೆ ಉಷಃಕಾನ್ತಿ.
ಋಶ್ಯಮೂಕದ ಶಿಖರ ವೇದಿಕೆಯೊಳಿರ್ದರಿಗೆ
ತೋರ್ದುದು ನಭಃಪಾರವಿಶ್ರಾಂತಮಾ ಗಿರಿಪಂಕ್ತಿ,
ತೆರೆಮೇಲೆ ತೆರೆಯೇರ್ದು ಪರ್ವಿದ ಸಮುದ್ರಮಂ
ಪ್ರತಿಕೃತಿಸುವಂತೆ. ತಣ್ಮಲೆಯೆಲರೊಳಲೆದುದಯ್
ಸಿಪಿಲೆವಕ್ಕಿಯ ಸಿಳ್ಳಿನಿಂಚರಂ!
''ಪೊಳ್ತೇರ್ವ
ಮುನ್ನಮಲ್ಲಿರ್ಪಮೆಂಬಾತನೇಕಿನ್ನೆಗಂ
ಬಾರನೈ, ಸೌಮಿತ್ರಿ? ಮರ್ಕಟಧ್ವಜರಿವರ್
ವಾನರರ್! ಕಪಿಬುದ್ಧಿ ತಾನತಿಚಂಚಲಂ! ಮತ್ತೆ
ಬೇರೊಂದನೇನಾನುಮಂ ನೆನೆದನೇಂ ರುಮಾ
ವಲ್ಲಭಂ?''
ಕಿಷ್ಕಿಂಧೆಯತ್ತಣ್ಗೆ ಕಣ್ಣಾಗಿ,
ಬೇರೆ ತಾಂ ಮಣೆಯಾಗಿ ಮರದಡಿ ಕುಳಿತ ರಾಮಂಗೆ,
ಬಳಿ ನಿಂದು ನೋಡುತಿರ್ದವರಜಂ: ''ಹೇ ಆರ್ಯ,
ಅನಾರ್ಯರಿವರಂ ನಂಬಿ ಆರ್ಯಕುಲದೇವಿಯಂ
ನಾಮೆಂದು ತಂದಪೆವೊ ನಾನರಿಯೆ! ಇನ್ನೆಗಂ
ಹೆರರ ಕಯ್ ಹಾರೈಸದೆಮ್ಮಾರ್ಪನಾಂ ನೆಮ್ಮಿ
ಮುಂಬರಿದ ನಮಗೀಗಳೇಕೀ ಕಪಿಧ್ವಜರ
ಕಾಡದಟಿನೊಂದು ಹಂಗು? ಇವರ ಮನೆಯಂ ತಿದ್ದಿ
ನಮ್ಮ ಕೊನೆಯಂ ಸಾಧಿಪನಿತರೊಳೆ ದೇವಿಗೇಂ

ಗತಿಯಹುದೊ? ದೀರ್ಘಸೂತ್ರಿಗಳಿವರ ಸಂಗದಿಂ
ಕಿಡುವುದೆ ದಿಟಂ ನಮ್ಮ ಕಜ್ಜಂ!''
                                        ಸಹೋದರನ
ಕಿಸುಗಣ್ಚಿದಾನನವನೀಕ್ಷಿಸುತೆ ರಾಘವಂ
ಸಂತೈಸಿದನು ಇಂತು: ''ಊರ್ಮಿಳೇಶನೆ, ತಾಳ್ಮೆ!
ವಾನರರ್ ನೀನಾಡುವನಿತು ಕೀಳುಗಳಲ್ತು;
ನಮ್ಮದಟು ನೀನೂಹಿಪನಿತು ಬಲ್ಲಿತುಮಲ್ತು.
ಕಿರಿದಲ್ತು ನಮ್ಮ ಮುಂದಿಹ ಕಜ್ಜದುಜ್ಜಗಂ;
ಮೇಣಲ್ಪಮೆಂದರಿಯದಿರ್ ದೈತ್ಯವಿಕ್ರಮಂ.
ನಿನಗಿನೇನಸಿಯಲ್ತು ನನ್ನ ಬಗೆಯುಬ್ಬೆಗಂ
ದೇವಿಯನ್ವೇಷಣೆಗೆ, ರಕ್ಷಣೆಗೆ, ರಾಕ್ಷಸರ ಮೇಣ್
ವಧೆಗೆ. ಲಕ್ಷ್ಮಣ, ನೀನು ಕಲಿಯಾದೊಡಂ ನಮಗೆ
ಬೇಳ್ಕುಮೀ ಮಲೆಯರ ನೆರಂ. ಕೆಳೆಯರೊಲ್ಮೆಯಂ
ಬಿಟ್ಟು ಕಳೆವುದು ಬರಿಯ ಬೆಳ್ತನಂ. ಮಹಿಮರಯ್
ಕಪಿಗಳೋರೊರ್ವರುಂ. ನಿನಗರಿವಹದು ಮುಂದೆ.
ಕೈಕೊಳೆ ಮಹತ್ಕಾರ್ಯಮಂ, ಮಾನವನ ಮಹಿಮೆ
ಮೈದೋರ್ವುದೈ. . . ಪೂಣ್ದೆವಾ ರವಿತನೂಜನುಂ
ನಾನುಮಗ್ನಿಯೆ ಸಾಕ್ಷಿಯಾಗೆ ಮಿತ್ರತ್ವಮಂ.
ತಗದು ಮಿತ್ರದ್ರೋಹಮಿನಕುಲಕೆ.''
                                        ಅಗ್ರಜಗೆ
ಮೌನದೊಪ್ಪಿಗೆಯಿತ್ತು ಸೌಮಿತ್ರಿ ರವಿಯುದಯ
ದೃಶ್ಯಮಂ ನಿಟ್ಟಿಸುತ್ತಿರೆ, ಕೇಳ್ದುದೊಂದದ್ಭುತಂ
ರಣಕಹಳೆ. ಬೆಳಗಿನ ಗಾಳಿ ತಲ್ಲಣಿಸಿ ಕಂಪಿಸಿರೆ,
ಸುಗ್ರೀವನೈತಂದನಾಂಜನೇಯಾದಿಗಳ
ಮುಂದೆ, ವಾನರ ಕುಲದ ಯುದ್ಧಪದ್ಧತಿಯಂತೆ
ಭೈರವಾಭೀಳವೇಷಿ! ರಘುತನೂಜರ ಕಣ್ಗೆ
ಬೆಕ್ಕಸಮೆರಗಿದತ್ತು, ಹಿತಭಯಾನ್ವಿತಮಾಗಿ,
ಕಂಡಾ ವಿಚಿತ್ರ ಸಖನಂ: ರಕ್ತವರ್ಣಾಂಗಳಂ
ಪೊದೆದ ಸಂಧ್ಯಾ ಮೇಘವೋ, ಕೇಸುರಿಗಳಿಂ
ಪುದಿದ ಧೂಮದೇಹಾಗ್ನಿಯೋ, ವಿಪಿನ ಸುಂದರ
ಚೈತ್ರ ಮಾಸದ ಫುಲ್ಲ ಪುಷ್ಪಮಯ ಕಿಂಶುಕವೊ,

ಚಂದ್ರಾಂಬರಾ ನಿಶೀಥಿನಿಯೊ ಪೇಳೆಂಬಿನಂ
ರಕ್ತವಸ್ತ್ರಂಗಳಿಂ ರಕ್ತವರ್ಣಂಗಳಿಂ
ಕೆಂಬಣ್ಣವೂಗಳಿಂ ಕೆಂಬಕ್ಕಿಗರಿಗಳಿಂ
ವ್ಯೋಮಾಭ ರೋಮಮಯ ದೇಹಮನಲಂಕರಿಸಿ
ಭೀಕರಾಯುಧಿಯಾಗಿ ಕಪಿಕೇತನವ ತೂಗಿ
ಸುಗ್ರೀವನೈತಂದನೈ, ಸಮರ ಸಜ್ಜಿತಂ,
ದ್ವಂದ್ವ ಯುದ್ಧ ವಿಶಾರದಂ! ಕಂಡೊಡನೆ ಆ
ಕಪೀಂದ್ರನಂ, ಅಪ್ರತಿಮ ರಣಧೈರ್ಯ ಸಾಂದ್ರನಂ,
ತಲೆತಗ್ಗಿದುದು ಶಂಕೆ, ಸಪ್ರಾಣಿಸಿತ್ತಾಶೆ,
ಹೆಡೆಯೆತ್ತಿದುದು ನೆಚ್ಚು ಕೆಚ್ಚಿನೊಡನೆಣೆಯಾಡಿ
ರಘುಜರಾತ್ಮದಲಿ.
ಸಿಸುನೇಸರೆಳಗದಿರ್ಚವರಿ,
ಪೊನ್ನೀರೊಳಳ್ದ ಕುಂಚದ ತೆರದಿ, ಕಾಂಚನದ
ಕಾನ್ತಿಯಂ ಸಿಂಚಿಸುತ್ತಿರೆ ಕಾನನದ ಮೆಯ್ಗೆ,
ತರತರ ಸರದ ಕೊರಲ ಬನವಕ್ಕಿಯಿಂಚರಂ
ಕರೆಯುತಿರಲಿಂಪುವೊನಲಂ ಕಿವಿಗೆ, ರಮಣೀಯಮಾ
ಕಾನನಗಿರಿಶ್ರೇಣಿ ಸುಗ್ರೀವ ರಾಮರಂ,
ಕಾನನಪ್ರಿಯರಿರ್ವರಂ, ಮುಗುಳ್ನಗೆವೆರಸಿ
ಪರಸುತಿರೆ, ಇಳಿದರವರಾ ಋಶ್ಯಶೃಂಗದಿಂ
ಕರುತ್ತು ಕಿಷ್ಕಿಂಧೆಯಂ. ಇಳಿದರೇರಿದರಂತೆ
ಸೇರಿದರ್ ವಾಲಿ ಪಾಲಿತ ದುರ್ಗ ನಗರಮಂ
ಸುತ್ತಿ ಮುತ್ತುತೆ ದಟ್ಟಮಿಡಿದೇರ್ದು ಪರ್ವಿದಾ
ಗಹನ ವನಮಂ. ಪಳುಮರೆಯೊಳಡಗಿ, ಪಣ್ಮರಕೆ
ಮರಸು ಕೂತವರಂತೆ, ಮೋನದಿಂದೆಳ್ಚರಿಂ
ರಾಮಾದಿಗಳ್ ನಿಟ್ಟಿಸಿರೆ ಕಾದು ಕಾತರಿಸಿ;
ಸುಗ್ರೀವನೊರ್ವನೆಯೆ ಮುಂಬರಿಯುತೊಂದರೆಯ
ಬಂಡೆಯನಡರಿ, ನಿಮಿರ್ ನಿಂತು, ಕಾಡೆಲ್ಲಮಂ
ದಿಟ್ಟಿಸಿದನಾಲಿಯಿಂದಾಲಿಂಗಿಪಂದದೊಳ್
ತನ್ನೊಲಿದ ಬೀಡೆಲ್ಲಮಂ. ಆ ವನಪ್ರೇಮಿ
ವಿರಹ ರೋಷದಿ ಸುಯ್ದುನೌಡುಗಚ್ಚಿದನೊಡನೆ
ಗರ್ಜಿಸಿದನಚಲವೃಷಭಗೆ ಮಲೆತು ಮೂದಲಿಸಿ

ಗುಟುರಿಕ್ಕುವಂತೆ. ಮಲೆ ಮಾರ್ದುಗುಡುಗಿತರೆಬಂಡುಗಳ್
ನಡುಗಿದುವೆಡಕೆ ಬಲಕೆ; ತೊನೆದುವು ಮರದ ಹಂತಿ;
ಚೀರಿದುವಡವಿವಕ್ಕಿ; ಚಕಿತವಾದುವು ಜಿಂಕೆ
ಕಾಳ್ಕೋಣ ಪಂದಿ ಪೆರ್ಬುಲಿ ಸಿಂಹಗಳ್ ದಂತಿ.
ತೆರೆತೆರೆಯುರುಳಿ ಪರಿದು ಆ ಗರ್ಜನೆಯ ಸಿಡಿಲ್
ಶಾಂತವಾಗಲ್, ಮರಳಿ ಹೆಪ್ಪಾದವೋಲಾದುದೈ
ದಟ್ಟಡವಿಮೋನದ ಕಡಲ್.
ಮೊನೆಯಾದುದುಬ್ಬೆಗಂ
ನೋಳ್ಪರ್ಗೆ. ಮುಟ್ಟೆ ಹಿಡಿವೋಲಾದುದಾರಣ್ಯ
ನೀರವತೆ: ಮರಗಳೊಳು ಗಾಳಿ ಸುಯ್ಯುವ ಸದ್ದು;
ತರಗೆಲೆಗಳುದುರಿ ಬೀಳುವ ಸದ್ದು; ಪೂವಕ್ಕಿಗಳ್
ಬಂಡುಂಡುಲಿವ ಸದ್ದು; ಬಣಗು ಕಡ್ಡಿಗಳಲುಗಿ
ಮರಗೋಡಿನಿಂದುರುಳಿ ನೆಲಕೆ ಕೆಡೆಯುವ ಸದ್ದು;
ಸಸ್ಯಂಗಳುಚ್ಛ್ವಾಸಿಸುವ ಸದ್ದು; ಬೆಳೆವ ಪುಲ್;
ನಿದ್ದೆಗಲ್: ಮುಟ್ಟೆ ಹಿಡಿವೋಲಾದುದಾರಣ್ಯ
ನೀರವತೆ! ಮರಪಸುರ ಕಂಡಿಕಂಡಿಗಳಿಂದೆ
ಬಿಸಿಲಿಣುಕಿ ಶಿಶುವಿನೋಲಾಡಿದುದು ನೆಲದಲ್ಲಿ,
ಕಣ್ಣು ಕಣ್ಣಿನ ರಂಗವಲ್ಲಿಯ ವಿಲಾಸಮಂ
ಚೆಲ್ಲಿ!
ನೋಡುತ್ತಾಲಿಸಿರಲಿಂತು, ಕೇಳ್ದತ್ತು,
ಬೆಟ್ಟ ಬಂಡೆಗಳದಿರೆ, ಮರದ ಕೋಡುಗಳುದುರೆ,
ಸಿಡಿಲ ಪರೆಯೋಲ್ ಕೊಡಂಕೆಯನಿರಿದಲೆವ ಚಂಡೆ!
ಕೂಡೆ ಕೇಳ್ದುದು ವಾಲಿಯಾರ್ಭಟಂ, ಚಂಡೆಯಂ
ಮೀರ್ದು. ಧಿಗಿಲೆಂದತ್ತು ರಾಮನೆರ್ದೆ; ಹನುಮನಂ
ನೋಡಿದನು ಸೌಮಿತ್ರಿ; ಮರದ ಮರೆವೊಕ್ಕಂತೆವೋಲ್
ಹದುಗಿ ನಿಂದುದು ನೀಲ ನಳ ಜಾಂಬವಪ್ರತತಿ!
ಬೆಟ್ಟ ಗುಡುಗಿತ್ತಲ್ಲಿ! ಪಳು ನಡುಗಿತತ್ತಲದೊ!
ಕಾಕು ಕೇಳಿಸಿತಲ್ತೆ ಆ ಪೆರ್ಬ್ಬುಲಸಿನೆಡೆ? ಇತ್ತ
ನೋಡಿತ್ತಲಾಲಿಸಾ ತರಗೆಲೆಯ ಸಪ್ಪುಳಂ!
ಕಾಣಲ್ಲಿ ಮುರಿಗೊಳ್ಳುತಿದೆ ಮರದ ತಲೆಸೊಪ್ಪು!
ಮತ್ತಮದೊ ಚಂಡೆದನಿ! ವೀರಾಟ್ಟಹಾಸಮದೊ

ಮಾರುತ್ತರಂ! ಮತ್ತೆ ಗರ್ಜಿಸಿದನದೊ ನಮ್ಮ
ಸುಗ್ರೀವ! ಮತ್ತೆ ಅದೊ ಪ್ರತಿಗರ್ಜನಂ! ದಿಟಂ,
ವಾಲಿಯೆ ದಿಟಂ! ಎಲ್ಲಿ? ನೋಡಲ್ಲಿ; ಓ ಅಲ್ಲಿ!
ಅದೆ ವಾಲಿ!
                    ಸಿಂಹದೋಲಾರ್ಭಟಿಸಿ, ಪುಲಿಯವೋಲ್
ಚಿಮ್ಮಿದನ್ ಪಳುಗಬ್ಬದಿಂ! ಚಿಮ್ಮಿ, ತಮ್ಮನಂ,
ರಣಾವೇಶಿ ರಣವೇಷಿಯಂ, ನೋಡಿದನ್ ವಾಲಿ!
ಕೆಂಪಾದುವಾಲಿ; ರೌದ್ರತೆವೆತ್ತುದಾನನಂ;
ಕೊಂಕುದುಟಿ ಮೇಲೆ ಕುಣಿದುವು ಮೀಸೆ. ಮತ್ತೊಮ್ಮೆ
ಮಲೆ ನಡುಗುವೋಲಬ್ಬರಿಸಿ ನುಗ್ಗಿದನ್ ಚಿಮ್ಮಿ
ಸುಗ್ರೀವನೆಡೆಗೆ! ತನುಕಾಂತಿಯಿಂ, ವಸ್ತ್ರದಿಂ,
ವರ್ಣದಿಂ, ಮೇಣಲಂಕಾರದಿಂ ಸಮತೆವೆತ್ತಾ
ಸಮರ ಕಲಿಗಳೊಳ್, ಸುಗ್ರೀವನಾರ್ ವಾಲಿಯಾರ್
ತಿಳಿಯಲರಿಯದ ಬೆಮೆಯ ಬೆಳ್ಪಿಂದೆ, ಬಿಲ್ವೊತ್ತ
ದಾಶರಥಿ ಪಲ್ಗಚ್ಚಿದನ್: ಭೀಷ್ಮಪ್ರತಿಜ್ಞೆಯಂ
ನೆನೆನೆನೆದು, ಸಿಗ್ಗಿಂದೆ ಬದ್ಧಭ್ರುಕುಟಿಯಿಂದೆ
ನೋಡುತಿರ್ದನ್ ಬಿಲ್ಲುಬೆರಗಾಗಿ, ಹೋರಾಡುತಿರೆ
ಹೋರಿಗಳೆರಡು, ಹೊಂಚುಹುಲಿ ದಿಟ್ಟಿಪೋಲಂತೆ!
   ನುಗ್ಗಿ ಬರ್ಪತುಲ ಬಲಶಾಲಿಯಂ, ವಾಲಿಯಂ,
ಕಂಡು ತೆಕ್ಕನೆ ಕೆಲಕೆ ಸಿಡಿಯುತೆ ರುಮಾಪ್ರಿಯಂ
ಗುದ್ದಿದನ್ ನೆತ್ತಿಯಂ. ಕರ್ಗಲ್ಲು ನುರ್ಗುನುರಿ
ವೋಗುವಾ ಘಾತಕ್ಕೆ ಮೆದುಳ್ ಕದಡಿದೋಲಂತೆ
ತತ್ತರಿಸಿದಿಂದ್ರಜಂ, ಮತ್ತೆ ಚೇತರಿಸಿದನ್.
ಹತ್ತಿರಿರ್ದೊಂದರೆಯನೆತ್ತಿ ಸಿಡಿರೋಷದಿಂ
ಬಿಟ್ಟನ್ ಶತಘ್ನಿ ಗುಂಡಿಡುವಂತೆ. ಸತ್ತನೇ
ಸುಗ್ರೀವನೆಂಬನಿತರೊಳೆ, ಲಂಘಿಸೆ ಕೆಲಕ್ಕೆ,
ಗುರಿತಪ್ಪಿದಾ ಬಂಡೆ ಬಡಿದುದೊಂದವನಿಜದ
ಗೂನ್ಗಂಟೊರಟು ಬುಡಕೆ. ಬೇರುಗಳುಡಿಯೆ, ಕೊಂಬೆ
ಬರಲಾಗಲೆಲೆಯುದುರಿ, ಮರಮೊರಗಿದುದು ಲರಿಲ್
ಲರಿಲ್ಲರಿಲ್ಲೆಂದು. ಆ ವೃಕ್ಷಮನೆ ಗದೆಗೈದು
ಸುಗ್ರೀವನಪ್ಪಳಿಸುತಿರೆ ವಾಲಿಯಂ, ಅದಂ

ಕಪಿಮುಷ್ಟಿಯಿಂ ಪಿಡಿದು ಜಗ್ಗಿಸೆಳೆಯುತೆ ವಾಲಿ:
‘‘ಕೇಳೆಲವೊ ಸುಗ್ರೀವ, ನೀಂ ತಮ್ಮನೆಂಬೊಲವರಕೆ,
ನಿನ್ನಾ ಪತಿವ್ರತಾ ಸತಿಯೈದೆತನಕಾಗಿ,
ದೇವಿ ತಾರೆಯ ವಚನಕಾಗಿ, ಪುಸಿಗಾಳೆಗಂ
ಗೊಟ್ಟೊಡತಿಮಲೆತು ಕೊಬ್ಬಿದೆಯೆಲಾ? ಹಗೆತನಂ
ಬಾಡಿದೆನ್ನೆರ್ದೆಗೆ ನೇಹಂ ಮೂಡುತಿರ್ದಂದೆ,
ಕೂಡಿಕೊಂಡಾವನೋ ಬಣಗು ಬಡಗರಸನಂ,
ಕೆಣಕಿದಪೆ ಮತ್ತೆಯೆನ್ನಂ. ಮರುಳೆ, ಸಾಹಸದಿ
ವಾಲಿಯಂ ಗೆಲ್ದವರದಾರುಂಟೊ? ರಾವಣನೆ
ಹೆದರಿ, ಮೈತ್ರಿಯನಾಶ್ರಯಿಸಿ ಬರ್ದುಕುತಿರ್ಪನೆನೆ
ಕಾವರಾರೈ ನಿನ್ನನೆನ್ನ ಕೋಪಪ್ರಳಯ
ಫಣೆಗರಳದಿಂ?’’ ಎನುತೆ ತಮ್ಮನ ಕಯ್ಯ ಗದಾ
ವೃಕ್ಷಮಂ ಕಸಿದು ಬಿಸುಟನ್; ನೆಗೆದು ಮೇಲ್ವಾಯ್ದು,
ಬಿಗಿದಪ್ಪಿದನ್ ಭುಜದ ವಾಸುಕಿಯಿನವರಜನ
ಮೆಯ್ಯ ಮಂದರವನುರ್ವರೆಗಿರ್ವರುರುಳ್ವಂತೆ!
    ತಿರೆಗುರಳಿ ಹೊದೆಯ ಮರೆಯಲಿ ಹೋರುತಿರ್ದರಂ
ಕಾಣಲಾರದೆ ಕಾತರಿಸುತಿರೆ ವಿಯದ್ವರ್ಣಿ,
ಕೇಳಿಸಿತು ದಿಡ್ಡುದಿಡ್ಡೆಂಬ ಕೈಗುದ್ದುಗಳ
ಸದ್ದುಗಳ ಮೀರುತೇರ್ದಾರ್ತನಾದಂ. ಒಡನೆ ಹಾ
ಓಡುತಿರ್ದಾ ರಾಮಮಿತ್ರನಂ ಬೆಂಬತ್ತಿ
ಕಾಣೆಸಿದನಟ್ಟುತಿರ್ದಾ ವಾಲಿ. ಮಿತ್ರನಾರ್
ಶತ್ರುವಾರೆಂಬನಿತರೊಳೆ ದಟ್ಟ ಪಳುವದೊಳ್
ಮರೆವೋದರಿರ್ವರುಂ.
                    ರಾಮನಂಬಿನ ನೆರಂ
ಬಿಸಿಲ್ಗುದುರೆಯಾದುದಂ ಕಂಡು ಸುಗ್ರೀವಂಗೆ
ನೆಚ್ಚುಗೆಡೆ, ವಾಲಿಮುಷ್ಟಿಯ ವಜ್ರಘಾತಕ್ಕೆ
ಮೈಮುರಿಯೆ, ಕಣ್ಣೀರುಮೊಳ್ಕಲೊಳಸೋರುತ್ತೆ
ಹಿಮ್ಮೆಟ್ಟಿದನ್ ಮತಂಗಾರಣ್ಯ ರಕ್ಷಣೆಗೆ.
ಋಷಿಶಾಪಮಂ ನೆನೆದು, ಬದುಕು ನಡೆ ಹೋಗೆಂದು
ಮುಳಿಸಂ ನುಡಿದು, ವಾಲಿ ಪಿಂತಿರುಗಿದನ್ ತನ್ನ
ಕಿಷ್ಕಿಂಧೆಗೆ.

ಇತ್ತ ರಾಮಾದಿಗಳುಮರಸುತ್ತ
ಬಂದು ಕಂಡರು ವೈರಿಮುಷ್ಟಿ ಪ್ರಹಾರದಿಂ
ಜರ್ಜರೀಕೃತದೇಹನಂ, ರುಧಿರ ಸಿಕ್ತಾಂಗನಂ,
ಕ್ಲಾಂತ ಸುಗ್ರೀವನಂ. ಕಣ್ಬನಿವೆರಸಿ, ನಾಣ್ಚಿ,
ಬಾಗಿ, ನೆಲನಂ ನೋಡುತಾ ದೀನವಾನರಂ,
ಕೆಳೆಯನಿರ್ಕೆಯ ಕರುಣ ದುಃಸ್ಥಿತಿಗೆ ಮರುಗಿರ್ದ
ದಿನನಾಥಕುಲಸಂಭವಂಗೆ: "ನೀನಿಂತೇಕೆ
ನಂಬಿಸೆನ್ನಂ ಕೊಂದೆ, ಓ ಕರುಣಿ! ವಾಲಿಗೇಂ
ಬೇಹುಗಾರನೊ? ಕೊಲ್ಲಿಸಲ್ಕೆನ್ನನೆಂದಿಂತು
ಪುಸಿವೇಳುತಾರ್ಯನೀತಿಯ ಮೆರೆದೆಯಲ್ತೆ? ನಾಂ
ಮುನ್ನಮೊರೆಯೆನೆ ವಾಲಿ ದುಸ್ಸಾಧ್ಯನೆಂಬುದಂ
ನಿನಗೆ?" "ಮನ್ನಿಸು, ವಾನರೇಂದ್ರ, ಮನ್ನಿಸೆನ್ನನ್.
ಕೋಳುವೋದೆನ್ ರೂಪಸಾದೃಶ್ಯದಿಂ, ಗೆತ್ತು
ನಿನ್ನಣ್ಣನಂ ನಿನಗೆ. ಮೋಸವೋಗೆನೊ ಮರಳಿ.
ಏಳು, ನಡೆವಂ ಮತ್ತೆ ಕಿಷ್ಕಿಂಧೆಯತ್ತಣ್ಗೆ.
ಬೇಂಟೆಯೊಳ್ ಸೋವಿನವರೆಂತು ಪಳುವಂ ನುರ್ಗ್ಗಿ
ಬಿಲ್ಲಿರ್ಪೆಡೆಗೆ ತರುಬುತೆಳ್ಬುವರೊ ಹಕ್ಕೆಯ
ಮಿಗಂಗಳಂ, ನೀನಂತೆವೋಲ್ ಕರೆದು, ವಾಲಿಯಂ
ಪೊರಮಡಿಸವನ ಕೋಂಟೆಯಿಂ. ಕಾಂಬೆ ನೀನೊಡನೆ
ಬಾಣದೇರಿಗೆ ನೆತ್ತರಂ ಕಾರ್ದು ಕೆಡೆದಳಿವ
ಗೃಹವೈರಿಯಂ! ಕುರುಪಿರ್ಕೆ ಈ ಪೂವಿಡಿದ ಬಳ್ಳಿ
ನಿನ್ನ ಕಂಠಕ್ಕೆ: ಜಯಮಾಲೆಯೆಂದೆಯೆ ತಿಳಿಯ
ನೀನಿಡನ್!" ತುಡಿಸಲ್ಕೆ ದಾಶರಥಿ ಹೂವಿಡಿದ
ಕಾಡುಬಳ್ಳಿಯನವನ ಕೊರಳಿನಲಿ, ಹಾಲ್ಗರಿಯ
ಬೆಳ್ವಕ್ಕಿ ಸಾಲ್ಗೊಂಡು ಮಾಲೆಗಟ್ಟಿದ ಬಯ್ಗು
ಮುಗಿಲಂತೆವೋಲೆಸೆದನಾ ವಾನರಂ!
ಮೇಲೆ, ಕೇಳ್,
ತೆರಳ್ದರವರಿನ್ನೊರ್ಮೆ ಕಿಷ್ಕಿಂಧೆಯತ್ತಣ್ಗೆ
ಸುಗ್ರೀವನಂ ಕೂಡಿದುನ್ಮೀಲಿತೋತ್ಸಾಹದಿಂ
ಪೆರ್ಚಿ.
ಅನ್ನೆಗಮತ್ತಲಾ ವಾಲಿ ತಮ್ಮನಂ

ದ್ವಂದ್ವಯುದ್ಧದಿ ಗೆಲ್ದು ಎಳ್ಚಟ್ಟಿದುರ್ಕಿನಿಂ
ಸೊರ್ಕಿ ಪೊಕ್ಕನ್ ತನ್ನ ಕಿಷ್ಕಿಂಧೆಯಂ. ತಾರೆ,
ಕೊಡಗಿನುಡುಗೆಯ ಸೀರೆ ಸಿಂಗರಿಸಿದಾ ನೀರೆ,
ಮರ್ದ್ದಿಕ್ಕುತೇರ್ಗಳ್ಗೆ, ಬಿಜ್ಜಣಿಕೆ ವೀಸುತ್ತೆ,
ಕೈಸೋಂಕಿನಮೃತದಿಂ ಬಳಲಿಕೆಯನಾರಿಸುತೆ
ಬೆಸಗೊಂಡಳೇರ್ವಸನದಾಗುವೋಗಂ. ಗೆಲ್ದು
ಬಂದಿರ್ದ್ದೊಡಂ ವಾಲಿ, ಖಿನ್ನಮುಖದಿಂ ಪ್ರಿಯೆಗೆ
ಸತಿಗೊರೆದನಿಂತು ಹದಿಬದೆಗೆ: ''ನೀನೆಂದವೊಲೆ
ರುಮೆಯ್ಯೆದೆತನಕೆ ಕೇಡಡಸದೋಲಾತನಂ
ಬಡಿದಟ್ಟಿ ಬಂದೆ... ಮನಮೇಕೊ ಸಂತಪಿಸುತಿದೆ.
ಕಾರಣವನರಿಯೆ... ಮೇಣರಿತ ಕತದಿಂದಿಂತದೇಂ
ತಪಿಸುತಿರ್ಪುದೊ?... ಗುಹೆಯೊಳೆನ್ನಂ ಮುಚ್ಚಿ, ತೊರೆದು
ಬಂದನೆಂಬಾಕ್ರೋಶದುಲ್ಬಣದೊಳಂದು ನಾಂ
ತಮ್ಮನ ವಿನಯಮಂ ಕಿವುಳ್ಗೇಳ್ದು, ಆತನಂ
ಪೆತ್ತಮ್ಮನೂರಿಂದೆ ಪೊರನೂಂಕಿದೆನ್, ತನ್ನುರುವ
ಕೆಳೆಯರ್ವೆರಸಿ; ಬೇಯಿಸಿದೆನಾ ರುಮಾದೇವಿಯಂ
ಸಿರಿಮನೆ ಸೆರೆಯೊಳಿಟ್ಟು; ಕಡೆಗಣ್ಚಿದೆನ್ ನನ್ನ
ಪೆಸರ ಪಳಿಯಂ, ನಿನ್ನ ಹಿತವಾಕ್ಯಮಂ. . . ಮನಂ,
ಓರೊರ್ಮೆ, ಗೆಯ್ದನ್ನೆಯದ ಕಜ್ಜಮಂ ತಿರ್ದ್ದಿ,
ತಮ್ಮನಂ ತಾಯ್ನೆಲಕೆ ತರಲೆಳಸಿತಾದೊಡಂ,
ತಡೆಯಾಯ್ತು ಪುಸಿಬೀರದೊಂದು ಪುಸಿಲಜ್ಜೆ. ಮೇಣ್
ಆತನುಂ ಮರುಕಮಂ ಕರುಣೆಯಂ ಮೂಡಿಸುವ
ಮಾರ್ಗಮನುಳಿದು ಮುಯ್ಗೆಮುಯ್ಯಾಗಿ ಕೋಪಮನೆ
ಕೆಣಕಿದನ್; ಕದಡಿದನೆದೆಯ ರೋಷ ಸಾಗರದಿ
ಬಡಬಾಗ್ನಿಯಂ... ಈಗಳುಂ ರಾಮನೆಂಬೊನಂ
ಮರೆ ನೆರಂಬಡೆದು... ನಾನಾತನೆರ್ದೆಯಂ ಪತ್ತಿ
ಗುರ್ದ್ದಿಕ್ಕುವಾಗಳವನಂ ಕರೆದನಾದೊಡಂ
ತೋರ್ದನಿಲ್ಲಾ ಬೀರನಾವೆಡೆಯೊಳಂ...''
ಮಾತು
ಮುಗಿವನ್ನೆಗಂ, ಕೇಳ್ದುದೊಂದಾರ್ಭಟಂ, ನಡುಗೆ
ಕಿಷ್ಕಿಂಧೆ! ''ಸುಗ್ರೀವನದೊ ಮತ್ತೆ!'' ಎಂದೌಡು

ಕಚ್ಚಿ, ಕರಿಘೀಂಕೃತಿಯನಾಲಿಸುವ ಸುಪ್ತೋತ್ಥ
ಹರ್ಯಕ್ಷನೋಲಾದನಾ ವಾಲಿ ತಾನಾಭೀಳ
ರಕ್ತೇಕ್ಷಣಂ. ಹುಬ್ಬುಗಂಟಿಕ್ಕಿ ನೆಗೆದೆದ್ದು,
ತಡೆವ ತಾರೆಯ ಕೈಯನೋಸರಿಸುತಿರೆ ಕೆಲಕೆ,
ದಿಂಡುರುಳಿದಳ್ ನೆಲಕೆ; ಕಾಲ್ವಿಡಿದಳಾಣ್ಮನಂ;
ಬೇಡಿದಳ್ ಕಣ್ಬನಿಯ ಜೇನಿಳಿವ ತಾವರೆಯ
ಚೆಲುವೆ! ''ಮಾಣ್, ಮನದನ್ನ, ಮಾಣ್; ಮಾರದಿರ್ ಚಲಕೆ
ಜೀವನಶ್ರೇಯಮಂ. ನೀನೀಗಳೆನ್ನೊಡನೆ
ನುಡಿಯುತಿರ್ದುದನೆ ಪಿಡಿಃ ವೀರರೌದಾರ್ಯಮಂ!
ಪತಿವ್ರತಾ ರಮಣಿಯಂ ಆ ರುಮಾದೇವಿಯಂ
ನೆನೆ. ಪಡೆದ ತಾಯನಂತೆಯೆ ತಂದೆಯಂ ನೆನೆ;
ಅಂತೆವೋಲ್ ನಿಮ್ಮಿರ್ವರೆಳೆತನದ ಲೀಲೆಯಂ,
ತಾರುಣ್ಯದೋಲದುಯ್ಯಾಲೆಯಂ ನೆನೆ. ಪಿಂತೆ
ನಿಮ್ಮೊಳಿರ್ದಳ್ಕರೆಯ ಸಗ್ಗಮಂ ನೆನೆ.'' ತಾರೆ ತಾಂ
ನುಡಿದೋರೆ, ಮುಗ್ಧನಾದನೆ ವಚನ ಮಂತ್ರದಿಂ–
ದೆಂಬಂತೆ, ವಾಲಿಗೊದಗಿತು ಶಾನ್ತಿಃ ತಮ್ಮನಂ,
ಅಣ್ಣ ಬಾ ಬಾರೆಂದು ಜೊಲ್ಲ ತೊದಳಿಂ ಚೀರ್ವ
ಸಣ್ಣ ಸುಗ್ರೀವನಂ, ನೋಳ್ಪರಾ ಕಣ್ಮಣಿಯ
ಚಿಣ್ಣನಂ, ಕಂದ ಸುಗ್ರೀವನಂ, ತನ್ನೊಲಿದ
ಮುದ್ದು ಸುಗ್ರೀವನಂ ಬೆನ್ನಿನೊಳ್ ಪೊತ್ತು, ತಾಯ್
ಕಂದ ಬಾರೆನ್ನುತಿರೆ, ''ಉಪ್ಪು ಬೇಕೇ ಉಪ್ಪ?''
ಎನುತೆ ತಾಂ ಪರಿದಾಡುತನಿಬರಂ ನಗಿಸಿದಾ
ಚಿಕ್ಕಂದಿನೊಂದು ಚಿತ್ರಂ ಸ್ಮೃತಿಗೆ ಮೈದೋರೆ,
ರೋಷಚ್ಯುತಂ ವಾಲಿ ಶಾಂತನಾದನ್. ಮೈತ್ರಿ
ಸಂಚರಿಸಿದುದು ಮನದಿ, ವೈರಮಂ ಕೆಲಕ್ಕೊತ್ತಿ.
''ನೆರಪುವೆನ್, ತಾರೆ, ಸುಗ್ರೀವನಂ ತಂದಿಂದು
ರುಮೆಗೊಸಗೆಯಂ. ಸಿಂಗರಿಸು ನಡೆ ನಿನ್ನ ತಂಗಿಯಂ.
ಚಿಕ್ಕಂದು ಸಾವಾಡಿದುಪ್ಪಾಟಮಂ ಮತ್ತಿಂದು
ತೋರಿದಪೆನೆನ್ನ ತಮ್ಮಂಗೆ. ನೀನನ್ಯಮಂ
ಚಿಂತಿಸದಿರಾಂ ಪೋಗಿ, ಕಾಳೆಗದ ನೆವದಿಂದೆ,
ಪೊತ್ತು ತಹೆ ರವಿಸೂನುವಂ!''

ನಿಲ್ಲದಲ್ಲಿಂದೆ
ಪ್ರೋಲ್ಲಾಸದಿಂ ಪರಿದನಾ ಬೃಹದ್ಬಲಶಾಲಿ
ವಾಲಿ. ಕಿಷ್ಕಿಂಧೆಯ ದಿವಾಕರಂ ನಡುವಗಲ
ಹೊಸ್ತಿಲಂ ದಾಂಟೆ, ಪೂರ್ವಾಚಲಕೆ ಯಾತ್ರೆಯಂ
ತೊಡಗಿರ್ದುದಾಗಳೆ ತರುಚ್ಛಾಯೆ. ಪಿಂದಿಕ್ಕಿ
ಕೋಂಟೆ ಪೆರ್ಬಾಗಿಲಂ ಹೊರವಳಯದಡವಿಗೈ–
ತರುತಿಂದ್ರಜಂ ಕಂಡನಾ ವಿಪಿನ ಪುಷ್ಪಲತೆ
ಗ್ರೈವೇಯಮಾಗಿರ್ದ ಸುಗ್ರೀವನಂ. ವೈರಂ
ವೈರಾಗ್ಯಮೊಂದಿರ್ದ್ದರ್ದೆಗೆ ಕರುಣೆಯುಕ್ಕುತಿರೆ
ಮುನ್ನುಗ್ಗಿದನೊ ಅಣ್ಣನಪ್ಪಲೆಂದಾ ತಮ್ಮನಂ.
ಅಗ್ರಜನ ಹೃದಯ ಪರಿವರ್ತನೆಯನರಿಯದಾ
ಸುಗ್ರೀವನಿಕ್ಕಿದರೆಬಂಡೆಗಳನಂಗೈಯ
ದಾಂಡಿನಿಂ ಪೊಡೆಸೆಂಡನಾಡುತೆ ಕೆಲಕ್ಕಣೆದು,
ಮಿಂಚುಜವದಿಂ ಬಳಿಗೆಪರಿದು, ಕಪಿಮುಷ್ಟಿಯಿಂ
ತುಡುಕಿ, ಶಾರ್ದೂಲಮಂ ಭೇರುಂಡನೆತ್ತುವೋಲ್
ತಮ್ಮನಂ ಪೊತ್ತು, ತಾಯೂರ್ಗೆ ಧಾವಿಸಿದನೈ
ದೇವಾಸುರರ ಮೀರ್ದ ದೈತ್ಯಬಲಶಾಲಿ, ಆ
ವಾಲಿ!

ನಿರ್ಲಕ್ಷಿಸುತೆ ದೈವಮಂ, ಪ್ರತಿಭಟಿಸಿ
ದೈವೀಪರಂಗಳಂ ಶಕ್ತಿಯಂ, ನೆಮ್ಮುತ್ತೆ
ತನ್ನಹಂಕಾರಮಂ ಸ್ವಬಲಮಂ ಸ್ವಾರ್ಥಮಂ,
ಚಲದಿಂ ವಿರೋಧಿಸಲ್ ವೈರಭಾವವನಾಂತ
ಆಸುರೀ ಸಾಧನೆಯ ದೈವೀವಿಮುಖಮಪ್ಪ
ಲೌಕಿಕ ಪರಾಕ್ರಮದ ಶಿಕ್ಷಾರಕ್ಷೆಗಿನ್ನಿಹುದೆ,
ಪೇಳ್, ಕೃಪಾಬಾಣಕ್ಕೆ ಬೆನ್ನಲ್ಲದನ್ಯಲಕ್ಷ್ಯಂ
ತುದಿಗೆ?

ಸನ್ಮಿತ್ರನಂ ಪೊತ್ತೋಡುವಾತನಂ
ಕಂಡು 'ಹಾ ಕೈ ಮೀರ್ದುದಾ' ಎನುತೆ ಮುಂಗೆಟ್ಟು,
ಬೇರೆ ಬಟ್ಟೆಯ ಕಾಣದಯ್ಯಯ್ಯೊ, ರಘುಕುಲದ
ಶುಭ್ರ ಕೀರ್ತಿಯ ದಾಶರಥಿ, ಕಣೆಯ ಬಟ್ಟೆಯನೆ
ಕೈಕೊಂಡನೆಚ್ಚನ್ ಕಠೋರ ಶರಮೃತ್ಯುವಂ

ವಾನರನ ಬೆನ್ಗೆ! ಬಿದ್ದನ್ ವಾಲಿ, ಬಿದ್ದುದೆನೆ
ಕಲ್ಪದ್ರುಮಂ ವೆರಸಿ ಸಗ್ಗದೈರಾವತಂ
ನೆಲಕೆಃ—ದೀವದ ಹೋರಿಯಂ ಕಟ್ಟಿ ಬೇಂಟೆಗಂ
ಮರಸು ಕುಳಿತಿರೆ ಮರದ ತುದಿ ಮಂಚಿಗೆಯ ಮೇಲೆ,
ಸೋವತವನರಸಿ ಬರ್ಪುದು ಪಸಿದ ಪುಲಿ. ಮುಂದೆ
ಕೊರ್ವಿದೆರೆಯಂ ಕಂಡದಂ ಕೊಳ್ವಲಂಪಿಂದೆ
ಹೊಂಚಿ ಮುಂಬರಿಯುತಿರಲೀಡೇಳುವುದು ಕೋವಿ.
ನೆರಕೆ ತಗುಲಿದ ಗುಂಡಿನೇರಿಂಗೊಡನೆ ಜೀವಿ
ಮೈಮರೆದುರುಳೆ, ಮರಸಿನಿಂದಿಳಿದುಬಂದು, ಆ
ಬೇಂಟೆಗಾರಂ ತನ್ನ ಬೇಂಟೆಯನೊಸೆದು ನೋಡಿ
ಮೆಚ್ಚುವನ್, ತನ್ನ ಬೀರದ ಬೆನ್ಗೆ ತಾನೆ ಕೈ
ಚಪ್ಪರಿಸಿ!—ಓಡಿದರೊ ಬಿಳ್ದಿಂದ್ರಜನ ಬಳಿಗೆ
ರಾಮಾದಿಗಳುಮಂತೆ. ಸುಗ್ರೀವನಂ ತೆಗೆದು
ತಳ್ಳೈಸಿದರ್ ಉಘೇ ಎಂದು. ಸಂಭ್ರಮವಾರೆ
ನೋಡಿದರ್ ಪುರಹೂತ ಜಾತನಂ, ಬಸವಳಿದು
ನೆತ್ತರ್ಗೆಸರೊಳಾಳ್ದು ತನ್ನಾಳ್ದಿಳೆಗುರುಳ್ದು
ಬಿಳ್ದಾತನಂ. ನೋಡೆ ನೋಡೆ, ಖಿನ್ನತೆ ಮೂಡಿ—
ತನಿಬರಿಗೆ. ಹಿರಿದಾದುದಳಿಯೆ, ಹಗೆಯಾದರೇಂ,
ಹಿರಿತನಕೆ ನೋವಾಗದುಂಟೆ? ತಾನಾವನಂ
ದೂರದಿಂ ಕೇಳ್ದಿರ್ದನಾ ಪೊಳ್ತಿನನ್ನೆಗಂ ಮೇಣ್
ದೂರದಿಂದಲ್ಲದೆಯೆ ಕಂಡಿರ್ದನಿಲ್ಲ, ಆ
ವೀರನ ಶರೀರದೆಡೆ ನಿಂದು ಸೀತಾಸ್ವಾಮಿ
ಸುಯ್ದು, ತನ್ನೊಳಗೆ ತಾಂ ಬಯ್ದುಕೊಂಡನ್ ತನ್ನ
ಬಿಲ್ಜಾಣ್ಮೆಯಂ.
ತಣ್ಪುವೀಸುತ್ತಲೆವ ಮಲೆಯ
ಗಾಳಿಗೊಯ್ಯನೆ ವಾಲಿ, ಚೇತನ ಗವಾಕ್ಷಮಂ
ತೆರೆವಂತೆ ಕಣ್ದೆರೆದು, ಬಳಸಿರ್ದರೆಲ್ಲರಂ
ಗುರುತಿಸುವವೋಲ್ ನೋಡಿಃ "ಏಂ ಗೈದೆ, ಸುಗ್ರೀವ!
ಮುದ್ದಾಡಲೆಂದು ಬಂದಳ್ಕರೆಯ ತೋಳ್ಗಳಂ
ಛಿದ್ರಿಸಿದೆಯಲ್ತೆ!. . . ಆಃ, ತೋರೆನಗೆ ಆ ವೀರನಂ
ಬೆನ್ಗೆ ಬಾಣವನೆಚ್ಚ ಆ ನಿನ್ನ ಕಲಿ ರಾಮನಂ. . .

ನೀನಾರೆಲವೊ ವೀರವೇಷಿ? ಬಿಲ್ವಿಡಿದಿರ್ಪೆ;
ನೀನೆ ರಾಮನೆ ವಲಂ! ವೀರ ಪಾರ್ಥಿವನಾಗಿಯುಂ
ಕೀಳ್ಮೆಗೇಕಯ್ ಕಯ್ಯನಿಟ್ಟೆ? ಪೆತ್ತೂರೆಡೆಗೆ
ತಮ್ಮನಂ ಪೊತ್ತುಕೊಂಡುಯ್ವಣ್ಣನಂ ಬೆನ್ಗೆ
ಹಂದೆತನದಿಂದೆಚ್ಚು ಕೊಂದಯ್! ತಾರೆಯ ಬಾಳ್ಗೆ,
ನಿನ್ನನೆರ್ದೆಮುಟ್ಟಿ ಪೊಗಳುತ್ತಿರ್ದವಳ ಬಾಳ್ಗೆ, ಹಾ,
ಕಿಚ್ಚಿಟ್ಟೆಯೈ! ಧಿಕ್ ನಿನ್ನ ಕಲಿತನಂ! ಧಿಕ್ ನಿನ್ನ
ವೀರಪಾರ್ಥಿವ ಕೀರ್ತಿ! ಹೇಡಿಯಂದದೊಳಡಗಿ
ದೂರದಿಂದುಗ್ರಬಾಣವನೆಚ್ಚು ಬರ್ದುಕಿದಯ್
ನೀಂ. ಕೆಣಕಿ ವಾಲಿಯಂ ಬರ್ದುಕಿದವರಾರುಂಟೊ
ಮೂಲೋಕದೊಳ್? ತನ್ನವಸರದ ಮೋಹಕುರುವರನ
ಬೇಳ್ವ ಕಣ್ಗೇಡಿ, ಹೆಂಬೇಡಿ ನೀಂ! ಚಿಃ ಸುಡಲಿ
ನಿನ್ನ ಈ ಪೊಲೆಮಾಳ್ಕೆಯಾ ಕೊಲೆಯ ಬಾಳ್ಕೆಯಂ!''
   ಬೆನ್ನ ಮರುಮೊನೆಗೊಂಡ ಸರಳ್, ಸುರಿವ ಕೆನ್ನೀರ್,
ಮಿಳ್ತುಮೊಗವಾದುಸಿರ ನಡುಕುದನಿ ಸರ್ವಮುಂ
ವಾಲಿಯ ಕಡೆಗೆ ನಿಂತು ವಾದಿಸುತೆ, ರಾಮನಂ
ನಿಂದಿಸುತ್ತಿರಲಾತನಿನಿತು ಗದ್ಗದದೊಡನೆಃ
''ವಿಧಿಯ ವಿನ್ಯಾಸಮಂ ನಿಂದಿಸಿದೊಡೇಂ ಫಳಂ,
ಸುಗ್ರೀವನಗ್ರಜಾ?''
                    ಕೊಂಕುನಗೆಯಿಂ ವಾಲಿಃ
''ನಿನ್ನ ಮಡದಿಯನಸುರನುಯ್ದುದುಂ ವಿಧಿಲೀಲೆ!
ನೀನೇಕೆ ಪರಿತಪಿಸುತಿಹೆ ಮತ್ತೆ?''
                              ''ನಿನ್ನ ವಿಧಿ
ನಿನಗೆ. ರಾಕ್ಷಸನ ವಿಧಿ ರಾಕ್ಷಸಗೆ. ನಿನ್ನಂತೆ, ಕೇಳ್,
ಹದಿಬದೆಗಳುಪಿದಸುರನುಂ ಕಡೆಯನೆಯ್ದುವಂ.''
''ಪುಸಿ, ಪುಸಿ, ಪುಸಿ!'' ಎನುತ್ತೆ ಕಿವಿಮುಚ್ಚಿದನ್ ಮಹಾ
ವಾನರಂ ''ಮಗಳೆನಗೆ ರುಮೆ! ತಾರೆ ತಾಂ ಸಾಕ್ಷಿ!
ಹಂದೆತನಕಾ ಪುಸಿಪಳಿಯ ಬೆಸುಗೆಯೊಂದೇಕೊ?''
''ವಿನಯದಿಂ ಬೇಡಿದೊಡಮೊಡವುಟ್ಟಿದಾತನಂ,
ನಿರ್ದೋಷಿಯಂ, ತನ್ನ ತಾಯಿನಾಡಿಂದಟ್ಟಿ,
ಕೆಳೆಯರ್ವೆರಸಿ ಕಳೆದೆಯಲ್ತೆ? ಆ ಕೇಡಿಗಯ್

ಈ ಶಿಕ್ಷೆ!'' ''ತಳುವಿ ಬಂದಯ್ ದುಷ್ಟಶಿಕ್ಷಣೆಗೆ!
ನಾನೀಗಳಾ ಕೋಪಿಯಲ್ತಾ ಪಾಪಿಯಲ್ತು: ಮೇಣ್
ಪ್ರೀತಿ ಪಶ್ಚಾತ್ತಾಪದಿಂ ಭ್ರಾತೃ ಮೈತ್ರಿಯಿಂ
ಶುದ್ಧನೆಂ, ನಿರ್ವೈರನೆಂ. . . ಹಂದೆತನದಿಂದಡಗಿ
ಕೊಂದೆಯೆಂದಾಡಿದೆನ್; ಬೇರೆ ಹಗೆತನಮಿಲ್ಲ
ನನಗೆ.''

ವಾಲಿಯ ಮುಖದ ಸತ್ತ್ವದಿಂದಾ ನುಡಿಯ
ತಥ್ಯಮಂ ಶಂಕಿಸದೆ, ತಿರುಗಿದನ್ ದಾಶರಥಿ
ಸುಗ್ರೀವ ಮುಖಕೆ. ಅಶ್ರುಮಲಿನಾಸ್ಯನಾತನುಂ
ನೆಲದಿಟ್ಟಿಯಾಗಿ ''ನಾನರಿಯೆನೀತನ ಮನದ
ನೂತನತೆಯಂ.'' ಎನಲ್, ಜಾಂಬವಂ: ''ಬಲ್ಲೆನಾಂ;
ಇಂದ್ರಜನ ಜಿಹ್ವೆ ಮಿಥ್ಯೆಯನರಿಯದೇಗಳುಂ. . .''
''ವಕ್ರವಿಧಿಗಾದನಾಹುತಿ ಶಕ್ರಸಂಭವಂ!''
ಎನುತೆ ಮಾರುತಿ ಮಣಿದನೆತ್ತಿದನ್ ವಾಲಿಯಂ
ಸಮನೆಲದ ತೃಣಶಯ್ಯೆಗೆ. ಬಿಳ್ದಂಗೆ ತೋಳ್ಗಳಂ
ತಲೆಗಿಂಬುಗೈಯುತಿರೆ ಸೌಮಿತ್ರಿ, ಕಣ್ಬನಿಯ
ಗದ್ಗದದ ರಾಮಚಂದ್ರಂ, ಧನುರ್ಬಾಣಮಂ
ತೂಣೀರಮಂ ಕೆಲಕ್ಕೆಸೆದು, ವಾಲಿಯ ಮೆಯ್ಗೆ
ಸೋಂಕಿ ಕುಸಿದನ್ ನೆಲಕೆ:

''ಮನ್ನಿಸೆನ್ನಂ, ಮಹಾ
ವೀರ! ತಪ್ಪಿದೆನಯ್ಯೊ, ಬ್ರಹ್ಮವರದಾ ಬಲೆಗೆ
ಸಿಲ್ಕಿ. ನಿನಗಾ ವರವೆ ಶಾಪಮಾದುದೊ ! ಕೀರ್ತಿ
ಮುಸಳಿಸುವವೋಲೆನ್ನನಡಗಿಸಿತೊ! ಮರೆವೊಕ್ಕನಾ
ಮರಕೆ! ಮಾಡಿದ ತಪ್ಪನೊಪ್ಪಿಕೊಳ್ಳುವದೆ ಲೌಕಿಕದ
ಬೀರಕ್ಕೆ ಸಲ್ಲಕ್ಷಣಂ: ಅಯ್ಯೊ ಸೀತೆಯನಗಲ್ದು
ಪಗಲಿರುಳ್ ಪೊಗೆಯುತಿರ್ಪೀ ಬಗೆಯ ಕನ್ನಡಿಗೆ
ಮರ್ಬುಕರೆ ಮಂಕಡಸಿತಯ್. ಶೀಘ್ರಸೂತ್ರಕ್ಕೆ
ಬೇಳ್ದೆನಯ್ ಐಹಿಕದ ಕೀರ್ತಿಯನಂತೆ ಧರ್ಮಮಂ
ಮೇಣ್, ಕಪಿಕುಲ ಲಲಾಮ, ನಿನ್ನುಮಂ!''

ಬಳಿ ಕುಳ್ತು
ರೋದಿಸುವ ರಾಮನಂ ನೋಡಿದನ್, ಕಣ್‌ನಟ್ಟು,

ವಾನರೇಂದ್ರಂ. ಮೃತ್ಯುಮುಖಮಾದ ಜೀವಕ್ಕೆ
ಹತ್ತೆ ಸಾರುವುದೇನೊ ಸತ್ಯಮೆಂಬಂತೆವೋಲ್
ನೋವಿನ ನಡುವೆ ನಗೆಯನಲರಿಸಿ ನುಡಿದನಿಂತು:
"ಕೇಳ್ದಿರ್ದೆ ನಿನ್ನಾ ಮಹಾತ್ಯಾಗಮಂ, ಮತ್ತೆ
ಧೈರ್ಯಮಂ. ಕಣ್ಣಾರೆ ಕಾಣ್ಬ ಸಯ್ಪನಗೊದಗಿತಯ್
ಇಂದು. ನೀಂ ಸತ್ಯವ್ರತನೆ ದಿಟಂ. ಇಲ್ಲದಿರೆ
ಸೋಲ್ದುದಿರುಳ್ದರಿಗೆ ತಪ್ಪೊಪ್ಪಿಕೊಳ್ಳುವರಿಹರೆ?
ನನ್ನೆರ್ದೆಯೊಳಾದ ಪರಿವರ್ತನೆಯನರಿಯದೆಯೆ
ಇಂತಾದುದಯ್. ತಪ್ಪು ನಿನತೊರ್ವನದೆ ಅಲ್ತು...
ನೀನೆಂದವೊಲೆ ವಿಧಿಯ ವಿನ್ಯಾಸಮೇಂ ಬೇರೆ
ಪಾಂಗಿಹುದೊ?. . . ನಿನಗೆ ಮೇಣ್ ಸುಗ್ರೀವರಿರ್ವರ್ಗೆ
ಕಯ್ಗೂಡುತಿರ್ದತ್ತು ಬಯಕೆಯೊರ್ಮೆಯೆ ನನ್ನ
ಕೆಳೆಯಿಂದೆ. . . ನೀವನಿಬರುಂ ಬಳಲಿ ಸಾಧಿಸುವ
ಕಜ್ಜಮಂ. ಲೀಲೆಯಿಂ ಸಾಧಿಸುತ್ತಿರ್ದೆನಾಂ. . .
ಆದರೇಂ ಬಿದಿಯ ಬಗೆ ಬೇರೆ! ಕಳೆದುದಕೇಕೆ
ಕೊರಗು?" ಎನುತೆನುತೆ ಉಬ್ಬಸವಾಯ್ತು ಮೇಲುಸಿರ್
ಕಪಿಕುಲೇಶಂಗೆ. ಸುಗ್ರೀವನಳತೊಡಗಿದನ್
ತನ್ನಣ್ಣನಡಿಗೆ ಹಣೆ ಚಾಚಿ. ವನ ನಿರ್ಝರದ
ನೀರಂ ಬೊಗಸೆತಂದು ನೀಲನೆರೆದನ್ ಬಾಯ್ಗೆ
ವಾಲಿಯಾ. ಬೀಸಿದನೆಲೆಯ ಗಾಳಿಯಂ ನಳಂ.
ಬೆಮರಿಳಿದ ಬಿಸಿಪಣೆಯ ತೊಯ್ದಂಟುಗೂದಲಂ
ಮೆಲ್ಲನೋಸರಿಸಿ ಸಂತೈಸಿದನ್ ಮರುಗೆರ್ದೆಯ
ರಾಘವೇಂದ್ರಂ. ಮತ್ತಮೊಯ್ಯನೆಯೆ ಶೂನ್ಯಮಂ
ನೋಳ್ಪಂತೆ ಕಣ್ದೆರೆದನಾ ಕೀಶವೀರಂ: "ತಾರೆ ಮೇಣ್
ಅಂಗದರಿಗೀ ವಾರ್ತೆ ಮುಟ್ಟಿದುದೆ? ಕಣ್ ಬೆಳಕು
ಕಿಡುವ ಮೊದಲಾ ನನ್ನ ಬಾಳ್‌ಬೆಳಕನೀಕ್ಷಿಸಲ್
ಬಯಕೆ!" ಬೆಸಗೊಂಡ ವಾಲಿಗೆ ಮಾರುತಾತ್ಮಜಂ:
"ಪೋದುವಾಗಳೆ ಸುದ್ದಿ." ಹನುಮನಕ್ಷಿಗೆ ತನ್ನ
ನೋಟಂ ಪೆಣೆಯೆ ನೋಡಿ "ನೀನಾಂಜನೇಯನಯ್?"
ಎಂದಿಂದ್ರಜನ ಕಣ್ಣ ಸಂದೇಹಮಂ ಕಂಡು:
"ಅಹುದು. ಬೆಸನೇನಿಹುದೊ ಪೇಳಿಮ್" ಎನೆ ವಾಲಿ "ಮಗು

ಅಂಗದನ. . . ಸುಗ್ರೀವನೆಲ್ಲಿ?'' ''ಇಲ್ಲಿಹೆನಾರ್ಯ.''
ಎಂದಳುತ್ತಳುತೆ ಕಣ್ಗೆದಿರಾದನಂ ತಮ್ಮನಂ
ನಿರ್ವೈರದೃಷ್ಟಿಯಿಂದಳ್ಕರೊಳ್ಳುವ ತೆರದಿ
ನೋಡಿ: ''ಮಾಣ್ ಅಳ್ಕೆಯಂ, ತಮ್ಮ. ವಾನರ ಕುಲದ
ಜಸದ ಹಬ್ಬುಗೆ ತಿರೆಯ ತಬ್ಬುವೋಲೀತಂಗೆ ನೀಂ
ನೆರವಾಗು, ನಮ್ಮತಿಥಿಯಾರ್ಯಂಗೆ. . . ಏನಿದುಲಿ?
ಸಗದಿಂಚರಮಿಳೆಗೆ ದುಮ್ಮಿಕ್ಕುತಿದೆ?'' ''ಅಯ್ಯೊ,
ಬಳಿಸಾರುತಿಹುದಣ್ಣ ಆ ರೋದಿಸುವ ಕಿಷ್ಕಿಂಧೆ!''
''ಏನೆಂದೆ? ಅಹುದಹುದು, ಬಳಿಸಾರುತಿದೆ ಸಂಧ್ಯೆ!
ಹಬ್ಬುತಿದೆ ಮಲೆಯ ಮೇಲೆನಿತು ಸುಂದರ ಸಂಧ್ಯೆ!
ಆಃ ನನ್ನ ಕಿಷ್ಕಿಂಧೆ!. . . ತಾಯ್ತಂದೆಯರ ನಾಡೆ!
ತಾಯ್‌ನುಡಿಯ ಮಲೆಗುಡಿಯ ಬೆಟ್ಟದಡವಿಯ ಬೀಡೆ!
ತಾಯ್‌ವಸಿರ್ ನೀನಾದೆ ಪುಟ್ಟುವಾಗಳ್. ಮತ್ತೆ
ನಲ್ದೊಟ್ಟಿಲಾದೆ, ಜೋಗುಳವಾದೆಯೆಳೆಯಂಗೆ.
ತಾರುಣ್ಯಕುಯ್ಯಾಲೆಯಾದೆ. ಜೌವನಕಾದೆ
ಪೆಣ್ಣೊಲ್ಮೆ. ಮುಪ್ಪಿಂಗೆ ಧರ್ಮದಾಶ್ರಯಮಾಗಿ,
ತೀರುವೆಡೆ ಶಾಂತಿಯಾಗರಮಾಗುತಿರ್ದಳಂ
ನಿನ್ನನಾಂ ತೊರೆಯುತಿಹೆನೌ, ಮನ್ನಿಸಾ, ತಾಯಿ!
ಸೊಬಗು ನೆಲಗಳ್ ನಿನ್ನ ಮಲೆತುರ್ಕಿ ತಲೆಯೆತ್ತಿ
ಮುಗಿಲಲೆವ ಸಾಲ್ಮಲೆಯ ಸಗ್ಗದೊಳಗೀ ವಾಲಿ
ಕಾಲಾಡನಿನ್. ಚೆಲ್ವುಚಿಪ್ಪೊಡೆಯೆ ಮುತ್ತುನೀರ್
ಬೆಳ್ಳಂಗೆಡೆಯುವಬ್ಬಿಯೊಳ್ ದುಮುಕಿ ಮೀಯದಯ್
ಈ ವಾಲಿ ಮೆಯ್ ಇನ್. ಈ ತೋಳ್ಗಳಾಟಕ್ಕೆ
ಪಣ್‌ಪೆತ್ತ ನಿನ್ನಡವಿ ಪೆರ್ಮರಗಳಿನ್ ಬಾಗಿ
ತೂಗವಯ್, ತೊನೆಯವಯ್, ಮುರಿಯವಯ್. ನಿನ್ನಗಲ
ಬಾಂದಳದ ಮೋಡಮಾಲೆಯ ಚಂದದಂದಮಮ್
ನೋಡದಿನ್ ವಾಲಿಯೀ ಕಣ್ಣಾಲಿ!. . . ಸುಗ್ರೀವ
ನಿನಗೀಜು ಕಲಿಪಂದು ನೀಂ ಪಂಪೆಯೊಳ್ ಮುಳುಗೆ,
ನಾಂ ಮುಳುಗಿ ಮೇಲೆತ್ತಿದಾ ಸೈಪಿನಾ ಸೊಗಂ
ನನಗೀಗಳರಿವಾಗುತಿದೆ! ಆಂಜನೇಯ, ಆ
ಮರಕೋತಿಯಾಟಮಂ ಚಿಣ್ಣಕೋಲಾಟಮಂ
ಮರೆತೆಯೇನ್? ಮರೆಯದಿರ್: ಬಾಳಂಚಿನೊಳ್ ನಿಂತು

ಪೇಳ್ವೆನೀ ನನ್ನಿಯಂ: ಆ ಜಳ್ಳೆ ಗಟ್ಟಿ; ನಾಮ್
ಗಟ್ಟಿಯೆಂದರಿತುದೆಲ್ಲಂ ಜಳ್ಳು, ಬರಿ ಜಳ್ಳು!...
ಸಾವ್‌ಗಾಳಿ ತೂರಲರಿವಪ್ಪುದಯ್!''
ಸುಯ್ದು ಕಣ್ಣಂ
ಮುಚ್ಚುತಿರೆ ವಾಲಿ, ಬಳಿಸಾರ್ದಳಾ ತಾರೆ
ಅಂಗದ ಕುಮಾರನೊಡಗೂಡಿ. ಆ ಗೋಳನೇಂ
ಬಣ್ಣಿಪಮ್? ಸಾವರಿತ ಲೋಕಕ್ಕೆ ಪೊಸತಹುದೆ ಪೇಳ್
ಪತಿಯಳಿದ ಸತಿರೋದನಂ? ತಂದೆಯಳಿದಿರ್ಪ
ಸುತನ ಶೋಕಂ? ಸ್ವಾಮಿಯಳಿದಿರ್ಪ ಪರಿಜನದ
ಹೃದಯ ವಿದ್ರಾವಕಂ? ಪ್ರಾಣಮಿತ್ರಂ ತೀರ್ದ
ಸ್ನೇಹದತಿದಾರುಣದ ಸಂಕಟಂ? ಜಸವೆತ್ತ
ಪಿರಿದಾದುದಾವುದಾಡೊಡಮಳಿಯೆ ದುಃಖಿಸುವ
ದೇಶ ಸಾಮಾನ್ಯ ಜನ ಮನ್ಯು? ಆ ಗೋಳನೇಂ
ಬಣ್ಣಿಪೆಮ್? ಬಣಗು ಬಣ್ಣನೆ ಬೇಕೆ, ತಿಳಿಯಲ್ಕೆ
ಸಾಮಾನ್ಯಮಂ? ರಸಮೊಳದೆ ಮಿಗಿಲ್, ಸಾಮಾನ್ಯಕಿಂ?
ಅಂಗದ ಕುಮಾರನಂ ರುಮೆಗೆ ಕಯ್ಯೆಡೆ ಮಾಡಿ;
ಕರುಣೆಯಂ ಬೇಡಿ, ಕನಿಕರಗೂಡಿ, ಮೈದುನನ
ಮೊಗನೋಡಿ; ಮುಂದೊಳ್ಮೆ ಬರ್ಪುದೆಂದೊಳ್ವರಕೆಯಂ
ವೇಳ್ದು, ಮೇಣಿಂದಾದುದಂ ಬಿದಿಯ ಹದನೆಂದು
ರಾಮನ ಮನಕೆ ಶಾಂತಿಯಪ್ಪಂತೆ ಸಂತಯ್ಸಿ,
ರಾಮನ ಮನದ ಮಹಿಮೆಯಂ ಕೊನೆದು ಕೊಂಡಾಡಿ;
ದೈತ್ಯನೊಯ್ದಾ ರಾಮದಯಿತೆಯಂ ನೆನೆದು, ಮರುಗಿ,
ಬೇಗಮಾಕೆಗೆ ನೆರಂ ಪೋಗವೇಳ್ಕೆಂದಲ್ಲಿ
ನೆರೆದೆಲ್ಲರಿಗೆ ನುಡಿದು; ಮತ್ತೆ ಮತ್ತಂಗದನ
ಮೈಯಪ್ಪುತಾತನಂ ರಾಮಸೇವೆಗೆ ಸಲಿಸಿ,
ತಂದೆಯ ಜಸಕ್ಕೆ ಕುಂದಾಗದೋಲೆಸಪಂತೆ
ಹರಕೆಯಂ ಬೆಸಸಿ; ಬೀಳ್ಕೊಳುತ್ತನಿಬರಂ, ಸತಿ,
ತಾರೆ, ಚಿತೆಯೇರಿದಳ್ ಪತಿಯಾತ್ಮಮಂ ಸೇರೆ,
ಸದ್ಗತಿಗೆ ಸೈಪು ಜತೆವೋಪವೋಲ್. ಬಾಳ್‌ಕಯ್ಪೆ
ನೋವು ಸಾವುಗಳುರಿಗೆ ಕರ್ಪುಗಿಡೆ, ನೆನಹುಬೆಳ್
ಪಿಂತುಳಿವವೋಲೆಸೆದುದಾ ದಂಪತಿ ಚಿತಾ ಭೂತಿ!

## ಸಂಚಿಕೆ ೭

# ಸಂಸ್ಕೃತಿ ಲಂಕಾ

ಇತ್ತ ಸುಗ್ರೀವಂಗೆ ಕಿಷ್ಕಿಂಧೆಯಂ ಕೊಟ್ಟು;
ವನವಾಸ ನೋಂಪಿಯಂ ಬಿಡದೆ, ಲಕ್ಷ್ಮಣನೊಡನೆ
ಬಳಿಯ ಪರ್ವತ ಮಾಲ್ಯವಂತನ ಗುಹಾಗೃಹದಿ
ಮಳೆಯ ಮುಗಿವಂ ಪಾರುತಿರ್ದನ್ ರಘೂದ್ವಹಂ;
ವಾಲಿಯ ಕೊಲೆಯ ಮೈಲಿಗೆಗೆ ತಪಂಬಡುವಂತೆವೋಲ್
ಧಗಿಸುತಿರಲಾತ್ಮಮಂ ಸೀತಾ ವಿರಹ ಚಿಂತೆ!
ಅತ್ತಲಾ ಪತ್ತುತಲೆ ಬಿರುದವೊತ್ತನ್, ಪೊತ್ತು
ಮುಚ್ಚೆವೋದಿಳೆಗುವರಿಯಂ, ಕಾಡುವೊಳೆ ಕಡಲ್
ಬಿತ್ತರವನುತ್ತರಿಸಿ, ಮಿಳ್ತುನೆಳಲಂತೆವೋಲ್
ಇಳಿದನ್ ತ್ರಿಕೂಟಗಿರಿ ಶೃಂಗ ಶೃಂಗಾರದಾ
ಕನಕ ಲಂಕಾ ಲಕ್ಷ್ಮಿಯಂಕಮೆನಲೆಸೆದಿರ್ದ
ಸಿರಿಯರಮನೆಗೆ ತನ್ನಾ. ನಿಧಿಯ ಬೈತಿಡುವಂತೆ
ತಸ್ಕರಂ, ಭಾಸ್ಕರಕುಲಪ್ರಾಣಹೃದಯೆಯಂ
ಮೈಥಿಲಿಯನಿಳುಹಿದನ್ ಗುಪ್ತಗೃಹಮಧ್ಯೆ. ಮೇಣ್
ಕರೆಕಳುಹಿದನ್ ಚಂದ್ರನಖಿಗೆ; ತಿಳುಹಿದನೆಲ್ಲಮಂ
ವಾರ್ತೆಯಂ. ದಶಶಿರ ಪ್ರಣಯ ಮಂತ್ರಣಕಾಕೆ
ಸಚಿವಳ್–ಅಣ್ಣನ ಬೇಟವೇಂಟೆಯಂ ಕಾಣುತಂ
ತನ್ನ ಬೇಟದ ಬೇಂಟೆಯುಂ ಸಫಲಮಹುದೆಂದು
ಹಿಗ್ಗಿದಳ್. ಮಿಂಚುತಿರೆ ನೂರು ಭಾವಗಳೊರ್ಮೆಯಾ
ಪ್ರಣಯ ತೃಷಿತೆಯ ಮನದ ಮೂಷೆಯೊಳ್, ಹೆಬ್ಬಯಕೆ
ಬಯಲಾಗದಂತೆ ಹುದುಗಿಸಿ ಹೃದಯ ಕಾಂಕ್ಷೆಯಂ
ರಾಕ್ಷಸೇಂದ್ರಂಗೊರೆದಳಿಂತು: ''ನಿನ್ನೊಲ್ಮೆಯಂ

ಕದ್ದು ತಂದಾಯ್ತಿನ್ನ ದಂ ಗೆದ್ದು ನಿನಗೀವ
ಜಾಣ್ಮೆ, ಹೇ ದೈತ್ಯೇಂದ್ರ, ನನಗಿರಲಿ. ಪೆಣ್ಣ ಬಗೆ
ಪೆಣ್ಗಲ್ಲದರಿವಹುದೆ?'' ಇಂತೆನುತಲ್ಲಿ, ಕುಯ್ದೆಸೆದ
ಮಲರಂತೆವೋಲ್, ಗರಿಯ ಪಾಸಿನೊಳ್ ಮೈಮರೆತು
ಬಿಳ್ದಿರ್ದವನಿಜಾತೆಯಂ ನೋಡಿ ಚಂದ್ರನಖಿ
ಮತ್ತೆ ಕಿರುನಗೆವೆರಸಿ ರಾವಣಗೆ: ''ಇನ್ನೆಗಂ
ನೀಂ ಗೆಲಿದ, ನಿನ್ನನೊಲಿದತ್ತಿಗೆಯರಂತಲ್ಲಮೀ
ಪೆಣ್ ಕಣಾ! ನಿನ್ನ ಛಲಕಿವಳ ಛಲ ಪಡಿಮಲೆಯೆ
ಗೆಲ್ವರಾರದನರಿಯೆನಯ್! ಮೂರ್ಛೆಯೊಳುಮೆಂತು
ದೃಢತೆ ಪಲ್ಗಚ್ಚಿದಂತಿದೆ, ನೋಡು, ಕೋಮಲೆಯ
ಮುಖದಿ!'' ಬಗೆಯಳುಕನಿನಿತಂ ತೋರಲೀಯದೆಯೆ
ದಶಮುಖಂ: ''ನೀಂ ಪೇಳ್ವುದೇನ್, ತಂಗೆ? ಗಂಡಹೆನ್
ನಾನಾದೊಡಂ ಪೆಣ್ಗಳೆರ್ದೆಯಾಳಮಂ ಮುಳುಗಿ
ನೆಲೆಯರಿತನೆನ್. ಲಂಕೆಯೊಡೆಯಂಗೆ ಸೋಲದಾ
ಪೆಣ್ಣಿಲ್ಲಮಿನ್ನೆಗಂ ಈ ಕಮಲಭವ ಸೃಷ್ಟಿಯೊಳ್!. . .
ಏನಾನುಮಕ್ಕಾ ಮತಮದಿರ್ಕೆ. . .ನನ್ನಿಚ್ಛೆ
ಕಯ್ಗೂಡುವಂತೆಲ್ಲ ತೆರದೊಳುಂ ನೀಂ ಗೆಯ್ಯೆ, ಕೇಳ್,
ನಿನ್ನಾಸೆಯುಂ ಬಯಲಪ್ಪುದಲ್ತು; ತಿಳಿ, ತಂಗೆ!''
    ತಂಗಿಗೊಪ್ಪಿಸಿ ರಾಮನರ್ಧಾಂಗಿಯಂ ನಡೆದನ್
ಅತ್ತಲಸುರಂ. ಇತ್ತಲೇನೆಂಬೆನಾ ಚಂದ್ರನಖಿ,
ರಾಕ್ಷಸ ಪ್ರಣಯ ವಿದ್ಯಾ ಸಾರ ಸರ್ವಸ್ವೆ, ತಾಂ
ದಶರಥನ ಸೊಸೆಯನಿರಿಸಿದಳಂಚೆ ತಿಪ್ಪುಳಿಂ
ಸಮೆದ ನಲ್ಪಾಸಿನೊಳ್. ಬಳಿಯಟ್ಟಿ ಕರೆಸಿದಳ್
ಲಂಕಾ ಲತಾಂಗಿಯರ ಲಾವಣ್ಯಮಣಿಗಳಂ,
ದೈತ್ಯ ಸಂಸ್ಕೃತಿ ನಯ ಕಲಾ ಖನಿಗಳಂ, ರಮ್ಯ
ಮಧುರ ನಾನಾ ನಾದ ಚತುರ ವೀಣಾ ಶ್ರುತಿಯ
ಸುಂದರಿಯರಂ. ರೂಪ ಗಾನ ಗಂಧಂಗಳಿಂ
ಬೆಸಸಿದಳು ರಚಿಸೆ ರಸಲೋಕಮಂ. ಪೇಳ್ವುದೇಂ?
ಸರ್ವೇಂದ್ರಿಯಂಗಳೊಂದಿಂದ್ರನಂದನಮಲರಿ
ಜಾನಕಿಯ ಸುತ್ತಲುಂ ಮೋಹಿನಿಯ ಛಂದದಿಂ
ನಾಟ್ಯವಾಡಿದುದಲ್ಲಿ, ಭೋಗನಾಗನ ಭೋಗ

ವಿನ್ಯಾಸದಿಂ!
ಪ್ರತಿಫಲಿಸದೇನಿಹುದೆ ಪೇಳ್ ರಸಂ?
ದುಃಖ ಮೂರ್ಛೆಗೆ ಸಂದ ಸೀತೆ ನಿದ್ರೆಯೊಳೊಂದು
ಕನಸು ಕಂಡಳೊ ಸುಖದ ಸಂಭ್ರಮದಾಃ ಕೋಸಲಕೆ
ಮರಳಿಹರ್ ವನವಾಸಮಂ ಮುಗಿಸಿ. ಅಯೋಧ್ಯೆಯ
ಜನಂ ತೇಂಕಾಡುತಿದೆ ಸಂತೋಷ ಸಾಗರದ
ತೆರೆಗಳೆನೆ ಕುಣಿದುಕ್ಕಿ ನೋಡಿ, ಜಯಗಾಥಮಂ
ಪಾಡಿ. ತುಂಬಿದೆ ಬನಂ ಪೂಗಳಿಂ, ಮೊರೆದುಲಿವ
ತುಂಬಿಯಿಂ, ಪಕ್ಕಿಯಿಂ; ಪರಿಮಳದ ಧೂಮದಿಂ
ತುಂಬಿದೆ ಅನಿಲಮಂಡಳಂ; ತೊಯ್ದುದಾನಂದ
ವರ್ಷದಿಂ ಕೈಕೆ ಊರ್ಮಿಳೆ ಭರತ ಕೌಸಲ್ಯೆ
ಮೊದಲಪ್ಪ ಬಂಧು ಮುಖಮಂಡಳಂ. ಏಂ ಗಾನಮ್
ಏಂ ಗಂಧಮೇಂ ರೂಪಮಾನಂದಮಯ್ಯಯ್ಯೊ
ರಾಮನೆಲ್ಲಿಹನೆಲ್ಲಿ? ಬೆಬ್ಬಳಿಸುತಾ ಸೀತೆ
ಸುತ್ತ ನೋಡಿದಳೆತ್ತಲುಂ ರಾಮನಿಲ್ಲದಿರೆ,
"ಕಾಡೊಳುಳಿದೈತಂದೆವಾತನಂ, ಸೌಮಿತ್ರಿ,
ಕೇಡಾಯಿತಯ್ಯಯ್ಯೊ!" ಎಂದೇಳಲೆಳಸಿಯುಂ
ಏಳಲಾರದೆ ಬಿಳ್ದಳಯ್ಯಯ್ಯೊ ತೆಕ್ಕನೆಯೆ
ಕಣ್ದೆರೆದಳೆದ್ದಳ್ ಸುಖದ ನಿದ್ರೆಯಿಂ! ಕನಸೆ ತಾಂ
ನನಸಾದವೋಲ್ ಕಂಡುದವನಿಜಾತೆಯ ಕಣ್ಗೆ
ರಾವಣನ ತಂಗೆಯೊಡ್ಡಿದ ಕಲೆಯ ಬಲೆಗಾಣ್ಕೆ!
ನೋಟದಚ್ಚರಿಯಿಂದೆ ನಿಟ್ಟಿಸಿದಳಾ ಮನೋ-
ಹರಿಯರಂ, ಗಾನ ವಿದ್ಯಾಧರಿಯರಂ. ದಿಟ್ಟಿ
ಮೆಲ್ಲಮೆಲ್ಲನೆ ಚರಿಸಿತೊರ್ವರಿಂದೊರ್ವರ್ಗೆ.
ಕದಡುಬಗೆ ತಿಳಿಯಾಗುತರಿವು ಮರಳಿತೊ ಏನೊ?
ಸುಳಿದತ್ತು ಮೊಗದೊಳಾಶಂಕೆ. ಮೇಣಲೆವ ಕಣ್
ಕಂಡುದೆ ತಡಂ ಚಂದ್ರನಖಿಯಂ, ಶಿಲಾಮಯಂ
ತಾನಾದವೋಲ್, ನಿಂದುದಚಲಂಃ ದಶಗ್ರೀವ
ಸೋದರಿಯಿವಳ್ ಚಂದ್ರನಖಿಯಲ್ತೆ? ಗುರುತನರಿಯಲ್
ನಡೆದುದೆಲ್ಲಂ ಮರಳಿ ನೆನಪಾಗಿ, ಭೋಂಕನೆಯೆ
ಚೀತ್ಕರಿಸಿ ದೊಪ್ಪನೆ ಕೆಡೆದಳವನಿಯಂಕಕ್ಕೆ

ದಶರಥಸುತನ ದಯಿತೆ. ವೀಣೆಗಳನುಳಿದೊಡನೆ
ಬಂದೆತ್ತಿದರು ರಾಘವಪ್ರಾಣೆಯಂ, ಜೀವ
ವೀಣೆಯಂ, ಲಂಕಾ ಲತಾಂಗಿಯರ್. ಚಂದ್ರನಖಿ
ಚಂದ್ರಮುಖಿಯರ ಕೂಡೆ ಬಿಜ್ಜಣಿಕೆಯಿಕ್ಕಿದಳ್,
ಕಂಪುನೀರೆರಚಿದಳ್, ಮೆಯ್ಯೆಳವಿ ಮುಂಡಾಡಿ
ಸಂತವಿಟ್ಟಳ್ ತಂಪುನುಡಿ ನಣ್ಪಿನಿಂಪಿಂದೆ:
“ಎರ್ದೆಗಿಡದಿರಾರ್ಯೆ; ಸಂಸ್ಕೃತಿಯ ಮಡಿಲೊಳಗಿರ್ಪೆ;
ಸರ್ವ ಪರಿಯಿಂ ಸುರಕ್ಷಿತಳೆ ನೀಂ. ಮನ್ನಿಸೌ
ಅಣ್ಣನ ಅಚಾತುರ್ಯಮಂ. ರಾಜಕೀಯಮಂ
ಸಾಧಿಸುವ ಸಾಸಕೆಸಗಿದನಿಂತು ಬಗೆದಪ್ಪಿ
ನಿನ್ನೊಳಪರಾಧಮಂ. ಮಾನಿನಿಯ ಮಾನಕ್ಕೆ
ಕುಂದಿನಿತುಮಾಗದೊಲಾನೆ ಹೊಣೆ, ಸನ್ಮಾನ್ಯೆ.
ತಿರ್ದ್ದಿದಪೆನೆಂತಾದೊಡಂ ಅಣ್ಣನೀ ಗೈದುದಂ
ಅವಿವೇಕಮಂ. ತಾಳ್ಮೆಯಿಂದೆನ್ನ ಪೇಳ್ವಂತೆ
ನೀನೆಸಗವೇಳ್ಕುಮೆಂದಿದೊ ಬೇಡಿದಪ್ಪೆನಾಂ,
ಹೇ ರಾಜರಾಜೇಶ್ವರಿ!”
ಆ ಧ್ವನಿಗೆ, ಆ ನುಡಿಗೆ,
ಆ ನಯಕೆ, ಆ ನೀತಿಗಾ ಅಳ್ಕರೆಗೆ ಸೀತೆ
ಬೆರಗಾದಳೆಲ್ಲಿ ತಾಂ ಕೇಳ್ದ ರಾಕ್ಷಸ ರೀತಿ;
ಮೇಣೆಲ್ಲಿ ಈ ನಯ ನುಡಿಯ ನೀತಿ! ತಾಂ ಕೇಳ್ದ
ರಾಕ್ಷಸ ಸ್ತ್ರೀ ಭೀಕರಾಕೃತಿಗಳೆಲ್ಲಿ; ಮೇಣ್
ಈ ಕಾಣ್ಬ ಕಮನೀಯ ಸುಂದರ ಕೃತಿಗಳೆಲ್ಲಿ?
ಹೃದಯ ಸಂಭವ ಧೈರ್ಯಮಾಡಿದತ್ತೆಂಬಿನಂ
ಕ್ಷಿತಿಸುತೆ: “ವಿನಯಶೀಲೆ, ಲಂಕಾ ಲಲಿತ ಬಾಲೆ,
ನೀನಿಂಗಿತಜ್ಞೆಯಪ್ಪೊಡೆ ತೊಲಗಿಸೀ ಬಳಸಿ
ಸುತ್ತಣಿರ್ಪೀ ಭೋಗಸರ್ವ ಸುವಿಲಾಸಮಂ.
ಪತಿದೂರರಪ್ಪಾರ್ಯವನಿತೆಯರಿಗೀ ಪರಿಯ
ಹೇಯಮೌ ಸುಖಜೀವನಂ. ಬನದ ಬಾಳ್ತೆಯಂ
ನೋಂಪಿಗೊಂಡೆನ್ ಪತಿಯ ಕೂಡೆ. ನನಗದರಿಂದೆ
ನೋಂಪಿ ಮುಗಿವನ್ನೆಗಂ ಕಾಡೆ ಮನೆ, ವಲ್ಕಮುಡೆ,
ಬೇರು ಬಿಳ್ಕೆಗಳೋಗರಂ.” ತೊರೆಯೊಳಳ್ದವಂ

ಮೊಸಳೆಯಾದೊಡಮದನೆ ಬೆಂಡೆಂದೆಳಸಿ ಪಿಡಿದು
ಬರ್ದುಕಲಾಟಿಸುವವೋಲಾಡುತಿರೆ ರಾಮಸತಿ,
ನುಡಿದಳಿಂತಸುರನ ಸಹೋದರಿ: "ಪ್ರಭುವಾಜ್ಞೆಯಂ
ಮೀರಲಾರೆನ್, ಮಹಿಳೆ. ಚಕ್ರವರ್ತಿ ತನೂಜೆ ನೀಂ,
ನಿನಗುಚಿತಮಪ್ಪಂತೆವೋಲ್ ಸತ್ಕರಿಸಲೆಂದೆಮಗೆ
ಕಟ್ಟಾಣೆ. ನಿನ್ನಾಸೆಗಿನಿತು ಕೊರೆಯಾಗದೊಲ್
ನಿನ್ನಿಷ್ಟಮಂ ಸಲಿಸವೇಳ್ಕುಮೆಂದೆಮಗಾಜ್ಞೆ.
ನೀನರಿಯೆ ರಾವಣನ ಹೃದಯದೌದಾರ್ಯಮಂ.
ನಿನ್ನೊಳಾತಂಗೆ ಬಹುಗೌರವಂ. ನಿನಗೋಸುಗಂ
ತನ್ನ ಸರ್ವಸ್ವಮಂ ಯಜ್ಞಗೈಯಲ್ಕವಂ
ಸಿದ್ಧನೆ ದಿಟಂ!" "ಸಾಕು, ಬಿಡು, ರಾಕ್ಷಸ ಸುಶೀಲೆ;
ನನ್ನಿಷ್ಟಮಂ ನಡೆ; ಕೃತಜ್ಞೆಯೆಂ."
                                                  ಮೇಲೊಂದುಮುಂ
ನುಡಿದೋರದೆಯೆ ಸೀತೆಯಾದಳ್ ಶಿಲಾಮೌನಿ.
ಚಂದ್ರನಖಿಯೆಂದುದಕೆ ಕಿವಿಗೊಟ್ಟಳಿಲ್ಲಂತೆ ಮೇಣ್
ಬಳಸಿರ್ದ ಭೋಗಕ್ಕೆ ಕಣ್ಗೊಟ್ಟಳಿಲ್ಲಾಕೆ;
ಕಿವುಡಾಗಿ, ಕುರುಡಾಗಿ, ಮರವಟ್ಟವೋಲಾಗಿ,
ಹೊರಗಂ ಮರೆತು, ಮರುಗಿ ನೆನೆದಳೆರ್ದೆಯನ್ನನಂ
ಮೇಣವಂಗೊದಗಿದತಿ ಸಂಕಟದ ಬನ್ನಮಂ.
    ಹಗಲು ಬಯ್ಗುಗಳರಿವನರಿಯಲಾರದ ಗುಪ್ತ
ಗೃಹದಿ, ಭೂಮಿಯೆ ಶಯ್ಯೆಯಾಗಿ, ಭೂಸುತೆ ತನ್ನ
ಜೀವಿತೇಶ್ವರನ ನೆನೆದನಶನ ವ್ರತೆಯಾಗಿ
ಕಳೆದಳೇಳ್ವಗಲ್ಗಳಂ. ಮೀಯಲಿಲ್ಲುಡಲಿಲ್ಲ:
ಪಂಚವಟಿಯಿಂದಂದಯೋಧ್ಯೆಗೆ ಮರಳಲೆಂದು
ಗೆಲುವಿನಿಂದುಟ್ಟುಕೊಂಡಿರ್ದ ನಾರುಡೆಯದಂ,
ದನುಜೇಂದ್ರನಿಂ ಬಿಡಿಸೆ ಮನುಜೇಂದ್ರಚಂದ್ರಮಂ
ಬರ್ಪಿನಂ, ತನ್ನ ರಕ್ಷೆಗೆ ಕೋಂಟೆಯಕ್ಕೆಂದು
ಬೇರೆಯುಡಲಿಲ್ಲ—ಮೇಣ್, ಪ್ರಿಯನ ಸಾನ್ನಿಧ್ಯಮಂ
ಪಡೆವನ್ನೆಗಂ ಪ್ರಿಯೆಗೆ ಮೈಲಿಗೆಯೆ ಮಡಿಯೆಂದು
ಮಿಂದುಳಿಲ್ಲ—ಮೇಣ್, ಬಾಚದಾ ಮುಡಿಗೆ ಜಟೆಯೇರ್ದು
ಮುಕ್ತಿಯಂ ಪಾರುವ ಮುಮುಕ್ಷುವೋಲಿರ್ದಳಾ

ಆರ್ಯೆ, ಸೀತಾದೇವಿ, ದಿನಕರ ಕುಲನ ಹೃದಯ
ಭಾರ್ಯೆ.
ದೈತ್ಯೇಂದ್ರನೀ ವಾರ್ತೆಯಂ ಕೇಳುತ್ತೆ
ಕುದಿದನೆದೆಯಲಿ. ನವ್ಯರತ್ನ ಕಾಂಚನ ಖಚಿತ
ವಸನ ವೈಭವದಿಂದೆ ಬಗೆಯ ತಳ್ಳಂಕಮಂ
ಮರಸಿ ಬಂದನು ಸೀತೆಯಿರ್ದೆಡೆಗೆ. ಕಂಡೊಡನೆ,
ಮುಖಕೆ ಖಿನ್ನತೆ ಮೂಡಿ, ಸುಯ್ಯು ಕಿನಿಸಿಂ ತನ್ನ
ತಂಗೆಯಂ ನೋಡಿ, ತಿರುಗಿದನ್ ಜನಕಜೆಯೆಡೆಗೆ
ಮತ್ತೆ: "ಸಲ್ಲದು, ದೇವಿ, ಶಠವರ್ತನಂ ನಿನ್ನಾರ್ಯ
ಸಂಸ್ಕೃತಿಗೆ; ಮೇಣಾತ್ಮಹತ್ಯೆ ತಾನೀ ನಿರಶನಂ.
ಸಲ್ಲಿಸಲ್ಕಾಗದಿರಲಾಶೆಯಂ ಕೊಲ್ಲುವರೆ? ಪೇಳ್,
ಕೊಂದ ಮಾತ್ರದೊಳಾಶೆ ಸಂದಂತೆ ತಿಳಿಯುವರೆ?
ನಿನ್ನಿಷ್ಟಮಂ ನಡೆಯಿಮೆಂದಾಣತಿಯನೊರೆದು
ಪೋದೆನಾಂ. ಮೀರ್ದರಾಣತಿಯನೀ ಮಂದಮತಿಗಳ್
ಮಂದಿ. ಮನ್ನಿಸಿ ತಪ್ಪನಾಹಾರಮಂ ನಿನಗೆ
ತಕ್ಕುದಂ ಕೊಂಡು, ನಿನಗೊಪ್ಪುವಾವಾಸಮಂ
ಪೊಕ್ಕು, ನೋಂಪಿಗೆ ಮಾಡು ಯೋಗ್ಯಮಂ. ಕೇಳ್, ಲಂಕೆಯಂ
ಸುತ್ತಿದೆ ಮಹಾಶರಧಿ; ದುರ್ಲಂಘ್ಯಮಾರ್ಗೆಯುಂ.
ತೀರದೊಳಶೋಕವನಮಿರ್ಪುದೊಂದೆತ್ತರದ
ಮಲೆಯ ಕೋಡಿನಲಿ. ನೀಮಿರ್ದಾಶ್ರಮಕ್ಕೆರಡು
ಮಡಿ ಚೆಲ್ವಿಸೆವುದಲ್ಲಿ: ಬನ ಚೆಲ್ವು, ಬಾನ್ ಚೆಲ್ವು,
ನಿಚ್ಚಮುಂ ಮೊರೆವ ಬಿತ್ತರ ಕಡಲ ಕಡುನೀಲಿಯಾ
ಚೆಲ್ವು! ಸಮೆದಪುದಲ್ಲಿ ತೃಣಗೃಹಂ. ನಿನ್ನಾಸೆ; ಮೇಣ್
ನನ್ನಾಜ್ಞೆ..."
ನಾನಾ ತುಮುಲ ಭಾವ ಘರ್ಷಣೆಗೆ
ರಣನಾದ ರಾವಣಂ, ತಂಗೆಗೆ ರಹಸ್ಯಮಂ
ಬೆಸಸಿ, ಪೋದನಲ್ಲಿಂ ಪೂಜ್ಯೆ ಮಯನಂದನೆಯ
ಮಂದಿರಕೆ. ಸಾಗಿಸಿದರವನಿಜೆಯನಾ ಕ್ಷಣಂ
ಕಡಲ ದಡದೆತ್ತರದಶೋಕವನದೆಲೆವನೆಗೆ.
ಸಾಗರದ ನೀರ್ನೀಲಿಯಾಗಸದ ಸುರನೀಲಿ,
ದೂರ ವಿಸ್ತೀರ್ಣದಾ ಹರಿದಂತವಿಶ್ರಾಂತ

ಹರಿತ ಕಾನನ ಪರ್ಣದರ್ಣವ ಮೃದುಲ ನೀಲಿ
ಕಣ್ಣಾಲಿಗಿನಿಯನೊಡಲಿನ ವರ್ಣವನೆ ಹೋಲಿ
ಶೋಭಿಸಿರೆ, ಸುಳಿದುದಚ್ಚರಿಯೆನಲ್ಕಾತ್ಮಕ್ಕೆ
ಶಾಂತಿ ಮೈಥಿಲಿಗೆ. ಬನವಕ್ಕಿಯಿಂಚರದೊಡನೆ,
ಸುಳಿವ ತಂಬೆಲರೊಡನೆ, ಹೊಸ ಹಸುರನುಕ್ಕಿಸುತೆ
ಹೊಮ್ಮಿದ ಗರುಕೆಯೊಡನೆ ಮೂಡಿದುದು ಹೊಸನೆಚ್ಚು
ಕೌಸಲೆಯ ಸೊಸೆಗೆ. ಪರದೇಶದೊಳ್ ಪರಿಚಿತರ್
ಕಾಣಲೊಡಮಳಿದಾಸೆ ತಾನುಸಿರೆಳೆದು ಮರುವುಟ್ಟು
ಪಡೆಯದೇನಾರ್ಗಾದೊಡಂ? ಮಿಂದಳಿಲ್ಲಾಕೆ;
ಮೇಣುಟ್ಟುದಂ ಬಿಟ್ಟು ಮಾರುಟ್ಟಳಿಲ್ಲಾಕೆ;
ಕೊಟ್ಟ ಪಣ್ಬೇರ್ಗಳಂ ವಿಶ್ವದೇವರ್ಕಳಿಗೆ
ನೈವೇದ್ಯಮಂ ಮಾಡುತುಂಡಳ್ ಪ್ರಸಾದಮಂ,
ಪ್ರಾಣೇಶನಾಗಮನದಾಶೆಯಿಂದನ್ನೆಗಂ
ಪ್ರಾಣ ಸಂಧಾರಣಾರ್ಥಂ. ಮತ್ತಮನವರತಮಾ
ರಾಮನಾಗಮನಕ್ಕೆ ರಾವಣೋದ್ಧಾರಕ್ಕೆ
ಮೇಣಾತ್ಮಮಂಗಳಕೆ ಆ ದೇವಿ, ವೈರಮಂ
ಹಿಂಸೆಯಂ ತೊರೆಯಲೆಳಸುವ ತಪದ ಸಾಧನೆಗೆ
ಪ್ರಾರ್ಥನಾ ನಿರತಳಾದಳ್ ಶಿವದ ಸಫಲತೆಗೆ:
ಪ್ರಾರ್ಥನಾ ತೀವ್ರತೆಯ ಸಾತ್ವಿಕ ತಪಶ್ಶಕ್ತಿ, ಪೇಳ್,
ತಾಂ ಸ್ವಯಂಕ್ರಿಯೆಯಾಗಿ ಚೋದಿಸದೆ ಸೃಷ್ಟಿಯಂ?
ಸೇತುಗಟ್ಟದೆ ಕಷ್ಟದಂಬುಧಿಗೆ?—ಮೇಣಂತೆ ತಾಂ
ತಿರ್ದದೇನುಳಿಯುವುದೆ ಪೇಳಿಂದಲ್ಲದಿರೆ ನಾಳೆ
ಪಾಪ ಬುದ್ಧಿಯ ಜೀವಿತದ ವಕ್ರರೇಖೆಯಂ
ಪುಣ್ಯ ಋಜು ಪಥಕೆ?
ಸುಯ್ಗಾಳಿಯಾಗಿ ಕಿವಿಯಿಂ
ಕಿವಿಗೆ ಸುಳಿದುದು ಸುದ್ದಿಬೆಂತರಂ. ತರತರದ
ಭಾವನೋಚ್ಛ್ವಾಸದಿಂ ಲಂಕಾ ಜನದ ಮನದ
ವಾರ್ಧಿಯಂ ಸಂಮಥಿಸುತೈಂದುದಾ ಬೂತು
ಮಯನಂದನೆಯ ದೇವಮಂದಿರಕೆ. ಕಂಡೊಡನೆ
ಆ ಭೀಕರಾಕಾರಮಂ ಇಂದ್ರಜಿನ್ ಮಾತೆ ತಾಂ
ಹಮ್ಮೈಸಿದಳ್, ದೇವ ಪೂಜಾ ವ್ರತಂ ತನಗೆ

ಪೊಳ್ಳಾದುದಾ ಎನುತೆ. "ಬೆಚ್ಚದಿರಂಬೆ, ನನ್ನ ಈ
ವಿಕೃತಾಂಗಮಂ ನೋಡಿ. ಹಿತಮೆನಿತೊ ಸೂಳ್ ಇಂತೆ
ನನ್ನವೊಲ್ ಬರ್ಪುದಪ್ರಿಯತೆಯಾಕೃತಿವೆತ್ತು.
ಈಶಕೃಪೆಗಿಹುದು ನಾನಾ ಮುಖಂ. ಸುಖದಂತೆ
ದುಃಖಮುಂ ಋತಚಿತ್ ಕೃಪಾ ನೃಕೇಸರಿ ನಖಂ.
ನಿನ್ನ ಪತಿಯಭ್ಯುದಯಕೇಣಿಯೊಡ್ಡಿದೆ ಬಿದಿಯ
ಕರುಣೆ. ಸೀತಾಹರಣಮದೆ ಮೊದಲ ಸೋಪಾನಂ.
ಶ್ರೀ ರಾಮನರ್ಧಾಂಗಿಯೊಡನೆ ನೀನೆರ್ದೆಗೂಡಿ
ಬೇಡಿದೊಡೆ ಕೈಸಾರ್ಪುದೌ ರಾವಣೋದ್ಧಾರ
ಸತ್ಫಲಂ!" ಇಂತೊರೆದು ಮಾಯವಾಯ್ತಾ ಬೂತು,
ಮಂಡೋದರಿಯ ಮನವನಾಕ್ರಮಿಸಿದತಿಚಿಂತೆಯೋಲ್.
ಸೀತೆಯಂ ಕಾಣ್ಬೊಂದು ಕಾತರತೆಯಿಂ ಕಾಂತೆ
ಪೂಜೆಯಿಂದೇಳುತಿರೆ, ಪೊಕ್ಕುದಾಣ್ಮನ ಮೂರ್ತಿ
ಶಿವನ ಮಂದಿರಕೆ. ಹೊಸ್ತಿಲ ದಾಂಟಿ ನಿಂದೊಮ್ಮೆ
ಕಣ್ಣಟ್ಟಿ ನೋಡುತಾ ಪೂಗಳಿಂ ಪಣ್ಗಳಿಂ
ಪರಿಮಳದ್ರವ್ಯಂಗಳಿಂ ಭವ್ಯದಿಂ, ಮೌನದಿಂ
ಸಂಗ್ರಹಿಸಿದನು ಶಾಂತಿಯಂ. ಇರ್ವರುಸಿರೆಳೆವ
ಸದ್ದನಾಲಿಸಿದರಾ ಇರ್ವರುಂ. ಒಯ್ಯೊಯ್ಯನೆಯೆ
ಬಾಗಿದುದು ದೈತ್ಯೇಂದ್ರಮಸ್ತಕಂ. ಕಯ್ಮುಗಿದನಯ್,
ನಮಿಸಿದನ್ ಮನ್ಮಥಾರಿಗೆ ಮನ್ಮಥನ ಬಂಧಿ!
ಮುಂಬರಿದನುದ್ವೇಗಮಂ ತಡೆಯಲಾರದೆಯೆ
ಕುಗ್ಗಿ ಕುಸಿದಂತಿರ್ದ ದೀನದುಃಖದ ಸತಿಯ
ಹೊರೆಗೆ. ತಲೆಯೆತ್ತಲಿಲ್ಲಾಕೆ. ತೊಯ್ದುದು ನೆಲಂ
ತೊಟ್ಟಿಟ್ಟ ಕಣ್ಬನಿಗೆ. ಕಂಡದಂ ರಾವಣಂ
ಸುಯ್ದು ಹನಿಗಣ್ಣಾಗಿ: "ದೇವಿ, ನಿನ್ನರಕೆಯೇಂ?
ಬೆಂದಪಳಿಳಾರಮಣಿ ನಿನ್ನ ಬಿಸುಗಣ್ಬನಿಯ
ಸೋಂಕಿಂಗೆ." ಓಲೆಭಾಗ್ಯಮೆ ಕಂಪಿಸುವವೋಲೆ
ಥರಥರನೆ ನಡುಗುತಿರೆ ರಾಗ ಭಾವೋದ್ವಿಗ್ನೆ
ಮಂಡೋದರಿಯ ವಜ್ರದೋಲೆ: "ಸತಿಗರಕೆಯೇಂ,
ಜೀವೇಶ? ಪತಿಹೃದಯಮಂ ಪಡೆವುದಲ್ಲದೆಯೆ
ಬೇರಾವುದರಕೆ?"

"ಲೇಸಲ್ತೆ; ಸೋಜಿಗದರಕೆ!"
"ತನ್ನೊಡಲಿಚಳ ಕಣ್ಣ ಪನಿಗಿಡಿಗೆ ಬೆಂದ ತಾಯ್
ಮರವಟ್ಟಿಹಳ್; ನನ್ನ ಕಂಬನಿ ಬಿಸುಪನೆಂತವಳ್
ತಿಳಿವಳಿನ್?..."
"ನಿನ್ನವನೆ ನಾನೇಗಳುಂ."
"ಅಯ್ಯೊ
ಆ ಪುಣ್ಯಮೆಂದಿಂಗೊ!"
"ಮತ್ತೆಮತ್ತದೆ ಕೊರತೆ!
ಗ್ರಹದ ನಿಷ್ಠೆಯನೇಕೆ ನಿಷ್ಠೆಮಾಡುವೆ ರವಿಗೆ,
ರಾಜ್ಞಿ? ರಾವಣನೊಲ್ಮೆ ಸಂಪೂರ್ಣಮೇಗಳುಂ;
ಪಚ್ಚುಗೊಂಡುದರಿಂದಮೇಂ ಅದಕಿನಿತಪೂರ್ಣತೆಯ
ಕೊರೆಯಿಲ್ಲ; ಕರೆ ಸಲ್ಲ."
ತಲೆಯೆತ್ತಿದಳ್ ರಾಣಿ
ಹೆಡೆಯೆತ್ತುವಂತೆ ಫಣಿ; ಕಣ್ಗೆ ಕಣ್ ಬೆಸೆದಿರಿದು
ನೋಡಿ: "ಉಸಿರುಸಿರಿನಲಿ ಬೆಸೆದು ಒಲಿದೆದೆಗಳಂ
ಕಿಳ್ತೆಳೆದು ತಂದು ಯುಕ್ತಿಯನಿಂತು ಗಳಪುವರೆ,
ನಿಶಿತಮತಿ? ಹದಿಬದೆಯ ಹೃದಯದುರಿ ಲಂಕೆಯಂ
ದಹಿಸದೆ? ಕುಲಕ್ಷಯಕೆ ಕೂಣೆಯೊಡ್ಡಿದೆ ಮಿಳ್ತು!. . . "
"ಮತ್ತೆಮತ್ತದೆ ಮಾತು! ಹದಿಬದೆಯ ಹೃದಯದುರಿ?
ಪುಸಿಮನೆಗೆ ಪುಸಿಗೋಡೆ!..."
"ಪ್ರಾಣೇಶ, ದೈತ್ಯೇಂದ್ರ,
ಮತ್ತೊರ್ವನಿದ್ದಿದ್ದರೀ ತೆರನ ರಾವಣಂ
ತೋರುತಿರ್ದಳ್ ನಿನಗೆ ಹದಿಬದೆಯರಿರ್ಪುದಂ,
ಹದಿಬದೆತನದ ಹಿರಿಮೆಯಂ, ನಿನ್ನ ಈ ಮಯನ
ಮಗಳಬಲೆ!"
ಆ ದಿಟ್ಟ ನೋಟಕ್ಕೆ, ಆ ದನಿಯ
ದಾರ್ಢ್ಯಕ್ಕೆ, ಆ ಧರ್ಮ ಧೈರ್ಯಕ್ಕೆ ದನುಜನೆದೆ
ಧಿಗಿಲೆಂದುದಿನಿತಳುಕಿ. ಶಿವನ ಸನ್ನಿಧಿ ಮಹಿಮೆ
ಶಿವಮಂ ಪ್ರಚೋದಿಸಿತ್ತೆನೆ ರಾವಣಂ: "ದೇವಿ,
ಕರುಣೆಸುಪಸಂಹರಿಸು ದಿಟ್ಟಿಸಿಡಿಲಂ. ರಾವಣಗೆ
ಜಗಪಾಲ ದಿಗುಪಾಲರಾಟೋಪದಾಗ್ರಹಂ

ಸೀರ್ಪುಲ್ಲ್ಗೆ ಸಾಟಿ; ದಿಟಮಾದೊಡಂ, ನಿನ್ನೊಲ್ಮೆ
ಹುಬ್ಬುಗಂಟಿಕ್ಕೆ ಧೈರ್ಯಚ್ಯುತಂ, ದೆಸೆಗೇಡಿ, ತಾನ್
ಪರದೇಶಿ, ಮೇಣ್ ಶೂನ್ಯಚಿತ್ತನ್! ನೀನೆನಗೆ ಶಾಂತಿ,
ಸತ್ತ್ವಮಾತ್ಮಂ; ನೀನೆನಗೆ ತುತ್ತತುದಿಯಾಸೆ,
ನೆಲೆ, ನೆಚ್ಚು, ಸೈಪು! ದೇವನೆ ಪೇಸಿ ಬಿಟ್ಟೊಡಂ
ಕೆಟ್ಟನಲ್ಲೆನ್; ಪ್ರೇಮಮಯಿ ನೀಂ ತೊರೆಯೆ, ಅಯ್ಯೊ,
ಶೂನ್ಯನೆಂ. ಬಲ್ಲೆಯಿೀಯೆನ್ನ ದೌರ್ಬಲ್ಯಮಂ.
ಲೋಕಮಂ ಜಯಿಸಿದಾನ್ ನನ್ನಿಂದ್ರಿಯಂಗಳಿಗೆ
ದಾಸನೆಂದರಿವೆನಾನಿತರರೋಲ್. ಕೇಳಾದೊಡಂ
ನಿನ್ನ ಮುಂದಲ್ಲದನ್ಯರ ಮುಂದೆ ತಪ್ಪನೊಪ್ಪಲ್
ದೊರೆತನಕೆ ಕೀಳ್; ಮೇಣ್ ಪೆರ್ಮೆಗವಹೇಳನಂ;
ನಿನ್ನೊಂದು ಪೆಂಪಿಗವಮಾನಮೆಂದಾಂ, ದೇವಿ,
ಹುದುಗಿಸಿಹೆನನ್ಯರಿಂ, ಕೀಳ್ಗಳಿಂ, ನಾಯ್ಗಳಿಂ,
ನನ್ನಾತ್ಮದೊಳತೋಟಿಯಂ. ಪೇಳ್ವೆನಾಲಿಸಾಃ
ಸೀತೆಯಂ ತಂದಂದಿನಿಂ ಮನಕೆ ಕಳವಳಂ.
ಹೆದರಿಕೆಯನಾನರಿಯೆನಾದೊಡಂ, ಮನಕೇನೊ
ಅಶಾಂತಿ. ಒಮ್ಮೊಮ್ಮೆ ಕೆರಳುತಿಂದ್ರಿಯ ತೃಷ್ಣೆ
ಕಾತರಿಸುತಿದೆ; ಮತ್ತಮೊಮ್ಮೊಮ್ಮೆ, ನಿನ್ನೊಂದು
ತಪದ ಫಲಮೆಂಬಂತೆ, ಬಿರಿಯೊತ್ತಿ ತಡೆಯುತಿದೆ
ತೃಷೆಯ ಮನ್ಮಥ ರಥದ ತೇರ್ಗಾಲಿಯಂ ಶಿವಮ್."
ಮುಂದೆ ನುಡಿದೋರಲಾರದೆ ಮೌನದಿಂ ಬಾಗಿ
ನಿಂದಾತನಂ ಕರುಣೆಯಿಂ, ಪ್ರೀತಿಯಿಂ ಮತ್ತೆ
ಪ್ರಾರ್ಥನಾಮಯ ನಯನದಿಂ ನೋಡುತಾ ಮಯನ
ಕುವರಿಃ "ಜಾನಕಿಯೆಲ್ಲಿ ? ನೋಳ್ಪೆನಾನಾಕೆಯಂ."
ಬೆಚ್ಚಿದೋಲಸುರನೆನೆ "ಆಗದಾಗದು!" "ಏಕೆ"
ಎನೆ ರಾಣಿ, ಮಂದಸ್ಮಿತದೊಳಿಂದ್ರಜಿತು ಪಿತಂಃ
"ನಿನ್ನ ದರ್ಶನದಿಂದೆ ಪಾಣ್ಬೆಗಕ್ಕುಂ ಮಹಾ
ಪತಿವ್ರತೆಯ ದೃಢತೆ; ಸೀತೆಯ ಮಾತದಂತಿರ್ಕೆ!"
"ಸತಿಯನಾರುಪಸೇವಿಪರ್ ?" "ತಂಗೆಯಿಹಳದಕೆ."
ಗಂಟಿಕ್ಕಿದುದು ಮೊಗಂ ಮಂಡೋದರಿಗೆ; ಸುಯ್ದು,
"ಸೊಸೆಯನಾದೊಡಮದಕೆ ನೇಮಿಸಿರ್ದೊಡೆ... " "ಏನೇನ್

ತಾರಾಕ್ಷಿಯನೆ? ಮರೆತೆಯೇನಾಕೆ ತಾನಿಂದ್ರಜಿತು
ದಯಿತೆ!" "ಸೀತೆಯುಮವನಿಜಾತೆ: ರಾಮನ ದಯಿತೆ!"
ಅನಿಷ್ಟಮಂ ಕೇಳ್ದವೋಲಸುರಂ ಮನಂ ಮುರಿದು
ಕಡುಕಿನಿಸಿ "ನನ್ನಿಂದೆ ಕದ್ದೊಯ್ದಳಂ ಮರಳಿ
ತಂದೆನಾಂ ಗೆಲ್ದು!" "ಪೆಣ್ಗೆ ತನುವಲ್ತು ಹೃದಯಂ!"
"ತನುವಿನಂಶಮೆ ಹೃದಯಂ! ಅದರ ಬೆಂಬಳಿಯೊಳಿದು
ಸೋಲ್ವುದಿಂದಲ್ಲದಿರೆ ನಾಳೆ!" "ಶಿವಕೃಪೆಯಿಂದೆ, ಕೇಳ್,
ಪುಸಿಗೈವಳಾ ಭ್ರಾಂತಿಯಂ ಸೀತೆ!" "ನನ್ನಿಚ್ಛೆ
ಸೋಲ್ಗೆ; ಹದಿಬದೆ ಗೆಲ್ಗೆ; ನಿನ್ನಾಸೆಯುಂ ಸಲ್ಗೆ:
ಬಲದಿನಲ್ಲದೆ ಸೋಲೆನಭ್ಯುದಯಕಾದೊಡಂ!"
ಪರಿಪಡೆ ನುಡಿದು ಮುರಿದು ಪೊರಮಡುವನಂ ರಾಣಿ
ಕರೆದಳ್ ದೀನವಾಣಿಯಿಂ. ಪ್ರಸಾದಮನಿತ್ತು
ಕಯ್ಮುಗಿದಳಾಣ್ಮಂಗೆ. ಪಣೆಗೊತ್ತಿಕೊಂಡದಂ
"ನೀಂ ಮಹಿಮಳಾನಲ್ಪನೆಂ, ದೇವಿ. ನಿನ್ನೊಳ್ಪು
ಶಿಕ್ಷಿಸಲಿ ರಕ್ಷಿಸಲಿ ಧನ್ಯನಾಂ! ದೇವಂಗಾಂ
ಕಯ್ಮುಗಿಯವೇಳ್ಕುಮೆಂದಾಸೆಯೇಂ? ಸರ್ವರಿಂ
ಕಯ್ಮುಗಿಸಿಕೊಳ್ವಂಗೆ ಕಯ್ಮುಗಿಸಿಕೊಳುವನಿರೆ
ಲೇಸೊರ್ವನಾದೊಡಂ!" ಎಂದರ್ಧ ಹಾಸ್ಯಮಂ
ನಟಿಸುತಿರ್ದೊಡಮಮಿತ ಗಂಭೀರ ಮುದ್ರೆಯಿಂ
ದಿಂಡುಗೆಡೆದನ್ ದಂಡದೋಲ್ ಚಂದ್ರಚೂಡಂಗೆ:
ಆ ಜಗಜ್ಜಯಿ ದೈತ್ಯ ಚಕ್ರೇಶನಂತಲ್ಲಿ
ಸಾಷ್ಟಾಂಗದಿಂ ನಮಸ್ಕರಿಸಿರ್ದ ದೃಶ್ಯಮಂ
ಕಂಡು ಮಂಡೋದರಿಗೆ ಮೊಳೆತುದು ಮನಶ್ಶಾಂತಿ!

## ಸಂಚಿಕೆ ೮

# ನಾನಕ್ಕನೆನ್ ನಿನಗೆ, ತಂಗೆ!

ತೆರೆ ಪರಂಪರೆ: ಮೊರೆ ಪರಂಪರೆ: ಪರಂಪರೆಯ
ಬೆಳ್ನೊರೆನೊರೆಯ ಪೊರೆಯ ಸಾಗರದ ನಾಗರನ
ಭೋರ್ಗರೆವ ಭೋಗ ಕುಲ ಬಲಮವ್ವಳಿಸಿದುದು
ನಿರಂತರಂ, ತಟಗತ ಅಶೋಕವನ ವಂಕಿಮ
ಶಿಲಾವೇಲೆಯಂ. ಕಾಡುಗೋಡೆತ್ತರದೊಳಿರ್ದ
ಪುಲ್ಮನೆಯೊಳಿರ್ದು ಸೀತಾದೇವಿ ತಾನುತ್ಕಂಠೆ,
ನೋಡುತಿರ್ದಳ್ ತರಂಗೋಲ್ಲಾಸಮಂ; ಮೇಣ್
ಕೇಳುತಿರ್ದಳ್ ತರಂಗೋಚ್ಛ್ವಾಸ ಘೋಷಮಂ; ಮೇಣ್
ನೋಡುತಿರೆಯಿರೆ, ಕೇಳುತಿರೆಯಿರೆ, ದೃಗಿಂದ್ರಿಯಕೆ
ಶ್ರವಣೇಂದ್ರಿಯಕೆ ಭೇದಮಳಿದತ್ತು. ಮೆಲ್ಲನೆಯೆ
ತೆರೆಯಾಗಿ, ಮೊರೆಯಾಗಿ, ತಿರೆಯೆಲ್ಲ ತಾನಾಗಿ,
ತನ್ನತನವನೆ ಮೀರಿ ನೆಗೆದುದು ಅತೀಂದ್ರಿಯಕೆ
ದೇವಿಯಾತ್ಮಂ. ಕಾಣ್ಬವೋಲೆಳ್ಚರದ ಚಿಂತೆ
ಕನಸಿನೊಳ್, ಕೇಳ್ದುದೊಂದತಿಶೋಕಮಯ ಗೇಯ-
ದಿಂಚರಂ. ಕೇಳ್ದಳೆನೆ ಗೇಯಮೆನಲಾ ಪದಂಗಳ್
ಐಂದ್ರಿಯಜ್ಞಾನ ಸೂಚಕಮೌಪಚಾರಿಕಂ.
ಕಾಲದೇಶಾತೀತಮಂ ಅನುಭವಾವರ್ಣ್ಯಮಂ
ಕೇಳ್ದಳೋ? ಕಂಡಳೋ ಎಂತಾದರೇನಂತೆ,
ರಾಮದುಃಖವನೆಲ್ಲಮಂ ತಾನುಂಡಳಯ್! ಬಳಸಿ
ಕಾಪಿರ್ದ ಲಂಕಾ ಲತಾಂಗಿಯರ್ ಬೆಬ್ಬಳಿಸಿ
ಕಂಡರಾ ಶೂನ್ಯತೆಯ ಸುಳಿದಾಟಮಂ. ಗಾಳಿಯಂ
ಬೀಸಿದರ್; ನೀರೆರಚಿದರ್; ಕರೆದರಲುಗಿದರ್; ಮೇಣ್

ಕಡೆಗಟ್ಟಿದರು ವಾರ್ತೆಯಂ ದೊರೆಯ ಸನ್ನಿಧಿಗೆ.
  ಬೆಳ್ದಿಂಗಳಿರುಳಳಿದು ಮೂಡಣ ದಿಗಂಗನೆಯ
ಮೊಗಕೆ ನಸುಗೆಂಪಲರುವಂತೆ, ಸೀತೆಯ ಮೊಗದ
ಬೆಳ್ಪಳಿದುದಿಸಿತೊಂದು ನಳನಳಿಪ ಚೆಂದಳಿರ
ಸೊಂಪು. ತಿರುಗಿದತ್ತೊಯ್ಯನೆಯೆ ಶೋಕಗೇಯಂ
ಧೀರಗಾನಕ್ಕೆ. ತಾನದ ಮೇಲೆ ಗರಿಗೆದರಿ
ತಾನಮೇರ್ದಂತೆ ಹಾರಿದುದು ಬಾನೆತ್ತರಕೆ
ಹರ್ಷ ಗಾನದ ಪಕ್ಷಿ. ಕಣ್ದೆರೆದಳರವಿಂದ
ನೇತ್ರೆ: ಕಂಡಳು ಮುಂದೆ ಧಾನ್ಯಮಾಲಿನಿಯೊಡನೆ
ನಿಂದಿರ್ದ ದಶಕಂಠನಂ. ಬುದ್ಧಿಪೂರ್ವಕಂ
ತಾನಲ್ಲಮಭ್ಯಾಸಬಲದಿಂದಮೆಂಬಂತೆ
ಮೊಗಮಿಳುಹಿದಳ್. ಕಂಡಳಡಿವರೆಗೆ ಮುಡಿಚಾಚಿ
ನೆಲದ ಮೇಲೊರಗಿರ್ದ ದಶಶಿರಚ್ಛಾಯೆಯಂ!
  ದೊರೆಯ ಕಣ್ತಿಳಿದು ತೊಲಗಿದುದೊಡನೆ ಪೆಣ್ಗಾಪು
ಸೀತೆಯೆಡೆಯಿಂ. ಧಾನ್ಯಮಾಲಿನಿಯುಮಲ್ಲಿಂದೆ
ತೆರಳಲನುಗೆಯ್ಯೆ ರಾವಣನವಳನಿರವೇಳ್ದು,
ಜಾನಕಿಯೆಡೆಗೆ ತಿರುಗಿ: "ದೇವಿ, ನಿನ್ನಿಚ್ಛೆಗೇಂ
ಕೊರತೆಯಿಲ್ಲದೆ ನಿನ್ನ ತೊಳ್ತಿರೆಸಗುವರಲ್ತೆ
ನಿನ್ನ ಬೆಸಗೆಯ್ದುದಂ? ಹಸನಿಹುದೆ ನಿನಗೆ ಈ
ಪೊಸತಿರ್ಕೆದಾಣಂ?. . . ಅನಿಲಂ ಬಿಜ್ಜಣಿಗೆವೀಸಿ
ಸೇವಿಪನೆ? ನೇಸರೆಳವಿಸಿಲ ಬಿಸುಪಿತ್ತಪನೆ
ನಿನ್ನ ಸಿರಿಮೆಯ್ಗೆ? ತರುಪತ್ರ ಛತ್ರಚ್ಛಾಯೆ
ಕೊಡೆಯ ನೆಳಲಾಗೆ ಪಾಲಿಪಳಲ್ತೆ ವನದಾಸಿ
ಕರ್ತವ್ಯಮಂ? ನಿನಗೆ ಗೌರವದ ಕಾಣ್ಕೆಯಂ
ಸಲ್ಲಿಸಿಹನಲ್ತೆ ತೆರೆಚವರಿಯಂ ಬೀಸುವೀ
ರಾಜಸೇವಾಸಕ್ತನೆನ್ನ ಕಿಂಕರ ಕೃಪಾ
ಕಾಂಕ್ಷಿಯೀ ಸಾಮಂತ ನೃಪ ಸಾಗರಂ? . . .ಸೀತೆ,
ಬಡಗಣ್ಗೆ ಮೊಗಮಾಗಿ ಪಡೆವುದೇಸಂ ಬೇಡಿ
ಬಡವನಂ? ಕಡವರವನೆಲ್ಲ ಲಂಕೆಗೆ ಸೋತು
ಬಡತನವಡಸಿತಾ ಕುಬೇರಂಗೆ. . . ತೆಂಕಣ್ಗೆ
ಕಣ್ಣಪ್ಪುದುಂ ವೇಡ: ಲಂಕೆಯರಮನೆ ಸಿರದ

ಗೋಪುರದ ಚಾಮೀಕರದ ದೀಪ್ತಿ ತಾನೆಗಳುಂ
ಕೀನಾಶಗಾಗಿರ್ಪುದೊಂದೆಳ್ಚರಿಕೆವೆರಳವೋಲ್
ಭೀತಿ!. . . ಮೈಥಿಲಿ, ಮುಹುರ್ಮುಹುರೆನ್ನ ದೈನ್ಯಮಂ
ನಿನಗಾಂ ನಿವೇದಿಸುತ್ತಿಹೆನೆಂತೊ ಲೆಕ್ಕಿಸದೆ
ನನ್ನ ಪೆಂಪಂ. ಮಿತಮರಸುತಾಳ್ಮೆಯಾದೊಡಂ,
ನಿನ್ನೊಲ್ಮೆಯೊಂದು ಬೆಲೆಯರಿತರ್ನೆಂ; ತಾಳ್ಮೆಯನೆ
ಹೃದಯದುತ್ಕಂಠೆಗೆ ಖಲೀನಮಂ ಗೆಯ್ದನೆಂ:
ನಿನ್ನವೊಲ್ಮೆಯ ವರಂಬಡೆಯಲೋಸುಗಮಾಂ
ತಪಸ್ವಿಯೆಂ. ಒಪ್ಪಿ ಬರಲೊಲ್ಮೆ ಜೇನ್; ಒಲ್ಲದಿರೆಯುಂ
ಬಲದಿನಿಳ್ಕುಳಿಗೊಂಡರದು ಪಂಕಮೌ, ಪಂಕಜೆ.
ಸಾಧನೆಗಸಾಧ್ಯಮಿಲ್ಲೆಂಬರೌ. ಉಪಾಸಿಸಲ್
ಕಾಲಾಂತರಕೆ ಕಲ್ಲುಮೀಶ್ವರನ ಕೃಪೆಯಾಗಿ
ಪರಿಣಮಿಸಿದಪ್ಪುದೆನೆ, ನಿನ್ನ ಕಲ್ಲೆರ್ದೆ ಕರಗಿ
ಮೆಲ್ಲಿತಪ್ಪುದು ದಿಟಂ! ನೋಡೀಕೆಯಿಹಳೆನಗೆ
ಸಾಕ್ಷಿ. ನಿನಗಾಗಳೆಯೆ ಪೇಳ್ದಳಲ್ಲವೆ ತಂಗೆ
ಚಂದ್ರನಖಿ? ಧಾನ್ಯಮಾಲಿನಿಯೆನಗೆ ನೋಂತಂಗೆ
ಕಾಲಾಂತರಕ್ಕೋತು ಕೃಪೆದೋರ್ದಳೆಂಬುದಂ?''
    ಪಿಡಿದ ತೃಣಚೂರ್ಣಮಂ ರಾವಣಪ್ರತಿ ಗೆತ್ತು
ಮೊಗಮೆತ್ತದೆಯೆ ಸಂಬೋಧಿಸಿದಳವನಿಜಾತೆ:
''ಬಿದಿಯ ಬೇಳ್ವಿಗೆ ಬಂದ ಪಶು ನೀಂ, ದಶಗ್ರೀವ.
ಮರುಗುವೆನು ನಿನಗೆ, ತಾಯ್ ಕೇಡಾಡಿ ಕಂದಂಗೆ
ಮರುಗುವೋಲ್. ನನ್ನ ಕಲ್ಲೆರ್ದೆ ಕರಗುತಿದೊ ನಿನಗೆ
ಮೆಲ್ಲಿತಪ್ಪುದು ದಿಟಂ! ನೀನೆಂದ ಮಾಳ್ಕೆಯಿಂ,
ಸಾಧನೆಗಸಾಧ್ಯಮಿಲ್ಲೆಂಬರ್ಕೈ. ಉಪಾಸಿಸಲ್
ಕಾಲಾಂತರಕೆ ಕಲ್ಲುಮೀಶ್ವರನ ಕೃಪೆಯಾಗಿ
ಪರಿಣಮಿಪುದೆಂತಂತೆ, ಕಾಲಾಯಸಕೆ ಸಮಂ
ನಿನ್ನ ಕಲ್ಲೆರ್ದೆ ಕರಗಿ ಮೆಲ್ಲಿತಪ್ಪುದು ದಿಟಂ!
ನೋಂತಿರ್ಪನನವರತಮಾತ್ಮದುದ್ಧಾರಕ್ಕೆ
ನಿನಗೆ!...''
            ನುಡಿನುಡಿಯುತಾವೇಶಮೇರ್ದಂತೆವೋಲ್,
ಧಾನ್ಯಮಾಲಿನಿಯಂತೆ ದಶಶಿರಂ ಬೆರಗಾಗೆ,

ಗಂಭೀರ ವೈಖರಿಯಿನೊಯ್ಯನೊಯ್ಯನೆ ದೇವಿ
ಮೊಗಮೆತ್ತಿದಳ್! ನೋಡಿದಳ್ ನೇರಮಸುರನಂ,
ದೃಷ್ಟಿಭರ್ತ್ಸನೆಗಳ್ಕಿ ಸೆಡೆತುದೆನಲಳಿಯಾಸೆ ತಾಂ
ರಕ್ಕಸಗೆ! ಮೊತ್ತಮೊದಲಾ ದಿಟ್ಟ ದಿಟ್ಟಿಯಂ
ಸಂಧಿಸಿದ ದೈತ್ಯೇಂದ್ರನೀಕ್ಷಿಸಿರಲಾಕೆಯಂ
ಮೂಕ ವಿಸ್ಮಯದಿಂ, ವಸುಂಧರಾತ್ಮಜೆ ಮತ್ತೆ:
"ಪಿರಿಯನಹುದಯ್ ನೀಂ, ದಶಗ್ರೀವ; ಪಿರಿತನಂ
ಕೆಡದವೋಲೆಸಗಿ ಬಾಳ್. ಧರ್ಮದಂಡವ ಕೆಣಕಿ
ಪಾಳ್ಗೆಯ್ಯದಿರ್ ಲಂಕೆಯಂ. ನಿನ್ನನೊಲಿದರ್ಗೆ
ಕೆಮ್ಮನನ್ನೆಯಮೊಡರ್ಚದಿರ್ ವೈಧವ್ಯಮಂ!
ತಡೆಯುವುದೆ ಸಾಗರಂ ಧರ್ಮರೋಷವನಯ್ಯೊ
ಮರುಳೆ? ಸಾಗರವೆ ಸೇತುವೆಯಾಗೆ, ಗರದಂತೆವೋಲ್
ನಿನ್ನನಟ್ಟದೆ ಮೃತ್ಯುರೂಪದ ಕೃಪಾಕೇತು?. . . "
ಮೊಗಂಬಾಗಿದಳ್ ಮರಳಿ. ಕೇಳಿಸಿತು ಕಡಲ ಮೊರೆ,
ಹಕ್ಕಿಯಿಂಚರಮಂತೆ ತರುಮರ್ಮರಂ. ಮೌನದಿಂ,
ಮೊಗದಿರುಹಿ ತೆರಳಿದನ್ ಧಾನ್ಯಮಾಲಿನಿವೆರಸಿ
ರಾವಣಂ, ಚಿಂತಾ ನಿಮಗ್ನನಂತರ್ ಮಥಿತನಾ
ಜೀವನಾಂಭೋಧಿ.
ಆ ಇರುಳ್, ಬೆಳ್ದಿಂಗಳೊಳ್,
ವಿಶ್ವನಿದ್ರೆಯೊಳೊಂದು ಕನಸಿನಂತಿರೆ ಪೃಥಿವಿ,
ನಿಶ್ಶಬ್ದತೆಯ ಪಕ್ಷವಿಸ್ಫಾಲಮೆಂಬಿನಂ
ಕಡಲ ತೀರದ ತೆಂಗು ಮರಗಳೊಳ್ ನರ್ತಿಸಿರೆ
ಗರಿಮರ್ಮರಂ, ಚಂದ್ರ ಸುಂದರ ವಿಶಾಲೋರು ತಾಂ
ನೀಲಾಬ್ಧಿ ಆ ಸತಿಯ ಸಂಕಟಕೆ ಅನುಕಂಪಿಸುವ
ತೆರದಿ ಸುಯ್ದಿರೆ ನರಳಿ ಹೊರಳಿ, ಸೀತೆಯ ಕಿವಿಗೆ
ಕೇಳಿಸಿತ್ತೊಂದು ಕಿಂಕಿಣಿ ಕನಕ ನೂಪುರದಾ!
ನೋಡುತಿರೆ ಕಂಡಳ್ ಚಕಿತನೇತ್ರೆ: ಆ ಅಮೃತ
ರಾತ್ರಿಯೆ ಲಲನೆಯಾಕೃತಿಯಾಂತು ಬಂದವೋಲ್,
ಪಾಲ್‌ಬೆಳ್ಳನೆಯ ಸೀರೆ ಸಿಂಗರಿಸಿದೊಂದಾಳ್ತನಂ
ನಡೆಗುಣ್ಪನಿಂ ಬಗೆಗೆ ಭಯಭಕ್ತಿಯನೊಡರ್ಚೆ,
ಬಂದಳೊರ್ವಳ್, ಭೂಮಿದೇವಿಯೆ ಕುಮಾರ್ತೆಯಂ

ಸಂತೈಸಲೈತರ್ಪವೋಲ್! ಬಳಿಗೆ ಬಾರದೆಯೆ
ದೂರದೊಳೆ ನಿಂದಳೆನುತಿರೆ, ಕಯ್ಗಳೆತ್ತಿದಳೆ?
ಸೋಜಿಗಮಿದೇಂ? ತನಗೆ ಕಯ್ಮುಗಿದಳೆಂಬಂತೆ
ತೋರುತಿದೆ! ಸೀತೆಯಚ್ಚರಿಯಿಂದೆ ಕಣ್ಣಾಗಿ
ನಿಟ್ಟಿಸಿರೆ, ಬೀಣೆ ಮಿಡಿದಂತೊಯ್ಯನೊಯ್ಯನೆಯೆ
ರೋದಿಸಿದಳಸ್ಪಷ್ಟಮಾಡುತಾ ಗಂಭೀರೆ,
ಧೀರೆ, ಧವಳಾಂಬರಾ ಮಹಿಳೆ!
ಇಂತಿಂತಿಂತು
ಇರುಳೆಲ್ಲಳಾ ರೂಪು ಬಂದು ದೂರದಿ ನಿಂತು,
ರೋದಿಸಿ, ತುಳಿಲ್‌ಗೆಯ್ದು, ಮೊರೆಯುತಸ್ಪಷ್ಟಮಂ
ಪಿನ್ ತೆರಳುತಿರಲೆಂಟನೆಯ ರಾತ್ರಿ, ಕನಿಕರಕೆ
ಕರಗಿದಿಳೆಗುವರಿ ಮೇಲೆಳ್ದಳವಳಿರ್ದೆಡೆಗೆ
ನಡೆದಳಿರ್ದೆ ತೋಡಿ ನುಡಿಸಿದಳಿಂತು:
"ಆರಮ್ಮ,
ತಂಗೆ, ನೀನ್? ನೋಡುತಿಹೆನೇಳಿರುಳ್ಗಳಿಂ; ಬಂದು
ಗೋಳಾಡುತಾವುದನೊ ಸಂಕಟವನೊರೆಯುತಿಹೆ;
ಆರನೋ ಕರೆಯುತಿಹೆ; ಆರನೋ ಬೇಡುತಿಹೆ;
ಕೈ ಮುಗಿದದಾರ್ಗೊ ರಕ್ಷೆಯ ಪಡೆಯಲೋಸುಗಂ
ನೋಂತವೋಲಿದೆ ನೋಂಪಿಯಂ. ಬೆದರಿದೆನ್ ಮೊದಲ್
ದನುಜ ಕೈತವಮೆಂದು. ಕಡೆಗೆ, ನಿನ್ನಯ ಕೊರಳ
ದುಃಖ ನೈಜತೆಯೆನಗೆ ಕೆಣಕಿದುದು ಕರುಣೆಯಂ.
ನನ್ನಂತೆ ನೀನುಮಸುರನ ದೌಷ್ಟ್ಯಮೆಳೆತಂದ
ಗರತಿವೆಣ್ಣಿರವೇಳ್ಕುಮ್! ಈ ಲಂಕೆಯೊಳಗೆನಿತು
ದುಃಖಿಗಳ್ ನಮ್ಮನ್ನರೊಳರೊ?..."
"ನಾನಕ್ಕನೆನ್
ನಿನಗೆ, ತಂಗೆ, ವಯಸ್ಸಿನಿಂದಂತೆ ದುಕ್ಕದಿಂ!
ನನ್ನವೋಲತಿದುಃಖಿ, ಲಂಕೆಯೊಳಗಂತಿರ್ಕೆ,
ಸೃಷ್ಟಿಯೊಳಗಿಲ್ಲಮೆಂದರಿ..."
"ದೇಶಮಂ ತ್ಯಜಿಸಿ,
ವನವಾಸಮಂ ವರಿಸಿ, ರಾಕ್ಷಸನ ಪಾಪಕ್ಕೆ
ಬಲಿಯಾದ ದಶರಥಸುತನ ಭಾರ್ಯೆಗಿಂ ದುಃಖಿ

ನೀನೆಂಬೆಯೇನ್?''
"ದಿಟಂ; ಸೀತೆಗಿನ್ನತಿದುಃಖಿ
ನಾನ್. ಎನಿತೊ ಸೀತೆಯರಳಲ ಪೊತ್ತಿಸಿರ್ಪಂಗೆ ನಾಂ
ಮಡದಿಯೆನ್!''
"ಮಂಡೋದರಿಯೆ ನೀಂ?'' ಹರ್ಷವಿಸ್ಮಯದಿ
ಬೆಸಗೊಂಡವನಿಜಾತೆಗಾ ಮಹಿಳೆ:
"ನಿರ್ಭಾಗ್ಯೆ ದಲ್
ನಾನಪ್ಪೆನಾ ಪೆಸರ ಪೆಣ್...''
"ಪೆಸರಪೆಣ್, ದಿಟಂ!
ಮುನ್ ಕೇಳ್ದೆನಾಂ ನಿನ್ನ ಬೆಳ್ಜಸವನೆಲೆ ಪೂಜ್ಯೆ;
ಕಂಡಿಂದು ಧನ್ಯೆಯೆನ್. ಪಿರಿಯಳ್ಗೆ ನಮಿಸುವೆನ್.''
"ನಾನಸುರಿ. ನಮಿಸದಿರೆನಗೆ, ಆರ್ಯೆ!''
"ನೀನಸುರಿ?
ನೀನಸುರಿಯಲ್ತು; ದೇವತೆ. ಪತಿವ್ರತೆಯಾಗಿ
ನಮಗೆಲ್ಲಮಾದರ್ಶಮಾತೆ. ನಿನಗಾಂ ನಮಿಸೆ
ಶೀಘ್ರದಿಂದೆನಗೆ ಮಂಗಳಮಪ್ಪುದೆಂದು ನಾಂ
ಬಲ್ಲೆನ್...''
"ಆ ಮಂಗಳಂ ನಿನಗೆ ಶೀಘ್ರದಿನಕ್ಕೆ!
ನಿನ್ನ ಮಂಗಳಮೆನಗೆ ಮಂಗಳಂ! ನನ್ನಂತೆ,
ದೇವಿ, ನೀನುಂ ಪ್ರಾರ್ಥಿಸಾ, ನನ್ನ ಪತಿಯೆರ್ದೆಗೆ
ಶುದ್ಧಿ ದೊರೆಕೊಳ್ವಂತೆ. ನಾನದನೆ ಬೇಡಲ್ಕೆ
ಬರುತಿರ್ದೆನೀಯೆಡೆಗೆ ನಿನ್ನ ಸಾನ್ನಿಧ್ಯಕ್ಕೆ. . . ''
ಮೌನಮಿರ್ದಳ್ ಸೀತೆ; ಒಂದಿನಿತನಂತರಂ
ಮಯನ ನಂದನೆ ಮತ್ತೆ:
"ನಿನ್ನ ಸಂಧಿಸಲೆನಗೆ
ಲಂಕೇಶನನುಮತಿಯನಿತ್ತನಿಲ್ಲದರಿಂದೆ
ನಾನೆ ಮೊದಲ್ಮೈತಂದು ನಿನ್ನ ದರ್ಶನದಿಂದೆ
ಧನ್ಯೆಯಾಗದೆ ಹೋದೆನೆಲೆ ಪುಣ್ಯ ಚಾರಿತ್ರೆ...
ಪ್ರಾರ್ಥನೆ ಸಫಲಮಾಯ್ತು. ನೀನೆ ದರ್ಶನವಿತ್ತೆ.
ನುಡಿಸಿದೆ. ಕೃತಾರ್ಥಳೆಂ... ಹದಿಬದೆತನಕೆ ಮೀರ್ಪ
ಸಾಧನೆಯಿಲ್ಲ, ತಂಗಿ... ಕೊಳೆಗೆ ತಗುಳಲ್ಕಗ್ನಿ

ಕೊಳೆಯುಮುರಿಯಪ್ಪುದಂತೆಯೆ ನಿನ್ನ ನೋಂಪಿಯಿಂ
ಕಿಡುಗೆನ್ನ ಪತಿಯ ಹೃದಯದ ಪಾಪ ಕಿಲ್ಬಿಷಂ.
ಸನ್ಮತಿಯುದಿಸಿ ಶಾಂತಿ ಸುಖಮಕ್ಕೆ ಸರ್ವರಿಗೆ!...''
ಸೀತೆಗೆಳ್ಚರಮಪ್ಪ ಮುನ್ನಮಾ ಸ್ತ್ರೀ ಮೂರ್ತಿ
ಮುಡಿ ಚಾಚುತಡಿಮುಟ್ಟಿ ಪಾದಧೂಳಿಯನಾಂತು
ನಡೆದಳಲ್ಲಿಂದೊಡನೆ ಕಣ್ಬೊಲವನತಿಗಳೆದು,
ಮೆಯ್ವೆತ್ತ ಜೊನ್ನವೆಣ್ ಮತ್ತೆ ಜೊನ್ನಪ್ಪವೋಲ್!
    ನನಸಾದೊಡಂ ಕನಸಿನಿಂದಮೆಳ್ಚತ್ತವೋಲ್
ಬೆರಗಾಗಿ ಹಿಮ್ಮರಳಿದಳು ಸೀತೆ, ಕರೆಗಣ್ಮೆ
ಪೆರ್ಚಿದಾನಂದದಿಂ: ತನ್ನ ನೋಂಪಿಗೆ ಪೆರರ
ನೋಂಪಿಯೆ ನೆರಂ, ಗುರಿಯೊಳಿಲ್ಲದಿರಲಂತರಂ.
ಮಂಡೋದರಿಯ ದೃಢತೆಯಾದುದುಕ್ಕಿನ ಸಾಣೆ
ಮೈಥಿಲಿಯ ಚಿತ್ತಕೆಂತೆನೆ, ತನ್ನ ದೇವತೆಗೆ
ಪೂಜೆ ಸಲ್ಲಿಸಿ ಮಣಿಯುವನ್ನರಂ ಕಾಣಲ್ಕೆ
ಹೊಂಪುಳಿಯಿನುಕ್ಕಿದಪುದಲ್ತೆ ಭಕ್ತಗೆ ಭಕ್ತಿ
ಹುರಿಗೊಂಡು? ಸೆರೆಮನೆಯ ಆತ್ಮ ಸಾಧನೆಗೊಂದು
ಎಲೆಯ ಮನೆಯಾಯಿತ್ತು; ಪೌಲಸ್ತ್ಯಜನ ಲಂಕೆ
ಮಂಡೋದರಿಯ ಲಂಕೆಯಾಯಿತ್ತು; ರಾವಣನ
ಮೇಲಿರ್ದ ವೈರಭಾವಂ ಸುಲಭದಿಂ ಕರಗಿ
ಮಂಡೋದರಿಯ ಪತಿಯ ಮೇಲಣ ಕರುಣೆಯಾಯ್ತು.
ಸೂರ್ಯನಾತಪಕೆ ಕಾಲದ ತಪಂ ನೆರವಾಗಲಾ
ಬಜ್ಜರತನಂ ಬರ್ಪುದೊಯ್ಯನಿದ್ದಲಿಗೆನಲ್,
ಸೀತೆ ಮಂಡೋದರಿಯರಿರ್ವರ್ ತಪಂಬಡಲ್
ರಾವಣನ ಮನದ ಪೊನ್ ಹೃತ್ತಾಪಮೂಷೆಯೊಳ್
ಕುದಿಕುದಿದು ಕರಕರಗಿ ಕಾಳಿಕೆಯನುಳಿಯದೇನ್?
ತಿಳಿಯದೇನ್? ಪೊಳೆಯದೇನ್? ಪೊಚ್ಚ ಪೊಸ ಪೊನ್ನಾಗಿ
ತಳತಳಿಸದೇನ್?
                    ನೆನೆದಳತ್ರಿಸತಿಯಂ; ಪೂಜ್ಯೆ
ಹದಿಬದೆಯರಧಿದೇವಿಯಾಕೆ ತನಗಂದಿತ್ತುದಂ
ರಕ್ಷೆಯಂ ಮೇಣುಮಾಶೀರ್ವಾದಮಂ ತನ್ನ
ಮುಡಿಯಿಂ ತೆಗೆದು ನೋಡಿದಳ್ ದಿವ್ಯಸುಮಮಂ. ಹಿಗ್ಗಿ

ನೋಡಿದಳದಂ ಮರಳಿಮರಳಿ. ಮೀಯದೆ, ಉಡದೆ,
ಕೊಳೆ ಬಣಬೆಗೊಂಡಿರ್ದ ತನ್ನ ಮೆಯ್ಯೊಳದೊಂದೆ
ಹೂ ಹೊಚ್ಚ ಹೊಸತಿರ್ದುದಂ ಕಂಡು, ರಾಮಂಗೆ
ತನಗೆ ಸತ್ಯಕೆ ಶುಚಿಗೆ ಧರ್ಮಕ್ಕೆ ಸರ್ವರಿಗೆ
ಮಂಗಳಂ ದಿಟಮೆಂದು ನಂಬಿ, ಧೈರ್ಯಂಗೊಂಡು,
ಸುಮರೂಪದನಸೂಯೆಯಂ ಪಣೆ ಮುಟ್ಟಿ ನಮಿಸಿ,
ಪುಣ್ಯಪ್ರಸಾದಮಂ ಶಿರದೊಳಾಂತಳ್ ಮತ್ತೆ
ವೈದೇಹಿ.
ವಜ್ರರಕ್ಷಣೆ ಗೆತ್ತು ಸುಮರಕ್ಷೆಯಂ,
ಧರಣಿದೇವಿಯ ಕನ್ಯೆಯನುದಿನಂ ಪ್ರಾರ್ಥನಾ
ತಪದಿಂದೆ ವಿಶ್ವಶಕ್ತಿಯ ಕೃಪೆಗೆ ಸೆರಗೊಡ್ಡಿ
ಬೇಡುತಿರೆಯಿರೆ, ಮಳೆಯ ಮೋಹರಂ ಮುಗಿಲೊಡ್ಡು ತಾಂ
ಧರ್ಮಮಟ್ಟಿದ ಬೇಹುಕಾರರೆನೆ ಮುತ್ತಿರ್ದುದಯ್
ಲಂಕಾ ಕನಕ ಕೋಂಟೆಯಂ. ಸರಿ ಸಿಡಿಲ್ ಮಿಂಚು
ಗಾಳಿ ಗುಡುಗಿನ ಘೋರ ಮುಂಗಾರ ಭೈರವಂ
ವ್ಯೋಮದೊಳ್ ಭೂಮಿಯೊಳ್ ಕಾಡಿನೊಳ್ ನಾಡಿನೊಳ್
ಕಾಣ್ಬರೆರ್ದೆಯೊಡಲಿನೊಳ್ ತಡಿಗೆಟ್ಟ ಕಡಲಿನೊಳ್
ಧಿಮ್ಮೆಂದು ಧೀಂಕಿಟ್ಟು ಪದಮೆತ್ತಿ ಪದಮಿಟ್ಟು
ಪುಚ್ಛುಕುಣಿತಂ ಕುಣಿದನಾ ತಲ್ಲಣಿಸೆ ಲಂಕೆ!

## ಸಂಚಿಕೆ ೯

# ಸುಗ್ರೀವಾಜ್ಞೆ

ಎಲೆಯುದುರಿ ಬರಲಾದ ಬೂರುಗದ ಮರದಲ್ಲಿ
ಬಲಿತ ಕಾಯ್ ಓಡೊಡೆದು, ಬಿಸಿಲ ಕಾಯ್ಪಿಗೆ ಸಿಡಿದು,
ಹೊಮ್ಮಿತ್ತು ಸೂಸಿತ್ತು ಚಿಮಿತ್ತು ಚೆದರಿತ್ತು
ಚೆಲ್ಲಿತ್ತರಳೆಬೆಳ್ಪು, ಮಸಿಯ ಚೆಲ್ಲಿರ್ದವೋಲ್
ಕಾಳ್ಗಿಚ್ಚು ಕರಿಕುವರಿಸಿದ ನೆಲದ ಕರ್ಪಿನೊಳ್
ಚಿತ್ರಿಸಿ ಶರನ್ನೀರದೋಲ್ಮೆಯಂ. ದಾಂಪತ್ಯ
ಸುಖದಿ ತೃಪ್ತಿಯನಾಂತು ಬಸಿರ ನೋಂಪಿಯ ಸಿರಿಗೆ
ಗೂಡುಕಟ್ಟುವ ಚಿಟ್ಟೆಹಕ್ಕಿ ತಾನಾ ಹತ್ತಿಯಂ
ಮೊಟ್ಟೆಮರಿಗಳಿಗೆ ಮೆತ್ತೆಯನೆಸಗೆ ಕೊಕ್ಕಿನೊಳ್
ಕೊಂಡೊಯ್ದುದಾಯ್ತು. ಮುಳ್‌ಪೊದೆಯ ಬೆಳ್ಮಾರಲಂ
ಕಾಯ್ ತುಂಬಿ ಹಣ್ತಾನಕೆ ಹಾರೈಸುತಿರ್ದುದಾ
ಹೊಸಮಳೆ ಹರಕೆಗಾಗಿ. ಬೆನ್ನು ಹೊಟ್ಟೆಗೆ ಹತ್ತಿ,
ಬಿಸಿಲ ಬೇಗೆಗೆ ಬತ್ತಿ, ಬರದ ಗರ ಬಡಿದಿರ್ದ ಕಲ್
ಕೊರಕು ಕಂಕಾಲತೆಯ ಮಲೆಯ ತೊರೆ ತಾನಲ್ಲಲ್ಲಿ
ತುಂಡು ತುಂಡಾಗಿ ತಂಗಿದುದುಡುಗಿ ಚಲನೆಯಂ:
ಬೇಸಗೆಯ ಧಗೆಗೆ ಚಾದಗೆಯಾದುದಯ್ ವಿಪಿನಗಿರಿ
ಭೂಮಿ!

ಸೀತೆಗೆ ರಾಮನಂತೆ, ಮುಂಗಾರ್ಗೆ ತಿರೆ
ಬಾಯಾರುತಿರೆ, ಓ ಆ ದಿಗಂತದೆಡೆ, ವರದಂತೆವೋಲ್
ಕಾಣಿಸಿತು ವರ್ಷಶಾಪಂ, ರವಿಸಂಗಿ, ಶರಧಿಶಿಶು,
ನೀರದಸ್ತೂಪನೀಲಂ. ಶಿವನ ಜಟೆಯಂತೆವೋಲ್
ಶಿಖರಾಕೃತಿಯಿನುಣ್ಮಿ, ಮೇಲಿಮೇಲಕ್ಕೇರ್ದು

ಶೈಲಾಕೃತಿಯಿನುರ್ಬ್ಬಿ, ತೆಕ್ಕನೆ ಕೆದರ್ದ್ದತ್ತು,
ಕುಣಿವ ಕಾಳಿಯ ಕರಿಯ ಮುಡಿ ಬಿರ್ಚ್ಚೆ ಪರ್ವುವೋಲ್,
ಸಂಜೆಬಾನಂ ಮುಸುಕಿ ಮುಚ್ಚಿ. ಮೇಣ್ ಕಾರ್ಗ್ಗಾಳಿ
ಬೀಸಿದುದು ಮಲೆಯ ಮಂಡೆಯ ಕಾಡುಗೂದಲಂ
ಪಿಡಿದಲುಬಿ ತೂಗಿ. ನೋವಿಂಗೊರಲಿದತ್ತಡವಿ:
ಹಳೆಮರಗಳುರುಳಿ; ಮರಕೆ ಮರವುಜ್ಜಿ; ಕೊಂಬೆಗೆ
ಕೊಂಬೆ ತೀಡಿ; ಮೆಳೆಯೊಳ್ ಬಿದಿರು ಕರ್ಕಶವುಲಿಯ
ಕೀರಿ. ಸಿಡಿರೋಷದಿಂ ಕಿಡಿಯಿಡುವ ಮಸಿನವಿರ
ಪುರ್ಬ್ಬಿನಾ ಕಾರ ರಾಕ್ಷಸಿಯಕ್ಷಿಯಲೆವಂತೆ
ಮಿಂಚಿತು ಮುಗಿಲಿನಂಚು. ಸಂಘಟ್ಟಣೆಗೆ ಸಿಡಿಲ್
ಗುಡುಗಿದುವು ಕಾರ್ಗಲ್ ಮುಗಿಲ್‌ಬಂಡೆ. ತೋರ ಹನಿ
ಮೇಣಾಲಿಕಲ್ ಕವಣೆವೀಸಿದುವು. ಬಿಸಿಲುಡುಗಿ,
ದೂಳುಂಡೆಗಟ್ಟಿ, ಮಣ್‌ತೊಯ್ದು, ಕಮ್ಮನೆ ಸೊಗಸಿ
ತೀಡಿದುದು ನೆಲಗಂಪು ನಲ್. ಝಣನ್ನೂಪುರದ
ಸುಸ್ವರದ ಮಾಧುರ್ಯದಿಂ ಕನತ್ಕಾಂತಿಯಿಂ
ಝರದ ಝಲ್ಲರಿಯ ಜವನಿಕೆಯಾಂತು ನರ್ತಿಸುವ
ಯೌವನಾ ಯವನಿಯ ಕರದ ಪೊಂಜುರಿಗೆಯಂತೆ
ಸುಮನೋಜ್ಞಮಾದುದಾ ಭೀಷ್ಮಸೌಂದರ್ಯದಾ
ಮುಂಗಾರ್ ಮೊದಲ್:
ಹಿಂಗಿದುದು ಬಡತನಂ ತೊರೆಗೆ
ಮೊಳೆತುದು ಪಸುರ್‌ನವಿರ್ ತಿರೆಗೆ. ಪೀತಾಂಬರಕೆ
ಜರತಾರಿಯೆರಚುವೋಲಂತೆ ಕಂಗೊಳಿಸಿದುದು
ಪಸುರು ಗರುಕೆಯ ಪಚ್ಚೆವಾಸಗೆಯೊಳುದುರಿರ್ದ
ಪೂವಳದಿ ಪೊನ್. ಬಂಡೆಗಲ್ ಬಿರುಕಿನಿಂದಾಸೆ
ಕಣ್ದೆರೆಯುವಂತೆ ತಲೆಯೆತ್ತಿದುದು ಸೊಂಪುವುಲ್.
ಮಿಂದು ನಲಿದುದು ನಗಂ; ಮೇದು ತಣಿದುದು ಮಿಗಂ;
ಗರಿಗೊಂಡೆರಂಕೆಗೆದರುತೆ ಹಾಡಿ ಹಾರಾಡಿ
ಹಣ್ಣುಂಡು ಹಿಗ್ಗಿದುದು ಹಕ್ಕಿಯ ಮರಿಯ ಸೊಗಂ.
ಮಳೆ ಹಿಡಿದುದತಿಥಿಯಾಗೈತಂದವಂ ಮನೆಗೆ
ತನ್ನೊಡೆತನವನೊಡ್ಡಿ ನಿಲ್ವಂತೆ. ದುರ್ದಿನಂ
ದ್ರವರೂಪಿಯಾಗಿ ಕರಕರೆಯ ಕರೆದುದನಿಶಂ.

ದೂರಮಾದುದು ದಿನಪದರ್ಶನಂ. ಕವಿದುದಯ್
ಕರ‍್ಮುಗಿಲ ಮರ‍್ಬ್ಬಿನ ಮಂಕು ಪಗಲಮ್. ಇರುಳಂ
ಕರುಳನಿರಿದುದು ಕೀಟಕೋಟಿಯ ಕಂಠವಿಕೃತಿ.
ಗರಿ ತೊಯ್ದು ಮೆಯ್ಗಂಟಿ ಕಿರಿಗೊಂಡ ಗಾತ್ರದಿಂ
ಮುದುರಿದೊದ್ದೆಯ ಮುದ್ದೆಯಾಗಿ ಕುಗುರಿತು ಹಕ್ಕಿ
ಹೆಗ್ಗೊಂಬನೇರಿ. ಕಾಡಂಚಿನಾ ಪಸಲೆಯಂ
ನಿಲ್ವಿರ‍್ಕೆ ಗೈದು, ರೋಮಂದೊಯ್ದಜಿನದಿಂದೆ
ಕರ‍್ಪು ಬಣ್ಣಂಬಡೆದವೋಲಿರ‍್ದು, ಹರೆಹರೆಯ
ಕೊಂಬಿನಿಂದಿಂಬೆಸೆವ ಮಂಡೆಯ ಮೊಗವನಿಳುಹಿ,
ಜಡಿಯ ಜಿನುಗಿಗೆ ರೋಸಿ, ತನ್ನ ಹಿಂಡಿನ ನಡುವೆ
ನಿಂದುದು ಮಳೆಗೆ ಮಲೆತು, ಕೆಸರು ಮುಚ್ಚಿದ ಖುರದ
ಕಾಲ್ಗಳ ಮಿಗದ ಹೋರಿ. ಕಲ್ಲರೆಯನೇರಿದುದು
ಕಟ್ಟಿರುಂಪೆಯ ಪೀಡೆಗಾರದೆ ಮೊಲಂ. ಜಿಗಣೆ,
ನುಸಿ, ಹನಿಗಳಿಗೆ ಹೆದರಿ ಹಳುವನುಳಿಯುತ್ತೆ ಹುಲಿ
ಹಳು ಬೆಳೆಯದೆತ್ತರದ ಮಲೆಯ ನೆತ್ತಿಯನರಸಿ
ಚರಿಸಿದುದು. ಜೀರೆಂಬ ಕೀರ್‌ದನಿಯ ಚೀರ್‌ಚೀರಿ
ಪಗಲಿರುಳ್ ಗೋಳ್‌ಗರೆದುದಯ್ ಝಿಲ್ಲಿಕಾ ಸೇನೆ:
ಬೇಸರದೇಕನಾದಮಂ ಓ ಬೇಸರಿಲ್ಲದೆಯೆ
ಬಾರಿಸುತನವರತಂ ಬಡಿದುದು ಜಡಿಯ ಸೋನೆ!
ಕಳೆದುದಯ್ ಜ್ಯೇಷ್ಠಮಾಸಂ. ತೊಲಗಿತಾಷಾಢಮುಂ.
ತೀರ್ದುದಾ ಶ್ರಾವಣಂ. ಭಾದ್ರಪದ ದೀರ್ಘಮುಂ,
ಶಿವಶಿವಾ, ಕೊನೆಮುಟ್ಟಿದತ್ತೆಂತೊ! ದಾಶರಥಿ ತಾಂ
ಮಾಲ್ಯವತ್ ಪರ್ವತ ಗುಹಾಶ್ರಮದಿ, ಕೇಳ್, ಶ್ರಮದಿಂದೆ
ನೂಂಕುತಿರ್ದನ್ ಮಳೆಯ ಕಾಲಮುಂ, ಕಾಲಮಂ
ಸತಿಯ ಚಿಂತೆಗೆ ಸಮನ್ವಯಿಸಿ. ಬೈಗು ಬೆಳಗಂ
ಮೇಣ್ ಪಗಲಿರುಳ್ಗಳಂ ದಹಿಸಿತಗಲಿಕೆವೆಂಕೆ;
ಪಡಿದೋರ್ದುದಾ ವಿರಹಮಿಂದ್ರಗೋಪಂಗಳಿಂ ಮೇಣ್
ಮಿಂಚುಂಬುಳುಗಳಿಂ.
ಇರುಳ್. ಅಣ್ಣತಮ್ಮದಿರ್
ಗವಿಯೊಳ್ ಮಲಗಿ, ನಿದ್ದೆ ಬಾರದಿರೆ, ನುಡಿಯುವರ್,
ಕಡೆಯುವರ್ ತಮ್ಮ ಮುಂದಣ ಕಜ್ಜವಟ್ಟೆಯಂ.

ಕಾರಿರುಳ್. ಹೆಪ್ಪುಗಟ್ಟಿದೆ ಕಪ್ಪು, ಕಲ್ಲಂತೆವೋಲ್.
ಹೊರಗೆ, ಮಳೆ ಕರಕರೆಯ ಕರೆಯುತಿದೆ. ಕಪ್ಪೆ ಹುಳು
ಹಪ್ಪಟೆಯ ಕೊರಳ ಸಾವಿರ ಹಲ್ಲ ಗರಗಸಂ
ಗರ್ಗರನೆ ಕೊರೆಯುತಿದೆ ನಿಶೆಯ ನಿಶ್ಶಬ್ದತೆಯ
ಖರ್ಪರವನಾಲಿಸಿದ ಕಿವಿ ಮೂರ್ಛೆವೋಪಂತೆ:
"ಏನ್ ವೃಷ್ಟಿಘೋಷಮಿದು, ಆಲಿಸಾ, ಸೌಮಿತ್ರಿ!
ಮಲೆ ಕಾಡು ನಾಡು ಬಾನ್ ಒಕ್ಕೊರಲೊಳೊಂದಾಗಿ
ಬಾಯಳಿದು ಬೊಬ್ಬಿರಿಯುತಿಪ್ಪಂತೆ ತೋರುತಿದೆ.
ಈ ಪ್ರಕೃತಿಯಾಟೋಪದೀ ಉಗ್ರತೆಯ ಮಧ್ಯೆ
ನಾಂ ಮನುಜರತ್ಯಲ್ಪ ಕೃತಿ! ನಮ್ಮಹಂಕಾರ
ರೋಗಕಿಂತಪ್ಪ ಬೃಹದುಗ್ರತಾ ಸಾನ್ನಿಧ್ಯಮೇ
ದಿವ್ಯ ಭೇಷಜಮೆಂಬುದೆನ್ನನುಭವಂ. ಇಲ್ಲಿ,
ಈ ಗರಡಿಯೊಳ್ ಸಾಧನೆಯನೆಸಗಿದಾತಂಗೆ
ದೊರೆಕೊಳ್ಳುವುದೇನ್ ದುರ್ಲಭಂ ಪಾರ್ವತಸ್ಥಿರತೆ?
ಸಾಕ್ಷಿಯದಕಿರ್ಪನಾಂಜನೇಯಂ!..."
"ಒರ್ವನೇಂ?
ಈ ಕಪಿಧ್ವಜ ವಾನರರ ವೃಂದಮೆಲ್ಲಮುಂ
ಸಾಕ್ಷಿ. ದಿನದಿನಮುಮಿಲ್ಲಿಗೆ ಬಂದು ನಿನ್ನೊಡನೆ
ನುಡಿವರಂ ನೋಡುತಿಹೆನೊಬ್ಬೊಬ್ಬರುಂ ಮಹಾ
ಮಹಿಮರಲ್ಲದೆ ಕೀಳ್ಗಳಂ ಕಾಣೆ: ಅಣ್ಣಯ್ಯ,
ವಾಲಿಯ ಕುಮಾರನಂಗದನನೇನೆಂಬೆನಾ
ತಂದೆಯ ಮಗನೆ ದಿಟಂ... ಆ ನೀಲನತಿ ಮೌನಿ.
ನಾನರಿಯೆನವನಾಳಮಂ..."
"ಜಿಹ್ವೆಯಿಂದಲ್ತು,
ಮಿಂಚುವುದು ಕಣ್ಣ ಕಾಂತಿಯಿನಾತನಾತ್ಮಂ."
"ದಿಟಂ, ವಹ್ನಿಪುತ್ರನೆ ವಲಂ."
ತಮ್ಮನೆಂದುದಕೆ
ಪಡಿನುಡಿದನಿಲ್ಲವನಿಜಾಪ್ರಿಯಂ. ಮಳೆಯ ಮೊರೆ
ಇಲ್ಲದಿರ್ದೊಡೆ ಕೇಳುತಿರ್ದತ್ತು ಲಕ್ಷ್ಮಣಗೆ
ಅಗ್ರಜನ ಸುಯ್ಲು: ಮೌನಮೆ ಪೇಳ್ವುದೆಲ್ಲಮಂ:
ನುಡಿ ನಿಂತೊಡನೆ, ಮಳೆಯ ಕೂಗುಕ್ಕಿದವೊಲಾಯ್ತು.

ತಿಮಿರ ಸಾಂದ್ರತೆ ಪೆರ್ಚಿದವೊಲಾಯ್ತು; ಮೇಣುಸಿರ್
ಕಟ್ಟಿದವೊಲಾಯ್ತೂರ್ಮಿಳಾ ಪತಿಗೆ. ಭಾವಿಸುತ್ತಾ
ತನ್ನಗ್ರಜಾತನ ಹೃದಯದಳಲಿಕೆಯ ತಿಣ್ಣಮಂ:
''ಬೆಸಸೆನಗೆ. ನಿನ್ನಾಣತಿಯನೊರೆವೆನಿನಸುತಗೆ,
ಅಣ್ಣಯ್ಯ. ನಾಳೆ ಪೊಳ್ತರೆ ಪೋಪೆನವನೆಡೆಗೆ.
ತಡಮೇತಕಿನ್ನತ್ತಿಗೆಯನರಸೆ?'' ಗದ್ಗದಂ
ಸಂಯಮಕೆ ಸಿಲ್ಕಿರ್ದೊಡಂ, ನಡುಗಿತಿಂತು ದನಿ
ರಾಮನಾ: ''ತಡೆದಿರ್ಪನಾ ಮಿತ್ರನೆನ್ನಿಂದೆ,
ಸೌಮಿತ್ರಿ. ತವಕದಿಂದಿಹರನಿಬರೆನಗಾಗಿ,
ಲಂಕೆಯನ್ವೇಷಣೆಗೆ. ವಿಪಿನ ಸಾಂದ್ರಂ ಪೃಥ್ವಿ;
ಮೇಘ ಸಾಂದ್ರಂ ಗಗನಮಂತೆ ಕರ್ದಮಮಯಂ
ಜಲಮಯಂ ಸೃಷ್ಟಿ. ನೀರ್ಗಾಲಮಂ ಪೂರೈಸಿ,
ಮಾಸ ಕಾರ್ತಿಕಕೆ ಪೊರಮಡಿಯೆಂದು ಬೀರರ್ಗೆ
ನಾನೆ ತಡೆಗಟ್ಟಿಹೆನ್. ಸುರಿವುದಾಶ್ವೀಜಮದೊ, ಕೇಳ್,
ತುದಿಗಾಲದಾಟೋಪದಿಂ?''
ಆಲಿಸಿದರಿರ್ವರುಂ:
ನುಗ್ಗುತ್ತಿರ್ದತ್ತಾಶ್ವಯುಜ ವರ್ಷಾಶ್ವ ದಳದ
ಹೇಷಾ ರವದ ಘೋಷಂ!. . . ಆಲಿಸುತ್ತಿರ್ದಂತೆ,
ಅರಳಿದುವು ಕಣ್ಣಾಲಿ: ಘೋರಾಂಧಕಾರದಾ
ಸಾಗರದಿ ತೇಲಿ ಬಹ ಹನಿಮಿಂಚಿನಂತೆವೋಲ್,
ಮಿಂಚುಂಬುಳೊಂದೊಯ್ಯನೊಯ್ಯನೆಯೆ ಪೊಕ್ಕುದಾ
ಕಗ್ಗತ್ತಲೆಯ ಗವಿಗೆ. ತೇಲುತೀಜುತೆ ಮೆಲ್ಲ
ಮೆಲ್ಲನೆಯೆ ಹಾರಾಡಿ ನಲಿದಾಡಿತಲ್ಲಲ್ಲಿ,
ಮಿಂಚಿನ ಹನಿಯ ಚೆಲ್ಲಿ. ಮಿಂಚಿನ ಹನಿಯ ಸೋರ್ವ
ಮಿಂಚುಂಬನಿಯ ಪೋಲ್ವ ಮಿಂಚುಂಬುಳುವನಕ್ಷಿ
ಸೋಲ್ವಿನಂ ನೋಡಿ, ರಾಮನ ಕಣ್ಗೆ ಹನಿ ಮೂಡಿ,
ತೊಯ್ದತ್ತು ಕೆನ್ನೆ: ತೆಕ್ಕನೆ ತುಂಬಿದುದು ಶಾಂತಿ
ತನ್ನಾತ್ಮಮಂ! ಮತ್ತೆಮತ್ತೆ ನೋಡಿದನದಂ,
ಸಾಮಾನ್ಯಮಂ, ಆ ಅನಿರ್ವಚನೀಯ ದೃಶ್ಯಮಂ!
ಕುಳ್ಳಿರ್ದ ಮಳೆಗಾಲಮೆದ್ದು ನಿಂತುದು ತುದಿಯ
ಕಾಲಿನಲಿ. ನೂಲ್‌ಸೋನೆಯಾ ತೆರೆಮರೆಯನೆತ್ತಲ್ಕೆ

ಶೈಲವರನಕೊ, ಕಾಣಿಸಿತ್ತಾತನೆರ್ದೆಗೊರಗಿ
ರಮಿಸಿರ್ದ ಕಾನನ ವಧೂ ಶ್ಯಾಮಲಾಂಬರಂ!
ಲಂಬಮಾನಂ ಸೋರ್ವ ಮುತ್ತಿನ ಸರಗಳಂತೆ
ಕಾವಿಯನುಳಿದ ಮಲೆಯ ತೊರೆಯ ನೀರ್‌ಬೀಳಗಳ್
ಕಣ್‌ಸೆಳೆದುವಲ್ಲಲ್ಲಿ. ಕೇದಗೆಗೆ ಮುಪ್ಪಡಸಿ,
ಬೀತುದೈ ಸೀತಾಳಿ ಹೂ. ಬಾನ್‌ಬಯಲೊಳಿರ್ದ
ಮೋಡಮೋರೆಗೆ ಕರ್ಪುವೋಗಿ, ಬೆಳ್ಪಿನ ನೆಳಲ್
ಸುಳಿದುದಲ್ಲಲ್ಲಿ. ನಿಸ್ತೇಜನಾಗಿರ್ದ ರವಿ
ಘನವನಾಂತರ ವಾಸಮಂ ಮುಗಿಸಿ ಮರುಳುತಿರೆ,
ಮೇಘಸಂಧಿಗಳಿಂದೆ, ಮುಸುಕೆತ್ತಿ, ನಸುನಾಣ್ಚಿ,
ಮೊಗಕೆ ನಾಣ್‌ಬೆಳ್ಪೇರಿದಪರಿಚಿತಳಂತೆವೋಲ್
ಇಣಿಕಿತು ಗತೋಷ್ಣಾತಪಂ. ಪಾಲ್ತುಂಬಿ ತುಳ್ಕಿ
ಗರುಕೆಪಚ್ಚೆಗೆ ಸೋರ್ವ ಕೊಡಗೆಚ್ಚಲಿನ ಗೋವು
ಹೊಸಬಿಸಿಲ ಸೋಂಕಿಂಗೆ ಸೊಗಸಿ ಮೆಯ್ ಕಾಯಿಸುತೆ
ಗಿರಿಸಾನು ಶಾದ್ವಲದಿ ನಿಂತು, ಬಾಲವನೆತ್ತಿ
ಕುಣಿದೋಡಿ ಬಂದು ತನ್ನೆಳಮುದ್ದುಮೋರೆಯಂ
ತಾಯ್ತನಕೆ ಪಡಿಯೆಣೆಯ ಮೆತ್ತೆಗೆಚ್ಚಲ್ಗಿಡಿದು,
ಜೊಲ್ಲುರ್ಕೆ, ಚಪ್ಪರಿಸಿ ಮೊಲೆಯನುಣ್ಬ ಕರುವಂ
ನೆಕ್ಕಿತಕ್ಕರೆಗೆ. ಲೋಕದ ಕಿವಿಗೆ ದುರ್ದಿನಂ
ಕೊನೆಮುಟ್ಟಿದತ್ತೆಂಬ ಮಂಗಳದ ವಾರ್ತೆಯಂ
ಡಂಗುರಂಬೊಯ್ಸಿದುದು ಪಕ್ಷಿಗೀತಂ. . . ಮತ್ತದೇನ್?
ಮತ್ತೆ ಅದೊ ಕೇಳ್ದತ್ತು ಮತ್ತೊಂದು ಡಂಗುರಂ!
ಬಡಿದ ಚಂಡೆಯ ರವದ ಸಿಡಿಲಿಗೆ ಪ್ರಕಂಪಿಸುತೆ
ಗುಡುಗಿದುವು ಗಿರಿಬಂಡೆ. ಮದ್ದಳೆಯ ಸದ್ದಿಂಗೆ
ದಿಗ್ಗೆಂದು ಬೆರ್ಚಿ ಮಲೆದಲೆದೂಗಿದುದು ಧೀರ
ಕಿಷ್ಕಿಂಧೆ. ತಲ್ಲಣಿಸಿತಾಸೆಯುಂ ಸಿಂಹಸಮ
ಭೇರೀರವಂ. ಕೇಳ್, ನೆಗೆದುದಡವಿಯಿಂದದ್ರಿಗಾ
ಅದ್ರಿಯಿಂದಾಗಸಕೆ; ಚಿಮ್ಮಿತು ರವಿಸ್ಪರ್ಧಿ
ತಾನಾಗಿ; ಧುಮುಕಿತು ಧರಿತ್ರಿಗಲ್ಲಿಂ; ಮತ್ತೆ
ಧೀಂಕಿಟ್ಟುದಭ್ರಮಂಡಲ ಯಾತ್ರಿ; ತಿರುತಿರುಗಿ
ಪೊಕ್ಕುದು ಗುಹಾಲೋಕಂಗಳಂ; ಮತ್ತೆಮತ್ತೆ

ಗಿರಿ ವಿಪಿನ ಕಂದರ ವಸುಂಧರಾ ವ್ಯೋಮಂಗಳಂ
ತಿರ್ರನೆ ತಿರುಗಿತಿರುಗಿ, ಸಾರ್ದುದು ಸರಿತ್ಪತಿಯ
ಸೀಮಾ ದಿಗಂತಮಂ ವಾರ್ಧಿಘೋಷಸ್ಪರ್ಧಿಯಾ
ಸುಗ್ರೀವ ಡಿಂಡಿಮಾಜ್ಞೆ!
ಕೇಳ್ದರಾ ಧ್ವಾನಮಂ
ರಾಮಲಕ್ಷ್ಮಣರುರ್ಕ್ಕಿವಾನಂದದಿಂದುರ್ಬ್ಬಿಯುಂ
ಸುಯ್ವು ದೀರ್ಘೋಚ್ಛ್ವಾಸದಿಂ. ವಿಷಣ್ಣತೆ ಮಾಣ್ದುದೈ,
ಮೈದೋರಿತ್ತೈ ಸುಪ್ರಸನ್ನತೆ ಜಗನ್ಮುಖಕೆ.
ಮೆರೆದುದು ಶರತ್ಸಮಯಮಬಲವರ್ಷರ್ತುವಂ
ಗೆಲಿದದರ ಸಿರಿಯನಿತುಮಂ ಕವರ್ದವೋಲ್. ಗಿರಿಶಿರದಿ
ನಿಂತು ಲಕ್ಷ್ಮಣಗಿಂತು ದಾಶರಥಿ: "ಸೌಮಿತ್ರಿ, ಕಾಣ್,
ಕಜ್ಜಕನುವಾಗುತಿದೆ ವಾನರ ಮಹಾ ದಳಂ.
ಕೇಳದೊ ಧಳಂ ಧಳಂ ಭೇರೀರವಂ: ಭೂಮಿ
ಕಂಪಿಸಿತ್ತೆನೆ ತಲ್ಲಣಿಸುತಿವೆ ಗಿರಿಯ ಬಂಡೆ.
ನಾದಕೆ ಸಸಂಭ್ರಮಂ ಗದಗದಿಸಿತೆನೆ ಜಗತ್-
ಪ್ರಾಣಮದೊ ಸುಸ್ಪಂದಿಸಿದೆ ವಾಯುಮಂಡಲಂ.
ಮದವಳಿದ ಗಜದಂತೆ ಶಾಂತವೇಗಗಳಾಗಿ
ತೇಲುತಿವೆ ದಂತಿಯೊಡ್ಡಂ ಪೋಲ್ವ ಜೀಮೂತಗಳ್
ಪಂಕ್ತಿ. ಸೌಮ್ಯತೆಯನಾಂತಿಹುದು ವೃಷ್ಟಿವಾತಂ
ಪಿಂತಣ ಮಹಾರಭಸಮಂ ತ್ಯಜಿಸಿ. ಮಳೆಯ ಕೆಳೆ
ಕೆಟ್ಟುದಕೆ ಕಳೆಗೆಟ್ಟು ಜಾನಿಸುತ್ತಿದೆ ಬರ್ಹಿ ತಾನ್,
ಅದೊ, ಮರದ ಬಲ್ಗೊಂಬೆಯೇರಿ. ನೀರಿಳಿದು
ಕೃಶವಾಗಿ ಕೊರಕಲೊಡಲಿನ ದಡದ ವಕ್ರತೆಗೆ
ನಾಚಿದಂದದಿ ಹರಿಯುತಿದೆ ಹಳ್ಳದ ಹೊನಲ್.
ಕೆಸರಾರಿದಾ ಮಳಲ ದಿಣ್ಣೆಯೊಳ್ ನೋಡೆಂತು
ಲಿಪಿ ಕೆತ್ತಿದೋಲ್ ಮುದ್ರೆಯೊತ್ತಿದೆ ಹಕ್ಕಿಹಜ್ಜೆ.
ಚಾರುತನ್ವಂಗಿ ಮೃಗಶಾಬಾಕ್ಷಿ ಜನಕಜಾ
ಸ್ಮೃತಿಗೆ ಪ್ರತಿಕೃತಿಯಾಗಿ, ಅಗೊ, ಅಂತರಿಕ್ಷದಲಿ,
ಕೊರಳಿಂ ಜಗುಳ್ದ ಮಾಲೆಯೆನಲ್ಕೆ, ಹಾರುತಿದೆ
ಚಾರು ಸಾರಸ ತೋರಣಂ. . . ದಿಟಂ, ಸೌಮಿತ್ರಿ,
ವಾನರೇಂದ್ರಾಜ್ಞಾ ಮಹಾಧ್ವನಿಗೆ ಚೇತರಿಸಿ

ಚಿಮ್ಮುತಿದೆ ಲೋಕಹೃದಯಂ: ಬಾಳ್ಗೆ! ಬಾಳ್ಗೆ, ಮೇಣ್
ಗೆಲ್ಗೆ ಸುಗ್ರೀವಮಿತ್ರಂ!" ಧಳಂ, ಧಳಂ ಧಳಂ,
ಬಂದುದಾ ಭೇರೀ ರವಂ; ಸ್ಪಂದಿಸಿತು ಪೃಥ್ವಿ
ತನ್ನ ಕನ್ಯಾ ಕ್ಷೇಮವಾರ್ತೆಯಂ ಕೇಳ್ವಂತೆವೋಲ್.
ಪರಮ ಗೌರವ ಮೂರ್ತಿ, ಸರ್ವೋಚ್ಚ ಸೇನಾನಿ,
ವಾನರ ಪರಾಕ್ರಮ ಸಮುದ್ರಂಗೆ, ನೀಲಂಗೆ
ಬೆಸಸಿದನ್ ಭಾಸ್ಕರ ಭವಂ. ತಲೆಹೊಣೆಯ ಬೆಲೆಯ
ತಮ್ಮರಸನಾಣೆಯಂ ಪೊತ್ತು, ತಲೆಯಾಳುಗಳ್
ಪರಿದರಂಬುಧಿವರೆಗೆ, ಸಾರುತೆ ಕಪಿಧ್ವಜಂ ತಾಂ
ಮೆರೆವ ನಾಡೊಡೆಯರೆಲ್ಲರ್ಗೆ ಕಟ್ಟಾಜ್ಞೆಯಂ.
ಮೂಡಲಿಂ ಪಡುವಲಿಂ ಬಡಗಲಿಂ ತೆಂಕಲಿಂ
ರಾಮಕಾರ್ಯಕೆ ದಂಡುನೆರೆದರ್ ಕಪಿಧ್ವಜರ್,
ಲಕ್ಷೋಪಲಕ್ಷ ಕೋಟ್ಯನುಕೋಟಿ. ಕಿಕ್ಕಿರಿದು
ತುಂಬಿ ತುಳ್ಕಿದ ಸೇನೆ, ಕಿಷ್ಕಿಂಧೆಯಂ ಬಳಸಿ
ಪರ್ವಿದದ್ರಿಯ ಸಾನು ಕಂದರಪ್ರಾಂತಮಂ
ಸಂಕ್ರಮಿಸಿ, ಬಿಟ್ಟುದು ತನ್ನ ಬೀಡಾರಮಂ:
ವರ್ಷದಿಂ
ವರ್ಷಮೆಲ್ಲಂ ತೊಯ್ದು, ಆ್ಯಡಂ ಶಿಖರದಿಂದೆ
ಶೋಭಿಸಿದೆ ದಾಕ್ಷಿಣಾಟ್ಲಾಂಟಿಕಾ ದ್ವೀಪೋತ್ತಮಂ,
ಫಾಕ್‌ಲೆಂಡ್. ನವೀನ ಭೂ ಅನ್ವೇಷಿ ನಾವಿಕಂ
ತೀರಮಂ ಬಳಿಸಾರ್ದು, ನೋಳ್ಪನಚ್ಚರಿಯಿಂದೆ
ಏರ್ದು ನೌಕಾಧ್ವಜಸ್ತಂಭದೌನ್ನತ್ಯಮಂ.
ಏಂ ದೃಶ್ಯಮಾ ಚಿತ್ರಂ! ಮಾನವರೊ? ಪಕ್ಷಿಗಳೊ?
ಪ್ರಾಣಿಗಳೊ? ದಂಡೊ ತಂಡವೊ ಹಿಂಡೊ? ನಾವಿಕಂ
ಬೆರಗುವೆರಸಿದ ಭೀತಿಯಿಂ ನೋಡುವನು ಮತ್ತೆ
ಮತ್ತೆ. ಸೋಲ್ವನ್ನೆಗಂ ಕಣ್ಣು, ಪರಿವನ್ನೆಗಂ
ದಿಟ್ಟಿ, ತಗ್ಗುಬ್ಬುಗಳನೆಲ್ಲಮಂ ತುಂಬುತಾ
ದ್ವೀಪವಿಸ್ತೀರ್ಣಮಂ, ದಶದಶ ಸಹಸ್ರದಿಂ,
ಪೆಂಗುಯಿನ್ ಪಕ್ಷಿವೃಂದಂ ರಾಶಿರಾಶಿಯಿಂ
ಶತಕೋಟಿ ಸಾಂದ್ರಮೆಸೆದಪುದಜಸ್ರಂ.—ಅಂತೆವೋಲ್
ಕಿಕ್ಕಿರಿದುದತ್ಯತಿ ಅಸಂಖ್ಯ ವಾನರ ಸೇನೆಗಳ್

ಕಿಷ್ಕಿಂಧೆಯಂ ತುಂಬಿ, ಸುತ್ತಿ.
ಐತಂದನಯ್
ನೀಲಾಂಜನೇಯ ಜಾಂಬವ ನಳಾಂಗದರೊಡನೆ
ಮಾಲ್ಯವತ್ ಪರ್ವತದ ಪ್ರಸ್ರವಣ ಶಿಖರಕ್ಕೆ
ಸುಗ್ರೀವನುತ್ಸಾಹದಿಂ, ವಾನರ ವಾದ್ಯ ವಿತತಿ
ವೆರಸಿ. ಶರದಾಗಮನಕೆಂತು ಮೋಡಂಗಪ್ಪು
ತೊಲಗಿದಪುದಂತೆ ಮೂಡಿದುದು ರಾಮನ ಮನಕೆ
ನಿಶ್ಶಂಕೆ. ವಾನರೇಂದ್ರಂ ಬಿನ್ನವಿಸೆ, ಮಹಾ
ಸೈನ್ಯದಾಯತವನೀಕ್ಷಿಸಲೆಂದು ಗಮಿಸಿದರ್
ದಶರಥ ಮಹಾರಾಜ ಸುತರಿರ್ವರುಂ. ಓ ಏಳು;
ಹೇಳು, ವಾಣಿಯ ಕಯ್ಯ ವೀಣೆಯೆ, ಕಿಕ್ಕಿಂಧೆಯೊಳ್
ನೆರೆದ ವಾನರ ಕುಲದ ವೀರರಾರಾರೆಂದು. –
ರಾಮಂಗೆ ರವಿಸುತಂ ವರ್ಣಿಸಿದವೋಲ್. ದೇವಿ,
ವಿವರಮಂ ವೇದಿಸಲ್ ನಿನಗೆ ಪೊಳ್ತಿಲ್ಲದಿರೆ,
(ಪೊಳ್ತಿಲ್ಲಮದು ವಲಂ. ದೇವಿಯನ್ವೇಷಣೆಗೆ
ತವಕಿಸಿದೆ ಬಗೆ. ಬಲ್ಲೆನಾದೊಡಂ) ಪೇಳೆಮಗೆ
ನಾಯಕ ಮಹಾ ಮುಖ್ಯರಂ!
ವಾನರೇಶ್ವರಂ
ಕೋಸಲೇಶ್ವರನೊಡನೆ, ಸೇನಾನಿಯಿಂ ಸಚಿವ
ಸನ್ಮಿತ್ರರಿಂ ಕೂಡಿ, ಸೈನ್ಯಾನುವೀಕ್ಷಣೆಗೆ
ಬಂದಪ್ಪನೆಂದು ಪರ್ವಿತು ವಾರ್ತೆ ದಳದಿಂದೆ
ದಳಕೆ, ಡಂಗುರಂಬೋಲ್. ಹರ್ಷವಾತಾಹತಿಗೆ
ವೀಚಿ ಸಂಕ್ಷೋಭಿಸಿತ್ತುರ್ಕಿತೆ ಕಪಿಧ್ವಜಿನಿ.
ವಿವಿಧ ವೇಷದ ವಿವಿಧ ವರ್ಣದ ಅಲಂಕೃತಿಯ
ಆಕೃತಿಯ ವನಚರ ಸಮಷ್ಟಿ, ತಮ್ಮುನ್ನತಿಕೆ
ತೋರ್ಪವೋಲಾಯೋಜನಂಗೊಂಡು, ನಿಂದುದಾ
ದಿಗ್‌ದೃಷ್ಟಿಯಾಗಿ.
ದಶಕೋಟಿ ವಾನರ ಚಮೂ
ನಾಯಕಂ ಸುಗ್ರೀವ ಸುಪ್ರಿಯಂ ದಧಿಮುಖನ
ದಳದೊಳೊರ್ವಂ ವಹ್ನಿನಾಮಕಂ, ಸಾಮಾನ್ಯ
ಸೈನಿಕಂ, ಪುಲಿದೊವಲಿನಂಗಿಯಿಂ ಗುಲುಗುಂಜಿ

ಹಾರದಿಂ ಕಣ್ಣುಕಣ್ಣಿನ ಹೀಲಿಮುಡಿಯಿಂದೆ,
ದಿಗ್ಗಜ ಸ್ಮರಣೆಯಂ ತರ್ಪ ಬೃಹದಾಕೃತಿಯ
ಧೀರತನುವಿಂದೆ ಮೆರೆವೊಂ; ತನ್ನ ಬಳಿಯಿರ್ದ
ಕುಳ್ಳೊಡಲ ಕೆಳೆಯಂಗೆ, ರಂಹನೆಂಬಾತಂಗೆ,
"ಅಕೊ ಅಲ್ಲಿ, ಆ ಬೆಟ್ಟದೋರೆಯೊಳ್!" ಎಂದರ್ಧಮಂ
ನುಡಿದತ್ತ ಕಣ್ಣಾದನಿತ್ತ ರಂಹಂ ತನ್ನ
ಕೊರಳಂ ನಿಮಿರಿ ನೋಡಿ ಕಾಣದಿರೆ, ಹಾತೊರೆದು
ಮಿತ್ರನ ಭುಜವನಾಂತು ತುದಿವೆರಳ್ಗಳೊಳ್ ನಿಂತು
ನಿಳ್ಕಿಯುಂ ಕಾಣದಿರೆ, ತನ್ನ ಗಾತ್ರಕೆ ತಾನೆ
ಕಿನಿಸಿಯುಂ ಪೇಸಿಯುಂ ಕುಪ್ಪಳಿಸಿ ನೆಗೆದಡರಿ
ಬಳಿಯ ಬಂಡೆಯ ನೆತ್ತಿಗೇರಿ ಕಂಡನ್ ತನ್ನ
ತೃಪ್ತಿಯಂಃ ನೇಸರೆಳಗದಿರ್ ಪೊನ್‌ಕುಂಚದಿಂ
ಬಿಸಿಲನೆರಚಿರೆ, ಬೆಟ್ಟದೋರೆಯ ಗರುಕೆಪಸುರ್
ಪಚ್ಚೆವಾಸಿದ ಪಸಲೆಯೊಳ್ ನೀಳ್ದ ನೆಳಲ್ವೆರಸಿ
ಬರುತಿರ್ದರಂ! ಮುಳುಗಿಸಿತು ಪಕ್ಷಿಗೀತಮಂ
ರಣಗೊಳಲಿನಿಂಚರಂ; ಮುಳುಗಿಸಿತದಂ ಕೂಡೆ
ಘೇ ಎಂಬ ಕೋಟಿ ಸೇನಾ ಕಂಠ ನಿರ್ಘೋಷ;
ಮುಳುಗಿಸಿತ್ತನಿತುಮಂ ಸಾಮೂಹಿಕಾನಂದ
ಮೂರ್ಛೆ. ಬಂಡೆಯನೇರ್ದ ಕುಬ್ಜಂಗೆ ರಂಹಂಗೆ
ದೀರ್ಘೋನ್ನತಂ ವಹ್ನಿ: "ವಾನರೇಂದ್ರನ ಬಲಕೆ
ಬರ್ಪಾತನಾ ಮಹಾಪುರುಷನಯ್!"
                                        "ಕಾಡಿಡಿದು
ಪಳುಮುಚ್ಚಿದರಮನೆಯ ಸಿರಿಯಂತೆ ತೋರ್ಪನಾ
ತೇಜಸ್ವಿ. ಕೂದಲ್ ಬೆಳೆದ ಮೊಗಂ; ನಾರುಡೆಯ
ಮೆಯ್; ಜಟಾಧಾರಿ!"
                              "ಸೀತಾನಾಥನ್; ಇಂದವನ್
ವ್ರತಿಯಲ್ತೆ?"
                        "ಸಾರ್ಥಕಂ ನಾಂ ಬಂದುದೀತಂಗೆ
ನಮ್ಮ ಬಾಳಂ ಬೇಳ್ಪುದೊಂದ್ಯೆಸೆ ಸಯ್ಪುಗಜ್ಜಮ್!"
"ಅಲ್ತೆ?–ಕಾಣ್, ಪಕ್ಕದೊಳಿರ್ಪನಾತನ ಸಹೋದರಂ
ಲಕ್ಷ್ಮಣಂ. ಕಾಣ್ ಆತನೊಂದು ನಿಲವಿನ ಭಂಗಿ!

ಪೂರ್ವ ಜನ್ಮದ ಪುಣ್ಯಮೈಸೆ ನಾಮಿನ್ನರಂ
ಬೆರಸಿ ರಕ್ಕಸರೊಡನೆ  ಕಾದುವೆಮ್! ಧನ್ಯರಾಮ್!''
   ಮಾತಾಡುತಿರಲಿತ್ತಲಿಂತಿಂತು ಸೈನಿಕರ್,
ಸುಗ್ರೀವನತ್ತಲಾ ಧರಣಿಜಾ ನಾಥಂಗೆ
ಬೆಟ್ಟದೆತ್ತರದಿಂದೆ ಬಿತ್ತರಿಸಿದನ್ ಬೆರಳ್
ತೋರಿಃ ''ನಿನ್ನ ಸೇವೆಗೆ ನೆರೆದ, ಹೇ ದಾಶರಥಿ,
ನೋಡಯ್, ಕಪಿಧ್ವಜ ಚಮೂ ಸಮೂಹಂಗಳಂಃ
ಪರ್ವತಂಬೋಲ್ ಸುಸ್ಥಿರಂ; ರಣೋತ್ಸಾಹದಿಂ
ಸಂಭ್ರಮೋಚ್ಛ್ವಾಸ ಸಂಕ್ಷೋಭಿತಂ. ಒರ್‌ದಳಂ
ಈ ವೀರರೋರೊರ್ವರುಂ.'' ನೋಡಿದನ್, ಕಣ್‌ತುಂಬಿ
ನೋಡಿದನ್, ಸುಯ್ದನೆರ್ದೆ ಹಿಗ್ಗಿ ದಶರಥಸೂನು; ಮೇಣ್
ನೆನೆದಾಲಿ ಸೋರ್ವಿನಂ ಬಿಗಿದಪ್ಪಿದನ್ ಮಿತ್ರನಾ
ಕಪಿಕೇತನನ ಗಾತ್ರಮಂ. ರವಿತನೂಜಂಗೆ, ಕೇಳ್,
ಪುಲಕಿಸಿತು ಮೆಯ್, ಸೋಂಕೆ ಸೀತಾಪತಿಯ ಕಯ್ಯ
ಸುಖಮೈತ್ರಿ. ಮುಂಬರಿಸಿದನ್ ಸೈನ್ಯ ವಿವರಮಂ
ವಿಗಳಿತ ಸುಖರಸಾಶ್ರುಃ ''ವಿಂಧ್ಯ ಹೈಮಾಚಲರ್,
ಕೈಲಾಸಪರ್ವತರ್, ಧವಳಗಿರಿಯರ್, ಧೂಮ್ರ
ಗಿರಿಯರ್, ಮಹೇಂದ್ರಗಿರಿಯರ್, ಪ್ರಾಚ್ಯಪರ್ವತರ್,
ಮೇಣ್ ಅಸ್ತಗಿರಿ ಮಲಯ ಮೇರು ಸಹ್ಯಾದ್ರಿಯರ್,
ನಾನಾ ವನದ ನಾನಾಚಲದ ಕಪಿಧ್ವಜರ್
ಕೋಟಿಯಕ್ಷೌಹಿಣಿಯ ಸಂಖ್ಯೆಯಿಂ, ಹೇ ದೇವ,
ನಿನ್ನವಸರಕೆ ನೆರೆದು ಪಾರುತಿಹರಾಜ್ಞೆಯಂ.
ಓ ಅಲ್ಲಿ, ಆ ಪರ್ವತದ ನೆಳಲ್ ಕೊಡೆವಿಡಿದ
ವಿರಳಕುಂಜದ ಕಣಿವೆಯಂಗಣದೊಳಿರ್ಪವಂ
ದಶಕೋಟಿ ವಾನರ ಚಮೂನಾಯಕಂಃ ಪೆಸರ್
ಶತಬಲಿ; ಮಹಾಕಲಿ; ನನಗೆ ಮಿತ್ರನತಿಹಿತಂ.
ಕಾಮರೂಪಿಗಳಿಂದೆ ಗಗನ ಗಾಮಿಗಳಿಂದೆ
ಶ್ರೀಮಂತಮಾಗಿರ್ಪುದಾತನ ಬಲಂ. . . ನೋಡಲ್ಲಿ,
ಆ ಭೂಧರನ ಶಿಖರ ಪಂಕ್ತಿಗಳನೆಲ್ಲಮಂ
ಬಂಡೆಗಲ್ಲುಗಳೆನಲ್ಕಾಕ್ರಮಿಸಿ ನಿಂದಿರ್ಪ
ಸೈನ್ಯಕಧಿಪತಿ ಸುಷೇಣಂ; ಮಾವನಣ್ಣನಿಗೆ;

ಮೇಣತ್ತಿಗೆಗೆ ತಂದೆ . . . ಕಾಣ್ ಅತ್ತಲಾ ಸರಸ್
ತೀರಮಂ ಮುಚ್ಚಿ ನಿಂದಿರ್ಪುದೊರ್ ದಳಮ್; ಅದುವೆ
ರುಮೆಯಯ್ಯನೆನ್ನ ಮಾವನ ಬಲಂ. ಯೂಥಪತಿ
ತಾರನೆಂಬುದೆ ಕೀರ್ತಿಯಾತಂಗೆ. . . ಅದೊ ಅಲ್ಲಿ
ಕಾಣ್ಬುದಾ ಕಾನನಂ. ಪಸುರ್ವಣ್ಣಮಂ ಮೆಯ್ಗೆ
ಲೇಪಿಸುತ್ತಡಗಿರ್ಪುದಡವಿ ಸೋಗಿಂದಲ್ಲಿ
ಕೇಸರಿವೆಸರ ಮಹಾವಾನರನ ಸೇನೆ. . .ಅದೊ,
ಇತ್ತಲಂಬುದಕಿರಿದು ಮೆರೆಯುತಿದೆ ಬಾವುಟಂ;
ಅದೆ ಗವಾಕ್ಷನ ಸೇನೆ. . .ಭಲ್ಲೂಕಕೇತನಂ
ನೋಡವನೆ ಧೂಮ್ರನೆಂಬೊನ್, ಬಲಾಢ್ಯಂ ಮಹಾ!. . .
ಶತಕೋಟಿ ಕಪಿನಾಯಕಂ ಗವಯನಾತನದೊ
ನಿಂದಿರ್ಪನದ್ರಿ ಮರೆಯಾಗೆ. . .ವಲೀಮುಖನಿವಂ,
ಸಾಗರಸ್ಪರ್ಧಿ!. . . ಭಲ್ಲೂಕ ಚಕ್ರೇಶನಿದೊ
ಪ್ರಾಚೀನನದ್ಭುತಂ, ಮಹಿಮಾನ್ವಿತಂ, ಮಹಾ
ಜಾಂಬವಂತಂ. ಗಜಾಜಿನದಿಂದಲಂಕೃತರ್
ಕೆಲರಾತನಾಳ್; ಸಿಂಹ ಚರ್ಮದಿಂ ಶೋಭಿತರ್
ಮತ್ತೆ ಕೆಲಬರ್; ಪುಲಿದೊವಲಿನಿಂ ಭಯಂಕರರ್
ಇನ್ ಕೆಲಂಬರ್!. . ."
"ದೇವ, ಇನ್ನುಳಿದ ಸೈನ್ಯಗಳ್
ಕಾಣವಿಲ್ಲಿಂ. ಬನ್ನಿಮಾ ನೆತ್ತಿಯೆತ್ತರಕೆ.
ತೋರ್ಪನೀ ಕಾಣ್ಕೆಗಿಂತಧಿಕತರ ದೃಶ್ಯಮಂ.
ನೀಂ ಕಂಡಿರಂಬುಧಿಯ ತೀರದಿನಿತಂ. ಮುಂದೆ
ಕಾಣ್ಬುದಾ ಸಾಕ್ಷಾತ್ ಮಹಾಂಭೋಧಿ!" ಇಂತೆಂದ
ಸೇನಾನಿಯುಂ ನೀಲನಂ ಬಟ್ಟೆದೋರ್ಪಂತೆ
ಬೆಸಸಿ ನಡೆದನ್ ಭಾಸ್ಕರಾತ್ಮಜಂ, ರಾಮನಂ ಮೇಣ್
ಬೆರಸಿ ಸೌಮಿತ್ರಿಯುಂ. ನಡೆದೇರ್ದರಾ ಗಿರಿಗೆ.
ರಾಮನಡಿದಾವರೆಗೆ ತನ್ನ ಹಣೆಮಣೆಯೊಡ್ಡಿ
ತಲೆ ನಿಮಿರ್ದುದಾ ಮೇಘಚುಂಬಿ ಶೃಂಗೋತ್ತಮಂ,
ಪೆರ್ಮೆಯಭಿಮಾನದಿಂ: ಕೊಡಗಿಗೆ ನಡೆದು, ಕಾವೇರಿ
ನದಿಯ ಮೂಲದ ತೀರ್ಥಮಂ ಮಿಂದು, ಮಡಿಯಾಗಿ,
ಬ್ರಹ್ಮಗಿರಿ ಶೃಂಗಕೇರುವ ಕಬ್ಬಿಗನ ಮನಂ

ತತ್ತರಿಪುದೆತ್ತರದ ಮೇಣ್ ಬಿತ್ತರದ ನೋಟಕ್ಕೆ
ಧುಮುಕಿ. ನಿದ್ದೆಯನುಳಿದು ಹಸಿದೆದ್ದ ಪರ್ವತದ
ತೆರೆವಾಯ ಪಾತಾಳದಾಕಳಿಕೆಗಳೊ ಹಲ್ಲೊ,
ಮೇಣ್ ಕಣಿವೆಯಾಳಗಳೊ ಕಲ್ಲೊ? ಪೇಳ್ದಡಲಾರೆ,
ತಾಯ್ ತಿಮಿತಿಮಿಂಗಿಲಗಳದರ ತಳದೊಳ್ ತಮ್ಮ
ಮರಿ ಮೊಮ್ಮರಿಗಳೊಡನೆ ಮಡಿದು ಬಿದ್ದುವೊ, ಅಲ್ಲ ಮೇಣ್
ಹೆಬ್ಬೆಟ್ಟ ಕಿಬ್ಬೆಟ್ಟ ಹೆಗ್ಗುಡ್ಡ ಕಿಗ್ಗುಡ್ಡ.
ಹೆಬ್ಬಂಡೆ ಕಿಬ್ಬಂಡೆಗಳ ತಂಡದಾಯಮೋ?
ಪಾತಾಳಮಂ ಪೊಕ್ಕು ದಾರಿ ತಪ್ಪುತ್ತಲೆವ
ಆಕಾಶ ಚೂರ್ಣಗಳೊ ಮೇಣಾವಿಮುಗಿಲುಗಳೊ?
ಪ್ರಳಯ ಪೂರ್ವದ ಪೆಡಂಭೂತದತಿ ವಿಸ್ತರದ
ಕಡಲ ಶೈವಾಲಮಾವರಿಸಿದಜಿನದ ಕೃತಿಯೊ
ಮೇಣ್ ಮಲೆಯ ಮೆಯ್ತುಂಬಿದಾರಣ್ಯ ವೈಭವವೊ?
ಗಗನ ಗಜದುದರಮಂ ತಿವಿವಿಳಾ ಖಡ್ಗಮೃಗ
ದಂಷ್ಟ್ರಸಮ ಶೃಂಗಗಳೊ ಮೇಣದ್ರಿ ಚೂಡಗಳೊ?
ಜಾರುವುದು ಕಣ್ಣಿಲ್ಲೆ; ಜಾರುವುದು ಬಗೆಯೆಲ್ಲೆ;
ಬ್ರಹ್ಮಗಿರಿ ಶೃಂಗಕೇರಿದ ಕಬ್ಬಿಗನ ಮನಂ,
ಪೂತ್ಕರಿಸಿ ಸೆಳೆವ ಬೊಮ್ಮದ ಸುಳಿಗೆ ಸಿಲ್ಕಿದೋಲ್,
ತತ್ತರಿಪುದೆತ್ತರದ ಮೇಣ್ ಬಿತ್ತರದ ನೋಟಕ್ಕೆ
ಧುಮುಕಿ.—ತತ್ತರಿಸಿತ್ತು ದಶರಥ ಸುತನ ಮನಂ
ತಾನಂತೆವೋಲ್, ಸಾನು ಕಂದರದದ್ರಿಸೀಮೆಯಂ
ತುಂಬಿದಾ ಗಿರಿಅರಣ್ಯಸ್ಪರ್ಧಿಯಂ ಕಾಣುತಾ
ಕಪಿಸೈನ್ಯ ವಾರ್ಧಿಯಂ!
                    ಸಿಂಧು ಮಹಿಮೆಯನಳೆಯೆ
ಪೇಳ್ ಪನಿಯೆಣಿಕೆ ಏಕೆ? ಮಹತೋ ಮಹೀಯಕ್ಕೆ
ಪಟ್ಟಿಯಲ್ಪತೆಯ ವಿವರಣೆಯ ಬಣ್ಣದ ನೆರಂ
ಬೇಕೆ? ಬಿಡು ಸಾಲ್ಗುಂ, ಓ ಕಲೆಯ ಲಲನೆಯ ಕಯ್ಯ
ವಲ್ಲಕಿಯೆ, ಪರುಟವಣೆ! ರಾಮ ಮೌನಕೆ ಮಿಗಿಲೆ, ಪೇಳ್,
ನಿನ್ನ ತಂತಿಯ ನಿಕ್ವಣಂ?—
                    ಬೆಟ್ಟದೊಳ್ ಕಾಡಿನೊಳ್
ಗಿರಿತಟದಿ ನದಿತಟದಿ ಕಣಿವೆಯಲಿ ಕೋಡಿನಲಿ

ತಿರುತಿರುಗಿ, ಬೀಡುಬಿಟ್ಟಿರ್ದ್ದಲ್ಲ ಪಡೆಗಳಂ
ಪಗಲ್ಯೆದುಮಿರುಳ್ಯೆದುಮವಲೋಕಿಸಿದರವರ್,
ಮೆಟ್ಟಿಕ್ಕುತಳೆವಂತೆವೋಲ್ ದಶಗ್ರೀವಾಯು
ರೇಖೆಯಂ. ಮುಖ್ಯರಂ ಕರೆದನಾರನೆಯ ಪಗಲ್
ಓಲಗಕೆ. ಪೆಸರ್ವೆತ್ತ ಬೀರರಂ ಪೆಸರ್ವಿಡಿದು
ಕರೆದು ಬೆಸಸಿದುದಿಂತು ಸುಗ್ರೀವನಾಜ್ಞೆ: "ಓ
ವಾನರ ಕುಲದ ಕೆಚ್ಚೆದೆಯ ಕಲಿಗಳಿರ, ಕೇಳಿ,
ಕಿವಿಗೊಟ್ಟು ಕೇಳಿ. ಲೋಕದೊಳೆಮ್ಮ ಕೀರ್ತಿಯಂ
ಶಾಶ್ವತಂ ಸ್ಥಾಪಿಸುವ ಕಾಲಮೊದಗಿಹುದಿಂದು
ನಮಗೆ. ಪುಣ್ಯಾತ್ಮ ದಶರಥ ಸುತನ ಪುಣ್ಯಸಮ
ಭಾರ್ಯೆಯಂ ಪಾಪಿ ರಾವಣನೊಯ್ದನಾತನಂ
ಪರಿಹರಿಸಿ, ಮಾತೆ ಸೀತೆಯನೆಮ್ಮ ಮಿತ್ರಂಗೆ
ದೊರಕಿಸುವುದೆಮ್ಮ ಸಯ್ಪಿನ ಪೂಣ್ಕೆ. ಮೊದಲೆಮಗೆ
ತಿಳಿಯವೇಳ್ಕುಂ ಲಂಕೆ. ಜೀವದಿಂದಿಹಳೊ ಮೇಣ್
ಪ್ರಾಣಮಂ ಪತ್ತುವಿಟ್ಟಳೊ ದೇವಿಯೆಂಬುದುಂ
ತಿಳಿಯವೇಳ್ಕೆಮಗೆ. ಮೇಣಾರ್ಯವನಿತೆಯನೆಲ್ಲಿ
ಆ ದೈತ್ಯ ತಸ್ಕರಂ ಬೈತಿಟ್ಟನೆಂಬುದುಂ
ನಮಗೊಳ್ಪಿತರಿವಕ್ಕುಮದರಿಂದೆ ನಮ್ಮಖಿಲಮೀ
ಸೈನ್ಯಂ ಪೊರಮಡಲ್ಕೆ ಮುನ್ನಮಾ ಸುದ್ದಿಯಂ
ತರಲೆಮ್ಮ ಬೇಹುಪಡೆಗಳನಟ್ಟೆ ತರಿಸಂದೆನಾಂ.
ಪ್ರಾಣಮಂ ಪುಲ್ಗೆಣಿಸಿ, ಪುಡುಕಿ, ಕಡುಗೆಯ್ಮೆಯಂ
ಸಾಧಿಸುವ ಕಡುಗಲಿಗಳ್ಯೆತನ್ನಿಮೇಳಿಮ್." ಎನೆ,
ಕುಳಿತವರನಾಂ ಕಾಣೆನಾ ನೆರೆದ ನೆರವಿಯೊಳ್;
ನೆಗೆದೆದ್ದರನಿಬರುಂ ನಾ ಮುಂದೆ ತಾ ಮುಂದೆ
ತಕಪಕ ಕುದಿವ ತವಕದಿಂದೆ! ಘೋಷಿಸಿತುರ್ಕ್ಕಿ
ಸುಗ್ರೀವವಾಣಿ: "ವಾನರ ಕುಲದ ಕೀರ್ತಿಗಳ್,
ಕುಳ್ಳಿರಿಮ್. ಧನ್ಯನೆಂ ನಿಮ್ಮನ್ನರಾಳ್ಗಳಂ,
ಬೀರಸಿರಿ ತೋಳ್ಗಳಂ, ಗೆಲ್‌ಸಿರಿಯ ಬಲಗೈಯ
ಕರವಾಳ್ಗಳಂ ಪಡೆದ ನಾಂ." ಮೌನ ವಾರಿಧಿಯಂತೆ
ನಿಮಿರಿಹ ಕುತೂಹಲಗಳೋಲಿರ್ದರೆಲ್ಲರಂ
ಕಣ್ಣೆರಗಿ ನೋಡಿ, ಕರೆದನ್ ಬಳಿಗೆ ವಿನತನಂ,

ಪರ್ವತ ಮಹಾ ಕಾಯನಂ, ಮೇಘಗಂಭೀರ
ಕಂಠನಂ, ಪಟುಭಟಶ್ರೇಷ್ಠನಂ. ಮೆಲ್ಲನೆಯೆ
ಮೇಲೆದ್ದು ಸಾರ್ದನಾ ಕಾರ್ಮೆಯ್ಯ ವಾನರಂ
ಚಲಿಸುವೋಲಂತೆ ಚಂದ್ರದ್ರೋಣ ಗಿರಿಚೂಡ
ಛಾಯೆ. ಕಪಿಕುಲ ಧೈರ್ಯ ಹೈಮಾಚಲಮೆ ಬಳಿಗೆ
ನಡೆತಂದು ನಿಂದವೋಲಿರ್ದ ಆ ವಿನತಂಗೆ,
ಕೇಳ್ದ ಗೋಷ್ಠಿಯ ಮೆಯ್ಗೆ ನವಿರೇಳೆ, ರವಿಸುತಂ
ಪೇಳ್ದನಾದೇಶಮಂ: "ಪಡೆವೆರಸಿ ನಡೆ, ಕಲಿಯೆ;
ಕೆತ್ತು ಕೀರ್ತಿಯ ಧವಳ ಲಿಖಿತಮಂ ನೀನುತ್ತರದ
ದಿಗ್ಭಿತ್ತಿಯೊಳ್; ಪುಡುಕು, ಬೆಳಕು ಕತ್ತಲೆ ಸುಳಿವ
ಸರ್ವತ್ರಮಂ. ತೆರಳು, ನಡೆ. ತಿಂಗಳೊಂದರೊಳ್
ಫಲಿತಮಂ ತಾ; ಕ್ಷೇಮದಿಂ ಮರಳಿ ಬಾ." ಕೂಡೆ
ಭಾರಾವನತಮಾದುದುನ್ನತ ವಿನತ ಶಿರಂ.
ಕಯ್ಮುಗಿದನಾಣತಿಗೆ. ವದನಮುದಯಾಚಲದಿ
ಮೂಡುತಿರೆ ಗೌರವಶ್ರೀ, ಕೃಪೆಗೆ ಹಿಗ್ಗುತ್ತೆ,
ನಗುತೆ ನಡೆದನು ತನ್ನ ತಾಣಕ್ಕೆ.
ಕಪಿನೃಪನ
ಕಣ್ಣರಿತು ಗುಂಜಾಭರಣ ಶೋಭಿ, ಲಘುದೀರ್ಘ
ದೇಹಿ, ಶತಬಲಿ ಮುಂಬರಿಯೆ, ಗರಿಯ ಹಗುರದಾ
ಗಗನಗಾಮಿಯನಿಂತು ಬೆಸಸಿದನು: "ಶೌರ್ಯನಿಧಿ,
ಧೈರ್ಯಾಬ್ಧಿ, ಲೇಪಿಸಯ್ ನಿನ್ನ ಜಸದಮೃತಮಂ
ಐರಾವತದ ಮೆಯ್ಗೆ. ನಡೆ ನೀನುದಯ ದಿಶೆಗೆ.
ದೇವಿ ಕಾಣಲಿ, ಕಾಣದಿರಲಿ ತಿಳಿ: ನೇತಿಯುಂ
ಸತ್ಯ ಸಾಕ್ಷಾತ್ಕಾರಕಿತಿಯಂತತುಲ ನೀತಿ.
ತಿಂಗಳೊಂದವಧಿ. ನಡೆ, ತೆರಳ್; ಸೊಗದಿಂ ಮರಳ್."
ತಲೆಬಾಗಿ ಪೋಗಿ ಶತಬಲಿ ವಿನತನೆಡೆಯಲ್ಲಿ
ನಿಲೆ, ನೀಳ್ದುದಡಕೆಯ ತೆಳ್ಪು ಬಗನಿಬಿಣ್ಪೆನೆಡೆ.
ಹೊಂಚಿ ಹಾರಿತು ಮತ್ತೆ ಸುಗ್ರೀವನಕ್ಷಿ. ಅದೊ
ಎರಗಿತೆನೆ ಇಲ್ಲಿ, ಹಾರಿತು ಮತ್ತೆ; ಎರಗಿತೆನೆ
ಅಲ್ಲಿ, ಏರಿತು ಮರಳಿ; ಕಡೆಗಿಳಿದುದಂಗದನ
ತಾಯ ತಂದೆಯ ಪೂಜ್ಯಸನ್ನಿಧಿಗೆ. ತಪನಜಂ

ಮೇಲೆಳ್ದು ನಡೆದನ್ ಸುಷೇಣನಿದಿರಿಗೆ; ನಿಂತು
ಕೈಮುಗಿದು ಬಿನ್ನಯ್ಸಿದನ್ ತನ್ನ ವಿನಯಮಂ.
ನೇಮಿಸಿದನಿನ್ನೂರು ಸಾಸಿರದ ಸೇನೆಯಂ
ಜತೆಗೆ. ಪಡುವಣ ದೆಸೆಗೆ ನಡೆಯಿಮೆಂದೋಲೈಸಿ
ಸುಡಿದು ವೀಳೆಯವಿತ್ತನಾ ಯುದ್ಧಸಿದ್ಧಂಗೆ,
ಮಂತ್ರೌಷಧಿಯ ಮಹಾ ವಿದಗ್ಧಂಗೆ.
ಬಡಗಣ್ಗೆ
ಮೂಡಣ್ಗೆ ಪಡುವಣ್ಗೆ ದೃಢಛಲದ ಕಲಿಗಳಂ
ನೇಮಿಸಿ ಮಹಾ ಬಲಿಗಳಂ, ವಾಲಿಯವರಜಂ
ಲಂಕೆಯಿಹ ತೆಂಕಣ್ಗೆ ಕರೆದನಯ್ ಐವರಂ,
ನೆಲದರಿಕೆವೆಸರಾಂತ ಸಿಡಿಲಾಳ್ಗಳಂ: ಮಹಾ
ಸೇನಾನಿ ನೀಲನಗ್ನಿಯ ಮಗಂ. ನೀಲತನು, ಕಾಣ್
ಬಂದನುರಿ ಸುತ್ತಿದಿರುಳಂತೆ ರಕ್ತಾಂಬರಂ.
ಕೆಂಡವನುಗುಳ್ವ ಕಡುಗೆಂಪೆಸೆವ ಗರಿ ಗಡಣದಿಂ
ಜ್ವಲಿಸಿತಾತನ ವಿಹಂಗಾಕೃತಿಯ ಶಿರತ್ರಂ,
ಪೂರ್ವಾದ್ರಿ ಫಾಲದೊಳುದಿಪ ಬಾಲರವಿಯಂತೆ.
ಕುಂಕುಮೋಜ್ವಲ ವರ್ಣದಿಂದುರಿವ ಕೇಸರದ
ಕೇಸರಿಯಜಿನಮೆಸೆದುದು ಭುಜಪ್ರದೇಶಮಂ
ಶೃಂಗರಿಸಿ. ದಂಡನಾಯಕ ಚಿಹ್ನೆ ಮಾತ್ರಕೆನೆ
ಸಂಗಗೊಂಡುದು ಬಾಹು ಕಾರುಕರ್ಮದ ಬೃಹದ್
ದಾರು ಗದೆಯಂ, ಭಾರಮಾತ್ರದಿಂದಶ್ರಮಂ
ಮದ್ದಾನೆ ಮಂಡೆಯಂ ನುಚ್ಚುನೂರ್ಗೈವುದಂ.
ನೀಲಂಗನಂತರಂ ಬಂದನಾ ಬ್ರಹ್ಮೋದ್ಭವಂ
ಜಾಂಬವಂತಂ. ಮಿಂಚುಗಪ್ಪಿನ ಕರಡಿದೊವಲಿಂ
ಮೆರೆವ ಮುಪ್ಪಿನ ಮೂರ್ತಿ. ನರೆ ಮೀಸೆ ಗಡ್ಡದಿಂ
ಪ್ರಾಚೀನತಾ ಪ್ರತಿಮನಪ್ರತಿಮನತ್ಯಂತ
ವಜ್ರ ಮುಷ್ಟಿಯ ಯುದ್ಧಪಂಡಿತಂ. ಸಮುದ್ರಮಂ
ಬಳಿಸಾರ್ದ ನಿಮ್ನಗೆಯವೋಲ್ ಗಂಭೀರ ರೂಪಿ.
ಕೆಮ್ಮುಗಿಲ ಬೈಗಿನಂಬರವಾಂತ ನೀಲನೆಡೆ
ನಿಂದನಾತಂ, ಮಹಾ ಮಹೀಧರಾಕೃತಿಯ ಘನ
ವನ ರಾತ್ರಿಯಂತೆ. ಚಂದ್ರೋದಯದ ಛಂದದಿಂ

ಶಾಂತಿಯಿಂದೈತಂದನಾಂಜನೇಯಂ, ಪವನ
ಸೂನು, ಅದೊ, ಜಾಂಬವಾನಂತರಂ! ಹೊಂಬಳದಿ
ಹೊಳಹಿನಂಗದ, ವಜ್ರಸಮ ತನು ಬಲಿಷ್ಠತೆಯ,
ವನಲತಾ ಶೋಭಿತ ಶಿರತ್ರನಂ; ಪುಲಿದೊವಲ
ಹೇಮರೋಮಂಬೊರೆದ ಕಪಿಚರ್ಮ ಕವಚದಾ
ದೀರ್ಘ ವಂಕಿಮ ನಾಸಿಕಾಕೃತಿಯ ವೈಖರಿಯ
ಮಂಗಳ ಮನೋಜ್ಞನಂ; ಯೋಗ ವಿಜ್ಞಾನಿಯಂ;
ವಾನರ ಮಹಾ ಪ್ರಾಜ್ಞನಂ ನೋಡಿ ಪೆರ್ಚಿತಾ
ನೆರವಿ ಜಯಕಂಠದಿಂ. ಗಗನ ಗಾಮಿಗಳಗ್ರ
ಗಾಮಿಯಂ, ಕಾಮರೂಪಿಗಳಗ್ರಗಣ್ಯನಂ,
ನಿಖಿಲ ಲೋಕಪ್ರಾಣಪುತ್ರನಂ, ಪುಣ್ಯದಿಂ
ಬ್ರಹ್ಮಚರ್ಯದೊಳಾರ್ಜಿಸಿದ ದೇವತೇಜನಂ,
ಪೂಜ್ಯನಂ ಕಂಡಾ ನೆರವಿ ನಮಸ್ಕರಿಸಿತೆನೆ, ಪೇಳ್,
ಹನುಮಗಾರೆಣೆ? ಹನುಮಗಾರೆಣೆ? ನಮೋನಮಃ!
ಹೇಳ್, ಹನುಮಗೆಣೆಯುಂಟೆ?–ಮಾರುತಿಯನಂತರಂ,
ಬೆಳ್ದಿಂಗಳಂ ಮೀರ್ದ ವಸನಧವಳಂ, ನಳಂ,
ಬಂದನದ್ಭುತ ವಾನರಂ. ಸೇರ್ದನನಿಲಜನ
ಪಕ್ಕಮಂ, ಯೌಗಿಕ ರಹಸ್ಯದೋಲನುಪಮಂ.
ಬಂದನಂಗದನಾತನಿಂಬಳಿಕಮುದಯರವಿ ತಾಂ
ಫಾಲ್ಗುಣವನೇರಿ ಬರ್ಪಂತೆವೋಲ್. ಯುವರಾಜನಂ,
ತರುಣ ವಪುವಂ, ಕಂಡು ಸಂತೋಷಿಸಿತು ಗೋಷ್ಠಿ.
ಹೊಗಳಿ ಸುಗ್ರೀವನಂ. ಪಂಚ ಶಿಖರಗಳಂತೆ
ಮೈದೋರಿದೈವರ್ಗೆ ವೀಳೆಯಂಗೊಟ್ಟನಿಂತಾ
ಕಪಿಕುಲಸ್ವಾಮಿ:
“ವಾನರ ಯಶಃ ಕಾವ್ಯಕ್ಕೆ,
ಮಹಿಮರಿರ, ಶುಭದ ನಾಂದಿಗಳಾಗಿ ಪೊರಮಡಿಮ್.
ನಿಮ್ಮಿಂದೆ, ವೀರರಿರ, ಕೀರ್ತಿವಿಂಧ್ಯೆಯ ಮೇಲೆ
ನಿಲ್ಗೆ ಕಿಷ್ಕಿಂಧೆ. ಕಾಲನ ಲಲಾಟಕೆ ನಿಮ್ಮ
ನಾಮಾಕ್ಷರಂ ಶಿಲಾಲಿಪಿತಿಲಕಮಪ್ಪಂತೆ
ತೆಂಕಲನರಸಿ ಬನ್ನಿ; ಲಂಕೆಯನರಸಿ ಬನ್ನಿ;
ತನ್ನಿಮರಸಿಯ ವಾರ್ತೆಯಂ, ಶಂಕೆಯಳಿವಂತೆ.

ಹೇ ಕಪಿಧ್ವಜ ಗೌರವಪ್ರಾಣ ಸೂತ್ರರಿರ,
ರಾಮನ ಪೆಸರಿನೊಡನೆ ನಮ್ಮ ಪೆಸರಂ ಬೆಸೆವ
ಸಯ್ಪಿಂಗಿದೆ ಮುಹೂರ್ತಂ. ಕೊಳ್ಳಲಮೃತಂ ನಮಗೆ
ಪಾಥೇಯಮಲ್ಲದಿರೆ ಕೋಟಿ ಕೀಟಗಳೊಡನೆ
ಸಾವೊಂದಲಾ? ಕಡೆಗಣಿಸೆ, ಕೋಟಿ ಕೀಟಕ್ಷುಧೆಗೆ
ಕಡೆಗುಣಿಸಲಾ? ಬೇರೆ ಫಲಮಂ ಕಾಣೆ ಜನುಮಕ್ಕೆ!"
ನಿಂದುದೊಂದರೆಚಣಂ ಸುಗ್ರೀವ ಗದ್ಗದಂ;
ಮತ್ತೆ ಮುಂಬರಿದುದಾ ಹರೀಶ್ವರನ ವಾಣಿ,
ಭಾವದ ಕರುಣರಸಕೆ ಕೇಳ್ದರೆಲ್ಲರ ಕಣ್ಣು
ತೊಯ್ವಂತೆ: "ಬಲ್ಲೆನಾಂ ನಿಮ್ಮೆಲ್ಲರಂ ಮಲೆವ
ದುರ್ದಮ್ಯ ದುರ್ಗಮತೆಯಂ, ಘೋರ ವಿಪಿನಾದ್ರಿ
ಕಂಟಕಿತ ಸಂಕಟದಾ; ಮೇಣಂತೆ ಬಲ್ಲೆನಾಂ
ನಿಮ್ಮ ಸಾಮರ್ಥ್ಯಮಂ. ದೇವಿಯಳಲಂ ನೆನೆಯೆ,
ಕೆಳೆಯನಳಲಂ ನೆನೆಯೆ, ನಮ್ಮಲ್ಪಮೀ ಕಷ್ಟಂ
ತಿಲಂ, ತೃಣಂ. ಕಷ್ಟಮಿಷ್ಟಂ, ಸುಖಮೆ ಸಂಕಟಂ,
ಬಂಧು ಮಿತ್ರರ್ ದುರ್ದಶೆಯೊಳಿರಲ್. ಪಾತಕನ್,
ಪ್ರೇಮಘಾತುಕನವನ್, ಸೀತೆಯಂ ಕದ್ದೊಯ್ದ
ರಾವಣನ್. ಸಾಮವನಿಗಿನ್ ಮಿಗಿಲ್ ಕೇಡಿಗರ್,
ಪರಿಹರಿಸದಿರೆ ಪಾಪಿಯನ್; ಮೇಣರಸಿ, ಕಾದಿ,
ಸೆರೆಬಿಡಿಸದಿರೆ ರಾಮರಾಣಿಯನ್. ನೋಡಿಮೀ
ಗಿರಿಪಂಕ್ತಿಯಿದೆ ಸಾಕ್ಷಿ. ನೋಡಿಮಾ ಸ್ವರ್ಗಾಕ್ಷಿ
ಸಾಕ್ಷಿಯಿದೆ, ಶರದಂತರಿಕ್ಷಂ. ಓ, ಪೊರಮಡಿಮ್,
ಪ್ಲವಂಗ ಕೇತನರಿರಾ, ಲೋಕಗೌರವ ಕಥಾ
ಕೃತಿಗೆ ನೀಂ ಸ್ಮೃತಿನಿಕೇತನರಾಗುವೋಲ್! ನಿಮಗೆ
ಸರ್ವ ಋಷಿ ಗುರು ದೇವ ಕೃಪೆಯಕ್ಕೆ! ಗೆಲಮಕ್ಕೆ!"
ವಿರಮಿಸಿದುದಾ ಪ್ಲವಗಪತಿ ಭಾಷಣಂ. ಕೂಡೆ
ನೆಗೆದುದು ವಿಯತ್ತಳಕೆ ವೀರಘೋಷಂ. ಮಹಾ
ಧ್ವನಿಯನನುರಣಿಸಿದತ್ತಾರಣ್ಯ ಭೂಧರಂ.
ಕಂಪಿಸಿತ್ತನುಕಂಪಿಸಿತ್ತನಿಲ ಮಂಡಲಂ.
ಮತ್ತೆ, ಪುಲಕಿಸಿತಖಿಲ ಕಿಷ್ಕಿಂಧೆ. ಪರೆದುದಯ್
ಬೆಟ್ಟದೋರೆಯ ಪಸುರಿನೋಲಗಂ. ಸರಿದುದಾ

ಸೈನಿಕಂ ತಂತಮ್ಮ ಪಾಳಯಕೆ, ಕರ್ತವ್ಯ
ಭಾರಮಂದೀಕೃತ ಗಮನದಿಂದೆ. ರುಮಾಪ್ರಿಯಂ
ಗಜನಂ ಗವಾಕ್ಷನಂ ಗವಯನಂ ದ್ವಿವಿದನಂ
ಶರಗುಲ್ಮನಂ ಸುಹೋತ್ರ ಶರಾರಿ ಋಷಭರಂ
ಗಂಧಮಾದನ ವಿಜಯ ಮೊದಲಪ್ಪ ಕೀನಾಶನಂ
ಮೀರ್ವದಟರಂ ಕೀಶನಾಥರನಾಂಜನೇಯಂಗೆ
ಜತೆವೇಳುತಿಂತೊರೆದನಾ ವಿರಾಟ್ ಪ್ರಾಜ್ಞಂಗೆ:
"ಕಪಿಕುಲ ಮಹಾವೀರ, ಓ ಸಮೀರ ಕುಮಾರ,
ನೀನೆಮ್ಮ ಬಾಳುಸಿರ್; ನೀನೆಮ್ಮ ಕುಲದ ಕಣ್;
ಬಲದ ಬಲ, ಛಲದ ಛಲ, ಮತ್ತೆ ಸಾಹಸದಚಲ
ಧೈರ್ಯಮುಂ ನೀನೆ. ತೆಂಕಣ ದಿಶೆಯೊಳಿದೆ ಲಂಕೆ.
ತಿಳಿದಿರ್ದೆನಣ್ಣನಿಂ. ಆ ಕತದಿನಾ ದಿಕ್ಕೆ
ರವಿಕುಲನ ಲಲನೆಯನ್ವೇಷಣೆಗೆ ತಾನಕ್ಕೆ
ಮುಖ್ಯಲಕ್ಷ್ಯಂ. ಜಗತ್‌ಪ್ರಿಯ ಪವನಸೂನುವಯ್
ನೀಂ. ನಿನಗೆ ಪೊಗಲಾರದೆಡೆಯಿಲ್ಲಮಾವಲ್ಲಿಯುಂ.
ಕಾಡಿನೊಳ್ ಕಣಿವೆಯೊಳ್, ಪಳುವಿನೊಳ್ ಪಸಲೆಯೊಳ್,
ಬಿಲಗಳೊಳ್ ಗುಹೆಗಳೊಳ್, ಭೂಮಿಯೊಳ್ ವ್ಯೋಮದೊಳ್,
ನಾಗ ನರ ದೇವತಾ ಗಂಧರ್ವ ಲೋಕದೊಳ್,
ನಿನಗೆ, ಪೊಗಲಾರದೆಡೆಯಿಲ್ಲಮೆಲ್ಲಿಯುಂ. ನೀಂ
ಪ್ರಾಣಜಂ ದೇಶಕಾಲಾನುವೃತ್ತಿಯ ನಯದಿ
ನಯಪಂಡಿತಂ. ನಿನಗೆ ಲೋಕತ್ರಯದೊಳರಿಯೆನಾಂ
ಬುದ್ಧಿಯೊಳ್ ಬಲದೊಳ್ ಪರಾಕ್ರಮದೊಳೆಣೆಗಳಂ!
ಬೇರಿಗೆರೆಯುವ ನೀರ್ ಕೊಂಬೆ ಕೊಂಬೆಯನೇರಿ
ಮರಮಂ ಪೊರೆವವೋಲ್ ನಿನಗೆರೆದುದೀ ವಾಗ್‌ಧಾರೆ
ಜೀವಾತುವಕ್ಕೆಲ್ಲರುಲ್ಲಸಕೆ. . . ಮೇಣ್ ದಾಶರಥಿ
ನಮ್ಮಾತ್ಮಮಿತ್ರನಿದೊ ಕೊಡುವನಾದೇಶಮಂ
ಮೇಣಭಿಜ್ಞಾನಮಂ..."
ಕೈಮುಗಿದ ಪವನಸುತನಂ
ಕೈವಿಡಿದನುಕ್ಕುವಕ್ಕರೆಯಿಂದೆ ರಾಘವೇಂದ್ರಂ.
ದಿಟ್ಟೆ ದಿಟ್ಟೆಯನಪ್ಪೆ ನೋಡಿದನಿನಿತುವೊಳ್ತು
ಕಣ್ಗೆ ಕಣ್ಣಿಟ್ಟು. ಪನಿ ಮೀಸೆದುಪ್ಪುಳ್ಗಿಳಿಯೆ

ಪೇಳ್ದನ್ ಸಗದ್ಗದಂ: ''ಕೊಳ್ಳಿದಂ, ಪ್ರಿಯಸುಹೃತ್,
ಈ ಅಂಗುಳೀಯಮಂ. ಬಲ್ಲಳೀ ಮುದ್ರೆಯಂ
ದೇವಿ. ಕರಣೇಯಮದರಿಂದಮೀ ಪೆಸರುಂಗುರಂ,
ಮೇಣಾನನುಕರಣೇಯಮುಂ ವಲಂ. ಜನಕಸುತೆ, ಕೇಳ್,
ಭಯಚಕಿತೆ. ನೀನಾಕೆಗಪರಿಚಿತನದು ಕತದಿ
ನಿನ್ನನಪನಂಬಿದೊಡೆ ತೋರ್ ಇದಂ, ಊರ್ಮಿಕಾ
ಅಭಿಜ್ಞಾನಮಂ. . .ಹೇ ಮಹಾಸತ್ತ್ವ, ಸರ್ವರುಂ
ನಿನಗೀವ ಗೌರವದಿನರಿತೆನಾಂ ನೀಂ ಮಹಾ
ಸತ್ತ್ವನೆಂಬಂತಸ್ಥಮಂ. ನಿನ್ನಿಂದಮೆನ್ನ
ಕಜ್ಜಂ ಸಫಲಮಪ್ಪುದೆಂದುಲಿಯುತಿರ್ಪುದಯ್
ಹೃದ್ವೀಣೆಯುಂ. ನಮಸ್ಕರಿಸಿ ಬೀಳ್ಕೊಳ್ವೆನಿದೊ,
ಹೇ ಮಹತ್ಕಾರ್ಯಪಟು; ನಿನಗೆ ಮಂಗಳಮಕ್ಕೆ,
ಮಾರ್ಗಮ್ ಸುಪಥಮಕ್ಕೆ! ನಿನ್ನನಪನಂಬಿದೊಡೆ
ನನ್ನ ಸೌಭಾಗ್ಯವತಿ. . .ಸೌಭಾಗ್ಯವತಿಯಲ್ತೆ
ನೀನಿದಂ ತೋರ್ಪಾಗಳಾಕೆ!. . .'' ಬಿಗಿದುದೊ ಕೊರಳ್;
ನಸು ನಡುಗುತಿರ್ದ ಕೈ ಇಳುಹಿದುದೊ ಮುದ್ರೆಯಂ
ಆಂಜನೇಯನ ನೀಡಿದಂಜಲಿಗೆ. ''ಧನ್ಯನಾಂ''
ಎಂದನಲ್ಲದೆ ಬೇರೆ ನುಡಿದನಿಲ್ಲೊಂದುಮಂ
ಆ ನಿಶಿತಮತಿ, ಮಿತಭಾಷಿ, ಯೋಗಿಗಳ ಯೋಗಿ,
ಪವನಾತ್ಮಜಂ, ಬ್ರಹ್ಮಸಂಚಾರಿ. ಶ್ರೀಮುದ್ರೆಯಂ
ತನ್ನ ವಕ್ಷದ ವಜ್ರರಕ್ಷೆಗೆ ಸಮರ್ಪಿಸುತೆ,
ತನ್ನನಪ್ಪಿದ ನೀಲದೇಹನಂ ಬಿಗಿದಪ್ಪಿದನ್;
ಬೀಳುಕೊಟ್ಟನ್ ಪರ್ವತಂ ಮಹಾಂಭೋಧಿಯಂ
ಬೀಳುಕೊಡುವಂತೆ: ದೆಸೆದೆಸೆಯ ದಿಗ್ದಂತಿ ಮೇಣ್
ಸುಗ್ರೀವನಾಜ್ಞಾಭಯಕೆ ಘೀಂಕರಿಸುವಂತೆ!

## ಸಂಚಿಕೆ ೧೦

# ಇರ್ದುದು ಮಹೇಂದ್ರಾಚಲಂ

ಓ, ಏಳ್, ವಿಪಂಚಿಯೆ, ಕಲಾಲತಾಂಗಿಯ ಬೆರಳ್
ತಳಿರ ಸೋಂಕಿನ ಸೊಮ್ಪು ಸಾಲ್ವುದೇನಿನ್ ನಿನಗೆ?
ಪ್ರಳಯ ಭೈರವ ಡಮರು ರೌರವಾವೇಶಮಂ
ಆಹ್ವಾನಗೆಯ್: ವಿನತನೈತಂದನೀರ್ಯೆದು
ಮೇಲ್ಯೆದು ದಿವಸಗಳೊಳುತ್ತರದೊಳೆತ್ತಲುಂ
ಆರ್ಯನರಸಿಯನರಸಿ ಅರಸಿ. ಪಿಂಮರಳ್ದುದಾ
ಶತಬಲಿಯತುಲ ಸೇನೆ ತಿಂಗಳ್ಗಿರಳ್ ಪಗಲ್
ಮುನ್ನಮವನಿಜೆಗಾಗಿ ಮೂಡು ದೆಸೆಯಂ ಸೋಸಿ
ರೋಸಿ. ತಿಂಗಳವಧಿಯ ಬಯ್ಗು ಕೊನೆಗಾಣ್ಬೆನಂ
ಬಂದನು ಸುಷೇಣನುಂ, ಮ್ಲಾನ ವದನಗ್ಲಾನಿ
ತನಗೆ ತಾನೊರೆಯಲಿತ್ಯರ್ಥಮಂ ವ್ಯರ್ಥಮಂ
ವರುಣಾಶೆಯಾ. ಬಂದುದೇಕಿಲ್ಲಮಿನ್ನುಮಾ
ದಕ್ಷಿಣ ದಿಶಾ ವಾರ್ತೆ? ತಿಂಗಳಾದತ್ತವಧಿ
ಮುಗಿಯಿತ್ತು. ಕಾತರದಿ ಕಳೆದುದಯ್ ಮರುದಿನಂ.
ಮತ್ತೊಂದು ದಿನಮುಂ ನಿರೀಕ್ಷಣೆಯ ತೀಕ್ಷ್ಣತೆಗೆ
ಬಲಿಯಾದುದಯ್: ಅಕ್ಕರೆಗೆ ಅತಿಶಂಕೆಯಲ್ತೆ?
ಭೀತಿ ಬಡಿದುದು ಸೂರ್ಯಸಂತತಿಯ ಮೂವರಿಗೆ!
ಹೋದನೆಲ್ಲಿಗೆ ನೀಲನ್? ಏನಾದನಂಜನಾ
ಪ್ರಿಯಸುತಂ? ಮತಿಗೆಟ್ಟನೇಂ ಮುದಿಯ ಜಾಂಬವಂ?
ವಾಲಿಯ ಕುಮಾರಂಗೆ ಗತಿರೋಧಮಡಸಿದುದೆ
ಯುವರಾಜಗಂಗದಗೆ ಕಲಿಗೆ? ಪೇಳಾ ನಳಂ
ಬೇಳ್ವೆಯಾದನೆ ರಕ್ಕಸರ ಬಲಿಗೆ? ಗಾನಗೆಯ್,

ಓ ಏಳ್, ವಿಪಂಚಿಯೆ! ಕಲಾಲತಾಂಗಿಯ ಕೈಯ
ತಳಿರ ಸೊಮ್ಪಿನ ಸೋಂಕು ಸಾಲ್ವುದೇ ನಿನಗಿನ್ನು?
ತಾಂಡವ ಶಿವನ ಕಯ್ಯ ಡಮರು ಆವೇಶಮಂ
ಆಹ್ವಾನಗೆಯ್! ಸಾಗರೋಪಮಂ ಗಾನಗೆಯ್
ಆಂಜನೇಯನ ಸಾಗರೋಲ್ಲಂಘನದ ಮಹಾ
ಸಾಹಸ ಕಥಾಸರಿತ್ಸಾಗರದ ಸಂಮಥನಮಂ!
  ಇರ್ದುದು ಮಹೇಂದ್ರಾಚಲಂ, ದಕ್ಷಿಣಾಂಬುಧಿಗೆ
ಬೇಹುಗಡಿಯಂ ಕಟ್ಟಿ, ಮುಡಿಯಿಂ ಮುಗಿಲ್ಮುಟ್ಟಿ,
ನಗ ಕುಲ ಜಗದ ಜಟ್ಟಿ. ಮೊಲೆಯುಣ್ಬ ಮಲೆಯೆಂಬ
ಕರು, ತನ್ನ ಗೋಣಂ ನೀಡಿ, ಮೋರೆಯಂ ಚಾಚಿ,
ಗಗನ ಗೋವಿನ ಮುಗಿಲ್ಗೆಚ್ಚಲಂ ಪೀರ್ವುದೆನೆ
ಚೆಲ್ವಾದುದದರ ಚೂಡಂ. ಆ ಶಿಖರ ಶಿಖೆಯ
ಕೋಡುಗಲ್, ಲಂಕೆಯಂ ಕೇಡುಗಣ್ಣಿಂ ನೋಳ್ಪ
ಮೃತ್ಯು ದುಶ್ಶಕುನ ಶಕುನಿಯ ಕೊಕ್ಕಿನೋಲಂತೆ,
ಭೀಷ್ಮಮಿರ್ದತ್ತು, ರಾವಣನಾಯು ಲಿಖಿತಕ್ಕೆ
ಬಿದಿಯ ತೋರ್ಬೆರಳೆಂಬಿನಂ. ಬಾನ್‌ಬಟ್ಟೆಯಲೆವ
ಬರ್ದಿಲರಾ ಚಾಚರೆಯೊಳೇಗಳುಂ ಕುಳಿತಿರ್ದ
ಶಿಖರಗಾತ್ರದ ಪರ್ದು ಮುದಿಯನಂ ಕಂಡದಕೆ
'ಶಕುನಿಶಿಲೆ'ವೆಸರಿಟ್ಟರನ್ವರ್ಥಮಂ. ಶ್ಯೇನಿ
ಪುತ್ರಂ ಜಟಾಯುವಗ್ರಜನಲ್ಲಿ ಸಂಪಾತಿ ತಾಂ
ಕುಳ್ತು, ಶಾಪದ ವಿಮೋಚನದ ನಿಡುವಟ್ಟೆಯಂ
ನೋಡುತಿರ್ದನ್; ಬೇಡುತಿರ್ದನ್ ವಿಧಾತ್ರನಂ
ಆ ಶುಭಮುಹೂರ್ತಾಗಮನಕಾಗಿ. ನಡುನಡುವೆ,
ಚೇತನದ ಜಡತನದ ಬೇಸರದ ನೋವಿಂಗೆ
ಚೀರುತಿರ್ದನ್, ಗಿರಿಯರಣ್ಯಂ ಪ್ರತಿಧ್ವನಿಸಿ
ಕಂಟಕಿತಮಪ್ಪಂತೆವೋಲ್. ಉದಯಗಳೆನಿತೊ ಬಂದು,
ಅಸ್ತಗಳೆನಿತೊ ಸಂದು, ರಾತ್ರಿಗಳೆನಿತೊ ನಿಂದು,
ಕಳೆದುದು ಶತಾಬ್ದಮಾದೊಡಮಯ್ಯೊ, ಕಾಣದಯ್
ಕಿರಣಂ, ನಿರಾಶಾ ತಮಿಸ್ರವನಿನಿತ್ತಂ ತೂರಿ!
ಮುನ್ನೀರ ನೀಲಂ, ತರಂಗಕೈಂಕರ್ಯಮೆನೆ,
ನಿಚ್ಚಮೋಲೈಸಿದುದು ಗಿರಿರಾಜನಂಘ್ರಿಯಂ

ತೀರ್ಥದಿಂ ಕರ್ಚಿ. ಪ್ರಾತಃಪ್ರಥಮ ತೇಜಮಂ
ತಮ್ಮ ನೆತ್ತಿಯ ಪಚ್ಚೆದಳಿರ ತೊಟ್ಟಿಲೊಳಿಟ್ಟು
ದಿನಶಿಶುವನುಯ್ಯಾಲೆದೂಗುವಾ ಚೂಡಾಗ್ರ
ವಿರಳ ಕಾನನ ಚಾರುತರುಪಂಕ್ತಿಯಂ ಮುಟ್ಟಿ,
ಮುತ್ತಿಟ್ಟು, ಮುಂಡಾಡಿ, ಶಿರವನಾಘ್ರಾಣಿಸುತೆ
ನೀಲಮಾಶೀರ್ವದಿಸಿದುದು ನಿಚ್ಚಮಂಬರಂ,
ಅದ್ರಿದೇವನ ಕಿವಿಗೆ ನಾಕಲೋಕ ಅಶೋಕ
ಮಂತ್ರಮಂ ಪರ್ಚಿ. ಆ ಗಿರಿಶಿರಾಶ್ರಮದಲ್ಲಿ
ಗರಡಿ ಮಲ್ಲರ ಮುಷ್ಟಿಯಾದುದೊ ಶಿಲಾಗೋಷ್ಠಿ!
ಬಂಡೆ ಬಂಡೆಯನೆತ್ತಿ, ಬಂಡೆ ಬಂಡೆಯನೊತ್ತಿ,
ಬಂಡೆಬಂಡೆಯ ಮಂಡೆಯೊಂದನೊಂದಂ ಮಲೆಯೆ,
ಪಣೆಪಣೆಗೆ ಕೊಂಬುಕೊಂಬಿಗೆ ಪೆಣೆದು ತಲೆವಾಯ್ವ
ಗೂಳಿ ಗೂಳಿಗೆ ಹಣಾಹಣಿಯಾಗುವೋಲಂತೆ,
ಹಿಂಡುಗೊಂಡರೆಬಂಡೆಯೆದ್ದಿದ್ದುವಲ್ಲಲ್ಲಿ:
ಕಾಂತಾರದೈಕಾಂತಮವತಾರಮೆತ್ತಿದುದೊ,
ಘನಿತ ಮೌನಂ ವಜ್ರನಿದ್ರೆಯಿಂದೆಚ್ಚರದೊ
ಪೇಳೆಂಬೊಲಾ ಬಂಡೆ ಬಿದ್ದಿದ್ದುವಲ್ಲಲ್ಲಲ್ಲಿ!
ಬಂಡೆಗಳೊಡನೆ ತಾನುಮೊಂದೆನೆ ತಪಂಬಟ್ಟು
ಕುಳ್ತ ಸಂಪಾತಿ ತಾನಾ ಪುಷ್ಯಪ್ರಭಾತದಾ
ಹೇಮಂತದಂತಿಮದ ಹಿಮಶೀತ ಮಂಜುಮಶ್ರೀ
ಕಂಪಿಪೋಲನುಕಂಪಿಪೋಲಾರ್ತ ಕಂಠದಿಂ
ಚೀತ್ಕರಿಸಿದನ್, ಮಹೇಂದ್ರಾದ್ರಿ ಸಾನುಸ್ಥಾನ
ಘಾಸ ಕುಟ್ಟಿಮದಲ್ಲಿ ಕಲೆತಿರ್ದ ಕಪಿವೀರ
ಸಮಿತಿ, ಮಂತಣವನುಂತಿಟ್ಟು, ಬೆಕ್ಕಸವಟ್ಟು,
ಗೋಳ್ದನಿಯ ಕಾರಣವನರಿಯೆ ಶರಗುಲ್ಮನಂ,
ಕಾನನಕೆ ವಾನರವ್ಯಾಘ್ರನೋಲುಗ್ರನಂ,
ಪಡೆಗೊಟ್ಟಟ್ಟುವಂತೆ!
ಮುಗಿಯಿತ್ತು ಮೃಗಶಿರಂ;
ಪೂರೈಸುತಿದೆ ಪುಷ್ಯಮ್; ಅದೊ ಮೊಗಂದೋರಲಿದೆ,
ಮಂಜು ಬಿಳಿಯ್ಯೆಕಿಲಿಂದಂಜಿಪ, ಕುಳಿರ್ಕೋಳ್ವ
ಚಳಿಯ, ಮಾಘ ಫಾಲ್ಗುಣ ಸೇವ್ಯ ಶಿಶಿರೇಶ್ವರಂ.

ಇತ್ತವಧಿ ಮುಗಿದತ್ತು; ಉಲ್ಲಂಘಮಾಯಿತ್ತು ಮೇಣ್
ಸುಗ್ರೀವನಾಜ್ಞೆಯುಂ; ಪೊತ್ತ ಪೂಣ್ಕೆಗೆ ಭಂಗಮುಂ
ಬಂದತ್ತು; ವಿಘ್ನಮಾದುದು ರಾಮನುದ್ದಾಮ
ಕಾರ್ಯಲಗ್ನದ ಯುದ್ಧಸಿದ್ಧತೆಗೆ; ಚಣಚಣಕೆ
ಕಾಯುತ್ತೆ, ಕುದಿಯುತಿಹುದತ್ತಲಾ ಕಿಷ್ಕಿಂಧೆ!
ಅಂತಾದೊಡಂ, ಏಕೆ ತಳ್ವಿಹುದಿಲ್ಲಿ, ಪೇಳಾ
ಕಪೀಶ್ವರಬಲಂ? ಏಂ ಗೆಯ್ಯುತಿಹರಲ್ಲಿ ಹನುಮಾದಿ
ನೀಲ ನಳ ಜಾಂಬವಾಂಗದ ಮಹಾ ಕಲಿಗಳಾ
ನಗ ಮಹೇಂದ್ರನ ಹೆಗಲ ಮಂಚದಲಿ? ಆಲಿಸಯ್,
ಪೇಳ್ವೆನಾ ಮಾನನಿಧಿ ವಾನರರಿಗೊದಗಿದಾ
ಸಾಹಸದ ಸಂಕಟದ ಕಥೆಯ ಗೋಳಾಟಮಂ.

ಅರಸಿದರು ಸೀತೆಯಂ; ಅರಸಿದರವನಿಜಾತೆಯಂ;
ಅರಸಿದರಸುರನೊಯ್ದ ರಾಮ ಸಂಪ್ರೀತೆಯಂ.
ಜಾನಕಿಯನರಸಿದರ್; ಮೈಥಿಲಿಯನರಸಿದರ್;
ಅರಸಿದರ್ ಸುಗ್ರೀವನಸುಗೆಳೆಯನರ್ಧಾಂಗಿಯಂ.
ಹುಡುಕಿದರರಣ್ಯಮಂ; ಹುಡುಕಿದರಚಲಸೀಮೆಯಂ;
ಹುಡುಕಿದರ್ ನದನದೀ ಜಲಗಳಂ, ಕಾಸಾರ
ಕುಲಗಳಂ, ಮೇಣ್ ತಲಾತಲಗಳಂ. ಹುಡುಕಿದರ್
ಗಹ್ವರದ ಗುಹೆಗಳಂ, ಮೇಣ್ ಭೀಕರಾಭೀಳ
ತಿಮಿರ ಭೀತಿಯ ಬಿಲಸ್ಥಲಗಳಂ. ಸೋವಿದರ್
ದೂರಮಂ; ಸೋವಿದರ್ ನಿಕಟಮಂ; ಸೋವಿದರ್
ಗೂಢಮಂ; ಸೋವಿದರ್ ಪ್ರಕಟಮಂ; ಸೋವಿದರ್
ಸರ್ವಮಂ ಮರಗಳೊಳ್ ಪೊದೆಗಳೊಳ್, ಕಲ್ಗಳೊಳ್
ಪುಲ್ಗಳೊಳ್, ಪಳುಬೆಳೆದ ಪಳ್ಳದೊಳ್ ಪಿಣಿಲಿಡಿದ
ಕೊಳ್ಳದೊಳ್, ಕೆಸರುಸುಬು ಕೊರಕಲಿನ ಕಿಬ್ಬಿಯೊಳ್
ದುಮುದುಮನೆ ನೀರ್‌ಬೀಳುವಬ್ಬಿಯೊಳ್ ಆ ಕೀಶ
ಸಂಶೋಧನಾ ಕೋವಿದರ್! ತಡವಿದರಹಸ್ಪತಿಯ
ಕದಿರಾಳ್ಗಳಂ ಕೂಡಿ ಪಗಲನೆತ್ತೆತ್ತಲುಂ,
ಕೌಟವಿಯಾಗೆ ಕಣ್ಗಟವಿ. ಸೋದಿಸಿದರಂತೆ
ತಣ್ಗದಿರ್ವೆರಸಿ ರಾತ್ರಿಯ ಗರ್ಭಮಂ, ಕೈಗೆ
ಕತ್ತಲೆ ಬತ್ತಲಪ್ಪಂತೆ!

ಇಂತಿಂತಿಂತುಟಾ
ವಾನರರ್ ಕೊಟ್ಟವಧಿ ಕೊನೆಮುಟ್ಟಿಬರ್ಪಿನಂ
ಅರಸುತಿರೆ, ಪುಡುಕುತಿರೆ, ಸೋವುತಿರೆ, ಸೋಸುತಿರೆ
ದಳದಳಗಳಾಗಿ ದೆಸೆದೆಸೆವೊಕ್ಕು, ಭೋಂಕನೆಯೆ
ಗೋಚರಿಸಿತಾ ಮಹೇಂದ್ರಾದ್ರಿ, ದಕ್ಷಿಣ ದಿಶಾ
ನೈಶ ನೈರಾಶ್ಯ ಯಮದೇಹ ಗೋಪುರಮೆನಲ್
ಗ್ರಂಥಿತ ಕಳೇಬರದ ನೈಲವೈಶಾಲ್ಯದಿಂ
ದೃಷ್ಟಿಗೆ ದಿಗಂತಮನೊಡರ್ಚ್ಚೆ. ಸೇರ್ದತ್ತದರ
ಸಾನುವಂ, ಸಂಕೇತದಂತೆ, ಕಪಿಕೇತನರ
ಸೇನಾಮುಖಂ. ಪೊಳ್ತುವೊಳ್ತಿಂಗುಣಿಸು ನಿದ್ದೆ
ಮೀಹಂಗಳಂ ಕಾಣದಲೆದಲೆದಲೆದು ಸೋಲ್ತು,
ಮಾಸಿದ ಮನದ, ಮಾಸಿದಾನನದ, ಮಾಸುಡೆಯ,
ಮಾಸಿದಾಸೆಯ ಸೈನಿಕಂ ವಿಶ್ರಮಿಸಿದತ್ತು
ಮೈಚಾಚುತಲ್ಲಲ್ಲಿ, ತೃಣದ ತಲ್ಪದ ಗಿರಿಯ
ತಳ್ಪಲಿನಂಕ ಪರ್ಯಂಕದಲ್ಲಿ. ಮೇಣ್ ದಣಿವಾರೆ,
ಬಗೆ ತಣಿಯಲೀಂಟಿದರ್ ದೊಣೆನೀರ್ಗಳಂ; ಝರದ
ಜಲಮಂ ಮಿಂದರೊಗೆದರುಡೆನೂಲ್ಗಳಂ ಕಿಬ್ಬಿ
ಬೆಳ್ಳಂಗೆಡೆಯುವರ್ಬ್ಬಿಯೊಳ್. ಪುತ್ತಿನೊಳಗಿರ್ದ
ತುಡುವೆಜೇನಂ, ಮರದ ಬಿರುಕಿನೊಳಗಣ ನಸರಿ
ತುಪ್ಪಮಂ, ಬಂಡೆಯಿಂ ಜೋಲ್ವ ಹೆಜ್ಜೇನ್ಗಳಂ
ಕಿಳ್ತರೊಪ್ಪಂ ಮಾಡಿ ಪಣ್ವಲಂಗಳನೂಡಿ
ಬನದೌತಣವನುಂಡರನಿಬರುಂ, ಜಲಪಾತ
ಶಿಲೆಯ ರಕ್ಷೆಯ ದುರ್ಗಬಿಲದ ನೀಡದೊಳಿಕ್ಕಿ
ಪಾರಿವಾಳದ ಪಕ್ಕಿ ಕಟ್ಟಿರ್ದ ಕಣಜದಿಂ
ಕವರ್ದ ತರತರದಕ್ಕಿಯಿಂದನ್ನಮಂ ಸಮೆದು,
ಹೊಡೆತಣಿವಿನಂ.
ಮೇಲೆ, ಸಭೆ ನೆರೆದುದಂಗದನ
ಯುವರಾಜ ವಾಲಿಯ ಕುಮಾರನಧ್ಯಕ್ಷತೆಗೆ
ಕೈಮುಗಿಯೆ ಸೇನಾಸಮಷ್ಟಿ. ಮುಖ್ಯಂಗೆ, ಅದೊ
ಗ್ರಾವದಗ್ರಾಸನವನಿತ್ತುದೊಂದೆತ್ತರದಿ
ಬಂಡೆ! ಸಚಿವ ಸಮಿತಿಗೆ ಗೌರವಕೆ ತಕ್ಕಂತೆ
ಇರ್ಕ್ಕೆಲದುಪಲವೇದಿ! ಮಿಕ್ಕರಿಗವರ ಹಕ್ಕು,

ಕಲ್ಲೊ ಕೊಂಬೆಯೊ ಹುಲ್ಲೊ, ನೆಲೆಸಿಕ್ಕಿದಲ್ಲಾಯ್ತು!
ನೆರೆಯುತಿರೆ ಪರಿಷತ್ತು ಪಗಲಿನಂಚಿನ ಸಂಜೆ
ಶರನಿಧಿಗುರುಳಿದತ್ತು. ಶೀತಲ ನಿಶೀಥಿನಿಯ
ತಿಂಗಳರಿಲಾಳ್ವಿಕೆಗೆ ಜೊನ್ನಮುನ್ನುಡಿಯಾಯ್ತು.
ಹೇಮಂತ ಶೈಶಿರದ ಸಂಧಿಯ ಚತುರ್ದಶಿಯ
ಚಳಿ ಚಳಿ ನಿಶೆಯ ಕುಳಿರ್ಗ್ದಿರ ಬೆಳ್ದಿಂಗಳೊಳ್
ತೊಯ್ದೊದ್ದೆಯಾದುದಾ ರಾತ್ರಿಯಪ್ಪಿದ ಧಾತ್ರಿ,
ನಡನಡ ನಡುಗಿ ಹಿಮಕೆ! ಮಂಜಿಗಂಜುವುದುಂಟೆ
ನಂಜುಗೊರಲನ ಪಣೆಯ ಕಣ್ಗೆಣೆಯ ಕಲಿಗಣಂ?
ಸಾಗಿತಾ ಸಭೆ, ರಜನಿ ತುದಿಗೆಯ್ದಿ, ಮೂಡಣದಿ
ಮರುವಗಲರಳ್ವಿನಂ, ನೇಸರ್ ಮರಳ್ವಿನಂ,
ಸಂಪಾತಿ ಚೀತ್ಕಾರಮಿರಿದು ಕಿವಿಗೊಳ್ವಿನಂ!
    ಪ್ಲವಗೋತ್ತಮನ ವಾಲಿಸಂಭವನ ಜ್ಯೋತ್ಸ್ನಾ
ಶಶಾಂಕ ಹೇಮಂತಾಂಶು ಕಾಂತ ಗಾತ್ರಾಸ್ಫುಟನ
ಪೊಣ್ಮೆದತ್ತಂಗದ ಕುಮಾರನ ತರುಣವಾಣಿ,
ಕೋಳ್ಮಿಗಗಳೊಳ್ಗಳಂ ನಿಲಿಸಿ, ಭಯವಿಸ್ಮಿತಾ
ನಿಶಿ ಗೌರವಚಕಿತಮೌನದಿಂದಾಲಿಪಂತೆ:
''ಕಪಿಕುಲ ಬಲಿಷ್ಠರಿಗೆ, ವಾನರಶ್ರೇಷ್ಠರಿಗೆ,
ರಾಜೇಂದ್ರ ಸುಗ್ರೀವನಾಜ್ಞಾ ಶಿರತ್ರರಿಗೆ,
ಮೇಣೆನ್ನ ಕೆಳೆಯರಿಗೆ ನನ್ನದಿದೂ ಬಿನ್ನಪಂ.
ಕಟುವಾರ್ತೆಯಾದೊಡಂ ತಿಕ್ತಮಪ್ರಕಟಮೆನೆ
ಪೇಳ್ವೆನಕಟುಕ್ರಮಂ. ಕೇಳ್ವುದಲಘುಮತಿಯಿಂ.
ದೊರೆಯಾಣೆಯಂ ಪೊತ್ತು, ತೆಂಕಲಿಳೆಯೆಲ್ಲಮಂ
ತೊಳಲಿ, ರಾಮಪತ್ನಿಯನರಸಿ ನೀಮನಿಬರುಂ
ಬಳಲಿದಿರಿ. ಪಸಿವು ನೀರಡಿಕೆಯಂ ನೋವುಸಾವಂ
ಕಂಡುಂಡು ದಣಿದು ರೋಸಿದಿರಿ. ಮೇಣೆಲ್ಲಕ್ಕೆ ತಾಂ
ಮಿಗಿಲ್ ನಮ್ಮೊಳ್ ಕೆಲರ್, ಬಾಳ್ಗೆಳೆಯರಳಿದುದಂ
ಕಂಡರೆಂಬುವ ಕಠಿನಮಂ ನುಡಿಯಲಳಲುತಿದೆ
ನಾಲಗೆಯ ಬಲ್ಮೆ!'' ರಾತ್ರಿಯ ರವವಿಹೀನತೆಗೆ
ಸುಯ್ಲೊದಗಿದಂತೆ ಸುಯ್ದುದು ಸಮಿತಿ ಸಂಕಟಕೆ.
ಕೇಳ್ದದಂ ಮುನ್ನೊರೆದನಿಂತು ವಾಲಿಯ ಸುತಂ:

"ವಾನರ ಬಲಿಷ್ಠರೆಂ! ಕಪಿಕುಲ ದೃಢಿಷ್ಠರೆಂ!
ನಿತ್ಯಮಾಶಿಷ್ಠರೆಂ! ನಾಂ ಯೋದ್ಧರೆಂಬುದಂ
ಮರೆಯದಿರಿಮ್, ಓ ಶಿಷ್ಟನಿಷ್ಠೆಯ ಮಹಾಮತಿಯ
ಸಂತತಿಗಳಿರ! ಕೆಳೆ ಮಡಿಯೆ ಬಳ್ದ ಕೆಳೆಗಳಲ್
ಸಾಜಂ, ದಿಟಂ. ರಣದಿ ಕೆಡೆದವರೊಳ್ಪುಗೆಯ್ಮೆಗಳ್
ಸಫಲಮಪ್ಪಂತೆಸಗೆ ನಾಮ್, ಅದೆ ಸುಧಾತರ್ಪಣಂ
ತಾನವರಾತ್ಮತೃಷೆಗೆ ತೃಪ್ತಿಯನೀವುದಲ್ತೆ
ಪಿತೃಲೋಕದೊಳ್? ಮಿಶ್ರಮಂ ಮಾಳ್ಪುದೆ ಘನಾಮೃತಕೆ
ಅಪೌರುಷದ ಅಶ್ರುಜಲಮಂ? ಪಿಂತಣಳಲಿರ್ಕೆ,
ಬಿಡಿಮದಂ. ನಮಗೆ ಮುಂತಣಮಿಂದು ಮಂತಣಂ.–
ಮುಗಿಯಿತ್ತು, ಮೇಣ್ ಮೀರ್ದತ್ತು, ರಾಜಾಜ್ಞೆಯಿತ್ತವಧಿ.
ತೋರ್ದುದಿಲ್ಲವನಿಜೆಯ ನೆಲೆ. ದಶಶಿರನ ಲಂಕೆ
ತಾನಾದುದಿರ್ಪುದಿಲ್ಲವೊ ಎಂಬ ಬರು ಶಂಕೆ!
ತಿಳಿದು ದಳದಳದನುಭವಂಗಳಂ, ಮೇಣರಿತು
ಸೈನ್ಯಮನಮಂ ಮತ್ತಮುತ್ತರೋದ್ದೇಶಮಂ,
ಮುಂಬಟ್ಟೆಯಂ ನಿಶ್ಚಯಿಸಲೆಂದು ತರಿಸಂದು
ಇಂದು ನೆರೆದಿಹುದಿಲ್ಲಿ ಸಭೆ, ಈ ವೀರಗೋಷ್ಠಿ!
ಪೇಳ್ವೆನಾನೆನ್ನ ದಳದನುಭವದ ಕಥನಮಂ;
ತಾಳ್ಮೆಯಿಂದಾಲಿಸಿಂ. ಮಿತಮೊರೆವೆನನಿತುಮಂ.
ತಾಮುಮಂತೆಯೆ ತಮ್ಮ ಕಥೆಯನತಿಕಲ್ಪನೆಯ
ತೊರೆದೊರೆವುದೆಂದು ಬಿನ್ನೈಸುವೆಂ. ಕಥೆಗೆ ಗುರಿ
ಕಥೆಯಲ್ಲಮಿಂದಿಲ್ಲಿ. ತಮ್ಮ ಬಲವಿಕ್ರಮಕೆ
ಪೆರರ ಮೆಚ್ಚುಗೆವೇಳ್ಕುಮೆಂದೆಂಬ ಕಲಿಸಹಜ
ದೌರ್ಬಲ್ಯಮಂ ತ್ಯಜಿಸಿ, ದೇವಿಯನ್ವೇಷಣೆಗೆ
ಬೇಳ್ಕನಿತುಮನೆ ಪೇಳ್ವುದೆಲ್ಲರುಂ."
ನುಡಿದಿಂತು
ನಿಂತುದಾತನ ವಾಣಿ. ಚಿಂತಿಸಿದನೆನ್ನುದಂ
ಒಂದಿನಿತುವೊಳ್ತು. ಜೊನ್ನಿರುಳ ಸದ್ದಿಲಿತನಕೆ
ಚವರಿವೀಸಿತು ಕುಳಿರ ಸುಯ್ಗಾಳಿ. ಬಿಳ್ದುವಯ್,
ಚಳಿಯ ದನಿಮರ್ಮರದವೋಲ್, ಪಟ್ಟಪಟ್ಟನೆಯೆ
ಹಿಮದ ಹನಿ ಮರಮರದೆಲೆಗಳಿಂದೆ:

"ಅನ್ನೆಗಂ,"
ಮತ್ತಮೆಳ್ಚರಿಸಿತಾ ಕೊರಳ್ ಇರುಳ ನಿದ್ದೆಯಂ,
"ಮುಂದೆ ಭೀಷಣಮೆಸೆದುದಿನ್ನೊಂದು ಕಾನನಂ,
ಭೀಮಘೋರಂ. ಪೊಕ್ಕು ಪಳುದಟ್ಟಮಂ, ಪುಡುಕಿ
ಕುತ್ತುರ್ಗಳಂ ಸೋದಿಸಿರೆ, ಕಂಡುದೊಂದೆಲ್ವು
ರಾಸಿ. ಕಂಡಾ ಮಹಾ ಕಂಕಾಲಧವಳಮಂ,
ಪರ್ವತೋಪಮ ತಿಮಿಂಗಿಲದಸ್ಥಿಪಂಜರದ
ದೀರ್ಘೋನ್ನತಾಯತದ ಕುಣಪಾವಶೇಷಮಂ,
ಶಂಕಿಸಿತು ಸೇನೆ ರಾವಣ ಪುರದ್ವಾರಕ್ಕೆ
ತೂಗಿರ್ದ ತೋರಣಮದೆಂದು! ನುಗ್ಗಿತು ಮುಂದೆ
ಜಗ ಜಟ್ಟಿಗಳ ದಳಂ, ನನ್ನ ಹಜ್ಜೆಯ ಹಿಂದೆ
ಹಿಂದೆ.–ಕಡಲಿನ ಜಂತು ಬಂತಿಳೆಗದೆಂತು? ಇದೆ
ಸಾಗರಮದೂರದೊಳ್. ಕೈಸಾರ್ದುದಾ ಲಂಕೆ,
ಸಿಕ್ಕಿದಳ್ ಸೀತೆ. ರಕ್ಕಸರೊಡೆಯನಂ ಕೊಂದೆ
ಪೊಕ್ಕಪೆವು ಕಿಷ್ಕಿಂಧೆಯಂ. ಗೆಲ್ಗೆ ಸುಗ್ರೀವ
ರಾಜಾಜ್ಞೆ!–ಎಂದುಕ್ಕುವುರ್ಕಿನಿಂ ನುಗ್ಗುತಿರೆ,
ತೋರ್ದನೊರ್ವನ್ ವಿಕೃತ ರೂಪದ ಜಟಾಶ್ಮಶ್ರು
ಜಟಿಲಾನನಂ. ವೈರಮುಕ್ಕಿತು ವಿಕಾರಕ್ಕೆ
ಪೇಸಿ. ದೈತ್ಯಂಗೆತ್ತು ಗುರ್ದಿದೆನವನ ನೆತ್ತಿಯಂ,
ಪಿಸುಳ್ವಂತೆ. ಅಯ್ಯೊ ಏನನ್ನೆಯಂ! ಸಾವ ಮುನ್
ತನ್ನ ಪೆಸರಂ ಪೇಳ್ದನಾ ಋಷಿ ನಿಶಾಕರಂ.
ಗುರುವಂತವನ್ ಸಂಪಾತಿ ಖಗವರೇಣ್ಯಂಗೆ.
ಶಪಿಸಲಿರ್ದಾತನೆನ್ನುದ್ದೇಶಮಂ ಮತ್ತೆ
ನಾಂ ಶಿರದೊಳಾಂತ ಗುರುಕೃತಿ ಮಹತ್ತ್ವವನರಿತು
ಕೃಪೆಯೊಳುಪಸಂಹರಿಸಿದನು ಶಾಪಮಂ: ಪದಕೆ
ಮುಡಿಚಾಚಿದೆನ್ನನುಂ ಮನ್ನಿಸಿದನಾದೊಡಂ,
ಮುನ್ನಿನೋಲಿರದಿನ್ನೆನಗೆ ಪಿತೃವತುಲ ಶಕ್ತಿ.
ಮತ್ತೊಂದನರುಹಿದನ್, ತನ್ನ ಶಿಷ್ಯನ ಶಾಪ
ಮೋಚನೆಗೆ ನೆರವಾಗಿ ನಾಂ ಪಡೆವುದಾತನಿಂ
ರಾಮಕಾರ್ಯಕೆ ನೆರವನೆಂದು. . . ನಮಗದೆ ಕಣ್ಗೆ
ಕದಿರಪ್ಪುದೀ ಕವಿದ ಕಳ್ತಲೊಳಗೆಂದೆನ್ನ

ಹಾರ್‍ಯೆಕೆ, ಸಂತೈಕೆ, ಮೇಣರಕೆ!''
                                        ನಿಂತುದಾ
ವಾಲಿಯ ಸುತನ ಕೊರಳ ತರುಣತೂರ್ಯಂ. ನೆರವಿ
ನೀರವಂ ನೋಡುತಿರಲುತ್ಕಂಠೆಯಿಂ, ಮರಳಿ
ಮೇಲೆಳ್ದನೊರ್ವನಾ ಮರ್ಬ್ಬಿನೊಳದಾರೆಂದು
ತವಕಿಸುತ್ತಿರೆ ಸೇನೆ, ಕಂಠ ಘಂಟಾ ರವಂ
ಪೊಣ್ಮಿದುದು, ತವಕಂ ತವಿದು ತುಳಿಲ್‌ಗೆಯ್ವವೋಲ್
ತುಂಬಿದ ಸಭಾಸಂಭ್ರಮಂ. ವಾಚಿಸಿದನಿಂತು
ಸೇನಾನಿ ನೀಲನಗ್ನಿಯ ಕುಮಾರಂ, ಶ್ರೀಮನ್
ಮಹಾಮೌನಿ:
                        ''ಯುವರಾಜ ಭಾಷಣ ಮಧುವನೀಂಟಿ ಸಭೆ
ತಣಿದಿಹುದು ತುಂಬಿ. ಆ ವೀರ ವಾಣಿಯ ಕೇಳಿ
ಮರುಕೊಳಿಸಿಹುದು ಕೆಚ್ಚು, ಕೆಚ್ಚುಗೆಟ್ಟಿರ್ದರ್‍ಗೆ.
ಮಿಗಿಲೆರಡರಿಂದಾವುದೆನೆ, ದೊರೆತಿರ್ಪುದೆಮಗೆ
ಗುರಿ ಮಾರ್ಗ್ಗಣದ ಕಣ್ಗೆ. ಆ ಗುರಿಗೆ, ಆ ಕಣ್ಗೆ
ಪೆರತೊಂದು ತೋರ್ಬೆರಳಿನಂದದೊಂದನುಭವಂ
ಸಮನಿಸಿತ್ತೆಮಗೆ. ಪೇಳ್ದಪೆನದಂ, ನಿರಾಶೆಗೆ
ಕೋಡುಡಿದು ತಾನದುವೆ ಸೋಲ್ಬಗೆಗೆ ಬೆನ್ನಡಿಗೆಯೆನೆ,
ಧೈರ್ಯಕಾಶಾ ಶ್ವಾಸವಾಡುವೋಲ್. ನಿಂದಲ್ಲಿ
ಪಳುವರಸಿ, ನಡೆನಡೆದು ದರಿ ಸೋಸಿ, ಗಿಡುಗಳಂ
ಮೀಂಟಿ, ಮಡುಗಳನೀಂಟಿ, ಮರುಧರೆಗಳಂ ದಾಂಟಿ
ದಾಳಿಟ್ಟು ನಡೆಯುತಿರಲೆನ್ನ ಪಡೆ, ತೊಟ್ಟನೆಯೆ
ಮುಂದೋರ್ಱುದೊಂದು ರಕ್ಕಸರ ಬೇಹಿನ ಚೂಣಿ,
ಕಣ್ಬೊಲದ ಕೂಣೆಮೀನಾಗಿ. ಶೈಲಾಕೃತಿಯ
ಘೋರ ಕರ್ಮಿಗಳವರ್, ಹರ್ಯಕ್ಷಮಂ ಕಂಡ
ಕಾಳ್ಕೋಣವಿಂಡಿನೊಲ್ ಮಲೆತು, ಮೇಲ್ವಾಯ್ದರೈ,
ರಾಹುಛಾಯಾದಂಡಗಳೆ ದಂಡುಗೊಂಡಂತೆ
ಗೂನ್ಗಂಟುಗಂಟಾದ ತರು ಬೃಹನ್ಮುಂಡ ಸಮ
ದೋರ್ದ್ದಂಡಗಳನೆತ್ತಿ. ಸೊಂಟದಟ್ಟಿಯ ಬಿಗಿದು
ಕಟ್ಟಿ, ತೋಳ್ತೊಡೆಗಳಂ ಚಪ್ಪರಿಸಿ, ನೆಲ ನಡುಗೆ
ಕಾಲ್ ಕುಟ್ಟಿ ತಾಗಿದತ್ತೆಮ್ಮ ಸೈನ್ಯದ ಸಿಡಿಲ್.

ಸುಟ್ಟು ಸೀಕರಿವೋದುದರಿಸೇನೆ. ಏನೆಂಬೆನ್?
ಒರ್ವನುಳಿದನ್ ಮಹಾ ಮಾಯಾವಿ! ತೋರುತಂ
ಮತ್ತೆ ಮರೆಯಾಗುತಂ ನಮ್ಮನೀಳ್ಕುಳಿಗೊಳಲ್
ನಿಟ್ಟೋಟದಿಂ ಪರಿದನಿತ್ತಣ್ಗೆ. ಪ್ರತಿಮಾಯೆಯಿಂ
ಪಿಡಿದರವನಂ ಕಡೆಗೆ ನಮ್ಮವರ್. 'ಲಂಕೆಯಂ
ತೋರ! ದಶರಥ ಸುತನ ದಯಿತೆಯಂ ಬೈತಿಟ್ಟ
ತಾಣಮಂ ತೋರ! ನೀಚ ರಾವಣನೆಲ್ಲಿ, ಬಾ,
ತೋರ!' ಎಂದೆಂದು ಗುದ್ದಿದರಿರಿದರಕ್ಷಿಯಂ
ಕಿಳ್ತರೇನೆಂಬೆನಾ ಕಲ್ಗುಂಡಗೇಂ ಸ್ವಾಮಿಯೊಳ್
ನಿಷ್ಠೆ! ನಾನರಿಯೆನಾನ್ ಕಾಣೆನೆಂದನಲ್ಲದೆ ಮೇಣ್
ಬೇರೆ ನುಡಿಯಂ ನಾಲಗೆಗೆ ತಂದನಿಲ್ಲೈಸೆ!
ಕಡೆಗೊಡಲನುಳಿದನೆಂತುಂ ದಕ್ಷಿಣದ ದಿಶೆಗೆ
ನಡೆದನಂತುಂ ಪೇಳ್ದನಿಲ್ಲುತ್ತರವನೆಮಗೆ!
ಕೊನೆಗೆ ನಾಮವನೋಡುವಟ್ಟೆಯನೆ ದಿಕ್‌ಸೂಚಿ
ಗೆಯ್ಯುತ್ತೆ ಬಂದೆವಿಲ್ಲಿಗೆ ಮಹೇಂದ್ರಾಚಲಕೆ.
ಇತ್ತಲೆತ್ತಲೊ ಲಂಕೆಯಿರ್ಪುದೆ ದಿಟಂ. ಶಂಕೆ
ವೇಡೆಮಗೆ.'' ಎಂದುಮೊಂದೆರಳ್ ನಿಮಿಷಮುಂತಿರ್ದು,
ನಿಡುಸುಯ್ದು, ''ಮೀರ್ದೆವಿತ್ತವಧಿಯಂ. ತೀರ್ಚುವಂ
ಹೊಣೆ ಹೊರೆಯನಾದೊಡಂ. ತೀರದಿರ್ದೊಡಮೆಂತೊ
ಕರ್ತವ್ಯಮೆಸಗುತ್ತೆ ತೀರ್ಚುವವಸರದೊಳೆಯೆ ನಾಮ್
ತೀರ್ವುದೆ ವಲಂ ಕಲಿಗೆ ಗೌರವಂ!''
ಸೇನಾನಿ ತಾಂ
ಕುಳ್ತೊಡನೆ, ಗಜನೆದ್ದನಿನಿತು ಕುಳ್ಳಾದೊಡಂ
ಗಜಗಾತ್ರದಿಂದರಿಂದಮ ಪಾತ್ರನುಜ್ವಲಂ,
ರೂಕ್ಷ ಜಿಹ್ವೆಯ ನಿಷ್ಠುರಂ, ಹಾಸ್ಯಕೋವಿದಂ.
ನರಿಮೊಗದ ನಗೆಯ ಕುಡುಗೋಲ್‌ಕೊಂಕು ನೆರಮಿರಿದು
ತುಟಿಗಳಿರ್ಕೆಲದಲ್ಲಿ ಸುಳಿಯುತಿರ್ದುದನಿರುಳ್
ಮರೆಸಿದುದು ಜೊನ್ನಮಾಯೆಯಿಂ:
''ನಿಶಾ ಸಭೆಯಲ್ಲಿ
ನಿದ್ರೆಯಧ್ಯಕ್ಷತೆಗೆ ನಮಿಸದಿರ್ಕೆಳ್ಚರಂ.
ಮಂಡೆಯಿಂದುನ್ಮಲೇಂ? ಜಾನ್ಮೆಯಿಡಿದಿರ್ದೊಡೇಂ?

ಬೆಳ್ಪುನುಡಿ ಬೆಳ್ಪೆ ಗಡಮೇಗಳುಂ: ಆಲಿಸಿಮ್,
ನಮಗುರ್ಮೊರ್ವನ್ ದೊರೆತನವನ ದುರದೃಷ್ಟದಿಂ.
ಸಿಕ್ಕೊಡನೆ 'ರಕ್ಕಸನ್!' ಎನುತೆ ಕೀರಿದರೆಮ್ಮವರ್
ಕಪಿಕರ್ಕಶರ್. 'ಅಲ್ಲ!' ಎಂದೊರಲಿದನ್ ಅವನ್.
ಕೇಳ್ವರಾರ್? 'ಪೇಳೆಲ್ಲಿ ಸೀತೆ? ತೋರ್ ಲಂಕೆಯಂ!'
ಎನುತೆನುತೆ ಬಡಿಯಲವನ್ 'ಅಯ್ಯಯ್ಯೊ ಕಾಣೆನಾನ್!
ದಮ್ಮಯ್ಯ, ಬಿಟ್ಟುಬಿಡಿಮ್!' ಎಂದೊರಲ್ದಾತಂಗೆ,
ಬಗೆಯ ಗುಟ್ಟಂ ಸೆಳೆವ ಮರ್ದ್ದೆಂದು, ಕುಡಿಸಿದರ್
ಕಳ್‌ಬಳ್ಳಿಯಂ ಪಿಂಡಿ ಗೆಯ್ದ ರಸಮದಿರೆಯಂ.
ಬಿದ್ದುದೆ ತಡಂ ಪೊಡೆಗೆ ಮದ್ದು, ನೆಗೆದುದು ನನ್ನಿ
ಪೊರಗೆ! ಪರಿದುದು ಪುರ್ಚ್ಚುವೊಳೆಯಂತೆ: 'ಬಲ್ಲೆನಾಂ
ಲಂಕೆಯಂ!' ಎಂದವಗೆ 'ಎತ್ತಲಿದೆ?' ಎನಲಿವರ್,
'ಇತ್ತಲಿದೆ! ಇತ್ತಲಿದೆ! ಇತ್ತಲಿದೆ!' ಎನುತವನ್
ಸತ್ತನತ್ತಿತ್ತಲೆತ್ತೆತ್ತಲೊಮ್ಮೊಮ್ಮೆ ಕೈಯನ್
ಬೀಸಿ. ಬೀಸಾಟಮನೆ ಸುಟ್ಟೆದೋರ್ಕೆಗೆ ಗೆತ್ತು ನಾಮ್
ಬಂದೆವಿಲ್ಲಿಗೆ ಮಹೇಂದ್ರಾಚಲಕೆ! ಬೇಡೆಮಗೆ
ಶಂಕೆ! ಇತ್ತಲೆತ್ತಲೊ ಲಂಕೆಯಿರ್ಪುದೆ ದಿಟಂ!"
    ನಕ್ಕರ್ ಕೆಲರ್. ನಗೆಯ ತಡೆದರ್ ಕೆಲರ್. ಕೆಲರ್
ಮುಳಿದುರ್ಕ್ಕಿದರ್. ಮತ್ತೆ ಮಿಕ್ಕವರೇಕೊ ಏನೊ
ಸಂದೇಹದಿಂದೆ ತಮ್ಮಿರ್ಕ್ಕೆಲದೊಳಿರ್ದ್ದರಂ
ಲೆಕ್ಕಿಸಿದರೇಂ ಗೆಯ್ವುದೇಂ ನೀತಿಯೆಂಬುದಂ!
ನೆರೆದ ಸಭೆ ಬೆರಗಾಗೆ, ನೀಲನುಂ ನಗುತೆದ್ದು
ಚಪ್ಪರಿಸಿದನ್ ಗಜನ ಭುಜಮಂ!—ಅನಂತರಂ,
ಪೇಳ್ವುದೇನೊಬ್ಬೊಬ್ಬರಾಗೆದ್ದರೆನಿತೆನಿತೊ
ಕಪಿಭಟರ್. ಪ್ರಕೃತಮಂ ಪೇಳ್ದರ್ ಕೆಲರ್: ಪಲರ್
ಪೇಳ್ದರಪ್ರಕೃತಮಂ. ಪೇಳ್ದನಿಲ್ಲೊರ್ವನುಂ
ನೆಚ್ಚು ಮೂಡುವ ಸುದ್ದಿಯಂ! ಭಾಷಣಧ್ವನಿಯೊ?
ವಾಗಿಂಗಿತಮೊ? ದನಿಯ ಹನಿ ಕೂಡುತೊಯ್ಯನೆ
ಹತಾಶೆ ಹಳ್ಳಂಬರಿದು, ದುಮುಕಿ, ಕೊಚ್ಚಿತ್ತಲ್ಲಿ
ನೆಚ್ಚಿನುತ್ತರಮುಖಿಯ ಕೆಚ್ಚಿನೋಡದ ಪುಟ್ಟು
ನುಚ್ಚುನುರಿವೋಗೆ!

ಮೈಂದಂ, ಮಹಾವಾನರಂ,
ಕಪಿಕುಲಾಂಭೋಧಿ ಚಂದ್ರಂ, ಚಂದ್ರಸುಂದರಂ,
ಕವಿ, ಚಾರುವಾಕ್ಕೋವಿದಂ, ಕಾವ್ಯ ರಸ ಹೃದಯಿ,
ಮೇಣು ವೀಣಾಕ್ವಣನ ವಾಣಿಯ ಲಸನ್ಮುಖಂ
ಮೇಲೆಳ್ದನಾಶಾಪತಾಕೆಯೋಲಾ ವಾಗ್ಮಿ.
ದಳ್ಳುರಿದುದಾವೇಶದಗ್ನಿ: ಕಿವಿಸೋಲ್ತುದಾ
ಸಮಿತಿ, ಮಂತ್ರದಿ ಮುಗ್ಧಮಾದಂತೆ. ಸೋಲಿಹುದೆ,
ಕಾಲವೆ, ಕವಿಧ್ವನಿಗೆ? ಪರಿಷದಮರಿಯದೋಲೆ
ಸಮಯನಿಷ್ಠೆಯನುತ್ತರಿಸಿದನ್; ರಸಕ್ಷಣಕೆ
ಗಮಿಸುತೆ ರಸಕ್ಷಣಂ ಪೊಳ್ತುವೊಳೆ ನೆರೆವರಿಯೆ
ಬಿತ್ತರಿಸಿದನ್ ಕಥನಮಂ ಕಾವ್ಯಶೈಲಿಯಲಿ!
ಭಾವನಾತೀತಕೆ ಅಚಿಂತ್ಯಕ್ಕೆ ರಸಕ್ಕಿಹುದೆ
ಕಾಲಮಾನದ ಸೂತ್ರಸಂಕೋಲೆ?
''ಮಲೆಚೆಲ್ವು
ತಾಯ್ನೆಲಂ, ಕಿಷ್ಕಿಂಧೆ ತಾಂ ಪೆತ್ತ ನಲ್ಮಕ್ಕಳಂ
ನುಂಗಲಿದೆ ದುರ್ಯಶಃಕೇತು. ಧೀರರ್ಗಿಂದು,
ಕಿಷ್ಕಿಂಧೆಯಂಬೆಯಾ ಪರ್ವತಸ್ತನಗಳಿಂ
ಪೀಯೂಷಧೈರ್ಯಮಂ ಪೀರ್ದು ಬಳೆದರ್ಗಿಂದು,
ಪೇಡಿತನಮಡಸಲಿದೆ; ಸೋಜಿಗಂ; ಸಂಕಟಕರಂ!
ಯುವರಾಜನೀ ವಾಲಿಸುತನಂಗದ ಕುಮಾರನಿಂ,
ನಿಖಿಲ ಲೋಕಾಪ್ರಣ ಸುತನಾಂಜನೇಯನಿಂ,
ವಹ್ನಿಜಂ ಲೋಕೈಕ ಕಲಿ ಮಹಾ ಸೇನಾನಿ
ನೀಲನಿಂ, ತನ್ನೊಂದು ಬಲ್ಪಿಂ ತ್ರಿವಿಕ್ರಮಗೆ
ಹೊಯ್‌ಕಯ್ ಪರಾಕ್ರಮದ ಬಲಿ ಜಾಂಬವಂತನಿಂ,
ಮೇಣಿತರ ಸಾಹಸಶ್ರೀಮಂತರಿಂ, ಸಮರ
ಧೀಮಂತರಿಂ ತುಂಬಿದೀ ಸಭೆಯ ತೇಜಕ್ಕೆ
ತಗದೆಂದಿಗುಂ ಪರಾಜಯ ಬುದ್ಧಿ. ಶುದ್ಧಿ ಮೇಣ್
ಶ್ರದ್ಧೆಯಿರೆ ತುದಿಗೆ ತಪ್ಪದು ಸಿದ್ಧಿ ಸಾಧನೆಗೆ.
ತನ್ನಿಷ್ಟದೇವತೆಯ ಸೇವೆಯಂ ನೊಗವೊತ್ತ
ಪೆಗಲೊಳೆಯೆ ಸತ್ತರಾ ಸಾವುಮುತ್ತಮ ಗತಿಯೆ,
ನಾಸ್ತಿಕನಲ್ಲದಾತ್ಮನಿಷ್ಠಂಗೆ.—ಕಿರಿಯನಾಂ.

ಬಿನ್ನವಿಪೆನಾ ಪೆರ್ಮೆಯೆನ್ನದಲ್ತಾದೊಡಂ,
ಪೆರ್ಮೆಯಿರ್ಪಾತನಂ ಪಿಂಬಾಲಿಪಾ ಸಯ್ಪು
ನನ್ನದಾಗಿರ್ಪುದೆಂಬುದೆ ಪೆರ್ಮೆ. ಕೇಳಿಮದರಿಂ
ನಮ್ಮ ದಳದನುಭವಂ ಬೇರೆಪರಿಯಾಯಿತ್ತು.
ಬೇರೊಂದು ತೆರನಾಯ್ತು ನಮ್ಮ ನೆಟ್ಟುಂ. ಬೇರೆ
ಪರಿಯಿರ್ಪುದಾಂಜನೇಯನ ಪಡೆಯವರ ಕೆಚ್ಚು.
ನಮ್ಮ ಪಡೆ ಪಟ್ಟ ಕೋಟಲೆ ಕಿರಿದುಮಲ್ತೆಮ್ಮ
ದುಃಖದ ನಖದ ನಕ್ರಕಾಂ ಕಾಣೆ ಕರುಣೆಯಂ,
ಕನಿಕರದ ಲವಲೇಶಮಂ. ನಾವುಮಡವಿಯಂ
ತೊಳಲಿದೆವು; ನಾವುಮಲೆದೆವು ಮಳಲ್ಪೊದವಿಯಂ.
ನೊಂದೆವಾವುಂ ಪಸಿವು ನೀರಡಿಕೆ ಚಳಿ ಸೆಕೆಯ
ಬಾಧೆಯಿಂ. ಕರಡಿ ಪುಲಿ ಫಣಿ ಸಿಂಹ ವಿಷಕೀಟ
ಹಿಂಸೆಯಿಂ ನಾವುಂ ನರಳ್ದೆವಾವುಂ ರೋಸಿ
ಸತ್ತು ಪುಟ್ಟಿದೆವಮಮ ಅಕ್ಷರದಿಟಂ!
"ದಾಂಟುತಾ
ಕ್ರೌಂಚಾದ್ರಿಯಂ ಕ್ರೋಶಮಂ ಕ್ರಮಿಸಿದುದೆ ತಡಂ
ನಾಮರೂಪಂಬಡೆದು ನಿಮಿರ್ದುದೊ ನಿರಾಶೆಯೆನೆ,
ಪ್ರತಿಕೃತಿಸುತೆಮ್ಮ ಸದ್ಯಃಸ್ಥಿತಿಯ ಚಿತ್ತಮಂ,
ಪರ್ಬಿದತ್ತೊಂದು ಸೈಕತಸಮುದ್ರಂ. ಶಿವಾ,
ನೆನೆದರಾ ನೋಟಮಂ ನಡುಗುತಿಹುದೀಗಳುಂ
ಮನ್ಮನಂ! ನಡುಗಲಿಲ್ಲಾಗಳಾ ದೃಶ್ಯಕ್ಕೆ
ನಮ್ಮೊಳಾರುಂ; ಪೊಸತು ನೋಟಮಿನಿದಾಯ್ತಲಾ
ಸಾಹಸದ ಬೇಸತ್ತ ಕಣ್ಗೆ! ನೈರಾಶ್ಯೆಗುಂ ದಲ್
ನೆಯ್ದಿರ್ಪುದೊಂದಂದ; ತನ್ನ ಪೊನ್ನೆಳೆಗಳಿಂ
ಕಣ್ಸೆಳೆದು ಮನಮೋಹಿಪುದು ಮೊದಮೊದಲ್; ಸಿಲ್ಕಿ
ಮೋಹಕ್ಕೆ ಮುನ್ನಡೆಯೆ, ಕೊಂಡೊಯ್ವುದತಿಥಿಯಂ
ನರಕ ಕೇಂದ್ರಕ್ಕೆ. ಏನೆಂಬೆನೆಮಗಂತೆವೋಲ್
ಮೊದಲ ನೋಟಕೆ ಮನೋಹರಮಾಯ್ತು ಮರುಪೃಥಿವಿ:
ಬೆಳ್ಮಳಲ ನೆಯ್ನುಣ್ಪು ಮುತ್ತೊತ್ತಿದುದು ಕಣ್ಗೆ,
ದಿಟ್ಟಿ ದಣಿವನ್ನೆಗಂ ಹಬ್ಬಿ, ಮೇಣ್ ತಣಿವನ್ನೆಗಂ
ತಬ್ಬಿ. ಮುತ್ತೊತ್ತಿದಂತಾದುದಂಗಾಲ್ಗೆಯುಂ:

ಮೃದುಪುಳಿನ ಮೃದುಲನಳಿನಾಧರದ ಸಾದರದ
ಸೋಂಕಿಂಗೆ ಪುಳಕಿಸಿತ್ತಡವಿವಟ್ಟಿನ ನೆಲದ
ಕಲ್‌ಮುಳ್ ಬಿರುಸನಲೆದ ಕಾಲ್. ಆ ಮಳಲ್ಗಡಲ್
ತಗ್ಗಿಳಿದುಮುಬ್ಬೇರ್ದುಮಲೆಯಲೆ ಪೊನಲ್ವರಿದು,
ತನ್ನನಂತತೆಯಿಂದಮಂತರಿಕ್ಷದ ಕೂಡೆ
ಸೆಣಸಿದುದು. ಮರುಭೂಮಿಯಾದೊಡೇನಾಗಸಕೆ
ಮಲೆತರದೆ ಭವ್ಯಮೈಸಲೆ, ದೇವದೇವನಂ
ಕೆಣಕಿದಸುರನ ಮೃತ್ಯುವುಂ ದಿವ್ಯಮಪ್ಪಂತೆವೋಲ್!
ಪಿಂತಿಕ್ಕುತುರ್ವರೆಯ ಪಚ್ಚೆಯೈಶ್ವರ್ಯಮಂ
ಮುಂದುಮುಂದಕೆ ಪರಿಯಲೇಕನಾದತೆಯಾಯ್ತು
ಕಿವಿಗೆ ಸದ್ದಿಲಿತನಂ ಮಸಣದಾ; ಮೇಣಂತೆ
ಏಕಲೋಕತೆಯಾದುದವಲೋಕನಕೆ ರುಂದ್ರ
ನಿಸ್ಸೀಮ ಸೈಕತೌರ್ವಾಲೋಕಮಾತ್ರಕ್ಕೆ
ಮಿಳ್ತು ಬೇಸರಮುಸಿರ್ ಕಟ್ಟುವೋಲ್. ನಿರ್ಜನಂ,
ನಿರ್ಜಲಂ, ನಿರ್ಜೀವಮಂತೆ ನಿಃಶ್ಯಾಮಲಂ.
ಪಳುವಿಲ್ಲ; ಪಸುರಿಲ್ಲ; ಮಿಗವಕ್ಕಿವೆಸರಿಲ್ಲ;
ತಂಗಾಳಿಯಿಲ್ಲ; ತಿಳಿನೀರಿಲ್ಲ; ಇಂದ್ರಿಯಕೆ
ಮನಕೆ ಜೀವಕೆ ಮಹಾಚಿತೆಯಾಯ್ತು; ಬಿಸಿಲುರಿಯ
ಬೀಡಾಯ್ತು, ಸೆಕೆಯ ಸೂಡಾಯ್ತು, ಕಾವಲೆಯೋಡು
ತಾನಾಯ್ತು. ಬಳಲಿದರ್ ಬಲವಜ್ರರುಂ ಧಗೆಯ
ಡಾವರಕೆ; ಬೆಬ್ಬಳಿಸಿದರ್ ಭೀಮಕಲಿಗಳುಂ
ಝಳದ ರಭಸಕೆ; ಗಂಟಲೊಣಗಿ ಬರೆ ಬಾಯಾರಿ,
ಮಾತು ಮಾಣ್ದುದು ಕೆಲರ ನಾಲಗೆಗೆ; ಸುಡೆ ಮಳಲ್
ಬೊಕ್ಕೆಯುರ್ಬಿದುವೆನಿಬರಂಗಾಲ್ಗೆ; ಪಸಿವಡಸಿ
ನಡೆಗೆಟ್ಟುದಿನಿಬರಿಗೆ; ಸೆಕೆಯುಂ, ನೀರಳ್ಕೆಯುಂ
ತಾಳಲಾರದೆ, ಪೀರ್ದುದೊಡಲಿನರವಟ್ಟಿಗೆಯು
ಬೆಮರ ನೀರಂ! ಸುಂಟುರುರಿಗಾಳಿಗಳ್ ಸುತ್ತಿ,
ಮಂಥಿಸಿ ಮಳಲ್ಗಳಂ, ದೂಳಿವೆಟ್ಟಂ ರಚಿಸಿ,
ತಿರ್ರನೆ ತಿರುಗಿ ತಿರುಗಿ ಮೇಲೆತ್ತಿ, ರಿಂಗಣಂ
ಕುಣಿದುವೈ, ಮರಳುಗಾಡಿನ ಮರುಳ್ಗಳೋಲಂತೆ.
ಕಣ್ಗೆ ಪುಡಿಯಂ ತೂಳ್ದು ಕಟ್ಟಿದುವು ದಿಟ್ಟಿಯಂ;

ಮತ್ತೆ ಮೇಗಿಂದೆರಗಿ ಪೂಳ್ದುವಾಳ್ಗಳನೊತ್ತಿ
ಮುಚ್ಚಿ; ದೂಳ್ಮುಗಿಲ ಹರಹಿಂದುರಿವ ನೇಸರಂ
ಮುಸುಗಿ ಕಳ್ತಲೆಗೈದುವುನ್ಮಾದವೇರ್ದರೋಲ್
ಚೀತ್ಕಾರಗಳನೂಳ್ದು; ಚಿತ್ರಸ್ವನಂಗಳಿಂ
ಚಿತ್ರ ಚಿತ್ರಂ ನರ್ತಿಸಿತ್ತಾ ಮರು ಪರೇತ
ನಟ ಮಂಡಳಂ! ಕಾಲ್ಗೆಟ್ಟು ಕಣ್ಗೆಟ್ಟು ಸೇನೆ ತಾಂ
ತತ್ತರಿಸುತುತ್ತರಿಸುತಿರೆ, ಪೇಳ್ವೆನೇಂ, ಮುಂದೆ,
ಸಿಕತ ದಿಕ್‌ಚಕ್ರವಾಳಾಂತಮಂ ಸಿಂಗರಿಸಿ,
ಕಣ್ ಮೋಹಿಸಿತು ಮನೋಹರಂ ಮರುಸರೋವರಂ.
ಪಾರ್ದುದೆ ತಡಂ, ಗಂಟಲೊಣಗಿ ಬಾಯಾರ್ದರೆಂ,
ಮೃತರಿಗಮೃತದ ಕೃಪೆಯೆ ಕೈಸಾರ್ದುದೆಂದಾರ್ದು,
ಓಡಿದೆವು, ಬಯಕೆಯ ಬಿಸಿಲ್ದುದುರೆಗಳನೇರ್ದು,
ನೀಳ್ಕೊರಳ ನಿಟ್ಟೋಟದಿಂ: ತಣ್ಪುನೋಟದಿಂ
ತೆರೆನಲಿದು ಕುಣಿದತ್ತು; ತೆರೆಯ ಮೊರೆಯಿಂಪಿಂದೆ
ಕರೆಯನುಲಿದತ್ತು; ಕರೆದುದು, ನಿರಾಶೆಯ ನಡುವೆ
ದೂರದಾಶೆಯ ತೆರದಿ, ಪಳುಕು ತಿಳಿ ನೀರ್ಗಳಿಂ
ಕಣ್ಗೊಳಿಸಿ ನಂಬಿಪಾ ಬಿಸಿಲಿಚ ಮಳಲ್ಗೊಳಂ.
ಎನಿತೋಡಲೇನ್? ಓಡಿದಂತೆಲ್ಲಮದಕೆಮಗೆ
ನಡುವೆಯಿರ್ದಂತರದ ದೂರಮಕ್ಷೀಣಮೆನೆ
ನಿಂದುದಚಲಂ. ಕುದಿವ ಸೆಕೆ. ಸುಡುಮಳಲ್. ಬೇಯೆ
ಬೀಸುವ ಬಿಸಿಲ್ಗಾಳಿ. ದಣಿವು, ದುಗುಡಂ, ಪಸಿವು,
ನೀರಡಿಕೆ. ಬೆನ್ನಟ್ಟುತಿರಲಾ ಬಯಲ್‌ಭ್ರಾಂತಿ
ಬಯಲಾದುದೈ, ಬೈಗುನೇಸರ್‌ವೆಳಗು ಪಡುವ
ಪೊಳ್ತಿನಲಿ. ಏನೊರೆವೆನಾ ಗೋಳನಯ್ಯಯ್ಯೊ,
ಪಡೆಯೊರಲಿದುದು ನಿಡು ನರಳ್ ನರಳಿ, ಮರಳ ಮೇಲ್
ಪೊರಳಿ... ಪವನಜ ವಾಣಿ ತುಂಬಿದುದು ತೇಜಮಂ
ಮರಳಿ... ನೆತ್ತರ್ಮುಗಿಲ ಕೊಲೆಯ ಕಲೆಯಂ ಕೆತ್ತಿ,
ರಕ್ತ ರವಿಶವಮಳ್ಟುತಿರೆ, ಬಿಳ್ದುದಾ ಪಗಲ್
ಕರ್ದಿಂಗಳಿರುಳ ಮಸಣಕ್ಕೆ. ಓ, ಆ ರಾತ್ರಿ,
ಏಂ ಭಯಂಕರಮಾದುದಾ ತಾರಕಿತ ರಾತ್ರಿ!
ಕ್ರೂರ ತಾರಾ ಕಾಂತಿ ತಿಮಿರಮಂ ತೋರುತಿರೆ

ಮುನ್ನಡೆದೆವನಿಬರುಂ, ಬೀಳ್ವನ್ನೆಗಂ ಪರಿವ
ಛಲದಿಂದೆ: ದೈವಕೃಪೆ, ದೈವಕೃಪೆ ದಿಟಕಣಾ,
ಮೂಡಿತು ಮೃಕಂಡು ಋಷ್ಯಾಶ್ರಮಂ, ಮರುವನದ
ಮಧ್ಯೆ! ಮಾಯೆಯೊ ನಿಜವೊ ನಾನರಿಯೆ: ಮಗನಳಿಯೆ
ಮುನಿಯ ಸಂಕಟದುರಿಗೆ ಬೇಯಲ್ ಬೃಹದ್ವನಂ,
ಮೂಡಿತೆಂಬರ್ ಮೃತ್ಯುಮಂಚದ ಮಳಲ್ವಾಸಿನೋಲ್
ಸರ್ವಸಂಕಟಕರಂ ಮಹಾ ಮರುಪೃಥಿವಿ. ಕೃಪೆಯ
ಮನೆಯೆನಲ್, ನೀರ್ ನೆಳಲ್ ಪಣ್ಪಲಮ್ ತಣ್ಪಿಂಗೆ
ಬೀಡಾಗಿ, ಮೆರೆದಿರ್ಪುದೊಂದು ಮರುವನಮದರ
ನಡುವೆ. ತಪಮಿರ್ದನಲ್ಲಿ ಮೃಕಂಡು ಮುನಿವರಂ.
ಮಿಂದುಂಡು ಮಲಗಿ ಜೀವಂದಳೆದು, ಮರುದಿನದ
ಪಗಲನಲ್ಲಿಯೆ ಕಳೆದು, ರಾತ್ರಿ ಬರಲಾ ಮುನಿಯ
ಪೇಳ್ಕೆವೊಲರಿಲ್ವಟ್ಟೆಗಳನರಿದು, ಯಾತ್ರೆಯಂ
ಮುಂಬರಿಸಿದೆವು, ಚಂಡಕರ ತಾಪದಂಡಲೆಗೆ
ಸುರ್ಕಿ. ನಡೆದಿರುಳೆಲ್ಲಮಂ ಬೆಳಗುವೊಳ್ತಿಂಗೆ
ಕಳೆದುದಾ ಮರಣಕರ ಮರುಮಂಡಲಂ: ಮುಂದೆ
ಸೊಗಸಿತು ಪಸುರ್ಮಲೆಯ ತಣ್ಣೆದೆಯ ತಾಯ್ಪುರಕೆ!
"ರಾತ್ರಿಯೆಲ್ಲಂ ಮರುಧರಿತ್ರಿಯಂ ಚರಿಸಿದಾ
ತೃಷೆಗೆ ನೀರ್ದಾಣಮಂ ಪುಡುಕುತಿರಲೇನೆಂಬೆ?
ತಿಮಿರದ ತಿಮಿಂಗಿಲಂ ತೆರೆದ ತಾಳಿಗೆಯವೋಲ್
ಆಗುರ್ವಾಯ್ತು ಗಿರಿಗುಹಾ ಗಹ್ವರ ಮಹಾ ಬಿಲಂ.
ಬಳಿಸಾರ್ದನದನಚಲಕೂಟಾಭನನಿಲಜಂ
ಗುಲ್ಮವೃಕ್ಷಾಕೀರ್ಣಮಂ. ವಿಪಿನಕೋವಿದಂ,
ಸಂವೀಕ್ಷಿಸುತ್ತೆ, ಸಂಜಾತ ಪರಿಶಂಕೆಯಿಂ
ಸಂಬೋಧಿಸಿದನೆಮಗೆ ಸಲಿಲಾರ್ಥಿಗಳಿಗೆ: 'ಹೇ
ಹೃತದಾರ ಸನ್ಮಿತ್ರ ಸುಗ್ರೀವನಾಜ್ಞೆಯಂ
ಮತ್ತೆ ಕರ್ತವ್ಯಮಂ ಪೊತ್ತ ಸಹಚರರಿರಾ,
ಸೋವಿ ಸೋಸಿದೆವೆನಿತೊ ತೆಂಕಲಂ; ಮೈಥಿಲಿಯ
ನೆಲೆ ತೋರದಿದೆ. ಸತೀಚೋರನಾ ರಾವಣಂ
ಪೇಳಲಸದಳಮೆಲ್ಲಿ ಬೈತಿಟ್ಟಿಹನೊ? ಬಿಲಂ
ಕಾಣ್ಬುದಿದೊ ಪಾತಾಳ ಕೂಪೋಪಮಂ. ಶಂಕೆ

ಪುಟ್ಟಿರ್ಪುದೆನಗೆ: ಲಂಕೆಗೆ, ನಿಶಾಚರ ಪುರಕೆ,
ಕುಹರಮಿದೆ ಗುಹ್ಯಮಾರ್ಗಂ. ಕಾಣಿಮದೊ ಅಲ್ಲಿ:
ವಿವರ ಮುಖದಿಂ ನಿಷ್ಕ್ರಮಿಸುತಿವೆ ಜಲಾರ್ದ್ರಮಾ
ಕ್ರೌಂಚ ಸಾರಸ ಪಂಕ್ತಿ. ತೊಯ್ದು ತೇವದ ಗರಿಗೆ
ಹೂವಿನ ಹುಡಿಯ ಹಳದಿಯಂಟಿ ಹೊಮ್ಮುತಿಹವದೊ
ಹೊಂಗೆಲಸದೆಸಕದಾ ಜಕ್ಕವಕ್ಕಿಯ ಮಾಲೆ.
ಗವಿಯ ಬಾಯಿಯ ಮರಗಳುಂ ನೀರನೀಂಟಿದಾ
ಕೊರ್ವಿನ ಪಸುರ್ಪಿಂದೆ ಸೊಗಸುತಿವೆ. ರಕ್ಷಿಸಿದೆ
ರಾಕ್ಷಸ ರಹಸ್ಯಮಂ ತಿಮಿರಗೂಢಂ ಬಿಲಂ.
ಬನ್ನಿಮೊಳಪುಗುವಮರಸುವಮವನಿಜಾತೆಯಂ.'
ಹನುಮದೇವನ ವಾಣಿಯಾವೇಶದಿಂ ಪೆರ್ಚಿ
ದುರ್ದರ್ಶಮತಿಘೋರಮನಚಂದ್ರಸೂರ್ಯಮನ್
ಪೊಕ್ಕೆವಾ ಋಕ್ಷಬಿಲಮಂ. ಒರ್ವರೊರ್ವರಂ
ಪಿಡಿದು, ಪೆಗಲಂ ನೆಮ್ಮಿ, ನಡೆಯುತಿರಲಕ್ಕಟಾ
ಕರಡಿ ಪುಲಿಗಳ ಕೂಗುಮೆಲರುಣಿಯ ಫಣೆಯ ಸುಯ್
ಕೇಳ್ದತ್ತು, ನೀರ್‌ದುಮುಕುದನಿವೆರಸಿ. ಪೋಗುತಿರೆ,
ಸಾಗುತಿರಲೊಯ್ಯನೆಯೆ, ಬೆಕ್ಕಸಮುಕ್ಕುವಂತೆ
ತೆಕ್ಕನೆಯೆ ಕಣ್ಬೊಲಕೆ ಸುಳಿದುದೊಂದದ್ಭುತಂ,
ಸುರಸುಂದರಂ, ವಿತಿಮಿರಂ ವನಂ! ಪೊನ್ಮರದ
ಪೊಂದಳಿರ ಪೊನ್ನಲರ ಮಿಂಚು ಮಿರುಗುವ ಬನಂ
ಕಾಂಚನ ರಚಿತಮಾಯ್ತು, ಕತ್ತಲೆಯ ಕಂಡುಂಡು
ಕುರುಡು ಮೆತ್ತಿದ ನಮ್ಮ ಕಣ್ಗಳಿಗೆ.
"ಅದೆ ಕಣಾ
ಅಲ್ಲಿರ್ದುದಾ ಸ್ವಯಂಪ್ರಭೆಯ ದಿವ್ಯಾಶ್ರಮಂ.
ಕೃಷ್ಣಾಜಿನಾಂಬರದ ಆ ಮಹೀಯಸಿ, ತವಸಿ,
ನಮ್ಮ ಕತೆಯುಮನಂತೆ ವೆತೆಯನಾಕರ್ಣಿಸುತೆ,
ತನ್ನಾತ್ಮ ಕಥೆಯನೊರೆಯುತೆ, ತಣಿಸಿದಳು ನಮ್ಮನ್
ಅಮರ್ದುಣಿಸಿನಿಂದೆ ಪಣ್ ಬೇರ್ಗಳಾ. ರಚಿಸಿದನ್
ದಾನವರ ಶಿಲ್ಪಿ ಮಯನೆಂಬತುಲ ಮಾಯಾವಿ ತಾಂ
ವೈಡೂರ್ಯ ಕನಕಮಯಮಾ ಗುಹಾರಾಮಮಂ
ಹೇಮೆಯೆಂಬಪ್ಸರೆಯ ಸುಖಕೆ. ಆ ಚಾರುಮುಖಿ,

ಮಯ ಹೃದಯ ಹಾರಿಣಿ ಸುರಲತಾಂಗಿ, ತನ್ನ ಸಖಿ
ಮೇರುಸಾವರ್ಣಿಯ ಮಗಳ್ ಧರ್ಮಚಾರಿಣಿ
ಸ್ವಯಂಪ್ರಭೆಗೆ ನೀಡಿದಳದಂ ತಪಂಗೆಯ್ಯಲ್ಕೆ,
ಕೆಳೆಯ ನೆನಹಿಗೆ ಸಿರಿಕೊಡುಗೆಯಾಗಿ. ಇರ್ಪುದು ವರಂ,
ರಕ್ಷೆಯೋಲ್, ಮರ್ತ್ಯರಲ್ಲಿಗೆ ಬಂದೊಡಸುವೆರಸಿ
ಪಿಂತಿರುಗದಿರ್ಕೆಂದು. ಕಾರ್ಯದ ಸುಕೃತವಲಾ:
ಗೆಲ್ಗೆ ಕುರುಪಾಯ್ತಲಾ: ಬರ್ದುಕಿ ಬಂದುದು ನಮ್ಮ
ಪಡೆ! ಸಾಕ್ಷಿಯಿದಕಿಂದೆಯುಂ ಬೇರೆ ಏಕೆಮಗೆ
ಮುಂದೆ ಗುರಿ ಕೈಸಾರ್ಗುಮೆಂಬುದಕೆ? ಆ ದೇವಿ
ಕಣ್ಮುಚ್ಚೆ ನಿಂದರಂ ನಮ್ಮಂ ತನ್ನ ಮಹಿಮೆಯಿಂ
ತಂದಳಿಲ್ಲಿಗೆ ಮಹೇಂದ್ರಾಚಲಕೆ, ರೆಪ್ಪೆಯಂ
ತೆರೆವನಿತರೊಳ್!

"ಮನ್ನಿಸುವುದೆನ್ನನೀ ಮಹಾ
ಪರಿಷದಂ. ಸಮಯನಿಷ್ಠೆಯನುತ್ತರಿಸಿದೆನ್,
ಸಕಾರಣಂ. ತೊಲಗುಗೆ ನಿರಾಶೆ. ಪೇಡಿತನಮಂ
ಕೊಲ್ಗೆ ಬಗೆ. ಸಾಲ್ಗುಮಾ ಪಳಿವೀಡು, ಸೋಲ್ಮನಂ.
ಮೂಡುಗುರ್ಕಿಗೆ ಕೋಡು. ಬರ್ಕೆಮ ವಿಜಯಬುದ್ಧಿ.
ಕೆಟ್ಟಿರುಳ್ ಕಡೆಗಾಣ್ಬ ಮುನ್ನಮಿದೊ ಸುರಿಯುತಿದೆ
ಮಾಗಿಯ್ಕೆಕಿಲ್ ಸೋನೆ, ಜಗಮೆಲ್ಲಮಂ ಮುಸುಗಿ
ಬೆಳ್ಮಂಜಿನಿಂ. ದಟ್ಟ ಕಣ್ಮುಚ್ಚಿದಂ ತನ್ನ
ಸಪ್ತ ತೇಜಿಯ ತೇರನೇರಿ ಬರ್ಪಿನರೋಚಿ
ತಪ್ತ ತೇಜದಿನಟ್ಟಿ, ಸುಪ್ತಲೋಕವನೆಂತು
ದೀಪ್ತಿಯಿಂದೆಳ್ಚರಿಸುಗುಮೊ ಅಂತೆ ನಮ್ಮೆರ್ದೆಯ
ಮುಸುಗಳಿದು ಮೂಡುಗಾಶಾಜ್ಯೋತಿ ತಾಂ ಕೀರ್ತಿಕರ
ಧೈರ್ಯಪೂರ್ವಾಚಲದ ಶೃಂಗ ಸಿಂಹಾಸನದ
ತುಂಗ ಗೌರವಕೆ!"

ಆ ವಚನ ವಿದ್ಯುತ್ ಪ್ರಭಾ
ಲಹರಿ, ಕೇಳ್ದರ ಮೆಯ್ಗೆ, ಮಿಂಚುವರಿದುದು, ರೋಮ
ರೋಮಂ ನಿಮಿರಿ ಪುಲಕಮಂ ಕೈದುಗೊಳ್ವಂತೆ.
ಘೇ ಘೋಷಮಟವಿನಿಶ್ಶಬ್ದಮಂ ಮಥಿಸುತಿರೆ
ತಾರನೆದ್ದನುದಾರ ಮೂರುತಿ, ಕುಶಾಗ್ರಮತಿ,

ಸಂವಾದ ಮಧುರ ಭಾಷೆಯ ವಾದ ಮೇಧಾವಿ:
“ಕೋಕಿಲನ ಸರಗೇಳ್ದರಿಗೆ ಮಯೂರನ ಕೇಕಿ
ತಾನಿಂಪಹುದೆ? ಮೈಂದನಿಂಬಳಿ ನುಡಿಯಲೆಳಸುವಂ
ಮೂರ್ಖನಲ್ಲದಿರೆ ಸಾಹಸಿ ದಿಟಂ. ಆದೊಡಂ,
ವಿವೇಕಿ ಗೃಹಪತಿ ಔತಣದ ಕೂಡೆ, ಒಗರದ
ನೆವದಿ, ಅತಿಥಿಗೆ ಔಷಧಿಯ ಒಳ್ಪನೆರೆವವೊಲ್,
ಒರೆವೆನೆರ್ದೆಯಂ. ದೊರೆಯ ಕೊಟ್ಟವಧಿ ಮುಗಿಯಿತ್ತು; ಮೇಣ್
ಮೀರ್ದತ್ತು. ದೊರೆತುದಿಲ್ಲಿನ್ನುಂ ಧರಾತ್ಮಜೆಯ
ನೆಲೆ. ದೊರೆಯಬಹುದಾದೊಡಂ ದೂರಮಿರ್ಪುದಾ
ಸಂಭವಂ. ಸುಗ್ರೀವ ರಾಮಲಕ್ಷ್ಮಣರಲ್ಲಿ
ಕುದಿಯುತಿಹರೆಂಬುದಂ ಮರೆಯದಿರಿ. ಶೀಘ್ರದಿಂ
ಕಿಷ್ಕಿಂಧೆಗೆಯ್ದಿ, ನಮ್ಮನುಭವಂಗಳನೊರೆದು,
ಸರ್ವ ಕಪಿಸೇನೆಯಂ ಕೂಡಿಕೊಂಡಿತ್ತಣ್ಗೆ ಮೇಣ್
ದಾಳಿಕ್ಕುವಂ. ತಳುವಿದರೆ ಬರಿ ಕೆಲಸಗೇಡೆ,
ನಮಗುಮೆಮ್ಮಂ ನಂಬಿದವರಿಗುಂ. ಸಾಹಸಂ
ಸ್ತುತ್ಯಂ. ವಿವೇಕಮದರಿಂದೆಯುಂ ಶ್ಲಾಘ್ಯಮೈ.
ಸಾಹಸಂ ವೀರರಥಿ, ಸಾರಥಿ ವಿವೇಕಮಿರೆ.
ಮತಿವಲ್ಗೆಯಿಲ್ಲದಿರೆ ಸಾಹಸಂ ಗತಿಗೆಟ್ಟ
ತೇಜಿ. ಸಾಹಸಮಲ್ತು ನಮಗೆ ಗುರಿ, ಈಯೆಡೆಗೆ;
ನಮ್ಮ ಕೀರ್ತಿಯುಮಲ್ತು ಚರಮಲಕ್ಷ್ಯಂ. ನಮ್ಮ
ಗಮನದ ಕಣೆಗೆ ಸೀತೆಯೊಳ್ಪೆಯೆ ಗುರಿಯಕಣ್ಣು.
ಕೀರ್ತಿ ತಾನುಪಲಕ್ಷ್ಯವೆಂಬುದನಿಲ್ಲಿ ನೆನೆಯುವಂ.
ಕೀರ್ತಿಯೇಂ? ಪೆರರ ಮೆಚ್ಚುಗೆಯಲ್ತೆ? ತಮ್ಮೊಳಗೆ
ತಮಗೆ ನೆಚ್ಚಿಲ್ಲದವರಿಗೆ ಹೆರರ ಮೆಚ್ಚುಗೆಯ
ಕೆಚ್ಚಿರಲೆವೇಳ್ಕುಂ ದಿಟಂ. ಕಾಣೆನಾನಿಲ್ಲಿ
ಮಂದಿಯ ಪೊಗಳ್ಕೆಯನೆ ತನ್ನ ಬೀರಂಗೆತ್ತು
ಮೆರೆವಲ್ಪನಂ. ದಣಿದ ದಳಮಂ ಮಗುಳ್ಚುವಂ.
ಹಿಂಜರಿವರೆಲ್ಲ ಹೇಡಿಗಳಲ್ತು. ತುದಿ ಜಯಕೆ
ತಾನಕ್ಕುಮೋರೊರ್ಮೆ ನೀತಿ ಹಿಂದೋಟಮಂ.
ಕಿಷ್ಕಿಂಧೆಗೆಯ್ದಿ, ನಮ್ಮೊಡೆಯಂಗೆ ಸರ್ವಮಂ
ಪೇಳ್ವು, ಮುನ್ ಬೆಸನನೆಸಗುವುದೆಮಗೆ ನೀತಿಯಿನ್.”

ಭಾವ ರಾಹಿತ್ಯಮೆನೆ ತೋರ್ದಡಂ, ಇಂಗಿತದಿ
ಭಾವಮಯ ಬುದ್ಧಿಸಾಹಿತ್ಯಮಂ ಬೋಧಿಸುತೆ
ಕುಳಿತನಾ ತಾರನಪ್ರತಿಮ ವಾಗ್ಮಿದನತುಲ
ಚಟುಲ ಜಿಹ್ವೆಯ ವಾದಮೇಧಾವಿ. ತರುಗಳೊಳ್
ಬನವಕ್ಕಿ ಪಾಡತೊಡಗಿದುವಿಲ್ಲಿ ಮೇಣಲ್ಲಿ.
ತೀಡಿದುದು ಕೊರೆಚಳಿಯ ಮಾಗಿಯ ಕುಳಿರ್ಗಾಳಿ.
ಮುಸುಗಿದಿಬ್ಬನಿಮಂಜಿನಲಿ ಕೋಲುಕೋಲಾಗಿ
ತೂರಿಬಂದುದು ಪಸುಳೆನೇಸರ ಕದಿರ್‌ಕಣೆಯ
ಬೆಳಕು ನೆಳಲಿನ ಬಿಳಿಯ ನೀಲಿಯ ಕಲೆಯ ಬಲೆಯ
ರಂಗೋಲಿ. ಕೃತಿಸಿದುದು ತರುಣಾರುಣಾತಪಂ
ವಾನರ ಮಹಾಕೃತಿಗಳಂ, ದೀರ್ಘಮುನ್ನತಮೆನಲ್
ಶೈಲಛಾಯೋಪಮಂ, ಮಂಜಿನ ಪಟದ ಮೇಲೆ.
ತಾರವಾದದ ಸಾರ ಸತ್ತ್ವದಿಂದಾ ಸಭೆಗೆ
ಕವಲಾಗಿ ಬುದ್ಧಿ, ಗುಜುಗುಜು ಮಾತು ಮೊರೆದತ್ತು,
ಹಿಂಡೆದ್ದ ಜೇನ್ಗೂಡಿನೋಲ್. ಇದ್ದಕ್ಕಿದ್ದಂತಿದೇನ್?
ಸದ್ದು ನಿಂತಾಲಿಸಿತು ಸಭೆ: ಆ ಮಹೇಂದ್ರಗಿರಿ
ಶೃಂಗದಿಂ ದುಮುಕುತಿಳಿದೈತಂದುದಾಗಳೆಯೆ, ಕೇಳ್,
ಸಂಪಾತಿ ಚೀತ್ಕಾರಮಿರಿದು ಕಿವಿಗೊಳ್ವಿನಂ!
ಸೇನಾನಿ ನೀಲನಂಗದ ಹನುಮ ಜಾಂಬವರ
ಮಂತಣವನನುಮತಿಸಿ, ವ್ಯಾಘ್ರೋಗ್ರವೀರನಂ
ಕರೆದು ಬೆಸಸಿದನಿಂತು ಶರಗುಲ್ಮನಂ: "ಪೋಗು,
ನಡೆ, ಚೆಚ್ಚರಿಂ. ಕೂಗಿಗರಿ ನೆಲೆಯನೆಚ್ಚರಿಂ.
ಪಡೆಯ ಕೊಳ್ ನಿನ್ನಾಯ್ಕೆಬೀರರಂ." ಏರ್ದನಾ
ಮಲ್ಲಗಾಳೆಗದ ಪುಲಿ, ತನ್ನಾಯ್ದ ಕಲಿಗಳಂ
ಕೂಡಿ, ಕಂದರಕಿಳಿದ ಮಂಜುಬೆಳ್ದೆರೆ ಮುಸುಗಿ
ಕಣ್ಗೆ ಮರೆಯಾಗಿರ್ದೊಡಂ ಪಸುಳೆವಿಸಿಲೆಸೆದಿರ್ದ
ನಿರ್ಮಲದಚಲದುನ್ನತಿಗೆ, ಕೂಗು ಕೇಳ್ದೆಡೆಗೆ.
ಬೆಟ್ಟವೇರುತೆ, ಪಿಟ್ಟುದಟ್ಟೈತಿರ್ಬನಿಸೋನೆ
ತೆಳ್ಪನಾಂತಂತೆ, ವಿಪಿನಂ ಸಾಂದ್ರತೆಯನುಳಿದು
ವಿರಳಮಾದತ್ತಟನಸುಲಭಂ. ಸಮೀಪಿಸಲ್
ಸತ್ಯಗಿರಿ ಶಿಖರಮಂ, ಚಿತ್ತವಿಭ್ರಮಕಾರಿ

ಶಬ್ದಜಾಲಾರಣ್ಯಮುಂ ತರ್ಕ ಪಾಂಡಿತ್ಯಜಂ
ವಾದದಸ್ಪಷ್ಟತಾ ಪ್ರಾಲೇಯಮುಂ ತೊಲಗಿ
ಜ್ಯೋತಿ ಸಾಕ್ಷಾತ್ಕಾರಮಪ್ಪಂತೆ. ಏರಿಯುಂ,
ಏರಿದಂತೆಲ್ಲ ವಿರಳತೆಯಾಂತು, ಕಾಲ್‌ಸೋಲ್ತು,
ಕಡೆಗೆ ಮರಮೆರಡುಮೂರಾಗಿ ನಿಂದಡವಿಯನೆ
ನೀಹಾರಮನುಸರಿಸಲೆಸೆದುದು ಮಹೇಂದ್ರಗಿರಿ
ಶುಭ್ರ ಚೂಡಂ, ಚುಂಬಿತಾಂಬರ ಸರಸ್‌ಸ್ಫಟಿಕ
ನಿರ್ಮಲಾನಿಲವಲಯ ಸಂಶೋಭಿ.
                                        ಕಂಡರಾ
ಕೂಟದೊಳ್ ಬಂಡೆಗಳೊಡನೆ ಬಂಡೆಯೆನೆ ತಪಂ
ಬಡುತಿರ್ದ ಖಗವೃದ್ಧನಂ, ಮಹಾಗೃಧ್ರವರನಂ,
ಶರಧಿಸಖನಂ, ಗಗನಮಿತ್ರನಂ, ವಿಪಿನ ಭೂ
ಶೈಲ ಸಂಗಾತಿಯಂ, ಸಂಪಾತಿಯಂ! ಪರಿದ
ತಿಪ್ಪುಳಿಂದೊಡಲ ಪುಣ್ಗಳಿನೆರ್ದೆಯ ನೋವಿಂದೆಯುಂ
ಮೇಣನ್ನದಲ್ಪತೆಯ ದೆಸೆಯಿಂದೆಯುಂ ಸುರ್ಕಿ
ಸುರುಂಟಿರ್ದ ಕಂಕಾಲತಾ ಕ್ಷಾಮ ಭೀಮನಂ
ಕಂಡುದೆ ತಡಂ, ಬಡಿಯಲೆಂದರೆಗುಂಡುಗಳನೆತ್ತಿ
ಮೇಲ್ವಾಯುತಿರ್ದ ಕಪಿಶೂರರಂ ಕೈತಡೆದು,
ಮುನ್ನಡೆದು, ತಾನೆ ನುಡಿದನ್ ಮೌನಮೂರ್ತಿಯ
ಮುಖದ ಮುಂದಾ ಸಮರ್ಥ ಶರಗುಲ್ಮ:
                                                  "ನುಡಿ ನಿನ್ನ
ಪರಿಚಯವನೆಲೆ ಖಗ ಬೃಹದ್ರೂಪಿ. ತಳುವಿದಡೆ
ಹರಣಗೇಡಕ್ಕುಮದೊ ನಿಂತಿಹರ್, ನೋಡಲ್ಲಿ,
ಮಿಳ್ತುಗೈ ಬೆರಳ್ಗಳೋಲ್, ಕಲ್ವಿಡಿದು, ಸಾಲ್ಗೊಂಡು,
ಕಿಷ್ಕಿಂಧೆಯನ್ನಾಳ್ವ ವಾನರ ಮಹಾನೃಪತಿಯಾ
ಸುಗ್ರೀವನಾಳ್!"
                        ಚಳಿಗೆ ಪಕ್ಕಗೂಡಾಗೊರಗಿ
ಮಾಗಿಯೆಳವಿಸಿಲ ಕಾಯಿಸುತಿರ್ದ ನರೆನವಿರ
ಗರಿಮೆಯ್ಯುವಂ, ರೆಪ್ಪೆಯಂ ಬಿರ್ಚಿ, ನಿಡುನೋಡಿ,
ತೊದಲುನುಡಿ ನುಡಿವಣುಗನಂ ನೋಳ್ಪಜ್ಜನಂದದಿಂ
ಪರಿಚಯವನರಿತುಮೌದಾಸೀನ್ಯಮಂ ನಟಿಸಿ:

"ಪಕ್ಕಂಗೆದರ್ದನೆಂ, ಮಕ್ಕಳಿರ; ಮುದುಕನೆಂ.
ಬನ್ನಿಮೆನ್ನಂ ನೆಗಹಿ; ಕುಳ್ತ ಬಳಿಕೊರೆದಪೆನ್
ನಿಮ್ಮಿಷ್ಟಮನ್."
ಒರ್ವನಲ್ತಿರ್ವನಲ್ತಾ ಪಡೆಗೆ
ಪಡೆಯೆ ತಾಂ ಕೈಗೆ ಕೈ ನೆರವಿತ್ತೊಡಂ, ಖಗಮಿರ್ಕೆ
ಹಂದಲಿಲ್ಲರೆಯ ಮೇಲೊರಗಿರ್ದದರ ನೀಳ್ದ
ಛಾಯೆಯುಂ! ಗೊಣಗಿದನ್ ತನಗೆ ತಾನೆಂಬಂತೆ
ಸಂಪಾತಿ: "ಏನ್ ಮಿಳ್ತುಗೈ ಬೆರಳುಗಳೊ ಕಾಣೆ!
ಮೆಯ್ಯನಲುಗಿಸಲಾರದೆಯೆ ಬರಿದೆ ತಿಣುಕುತಿವೆ,
ಶಿಥಿಲಮಂ, ಗರಿವಿಳ್ದ ಮುಪ್ಪಾದುದಂ! ಮತ್ತೆ,
ಪ್ರಾಣವಜ್ರವ ಸೆಳೆವ ಸಾಹಸವನೊದರುತಿವೆ!"
ತನಗೆ ತಾನೆಂದುಕೊಂಡೊಡಮದಂ ಕೇಳ್ದು ತಲೆಯಂ
ಬಾಗಿದುದು ವಾನರ ಸಮಷ್ಟಿ. ಖಗಭೀಮನಂ
ಕುರಿತು ಗೌರವದಿಂದೆ ಶರಗುಲ್ಮನಿಂತು:
"ಹೇ
ಖಗಮಹಾತ್ಮಾ, ಮನ್ನಿಸೆಮ್ಮನಪರಾಧಮಿರೆ.
ಪಕ್ಷಿರೂಪಂಬೆತ್ತ ರಾಕ್ಷಸಾಶಂಕೆಯಿಂ
ವರ್ತಿಸಿದೆವಂತು. ನೀನಾರೊ ಸುರಸಜ್ಜನಂ,
ಧರ್ಮಸತ್ವಂ. ಧ್ವನಿಯೆ ಸಾರುತಿದೆ ಹೃದಯಮಂ.
ಕಲಿಯಾದೊಡಂ ದುಃಖಿ ನೀನಾಗಿ ತೋರುತಿಹೆ.
ನಿನಗಿದೇಂ ಕಷ್ಟಮೀ ಗತಿರೋಧನಂ? ಗ್ಲಾನಿಯದು
ನಮ್ಮಿಂದೆ ಪರಿಹಾರಮಾಗುವೊಡೆ, ಬೆಸಸೆಮಗೆ
ಮುಂಗಜ್ಜಮಂ. ನೀನಾರ್? ಇದೇಕೆ ತಳ್ತಿಹೆಯಿಲ್ಲಿ?
ನೀನಾಗಳೇತರ್ಕೆ ಚೀತ್ಕರಿಸಿದಯ್? ಗೋಳ್ದನಿಯ
ಕೇಳ್ದಿಯೆ ಮಹಾಸೇನಾನಿ ನೀಲನಟ್ಟಿದನೆನಗೆ
ಬೆಸನಿತ್ತು. ಶರಗುಲ್ಮನೆಂಬರೆನ್ನಂ: ನಾಂ ಬಿಂದು
ಮಾತ್ರನೆಂ; ಸಿಂಧು ತಾನಿಹುದಲ್ಲಿ ಸಭೆ ನೆರೆದ
ವಾನರಧ್ವಜಿನಿ."
"ವಾನರ ವಿನಯಮೂರ್ತಿ, ಕೇಳ್,
ಶರಗುಲ್ಮ," ಮೊಳಗಿದುದು ಮಂದ್ರಂ ಮೃದಂಗದೋಲ್
ಧ್ವನಿ ವಿಹಂಗೇಂದ್ರನಾ, "ಸಂಪಾತಿಯಾಂ ಶ್ಯೇನಿ

ಸುತನೆಂ. ಜಟಾಯುವವರಜನೆನಗೆ. ನಮ್ರತೆಯ
ಮಾತಿರ್ಕೆ. ದಿಟಮೊರೆವೆನೆಮಗೆಣೆಯ ಕಲಿಗಳಂ
ಕಾಣದಿರ್ದವೊ ಲೋಕ ಪದಿನಾಲ್ಕರೊಳ್! ನಾನೊರ್ಮೆ
ಬೇಂಟೆ ಬೇಳಂಬದಿಂ, ಸಾಗರದನಂತತೆಯ
ಮೇಲೆ, ದೂರಾಂತರಿಕ್ಷದಲಿ, ಬಾನಾಡಿಯೆಂ
ಕಂಡೆನ್ ಸಮುದ್ರ ಫಣಿಯಂ ಸಪ್ತಯೋಜನದಾ.
ವಜ್ರಮುಖದಿಂ ವಜ್ರನಖದಿಂ ಜವಂಜವನ
ವಜ್ರಪಾತದ ವೇಗದಿಂದೆರಗಿದೆನ್; ಕಡಲ್
ಕಡೆದವೋಲುಲ್ಲೋಲಕಲ್ಲೋಲವಾಗುತಿರಲಾ
ಕಡಲಪಾವಂ ತುಡುಕಿ ಪಿಡಿದೆತ್ತಿದೆನ್ ನಭೋ
ಮಂಡಲಕೆ. ಪೇಳ್ವೆನೇಂ? ಕಚ್ಚಿಕೊಂಡಿರ್ದುದಾ
ನಾಗಭೋಗಂ ತಿಮಿಂಗಿಲವನಚಲೋಪಮಂ.
ಮಂದರವೆರಸಿ ವಾಸುಕಿಯನುಯ್ವವೋಲೆತ್ತಿ
ತಿಮಿಸಹಿತಮಾ ವ್ಯಾಳಮಂ ನಭೋಗಾಮಿಯಾಂ
ಹಿಮಗಿರಿಗೆ ಹಾರುತಿರೆ, ಜಗದ್‌ಭಯಂಕರಮಾಯ್ತೊ
ದೈತ್ಯಮಾ ದೃಶ್ಯಮಾಭೀಳರಮ್ಯಂ! ಪಾಪಮಯ
ಕರ್ಮ ಸಂಸ್ಕಾರಮಂ ಪೊತ್ತ ಭಾರಕೆ ಸಿಡಿದು
ಮಿಡಿದು ಬೇಗುದಿಗೊಳ್ವ ಜನ್ಮಜನ್ಮಾಂತರದ
ಹತ ಜೀವ ಶತಮಾನ ಸೂತ್ರದೋಲಾ ಭೋಗಿ ತಾಂ
ನನ್ನಾ ಪದಪ್ರಖರನಖ ಕಾಲಮುಷ್ಟಿಯ ಮೃತ್ಯು
ನಿಷ್ಪೀಡನಕೆ ಸಿಲ್ಕಿ ನುಲಿದುದಾದೊಡಮಯ್ಯೊ
ತೊರೆದುದಿಲ್ಲಾತ್ಮತಿಮಿರೋಪಮ ತಿಮಿಂಗಿಲದ
ಸಂಗಮಂ. ಹಾರಿ ಬರಬರಲವನಿ ಗೋಚರಿಸೆ,
ಫಣೆಯ ದೀರ್ಘತೆಯಿಂದೆ ತಿಮಿಯ ಪೀನತೆಯಿಂದೆ
ನಖದ ಹಿಂಸೆಗೆ ಮುಳಿದ ಪಾವಗಿಯೆ ಮೀನ್ ಕಾರ್ದ
ನೆತ್ತರೆಂಜಲಿನಿಂದೆ ಗಿರಿವನಗಳಿಗೆ, ಪುರಕೆ, ಮೇಣ್
ಪುಣ್ಯಾಶ್ರಮಕೆ, ಕೊಲೆಗೆ ಪೊಲೆಗೆ ಶಂಕಿಸಿ, ಮೇಲೆ
ಮೇಲೆಮೇಲೇರಿದೆನು, ಹಾರಿದೆನು, ಸೇರ್ದೆನಾ
ಮೇಘದಾಚೆಯ ಪವನ ಭುವನಕ್ಕೆ. ಪೇಳ್ವೆನೇಂ
ದುರ್ವಿಧಿಯೊ? ಮೋಡದಾಚೆಯ ನನಗೆ ಮರೆಯಾಯ್ತೊ
ಈ ಪೃಥಿವಿ!''

ಕೇಳುತಿರ್ದವರೊಳಗೆ ನುಡಿದನೊರ್ವಂ
ಸವಿದುಂಡು ತನ್ನ ಕಲ್ಪನೆ ಕೆತ್ತಿದಾ ಚಿತ್ರಮಂ
"ನೀನುಮಂತೆಯೆ ಕಾಣದಾದೆಯಯ್! ಗಗನಮಂ
ಪಾಯ್ದುದವಾ ಫಣೆಯರ್ಧಮಗ್ರದ ತಿಮಿಂಗಿಲಂ ಮೇಣ್!
ನೆನೆಯಲೇನದ್ಭುತಂ ದೈತ್ಯದೃಶ್ಯಂ! ಅಹಾ
ಘೋರ ರಮಣೀಯಂ! ಅಹೋದ್ಭುತಂ!"
ಪೂರ್ವಮಂ
ನೆನೆದು ಪುನರನುಭವಿಸುತಿರ್ದ್ದಂ, ಲಘುಕ್ಷಣಂ
ಕೆಮ್ಮನಿರ್ದುಂ, ಮತ್ತೆ ಸಂಪಾತಿ: "ಇರ್ದುದಾ
ಕಾಲಮಿನ್ನೈತರ್ಪುದೇಂ? ಬರಿದೆ ನೆನೆದೊಡೇಂ?
ಪತನಕದೆ ಹೇತುವಾದುದನೊರೆವೆನಾಲಿಸಾ:
ಋಷಿಮನೋವೇಗದಿಂ ಸೀಳುತಾಕಾಶಮಂ,
ರೆಂಕೆವೀಸಿಂದೆಲ್ಬಿ ದಿಕ್ಕುದೆಸೆಗಟ್ಟುತೆ
ಮುಗಿಲ್ಗಳಂ, ತಿರಿಗಾಳಿ ಸುಳಿಗಾಳಿ ಭೋರ್ಗಾಳಿ
ಬಿರುಗಾಳಿಗಳನೆಬ್ಬಿಸುತೆ, ದಿಗಂತಂ ಬರಂ
ನೀಳ್ದ ನೆಳಲಿನ ಹಿಡಿಯ ಚವರಿಯಿಂ ಗುಡಿಸುತ್ತೆ
ಭೂಗೋಲ ಭೂಮವಿಸ್ತೀರ್ಣಮಂ, ಸಾಗುತಿರೆ
ಗಾಳಿವಟ್ಟೆಯೊಳಹಾ ಮುಗ್ಗರಿಸಿದಂತಾಯ್ತು; ಮೇಣ್
ಭೋಂಕನೆ ನಭಃಸ್ಥಳಕ್ಕೆಸೆದೆತ್ತಿ ಬೀಸಿದೋಲ್
ನೂಂಕಿದನುಭವಮಾಯ್ತು; ಮೇಣ್ ಭಾರಮೊಯ್ಕನೆ ತೊಲಗಿ
ಲಘುವಾಯ್ತು ಕಾಲ್ಗೆ! ಬೆಕ್ಕಸವಡುತಲೇರುತಿರೆ
ತೆಕ್ಕನೆ ಹೊಳೆದುದರಿವೆನಗೆ: ಮೋಕ್ಷದ ತರಕ್ಷು ತಾಂ
ಭಗವತ್ ಕೃಪಾನಖಂಬೋಲ್, ಯುಗಯುಗಂ ಬೆಂಬತ್ತಿ
ರೋಗ ಸಂಕಟ ಮರಣ ವೈರಾಗ್ಯದಂಷ್ಟ್ರದಾ
ತನ್ನುಗ್ರದಯೆಯಿಂ ಮುಮುಕ್ಷು ಜೀವಾತ್ಮನಂ
ಪಿಡಿದಲುಬೆ ದುರಿತಕರ್ಮಂ ಕಳಚಿಬೀಳ್ವಂತೆ, ಕೇಳ್,
ನನ್ನುಗುರ ನಂಜಿಗುಸಿರಂ ತೊರೆದ ಘೋರಾಹಿಯಾ
ವದನ ರದನದ ಪಿಡಿಪು ಸಡಿಲಿದ ತಿಮಿಂಗಿಲಂ
ಕೆಡೆದುದೊ ಧರಾತಳಕ್ಕೆ. ಹಾ ಕೆಡೆದುದಂತೆಯೆ ನನ್ನ
ಕೀರ್ತ್ಯುನ್ನತಿಯ ಗೋಪುರಂ!. . .ಪಿಂತಿರುಗುತಾಕ್ಷಣಂ,
ಕ್ಷಣದೆ ಮುಂಚಿದ ಪಲವು ಯೋಜನದ ದೂರಮಂ

ಹಿಂಚುತಿಳಿದೆನ್, ತಿಮಿರಹಿತ ಫಣಸಹಿತಮಾ ನೆಲಕೆ
ನೇರಕ್ಕೆ. ಪೇಳ್ವೆನೇನಾಗಿರ್ದುದಂ? ನುರಿನುಳ್ಗಿ
ಜರ್ಜರಿತಮಾಗಿರ್ದುದೈ ಮುನಿವರ ನಿಶಾಕರನ
ಪುಣ್ಯಾಶ್ರಮಂ! ಪೊರಗೆ ಪೋಗಿರ್ದವಂ ಬರ್ದುಕಿದಂ
ಋಷಿ; ಮಡಿದಿರ್ದರಾಶ್ರಮದೊಳಿರ್ದಿತರ ತಪೋ
ಜನಂ. ಪಿಂತಿರುಗಿದಾತಂಗೆ, ಕಾಲ್ವಿಡಿದು ಬೇಡಿ,
ಬಿನ್ನೈಸಿದೆನ್ ನಡೆದುದನಿತುಮಂ. ಸುಯ್ದನಾ
ಚಾಗಿ. ನಿಡುವೊಳ್ತು ಜಾನಿಸಿದನಂತರಮೆನಗೆ:
'ಶಪಿಸೆನಾಂ. . . ನಿನ್ನಿಂ ಜಗತ್‌ಕ್ಷೇಮಕರಮಪ್ಪ
ಗುರುಮಹತ್ಕಾರ್ಯಮಕ್ಕುಂ. . . ಅದಪ್ಪುದಾದೊಡಂ,
ತಪ್ಪದಯ್ ನಿನ್ನ ಕರ್ಮಕೆ ತಕ್ಕ ಶಿಕ್ಷಾಫಲಂ.
ನಿನಗೊದಗಿದಪುದೊಂದು ಪೆರ್ಬೇನೆ. ಆ ಸಂಕಟಮೆ
ಪಾಪಪರಿಹಾರಕ್ಕೆ ನಿನಗೆ ಸಾಧನಮಾಗೆ,
ಕೊನೆಗೆ ನಿನ್ನಿಂದಾಗುವಾ ಮಹತ್ಕಾರ್ಯದಿಂ
ಸಿದ್ಧಿಪುದು ನಿನಗುಮಂತೆಯೆ ನಿಖಿಲ ಲೋಕಕ್ಕೆ ಕೇಳ್
ಶೋಕಮೋಕ್ಷಂ.' ವಂದಿಸಿದೆನಂದು ಮೊದಲಾಗುತಾ
ಗುರುವಿಗಾಂ ಶಿಷ್ಯನಾದೆನ್, ಕರ್ಮಮೋಚನಕೆ
ಕೈಕೊಳ್ವವೋಲ್ ಧರ್ಮಕೈಂಕರ್ಯಮಂ.
                                        "ಇರಲೊರ್ಮೆ
ನಾನುಂ ಸಹೋದರ ಜಟಾಯುವುಂ ಬಿನದಕ್ಕೆ
ಗಗನಚಾರಿಗಳಾಗಿ ಪೊಕ್ಕೆವೊ ಮಹಾಗ್ರೀಷ್ಮಮಾ
ಸೂರ್ಯಪಥಮಂ. ಕ್ರೀಡೆಯುನ್ಮಾದದಿಂ ಮೇಲೆ
ಮೇಲೆಮೇಲಕ್ಕೇರುತಿರೆ, ತೆಕ್ಕನೆಯೆ ಕಂಡೆನ್
ಸೀಯುತಿರ್ದಾ ಸೋದರನ ರೆಕ್ಕೆಯಂ. ಹಾರಿ
ಮರೆವಿಡಿದೆನೆನ್ನ ಮೆಯ್‌ಗರಿಗೊಡೆಯನಯ್ಯಯ್ಯೊ!
ತಿಪ್ಪುಳೆಲ್ಲಂ ಸುಟ್ಟು ಸೀದುರುಳಿದೆನ್ ನೆಲಕೆ,
ಕಲ್ಲುರುಳ್ವಂತೆ. ಬಿದ್ದೆನ್ ಕಡೆಗೆ, ನಡುಗೆ ಶೈಲಂ,
ನೀಂ ನೋಡುವಿಲ್ಲಿ. ಕಾದಿಹೆನಿಂತು ಶತಶತಂ
ಸಂವತ್ಸರಂ, ನೆಮ್ಮಿ ಮುನಿವಾಣಿಯಂ. ಸುತಂ
ವಜ್ರನೆಂಬುವನೆನಗೆ ತಂದೀವನುದರಮಂ.
ಬರ್ದುಕಿಹೆನ್ ಮುಂದೆ ಬರ್ದುಕಿಹುದೆಂಬುವಾಸೆಯಿಂ.

ಹತ್ತಿರದೊಳೆತ್ತಲುಂ ಕಾಣೆನಾನುದ್ಧಾರದಾ
ಹಸ್ತ ಛಾಯಾ ಚಿಹ್ನೆಯಂ. ಸುಟ್ಟು ಪೂರ್ಣಾರ್ತನೆಂ;
ಮೇಣ್, ಬೆಂದ ಮುಪ್ಪಿಂದೆಂತು ಮೇಣಾವುದಕ್ಕುಮೊ
ಮಹತ್ಕಾರ್ಯಂ? ಅಯ್ಯೊ, ಇನ್ನೆನಿತು ಯುಗಮಿಂತೆ, ಪೇಳ್,
ಕಾಯವೇಳ್ಕುಮೊ ಕೃಪೆಯ ಹಾರೈಕೆಯಿಂ? ಶಿವಾ,
ಬಲಹೀನನೆನ್ನಿಂದೆ ಲೋಕಕೆಂತಕ್ಕುಮಾ
ಗುರುವೊರೆದ ಶೋಕಮೋಕ್ಷಂ? ನನಗುಮದರಿಂದೆ, ಕೇಳ್,
ಶಶಶೃಂಗ ಸದೃಶಮೀ ಶೋಕಮೋಕ್ಷಂ!''

ನರಳಿ
ಮಗುದೊಮ್ಮೆ ಕರುಳಿರಿಯುವಂತೆ ಚೀತ್ಕರಿಸಿದಾ
ಪಕ್ಷಿವೃದ್ಧಂಗೆ ಶರಗುಲ್ಮ ವಾನರನಿಂತು
ಸಂತೈಕೆಯಂ: ''ಮಾಣ್ಬುದು ನಿರಾಶೆಯಂ, ಹೇ
ವಿಹಂಗಮ ತಪಸ್ವಿ. ದೈವಕೃಪೆಗೀ ಕ್ಲೇಶಮುಂ
ರೆಂಕೆಯಪ್ಪುದು! ಶಂಕೆಯೇಕೆ? ಋಷಿವಾಣಿಯುಂ
ಪುಸಿವುದೇಂ? ಬಲಹೀನನಿಂದೇಂ ಮಹತ್ಕಾರ್ಯ
ಸಿದ್ಧಿಯೆಂದೇಕೆ ಸಂದೆಯ ಪಡುವೆ? ಶಿವಕೃಪೆಗೆ
ತೃಣಮೆ ಖಡ್ಗಂ; ಪನಿ ಕಡಲ್; ಕಿಡಿ ಸಿಡಿಲ್! ಶ್ರದ್ಧೆ ತಾಂ
ಸಾಣೆಯಿರೆ, ತಾಳ್ಮೆಯೆ ತಪಂ. ಧರ್ಮಶಕ್ತಿಯುಂ
ಯೋಗಗೊಂಡಿರೆ, ಕರ್ಮಿಯಯ್ ಕಾಯ್ವಾತನುಂ. ಶಿಲ್ಪಿ
ಕೈಯಿಟ್ಟರಾ ಕಾಣ್ಬ ಕಾಡುಗಲ್ಲಿಂದುಣ್ಮದೇಂ
ಕಲಾಪ್ರತಿಮೆ? ನಿಶ್ಶಬ್ದಿಯೈ ಈಶ್ವರ ಕೃಪಾಬ್ಧಿ.
ಬರ್ಪುದನರಿಯಲಾರೆವಂತೆಯೆ ಮಹತ್ಕೃತಿ ತಾಂ
ಮಹನ್‌ಮೌನಿ. ನೀನರಿಯುವನಿತರೊಳೆ ನಿನ್ನಿಂದೆ
ಸಂಘಟಿಸಬಪ್ಪುದಘಟನ ಭಾವಿತಂ.''

''ವತ್ಸ,
ಕಣ್ಣಿಗೊರಟಾದೊಡೇಂ ನಿನ್ನ ರೂಹಂ? ಕಿವಿಗೆ ದಲ್
ಮಂತ್ರಮಧುರಂ ನಿನ್ನ ಜಾಣ್ವಾಣಿ! ಸಾಲ್ಗುಮೀ
ನನ್ನ ಸಂಕಟವಾರ್ತೆ. ಪೇಳಿಮಾಲಿಪೆನಯ್ಯ
ನಿಮ್ಮ ಕಥೆಯಂ.''

ಪೇಳ್ದನಾಖ್ಯಾನಮಂ, ಶೀಘ್ರಮೆನೆ
ಸಂಕ್ಷೇಪದಿಂ, ರಾಮ ವನವಾಸ ವಾರ್ತೆಯಂ...

ಸೀತಾಪಹರಣಮಂ... ಸುಗ್ರೀವಸಖ್ಯಮಂ...
ಮಾರ್ಗಿತವ ಕಥೆಯಂ... ನಿರರ್ಥಕತೆಯಂ... ಮತ್ತೆ
ವಾನರಪ್ರಮುಖರಂ ರಾಹುಬಾಹುಗಳಿಂದೆ
ಬಿಗಿದಿಹ ನಿರಾಶಾ ನಿಶಾಚರ ಪಿಶಾಚಮಂ.–
ತನ್ನ ತಮ್ಮನ ಮರಣಮಂ ಕೇಳುತಾ ದುಃಖಿ,
ಪೋದವೊಲ್ತಿನ ಕೊಕ್ಕು ಬರ್ಪವೊಲ್ತಂ ಪೊಕ್ಕು
ಸೀಳ್ವಂತೆ, ಬಾಲ್ಯ ಚಿತ್ರ ಸ್ಮೃತಿಯ ಶೋಕದಿಂ
ದಹಿಸಿದನ್ ರೋಷನೇತ್ರದಿ ದಕ್ಷಿಣಾಶೆಯಂ,
ಕಡುಗಗೊಕ್ಕಿಂ ರಕ್ಕಸನ ಮಂಡೆಯಂ ಕುಕ್ಕಿ
ಜಕ್ಕಿ ಪುಡಿಗೆಯ್ವವೋಲ್! ಮೊಳಗಿದನ್ ತನ್ನೊಳಗೆ ತಾಂ
ಧ್ವನಿ ಭಯಂಕರನಾಗಿ ಸಂಪಾತಿ: "ಎಲವೋ
ನಿಶಾಚರ ದಶಗ್ರೀವ, ಗುರುಕೃಪಾ ಮಹಿಮೆಯಿಂ
ಪುಣ್ ಮಾಣ್ದು, ಬಲ್ಪುಣ್ಮಿ, ಮತ್ತೊರ್ಮೆ ಮೆಯ್ಗೆನಗೆ
ಗರಿ ಮುಹುರ್ಭವಿಸುವೊಡೆ, ನಿನ್ನ ರಕ್ಕಸ ಮೆಯ್ಯ
ನೆತ್ತರಿಂ ತನಿಯೆರೆವೆನೆನ್ನನುಜನಾತ್ಮಕ್ಕೆ: ಕೇಳ್,
ಪೂಣ್ದೆನಿದೊ ಈ ಮಹಾ ವಾನರರೆನಗೆ ಸಾಕ್ಷಿ!"
ಪೂಣ್ದು ಮೊಗದಿರುಹಿದನ್ ಶರಗುಲ್ಮನಿರ್ದೆಡೆಗೆ
ಮತ್ತೆ; ನುಡಿದನ್ ಭಾವದಿಂ:
"ಮಹಾ ವಾನರನೆ,
ದೇವಿಯಂ ಕಳ್ದುಯ್ದನಾ ನೀಚನೆಯೆ ವಲಂ!
ದಿಟಮೀಗಳರಿತೆನಾಂ ಕಂಡುದವನದೆ ರಥಂ,
ಪುಷ್ಪಕಂ. ಮಧ್ಯಾಹ್ನಮೊರ್ವನೆಯೆ ಕುಳ್ತಿರ್ದೆನ್
ಇಲ್ಲಿ. ತೆಕ್ಕನೆ ಬಿಳ್ದುದಾಕ್ರಂದನಂ ಕಿವಿಗೆ.
ಕತ್ತೆತ್ತಿ ಕಂಡೆನೊಂದಂ ಗಗನರಥಮಂ
ಸಮೀರಪಥಯಾತ್ರಿಯಂ. ನೂರು ಯೋಜನದಾಚೆ
ತೆಂಕಣದೊಳಿರ್ಪುದಾ ರಾಕ್ಷಸ ಕನಕಲಂಕೆ,
ಕಡಲಗಳ್ತೆಯ ಕೋಂಟೆದೀವಿ. ಸೀತಾದೇವಿ..."
ಓ, ಏನಿದೇನಚ್ಚರಿಯೊಳಾಲಿಗಣ್ಣರಳಿ
ಮರವಟ್ಟವೋಲ್ ನಿಟ್ಟಿಸುತ್ತಿದೆ ವಾನರಶ್ರೇಣಿ
ಒರೆವ ಸಂಪಾತಿಯಂ? ಗೂಬೆ ನವಿಲಾದಂತೆ,
ವಿಕೃತಿಯಿಂ ಸಂಸ್ಕೃತಿಯ ಚೆಲ್ವು ಮೈದೋರ್ವಂತೆ.

ಮಳೆಯ ಬಿಲ್ಗಳೆ ಮೆಯ್ಗೆ ಗರಿಯಾಗಿ ಬಂದಂತೆ
ಬಣ್ಣಬಣ್ಣದ ತಿಪ್ಪುಳಗೆ ಮೊಳೆತುದಂಗಮಂ
ತುಂಬುತೆ ವಿಹಂಗೇಂದ್ರನಾ! ಕಾಣುತಿರ್ದಂತೆ
ಸೊಗಸಿದನು ಸಂಪಾತಿ ಶಾರೀರವೀರ್ಯದಿಂ ಮೇಣ್
ಸರ್ವಾಂಗ ಸೌಂದರ್ಯದಿಂ: ಚಿನ್ನದೆಣ್ಣೆಯಿಂ
ಬಣ್ಣ ಬಳಿದಂತೆವೋಲ್ ಎಸೆದತ್ತೆರಂಕೆಗರಿ;
ಮರಕತದ ಶಾದ್ವಲಮೆನಲ್ಕೆಸೆದು ಕಂಠದೇಶಂ
ಶೋಭಿಸಿತು ನುಣ್ಪಸುರ್ಪಿಂದೆ; ಕಣ್ಣಿರಿಲ್ಗೊಲ್
ಇರಿದುವೈ ಬಾನ್ನೀಲಿಯಂ; ಕಾಯ್ದು ಕೆಂಪೇರ್ದ
ಕಡುಕಠಿಣದುರ್ಕಿನೋಲ್ ದೇದೀಪ್ಯಮಿರ್ದುದಾ
ವಜ್ರ ಚಂಚೂಪುಟಂ; ಮೊನೆಯುಗುರಗುರ್ವಿಂದೆ,
ಮಿಂಚುಬೇರ್ಗಳ ಸಿಡಿಲ ಮರವೆನೆ, ಪದದ್ವಯಂ
ರುದ್ರ ಶಂಕರಮಾಯ್ತು, ಶಶಿಬಾಲ್ಯ ಸಂಶೋಭಿ
ಫಾಲಾಕ್ಷನೋಲ್: ಜ್ವಲಿಸಿದನ್ ತಪೋಮಯತೇಜದಿಂ
ಖಗಕುಲಾಗ್ರಣಿ, ದೇವತಾತ್ಮಂ, ಮಹಾತ್ಮನಾ
ಭವ್ಯ ಸಂಪಾತಿ!

ತನ್ನಾ ನವ್ಯತೆಗೆ ತಾನೆ
ಬೆರಗುವೋಗುತೆ, ಹಿಗ್ಗಿ, ಭಕ್ತಿಗೆ ಕೃತಜ್ಞತೆಗೆ
ಕಂಚುಗೊರಳಂ ಕೊಟ್ಟನಿಂತು: "ಏಂ ಪುಣ್ಯಮಿದೊ?
ದಿಟಮಲಾ ಶಿವಕೃಪೆಗೆ ಪರಮಾಣುವುಂ ಪರ್ವತಂ!
ಇದೆ ಮಹತ್ಕಾರ್ಯಮೈಸಲೆ? ದಿಟಂ: ದೇವಿಯಂ,
ಶ್ರೀರಾಮದಯಿತೆಯಂ, ಪುಡುಕುತಿರ್ಪೀ ನಿಮಗೆ
ದೈತ್ಯನಿರ್ಕೆಗೆ ದಾರಿಯಂ ತೋರ್ಪೆನದೆ ದಿಟಂ
ಲೋಕ ಕಲ್ಯಾಣಕರ ಶೋಕಮೋಕ್ಷದ ಪುಣ್ಯ
ಕೃತಿಯಕ್ಕುಮೆನಗೆ! ಬನ್ನಿಂ; ಪೋಪಮಾ ಸಭೆಗೆ,
ಹನುಮ ಜಾಂಬವ ನೀಲ ವಾಲಿಸುತನಂಗದನೆ
ಮೊದಲಹ ಮಹಾ ಮಿತ್ರರಿರ್ಪೆಡೆಗೆ!"

ಕಳುಹಿದಾ
ಶರಗುಲ್ಮನಂ ಕಾಯುತುಬ್ಬೇಗದಿಂದಿರ್ದ
ಕಪಿಗೋಷ್ಠಿ, ಮಂಜುಳಿದ ಮಾಗಿಯೇರ್ವಿಸಿಲಲ್ಲಿ,
ಪೊನ್ನೊ ಪವಳಮೊ ಪಚ್ಚೆ ನೀಲಿ ಮೇಣ್ ಪಳದಿಗಳೊ?

ಸಪ್ತವರ್ಣದೊಳಿಂದ್ರಧನುವೊಲ್ ಪರ್ಣತನುವಾಗಿ,
ಹರಿವರ್ಯನಂ ವೆರಸಿ ಮಿರುಮಿರುಗಿ ಬರುತಿರ್ದನಂ
ಗರಿಮೆಯ್ಯನಂ ಕಂಡು ಸಂತೋಷಿಸಿತು ಶಕುನ
ಮಂಗಳಕೆ. ಸಂಕುಚಿತ ನೇಮಿಯಾದಾ ಸಭಾ
ಚಕ್ರಕ್ಕೆ ತಾಂ ಕೇಂದ್ರಮಾಗಿರಲತಿಥಿ ಸಂಪಾತಿ,
ಸಾಂದ್ರಮಾದುದು ಮಂದಿ ಸುತ್ತಣಿಂ ಸಂದಣಿಸಿ
ನುರ್ಗ್ಗಿ. ಕೇಳ್ದರ್ ಕುತೂಹಲಕೆ ರೋಮಾಂಚನಂ
ಭವಿಸಲಾ ಖಗಕುಲ ಕಿರೀಟಿಯಾದೇಶಮಂ.
ಪೇಳ್ದನಾತನುಮರಿತುದನಿತುಮಂ. ಮೇಣಂತೆ
ಗುರು ನಿಶಾಕರ ಮುನಿಯ ದುರ್ಮ್ಮರಣ ವಾರ್ತೆಯಂ
ಕೇಳ್ದನತ್ಯಂತ ಚಿಂತಾಕುಲಂ. ಮುಂದೆ ತಾಂ
ರಾವಣಂಗಿದಿರಾಗಿ ರಾಮಂಗೆ ನೆರವಾಗಿ
ನಿಲ್ವೆನೆಂಬಾಶೆಯಂ ಘೋಷಿಸುತ್ತಲ್ಲಿಂದೆ,
ಗುರುಗೆ ತನ್ನವರಜಗೆ ತಿಲಬಲಿಯನೀಯಲುಂ ಮೇಣ್
ಪ್ರಿಯ ಬಂಧುವರ್ಗಮಂ ಬಹುದಿನಾನಂತರಕೆ
ಕಾಣಲುಂ ಬೀಳ್ಕೊಳುತ್ತೆಲ್ಲರ್ಗೆ ವಂದಿಸುತೆ
ಗರಿ ಮಿಂಚೆ ರೆಂಕೆಗೆದರಿದನಂತರಿಕ್ಷಕ್ಕೆ:
ಕೀರ್ತಿಗೆ ಕೃತಜ್ಞತೆಗೆ ಪೆರ್ಚಿ ವನನರಬಲಂ
ಕೊರಳೆತ್ತಿ ಕೈವೀಸಿ ಕೈವಾರಗೆಯ್ಯಲಾ ಘೇ
ಉಘೇಧ್ವನಿಗೆ, ದ್ರವಮೆನೆ ತರಂಗಿಸಿತು ಶೈಲ ಭೂ
ದ್ರುಮಮುದ್ರಿತಾದ್ರಿ!
ನವೀನಾಶಾ ಕನಕಕಾಂತಿ,
ಜನದಂತರಂಗಮಂ ವನ ಲಸದ್‌ರಂಗಮಂ
ಕೀರ್ತಿಸುವವೋಲ್, ನರ್ತಿಸಿತು ಕಿರಣ ನಾಟ್ಯಮಂ.
ತೊಲಗಿದತ್ತಾಪತ್ತು. ಮಧ್ಯಾಹ್ನ ಪೂರ್ವದಾ
ಪರಿಷತ್ತು, ಮತ್ತೆ ಮಂತ್ರಣಕಾಗಿ ನೆರೆದತ್ತು,
ಕಪಿಕೇತನರ ಚೇತನದ ಶರಧಿಸಂಪತ್ತು.
ಘೋಷಿಸಿತ್ತಿಂತು ಹರ್ಯಕ್ಷ ವಿಕ್ರಮಿಗಳಂ
ಕುರಿತು ಯುವರಾಜನಧ್ಯಕ್ಷತಾ ಕಂಠೀರವಂ:
"ಪ್ಲವಗ ಲಾಂಛನ ಪತಾಕಾ ಕೀರ್ತಿ ಪೂರ್ಣಿಮಾ
ಚಂದ್ರರಿರ, ತವಿದುದೆಮ್ಮಯ ಜಸಕೆ ಕವಿದಿರ್ದ

ಪಳಿಮುಗಿಲ್. ಸಯ್ಪಿಂದೆ ಸಮನಿಸಿತು ಸಂಪಾತಿ
ಸಂದರ್ಶನಂ. ಕೇಳ್ದಿರಲ್ಲರುಮಾ ವಿಹಂಗೇಂದ್ರ
ಸಂದೇಶಮಂ. ನೂರುಯೋಜನದಾಚೆ, ಲಂಕೆ,
ರಾಕ್ಷಸದ್ವೀಪಮಿದೆ ಶರಧಿಮೇಖಲೆಯಾಗಿ.
ಖಳ ದಶಗ್ರೀವನಿನಕುಲನ ಕಾಂತೆಯನಲ್ಲಿ
ಬೈತಿಟ್ಟಿಹಂ. ಕಾಣಿಮದೊ ಕರೆಯುತಿದೆ ಶರಧಿ,
ವಾನರಾಚಂದ್ರಾರ್ಕ ಕೀರ್ತಿಕರ ಸಾಹಸಕೆ
ಬಿದಿ ಸಮೆದ ನೀರ್ಗರಡಿ! ಲಂಘಿಸುವರಾರದಂ?
ಲೋಕಪೂಜೆಯ ಮಂಗಳಾರತಿಯ ಕಾಂತಿಯಂ
ತಮ್ಮ ಪೆಸರಿಗೆ ಬೆಳ್ಗೊಡೆಯ ಮಾಳ್ಪರಾರೇಳಿ
ಬನ್ನಿ. ನಾಮನಿಬರುಂ ಮರಳಿ ಕಿಷ್ಕಿಂಧೆಯಂ
ಪೊಕ್ಕು, ಪೆಂಡಿರ್ ಮಕ್ಕಳಂ ನಂಟರಿಷ್ಟರಂ
ಕಾಣ್ಬಂತೆ ಗೆಯ್ವ ಪುಣ್ಯಾತ್ಮರಾರಿಹರಿಲ್ಲಿ,
ಮೇಲೇಳಿ, ಬನ್ನಿ. ರಾಮನ ವಿರಹ ತಾಪಮಂ
ದೇವಿ ಸೀತೆಯ ಹರ್ಷಬಾಷ್ಪದಿಂ ನಂದಿಪಾ
ರಸ ಲಸತ್‌ಕೃತಿ ಮಹಾಕಾವ್ಯದ ಜಗತ್‌ಕವಿಯ
ಪಟ್ಟ ಮಹಿಮೆಗೆ ನೋಂತರಾರೇಳಿ ಬನ್ನಿ. ಓ,
ಸುಗ್ರೀವನಾಜ್ಞಾ ಕಿರೀಟ ಭಾರಕೆ ಬಾಗಿ
ನೆಲದಿಟ್ಟಿಯಾಗಿ ಮಣೆದಿರ್ಪಿರೇಕೆ? ಲಂಘಿಸೆ
ಸಮುದ್ರ ದುಷ್ಪಾರಮಂ, ಬಾನ್ನೆಲಕೆ ತಲೆಯೊತ್ತಿ
ನಿಲ್ಲಿಮೇಳಿಂ! ಪೇಳಿಮಾರೆನಿತು ದೂರಮಂ
ಲಂಘಿಸೆ ಸಮರ್ಥರೆಂಬುದನೀ ಮಹಾಸಭೆಯ
ಸನ್ನಿಧಿಗೆ.''
ಕೇಳ್ದರಾರೊರ್ವರೇನೊಂದುಮಂ
ಪೇಳ್ದರಿಲ್ಲಿರ್ದುದಯ್ ಸಮಿತಿ ಕಂಡರಿಸಿದೋಲ್
ನಿಶ್ಚಲಂ. ಚಣಮಾದುದೊಂದೆರಡಾದುದಿಸ್ಸಿ! ಮೇಣ್
ಮೂರನೆಯ ಚಣಮೊ? ಯುಗದೀರ್ಘಮಾಯಾಸಮಿರೆ,
ಛಿಃಛಿಃಛಿಃ ಎನುತ್ತೆ ಭರ್ತ್ಸನೆಗೈದ ಮೌನದ
ಕಶಾಘಾತಕೆನೆ ಗುಜುಗುಜಿಸ ತೊಡಗಿದುದು ಗೋಷ್ಠಿ.
ಮಾನರಕ್ಷಣೆಯಾಯಿತೆಂಬಂತೆ ತೃಪ್ತಿಗಾ
ಸಭೆ ಸುಯ್ಯೆ, ಧಿಗ್ಗನೆದ್ದನ್ ದಿಗ್ಗಜೋಪಮಂ

ಸಮ್ಮುಖ ಸಮರ ಪರಾಕ್ರಮಿ ತಾಂ ಗಜಂ:
“ನಗದಿರಿಂ.
ನನಗೆ ಲಂಘನಶಕ್ತಿಯಲ್ಪಮಾದೊಡಮಿಲ್ಲಿ
ನೆರೆದಿತರ ಪಿರಿಯರ್ಗೆ ನುಡಿದೋರಲಿಕ್ಕೊಂದು
ಪೀಠಿಕೆಯನೊರೆವೆನ್: ಯೋಜನ ದಶವನುತ್ತರಿಸೆ
ನಾಂ ಶಕ್ಯನೆಂ!”
ಕುಳ್ತನವನನಿರೀಕ್ಷಿತಮೆನಲ್ಕೆ.
ಮೇಲೆಳ್ದನಾ ಬಳಿಕಮೊರ್ವನಿಂಬಳಿಯೊರ್ವ
ಕಲಿ, ತನ್ನಾರ್ಪಿನುದ್ದಮಂ ಪೇಳಲ್: ಇರ್ಪತ್ತು
ಯೋಜನವನೊರೆದನಾ ಗವಯಂ. ಗವಾಕ್ಷಂ
ನಾಲ್ವತ್ತನೊರೆದನಂತೆಯೆ ಗಂಧಮಾದನಂ
ಪೇಳ್ದನೈವತ್ತನಾ ಮೈಂದನಾರ್ವತ್ತನಾ
ಜಾಂಬವಂ ಮುದುಕನೆಂಬತ್ತನೊರೆದಂ. ಕಡೆಗೆ
ವಾಲಿಸುತನಂಗದಂ: “ಕೇಳ್ದಿರೈ ಜಾಂಬವನ
ಸಾಮರ್ಥ್ಯಮಂ, ಮತ್ತೆ ವಿನಯಮಂ. ಪಿಂತವಂ
ಜವ್ವನದೊಳಿರ್ದಂದು, ನನ್ನ ತಂದೆಯೆ ನಾಣ್ಚೆ
ತಲೆವಾಗುವಂತೆ ಲಂಘಿಸುತಿರ್ದನೆಂಬುದಂ
ಕೇಳಿರ್ದೆನಯ್ಯನಿಂ. ಮುನ್ನೀರ್ಗಳಂ ಕೆರೆಗೆ
ಗೆತ್ತು ನೆಗೆದಾತನೀವೊತ್ತು ಮುಪ್ಪಿಂ ಕುಗ್ಗಿ
ನುಡಿದುದಂ ಕೇಳ್ದೆನಗೆ ಹೆಡೆಸೆಡೆಯುತಿದೆ ತರುಣತಾ
ಗರ್ವಂ. ನಿಶಾಕರ ಮುನಿಯ ಹತ್ಯೆಯಿಂದೆನಗೆ
ಕಡಿವೋದುದೆನ್ನಯ್ಯನಿತ್ತ ಮಾಂತ್ರಿಕ ಶಕ್ತಿ.
ಕೇಳಿಮಾದೊಡಮೆನಗೆ ಬಲ್ಮೆಯಿಹುದುತ್ತರಿಸೆ
ಶತಯೋಜನದ ಶರಧಿಯಂ. ಪಿಂತೆ ಮರಳಲ್ಕೆನಗೆ
ಬೇಳ್ಪದಟಿನೊಳೆ ಶಂಕೆ.”
ಮುದಿಯ ಜಾಂಬವನೆದ್ದು
ತಡೆದನ್ ಕುಮಾರನಂ: “ಬಲ್ಲೆನಾಂ, ವಾಲಿಸುತ,
ನಿನ್ನದಟಿನಳವಿಯಂ. ಸಾಗರವನುತ್ತರಿಸಿ
ಪಿಂತಿರುಗಲುಂ ನೀಂ ಸಮರ್ಥನೆ ದಿಟಂ. ಶಂಕೆ
ನೀಂ ವಿನಯಕಿತ್ತ ದಕ್ಷಿಣೆಯೈಸೆ! ಕೇಳಾದೊಡಂ
ಪೋಗಲಾಗದು ನೀಂ; ನಯಮದಲ್ತು. ಸ್ವಾಮಿಯಂ

ಮುಂಗಳುಪಿ ಭೃತ್ಯರೆಂ ಪಿಂದುಳಿಯೆ, ಕೇಡಡಸೆ,
ಕಾರ್ಯನಾಶಂ; ಸರ್ವನಾಶಂ; ಅಕೀರ್ತಿಯೆ ದಿಟಂ!
ಮೂಲಮಿರ್ಪವನಿಜಕಿಂದೊ ನಾಳೆಯೊ ಫಲಂ;
ಬೇರ್ಗಡಿದರೇನುಂಟು? ಚಿತೆಗಿಂಧನಂ! ಕಳುಹೆ
ನಿನ್ನನದೆ ಗತಿಯಕ್ಕುಮೆಮಗೆ.''
ವಾಲಿಯ ಮಗಂ
ಕೈಮುಗಿದು, ಗೌರವಂದೋರಿ, ವೃದ್ಧವೀರಗೆ
ಜಾಂಬವಂಗಿಂತು: ''ಪೂಜ್ಯನೆ, ಬೇರೆ ಬಟ್ಟೆಯಂ
ಕಾಣೆನಾಂ. ಸುಖದೊಳಾರಗ್ರಭಾಜನನವನೆ
ಕಷ್ಟದೊಳಗಗ್ರಭಾಜನನಕ್ಕುಮದೆ ನಿರತೆ ದಲ್
ಬೀರಕ್ಕೆ. ಗೌರವದೊಳಗ್ರಗಣ್ಯಗೆ ಪಾಳಿಯಯ್
ಸಾಹಸದೊಳಗ್ರೇಸರತೆ. ನಾನುಮುಂತಿರ್ದು
ಮೇಣ್ ಬೇರೆ ಬೀರರಾರುಂ ಸಾಸಕೆಳಸದಿರೆ,
ಪ್ರಾಯೋಪವೇಶಮಲ್ಲದೆ ಕಾಣೆನಾನನ್ಯಮಂ
ಸದ್ಗತಿಯನೆಮಗೆ. ಪೇಳೆನಗಿಲ್ಲಿ ಕಜ್ಜಮಂ;
ನೀಂ ಪಿರಿಯನಜ್ಜನಯ್; ನಿನ್ನ ಸನ್ಮತಿಯೆನಗೆ
ರಾಮನಾಶೀರ್ವಾದಮಂತೆ ಸುಗ್ರೀವಾಜ್ಞೆ!''
ಪೊಳ್ತನಿತು ಚಿಂತಿಸಿದನಂತರಂ ಜಾಂಬವಂ,
ಕೆಮ್ಮನಿರ್ದಾ ನೀಲನಿಂಗಿತವರಿತು, ನಳನ
ಕಣ್ಣರಿತು, ಸಂತೈಸಿದನು ವಾಲಿಸೂನುವಂ:
''ತೋರ್ಪನೊರ್ವನನಿಲ್ಲಿ ಲಂಘನ ಸಮರ್ಥನಂ.
ಪೆರರಿಂ ಪ್ರಚೋದಿತಂ ತನ್ನ ತಾನರಿಯದಯ್
ನಿಜಮಹಿಮೆ. ನೋಡಲ್ಲಿ: ಗೆಂಟರೊಳರೆಯ ಮೇಲೆ
ಕುಳಿತಿರ್ಪನೆಕ್ಕಟಿಯೊಳಾ ದಿವ್ಯ ತೇಜಸ್ವಿ
ಕಡಲೆಡೆಗೆ ಕಣ್ಣಾಗಿ, ಕಣ್ಣೊಳಗೆ ಕಡಲಾಗಿ,
ವಾಯುಸುತನಾಂಜನೇಯಂ!''
ತನ್ನ ಕಲಿತನಕೆ
ಜಲಕಲಿ ಸರಿತ್ಪತಿಯ ವಿಸ್ತೀರ್ಣದಾ ಶೌರ್ಯಮಂ
ತೋಳ್ತೂಗಿ ನೋಳ್ಪವೋಲತ್ತಣ್ಗೆ ಕಣ್ಬೆಸೆದು,
ಕಲ್ಪಟ್ಟು, ಪಡಿಮೆಯಂತಿರ್ದನಂ ಬಳಿಸಾರ್ದು
ಜಾಂಬವಂತಂ, ಶಿಲಾಶಿಲ್ಪಿಯ ಕಲಾಕೃತಿಗೆ

ದೇವತಾಹ್ವಾನದಿಂ ಪ್ರಾಣಪ್ರತಿಷ್ಠೆಯಂ
ಗೆಯ್ಯೆ ಮಂತ್ರಿಸುವಾತ್ಮಸಾಧಕನವೋಲ್, ನಿಂದು,
ಫಲಸಿದ್ಧಿಯೊಳ್ ಸುದೃಢ ಬುದ್ಧಿಯಿಂ, ಶ್ರದ್ದೆಯಂ
ನುಡಿದನಾವೇಶದಿಂ:
"ಕಲ್ಲಾದೆಯೇಕಿಂತು, ಪೇಳ್,
ಓ ಕಪಿಧ್ವಜದೇವತಾ ಕೀರ್ತಿಮೂರ್ತಿ? ಅದೊ, ಕಾಣ್,
ನಿನ್ನಾಲಯದ ಗೌರವದ ಗೋಪುರದ ಸುಧಾ
ಶುಭ್ರ ಕಲಶ ಗಭಸ್ತಿ ಕಿಲುಬುತಿದೆ ದುರ್ಯಶಃ
ಕಿಲ್ಬಿಷಂ ಪತ್ತಿ. ನಿನ್ನ ಕೆಳೆಯರ ಹರಣವಿದೊ
ಏದುತಿದೆ ಹೊರೆಗಜ್ಜದರೆಯೊತ್ತಿ. ಮರುತ್ಸುತ,
ನೀಂ ಜಗತ್‌ಪ್ರಾಣ ಸಂಭವನಯ್. ಸಮೀರಣನ
ವರದ ಕೃಪೆಯಿಂದಂಜನಾ ದೇವಿಯಿಂ ಬಂದವನ್
ನೀಂ. ನಿನಗಲೌಕಿಕಂ ಜನ್ಮಗುಣಮಲ್ಲದೆಯೆ,
ಯೋಗಿ ನೀನಭ್ಯಾಸದಿಂದೆಯುಂ. ತಪದಿಂದೆ, ಮೇಣ್
ಬ್ರಹ್ಮಚರ್ಯಜ ಮಹಿಮೆಯಿಂದಷ್ಟ ಸಿದ್ಧಿಗಳ್
ನಿನಗಿಷ್ಟ ಕಿಂಕರರಲಾ, ಹನುಮಂತದೇವ. ನೀಂ
ಧ್ಯಾನದಿಂದಿಚ್ಛಿಸಿದರಾವುದಾಗದೊ? ನಿನಗೆ,
ನಿನ್ನನ್ನರಿಗೆ, ಸೃಷ್ಟಿ ತಾಂ ದೃಷ್ಟಿಸೂತ್ರಜಮಲ್ತೆ?
ಯೌಗಿಕವನಲ್ಪಕ್ಕೆ ಲೌಕಿಕಕೆಳೆಯಲೊಲ್ಲೆ ನೀಂ;
ಬಲ್ಲೆನಾ ನಿಷ್ಠೆಯಂ... ಪೇಳಲ್ಪಮೇನೆಮ್ಮೆಲ್ಲ
ಬಾಳೊಳ್ಪಿನೀ ಮಹತ್‌ಸಾಹಸಂ? ಪ್ರೇಮಮಂ
ಕಾಮದಿಂದುದ್ಧರಿಸಿ, ಬಾಳ್ಗೆ ಬಾಳಂ ಬೆಸೆಯಲೀ
ಪೆರ್ಗಡಲ್ ನೆಗೆಯುವೀ ಸಯ್ಪು ಕಲ್ಪಾಂತರಕ್ಕೇಂ
ದೊರೆಕೊಳ್ವುದುಂ ದುರ್ಲಭಮೆ ದಿಟಂ. ಮೇಣ್ ಯೋಗಮಂ
ಧರ್ಮ ಸಾಧನೆಗೆ ವಿನಿಯೋಗಿಸಿದರೇನದಕೆ
ಮೈಲಿಗೆಯೆ? ಧರ್ಮಮೇ ದೇವರೆಂಬುದೆ ಬುದ್ಧಿಯಯ್!
ಏಳೇಳ್, ಮಹಾಯೋಗಿ, ನಿಃಸ್ವಾರ್ಥಕಾರಣಕೆ
ನಿನ್ನ ಸಿದ್ಧಿಯನಿಲ್ಲಿ ನೈವೇದ್ಯಮಂ ನೀಡಿ,
ಪಡೆ ಪರಮಸಿದ್ಧಿಯಂ. ತನ್ನಂಗುಳೀಯಮಂ
ನಿನಗಲ್ಲದನ್ಯರ್ಗೆ ಕೊಟ್ಟನೇನಾ ಮಹಾ
ಮತಿ, ದಾಶರಥಿ? ಮುದುಕನೆಂ; ಮುಖಸ್ತುತಿಯಲ್ತು;

ನಿನಗೆಣೆಯನಾಂ ಕಂಡೆನಿಲ್ಲೆನ್ನ ಬರ್ದುಕಿನೊಳ್.
ಲಂಘಿಸೀ ಶರಧಿಯಂ. ಪುಡುಕಿ ಬಾ ದೇವಿಯಂ.
ತಾ ಪುಣ್ಯವಾರ್ತೆಯಂ, ಮೇಣೆಮಗೆ ಬಾಳ್ತೆಯಂ.''
ಕೇಳ್ದನಂತರ್ಮುಖಿ ಮರುತ್ಸುತಂ. ಮನದೊಳಗೆ
ನಿಶ್ಚಯ್ಸಿದನ್ ಸಾಗರೋಲ್ಲಂಘನಕೆ. ಯೋಗಿ
ಪೂರಕಂ ರೇಚಕಂ ಕುಂಭಕ ಪ್ರಾಣದಿಂ
ಮೂಲದಿಂದೆಳ್ಚರಿಸಿದನ್ ಕುಂಡಲಿನಿಯಂ.
ಸುಷುಮ್ನೆಯಿಂದೇರ್ದನ್ ಸಹಸ್ರಾರಕಲ್ಲಿಂದೆ ಮೇಣ್
ಮೀರ್ದನಿಂದ್ರಿಯ ಮಾನ್ಯ ಜಡಜಗನ್ಮಾಯೆಯಂ,
ಭೌತ ಸೃಷ್ಟಿಯ ಮಹನ್ನಿಯತಿಯಂ! ಸಂಕಲ್ಪಚಿತ್
ತಾಳ್ದನಿಚ್ಛಾಸೂತ್ರದಿಂ ಕಪಿಗಾತ್ರಮಂ, ಕುಲದ
ಹಳವಿಗೆಯ ಚಿಹ್ನೆಯಾಕಾರಮಂ.
ಇತ್ತಲಾ
ತೋರ್ದುದೆಂತಿಂದ್ರಿಯಾತೀತೈಂದ್ರಜಾಲಿಕಂ
ಸುತ್ತಣಿಂ ಮುತ್ತಿ ಗೆಂಟರೊಳಿರ್ದರಾ ಚಕಿತಾತ್ಮ
ವನ ನರ ಚಮೂ ದರ್ಶನೇಂದ್ರಿಯಕೆ? ನೋಡುತಂ
ನೋಡುತಿರ್ದಂತೆವೋಲಾವೇಶಗೊಂಡುದೆನೆ,
ಸುಯ್ಯೇರ್ದು, ಸುಯ್ಯಿಳಿದು, ವೇಪಿಸಿತು ವಾಯುಜನ
ವಪು. ಮಿಂಚೆ ರೋಮಾಂಚನಿಸಿತೆಂಬವೋಲ್ ಮೊಗಕೆ
ತುಳ್ಕಿದುದು ತೈಜಸಂ. ಫಾಲ್ಗುಣದುದಯ ರವಿಯ
ಕನಕ ಕುಂಕುಮ ಬಿಂಬಕಾಂತಿ ಪರಿವೇಷಮಂ
ರಚಿಸುತಿರೆ, ಪವನಜನ ನರರೂಪಮೊಯ್ಯನೆಯೆ,
ವಾರಿ ವಿದ್ಯುತ್ಸಂಗದಿಂ ಪೊರ್ದ್ದುತನಿಲತಾ
ಸಿದ್ಧಿಯಂ ಸಾಕಾರಮಂ ವಿಸರ್ಜಿಸುವಂತೆ,
ತೊರೆಯುತೆ ನರಾಕೃತಿಯನೇರ್ದುದು ನಿರಾಕೃತಿಗೆ.
ಜ್ಯೋತಿಸ್ಸಲಿಲ ಶೀಕರವೊ ಚಂದ್ರ ನಕ್ಷತ್ರ
ನೀಹಾರಿಕಾ ರಜೋ ಮೇಘದಗ್ನಿಮಂಡಲವೊ
ಮೇಣಾಂಜನೇಯಾತ್ಮ ವೈಭವಶ್ರೀದ್ಯುತಿಯೊ
ಪೇಳೆಂಬಿನಂ ಜ್ವಲಜ್‌ಜ್ವಲಿಸುತಿರ್ದಾ ದೀಪ್ತಿ
ತಿರ್ರನೆ ತಿರುಗಿದುದು ಅಲಾತ ಚಕ್ರದ ತೆರದಿ,
ನೆರೆದ ವಾನರ ನಯನಶಕ್ತಿ ತಳ್ಳಂಕದಿಂ

ಮುಚ್ಚೆವೋಪಂತೆ! ತೆಕ್ಕನೆ ಇಂಪು ಸುರಿದುದಯ್
ಓಂಕಾರದಿಂಚರಂ, ಸೃಷ್ಟಿಯ ಚರಾಚರದ
ಕೋಟಿ ಕಂಠಸ್ವರದ ವಿಶ್ವವೈಣಿಕ ಮಧುರ
ಅವ್ಯಕ್ತನಿತ್ಯಗಾನಂ. ಕೇಳುತಿರ್ದಂತವರ್
ತಳತಳಿಸಿತಾ ಬೆಂಕೆತುಂತುರ್ ಮುಗಿಲ ನಡುವೆ
ವಾನರಧ್ವಜದ ಚಿಹ್ನೆಯ ಚಿತ್ರದಾಕಾರಂ.
ಮಿಕ್ಕುವಾನಂದದಿಂದುಲಿದು ಜಯಘೋಷಮಂ,
ಸ್ತೋಮ ಸಂಗೀತದಿಂ ಸ್ತೋತ್ರಗೈಯಲ್ ತೊಡಗುತಾ
ಸ್ರೋತ ಸಂತೋಷದೊಳ್ ತೇಲಿಸಿತು ಪೃಥ್ವಿಯಂ,
ವಿಪಿನಾದ್ರಿ ಸಹಿತಮಂ, ಓಂಕಾರಸಂಗಿ ಆ
ಸಂಭ್ರಮಿತ ಕಪಿಸೈನಿಕಂ:
"ಜಯತು ಜಯತು ಹೇ
ಪವನ ಪಾವನ ಕಲಿ ಕುಮಾರ! ಜಯತು ಜಯ ಹೇ
ವಾನರ ಕುಲದ ಕೀರ್ತಿಯುದ್ಧಾರ! ಜಯತು ಹೇ
ಕಪಿಕೇತನರ ಮಹಾಚೈತನ್ಯ ಚೂತವನ
ಚೈತ್ರಾವತಾರ! ಉತ್ತಿಷ್ಠ, ಓ ಧುರಧೀರ,
ಜಗದೇಕವೀರ! ಉತ್ತಿಷ್ಠ, ಓ, ಯೋಗಿವರ,
ಯೋಗಾವತಾರ! ಉತ್ತಿಷ್ಠ, ಓ, ಉತ್ತಿಷ್ಠ,
ಸರ್ವಮಾನವ ಗರ್ವಮಾನ ಪಾರಾವಾರ!
ಪ್ರತಿಮೆಯಾಗಲಿ ನಿನ್ನ ಈ ಶರಧಿ ಲಂಘನಂ
ಮಾನವಾತ್ಮದ ಮಹತ್ಸಾಧನೆಗೆ! ನಿನ್ನ ಈ
ಸಾಹಸಂ ಸಾಕ್ಷಿಯಾಗಲಿ ಯೋಗ ಮಹಿಮೆಯ
ಉದಾತ್ತತೆಗೆ! ಬ್ರಹ್ಮಸಾಕ್ಷಾತ್ಕಾರದದ್ವೈತ
ಸಿದ್ಧಿಯಾ ಭೂಮಾನುಭೂತಿಗಾಗಲಿ ರಸದ
ಸಂಕೇತಮೀ ನಿನ್ನ ರುಂದ್ರರೂಪಂ! ನಮೋ,
ಬ್ರಹ್ಮಚಾರಿಯೆ! ನಮೋ, ವ್ಯೋಮ ಸಂಚಾರಿಯೆ,
ನಮೋ ನಮೋ! ಕಲಿ, ನಮೋ! ಗುರು, ನಮೋ! ಪುನರ್ನಮೋ,
ಮುಹುರ್ನಮೋ! ಓಂ ನಮೋ, ಹ್ರೀಂ ನಮೋ! ನಮೋ, ನಮೋ,
ನಮೋ!"
ಸ್ತೋತ್ರಗೈದಿಂತಿಂತು ಗುಣಗಾನಮಂ
ಸಂಕೀರ್ತಿಸಿರೆ, ಪಿರ್ಗಿದತ್ತಣುವನಣುಮೂರ್ತಿ:

ಕೀರ್ತಿ ತಾಂ ಸ್ಫೂರ್ತಿಯಪ್ಪೊಡೆ ಅಲ್ಪಮಣುರೂಪಿ
ತಾನಾಗನೇನ್ ಅಭ್ರಂಕಷಂ ಬೃಹನ್ಮೂರ್ತಿ?
ಪರ್ವತಕೆ ಶಿಖರಮೆಯೆ ಹಣೆಸೆಣಸಿ ಮಲೆವಂತೆ,
ಬೆಂಕೆತುಂತುರ್ಮುಗಿಲ ನಡುವಣಾ ಕಪಿಯ ಕೃತಿ
ತಾನಳ್ಕರೆವೊಗಳ್ಕೆಗೆರ್ದೆಯುಕ್ಕಿ ಸೊರ್ಕುತೆ, ಉರ್ಬ್ಬಿ,
ಬಳೆಬಳೆದು ಬಳೆಬಳೆದು, ತುಂಗತರುವರ ಶಿರಮೆ
ಜಾನುಜಂಘೋತ್ಸೇಧಮಾಗಲಾರದೆ ಸೋಲ್ತು
ಬೇರನಡಿತಡಿಗೆ ಮುಡಿಯಿಡುವ ಪಳುಗಿಡುವಾಗುವೋಲ್,
ನಿಂದುದು ಅತೀಂದ್ರಿಯದ ಆಂಜನೇಯನ ಮಹಾ
ದೈತ್ಯ ಭೀಕರದೈಂದ್ರಜಾಲಿಕ ರುಂದ್ರರೂಪಂ!
ಹೆದರಿತೆ ತರುಚ್ಛಾಯೆ? ಪಾದಪದ ಪಾದಮಂ
ಪಿಡಿದುದೆ? ತಟಿದ್ರೋಮಮಯ ವಜ್ರಕಾಯದಾ
ಮರುತಾತ್ಮಜನ ಮೆಯ್ಸಿರಿಗೆ ಕರ್ಪುಗೆಟ್ಟುದೆನೆ
ಬೆರ್ಚಿ ಬೆಳ್ಪಾಯ್ತೆ? ಕಾಣ್: ಈ ಕಾಂತಿಗಾ ಕಾಂತಿ
ಕೀಳ್ಪಟ್ಟ ತೆರದಿ, ಬಾನ್ನಾವಲಿಯ ಕಿಡಿಯಾಗಿ
ತಪಿಸಿರ್ಪನಭಿಜಿನ್ಮುಹೂರ್ತ ದಿವಸೇಶ್ವರಂ.
ಮಧುರ ಭಯ ಸಂಭ್ರಾಂತ ಮಧ್ಯಾಹ್ನ ಮೂರ್ಛೆಯಿಂ
ಸ್ತಬ್ಧಮಾಯ್ತಾ ಪಕ್ಷಿನೀರವ ಗಿರಿಧರಿತ್ರಿ!
ಗಾತ್ರದಿಂ ಹೈಮಾಚಲಸ್ಪರ್ಧಿಯಾಯಿತೆನೆ,
ಕಪಿರೂಪಮಾದೊಡೇಂ, ಕೈಲಾಸ ಶೈಲೇಂದ್ರ
ಸಂತ್ರಾಸಕರ ಕಳೇಬರದ ಭೈರವನಂತೆ,
ಭವ್ಯಮಾಗದೆ ಮರ್ತ್ಯದಲ್ಪತೆಗೆ? ಪಿರಿದಕತಿ
ನಿಕಟಮಿರಲದರ ಜಂಘೆಯ ರೋಮರೂಕ್ಷತೆಯ
ದರ್ಶನಮೆ ಪರಮಗತಿಯಲ್ತೆ ಲಘುಚೇತಸದ
ಮತಿಗಳಿಗೆನುತೆ, ದೂರದೂರಕ್ಕೆ ಸರಿದುದಾ
ಮಾರುತಿಯ ಮುಖತೇಜಸದ ದರ್ಶನಾಕಾಂಕ್ಷಿ
ಕಪಿಕುಲ ಬಲದ ಜಲಧಿ: ಕೈಮುಗಿದರದ್ಭುತಕೆ,
ಇಚ್ಛಾಯು ವಾಯುಜನ ಆ ವಿರಾಡ್ ವೈಭವದ
ಗೌರವದ ಯೌಗಿಕಶ್ರೀಗೆ!

ಗಿರಿಗಂಹರಂ

ಗುಡುಗೆ ಗರ್ಜಿಪ ಸಿಂಹಘೋಷ ಗಾಂಭೀರ್ಯದಿಂ

ಪೊಣ್ಮಿದುದು ರಾಮ ಸೀತಾ ಪ್ರೇಮ ಮಧ್ಯದಾ
ವಿರಹ ವಿಘ್ನಾಂಬುಧಿಗೆ ಚಿರ ಲಗ್ನಸೇತುವಂ
ಬೀಸೆ ಲಂಘಿಸುವನಿಲಜನ ಶುಭದಭಯ ವಾಣಿ:
"ಸಾಹಸ ಸಹೋದ್ಯೋಗಿಗಳಿರ, ವಾನರ ಸುಹೃನ್
ಮಣಿಗಳಿರ, ಪೂಜ್ಯ ಕಪಿಲಾಂಛನ ಪತಾಕಾತ್ಮ
ಗೌರವಪ್ರಾಣರಿರ, ತ್ರಾಣದಿಂ ರೂಪದಿಂ
ದಾರ್ಢ್ಯದಿಂದೌನ್ನತ್ಯದಿಂ ಬಿಂಬಿಸಿಪ್ಪೆನಾಂ
ನಿಮ್ಮಖಿಲ ಸಂಘಾತ್ಮಮಂ. ನಿಮ್ಮೆಲ್ಲರಾಕಾಂಕ್ಷೆ
ಮೂರ್ತಗೊಂಡಿಪ್ಪೆನಾಂ ಧನ್ಯನೆಂ. ಅಣುವನಾಂ;
ನಿಮ್ಮೆಲ್ಲರಿಚ್ಛೆ ತಾಂ ಕೆಚ್ಚಿಂ ಕಟ್ಟಲುದಿಸಿತೀ
ಮಹತೋ ಮಹೀಯತಾ ಗೋಪುರೋಪಮ ಮೂರ್ತಿ.
ಪ್ರಾರ್ಥನಾ ಸೃಷ್ಟನಂ ಸ್ತೋತ್ರ ಸಂಪುಷ್ಟನಂ
ಪೊರೆಯುತಿರಿಮಾ ಮಾನಸಾನ್ನದಿಂ, ವಾರ್ಧಿಯಂ
ದಾಂಟಿ, ದೇವಿಯನರಸಿ ಪಿಂತಿರುಗಿ ನಾನಿಲ್ಲಿ
ನಿಮ್ಮೆಡೆಗೆ ಬರ್ಪನ್ನೆಗಂ. ಮರೆಯದಿರಿ: ನಿಮ್ಮಾತ್ಮ
ಯೋಗಮೆ ನನಗೆ ಶಕ್ತಿ!—ಪೇಳ್ವೆನಾದೊಡಮಾಲಿಸಿಂ,
ಮನ್ಮಹಿಮೆಯಂ. ನಿಮ್ಮ ಧೈರ್ಯಕೆ ಪೇಳ್ವೆನಾಲಿಸಿಂ.
ನಿಮ್ಮಾತ್ಮದೂತನೆನ್ನತುಲ ಸಾಮರ್ಥ್ಯಮಂ ನೀಂ
ಕೇಳ್ವಿರಪ್ಪೊಡೆ ನಿಮ್ಮ ಯೋಗ ಯೋಗ್ಯತೆ ಪೆರ್ಚಿ
ಸಮನಿಪುದು ಶ್ರದ್ಧಾಭಿವೃದ್ಧಿ. ಬಿಂಕದಿನಲ್ತು,
ನನ್ನ ಪೆರ್ಮೆಯನೊರೆವೆನಾ ಬುದ್ಧಿಯಿಂ.—ಬೇಡ
ನಿಮಗಿನ್ ಶಂಕೆ. ಪರಿಕಾಲ್‌ಗೆತ್ತು ಸಮುದ್ರಮಂ,
ಈ ಎತ್ತರಕೆ ಕಾಣ್ಬ ಈ ಮಹಾ ನೀಲಮಂ,
ಲಂಘಿಸುವೆನಶ್ರಮಂ. ಲಂಘಿಪೆನಲಂಘ್ಯಮಂ.
ವಿಶ್ವದೊಳಸಾಧ್ಯಮೆನಗಿಲ್ಲಮಿನ್. ಪಿಂಡಿದೊಡೆ
ಮುಷ್ಟಿಯೊಳೆ ಪುಡಿಯಪ್ಪುದೀ ಮಹೇಂದ್ರಾಚಲಂ!
ಕಡಲನೆಲ್ಲಂ ತುಳ್ಕಿ, ಹಿಮಗಿರಿಗೆ ಬೀಸಾಡಿ,
ವಡಬನಂ ತುಡುಕಿ ಪಿಡಿದಸುರನೂರಂ ಸುಟ್ಟು,
ಬೂದಿ ತೊಳೆಯಲ್ಕಾಂ ಸಮರ್ಥನೆಂ! ಕೈವೀಸಿ,
ಲಾಂಗೂಲ ಚವರಿಯಿಂದಂಬರದರಿಲ್ಗಳಂ
ಗುಡಿಸಿ ಪಾತಾಳಕುದುರಿಸುವಾರ್ಪು ನನಗಣುಗಲಾ
ಲೀಲೆ!—ಬಣ್ಣಿಪುದೇಕೆ? ಕಾಣಿಮಪರೋಕ್ಷಮಂ!"

## ಸಂಚಿಕೆ ೧೧

# ಸಾಗರೋಲ್ಲಂಘನಂ

ಕಾವ್ಯಯಾತ್ರೆಗೆ ಮುನ್ನಮಾವೇಶದುನ್ನತಿಯ
ನಾಂದಿಗೇರುವ ಕವಿಯ ಕಲ್ಪನೆಯ ಪಾಂಗಿಂದೆ
ಲಂಘನಾಘಾತಮಂ ನಿತ್ತರಿಸುವೆತ್ತರಕೆ
ವಜ್ರತನುವೇರ್ದನ್ ಮಹೇಂದ್ರ ಮಸ್ತಕ ಕಲ್ಪಮಾ
ಶಕುನಿಶಿಲೆಗಾಂಜನೇಯಂ. ಜಂಗಮಾಚಲಂ ತಾಂ
ಸ್ಥಾವರಾಚಲಕೇರ್ವವೋಲಾ ವಿರಾಡ್ರೂಪಿ
ಸಾನುವಿಂದಡರುತಿರಲಾ ಮಲೆಯ ಪಸುರೋರೆಯಂ,
ಭವ್ಯಮಾದುದೊ ಭೀಷ್ಮದೃಶ್ಯಂ ಕಪಿಧ್ವಜರ
ಅನಿಮೇಷ ವಿಸ್ಮಯಕೆ! ಪಳುವಾಯ್ತು ಪೆರ್ಗಾಡು;
ಕುಸಿಯಿತ್ತು ಬಾನ್ಮಾಡು; ಹೆದರಿ ಹದುಗುವ ತೆರದಿ
ಕುಗ್ಗಿ ಕುಬ್ಜತೆವೆತ್ತು ಸೆಡೆತುದಾ ಪರ್ವತದ
ಪೆರ್ವಿಡು. ಮೊಳಕಾಲಿನಾಳದಾ ಮಡುನಡುವೆ
ಪಾಯ್ವ ಪೇರಾನೆಯೊಲ್ ತೊತ್ತಳದುಳಿದು ಮೆಟ್ಟಿ
ಸಾಗುತಿರೆ, ಪೆರ್ಮರಂ ಪರೆಮುರಿದುರುಳ್ದುವಯ್,
ಕುರುಚಲಿನೊಣಗು ಕಡ್ಡಿ ಮುರಿವಂತೆ. ಗುರುಭಾರದಾ
ಪದಹತಿಗೆ ಕಾಣ್ ಒಕರಿಸಿದತ್ತದ್ರಿ ತನ್ನೊಡಲ
ಕೆಂಗಾವಿಮಣ್ವೆರಸಿದೋಕುಳಿಯ ನೀರ್ಗಳಂ,
ವ್ಯಾಘ್ರನಖಮವ್ವಳಿಸೆ ಗೂಳಿ ಹಿಣಿಲಿಂದುರ್ಕಿ
ಪೊಸಲಿಡುವ ಬುಗ್ಗೆಕೆನ್ನೀರ್ಗಳೋಲ್. ಗಾರಾದ
ಪಕ್ಷಿಲಕ್ಷದ ತುಮುಲ ಚೀತ್ಕಾರದಿಂ, ಕುಣಿವ
ಅಣುಗನ ಕಯ್ಯ ಗಿಲಿಗಿಚ್ಚಿಯಾದುದಾ ಶೈಲ
ವನಭೂಮಿ. ಭೂಕಂಪನವೆ ಬೇಂಟೆ ಬಿನದಕ್ಕೆ

ಸೋವುತ್ತೈತಂದುದೆನೆ ಕಣ್ಗೆಟ್ಟು ಕಾಲ್ಗೆಟ್ಟು
ಕುದಿದುವಲ್ಲಿಯ ಜೀವಜಂತು. ಕಾಲ್ ಮೀಂಟಲ್ಕೆ
ಕಲ್ಗೆ ಕಲ್ ಘಟ್ಟಿಸಲ್, ಕಿಡಿಪೊಣ್ಮೆ ಮರವೊರೆಯ
ದೂದಿ ಪೊತ್ತಲ್, ಬಗನಿಯಂ ಸುತ್ತಿ ಪೆಣೆದಿರ್ದ
ಬಿದಿರ ಮೆಳೆಗಳ್ ಧಗಿಸಿ ಪರ್ವಿದುದು ಕಾಳ್ಗಿಚ್ಚು,
ಹೊಗೆಮುಗಿಲ ನಡುನಡುವೆ ದಳ್ಳುರಿಯ ಜಿಹ್ವೆಯಂ
ಝಳಝಳಪಿಸಿ. ಏರ್ವಡೆದ ಮರದ ಮೆಯ್ಯಿಂ ಸೋರ್ದ
ಕಂಪಿನಂಟುಗಳುರಿಯೆ ಧೂಪಿಕ್ಕಿದವೊಲಾಯ್ತು
ಹನುಮನಾವೇಶಕ್ಕೆ ಗಂಧಧೂಮಂ. ಕಿತ್ತು
ಸುತ್ತಿಕೊಂಡನ್ ತಲೆಗೆ ಪೆರ್ಬ್ಬಳ್ಳಿಯಂ; ಮೈಗೆ
ಪೆಣೆದುಕೊಂಡನ್ ಕೇದಗೆಯ ಪೊದೆಗಳಂ; ಮತ್ತೆ
ಕೌಂಕುಳೊಳಗಿರುಕಿಕೊಂಡನ್ ಪೂತ ತರತರದ
ತರುಗಳಂ: ಕಾಡಡರಿದೊಂದು ಮಲೆನಾಡಾಗಿ
ನೆತ್ತಿಯ ಬಯಲ್‌ಸೀಮೆಗೇರುತಿರೆ ವಾಯುಜನ
ಕಪಿ ಮಹಾ ಕಾಯಮ್, ಇಳಿದುದು ಕಂದರದ ಕಡೆಗೆ
ಚಣಚಣಕೆ ಲಂಬಿಪಾತನ ಘೋರ ಭಯಶಂಕಿಯಾ
ಚಿದ್‌ಘನ ತನುಚ್ಛಾಯೆ. ಮಹೇಂದ್ರಮಾಗಿರೆ ಮಧ್ಯೆ,
ಲಂಕೆಯೆಡಕಿರೆ, ಬಲಕಿರಲಯೋಧ್ಯೆ, ಹನುಮನಾ
ವಾಮ ದಕ್ಷಿಣ ಪದನ್ಯಾಸಕೆ, ಧಟದ್ವಯಂ
ತಕ್ಕಡಿಯನೊಮ್ಮೆ ತೆಂಕಣ್ಗೊಮ್ಮೆ ಬಡಗಣ್ಗೆ
ತೂಗಿದುವೆನಲ್ ತುಲಾಭಾರಮಂ, ತೊನೆದುದಯ್
ಬೃಹತ್ ಪೃಥಿವಿ!
ಕಲ್ಪನೆಗೆ ಕೆಚ್ಚಿರಲ್ ಕಟ್ಟಿ ಕಾಣಾ
ನೀಲ ಚುಂಬಿ ಮಹೇಂದ್ರ ಕುತ್ಕೀಲ ಮಸ್ತಕದ
ಶಕುನಿಶಿಲೆಗೇರ್ದು ನಿಂದಾ ವಿರಾಡ್ರೂಪದಾ
ಭವ್ಯ ಚಿತ್ರವನಾಂಜನೇಯನಾ! ರಸನಿಧಿಗೆ
ಧುಮುಕುವಾತ್ಮಂ ತಾಂ ರಸಸ್ವರೂಪಂಬೆತ್ತು
ತುಂಬಿದಪುದಂಬುಜಭವಾಂಡಮಂ, ಭಾವಿಸುತೆ
ಬ್ರಹ್ಮಾಸ್ಮಿಯನುಭೂತಿಯಂ: ಶರಧಿ ದರ್ಶನಂ;
ತಾರಕಿತ ರಾತ್ರಿಯಾಕಾಶ ಸಂದರ್ಶನಂ;
ತುಂಗ ಶೃಂಗದ ತುಹಿನ ಶೈಲವನ ಶಿವ ಉಮಾ

ದರ್ಶನಂ; ದಂತುರ ದಿಗಂತ ಚುಂಬಿತ ಉದಯ
ಮೇಣಸ್ತರವಿ ದರ್ಶನಂ; ವರ್ಷ ಭೈರವನ
ಸಿಡಿಲು ಮಿಂಚಿನ ರುದ್ರ ನಟನಾಟನಾಟವಿಯ
ಸಹ್ಯಾದ್ರಿ ದರ್ಶನಂ; ಬುದ್ಧದೇವನ ಮಹತ್
ತ್ಯಾಗದ ತಪಸ್ಸಿದ್ಧಿ ದರ್ಶನಂ; ಜೇಸುವಿನ
ಜನನ ಜೀವನ ಮರಣ ದರ್ಶನಂ; ಜನಜನದ
ದಿನದಿನದ ಸಂಸಾರ ಜೀವನದ ಸತ್ಕೃತಿಯ
ಕೀರ್ತಿಕಲುಷಿತವಾಗದಿಹ ಪುಣ್ಯದರ್ಶನಂ;
ಸರ್ವದರ್ಶನ ಜನ್ಯ ರಸಕೆ ತಾಂ ಪ್ರತಿ ಕಣಾ
ಹನುಮನ ವಿರಾಡ್ರೂಪ ಸಂದರ್ಶನಂ!

ಅನಂತರಂ

ಅರಿ ಭಯಂಕರನಾಂಜನೇಯಂ, ವಿಗುರ್ವಿಸುತೆ
ಮನುಜ ಕಲ್ಪನೆ ತತ್ತರಿಸುವೆತ್ತರಕೆ ತನ್ನಾ
ವಿಗ್ರಹದ ವಿಭವಮಂ, ನಿಂದನ್ ನೆಲಕೆ ಬಾನ್ಗೆ,
ಅನಂತತೆಯನಾಕ್ರಮಿಸೆ ನಿಶ್ಶಿಖರಮೆನಲೇರ್ದ
ಗಿರಿಯ ಸಾಹಸ ಗರ್ವಗೋಪುರಶಿಲ್ಪಕೃತಿಯಂತೆ
ನಿಮಿರಿ! ರೋಮಾಂಚಿಸಿತು ಸೃಷ್ಟಿ; ಘೇ ಘೋಷಮಂ
ಮೊರೆದುಕ್ಕಿದುದು ಕಡಲ್; ಮುಗಿಲ ವೇಷವನಾಂತು
ನಿಂದುದಲ್ಲಲ್ಲಿ ಬೃಂದಾರಕರ ವೃಂದಮಾ,
ಚಾರಣರ ಚರಣ ಚಿಹ್ನೆಯ ಚುಕ್ಕಿವಟ್ಟೆಯಿಂ
ಸಾಗರದ ದುರ್ಲಂಘ್ಯ ದೂರಮಂ ಲಂಘಿಸುವ
ಛಲಭಂಗಿಯಿಂದುರ್ಕ್ಕಿ ಸೊರ್ಕ್ಕಿರ್ದ ವೀರವಪು
ವಾಯುಸುತನಂ ನೋಡಿ ನೋಡಿ. ಲಂಘನಕೆ ಸಮ
ರಂಗತಲಮಂ ಸಮೆಯುವಂತೊರಸಿದನ್ ಕಾಲ್ಗಳಿಂ
ಶಿಖರದಾ ಪೆರ್ಮರಂಗಳೆ ಕುರುಚಲಾದಡವಿ
ಪೊಡವಿಯಂ. ಚಲಿತ ಅಚಲದ ತರುಸಮೂಹದಿಂ
ಪೂವಾಲಿಗಲ್ಮಳೆಗರೆಯೆ, ಮರದಲೆಯೆ ಬರಿದಾಗಿ,
ಮಲೆಯ ನೆಲಮಾದುದು ಕುಸುಮ ಶೋಭಿ. ಸಾಹಸಿಯ
ಆವೇಶಕೆತ್ತಿದಾರತಿಯಾಯ್ತುಡವಿವೆಂಕೆಃ
ಧೂಪಮಿಕ್ಕಿತು ಹಗಿನಗಂಪು; ತೂರ್ಯಮಾದುದು
ವೀರಪೂಜೆಗೆ ನಗದ ಖಗಮೃಗ ಚಕಿತರಾವಂ.

ಮುಖಸೀಮೆಯಂ ಸುತ್ತಿಮುತ್ತಿ ದಿಟ್ಟಿಗೆ ತಡೆಯ
ಅಡಕಿರ್ದ ಬಾನ್ನೆತ್ತಿಯಾ ಮುಗಿಲ್ ಮೊತ್ತಮಂ
ಇರ್ಕಯ್ಗಳಿಂದೊತ್ತಿ ಔಂಕಿದನ್, ನೂಂಕಿದನ್;
ಮತ್ತೆ ಕೆದರಿದನತ್ತಲಿತ್ತಲಾ ತೂಪಿರುವ
ರೌದ್ರಪ್ರಭಂಜನೋಚ್ಛ್ವಾಸದಿಂ. ಮಹಿಮದಿಂ
ಮೇಘಮಂಡಲಕುರ್ಬ್ಬಿ ಬಳೆದ ಕಪಿಕುಂಜರಂ
ನಿಸ್ಸೀಮ ಲವಣ ಜಲ ನೀಲಿಮಾ ಸೀಮೆಯಂ
ಲಂಘಿಸಲ್, ತೊರೆದು ಗರಿಮದಾ ಗುರುಭಾರಮಂ.
ಲಘಿಮದಿಂ ಗರಿಹಗುರವಾದನಿಳಿದಾ ಹೊರೆಗೆ
ಪುಳಕಿಸಲ್ ತೃಣರೋಮಮುರ್ವರೆಗೆ. ಪೂರಕದ
ಮಾರ್ಗದಿಂ ತುಂಬಿದನ್ ಪ್ರಾಣಮಂ; ಕುಂಭಕದಿ
ಬಂಧಿಸಿದನಂಬರವನೆಳೆದು ಪೀರ್ವಂತೆವೋಲ್
ಆ ಅಂತರಿಕ್ಷಾಂತರಂಗಿ. ಕೌಂಗಿನುದ್ದದಾ
ಪಂಚಾಸ್ಯಫಣೆಗಳೋಲಿರ್ದ ನಿಡುತೋಳ್ಗಳಂ
ಮೇಲೆತ್ತಿ ಚಾಚಿದನ್; ಮೇಣಳತೆ ಮೀರಿದಾ
ಲಂಬ ಲಾಂಗೂಲಮಂ ಸುರಳಿ ಬಿಚ್ಚಿದನೊಗೆದು
ಬೀಸಿದನ್, ಗಗನವನಳೆಯೆ ವಿಶ್ವಶಿಲ್ಪಿ ತಾಂ
ಬಿಚ್ಚಿಬೀಸಿದ ಮಾನಸೂತ್ರವೆಂಬಂತೆವೋಲ್!
ಮುಂ ಪೇಳ್ವೆನೇನಾ ಅಭೌತಮಂ?

ಕೇಳಿಮಾ
ಸಂಭ್ರಮಾಶ್ಚರ್ಯ ಭಯ ಚಕಿತ ಚಿಹ್ನೆಗಳಾಗಿ,
ತೆರೆದ ಬಾಯ್ತೆರೆದ ಕಣ್ಣಾಗಸಕೆ ಮೊಗಮಾಗಿ
ನಟ್ಟವೋಲ್, ಮರವಟ್ಟವೋಲಿರ್ದ್ದ ಕಪಿ ಬೃಹದ್
ಧ್ವಜಿನಿಯಂ: ನೋಡುತಿರೆಯಿರೆ, ಬಿಚ್ಚಿದುದು ಬೆಸುಗೆ ಕಾಣ್
ಮಲೆಮುಡಿಗೆ ಮೇಣಂಜನೆಯ ಮಗನಡಿಗೆ! ನಗಂ
ತೆಕ್ಕನೆಯೆ ಕೆಳಕೆಳಗಿಳಿದುರುಳ್ವ ತೆರನಾಯ್ತು,
ನಿಮಿಷಮಾತ್ರಂ! ಪೃಥಿವಿಯಾಕರ್ಷಣೆಯ ಶಕ್ತಿ
ಗತಿಸಲ್ಕೆ ಬಾಂದಳಕೆ ಸಿಡಿವ ಪೃಥುಲಾಚಲದ
ಕೂಟದಂದದೊಳೇರ್ದುದಾಂಜನೇಯನ ಮಹಾ
ರಿಪು ಭಯಂಕರ ವಿಪುಲ ವಪುಪರ್ವತಂ! ಕುಂಭಕಂ
ನಿರ್ಮಿಸಿದ ಶೂನ್ಯದಿಂ, ಯೋಗಿಯಾ ವೇಗದಿಂ,

ಸಂಭವಿಸಿತಾತನಂ ಪಿಂಬಾಲಿಪೊಂದುರುವ
ತಿರ್‍ರನೆ ತಿರಿವ ಸುಟ್ಬುರೆವೊನಲ ಭೋರಿಡುವ
ಬಿರುಗಾಳಿ! ಹೋಹ ನಂಟನನಿನಿತು ದೂರಕ್ಕೆ
ಕಳುಹಿ ಬರಲವನೊಡನೆ ನಡೆವ ಮನೆಮಂದಿಯೆನೆ,
ನೆಗೆದ ಹನುಮನ ಕೂಡೆ ಬಂಡೆಗಿಡುಮರಬಳ್ಳಿಗಳ್
ಪಾರಿದುವಿನಿತು ಗೆಂಟರ್ಗೆ. ಮತ್ತಮಂಬುಧಿಗೆ
ಗಮನಗೆಟ್ಟುರುಳಿದುವು, ಕವಿಕಲ್ಪನೆಯ ಕೂಡೆ
ಏರಲೆಳಸಿಯುಮೇರಲಾರದ ವಿಮರ್ಶಕನ
ಕಾಣ್ಮೆಯಿಲ್ಲದ ಬರಿಯ ಜಾಣ್ಮೆಯೋಲ್. ಆದೊಡಂ
ಪಲವಾತನಾ ಗಮನ ವೇಗ ಮಹಿಮೆಗೆ ಸಿಲ್ಕಿ,
ತಮ್ಮತನಮಂ ಮರುತ್ಸುತನ ತನುಗರ್ಪಿಸುತೆ,
ರಾಮದೂತನ ಮೆಯ್ಯನಪ್ಪುತಂಟುತೆ ನಭೋ
ಯಾತ್ರಿಗಳಾದುವೈ, ಕವೀಶ್ವರಾವೇಶಮಂ
ಕೊಂಕು ಬಿಂಕವನುಳಿದು ನೆಮ್ಮುವ ರಸಾಸ್ವಾದಿ
ಸಹೃದಯ ವಿನಯದಂತೆ. ಬಾಣಜವದಿಂದೇರ್ದು
ತೋರ್ದುದನಿಲಾತ್ಮಜನ ಕುಸುಮಿತ ಕುಟಜ ಲತಾ
ರಚಿತ ರೂಪಂ, ನಭ ಸಮುದ್ರವನಲೆವ ಬೃಹದ್
ದ್ವೀಪ ಭೂ ಖಂಡದೋಲ್ ಅಖಚಿತಂ, ಅಸ್ಫುಟಂ,
ಭೀಮರಮ್ಯಂ, ದೈತ್ಯ ಸಂಕಟಕರಂ, ನೋಳ್ಪ
ವಾನರ ಸುಹೃಜ್ಜನರ ಹೃತ್ಕಮಲ ಸಂತೋಷ
ಘೋಷ ಸಂಭ್ರಮಕರಂ. ನೋಳ್ಪ ನೋಟದೊಳಡರಿ,
ಬರಬರುತೆ ಕಿರಿದಾಗಿ ತೋರಿ, ಮಾನುಷಮಾಗಿ,
ಮೇಲೆ ಮೇಲಕ್ಕೇರಿ, ಹಕ್ಕಿರೂಹಂ ಬೆತ್ತು,
ದೂರದೂರಕೆ ಹಾರಿ, ಚುಕ್ಕಿಯೋಲಂತಾಗಿ,
ಕೊನೆಗೆ ನೀಲವ್ಯೋಮತನುವಾದನೆಂಬಂತೆ
ವಾಯುಜಂ ಗೋಚರಾತೀತನಾಗಲ್, ದಿಟ್ಟಿ
ಸೋಲ್ತು ಹಿಮ್ಮೆಟ್ಟೆ ನೋಡಿದರೊರ್ವರೊರ್ವರಂ
ತಾಮೊರ್ವರೊರ್ವರ್ಗೆ ಪೊಸ ಪರಿಚಯಮೆನಲ್ಕೆ,
ಕೌತುಕ ಸಮಾಧಿಯಿಂದೆಳ್ಚತ್ತು ಸುಗ್ರೀವ
ಸೇನಾ ಸಮಷ್ಟಿ. ಮರುವುಟ್ಟಲಾ ಮಹಿಮೆಯಂ,
ರಸಮಂ ಪರಾತ್ಪರವನನುಭವಿಸಿದಾತ್ಮರಿಗೆ:

ಮಹದ್‌ವ್ಯಕ್ತಿ ಸನ್ನಿಧಿಯೊ? ಮಹತ್‌ಕಾವ್ಯ ಪರಿಚಯವೊ?
ಮಹಾರುದ್ರವೀಣಾ ಮಹದ್‌ಗಾನದನುಭವವೊ?
ಮಹಾ ವಾನರನ ವನಧಿ ಲಂಘನವೊ? ಭೇದಮೇಂ?
ಪುನರ್‌ಜನ್ಮವೈಸಲೆ ರಸಸ್ನಾತ ಚೇತನಕೆ!
   ಅನಂತಾಕಾಶ ಸಂಗಿ, ಏಕಾಂಗಿ, ಅತ್ತಲಾ
ಭುವನೈಕ ಸಂಚಾರಿ ಗಮಿಸುತಿರ್ದನ್ ವಿಯದ್
ವಿಶ್ವಮಂ, ಬ್ರಹ್ಮಚರ್ಯವ್ರತಂ ಸಾರ್ಥಕಂ
ತಾನಪ್ಪವೋಲ್. ಮೇಲೆ ಸುತ್ತಲೆತ್ತೆತ್ತಲುಂ
ಕಣ್‌ಸೊಗಸಿದುದು ಅಚಂಚಲಮಂಬರದ ನೀಲಿ:
ಕೆಳಗೆ ದೂರದಿ ನೀರಧಿಯ ಚಂಚಲಾಂಚಲ
ಮೃದುಲ ನೀಲಿ; ನಿರ್ವಿಕಲ್ಪದಿ ನಿರ್ಗುಣಾತ್ಮಮಂ
ಸಾಧಿಪದ್ವೈತಿಯೋಲೆಸೆದನನಿಲಾತ್ಮಜಂ
ಶೂನ್ಯಮಂ ಸೀಳಿ. ಗಾತ್ರಗೌರವದೆಳೆತಟಕೆ
ಸಿಲ್ಕಿದ ಸಮೀಪದ ಮುಗಿಲ್‌ಮೊತ್ತಮೊತ್ತಿತ್ತು
ಮುಮ್ಮೆಯ್ಗೆ, ಹತ್ತಿಯ ರಾಸಿ ಮಲೆಯ ನೆತ್ತಿಯಂ
ಮುತ್ತಿತೆನೆ ಮೆತ್ತಿ. ಮೇಣ್ ವಾಯುತಾಟಸ್ಥ್ಯಮಂ
ಬಿರುಗಾಳಿಗೊಳಿಸಿರ್ದುರುವ ಜವಕೆ ಚೆದರಿದುದು
ಗೆಂಟರೊಳಿರ್ದ ಜೀಮೂತ ಸಂದೋಹಮಳ್ಕಿ,
ತೋಳಮೆರಗಿದ ಮಂದೆಯಂತೆ. ಸಹ್ಯ ಪಂಕ್ತಿಯ
ಗಿರಿ ಗಿರಿಯ ನಡುವಣಾ ಕಂದರದ ಸಂಧಿಯೊಳ್
ಮುಂಗಾರ್ಮೊದಲ ಗಾಳಿ ನುರ್ಗ್ಗಿ ಘೋರ್ಗ್ಗರೆವಂತೆ
ಘರ್ಜಿಸಿತು ಘೋರಾನಿಲಂ ಮರುತ್ಸುತನೊಡಲ
ತೊಡೆಯ ಮೇಣ್ ತೋಳ್ಗಳ ಮೊದಲ ಕಣಿವೆಯಿರ್ಕಟ್ಟಿನೊಳ್
ದಾಳಿಟ್ಟು. ವೇಗ ಸಂಜಾತ ಝುಂಝಾವಾತ
ಘಾತಕ್ಕೆ ತತ್ತರಿಸುತಲೆದುದಯಲೆಯುಕ್ಕಿ
ವಿಕ್ಷುಬ್ಧ ಸಾಗರದ ಫೇನಮಯ ನೀಲಿಮೆಯ
ರುಂದ್ರ ವರ್ತುಲ ವಕ್ಷ ವಿಸ್ತಾರಂ. ರಂಜಿಸಿರೆ
ಹಿಮಸಮಯದಪರಾಹ್ಣ ರವಿರೋಚಿ, ಹನುಮಂತ
ದೇವನಾಯತ ದೀರ್ಘಮಾ ಯೋಜನ ತತಿಯ ಬೃಹತ್
ತನುಚ್ಛಾಯೆ ಕಂಪಿಸುವ ಕಡಲೂರ್ಮಿ ಮಾಲೆಗಳೊಡಲ
ವಿಸ್ತೀರ್ಣಮಂ ಗುಡಿಸುತನುಗಮಿಸಿದುದು ತನ್ನ

ಮಾತೃಕೆಯ ಮೃತ್ಯುಜವಮಂ. ಬಡಗಣಾಸೆಯಿಂ
ತೆಂಕಣ್ಗೆರಗುವುಳ್ಕೆಯೋಲ್ ಬಾಲದುದ್ದಮಾ
ಲಂಕೆಗಂತಕ ಶಂಕೆ ತಾನಾಯ್ತು. ಹರೀಶ್ವರಂ
ತಾನೆತ್ತ ಚಲಿಸಿದೊಡತ್ತಲಳ್ಳೆ ಸೆಡೆತುದು ಕಡಲ್
ನೀರ್ಗಣಿವೆಯಪ್ಪವೋಲ್, ತೆರೆಯ ಗಿರಿಯೇಳ್ವವೋಲ್,
ವೀಚಿ ವೀಚಿಯನಪ್ಪಳಿಸಿ ಕಡೆದ ತುಂತುರ್ ಮಂಜು
ಸಿಡಿದು ಮುಗಿಲಾಗಿ ಮುಗಿಲೆಡೆಗೆ ಮೇಲೇಳ್ವವೋಲ್.
ಆ ಮುಗಿಲ್ ಇನಮರೀಚಿಯ ವರ್ಣತಂತ್ರದಿಂ
ಇಂದ್ರಚಾಪದ ಮಂಜುರಾಗದಿಂ ರಂಜಿಸುತೆ
ಸಿಂಗರಿಸಿದುದು ಯಶಃಪರಿವೇಷದೊಲ್ ವಾಯುಜನ
ರೋಮಾಂಗಮಂ: ಸುರರ್ ನಟ್ಟು ನೋಡಿದರೆನಲ್
ಪೆರ್ಚುಗೆಯದೇನಾ ಮಹತ್ಕಾರ್ಯ ನಿಷ್ಠಂಗೆ,
ಪೇಳ್, ಆಂಜನೇಯಂಗೆ? ತಮಗೈಸಲಾ ದರ್ಶನ
ರಸಾಮೃತಂ!
ಇಂತಿಂತಿಂತು ಭೀಮ ರಮಣೀಯತೆಯ
ಆ ನಭಸ್ಸಾಗರಕ್ಷೋಭಿ ಯಾತ್ರೆಗೈದಿರೆ
ದೇಶಮಂ ಪಿಂಡುತೆ, ಕಿಮುಳ್ಚುತ್ತೆ ಕಾಲಮಂ,
ಕಂಡನೊಂದಾಶ್ಚರ್ಯಮಂ, ನಡುಗಡಲಿನಿಂದೆದ್ದ
ಗಿರಿರೂಪಿ ಮೈನಾಕನಂ. ವೈರಿಯೆಂದೆನುತೆ
ವಕ್ಷತಾಡನ ವಜ್ರದಿಂದಿಕ್ಕೆ, ಮುಳುಮುಳುಗಿ,
ತಿರ್ರನೆ ತಿರುಗಿ, ತತ್ತರಿಸಿ, ಮರಳಿ ಮೇಲೆದ್ದು
ಮೊಗದೋರಿ ಕೈಮುಗಿದು ಕರೆದನಾಹ್ವಾನಮಂ
"ಮನ್ನಿಸೆನ್ನನ್, ಮಹಾಸತ್ತ್ವ, ಮೈನಾಕನೆಂ,
ಇಂದ್ರ ಕೋಪದ ಬಿರುಬಿನಿಂದೆನ್ನನುಳುಹಿದನ್
ನಿನ್ನಯ್ಯನಂದು. ನನ್ನಾತಿಥ್ಯಮಂ ಕೊಂಡು,
ನನಗೆ ಕೃಪೆಮಾಡಿ, ಮೇಣ್ ಪಸಿವು ನೀರಳ್ಕೆಯಂ
ದಣಿವಾರೆ ಕಳಿದು, ಮುಂಬರಿವುದೊಳಿತಯ್ಯ, ಗುರಿ
ದೂರಮಿದೆ; ದಾರಿಯೊ ಮಹಾ ಸಂಕಟಾನ್ವಿತಂ;
ನಿನ್ನ ದೌತ್ಯವನರಿತೆನನಿತಂ ಸಮುದ್ರನಿಂ;
ಬಂದೆನಾತನ ಹಿತದ ನುಡಿಗೇಳ್ದು, ಪಿರಿಯತಿಥಿ,
ನಿನ್ನನಾದರಿಸೆ."

ಮೈನಾಕನಂ ಮನ್ನಿಸುತೆ,
ಪಿಂತಿರುಗಿ ಬರ್ಪಾಗಳಾತಿಥ್ಯಮಂ ಕೊಳ್ವ
ಕೆಳೆವಾತನರುಹಿ, ಪಕ್ಷಿಗಾನದ, ಕಾನನದ
ಮಂಟಪದ, ಹೂ ತಳಿರ ತೋರಣದ, ನದನದಿಯ
ಕೊರಳಹಾರದ ಶೈಲಬಂಧುವಂ ಬೀಳ್ಕೊಂಡು
ಮುಂಬರಿದನಾ ವ್ಯೋಮರಥಿ, ಕರ್ತವ್ಯಕೋವಿದಂ,
ಸಿಂಧುಪಥಮಂ ಪಿಡಿದು, ಸ್ವಾಮಿಕಾರ್ಯಂ ಕುರಿತ
ಗಂತವ್ಯಕೆ.
ಬರುತಲಿರೆ, ಮಾರ್ಗದೊಳ್ ಸುರಸೆಯಂ,
ಕಡಲಿನಿಂದೆದ್ದು ಬಾಯ್ದೆರೆದಡ್ಡ ನಿಂದಳಂ,
ಮುರಿದವಳ ಶಾಪಂಗಳೆಯುತಾನಂದದಿಂ
ಬರ್ದಿಲವಟ್ಟೆಯೊಳೈತರುತಲಿರ್ದ ಹನುಮನಂ,
ದೂರದಾಕಾಶದೊಳ್ ಚುಕ್ಕಿಯೋಲಿರ್ದನಂ,
ತಿಳಿದಳಾ ಸಿಂಹಿಕೆ, ದಶಗ್ರೀವನಾಜ್ಞೆಯಿಂ
ಕಡಲ ಕಾವಲುಗಾರ್ತಿ, ಕಾಮರೂಪಿಣಿ, ಕಾಳಿ,
ಛಾಯಾಗ್ರಾಹಿ ದನುಜೆ: ಬೀಸುತಿರ್ದುದು ಗಾಳಿ
ದಿಕ್ಕಲ್ಲದಾ ದಿಕ್ಕಿನಿಂದೆ; ಅವೇಳಾನಿಲನ
ಬಿರುಬಿನುರುಬೆಗೆ ಕುದಿಯುತಿರ್ದುದು ಕಡಲ್‌ವೊಡಲ್,
ಕಡೆದವೋಲ್ ಮೇಣೊಡೆದವೋಲ್. ಪುಡುಕು ನೋಟವನಟ್ಟಿ
ಗುಡಿಸುತಿರೆ ಸಲಿಲ ವಿಸ್ತೀರ್ಣಮಂ, ಕಣ್ಣೆಳಲ್,
ಹನುಮನಾಯತ ದೀರ್ಘ ಬಹುಯೋಜನದ ಛಾಯೆ,
ನೊರೆವ ನೀರಂ ಕರ್ಪುಗೈದು ಬರುತಿರ್ದುದಂ
ಕಂಡಳದ್ಭುತ ನಿಶಾಚರಿ. ಕಂಡಳೊಡನೊಡನೆ
ಕಣ್ಣಟ್ಟುತದರ ಮೂಲದ ವಿಯಚ್ಚಾರಿಯಂ.
ತುಡುಕಿದಳ್; ಪಿಡಿದಳಾ ನೆಳಲ ನೇಣಂ; ಸೇದಿ,
ಗಾಳಿಪಟಸೂತ್ರಮಂ ಸೆಳೆವಂತೆ, ಸೆಳೆದಳಾ
ವ್ಯೋಮದೂರದ ಬೃಹದ್ದೇಹಿಯಂ!
ಅತ್ತಲಾ
ಆಂಜನೇಯಂ, ಬಾನೆಡವಿ ಮುಗ್ಗರಿಸಿದಂತೆ,
ಓಡುತಿರ್ಪಾತನಾ ಕಾಲ್ಗುರುಳ್‌ಗಣ್ಣೆಯಂ
ಕುಣಿಕೆಯೆಸೆದೆಳೆದಂತೆ, ತೆಕ್ಕನೆಯೆ ತತ್ತರಿಸಿ,

ಗಾಲಿಯೋಲುರುಳುರುಳುರುಳಿ, ತಿರಿತಿರಿಗಿ ಪೊರಳಿ
ಸುತ್ತಿ ತಲೆಕೆಳಗಾದನಾ ರಕ್ಕಸಿಯ ಜರ್ಗ್ಗಿ
ಜರ್ಗ್ಗಿಸಿದ ತಡೆಗೆ ನಡೆಗೆಡುತೆ ತಡವರಿಸಿ! ಏನ್
ಬಣ್ಣಿಸುವೆನಾ ಭಯಂಕರ ಶಕ್ತಿ ಸಂಸ್ಪರ್ಧೆಯಂ
ರಾವಣನ ಕಿಂಕರಿಗೆ ಮೇಣ್ ಸೀತಾನಾಥ
ದೂತಂಗೆ? ಕಡಲಲೆವ ಪಡಗುಪಡೆ ನೀರ್‌ಸುಳಿಗೆ
ಸಿಲ್ಕಿ ತಿರ್‍ರನೆ ತಿರುಗುತಿರ್ದೊಡಂ, ನಾವಿಕರ
ಶಕ್ತಿಯಿಂ ಧೈರ್ಯದಿಂ ಮತ್ತೆ ಚಾತುರ್ಯದಿಂ
ಮುಳುಗಲೊಲ್ಲದೆ ನಿತ್ತರಿಸಿ, ಮರಳಿ ಸುಳಿಯೊಡನೆ
ಮಲೆತು ಹೋರಾಟಮಂ ತೊಡಗುವೋಲಂತೆ ಆ
ಭೀಮವಿಕ್ರಮಿ ಜಗತ್‌ಪ್ರಾಣಪುತ್ರಂ, ತನ್ನ
ವೇಗದ ಉಪದ್ರವಕೆ ತಾನೆ ಗುರಿಯೆಂದದಂ
ತಡೆದು, ಪಡಿಸೆಣಸುತುರವಣಿಸಿ ನಿಂದನ್, ಕುರರಿ
ನೀರ್ಗ್ಗೆರಗುವಾ ಮುನ್ನಮಂಬರದಿ ನಿಶ್ಚಲಂ
ಕಣ್ಣುಗ್ಗಿರಿನಟ್ಟು ನಿಲ್ವಂತೆ. ತನ್ನ ನಡೆತಡೆಗೆ
ಕಾಣವನರಿಯದೆಯೆ, ದೈವಿಕವೊ ರಾಕ್ಷಸವೊ
ಪ್ರಾಕೃತವೊ ಅಪ್ರಾಕೃತವೊ ಎನುತೆ ಬೆರಗಾಗಿ,
ಶರಧಿಯಾಕಾಶಗಳನೀಕ್ಷಿಸಿರೆ ಕಂಡುದಾ
ಸಿಂಹಿಕೆಯ ಪಾತಾಳ ಬಿಲ ಸದೃಶ ಭೂತಿನಿಯ
ಬಾಯಿ.
ನೆಳಲೆಳೆವಸುರಿ ಸೆಳೆದಳತ್ತಲ್, ಉಸಿರ
ಸೂತ್ರಂಬಿಡಿದು ಅಸುವ ಸೆಳೆವಂತೆ. ಇತ್ತಲಾ
ವಾನರೋತ್ತಮನೊತ್ತಿ ಜರ್ಗ್ಗಿದನ್, ಸಿಂಹಿಕೆಯ
ದಂಷ್ಟ್ರಗಳಲುಗುವಂತೆ. ಪಂದಿಯೋಲ್ ಹೂಂಕರಿಸಿ,
ಔಡುಗಚ್ಚುತೆ, ತನ್ನ ರಾಕ್ಷಸಾದ್ಭುತ ಶಕ್ತಿಯಿಂ
ಸರ್ವಸ್ವದಿಂ ಸೇದಿದಳೊ ಸಿಂಹಿಕಾ ಚಂಡಿ!
ಸಿಂಹ ಗಜ ಗರ್ಜನಾ ಘೀಂಕಾರದಿಂದಾರ್ದು
ಬಾನ್‌ಕಡಲ್ ಬೆದರ್ಪವೋಲ್, ತನ್ನ ದೈವಿಕ ಬಲಂ
ಪೆರ್ಚುವೋಲಾತ್ಮಾನುಸಂಧಾನಮಂ ಗೆಯ್ದು,
ಸಂಯಮವನಭ್ಯಾಸಿಸುವ ಸಾಧಕನದೆಂತು
ಸರ್ವೇಂದ್ರಿಯಂಗಳಂ ದಿವ್ಯಾತ್ಮನೆಡೆಗೆಳೆಯೆ

ಹೋರಿ ಹೆಣಗುವವನಂತೆ, ವೀರ ಮರುತಾತ್ಮಜಂ
ರಾಕ್ಷಸಾಕರ್ಷಣೆಯ ಗರ್ತದಿಂ ಪೊರಪೊಣ್ಮೆ
ಪ್ರತಿಭಟಿಸುತಾರ್ಭಟಿಸಿದನ್; ಜಗ್ಗಿ ಸೇದಿದನ್;
ಗಂಟಲ್ ಸೆರೆಗಳುಬ್ಬೆ, ಸಂಧಿ ಸಂಧಿಯ ನರಂ
ಹೆದೆಯೇರ್ದ ನಾರಿಯೋಲ್ ಬಲಿದು ಠಂಕೃತಿಗೆಯ್ಯೆ,
ವಜ್ರರೋಮಂ ನಿಮಿರಲೀಟಿಕೋಟಿಗಳೋಲ್,
ಸುವಿಸ್ಫಾರಿಸಲ್ ನೇತ್ರವಿಸ್ತೀರ್ಣ ಮಂಡಳಂ,
ರೌದ್ರತೆಯನಾನಲ್ ಮುಖಂ, ಸಂವ್ಯಾಪಿಸಲ್ ಬೃಹದ್
ವಕ್ಷವಿಸ್ತಾರಮುಚ್ಛ್ವಾಸದಿಂದಾ ವಾಯುಜಂ
ಗಗನಾಗ್ರದತ್ತಣ್ಗೆ ಕಿತ್ತು ಪೊತ್ತೆತ್ತಲ್ಕೆ
ಪ್ರಪ್ರಯತ್ನಿಸಿದನಾ ರಾತ್ರಿಂಚರಿಯ ಮಹೀ
ಭೂತ ಶವಭಾರಮಂ. ಶರಧಿತಲ ಪೀಠದಾ
ಭೂತಿನಿಯತುಲ ಗಾತ್ರಮರ್ಧಯೋಜನ ಮಾತ್ರಮಂ
ನಟಿಸುತೇರುತೆ, ಮರಳಿ ಭೋಂಕನೆ ಕೆಳಕ್ಕೆಳೆದು
ಪೊಕ್ಕುದಂಬುಧಿ ಗರ್ಭಮಂ. ಫಕ್ಕನೆಯೆ ಗುದ್ದಿ
ಕೆಳಗೊದ್ದವೋಲಾಗಿ ಬಿದ್ದನೊಂದ್ಯೆದಾರು
ಯೋಜನಗಳಂ, ಬುದ್ಧಿ ಮಂಕಾದವೋಲ್, ತನ್ನ
ಇಂದ್ರಿಯಗಳಂ ಗೆದ್ದೆನೆಂದತಿಕ್ರಮಿಸಿದಾ
ಸಾಧಕನಧಃಪತನಮಿರ್ಮಡಿಸುವೋಲನಲಸಖ
ಸೂನುಃ ರವಿಗಾತ್ರಮಂ ನಗುವ ತಾರಾದ್ವಯಂ,
ಸಂಖ್ಯಾತೀತಮಾ ಜ್ಯೋತಿವತ್ಸರದ ದೂರದೊಳ್,
ವಿಶ್ವಾಂತರಿಕ್ಷದೊಳ್, ಯುಗಯುಗಾಂತರಕೊರ್ಮೆ
ಲಕ್ಷಯೋಜನ ನಿಕಟಮಾಗಲ್, ಪರಸ್ಪರಂ
ಸಂಕರ್ಷಿಸಲ್ ತೊಡಗಿದಪುವಯ್. ಶಿಖಿಜ್ವಾಲೆ
ಯೋಜನ ಸಹಸ್ರಮಂ ಲಂಘಿಸುತೆ, ಜಿಹ್ವೆಯಂ
ಚಾಚುತಾಕಾಶಮಂ ನೆಕ್ಕುತಿರೆ, ಮೆಲ್ಲನೆಯೆ
ಪ್ರಳಯಾನುರಾಗದಿಂದೊಂದನೊಂದಂ ಸೆಳೆದು
ಬಳಿಸಾರ್ವುವಾ ಮಂಡಲದ್ವಯಂ. ಆವೋಲಾ
ಸಿಂಹಿಕೆ ಹನುಮರಿರ್ವರುಂ, ತಾವೊರ್ವರೊರ್ವರಂ
ಸೆಳೆದು, ಹೊಣರಿದರೊರ್ವರೊರ್ವರಂ ಸೋಲಿಸುವ
ಛಲದ ವೀರ್ಯದ ಗರ್ವದಿಂ. ಗಾಳಗಾರನಾ

ಕೊಂಡಿಯೆರೆಯಂ ತಿಂದ ಬಾಳೆಮೀನಂ, ಒರ್ಮೆ
ಸಡಿಲ ಬಿಡುತಂ, ಒರ್ಮೆ ಸೆಳೆಯುತಂ, ಸೋಲಿಸುವ
ಮಾಳ್ಕೆಯಿಂದಸುರಿ ತನ್ನಂ ದಣಿಸಿ ನುಂಗುವ
ಉಪಾಯದಿಂ ಬಾಯ್ದೆರೆದು, ನರಕ ಕೂಪೋಪಮಂ
ಬಳಿಸಾರುತಿರ್ದುದಂ ಕಾಣುತೆ ಸಮೀರಜಂ
ತನ್ನೊಡಲನಿರ್ಮಡಿಸಿದನ್. ಬಳೆದುದಸುರಿಯ ಬಾಯಿ
ಹನುಮ ಗಾತ್ರಕೆ ಸಮಂ! ಬಳೆದನಿಮ್ಮಡಿಯಾಗಿ
ಮತ್ತೆ ಹನುಮಂ. ಮತ್ತಮಾ ರಕ್ಕಸಿಯ ಕಿಬ್ಬಿವಾಯ್
ಬಳೆದತ್ತವನ ತನುಗೆ ತಕ್ಕಂತೆವೋಲ್. ಅನಿಲಜಂ
ತೃಪ್ತಿಯೊಲ್ ಬೆಳೆದು ತುಂಬಿರೆ, ಪರಮ ಲೋಭದೊಲ್
ಹಿಗ್ಗಿ ಹಬ್ಬಿತು ಬಾಯಿ ಸಿಂಹಿಕೆಯ! ಕೊನೆಯುಂಟೆ, ಪೇಳ್,
ಬ್ರಹ್ಮಾಂಡದಾನಂತ್ಯಮಿರಲಂತು ಬೆಳೆವುದಕೆ?
ಆ ಕಡೆಗೆ ಕಡೆಯ ಕಾಣದೆ, ಹನುಮನೊಯ್ಕನೆಯೆ
ತಾಳ್ದನಣುರೂಪಮಂ, ಸಿಲ್ಕದಸುರಿಯ ಪಲ್ಗೆ
ಪಕ್ಕನೆಯೆ ಪೊಕ್ಕನಾಕೆಯ ಹೊಡೆಯ ಗಬ್ಬಕ್ಕೆ:
ಬಳೆದು, ಕರುಳಂ ಸೀಳ್ದು, ಕೊಂದು, ಪೋಳ್ದಾಕೆಯಿಂ
ಪೊರಮಟ್ಟನೆಂತೆನೆ, ಬಹಿಃಕ್ರಾಂತಿ ಸೋಲ್ತಡೇಂ
ಗೆಲ್ವುದಂತಃಕ್ರಾಂತಿ ತುದಿಗೆ!
ಕಣ್ಣೀರಿಂದೆ,
ಮೇಣಂತೆ ಬಯ್ಗುನೇಸರ್‌ವೆಳಗುಗೆಂಪಿಂದೆ
ಓಕುಳಿಯವೋಲೆಸೆದ ಮುನ್ನೀರಿನೊಳ್ ಮಿಂದು
ತೊಳೆದು, ಮೈಲಿಗೆವೋದ ಮೆಯ್ಯಂ ವಿಗುರ್ವಿಸುತೆ
ಮುನ್ನಿನದ್ಭುತಕೆ, ಮುನ್ನೆಗೆದನಾ ದಕ್ಷಿಣ
ದಿಗಂತ ಚರ ದೃಷ್ಟಿಯಾದಾ ಮಹದ್ ವಾನರಂ.
ದ್ಯುಮಣಿಯಸ್ತಾಂಬುಧಿಯೊಳಳ್ದುವಾ ಮೊದಲೆ ನಾಂ
ದೈತ್ಯ ಲಂಕಾ ದ್ವೀಪ ತಟಿಗೆ ಸೇರ್ದಪೆನೆಂದು
ಸೊರ್ಕ್ಕುದವಕದೊಳೆಯ್ದುತಿರೆ, ಬಾನ್‌ಕಡಲ್ ಕರೆಯ
ಗೆರೆಯ ಪಡುವಲದಂಚಿನಿಂದೋರೆಗದಿರಾಗಿ
ನೋಡುತಿರ್ದನ್ ದಿವಸಪತಿ, ತನ್ನ ವಂಶಕ್ಕೆ
ಮಂಗಳವನೆಸಗುವಾತಂಗೆ ನೆರಮಪ್ಪವೋಲ್
ಮೋಹದಿಂ ನಿತ್ಯಕರ್ತವ್ಯದಾ ವೇಗಮಂ

ನಸು ತಡೆದಿನಿತು ತಳುವಿ ನಿಂತಂತೆ. ಕಪೀಶ್ವರಂ
ಪಾರುತಿರ್ದುದತ್ತುಂಗದೆಳ್ತರಕೆ ತುಹಿನ ಋತು
ಸಂಧ್ಯೆಯಾ ಚಳಿಕುಳಿರ್ ಪೆರ್ಚಿರಲ್ ಮೇಣಿರುಳ
ಮೊದಲ ಮೆಟ್ಟುಂಗಾಲ ತುದಿವೆರಳಡಿಯ ಕರ್ಪು ತಾಂ
ನಡೆಯ ತೊಡಗಿರಲಿಳೆಯ ನಿಮ್ನಸ್ಥಲಂಗಳೊಳ್,
ಕಿಡಿಯರಿಲ್ಗಳ್ ಮೊಗಂದೋರಲಾರದೆ ನಾಣ್ಚಿ
ಕಾಯ್ದಿರಲಿನಾಸ್ತದ ಮುಹೂರ್ತಮಂ, ಮೌನದಿಂ
ಧ್ಯಾನಮಯಮಾಗಿರಲ್ ಪಗಲನಗಲುವ ಜಗದ
ಕಳ್ತಲೆವೆಳಗು ಸಂಧಿಸಮಯಂ, ಸಮೀರಜಂ
ಕೇಳ್ದನೊಂದತುಲ ಸಂಗೀತಮಂ, ಇಂಚರದ
ಜೇನ್‌ತೊರೆಯ ಲೀಲಾತರಂಗದುಯ್ಯಾಲೆಯೊಳ್
ಜೋಗುಳವೆರಸಿ ತೂಗುವ ತೆರದಿ ತೊಟ್ಟಿಲೊಳಿಟ್ಟು
ತನ್ನನಿತುಮಂ! ಜೋಂಪಿಸಿತು ಮನಂ. ಜೋಲ್ದೊಡಲ್
ಮೆಲ್ಲಮೆಲ್ಲನೆ ಗರಿಹಗುರಮಾಯ್ತು. ಕಣ್ಮಲರ್
ಗೇಯದ ಸುಖಾನುಭವಕರೆ ಮುಚ್ಚಿದುದು: ಕನಸೊ
ನನಸೊ? ಕಂಡುದು ಕೆಳಗೆ ಕಡಲೆದೆಯ ಮೇಲೊಂದು
ಹೊನ್ನಿನ ಚೆಲುವ ತಾವರೆಯ ದೀವಿ. ಸೊಡರುರಿಯ
ಮಿಳ್ತು ಸೊಬಗಿಂಗೆರಗಿ ಸೀಯುವ ಪತಂಗದೋಲ್
ಒಯ್ಯನಿಳಿದಿರೆ ಮಹಾಮತಿ ಅಲ್ಪಮತಿಯಂತೆ,
ಕೇಳ್ದುದೊಂದಶರೀರ ವಾಣಿ: "ಹೇ ಹನುಮಂತ
ದೇವ, ನಿನಗೇತಕೀ ಮೋಹಂ, ತಮಂ, ನಿದ್ರೆ?
ಬಲಕೆ ಸೋಲದ ಕಲಿಗಳಂ ಕಲೆಯ ಬಲೆಯೊಡ್ಡಿ
ಕೊಲ್ವ ಕೃತ್ರಿಮವಲಾ ಈ ಪದ್ಮಲಂಕೆ! ಕೇಳ್,
ಇಂದ್ರಿಯ ಸುಖಕೆ ಇಂದ್ರನಂದನದವೋಲಿದಂ,
ಪದ್ಮಲಂಕೆಯ ಪೆಸರ ಛದ್ಮನೆಯ ಸದ್ಮಮಂ,
ಒಡ್ಡಿರುವನಿಂದ್ರಜಿತು, ರಾವಣ ಸುತಂ, ಮಹಾ
ಮಾಯಾವಿ, ಮೇಧಾವಿ, ಮೇಘನಾದಂ. ಯೋಗಿ
ನೀನಾದೊಡಂ ಭೋಗ ಭೋಗಿಯಪ್ಪುಗೆಯಿಂದೆ
ಮುಕ್ತನಪ್ಪುದು ಕಷ್ಟಸಾಧ್ಯಮಲಾ! ಸುಗ್ರೀವ
ಕಾರ್ಯಮಂ ಭಂಗಿಸದಿರೀ ಪದ್ಮಲಂಕೆಯಂ
ಪೊಕ್ಕು. ಸಿಂಹಿಕೆಯಿಂದೆಯುಂ ಕಠಿನಮೀ ಶತ್ರು;

ಏಕೆನೆ ಮಿತ್ರವೇಷಿ. ತನ್ನ ದೌರ್ಬಲ್ಯದಿಂ
ತಾನೋಡಿ ಪಾರಾಗುವಂತೆ ನೀನಿಲ್ಲಿರದೆ
ನಡೆ, ಓಡು, ಬೇಗದಿಂ. ಇಂದ್ರಿಯದ ಲೋಕದೊಳ್
ಆತ್ಮಪತನಕೆ ಸಾಹಸದ ಸೋಗುಮೋರೊರ್ಮೆ
ನೆರಮಪ್ಪುದಯ್!" ಗಗನ ವಾಣಿಯೋಲೆಳ್ಚರಿಕೆಯಂ
ಪೇಳ್ದ ರವಿದೀವನಾಣತಿಗೆ, ತೆಕ್ಕನೆ ತಮಂ
ತವಿದು, ನಿದ್ದೆಗಳೆದೋಲೆದ್ದ ಮರುತಾತ್ಮಜಂ
ಪುಟನೆಗೆವ ಪೊಡೆಸೆಂಡಿನಂತೆ ಚಿಮ್ಮುತೆ ಬಾನ್ಗೆ,
ಮರಳಿ ಹುರಿಗೊಂಡು ಮುಂಬರಿದನಾ ಶೂನ್ಯಮಂ
ವೇಗವಿಕ್ರಮದಿಂದಮಾಕ್ರಮಿಸಿ.
ಅನಿತರೊಳ್
ಪಯೋಧಿ ಪಶ್ಚಿಮ ಹರಿದ್ರೇಖಾ ಚಲಜ್ಜಲಂ
ಜಾಜ್ವಲಿಸಿದುದು, ಜಾತರೂಪಂ ದ್ರವೀಭವಿಸಿ
ಸಲಿಲ ತರಳತೆಯಿಂ ಸಲೀಲತೆಯನಾಂತವೋಲ್,
ತೆರೆಯ ಮಿಂಚಿನ ಪೊರೆಯ ಕಾಂಚನ ಸರೀಸೃಪಂ
ಚಂಚಲಿಸುವಂತೆವೋಲ್. ಫಣಿಶಿರೋಮಣಿಯಂತೆ
ಪೊಳೆದುದರ್ಧ ನಿಮಗ್ನಬಿಂಬ ರವಿಮಂಡಲದಣೆ
ವರ್ತುಲಾಗ್ರಂ. ಇನಸ್ಪರ್ಧಿ ಆಂಜನೇಯಂ
ಬೇಗ ಬೇಗನೆ ಸಾಗುತಿರೆ, ಮಂಜು ಸಂಜೆಯಾ
ದಕ್ಷಿಣ ದಿಶಾ ದೂರದಪ್ರಕಟ ತಟದಲ್ಲಿ ಓ
ಈಷತ್ ಪ್ರಕಟಮಾಯ್ತು ದ್ವೀಪೋರ್ವರಾ ವಿಪಿನ
ಘನಸಾಂದ್ರ ಶೈಲರಾಜಿಯ ನೀಲರಮಣೀಯ
ರೇಖೆಯಾಹ್ವಾನ! ಹರ್ಷೋಲ್ಲಾಸದುರ್ಕಿನಿಂ
ತಾನುಮಂಬುಧಿಯಂತೆವೋಲುರ್ಕುತರ್ಕನಂ
ವಂದಿಸುತೆ, 'ಸಲ್ಗೆ ಸುಗ್ರೀವಾಜ್ಞೆ! ಗೆಲ್ಗೆ ರಘು
ರಾಮೇಚ್ಛೆ! ಮಾತೆ ಸೀತಾಕ್ಷೇಮ ಶುಭವಾರ್ತೆ
ನನ್ನ ಮುಡಿಗೇರ್ಗೆ! ಕಪಿಕುಲ ಕೀರ್ತಿ ಚಿರಮಕ್ಕೆ!'
ಎನುತಟ್ಟಹಾಸದಿಂ ಭೀಮಘೋಷಂ ಗೆಯ್ದು
ಮುಂಬರಿಯುತಿರೆ, ಸಾರೆಬಂದುದು ಕನಕಲಂಕೆ!
ಆರು ಬಣ್ಣಿಸ ಬಲ್ಲರಾಂಜನೇಯನ ದೃಷ್ಟಿ
ಕಂಡುದಂ, ಮೇಣ್ ಚಿತ್ತಮೊಳಕೊಂಡುದಂ? ಹಿಗ್ಗಿ

ಕಂಡನಾಕಾಶದೆಳ್ತರದಿಂದೆ ಲಂಕೆಯಂ,
ಬೈಗುಗಪ್ಪಪ್ಪಿರ್ದುಮುಜ್ಜ್ವಲಿಸುತಿರ್ದಾ
ಸಮುದ್ರವೇಲಾಸ್ಥಗಿತ ದೈತ್ಯನೃಪ ನಗರಿಯಂ,
ಜಟಿಲಕೌಶಲ ರಚಿತ ದೀಪಸ್ತಬಕ ಖಚಿತಮಂ
ವಿಸ್ತೀರ್ಣಮಂ. ಬಾನೊ? ಮೇಣದರ ಪಡಿನೆಳಲೊ?
ಶಂಕೆಗೆಡೆಗೊಡುವಂತೆ ಇರ್ದುದು ಬೃಹನ್ನಗರಿ,
ಚುಕ್ಕಿಚುಕ್ಕಿಯ ಹಾಸುಹೊಕ್ಕಿಂದೆ ಕಿಕ್ಕಿರಿದ
ಅಸಂಖ್ಯ ನಕ್ಷತ್ರಮಯದಮೃತಪಥದಂತೆವೋಲ್,
ಮೇಧಾವಿಗುಂ ಭ್ರಾಂತಿ ತೋರ್ಪಂತೆ. ರೋಷಮುಂ
ಸಂತೋಷಮುಂ ಕೂಡೆ ಮೂಡುತಿರಲೆದೆಯಲ್ಲಿ,
ನೆನೆದನು ದಶಗ್ರೀವ ಪಾಪವೈಭವ ಮಧ್ಯೆ
ಸೆರೆಸಿಲ್ಕಿದವನಿಜಾತೆಯ ಪುಣ್ಯಕಾನ್ತಿಯಂ.
ತನ್ನಾಗಮನ ಶಂಕೆ ಸಂಭವಿಸದಿರ್ಕೆಂದು
ಬರಬರುತೆ ಕಿರಿದುಗೈಯುತೆ ತನ್ನ ಗಾತ್ರಮಂ
ಇಳಿದನುಲ್ಕೆಯ ವೇಗದಿಂ, ಚಕ್ರಗತಿಯಿಂದೆ:
ದೇವಪಥದಿಂ ರಾಕ್ಷಸರ ನೆಲಕ್ಕಿಳಿಯುತಿರೆ
ಪೆರ್ಚಿದುದು ತಿಮಿರಸಾಂದ್ರತೆ ಸುರುಳಿಸುರುಳಿಗುಂ. ಮೇಣ್
ದಶಶಿರಪ್ರತಿಭಟನೆ ಮೇಲ್ವಾಯೆ ನುರ್ಗ್ಗಿತೆನೆ, ಮೇಣ್
ಧರಣಿಜಾ ಪ್ರಾರ್ಥನಾಶೀರ್ವಾದಮಿದಿರುಗೊಳೆ
ಬಂದುದೆನೆ ಧಾವಿಸಿತ್ತೇರ್ದು ತನಗಭಿಮುಖಂ
ಆ ದ್ವೀಪಧಾತ್ರಿ: ನೆಲದಿಂದೆ ಬಾನ್ಮೊಗಮಾಗಿ
ರಭಸದಿಂ ಬೀಸಿದುದು ಸುಯ್ಗಾಳಿ, ತಣ್ಪೊತ್ತಿ
ಮೆಯ್ಗೆ; ಕೆಳಕೆಳಗಿಳಿದು ಭೂಮಿ ಬಳಿಸಾರ್ದಂತೆ
ನೆಲದುಸಿರ ಬಿಸುಪು ಪೆರ್ಚುತೆ ವಾಯುಮಂಡಲಂ
ಬರಬರುತ್ತುಷ್ಣತರಮಾಯ್ತು; ನಕ್ಷತ್ರಗಳೆ
ದಟ್ಟಯಿಸಿ ರಂಗವಲ್ಲಿಯನಿಕ್ಕಿದೋಲಿರ್ದ
ಲಂಕಾ ನಗರ ದೀಪಕುಲದ ನಿಬಿಡತೆಯಳಿದು
ಸಮನಿಸಿತು ವಿರಳತೆಯ ನಿರತೆ; ಬಾನೆತ್ತರದ ಆ
ಸದ್ದಿಲಿತನಂ ಮಾಣ್ದು, ಬಂದುದೊಯ್ಯನೆ ಕಿವಿಗೆ
ಮರ್ತ್ಯ ನಾನಾ ನಿನದ ಗೋಷ್ಠಿಗಾನಂ; ಹತ್ತಿರಕೆ
ಹತ್ತಿರಕೆ, ಕುದುರೆಪಡೆ ಜವದಿಂದೆ, ಗುಂಪೊತ್ತಿ

ಮೇಲ್ವಾಯ್ದುಬರೆ ಕವಿದ ಪಿಂಬಯ್ಗುಗರ್ಪಿನಾ
ಶಿಖರ ಕಂದರ ವೃಕ್ಷ ವಕ್ಷದ ಅವಿವಿಧತಾ
ಪೃಥಿವಿ, ಸಂಯಮಿಸಿದನ್ ತನ್ನ ಜವಮಂ; ಮತ್ತೆ,
ನೆಲಕಿಳಿವ ಮುನ್ನಮೆಂತುಟು ಪಕ್ಕಿ ಲೆಕ್ಕಿಪುದೊ
ತನ್ನೆರಗುದಾಣಮಂ, ತಾನುಮಂತೆಯೆ ಪುಡುಕಿ
ವಿಜನಗೋಪ್ಯದ ಶೃಂಗದುನ್ನತದ ರಂಗಮಂ,
ಸುರುಳಿಸುರುಳಿಯೊಳಲೆದು ಮೆಲ್ಲನತಿಜತನದಿಂ
ಲಂಬವೆಂಬಾ ಶಿಖರಕವತರಿಸಿದನ್, ಕೇಳ್, ತನ್ನ
ನರ ರೂಪದಿಂ!
ಗೋಚರಿಸದಿರ್ದೊಡೇಂ ಕಣ್ಗೆ?
ಘ್ರಾಣಕ್ಕೆತಂದುದಯ್ ಕೇತಕಿಯಲರ ಕಂಪು;
ನೀರ್‌ನೆಲೆಗಳಂ ಸೂಚಿಸುತೆ ತೀಡಿದುದು ತಂಪು
ಗಾಳಿ; ಸೊಗಸಿತು ಮುಂದೆ ದೀಪಮಾಲಾಶೋಭಿ
ಲಂಕಾ ತ್ರಿಕೂಟಾದ್ರಿ; ಕೇಳ್ದುದಂತೆಯೆ ಪುರದ
ತುಮುಲ ಘೋಷದ ಮಂದ್ರ ಮರ್ಮರಂ, ಮೊರೆವೆರಸಿ
ಶರಧಿಯಾಃ ಶೂನ್ಯದಿಂದಿಳಿದಂಜನಾಸುತಗೆ
ಪಂಚೇಂದ್ರಿಯಂಗಳ್ ಪುನರ್ಜನ್ಮವಡೆದವೋಲ್
ಪೊಸತಾಯ್ತು ಈ ಪೃಥಿವಿ! ನೋಡಿದನ್ ಮೊಗವೆತ್ತಿ
ತನ್ನ ಯಾತ್ರೆಯ ಮಹನ್‌ಮಾರ್ಗಮಂ: ಸಮೀಪದೊಳ್
ತಾನಿರಲ್ ನಾಣ್ಚೆ ಮರೆಯಾಗಿರ್ದ ಚುಕ್ಕಿಗಳ್,
ಕಳ್ತಲೆಯ ದೂರಕ್ಕೆ ತೊಲಗೆ ತಾಂ, ಕೆಚ್ಚುದಿಸಿದೊಲ್
ಲೆಕ್ಕದಾಚೆಗೆ ಮಿಕ್ಕು ಮೂಡಿ ಕಿಕ್ಕಿರಿಗೊಂಡು
ತುಂಬಿರ್ದುವಂಬರಕೆ ಕಿಡಿ ಕೆತ್ತಿದೋಲ್! ಮುನ್ ತನಗೆ
ಹದನಾವುದೆಂದು ವಿಶ್ರಾಂತಿಸುತೆ ಚಿಂತಿಸಿರೆ,
ಮೈದೋರ್ದುದಾಶಾ ದಿಂಗತದೆಡೆ, ಶಾಂತಿಮಯ
ದೇವದಯದೋಲ್, ಚಂದ್ರೋದಯದ ಕೋಕನದ ಕಾಂತಿ,
ಜಯರತಿಯ ಕೈಯಾರತಿಯ ರೋಚಿಯೋಕುಳಿಯವೋಲ್!

## ಸಂಚಿಕೆ ೧೨

# ದಶಶಿರ ಕನಕಲಕ್ಷ್ಮಿ

ಆಂಜನೇಯನ ಬರವಿಗಂಜಿ ಲಂಕಾರಾತ್ರಿ
ವಿಕಂಪಿಸುತೆ ಬೆಳ್ಪೇರ್ದುದಂ ತೋರ್ಪ ಮಾಳ್ಕೆಯಿಂ
ಶ್ವೇತಮಾದುದು ಮುಖಂ ಶೀತಲ ನಿಶೀಥಿನಿಗೆ
ನಾಥನೈತಹ ನಾಣೆಗೆಂಬಂತೆ. ಇಂದ್ರದಿಶೆ ತಾಂ
ನಿಶೆಯ ನೀಲಿಯ ನಯನ ನೈದಿಲೆಯನಲರಿಸಲ್
ತಗುಳಿದುದು ಮುಗಿಲಿನಂಚಿಗೆ ಬೆಳ್ಳಿನೀರ್, ಶಶಿಯ
ಚಳಿಗದಿರ್ಗಳ ಕುಳಿರ್‌ಕಾಂತಿ. ಕಿರುತಾರೆಗಳ್
ಮೆಯ್ಯಗ್ಗರೆದುವುಳಿದ ಪೇರರಿಲುಗಳ್ ಕಳೆಗುಂದಿ
ವಿನಯದಿಂ ದೂರದೂರಕೆ ಸರಿದು ನಿಂದುವು
ನಿಶಾಕಾಂತನಾಗಮನ ಗೌರವಕೆ. ಮೂಡಿದುವು
ನಿಡುನೆಳಲುಗಳ್ ಗಿಡಕೆ, ಮರಕೆ, ಬಂಡೆಗೆ, ಮತ್ತೆ
ಭೀಮವಿಕ್ರಮಿ ಭೀಮತನು ಭೀಮಚಿತ್ತದಾ
ಭೀಮ ಭೂಜ ಸ್ಥಾಣು ಸಮ ವಾನರೋತ್ತಮನ
ಭೀಷ್ಮದೀರ್ಘತೆಗೆ. ತೂರಿ ಬಂದೋರೆಗದಿರಿಂ
ತರುಸಾಂದ್ರತೆಯನಾಶ್ರಯಿಸಿದಂಧಕಾರಮುಂ,
ಜಾಳಂದ್ರಮಾದವೋಲ್, ರಂಧ್ರರಂಧ್ರಂಗೊಂಡು
ಜರ್ಜರಿತಮಾಯ್ತು. ತಿಮಿರದ ತೆರೆಯನೆತ್ತುತ್ತೆ
ಮೈದೋರಿದನು ಶೈಲಕಾನನ ಶಿರಶ್ಚುಂಬಿ,
ಕುಳಿರ ಮಂಜಿನೊಳಿನಿತು ಪಾಲ್‌ಮರ್ಬಿನಿಂದೆಸೆವ
ಪಾದರಸ ಬಿಂಬಿ, ಶಿಶಿರ ಶಶಿ. ಚಂದ್ರರೋಚಿಗೆ
ನಲಿದು ನರ್ತಿಸಿ ಚಂಚಲಿಸಿದುವು ತರಂಗತತಿ,
ಕಾಂಚನ ಲಸತ್‌ಕೃತಿಗೆ ಮಿಂಚುವ ಮಹಾಂಬುಧಿಯ
ತೆರೆಯ ತೇಜಿಯ ಪಾಯ್ವ ದಳದಂತೆ. ಕಣ್‌ಸೆಳೆದು

ಶೋಭಿಸಿತು ಆ ಶರಧಿತೀರಮಂ ಸಿಂಗರಿಸಿ,
ಬೆಳ್ದಿಂಗಳೊಳ್ ಮಿಂದ ಶಿಖರತ್ರಯಂಗಳಂ
ತಳ್ಕೈಸಿ ನಿಂದ ಗಿರಿ ವನ ನಗರಿ, ದೈತ್ಯೇಂದ್ರ
ದಶಶಿರ ಕನಕಲಕ್ಷ್ಮಿಗಾಡುಂಬೊಲಾಗಿರ್ದ
ಲಂಕಾತ್ರಿಕೂಟಾಚಲಂ.
                ನಿಂದು ನಿಡುವೊಳ್ತು
ನೋಡಿದನ್: ಕೊಂಡನಾ ಲಂಕಾ ಸಮಷ್ಟಿಯಂ
ದೃಷ್ಟಿಯ ವಿಹಂಗಮವನಟ್ಟಿ: ಮಕುಟತ್ರಯ
ಮಹೋನ್ನತಿಯ ರಾಕ್ಷಸಶ್ರೀಯ ದುರ್ಗಮ ಪುರದ
ದುರ್ಗಮಂ, ಕಾಣುತೈಂದ್ರಿಯ ಸುಖಸ್ವರ್ಗಮಂ,
ನಾಗರಿಕ ಪಟ್ಟಣ ಪ್ರಥಮದರ್ಶನದಿಂದೆ
ಗ್ರಾಮೀಣತೆಯನನುಭವಿಪ ಅಸಂಸ್ಕೃತಿಯಂತೆ,
ಸುಯ್ದನು ನಿರಾಶೆಯಿಂ. ಪೊಣ್ಮಿದುದು ಬೆರಗುನುಡಿ
ನಿರ್ವಿಣ್ಣತಾ ಖೇದದಿಂ: "ಇದೆ ಕನಕಲಂಕೆ?
ಇದೆ ದಶಗ್ರೀವ ಬಿರುದಿನ ಮಹಾ ರಾವಣನ
ದೈತ್ಯಪುರಿ? ದಿಟಮಲ್ತೆನಗೆ ಶಂಕೆ! ಕೇಳ್ದ ಆ
ಬಣ್ಣನೆಗೆ, ಕಾಣ್ಬ ಈ ಕಾಣಿಕೆಗೆ, ಸಮತೆಯೇಂ?
ಪೋಂತಾನೆಯಂತರಂ! ಕೇಳ್ದ ರೂಕ್ಷತೆಯೆಲ್ಲಿ?
ನಾಂ ಕಾಣುವೀ ಕಲೆಯ ಕುಶಲತಾ ನಯಮೆಲ್ಲಿ?
ಆ ಚಿತ್ರಿಸಿದ ರಾಕ್ಷಸರ ವಿಕೃತಿಯೆತ್ತಲೀ
ಕಣ್ಸೊಳಿಪ ನಾಗರಿಕತಾ ಪ್ರಕೃತಿಯೆತ್ತಲೇಂ
ತಪ್ಪಿದೆನೊ? ತಪ್ಪಿ, ಲಂಕೆಯನುಳಿಯುತನ್ಯಮಂ
ಪೊಕ್ಕಿಹೆನೊ ದೇವತಾಭೂಮಿಯಂ?—ಅಮರೆಯಂ?
ಅಲಕೆಯಂ? ಮೇಣರಿಯದಾವುದೋ ಗಂಧರ್ವ
ಲೋಕಮಂ? ಮೇಣ್ ಕಿನ್ನರ ಪ್ರಾಂತಮಂ?—ಛಿಃ, ಭ್ರಾಂತಿ
ನನಗಿದೇಂ?—ದಿಟಮಿದೆ ಕನಕಲಂಕೆ? ಅಲ್ಲದಿರೆ,
ಇಂದ್ರಜಿತು ಪಿತಗಲ್ಲದೀ ವಿಭವಮಿನ್ನಾರ್ಗೆ
ಸಾಧ್ಯಂ? ಕುಬೇರನಂ ಸೂರೆಗೆಯ್ದುಂಗಿದೇಂ
ಬರಿಯಲ್ಪಮೈಸೆ? ಪರಸತಿಗಳುಪುವಳಿಯಾಸೆ
ಈ ಸಿರಿಯ ಸೊರ್ಕಿಗಲ್ಲದೆ ಸಲ್ಲದಿತರತೆಗೆ:—ಚಿಃ
ಪೊಲ್ಲಮೀ ವೈಭವಂ! ಸಲ್ಲದೀ ನಾರಕಕೆ,

ಪೊನ್ನಾದೊಡಂ, ಪೊಗಳ್ಕೆ!—ದುರ್ಗಂ ದಿಟಂ ಲಂಕೆ!
ಮುನ್ನಮ್; ಇನ್ನಲ್ತು!—ಎಮಗೆ, ಸೋಲ್ತೊಡಂ ಗೆಲ್ದೊಡಂ,
ಸ್ವರ್ಗಂ ದಿಟಂ ಲಂಕೆ!—ಪೂಜ್ಯೆ ಸೀತಾದೇವಿ
ತಾನಿರ್ಪಳನ್ನೆಗಂ ಸ್ವರ್ಗಮೆ ದಿಟಂ ಲಂಕೆ!
ದಾನವರ ದುರ್ಗವೋ? ದೇವತಾ ಸ್ವರ್ಗವೋ?
ಏನಾನುಮಕ್ಕೆ! ಪೊಕ್ಕು ನೋಳ್ಪೆಂ!"
ತರಿಸಂದು
ಗಿರಿಯನಿಳಿದನು ಸಮೀರಾತ್ಮಜಂ. ರೋಷಕ್ಕೆ,
ಗಜ ಘಟಾ ಗೋಷ್ಠಿಯಂ ಪುಡುಕಿ, ಗರ್ಜನೆಯುಡುಗಿ,
ಭೀಷ್ಮದೃಢ ನಿಶ್ಚಯದ ಸಿಡಿಲುಸಿರ್ಮೋನದಿಂ
ಬೇಂಟೆಯಾಡುವ ಸಿಂಹಮಡವಿ ಪಳುವಂ ಸೀಳ್ದು
ನುಗ್ಗಿ ನಡೆವಂತೆ, ತಿಂಗಳ್ ಬೆಳಕಿನೊಳ್ ಮುಳುಗಿ
ನಿಂದ ನಾನಾ ಮಹಾ ತರುರಾಕ್ಷಸರ ಮಧ್ಯೆ
ಚರಿಸಿದನ್, ಕಿಡಿಸಿ ಮಿಗನಿದ್ದೆಯಂ. ಕಿಬ್ಬಿಯಂ
ದರಿ ಕಂದರಂಗಳಂ ದಾಂಟಿ ನೆಗೆದೇರ್ದಿಳಿದು
ಸಾಗಿರಲ್, ಮುಂದೆ ಮಲೆತುದು, ಸಿಡಿಲ ಪುರ್ಬುಗಳ್
ಗಂಟಿಕ್ಕಿದೋಲ್, ಕೋಂಟೆ ಹೊರವಳಯದಾ. ಬೃಹದ್
ಭಿತ್ತಿಯ ಮೊದಲ್ಗೆ ಸೇರ್ದದರ ಬಾನ್ಮೀಂಟಿರ್ದ
ಕೊತ್ತಳಂಗಳನೀಕ್ಷಿಸುತ್ತೆ ಸುಯ್ದನ್ ಮೆಚ್ಚುತಾ
ದೈತ್ಯ ಕೃತಿಯಂ: "ಪುಗುವೆನೆಂತಿದಂ?... ಈ ನನ್ನ
ಸಾಮಾನ್ಯರೂಪದಿಂ ನೆಗೆಯಲ್ಕುಮಸದಳಂ!...
ಪ್ರಾಕೃತಂ ಸೋಲ್ತ ಮೇಲಲ್ತೆ ಅಪ್ರಾಕೃತಕೆ
ಆಹ್ವಾನಂ!... ರಾವಣನ ಕರ್ಮಮಾರ್ಗಂ ತಗದು
ರಾಮಸತಿಯನ್ವೇಷಣೆಗೆ, ನನಗೆ. ಚೌರ್ಯದೊಲ್
ಬಟ್ಟೆಯಲ್ಲದ ಬಟ್ಟೆಗೊಲಿಯೆನ್ ಅಪಥ್ಯಮಂ:
ಬ್ರಹ್ಮಚರ್ಯಕೆ ಯೋಗ್ಯಮಸ್ತೇಯ ಪಥಮೆ ದಲ್!...
ಸುತ್ತಿ ನೋಳ್ಪೆನ್ ಪುರದ ಪೆರ್ಬಾಗಿಲಿರ್ಕೆಯಂ...
ಕಂಡರಾಯಿತು; ಕಾಣದಿರೆ, ಮುಂದೆ, ನಾಂ ಕಂಡಪೆನ್
ಕಾಣ್ಬುದನ್!"
ಇಂತೆನುತೆ ಮುಂಬರಿದನನುಸರಿಸುತಾ
ಸರ್ಪ ಖರ್ಪರ ದುರ್ಗಮಂ ದರ್ಪಗತಿಯಿಂದೆ.

ಯುಕ್ತಿನಾಸ್ತಿಕ್ಯಮಂ ಛೇದಿಸಲದಂ ಬಳಸಿ,
ಹೊಂಚಿ, ಪುಟ್ಟುವುಟ್ಟಂ ಬಿಡದೆ ಬೆಂಬತ್ತುವಾ
ದಿವ್ಯ ಸಂಶಯದ ಛಾಯಾ ಶಕುನ ಸಂಜ್ಞೆಯೋಲ್
ಪ್ರಾಣಜಂ ಪರಿವರಿಯೆ ಬಹುದೂರಮಂ, ಮಿಥ್ಯೆ ತಾಂ
ತನ್ನ ಪುಸಿ ಸಾಸದ ಬಿಸಿಲ್ದೊರೆಯ ಬೇಂಟೆಯಿಂ
ಬೇಸತ್ತು, ಬಾಯಾರಿ, ನೀರಳ್ಕೆಗಾರದೆಯೆ
ಬಾಯ್ಬಿಟ್ಟೊರಲ್ವಂತೆ, ಗೋಚರಿಸಿತಾ ಮುಂದೆ
ಲಂಕಾ ಪುರದ್ವಾರಮ್. ಸಾರ್ದನೆಳ್ಚರೊಳದಂ
ನಯಕೋವಿದಂ. ನಗರ ಕೋಲಾಹಲಂ, ಕೋಡಿ
ಪರಿವಂತೆ, ದೂರ ಭೋರ್ಗರೆದತ್ತು ಸುತುಮುಲಂ.
ಸಮೀಕ್ಷಿಸಿದನಾ ಸೂಕ್ಷ್ಮಮತಿ ರಾಕ್ಷಸಾಕೃತಿಯ
ಶಿಲ್ಪಕೃತಿಯಂ ಬೃಹದ್ದ್ವಾರದಾ. ಫಣಿಮುಖಂ
ತೆರೆದವೋಲ್ ಇರ್ದತ್ತು ಕೋಂಟೆವಾಯ್, ವಿದ್ಯಾತ್ಮಕಂ,
ಚಿತ್ರೋಗ್ರಮಾಗಿ. ರಕ್ಷಣಾ ರಾಹಿತ್ಯದಿಂ
ಸಂಶಯಾಸ್ಪದಮಾಗಿ ತೋರ್ದುದಾ ನಿರ್ಜನತೆ,
ಕೃತ್ರಿಮಕ್ಷೇಮ ಸಂವೇದಿ. ನೋಡುತಿರೆಯಿರೆ,
ನೋಳ್ಪನಿತರೊಳೆ, ನೋಟಕೌತಣವನೊಡರಿಸುತೆ
ಮರನೆತ್ತಿಯಂ ಮೀರ್ದುಮೇರ್ದು ಮೈದೋರ್ದುದಯ್
ಲೋಕಮಂ ಮೋಹದುಯ್ಯಲೆ ಸಿಸುವನೆಸಗುವಾ
ಆಹ್ಲಾದಕರ ಹಿಮಕರಜ್ಯೋತ್ಸ್ನೆ. ಪೇಳ್ವುದೇಂ?
ಶಶಿ ತೋರಿದುದೆ ತಡಂ, ವಜ್ರ ವೈಡೂರ್ಯಾದಿ
ಬಹು ವರ್ಣ ಬಹು ರತ್ನಖಚಿತ ಕೋಟಾಮುಖಂ
ಝುಗಝುಗಿಸಿದುದು ಕಿರಣಕೋಟಿಯಿಂ! ಮಾರುತಿಗೆ
ದಿಟ್ಟಿ ಕೋರೈಸಿದುದು; ತಲ್ಲಣಿಸಿದುದು ಬಗೆಯ
ಸಮತೆ; ಕಣ್ಣವೆ ಮುಚ್ಚಿದುದು ನಿಮಿಷಮಾತ್ರಮೆನೆ
ಬೆಚ್ಚಿ. ಬೆಳ್ಚಿದುದು ಕರ್ಸೆಳಲ್ ತರುಸಾಂದ್ರದಾ.
ಆಶ್ಚರ್ಯಕದ್ಭುತಕೆ ಬೆರಗುವಟ್ಟುಂ ಮೆಚ್ಚಿನಿಂ
ಶ್ಲಾಘಿಸುತೆ, ಪಜ್ಜೆ ಪಜ್ಜೆಯೊಳೆಚ್ಚರದಿ ಮುಂದೆ
ಪರಿದಾಂಜನೇಯಂಗೆ ಬಾಗಿಲಿಲ್ಲದ ಬರಿಯ
ತೆರಪಿನೊಲ್ ತೋರ್ದುದಾ ಕೋಂಟೆಬಾಯ್! ಬಳಿ ನಿಂದು,
ಮರಳಿ ಸುತ್ತುಂ ನೋಡಿ, ಕಾಣದಾರೊರ್ವರಂ,

ತಾನೆ ತನ್ನೊಳ್ ನುಡಿದನಿಂತು:
                    "ಸೋಜಿಗಮಲ್ತೆ!
ನಗರ ರಕ್ಷಾಮುಖಮೆ ಅರಕ್ಷಿತಂ! ನೂರ್ ಪಡೆಯ
ಪಗೆಗಿಂ ಮಿಗಿಲಗುರ್ವು ಈ ನಿರ್ಜನತೆ ದಿಟಂ!
ಅತಿ ಭಯಂಕರತರಂ ಮೇಣಪಾಯ ಬಹುಳಂ
ಅಹಿತದೇಶದೀ ಅಸ್ಪಷ್ಟತೆ! ಅಮರ್ತ್ಯ ಭೂ,
ಸುಲಭಮಲ್ತೀ ಲಂಕೆ. . . ದಾಶರಥಿಗೊಳ್ಪಕ್ಕೆ!...
ಜನಕಜೆಯನಾಂ ಕಂಡೆ ಪಿಂತಿರುಗಿದೊಡಮೆಂತು
ನಮ್ಮ ಕಜ್ಜಕೆ ಗೆಲವೊ ನಾನರಿಯೆ!... ಆ ಮಹಾ
ಮುನ್ನೀರಗಳ್ತೆಯಂ ನೆಗೆವರೆನಿತಿಹರೆಮ್ಮ
ಕಿಷ್ಕಿಂಧೆಯೊಳ್? ದುರ್ಗಮೀ ದೈತ್ಯ ಲಂಕೆಯಂ
ಭೇದಿಪ ಸಮರ್ಥರವರೊಳೆನಿಬರ್? ಅಗ್ನಿಜಂ
ನೀಲನೊರ್ವಂ; ವಾಲಿಯ ತನೂಭವಂ ಮಹಾ
ತೇಜಶ್ಶಾಲಿ ತಾನೊರ್ವನಂಗದಂ; ಮೇಣ್ ನೃಪಂ
ಸುಗ್ರೀವನದಟರದಟಂ, ರಿಪು ಭಯಂಕರಂ;
ಮೇಣೊರ್ವನಾಂ: ನಾಲ್ವರಲ್ಲದಿನ್ನುಳಿದರ್ಗೆ
ದುರ್ಲಂಘ್ಯಮೆ ವಲಂ ಮಹಾವಾರ್ಧಿ. ಅದಂತಿರ್ಕೆ,
ಕಡಲನೆಂತಾದೊಡಂ ದಾಂಟಿ ಬಂದೊಡಮೆಂತೊ
ಪುಗುವುದೀ ದೈತ್ಯವಿದ್ಯಾರಚಿತ ದುರ್ಗಮಂ?
ಸುಯತ್ನಸಾಧ್ಯಂ ಕುಮುದ ವೀರಂಗೆ; ಮೇಣಂತೆ
ವಾನರೇಂದ್ರಂ ಸುಷೇಣಂ ಮಂತ್ರಸಾಮರ್ಥಿ;
ಮೈಂದಂ ಮಹಾಪ್ರತಿಭನಪ್ಪೊಡಪ್ಪುದಾತಂಗೆ;
ಋಕ್ಷ ಕುಶಪರ್ವರ್ಗೆ ಮೇಣ್ ಕೇತುಮಾಲಂಗೆ
ದುಸ್ಸಾಧ್ಯಮಲ್ತು... ಚಿಃ! ಏಂ ಗಳಪುತಿರ್ಪೆನಾಂ!...
ಮಹತ್ಕಾರ್ಯಮದೆ ಮಹಾಶಕ್ತಿದಾಯಕಮಾಗೆ
ವಾನರರೊಳಲ್ಪರುಂ ಕಲ್ಪನೆ ಬೆದರ್ಪವೋಲ್
ಬಲ್ಗೆಯ್ಮೆಗೆಯ್ಯರೇಂ? ರಾಮಸೀತೆಯರುಸಿರ
ಬೇನೆವೆಂಕೆಯ ಕುಲುಮೆಯೊಳ್ ಪುಡಿಯೆ ತಾಂ ಕಿಡಿಯಾಗಿ,
ಪೇಳ್, ಪ್ರಲಯಗೈಯದೆ ಲಂಕೆಯನಧರ್ಮಶಿಥಿಲಮಂ!"
    ಇಂತೆನುತೆ ಸಾಗಿದನ್, ಪಜ್ಜೆವಜ್ಜೆಗೆ ನಿಂದು,
ಕಣ್ಣಾಗಿ ಕಿವಿಯಾಗಿ ನೋಡುತಾಲಿಸಿ, ಮುಂದು
ಮುಂದಕ್ಕೆ. ಬಳಿಸಾರೆ, ಬೀಸಿದಂತಾಮುದಯ್

ತಿರಿಗಾಳಿ, ಕಪಟಯಂತ್ರೋಚ್ಛ್ವಸಿತಮೆಂಬಂತೆ.
ಬಗೆಗೆ ಸಂಶಯವಿರ್ದೊಡಂ, ಕಣ್ಗೆ ತೋರುತಿರೆ
ನಿರಪಾಯಮೆಡೆಯ ಬಾಗಿಲ್ವಾಡಮಂ ದಾಂಟಿ
ಕಾಲಿಟ್ಟನಯ್ಯೊ! ಕಾಲಿಟ್ಟುದೆ ತಡಂ, ಕವಣೆ ತಾಂ
ಕಲ್ಲಂ ಸಿಡಿಯುವಂತೆ, ಸಿಡಿದುದನಿಲಾತ್ಮಜನ
ಪೇರೊಡಲನೊಂದು ಬಿಲ್ಲೆಸೆಯ ದೂರಾಂತರಕೆ, ಕೇಳ್,
ಬಾಗಿಲಿನ ಕೀಲಣೆಯ ಬಲ್ಮೆ! ಕಲ್ಬಂಡೆಯಂ
ನುಚ್ಚುಗೈವಾ ಪೊಡೆತಕಿನಿತು ಬೆಕ್ಕಸವಡುತೆ
ನೆಗೆದು ನಿಂದನ್ ಮತ್ತೆ ಮರುತಾತ್ಮಜಂ, ತುಡುಕಿ
ರಾಮ ಮುದ್ರಿಕೆಯಿರ್ದ ತನ್ನ ವಕ್ಷದ ವಜ್ರ
ದೇಶಮಂ. "ದಿಟಮಿದು ಅಮರ್ತ್ಯಭೂ, ಈ ಲಂಕೆ,
ದಶಕಂಠ ಪಾಲಿತಂ! ಸಲ್ಲದಿಲ್ಲಿಗೆ ನನ್ನ ಈ
ಸಾಧಾರಣತೆ!" ಎನುತ್ತೌಡುಗಚ್ಚಿರೆ ದೃಢತೆ,
ಯೌಗಿಕ ಪರಾಕ್ರಮಕೆ ತನ್ನಾತ್ಮ ಶಕ್ತಿಯಂ
ಆಹ್ವಾನಿಸುತೆ, ಮತ್ತೆ ಮುಂಬರಿದನಯ್ ವಜ್ರಮಯ
ವಪುವಾಗಿ. ಮುಂಬರಿದು, ಮೇರುಗಿರಿ ಭಾರದಿಂ
ಪೊಕ್ಕೊಡಾ ದ್ವಾರಯಂತ್ರದ ಶಕ್ತಿ ಸತ್ತುದಯ್:
ತಿರುಗುಗೆಟ್ಟುದು ಚಕ್ರಮದರ ಪಲ್ ಮುರಿಮುರಿದು
ಕೆದರೆ! ಹಾ, ಮತ್ತಮೇನದು ಮುಂದೆ ವಿಗ್ರಹಂ?
ಮೊದಲಿಲ್ಲದುದು ತೆಕ್ಕನೈತಂದುದಾ ಕೃತಿಯೆ
ಈ ಕೃತಿಗೆ ಕಾರಣಮೆನಲ್!
ಚಿನ್ನದುಡೆಯೆಸೆವ ಮೆಯ್
ರಾರಾಜಿಸಿತು ಜೊನ್ನವೆಳಗಿನೊಳ್. ಮಿರುಗಿದುದು
ಮುಡಿಯೊಳುಜ್ವಲ ಕಿರೀಟಂ. ಪೆಗಲಿಂದೆ ಸೋರ್ದು
ಸೊಗಸಿದುದು ಕೇಶದ ಪೊನಲ್‌ಕರ್ಪು. ರಾಣಿಯಂ
ಸಾರುತಿರ್ದಾ ಮೊಗದ ಗಂಭೀರ ದರ್ಪಕ್ಕೆ
ದೇವತ್ವಮಂ ನೀಡಿದಕ್ಷಿಗಳಮರ ಕಾಂತಿ
ವಿಗ್ರಹದ ಜೀವತ್ವಮಂ ಸಾರ್ದುದಂಜನಾ
ಸುತಗೆ. ಬಹುಭುಜಗಳಾಯುಧ ಪಾಣಿಯಂ, ದಿವ್ಯ
ರತ್ನಾಭರಣ ಪುಷ್ಪಹಾರ ಸಂಶೋಭಿಯಂ,
ಶಶಿಧೌತೆಯಾಗಿಯುಂ ನೆಳಲಿಲ್ಲದಿರ್ದಳಂ,

ಕಮನೀಯ ಭೀಷ್ಮತಾ ಭಗವತಿಯವೋಲಂತೆ
ಭವ್ಯೋನ್ನತಾಕಾರೆಯಂ ಜಗತ್ ಪ್ರಾಣಜಂ
ದಿಟ್ಟತನದಿಂ ದಿಟ್ಟಿನಟ್ಟು ನೋಡುತಿರಲಾ
ಮಹಿಳಾ ಮಹನ್‌ಮೂರ್ತಿ ನುಡಿದುದಿಂತೆಂದು, ನಿಶೆ
ಗೌರವಕೆ ನಿಶ್ಶಬ್ದಮಪ್ಪಂತೆವೋಲ್:
"ದಿಟಂ, ದಿಟಂ
ನೀಂ ಮಹಾಸತ್ತ್ವನಹುದಯ್. ಕಾಣೆನಿನ್ನೆಗಂ
ಈ ದ್ವಾರಯಂತ್ರಮಂ ಮುರಿದ ಮೆಯ್ಗಲಿಗಳಂ.
ಕೇಳಾದೊಡಂ ರಾವಣಪ್ರಜೆಗಳಲ್ಲದೆಯೆ
ಅನ್ಯರಾರ್ಗಂ ಲಂಕೆಯಂ ಪುಗಲ್ಕಸದಳಂ
ಜೀವ ಸಹಿತಂ. ಆರ್ ನೀಮ್, ಅಪರಿಚಿತ ವೇಷಿ?"
ಧ್ವನಿಗೌರವಕೆ ಮಣಿದೊಡಂ ಮಾತಿನರ್ಥಕ್ಕೆ
ಮಲೆತು ನಿಂತುದು ಮಾರುತಿಯ ಧೃತಿಯ ಮರ್ಯಾದೆ.
ಮಾರ್ನುಡಿದನಿಂತು:
"ಇನ್ನೇನಾನುಮಕ್ಕೆ ನಾಂ,
ರಾವಣಪ್ರಜೆಯಲ್ತು!"
ಮುಳಿಸು ಮೊಗಕೇರ್ದೊಡಂ
ಕೊಂಕುನಗೆ ಬಿಂಕದಿಂದಿಂತು ಲಂಕಾ ದೇವಿ
ನುಡಿಯಿಟಿಯಿಂದಿರಿದಳಾಂಜನೇಯನ ಜಾಣ್ಮೆ
ಬಿಕ್ಕಳಿಸೆ: "ಓವೊ ಪೆಸರಿಲ್ಲದಿರ್ಪೊರ್ವನೇಂ
ಪರದೇಶಿ ನೀಂ?"
ನಕ್ಕು, ನಗೆಯಿಂ ತಿರಸ್ಕರಿಸಿ,
ವಾಕ್ಕೋವಿದಂ: "ಇರ್ಕೆ. ನಾನಾರೆಂಬುದಕ್ಕೆ
ನಿನಗಿನಿತರೊಳೆ ಸಕ್ಕಿ ದೊರೆಕೊಳ್ವುದೌ. ಮೊದಲ್
ಪೇಳ್ದು ದಯೆಗೆಯ್ವೆಯೇಂ ಪರದೇಶಿಯಲ್ಲದಾ
ನಿನ್ನ ಪೆಸರಾಂತ ಪೆಸರಂ? ಕೇಳಲಾನದಂ,
ಪರದೇಶಮಂ ಪರ್ವಿ ನಿನ್ನ ಕೀರ್ತಿಯುಮೆನಗೆ
ಹೊಯ್‌ಕಯ್ಯಾಗಿ ಪರದೇಶಿಯಪ್ಪುದಾ ಶ್ರೀಯೆ
ದೈತ್ಯದಾಸ್ಯದ ನಿನ್ನ ದಾರಿದ್ರ್ಯಮಂ ನೀಗಿ
ನಿನಗೀವುದಮೃತ ದೇವತ್ವಮಂ."
"ಕಾಡುಡೆಯ
ಕಪಿವೇಷಿ ನೀನಾಗಿಯುಂ, ಮಿಕ್ಕಿ ಗಳಪುವಯ್

ಸೊರ್ಕುನುಡಿಯಂ? ನೀನಾರೊಡನೆ ನುಡಿವೆಯೆಂಬುದಂ
ತಿಳಿಯೊಃ ದಶಶಿರ ಕನಕಲಕ್ಷ್ಮಿ, ಲಂಕಾದೇವಿ,
ಲಂಕಿಣಿಯೆನಾಂ! ನಾನೆ ಲಂಕೆಯೆಂದರಿ! ನನ್ನ
ರಕ್ಷೆಯಿೀ ದುರ್ಗಮಂ ಪುಗುವ ಮುನ್ನಂ ದಿಟಂ
ಪುಗುವೆ ನೀಂ ಸ್ವರ್ಗಮಂ!''
                    ದೂರ ಸಾಗರ ಯಾತ್ರಿ,
ಗಿರಿ ತರಂಗಿಣಿ, ತನಗೆಡರ್ವಂದ ಬೆಟ್ಟಮಂ
ಕೊರೆವ ಸಾಸವನುಳಿದು ಬಳಸಿಪೋಪಂದದಿಂ,
ತನ್ನ ಮುಂದಿರ್ದ ಆ ಅಲಘುಬಲಧೀರೆಯಂ
ದೇವತಾಕಾರೆಯಂ ಕೆರಳಿಸದೆ ಕಜ್ಜಮಂ
ಕಯ್ಗೂಡಿಸುವೆನೆಂದೆಳಸಿ ಪವನಸೂನುಃ ''ಹೇ
ಭದ್ರೆ, ಕೆಮ್ಮನೆಯೇಕೆ ಮುನಿವೆಯೌ? ಪರದೇಶಿ,
ಕಪಿವೇಷಿ, ನೀನೆಂದವೋಲಾಂ ಅನಾಗರಿಕ
ವನಚರಂ. ಸರ್ವಕಲೆಗಾಗರಂ, ಸಂಪದಕೆ
ಸಾಗರಂ, ಭೋಗಕ್ಕೆ ತವರು, ನೆಲದರಿಕೆಯೀ
ಲಂಕೆಯೆಂಬುದ ಕೇಳ್ದು, ಕಣ್ಗಳ ಕುತೂಹಲಕೆ
ತಣಿಯೆರೆಯಲೈತಂದೆನಾಂ. ಅರಣ್ಯಚಾರಿಯಂ,
ಮನದಣಿಯೆ ನಗರ ಶೋಭೆಯ ನೋಡಿ ಪಿನ್ನಡೆವನಂ,
ಗ್ರಾಮೀಣನಂ ಕೊಲ್ವುದೇಂ ಬಲ್ಮೆ? ಮೇಣಂತೆ
ತಡೆವುದೇಂ ಜಾಣ್ಮೆ? ನನ್ನನ್ನರಿಂದೀ ಮಹಾ
ದೈತ್ಯ ದುರ್ಗಕೆ ಕೇಡೆ? ನಗೆವಾತದಂ ಬಿಟ್ಟು
ಕಳೆ! ಬೇಡುತಿಹೆನೆನಗೆ ದಶಶಿರನ ವೈಭವದ
ದರ್ಶನವನಿತ್ತು ಕೃಪೆಗೆಯ್!''
                    ''ಸಾಲ್ಗುಮೀ ಕಿತವ
ಸೌಜನ್ಯಮೆಲವೋ ವನಾಲಯಾ! ನಿನ್ನ ದನಿ,
ನಿನ್ನ ಕಣ್, ನಿನ್ನ ವದನದ ವೀರತೇಜಂ ಮೇಣ್
ನಿನ್ನ ಈ ಸಿಂಹಸಮ ತನುಶೈಲಿಯುಂ ಮೇಣ್ ನಿನ್ನ
ನಿಂದ ನಿಲವಿನ ಭಂಗಿ, ತಾಮೊಂದೊಂದುಮುಂ ನಿನ್ನ
ಗ್ರಾಮೀಣತೆಗೆ ಘೋಷಿಸಿವೆ ಪ್ರತಿಸಾಕ್ಷಿಯಂ! ಕಪಟಿ,
ಧೂರ್ತಲಕ್ಷಣ ವಿನಯ ಸಂಪನ್ನ, ಬಂದತ್ತಣ್ಗೆ
ಸಾರ್! ಪಜ್ಜೆಯೊಂದಂ ಮುಂದಕಿಕ್ಕೆ, ಮಲಗುವಯ್

ನಿರ್ಜೀವಿ ನೀಂ!''
ಎನ್ನುತ್ತಾರ್ಭಟಿಸುತಾ ಲಂಕೆ,
ಬಹು ಭುಜದ ದೇವಿ, ತನ್ನೊಂದು ಹಸ್ತದೊಳಿರ್ದ
ಮಹಾತ್ರಿಶೂಲವನೆತ್ತಿ ಹನುಮ ವಕ್ಷಕೆ ಮೋಹಿ
ಗುರಿವೀಸಿದಳ್! ನೆಗೆದು ತೆಕ್ಕನೆ ಪೆಡಂಮೆಟ್ಟಿ
ತಪ್ಪಿದನಲಾ ಲಂಘನಕ್ಷಮಂ! ಕಂಡದನ್
ವ್ಯಂಗ್ಯ ವಚನದೊಳಿರಿದಳಿಂತು ಲಂಕಾಲಕ್ಷ್ಮಿ:
''ಕೆಚ್ಚಿಗೆ ಮಿಗಿಲ್ ನಿನ್ನೊಳೆಚ್ಚರಿಕೆಯಿರ್ಪುದು ಕಣಾ!''
''ಸಂಸ್ಕೃತಿಗೆ ಮೀರಿರ್ಪ ನಿನ್ನ ಈ ನಾಗರಿಕತಾ
ಬರ್ಬರತೆಯೋಲ್!'' ಎನುತೆ ಮುಂಬರಿದನಯ್ ಮರಳಿ
ಕೆರಳಿ. ಛಾಯಾ ಸಹಿತ ಶೈಲೋಪಮಂ ಆ ವೈರಿ
ವಜ್ರಭ್ರುಕುಟಿದೃಷ್ಟಿಯಿಂ ವಜ್ರಮುಷ್ಟಿಯಿಂ
ಮೇಲ್ವಾಯ್ವುದಂ ಕಂಡು, ಕಾಮರೂಪಿಣಿ ಲಂಕೆ ತಾಂ
ರೋಷಭೀಷಣೆಯಾಗಿ ಮೃತ್ಯುಬಾಹುಗ್ರಸ್ತಮಂ
ಶೂಲರಾಹುವನೆತ್ತಿ, ಕೇಳ್, ಇಡುವ ಮುನ್ನಮೆ ಅದಂ
ಚಿಮ್ಮಿ ಲಂಘಿಸಿ ತುಡುಕಿ ಪಿಡಿದನೊರ್ಕಯ್ಯ ಕಲಿ,
ಕಾಡುಕೋಣನ ತಿವಿವ ಕೋಡಂ ನಖಾಗ್ರದಿಂ
ತುಡುಕಿ ಜಡಿದಪ್ಪಳಿಸಿ ಗೋಣಂ ಮುರಿವ ಪುಲಿಯ
ಓಲಂತೆ: ಶೂಲಮಳ್ಳಾಡದಂತಾಯ್ತಲಾ
ದೈತ್ಯಲಂಕಾದೇವತಾ ಕರದಿ! ನೂಂಕಿದಳ್;
ಸೆಳೆದಳ್; ನಿಮಿರ್ಚಿದಳ್; ಕುತ್ತಿದಳ್; ಕುಲುಕಿದಳ್;
ಮಿಡುಕಲಿಡೆಗೊಡಲಿಲ್ಲಮನಿಲಜನ ಕಪಿಮುಷ್ಟಿಯಾ
ವಜ್ರಲೇಪಂ! ಕಯ್ಯನಿನ್ನೊಂದನೆತ್ತಲುಂ
ಸಾಲ್ದುದಿಲ್ಲಾಯ್ತಲಾ ಶಕ್ತಿ! ಲಂಕೆಗೆ ಶಂಕೆ
ಸಂಚರಿಸಿತೊಳಸೋರಿದಳ್ ನಡುಗಿ ಕೇಡಿಂಗೆ
ರಾಕ್ಷಸ ಕುಲಕ್ಕೆ. ನೆನೆವನಿತರೊಳೆ, ಆ ಮಹಾ
ಶೂಲದುರ್ಕಿನ ಭೀಮಗಾತ್ರಂ, ಸಮೀರಜನ
ಮುಷ್ಟಿದಂಷ್ಟ್ರದ ತಿರುಪಿನುಗ್ರತೆಗೆ, ನೀರವಂ
ಕೊಂಕಿದುದೊ; ಡೊಂಕುತೆ ಮುರುಂಟಿದುದೊ! ಕರಿಕರಕೆ
ಕಳಲೆ ಮುರಿವಂತೆ ತುಂಡುರುಳುತಿರ್ದುದೊ ಏನೊ?
ಅನಿತರೊಳ್ ಸೊರ್ಕುಡುಗಿ ಕರೆದೊರಲಿದಳೊ ಲಂಕೆ,

ತೋಳ್ ತಿರುಪಲಳುವೆಳೆಯಣುಗಿಯಂತೆ:
"ತಪ್ಪಿದೆನ್, ನಿಲ್
ನಿಲ್, ಮಹಾವೀರ, ನಿಲ್! ಸೋಲೊಪ್ಪಿದೆನ್! ನಿನಗೆ
ವಶಳಾದೆನಿದೊ! ಮುರಿಯದಿರೊ ಶೂಲಮನ್, ಮುಂದೆ
ನಿನ್ನರ್ಗೆ ಧರ್ಮಾನುಕೂಲಮನ್!"
ಪಿಡಿಪುಳಿದು
ಮಾತಾಡಿದನ್: "ಭದ್ರೆ, ಪೆಣ್ ನಿನಗೆ ನೋವಾಯ್ತು.
ಮನ್ನಿಸೆನ್ನೊರಟುತನಮಂ. ಬೇರೆ ಬಟ್ಟೆಯಂ
ಕಾಣದಿಂತೆಸಗಿದೆನ್."
"ನಿನ್ನ ನುಡಿನುಣ್ಪಿಂಗೆ,
ನಿನ್ನ ನಯವರ್ತನೆಗೆ, ನಾಣ್ಚುತಿಹೆನಾಂ. ಆರೊ
ನೀಂ ಮಹಾತ್ಮನೆ ದಲ್! ಪರಾಕ್ರಮದೊಳಿನ್ನೆಗಂ
ಈ ಶೂಲಮಂ ತಾಗಿ ಬರ್ದುಕಿದರಿಲ್ಲ. ನಿನ್ನ
ಬಲ್ಮೆಯುಂ ಜಳ್ಳಾಗುತಿರ್ದುದೆಂಬುದರಲ್ಲಿ
ಶಂಕೆಯೆನಗಿನಿತಿಲ್ಲ. ನನ್ನ ಕೈಯಿೀ ಮಹಾ
ಶೂಲದುರ್ಕಿಗೆ ಸಾಣೆ ದಲ್ ಧರ್ಮಮಯ್. ಇಂದೇಕೊ
ಧರ್ಮದ ಹದಂಗೆಟ್ಟು ಕುಂದಿದೋಲಿದೆ ಶಕ್ತಿ.
ಅಂತಲ್ಲದಿರಲಿದಂ ಬಳುಕಿಸುವರಂ ಕಾಣೆನಾಂ
ಮೂಲೋಕದೊಳ್! ಪರಿಚಯವನುಸಿರ್. ನೀನಾರ್,
ಮಹಾತ್ಮಾ?"
ಸೂತ್ರಮಾರ್ಗದೊಳೊರೆದನಾಂಜನೇಯಂ
ಕಿರಿದುಬೇಗದಿ ತನ್ನ ಪರಿಚಯವನಂತೆ ತಾಂ
ಕೈಕೊಳುತ್ತೆಯ್ತಂದ ಕಾರ್ಯದ ಗುರುತ್ವಮಂ.
ಆಲಿಸುತ್ತಾಲಿಸುತೆ ದೇವಿ ಸುಯ್ದಳ್ ಲಂಕೆ
ಬೆಂಕೆನೋವಿಂ. ಕಣ್ಗೆ ತುಳ್ಕಿ ಸಂಕಟದಶ್ರು
ಜೊನ್ನವೆಳಗಂ ಮಿರುಗಿ ಪರಿದುವು ಕಪೋಲಮಂ
ತೊಯ್ದು. ದೇವತಾದುಃಖಕನುಕಂಪಿಸುತೆ ಆ
ಸಮೀರಾತ್ಮಜಂ ಮತ್ತೆ: "ನಿನ್ನ ಸೋಲ್ಗಳಲದಿರ್,
ದೇವಿ. ರಾವಣ ಪಕ್ಷದೊಳಗಿರ್ದೊಡೆನಗುಮಾ
ಗತಿಯೆ ದಲ್!"
"ಅಯ್ಯೊ, ನೀನೆಂತರಿವೆಯಯ್ ನನ್ನ

ಗೋಳಾಳಮಂ? ನನ್ನವಳಿಯಳಲ್ ಅತ್ತಲುಮ್
ಇತ್ತಲುಮ್ ಕತ್ತರಿಪುದಿರ್ಬಾಯ ಖಡ್ಗದೋಲ್.
ನಿನ್ನಿರಿತಕಿಂ ಮಿಗಿಲ್ ನಿನ್ನ ಸಂತೈಕೆಯಿಂ
ಬೇಯುತಿಹುದೆನ್ನುಸಿರ್. ಒರ್ಕಡೆಗೆ ನಿನ್ನಳಲ್;
ನನ್ನದಿರ್ಕಡೆಗೆ. ಸೀತಾನ್ವೇಷಣಂ ನಿನಗೆ;
ನನಗದಂ ಕೂಡಿ, ಲಂಕಾಕ್ಷೇಮ ಚಿಂತನಂ.
ನಿನಗೆ ಸೀತಾ ರಾಮ ಸಂಘಟನ ಚಿಂತನಂ;
ನನಗದಂ ಬೆರಸು, ಲಂಕೇಶನಾತ್ಮೋದ್ಧಾರ
ಚಿಂತನಂ. . .ಇರ್ಕೆ; ಬಿದಿಮಾಳ್ಕೆಯೊಳ್ಳಿತಕ್ಕುಂ;
ಎಂತಾದೊಡಂ!. . .ತ್ರಿಕೂಟಾಚಲವನೊಲಿದಪ್ಪಿ,
ರತ್ನಮೇಖಲೆಯವೋಲ್ ಕಯ್ಗಯ್ದದಂ ಸುತ್ತಿ,
ಸಗ್ಗದಾಣ್ಮನ ಕರುಬಿಗಂಜಿಕೆಯನೊಡ್ಡಿರುವ
ಪತ್ತನಮಿದಂ, ನನ್ನ ನೈಜತನುರೂಪಿಯಂ,
ಪುಗು ನೀಂ, ಮಹಾಬಾಹು, ಪಾಪಿಯೆರ್ದೆಯಂ ಪುಗುವ
ಕ್ಲೇಶರೂಪಿ ಭಗವತ್ ಕೃಪೆಯವೋಲ್. ಬಲ್ಲೆನಾಂ,
ನೀಂ ಸಮರ್ಥನೆ ವಲಂ. ಮುನಿದರೀ ಲಂಕೆಯಂ
ಸುಟ್ಟುರುಹಿ ಕಡಲೊಳಳ್ದುವ ಬಲ್ಮೆ ನಿನ್ನೊಳಿಹುದಯ್.
ಬೇಡಿದಪೆನದರಿಂದೆ: ತಾನೆನಿತು ಕೆರಳುವ ಕತಂ
ನಿನಗೊದಗಿದೊಡಮೆನಗೆ ಕೇಡೆಸಗದಿರ್, ಪೂಜ್ಯ.
ಕಲೆಯ ಬಲೆ, ಚೆಲ್ವು ನೆಲೆ ಈ ಲಂಕೆ;—ಪಾಪದಿಂ,
ಪ್ರಾಚೀನ ಶಾಪದಿಂ, ಮೇಣ್ ಧರ್ಮಕೋಪದಿಂ
ವಿಘ್ನಕೀಡಾಗುವುದನರಿತಳೆಂ: ಈ ನನ್ನ
ಕಾಲ ಶೂಲೋಪಮಂ ಕಾಲಾಯಸಾಯುಧಂ
ಕೊಂಕಿದುದೆ ದಲ್ ತೋರ್ವೆರಲ್! ತೆರಳ್, ನಿನಗಕ್ಕೆ ಗೆಲ್!"

ನೋಡುತಿರ್ದಂತೆ ಛಾಯಾರಹಿತೆಗುದಿಸಿತಯ್
ಛಾಯೆ: ಲಂಕಾಲಕ್ಷ್ಮಿ ಪೊರ್ದುತೆ ಜಡತ್ವಮಂ
ಪ್ರತಿಮೆಯಾದಳೊ ಮರಳಿ. ನಕ್ತಂಚರ ಶ್ರೀಗೆ
ಪೇಸುತೆ ವಿಮುಖಿಯಾದವೋಲ್. ಜಾವವೊಳ್ತಂ ಜಾರಿ
ಸಾಗಿರ್ದುದಾಗಳೆಯೆ ಮಾಗಿಯ ಇರುಳ್. ಬಾನ್ಗೇರ್ದು
ಜೇನ್‌ಸೋನೆ ಜೊನ್ನಮಂ ಪಾಲ್‌ಸೂಸುತಿರ್ದುದಾ
ಸೊನ್ನೆದಿಂಗಳ್. ದಾಂಟುತಾ ಕೋಂಟೆ ಪೆರ್ಬಾಗಿಲಂ,

ಲಂಕೆಯಂ ಪೊಕ್ಕೊಂದು ಬಿಂಕದ ಪೆರ್ಮೆಯಿಂ ಪೊಂಗಿ
ದಿಟ್ಟಿಸಿದನೋರೆಯಂ, ಮೂರ್‌ತಲೆಯ ಪೆರ್‌ಮಲೆಯ
ತೆಂಗು ಕೌಂಗಿನ ತೋಂಟಮಂ ಪೊದೆದ ಪತ್ತನದ
ಝುರ ಸರೋವರ ಸಾನು ಕಂದರದ ಸುಂದರದ
ವನಸೀಮೆಯುದ್ಯಾನಮಂ. "ಮಾಯೆಗೆ ತವರ್ ಕಣಾ,
ದಿಟಮಿದು ಅಮರ್ತ್ಯ ಭೂ! ಸಾನಗೋಚರನಾಗಿ
ಯೋಗದಿಂ ಸಾಗುವುದೆ ಲೇಸಿಲ್ಲಿ ದಲ್!" ತರಿಸಂದು
ನಿಂದಿರಲ್, ಬೆಳ್ದಿಂಗಳೊಳ್ ನೆಲದೊಳಚ್ಚಿರ್ದ
ಕಪಿಕುಲೇಂದ್ರನ ಮಹಾವಾನರನ ಮೆಯ್‌ನೆಳಲ್, ಕೇಳ್,
ಸ್ವಲ್ಪಮಾತ್ರಂ ಕರ್ಪುಗೆಟ್ಟು ನಸುಬಿಳ್ಚಿದುದು,
ಕಾಂತಿಯೊಂದಕೆ ಪುಟ್ಟಿದಾ ಛಾಯೆಯಿನ್ನೊಂದು
ಕೀಳ್ಪೆಳಗಿಗಿನಿತೆ ಬೆಳ್ಪೇರ್ವವೋಲ್. ನೋಡುತಿರೆ,
ಸಾಂದ್ರತೆಯನುಳಿದ ಜಡತೆಯದೆಂತು ಚಂದ್ರಿಕೆಗೆ
ಜಾಳಂದ್ರಮಾದಪ್ಪುದಂತೆಯೆ ತನುಚ್ಛಾಯೆ ತಾಂ
ಪಳುಕುಗಾಜಿನ ನೆಳಲವೋಲಾಯ್ತು. ಮತ್ತಮಾ
ನೆಳಲುಮೊಯ್ಯನೆ, ಜೊನ್ನಮಂ ಜೇಡಿ ಬಳಿದರೆನೆ,
ಶೂನ್ಯಮಾದತ್ತು ನಯನೇಂದ್ರಿಯಕೆ ನಿರ್ವಾಣ
ನಿರ್ವಸ್ತುವಾಗಿ! ಪವನತೆಯಾಂತ ಪವನಜಂ
ಯೋಗತನುವಿಂದಗೋಚರನಾಗಿ, ಮೆಯ್‌ನೆಳಲ್
ಕಾಣದಾದುದೆ ತನ್ನ ಕಾಣೆಲ್ಲಮೆಗೆ ಕುರುಹಾಗೆ,
ತಲೆಯೆತ್ತಿ ಕಂಡನಾಕಾಶಮಂ. ತುಂಬು ಪೆರೆ
ತೇಲಿರ್ದುದಂಚೆದುಪ್ಪುಳ್ ಮುಗಿಲನೊಲ್ಲದೆ,
ದಿಗಂಬರನವೋಲ್. ದೂರದೂರಮೆಸೆದುವು ತಾರೆ:
ಕೃತ್ತಿಕಾ ರೋಹಿಣಿಯರನುಗಾಮಿ ಮೃಗಶಿರಕೆ
ಹೊಂಚುತಿರ್ದುದು ಮೃಗವ್ಯಾಧ ಬಾಣೋಜ್ವಲ
ಗಭಸ್ತಿ. "ಬೆಳ್ದಿಂಗಳುಂ ನೆರಮೆಸೆಗೆ. ದೇವಿಯಂ
ಪುಡುಕಿದಪೆನೀ ಲಂಕೆಯಂ ಗೋರಿವೇಂಟೆಯೊಲ್
ಸೋಸುವೆನ್!" ನಿಚ್ಚಯ್ಸಿ, ಕೇಳ್, ಗಿರಿಪಥವನೇರ್ದನಾ
ಸುಗ್ರೀವನಾಜ್ಞಾ ದೃಢಪ್ರತಿಜ್ಞಾವೇಶಕಲಿ,
ಕರ್ಮಕೌಶಲಿ, ಯೋಗಿ ಮೇಣ್ ಕ್ಷಿಪ್ರಕ್ರಿಯಾಕಾಂಕ್ಷಿ,
ರಾಕ್ಷಸ ಧರಾ ವಕ್ಷಮಂ ತೊತ್ತಳದುಳಿವವೋಲ್!

## ಸಂಚಿಕೆ ೧

# ಕನಕಲಂಕಾನ್ವೇಷಣಂ

ಶ್ರೀಗುರು ಕೃಪೆಯನಾಂತ ಸಾಧಕವರೇಣ್ಯನ
ಮನೋಮಯಂ ಪ್ರಾಣಮಯಮಂ ಪ್ರವೇಶಿಸುತಲ್ಲಿ
ಊರ್ಧ್ವಗಮ ವಾಸನಾ ಸ್ನೇಹಕ್ಕೆ ಬೆಂಬಲಂ
ನಿಂದು, ದೈವೀವಿರುದ್ಧಂ ತಮಃಪ್ರವೃತ್ತಿಯಂ
ನಿಗ್ರಹಿಸಿ, ತನ್ನಭೀಪ್ಸಾದೂತನಂ ಮೃಣ್ಮಯದ
ಜಡಕೆ ಸಂವಾದಿಯಾಗಿರ್ಪ ಸುಪ್ತಚಿತ್ತದ
ಗುಪ್ತತಿಮಿರದ ಸೆರೆಯ ಚೈತ್ಯಸಂಪ್ರಜ್ಞೆಯಂ
ಪುಡುಕಿ ಕಂಡೈತರಲ್ ಕಳುಹುವಧ್ಯಾತ್ಮದೋಲ್
ಶ್ರೀರಾಮನಟ್ಟಿದಾ ಸುಗ್ರೀವ ದೂತೋತ್ತಮಂ
ಪೊಕ್ಕನೈಸಲೆ ಲಂಕೆಯಂ! ದರ್ಶನಂದೋರೆಮಗೆ,
ಓ ವಾಙ್ಮಯಿಯೆ, ನಿತ್ಯಸತ್ಯಂ ನಿಕ್ವಣಿಸುವೋಲ್
ವಚಸ್‌ತಂತ್ರಿ ಕವಿಯ ಚಿದ್ಯಂತ್ರಸಮ ಹೃದ್ವೀಣೆಯಿಂ!
ಏರಿ ಕವಿಕಲ್ಪನಾ ಸುರಧನುರ್ಯಾನಮಂ,
ಸಚ್ಚಿದಾನಂದಮಂ ಸಾಧಿಸೆ, ಋಷಿಪ್ರತಿಭೆ
ಅಟನಗೈವುದು ದಿವ್ಯ ವೈವಿಧ್ಯಮಯ ವಿರಾಡ್
ವಿಶ್ವವೈಶಾಲ್ಯಮಂ. ಇಂದ್ರಿಯದ ನಂದನದಿ
ನಾನಾ ಸುಖದಿ ರಮಿಸಿ ರಮಿಸಿ, ರುಚಿಭಾವನಾ
ಸ್ವಪ್ನರಚನೆಯ ಲಸಲ್ಲೋಕದಿ ಪರಿಭ್ರಮಿಸಿ
ಭ್ರಮಿಸಿ, ಬುದ್ಧಿಯ ಕುಶಾಗ್ರತೆಯ ಕೌಕ್ಷೇಯದಿಂ
ತರ್ಕವಿದ್ಯಾತತ್ತ್ವ ಗುಹ್ಯತೆಯನಾಕ್ರಮಿಸಿ ಮೇಣ್
ಕ್ರಮಿಸಿ, ತತ್ಕಾಲಿಕದ ತೃಪ್ತಿಯಲ್ಲದೆ ಬೇರೆ
ಕಾಣದೆ ಚಿರಂತನಾನಂದಮಂ, ಬೇಸರಿಂ,

ಮೇಲೆ ಕೈಕೊಳ್ವುದೈ ಯೋಗಪಥಮಂ: ಕುಳ್ತು
ಗಿರಿಶಿರಶ್ಶಿಲೆಯ ಪೀಠದಿ, ಉಷಾ ನಿಶ್ಶಬ್ದ
ಸುಪ್ತಿಯಿಂ ವಿಶ್ವಮೆಳ್ಚರ್ವುದಂ ಧ್ಯಾನಿಸುತೆ
ಹೃದಯಿಪನು ರವಿಯುದಯದವತಾರಮಂ. ಮತ್ತೆ,
ನಿಂತು ಸಾಗರ ಸಿಕತ ತೀರದೊಳ್, ನಾಟ್ಯಮಯ
ನೀಲ ಜಲ ಲಯ ದರ್ಶನದಿ ಜೀವಲಯನಾಗಿ
ಭಾವದ ಸಮಾಧಿಯಿಂ ಪೀರ್ವನು ಸಮುದ್ರಮಂ,
ಬ್ರಹ್ಮತೆಯನಿನಿತನನುಭವಿಸಿ. ಮೇಣಂತೆವೋಲ್,
ಪ್ರಕೃತಿಯ ಬೃಹಚ್ಚಿತ್ರ ಸೃಷ್ಟಿಯ ಸಮಸ್ತಮಂ,
ನಕ್ಷತ್ರ ನೀಹಾರಿಕಾ ಲೋಕ ಲಕ್ಷಂಗಳಾ
ಗಗನಮಂ, ಭೂಮಾನುಭೂತಿಪ್ರಚೋದನೆಯ
ನೈಸರ್ಗಿಕಾಕೃತಿಗಳಂ ಮನಃಕೃತಿಗಳಂ
ಸಾಧಿಸುವನಧ್ಯಾತ್ಮಿಸುವನಾದೊಡಂ ಆ
ಪ್ರಯತ್ನ ಕಾರಣಕೆಂತುಮೇಂ ಕಾರ್ಯಮಾದಪುದೆ
ಕಾರಣಾತೀತಮಾ ಬ್ರಹ್ಮತತ್ತ್ವಂ? ಒರ್ಮೆ ತಾಂ
ಸುಳಿದಿಲ್ಲಿ ಮೇಣೊರ್ಮೆ ಮಿಂಚುತ್ತಲ್ಲಿ ತೋರ್ದಂತೆ
ತೋರ್ದಡಂ, ಅದು ದಿಟದಿನಿರ್ಪುದೋ ಮೇಣ್ ಬರಿಯ
ಆಸೆ ಬೀಸಿದ ಗಾಳಿಗೋಪುರವೊ ಎಂಬೊಂದು
ಶಂಕೆಯುಯ್ಯಲೆಯಲ್ಲಿ ತೊನೆದಪ್ಪುದಯ್ ಶ್ರದ್ಧೆ,
ಬುದ್ಧಿಸ್ಥಿರತೆಗೆಟ್ಟು. ಇಂತಹಂಕೃತಿಯಳಿಯೆ,
ಸಾಧನೆಯ ಶಿಖರದಲಿ, ತನ್ನ ಯತ್ನವನುಳಿದು
ತಾಟಸ್ಥ್ಯಮಂ ತಳೆಯುವಾತ್ಮಪ್ರತೀಕ್ಷೆಗಾ
ಅನುಭೂತಿ ಮೈದೋರ್ವುದೈ, ತನಗೆ ತಾಂ ಪೊಣ್ಮಿ,
ಪೊಳೆದು, ತಳತಳಿಸಿ!
ಅರಸಿದನೊ ಆಂಜನೇಯಂ,
ಆ ಋಷಿಪ್ರತಿಭೆಯೊಲ್, ರಾಮನರ್ಧಾಂಗಿಯಂ
ಲಂಕಾ ಜಟಿಲ ಕುಟಿಲ ವಿಸ್ತೀರ್ಣದೊಳ್. ಏರ್ದು
ಬೋರೆಯನಿಳಿಯುತೋರೆಯಂ, ತರತರದ ಬಳ್ಳಿ
ಗಿಡಮರಗಳಿಂದಿಡಿದ ದಾರಿದೋಂಟಂಗಳಂ
ಸೋವುತ್ತೆ ಕಣ್ ಕಿವಿಗಳೆಚ್ಚರಿಕೆಯಿಂ, ಮತ್ತೆ
ಅಲ್ಲಲ್ಲಿ ಪಡೆಪಡೆಗಳಾಗಿ ತಿರುಗುವ ಇರುಳ್

ಕಾಪಿನಾಳ್ಗಳ ಸೊಲ್ಲ ಸುಳಿವಿಂ ಧರಾತ್ಮಜೆಯ
ಸೆರೆಯ ತಾಣಕೆ ಸಾಕ್ಷಿಯಂ ಸಂಗ್ರಹಿಸಲೆಳಸಿ
ಹೊಂಚುತ್ತೆ, ಶಂಕೆಗೆಡೆಯಾಗಿ ತೋರ್ಪೆಡೆಗಳಂ
ಪೊಕ್ಕು, ತರ್ಕಜಿಜ್ಞಾಸೆಯೊಲೇನೊಂದುಮಂ
ಬಿಡದೆ ಸೋದಿಸುತೆ, ಪಾಪಿಯ ಹೃದಯ ಕೂಪದೊಳ್
ಪ್ರಾರಬ್ಧದಿಂ ನಿದ್ರಿಸಿಹ ಧರ್ಮಬುದ್ಧಿಯಂ
ಜಾಗ್ರತಂಗೊಳಿಸಲೆಳಸುತ್ತದಂ ಅರಸುವ
ಕೃಪಾ ಕೃಪಾಣದ ಕಿರಣದೋಲಾಂಜನೇಯಂ
ಪ್ರವೇಶಿಸಿದನಯ್ ಶಿಖರತ್ರಯವ್ಯಾಪಿಯಾ
ದಶಗ್ರೀವಪುರದ ಪಾಪದ ಸಾಂದ್ರಕೇಂದ್ರಮಂ!
ನಿಬ್ಬೆರಗುವೊಡೆದುದಾ ಕಿಷ್ಕಿಂಧೆಯಾತಂಗೆ
ಇಂದ್ರಜಿತು ಪಿತನ ವೈಡೂರ್ಯಮಯ ಕಮನೀಯ
ಕನಕವಿಭವಂ ಮಧ್ಯಲಂಕೆಯಾ: ಗರ್ವಶಿರ
ಗಗನೋನ್ನತ ಗಿರೀಂದ್ರ ಸಾನುವಂ ಸೇವಿಸಲ್
ಚಿತ್ರ ನಾನಾ ಸ್ತೂಪದಿಂ ವ್ಯೂಹಗೊಂಡಿರ್ಪ
ಫೇನ ಸನ್ನಿಭ ಶರನ್ಮೇಘನಾಗಂಗಳೋಲ್
ಯಾತುಧಾನ ಪ್ರಧಾನಾಲಯಸ್ಥಾನಗಳ್,
ರೌಪ್ಯ ರತ್ನ ಸ್ವರ್ಣ ವರ್ಣ ಸಂಶೋಭಿಗಳ್,
ಚಂದ್ರಿಕಾ ಕ್ಷೀರಾಭಿಷೇಕಪ್ರಮತ್ತತೆಗೆ
ಸುಖಮೂರ್ಛೆಗದ್ದಂತೆವೋಲೆಸೆದುವಾ ಮಲೆಯ
ನಡುದಲೆಯ ನಿಡುದೂರದೋರೆಯನಲಂಕರಿಸಿ,
ಒಲಿದಪ್ಪಿದೋಲ್! ಮಿನುಗಿದುವು ಮಿಂಜೊಡರ್ ಮನೆಮನೆಗೆ,
ಮಿಂಚಿನಲರಿನ ಗೊಂಚಲೋಲ್. ಪಂಕ್ತಿಪಂಕ್ತಿಯಿಂ,
ಚಕ್ರಗತಿಯಿಂ, ವೀಥಿವೀಥಿಯಂ ಶೃಂಗರಿಸಿ
ಜ್ವಲಿಸಿದುವು ಕಲಶದೀಪಸ್ತಬಕ ರಾಜಿಗಳ್,
ರಾಸಲೀಲಾ ಪದಪ್ರಾಸ ವಿನ್ಯಾಸಮಂ
ಮೆರೆದು. ಶಿಲ್ಪಿಯ ಕುಶಲ ಕಲೆಯ ರೇಖಾಪ್ರತಿಭೆ
ಸುಪ್ರಕಟಮಪ್ಪಂತೆವೋಲ್ ಮನೆಮನೆಯ ಮೇಲೆ
ಗೋಪುರದ ಭುವನೇಶ್ವರಿಯ ಪರಿಜನಾವರಿಸಿ
ಝುಗಝುಗಿಸಿದುವು, ಮಳೆಬಿಲ್ಲಿನೋಕುಳಿಯನೆರಚಿ,
ಬಣ್ಣಬಣ್ಣದ ದೀಪತೋರಣಂ. ಹೇಷಿತಂ

ಬೃಂಹಿತಂ ರಥಚಕ್ರ ಚೀತ್ಕಾರಗಳ್ ವೆರಸಿ
ಸದ್ದುವೊಳೆ ನೆರೆಯುರ್ಕ್ಕಿ ಬರ್ಪವೋಲ್, ಕಿವಿತುಂಬಿ
ಬಂದುದಾ ರಾಜಧಾನಿಯ ವಿವಿಧ ಬಹುಜನದ
ಕಲಕಲ ತುಮುಲ ದೈತ್ಯನಿನದ. ಅಸುರ ಲಕ್ಷ್ಮಿಯ
ಮಿಸುನಿಯೆಸಕದ ನಯಕೆ, ಸೌಂದರಕೆ ಸಂಸ್ಕೃತಿಗೆ,
ಕಲ್ಪನಾಕುಶಲತೆಯ ಶಿಲ್ಪಕೆ ಮನಂ ಮೆಚ್ಚಿ
ನಿಲ್ಪಟ್ಟು ತಲೆತೂನೆದನೆನೆ ಮಹತ್ಕಾರ್ಯಪಟು,
ಸತ್ತ್ವಸಂಪನ್ನನಾ ಕಪಿನೃಪ ಹಿತಂಕರಂ,
ಮರುತಾತ್ಮಜಂ, ಲಂಕೆಗಿನ್ ಕವಿಸ್ತುತಿಯೇಕೆ
ಮರುನೀರಸಂ?
ಅಂತಗೋಚರ ವನೇಚರಂ
ಗೋಮಿನಿಯ ಕಾಮಿನಿಗೆ ಜನಜನದೊಳಾಲಿಸುತೆ
ಮನೆಮನೆಯೊಳರಸುತ್ತೆ ಯಾಮಿನಿಯನಲೆಯುತಿರೆ,
ರಜನಿ ಮುಂಜರಿದಂತೆ ಹಿಂಜರಿದುದೊಯ್ಯನಾ
ಪುರದ ರಾತ್ರಿಂಚರತ್ವಂ. ಹಿಂಚಿತಯ್ ಪ್ರಜಾ
ಚರಣ ಸಂಚರಣದೊಲೆ ಯಾನ ಸಂಚಲನಮುಂ.
ಶಬ್ದಮೊಯ್ಯನೆಯೆ ನಿಶ್ಶಬ್ದತಾಲಿಂಗನದಿ
ರಮಿಸಿ, ಗದ್ಗದವಾಗುತೊಯ್ಯನುಡುಗುತೆ, ಕಡೆಗೆ
ತೊದಲಾಯ್ತು. ಸೊಡರುಗಳನಾರಿಸಲ್ಕಲ್ಲಲ್ಲಿ,
ಮಸುಳಿದುದು ಗೃಹಗೃಹದೊಳಂತರಂಗದ ದೀಪ್ತಿ;
ಕಳ್ತಲೆಯತಿಥಿಯಾಯ್ತು. ಒಂದಾದ ಮೇಲೊಂದು
ನಿರ್ವಾಣವೊಂದಲಾ ತೈಲಾರ್ಚಿ ತತಿ, ಮಂಜು
ಮಂಜಾಗಿ ತೋರ್ದಡಂ, ಕೈಗಣ್ಮದೋಲಾಯ್ತು
ಶೈಶಿರಜ್ಯೋತ್ಸ್ನೆ. ಸುಳಿಸುಳಿದನಿಚ್ಛಾರೂಪಿ
ಸೌಧದಿಂ ಸೌಧಕ್ಕೆ, ಗಾಳಿಯೋಲ್, ಕಂಪಿನೋಲ್,
ನೆಳಲವೋಲ್, ಕನಸಿನೋಲ್, ಸಸಿಗದಿರವೋಲ್, ನಿಶಿಯ
ನಿಟ್ಟುಸಿರಿನೋಲ್.
ಭ್ರಮಾಶೀಲ ನಾಗರಿಕತೆಯ
ಕೂಗಡಗೆ ಕೇಳಿಬಹ ಮೌನಮೂಲದ ಶಾಂತಿ
ಸಂಸ್ಕೃತಿಯ ವಾಣಿಯೋಲಲ್ಲಲ್ಲಿ ಶ್ರೀಮಂತ
ವೇಶ್ಮಂಗಳಿಂ, ನೀರವ ನಿಶಾಪ್ರಾಣ ತಂತ್ರಿಯನೆ

ಮಿಡಿದರೆನೆ, ತೇಲಿಬಂದುದು ಬೀಣೆಯಿಂಚರಂ:
ಗಾನ ಜೇನಿನ ಸೋನೆ ಸೋರ್ದುದೊ, ಕಿವಿಯ ತೃಷೆಗೆ
ತಣಿವ ನಾಲಗೆಯಾಗಿ ನಲಿವಂತೆ! ನವವಧೂ
ಚುಂಬನಕ್ಕಾಲಿಂಗನದ ಬೆಸುಗೆ ಬೆರೆವಂತೆ,
ಸವಿಗೆ ಸವಿ ನೆರೆವವೋಲ್ ಘ್ರಾಣಮಂ ಸುಖಕದ್ದಿ
ಪ್ರಾಣಮಂ ತೇಂಕಾಡಿಸುವ ಪರಿಮಳಂಗಳುಂ
ಅಲೆದುವಾಗಸವನಶರೀರ ಮೋಹಂಗಳೋಲ್!
ಲಂಕಾ ಲತಾಂಗಿಯರ ನೂಪುರ ಝಣತ್ಕೃತಿಗೆ
ಕಿವಿಯಿತ್ತೊಡಂ ಬಗೆಸೋಲದಾ ಬ್ರಹ್ಮಚಾರಿ,
ಲೆಕ್ಕಿಸದೆ ಲಲನಾ ಲಲಾಟ ಲಾವಣ್ಯಮಂ,
ದೇವಿ ಸೀತೆಯನಲ್ಲದರಸಲಿಲ್ಲನ್ಯಮಂ
ಕಂಡ ನಾನಾ ಸ್ಥಿತಿಯ, ವಸನಚ್ಯುತಿಯ, ಲಲಿತ
ದೇಹದ್ಯುತಿಯ ಭೋಗಮಂಚದ ರತವ್ರತದ
ಸೀಮೆಯಲಿ. ಯೋಗನಿಷ್ಠೆಗೆ ಕೋಡ ಕೊನರಿಸುತೆ
ಹೋಗಿ ಹೊಕ್ಕನು ಮನೆಗೆ ಇಂದ್ರಜಿತುವಾ!
ಕಲೆಗೆ ತಾಂ
ಸಜ್ಜೆವನೆಯೆಂಬಂತೆ ಸೊಗಸುಗೊಂಡಿರ್ದುದಂ
ಸಂಚರಿಸಿದನು ಧೂಪರೂಪಮಂ ತಾಳ್ದನಿಲ
ಸೂನುಃ ತಾರಸ್ವರದೊಳೂಳ್ದುದು ಪೊಸನ್ತಿಲೆಡೆ
ಕಟ್ಟುಗೊಂಡೊರಗಿರ್ದ ಜಾಯಿಲಂ. ಗಾರಾಗಿ
ಕೇಗಿದುದು ಸಾಕಿದ ನವಿಲ್. ಮಸುಳಿದುದು ಕಾಂತಿ
ದೀಪಾಳಿಗಳ್ಗೆ. ತೆಕ್ಕನೆ ಬೆಚ್ಚಿಬಿದ್ದಂತೆ,
ಕಂಪಿಸಿತು ಹೊಂಗೆಜ್ಜೆ ಗಂಟೆಗಳ ತೋರಣಂ,
ಹನಿಹನಿಯೊಳಿನಿದನಿಯ ಸೋನೆಯಂ ಸೂಸಿ. ಮೇಣ್
ಸ್ವಪ್ನಭೀತಿಯೊಳೆಂಬ ತೆರದಿ, ಮಂಡೋದರಿಯ
ಸೊಸೆಯ ಶಿಶು ಕೂಗಿದನು ತೂಗುತೊಟ್ಟಿಲೊಳೆದ್ದು
ಕುಳಿತು. ಲಂಕೇಶ್ವರಪ್ರಿಯಸುತಪ್ರೇಮಸತಿ,
ತಾರಾಕ್ಷಿ, ಸಿರಿಮಂಚದಿಂ ದಿಗ್ಗನೇಳುತ್ತೆ,
ಕುಡಿಯಿಲ್ಲಣವನೊರಸಿ ಸೊಡರನುಜ್ಜಳಿಸಿದಳ್;
ಬೆಜ್ಜರದಿ ನಡೆಯುತರ್ಭಕನ ತೆಗೆದೆತ್ತಿದಳ್;
ಚೊಚ್ಚಲಿದೆಗೊತ್ತಿದಳ್; ಸಂತಯ್ಸಿ ಮುಂಡಾಡಿ

ಮುತ್ತೊತ್ತಿದಳ್ ಮುದ್ದುಮೊಗಕೆ. ತರುಣಿ, ಷೋಡಶಿ,
ತಲ್ಲಣಂಗೊಳುತ ಬೆಸಸಿದಳಲ್ಲಿಗನಿತರೊಳ್
ಬೇಗನುದ್ವೇಗದಿಂ ಬಂದೊರ್ವ ಸೇವಿಕೆಗೆ,
ತನ್ನ ಕಂದನ ತಂದೆಯಂ ಕರೆದು ತರುವಂತೆ.
ಕಳವಳದ ನುಡಿಗೇಳ್ದು, ಅಧ್ಯಯನ ಕಕ್ಷ್ಯದಿಂ,
ಓಡೋಡಿಯೈತಂದನೊಂದು ಹೊತ್ತಗೆವೆರಸಿ
ರಣಧೀರನಿಂದ್ರಜಿತು, ಸಾಮಾನ್ಯನೋಲ್. ಕಂಡು
ಆ ಭದ್ರರೂಪದ ಸುದೀರ್ಘದೇಹಿಯನವನ
ಸಲ್ಲಲಿತ ಲಲಿತಾಂಗಿಯೆಡೆ ಮತ್ತೆ ಶಿಶುವಿನೆಡೆ,
ನಾಲಗೆಗೆ ನೆಗೆದ ಹರಕೆಯನೆನಿತೊ ಸಂಯಮದಿ
ಸಂಹರಿಸಿ, ಬಿಸುಸುಯ್ದನಾಂಜನೇಯಂ!

ಸತಿಗೆ,
ಮುಗುವನೆರ್ದೆಗೊತ್ತಿ ಕಣ್‌ಬೆದರಿರ್ದ ರೂಪಸಿಗೆ
ಇಂತೊರೆದನಿಂದ್ರಜಿತು ದರಹಾಸದಿಂ: "ಇದೇನ್,
ಮನದನ್ನೆ, ನೀಂ ಸುರಕ್ಷಿತಳಾಗಿಯುಂ ಬರಿದೆ
ಬೆದರುವೆ ಅರಕ್ಷಿತಳವೋಲ್? ನನ್ನ ಈ ಮುದ್ದು
'ವಜ್ರಾರಿ'ಗೇನ್ ಬಾಧೆಯುಂಟಾಯ್ತೆ? ನುಡಿ, ನುಡಿ;
ಅಕಾರಣಂ ಮಿಳ್ಮಿಳನೆ ನೋಳ್ಪೆಯೇಕಿಂತು? ಪೇಳ್,
ಕೋಟಲೆಯನೊಡನೆ ತವಿಪೆನ್; ತ್ರಿಲೋಕಂಗಳಂ
ಮಥಿಸುವೆನ್; ಬೆಜ್ಜಗಜ್ಜಂಗೆಯ್ವೆನೀ ನಿನ್ನ
ಬೆಜ್ಜರಕೆ!"

ತೊಯ್ದುಕಣ್ ಉಸಿರಸುಯ್‌ವೆರಸುತುಂ
ಗದ್ಗದಂಗೆಯ್ದಳಿಂತಾ ಭೀರು ತನ್ನಿನಿಯ
ದೈತ್ಯಧೀರಂಗೆ: "ಪೇಳಲಂಜುವೆನಲ್ಪಮಂ,
ನಾನಬಲೆ, ನಿನ್ನಾ ಸಬಲ ಮತಿಗೆ. ಪ್ರಾಣಪತಿ,
ಭಾವದಿಂದರಿತುದಂ ಬುದ್ಧಿಯಿಂದಳೆಯಲದು
ಮೌಢ್ಯದೋಲ್ ತೋರ್ಪುದಹುದಾದೊಡಂ, ಲಘುವಲ್ತು
ದುಶ್ಶಕುನ ಚಿಹ್ನೆ. ಬಿದಿಯೆಳ್ಚರಿಕೆವೆರಳದಂ
ಕಡೆಗಣಿಸದರಿತು ನಡೆವುದೆ ಬುದ್ಧಿ. ನಿರ್ನೆರಂ
ಬೆದರುವುದೆ ವೀರ ರಮಣಿಯ ಹೃದಯವೆನ್ನುಸಿರ್?
ಊಳ್ದತ್ತು ಜಾಯಿಲಂ; ಕೇಗಿತು ನವಿಲ್; ಗಂಟೆ

ಸರಗೈದುವನಿಮಿತ್ತಮೊಡನೆ ಚಿಟ್ಟನೆ ಚೀರ್ದು
ನಿದ್ದೆಯನೊದರಿ ತೊಟ್ಟಿಲೊಳಗೆದ್ದು ಕುಳ್ತನೀ
ನಿನ್ನ ಪೌರುಷವಜ್ರ ಸಂಭವಂ!''
ಕೇಳ್ದಡಂ
ಗಮನಿಸದವೋಲ್ ಸತಿಯ ನುಡಿಗಳಂ ಇಂದ್ರಜಿತು
ಸುತ್ತಲುಂ ನೋಡಿ: ''ಏನಿದು? ಧೂಪಧೂಮಮೇಂ?
ಇಂತು ಪೊಗೆಯಡಸಿದೊಡೆ ನಿದ್ದೆಯಚ್ಚರಿಯಲ್ತೆ
ಕಂದಂಗೆ?'' ಎನುತಾಳ್ಗಳಿರ್ದೆಡೆಗೆ ಬೆಸಸಿದನ್
''ತೆರೆಯಿಂ ಗವಾಕ್ಷಮಂ!'.
''ಪೋದ ಬೈಗಿನೊಳೊಂದು
ಬಿದ್ದುದು ಮಹೋಲ್ಕೆ ಪತ್ತನದುತ್ತರದ ಗಿರಿಯ
ಲಂಬವೆಂಬಾ ಶಿಖರದತ್ತಣ್ಗೆ. ಕಂಡೆನಾಂ
ಅನಲಾ ಕುಮಾರಿಯೊಡನಿರ್ದೆಮ್ಮ ಉದ್ಯಾನ
ಕೃತಕ ಶೈಲಾಗ್ರದಿಂ. ಲಂಕಾ ಸಮಸ್ತಮುಂ
ಕಂಡುದೆಂಬರು ಆ ಭಯಂಕರದ ದುಶ್ಶಕುನ
ದೃಶ್ಯಮಂ. ಕ್ಷಣಮಾತ್ರಮೇನೊ ಕಪಿಗಾತ್ರಮಂ
ಕೆತ್ತಿದೋಲ್ ಕಾಣಿಸಿತ್ತಂತೆ ಕೆಲಕೆಲಬರ್ಗೆ!
ಕೇಡೆಂಬರರಸುಗಳಿಗರಿತವರ್!''
''ಸಾಲ್ಗುಮಾ
ಅಂತೆ ಕಂತೆಯ ಚಿಂತೆ. ಕಲ್ಪನಾ ಭೀತಿಯಂ
ಬಿಡು, ಕಾಂತೆ. ಪೆಣ್‌ಜಾತಿಗೇಂ ಬೇರೆ ತರ್ಕಮಂ
ವಿಧಿಸಿಹನೊ ಸೃಷ್ಟಿಕರ್ತಂ ಕಾಣೆನಾಂ! ನಿನ್ನ
ಈ ಪೇಳ್ದುದಕ್ಕೇಂ ಸಮನ್ವಯಮೊ ಮಿಥ್ಯೆಯಾ
ಉಲ್ಕಾ ಕಥಾವಾರ್ತೆ?. . . ನೋಡು, ಮಗು ಮಲಗಿದನ್.
ಶಯ್ಯೆಯಾಗಿಸು ತೊಟ್ಟಿಲನ್. . . ಮಲಗು ನೀನುಂ,
ಮನಃಪ್ರಿಯೆ. ಧನುರ್ವಿದ್ಯೆಯಂ ಪೇಳ್ವ ವೇದಮಂ,
ಈ ಪುಸ್ತಕವನೋದಿ ಬರ್ಪೆನಾಂ, ಬೇಗದಿಂ,
ನಿನ್ನೆಡೆಗೆ. . . ಸಂಗವಿಲ್ಲದ ನಿನ್ನ ಕಲ್ಪನೆಗೆ
ಭೀತಿ ಸಹಜಂ, ಅಬಲೆ!...''
ಸತಿಯ ಕಣ್ಣೆಗೆ ತನ್ನ
ಕಣ್ ಬೆಸೆದು, ಇಂಗಿತದಿ ಎವೆಯಿಕ್ಕದೀಕ್ಷಿಸುತೆ,

ಹೋಹಾತನಂ ಪ್ರಾಣನಾಥನಂ ಪ್ರಾರ್ಥನಾ
ದೃಷ್ಟಿಯಿಂ ತಡೆದು ನುಡಿದಳು ತರುಣಿ ತನ್ನೆದೆಯ
ತಲ್ಲಣಿಕೆಯಂ: "ತಿರಸ್ಕರಿಸದಿರ್, ವೀರವರ,
ಪೆಣ್ಣೆದೆಯಳಲ್ಕೆಯಂ. ಒಲಿದೊಲವಿನಾಶಂಕೆ
ಅರ್ಥವಿಲ್ಲದುದಲ್ತು. ಮಂತ್ರದಾಲೋಚನೆಯ
ಮಂದಿರದೊಳಿರ್ಪ ನಿಮಗೆಂತು ತಿಳಿವುದು ಜನಂ
ಕಾಣ್ಬ ಬಹಿರಂಗಸತ್ಯಂ? ಲಂಕೆಗೇಂ ಕೇಡೊ!
ರಾಮಸತಿಯಂ ಮಾವನಪಹರಿಸಿ ತಂದಾ
ಮೊದಲ್ಗೊಂಡು ತೋರುತಿವೆ ದುಶ್ಶಕುನಗಳ್. ನನಗೊ
ದುಃಸ್ವಪ್ನಮಯಮಿರುಳ್. ಆ ಮಹಾ ತಾಯಿಯನ್
ಹದಿಬದೆಯರಧಿದೇವಿಯಂ ಮಾವನೆಂತಕ್ಕೆ
ತಂದಾಯ್ತು. ವಶವಾಗದವಳನಿನ್ನಾದೊಡಂ
ಹಿಂದಕೊಪ್ಪಿಸುವಂತೆ ತಿದ್ದಬಾರದೆ ನಿಮ್ಮ ಆ
ತಂದೆಯಂ."

"ಆ ತಂಗಿ, ಕಕ್ಕನ ಮಗಳ್, ನಿನಗೆ
ಸಖಿಯಲ್ತೆ ಅನಲೆ! ಅವಳುಪದೇಶಮಂ ಕೇಳ್ದು
ನೀನುಂ ವಿಭೀಷಣಾರ್ಯನ ತೆರೆದೊಳೊರೆಯುತಿಹೇ
ನನಗೆ. ತಂದೆಗುಪದೇಶಕ್ಕೆ ಕೊರತೆಯುಂಟೇನ್?
ನಾನಿರ್ಪುದಯ್ಯನಾಣತಿಯಂತೆ ನಡೆಯಲ್ಕೆ;
ಬುದ್ಧಿವೇಳಲ್ಕನ್ಯರಿರ್ಪರೆನಗಿಂ ಮಿಗಿಲ್
ಜ್ಞಾನಿಗಳ್! ಮಲಗು, ನಡೆ. ಹೆದರಿಕೆಯನುಳಿ. ಲಂಕೆ,
ನಮ್ಮನ್ನರಿರ್ಪ ಈ ಲಂಕೆ, ದುರ್ಗಂ ದಿಟಂ;
ದುಸ್ಸಾಧ್ಯಮಾರ್ಗ್ಗಾದೊಡಂ!"

ಸುಯ್ದು ತಿರುಗಿದಳ್
ತರಳೆ, ಕಣ್ಮರೆಯಾಗೆ ಪತಿಯ ಧೀರಾಕೃತಿಯ
ಪೆರ್ಮೆ. ತನ್ನೆರೆಯನಾಣತಿಯಂತೆ ಸೇವಕರ್
ತೆರೆದ ಕಿಟಕಿಗಳಿಂದೆ, ಬೀಸುಗಾಳಿಯ ಕೂಡಿ
ಮನೆಯಿಂ ತೆರಳ್ವವೋಲ್, ನಡೆದುದಾ ಕಂಪುವೊಗೆ
ಪೊರಗೆ. ಸೀತಾವಾರ್ತೆಗೇಳ್ದು ಮನದುತ್ಸವಂ
ಪೆರ್ಚೆ, ವಂದಿಸುತಿಂದ್ರಜಿತುಸತಿಯನಲ್ಲಿಂದೆ
ಪೊರಮಟ್ಟನಾಂಜನೇಯಂ ರಾಮದಯಿತೆಯಂ

ಪುಡುಕಲ್ಕೆ ಮುಂದೆ.
ಗೃಹಗೃಹಚಾರಿ ಪವನಜಂ
ಪೊಕ್ಕನಲ್ಲಿಂ ಪ್ರಹಸ್ತನ ಮನೆಗೆ: ಆ ಮಹಾ
ಸೇನಾನಿ ಪಾಣ್ಬೆಯೊರ್ವಳ ಪಾದ ಮೂಲದೆಡೆ
ಲೀನನಾಗಿರ್ದ ದೃಶ್ಯದ ದೈನ್ಯಮಂ ನೋಡಿ,
ಕಾಮದಿಂ ಕ್ಷಾತ್ರತೇಜಕೆ ಬರ್ಪ್ಪ ಹೀನಮಂ
ಪಳಿಯುತೆ, ಜುಗುಪ್ಸೆಯಿಂ ಸುಗಿದು, ನೆಗೆದನು ಮೇಲೆ
ಮಹಾಪಾರ್ಶ್ವನೆಂಬಿನ್ನೊರ್ವ ಸೇನಾನಿಯ ಸುಧಾ
ಶ್ವೇತ ಸೌಧಕ್ಕೆ. ತನ್ನೊಂದಸ್ತ್ರ ಶಕ್ತಿಯಂ
ಮಂತ್ರದಿಂದರ್ಚಿಸುತ್ತಿರ್ದನಂ ಗೌರವಿಸಿ,
ಮುಂಬರಿದನಲ್ಲಿಂ ವಿರೂಪಾಕ್ಷ ದಳಪತಿಯ
ಮನೆಗೆ. ವಿದ್ಯುಜ್ಜಿಹ್ವನಂತೆ ವಿದ್ಯುನ್ಮಾಲಿ,
ಜಂಬುಮಾಲಿ, ಸುಮಾಲಿ, ಧೂಮ್ರಾಕ್ಷ, ಘನ, ವಿಘನ,
ವಕ್ರಶಠ, ಮತ್ತ, ಯುದ್ಧೋನ್ಮತ್ತ, ಹಸ್ತಿಮುಖ,
ಶೋಣಿತಾಕ್ಷ, ಕರಾಳ, ರಶ್ಮಿಕೇತು, ಪಿಶಾಚ,
ವಜ್ರಕಾಯಂ, ಧ್ವಜಗ್ರೀವಂ, ಮಹಾಕಾಯನ್,
ಅತಿಕಾಯನ್, ಬ್ರಹ್ಮಕರ್ಣಂ ದಂಷ್ಟ್ರನಿತ್ಯಾದಿ
ನಾನಾಪ್ರಮುಖ ದೈತ್ಯನಾಯಕ ನಿವಾಸಂಗಳಂ
ಸೋದಿಸುತೆ, ಸೋವುತ್ತೆ, ಸೋಸುತೈತರುತಿರಲ್
ಪರ್ವತಂಬೋಲ್ ಇದಿರ್‌ಮಲೆತೆದ್ದು ನಿಂತುದಾ
ಕುಂಭಕರ್ಣನ ಬೃಹದ್ ಭವನ ಭೀಷಣ ಭವ್ಯ
ಗೋಪುರಂ!
"ಇದಾವ ವೀರನ ಮನೆಯೊ? ಮೇಣಸುರ
ರಾಜನರಮನೆಯೊ? ಮೇಣೆನ್ನ ಅನ್ವೇಷಣೆಯ
ಕೊನೆಯೊ? ಮೇಣ್ ಕಪಿಕುಲದ ಪುಣ್ಯವೈರಿನ ತೆನೆಯೊ?
ನೋಳ್ಪೆ" ನೆನ್ನುತೆ ಘೂಕರೂಪಮಂ ತಾಳ್ದದಂ
ಪೊಕ್ಕನು ತಮಿಸ್ರಗುಹೆಯಂ ಪುಗುವವೋಲ್. ಪೊಕ್ಕು,
ಬಟ್ಟೆದಪ್ಪಿದನದರ ಜಟಿಲರಚನೆಯ ವಿಪುಲ
ವಿಸ್ತೀರ್ಣದೊಳ್: ಸಹ್ಯದಾಗುಂಬೆಯಟವಿಯೊಳ್
ಬಲಗಿಯ ಬೃಹತ್ತರುಶ್ರೇಣಿ ಕಿಕ್ಕಿರಿದವೋಲ್
ಪಂಕ್ತಿಪಂಕ್ತಿಸ್ತಂಭಗಳ್, ಸ್ತೋಮ ಶೈಲಿಯಿಂ,

ದೈತ್ಯೇಂದ್ರನಾಳುಗಳ್ ದೈತ್ಯಾಜ್ಞೆಯಂ ಪೊತ್ತು
ದೈತ್ಯಕ್ರಮಂ ನಿಲ್ವವೋಲ್ ನಿಂದಿರ್ದುವಗಣಿತಂ,
ಗಣಿತಂ ದಣಿಯುವಂತೆ: ಮಧುಕಕ್ಷಲಕ್ಷಗಳ್
ಕ್ಷೌದ್ರಪಟಲದೊಳಮಿತ ಸಂಖ್ಯೆಯಿಂದಿರ್ಪ್ಪವೊಲ್
ಚಿತ್ತಭ್ರಮೆಯನೊಡರಿಸುತ್ತಿರ್ದುವಲ್ಲಿಯಾ
ಕೋಣಕೋಣದ ಕೋಟಿ ಕೋಣೆಗಳ್. ಮತ್ತಮಾ
ಮಾರುತಿಯ ಬುದ್ಧಿ ಬೆರಗಾಗೆ ಪೆರ್ಬಂಡೆಗಳ್,
ಪೆರ್ಮರದ ದಿಮ್ಮಿಗಳ್, ಬಲ್ದಡಿಗ ನೇಣುಗಳ್,
ಕುಂಕುಮಂವೆರಸಿರ್ದ ಕೆಮ್ಮಣ್ಣಿನೊಟ್ಟುಗಳ್,
ನುಣ್ಮಳಲ್ವೆಟ್ಟುಗಳ್ ಮೆರೆದಿರ್ದುವಲ್ಲಲ್ಲಿ,
ಬಗೆಗೆ ತರ್ಪಂತೆವೋಲ್ ಬಲ್ಗರಡಿಯಂ: "ದಿಟಂ
ರಾಕ್ಷಸವ್ಯಾಯಾಮರಂಗಮಿರವೇಳ್ಕುಮೀ
ದೃಶ್ಯಾದ್ಭುತಂ!" ಎನುತ್ತೆ ಮುಂಬರಿಯಲದೊ ಮತ್ತೆ
ಗೋಚರಿಸಿತಿನ್ನೊಂದು ಸೋಜಿಗಂ. ಕಾಳ್ಕೋಣ
ಕಡವೆ ಸಾರಗ ಜಿಂಕೆಗಳ ಕವಲ್ಗೊಂಬುಗಳ್,
ತಿರುಗೊಂಬುಗಳ್, ನೀಳ್ದಕೊಂಬುಗಳ್; ಪಂದಿ ಪುಲಿ
ಭಲ್ಲೂಕ ಸಿಂಹ ಗಜ ಖಡ್ಗಮೃಗಮಿತ್ಯಾದಿ
ಜಂತುಗಳ ದಂತ ನಖ ಚರ್ಮಗಳ್; ಮೇಣ್ ಶಿಲ್ಪ
ಕರ್ಮಗಳ್ ಕಂಭಕಂಭಗಳಲ್ಲಿ, ಬಾಗಿಲಲಿ,
ಜಗಲಿಯಲಿ ಗೋಡೆಗೋಡೆಗಳಲ್ಲಿ, ಕಣ್ಣಲಿವ
ಕಡೆಗಳಲಿ, ಸುತ್ತಣೆಲ್ಲೆಡೆಗಳಲಿ ಮೆರೆದುವಾ
ಕುಂಭಕರ್ಣನ ಬಿನದವೇಂಟೆಯ ಕವತ್ತೆಗಳ್,
ತೋರುಮನೆಯಲ್ಲಿ! ನಡೆಗೊಳೆ ಮತ್ತೆ ಮುಂತಣ್ಗೆ,
ಪ್ರಾಣಿಸಂಗ್ರಹ ಶಾಲೆಯಂ ಪ್ರವೇಶಿಸಿದವೋಲ್
ಕಾಣಿಸಿದುವಲ್ಲಲ್ಲಿ ನಾನಾ ವಿಧದ ವನದ
ಜಲದ ಗಗನದ ಜೀವಿಗಳ್: ಶಬ್ದಮಯಮಾಯ್ತು
ಚಿತ್ರ ಚಿತ್ರಸ್ವರದಿ ಶ್ರೋತ್ರೇಂದ್ರಿಯಂ. ಚಿರತೆಗಳ್,
ಪೆರ್ಮೊಸಳೆ ಪೆರ್ಬ್ಬಾವು ಪೆರ್ಬ್ಬಂದಿ ಪೇರಾನೆ
ಪೆರ್ಬುಲಿ ಪೆಡಂಭೂತಗಳ್, ಕರಡಿಗಳ್, ಸಿಂಹಗಳ್,
ಭೀಕರದ ಬೇಂಟೆನಾಯಿಗಳಿರ್ದುವಾ ಜವನಂ
ಜವಂಗೆಡಿಸುವಾ ಗಂಡುವೀಡಿನಲಿ. ಎಲ್ಲಿಯುಂ,

ದೀರ್ಘದೇಹದ ದೈತ್ಯರಲ್ಲಾದೊಡಂ ಮತ್ತೆ
ಪ್ರಾಣಿಗಳೊಳಾದೊಡಂ, ಪೆಣ್ಣೆಂಬ ಸುಳಿವಿರದೆ
ಬರಿ ಗಂಡುವೀಡಾಗಿ ಭೀಷಣತೆವೆತ್ತುದಾ
ಕುಂಭಕರ್ಣಪ್ರಪಂಚಂ! "ಏಂ ವಿಚಿತ್ರಮೋ
ಈ ಅಮರ್ತ್ಯ ಭೂ, ಲಂಕೆ!" ಎನುತೆ ಮುಂದಕೆ ಮತ್ತೆ
ಸಾರುತಿರಲದೊ ಕೇಳ್ದುದಯ್ ಮಹಾಭೀಳತರ
ಢಕ್ಕಢಿಕ್ಕಿಧ್ವಾನ ಭೈರವಂ! ಕಿವಿ ನಿಮಿರಿ
ಕಳವಳಿಸುತಾಲಿಸಿದನಾಂಜನೇಯಂ ಮನೆಯ
ಕಟ್ಟಡವನಲುಗಿಪಾ ಗುದ್ದುಸದ್ದಂ! ಮತ್ತೆ
ಚೋದ್ಯಮಿದು ವಾಸಗೃಹದೊಳಗೆನುತೆ ಮುಂಬರಿಯೆ
ಪಿಡಿಯುತಾ ಧ್ವಾನಾಧ್ವಮಂ, ಸಿಡಿಲ್ ಸಿಡಿಲೊಡನೆ
ಮುಷ್ಟಿಯುದ್ಧಂಗೆಯ್ವವೋಲ್, ನೆಲಂ ಕಂಪಿಸಲ್
ಸಡಿಲ್ದುರುಳ್ವ ಗಂಡಶೈಲಮಿನ್ನೊಂದರೆಯ
ಬಂಡೆಗೆ ತಗುಳ್ದಪ್ಪಳಿಸುವೊಲ್ ಸಮೀಪಿಸಿತ್ತಾ
ಧೈರ್ಯಸ್ಖಲನಕಾರಿ ಕೋಲಾಹಲಂ! ಮುಂ ಪೋಗೆ
ಪೋಗೆ, ಕಡೆಗೆ ಕಂಡುದು ಆ ಭಯಂಕರ ನಿನದ
ಕಾರಣಂ, ದೈತ್ಯ ಭೀಮನ ಬೃಹದ್ ವ್ಯಾಯಾಮ
ವೇದಿಕಾಪ್ರಾಂಗಣಂ:
ಕೆಂಜೊಡರ್ ದೀವಿಗೆಯ
ಬೊಂಬಾಳಗಳ ರಾಜಿ ದೆವ್ವದಾರಾಧನೆಯ
ನೀರಾಜನಂಗಳೋಲ್ ರಾರಾಜಿಸಿತು, ನೆಲಂ
ಕೆನ್ನೀರೊಳಳ್ದ ಕೆಂಗೂಳೆರಚಿದಂತೆಸೆಯೆ,
ಜಪಾಕುಸುಮ ಕುಂಕುಮ ಶೋಭಿತಂ. ನೋಳ್ಪರಾ
ಕಣ್ಗಳ್ಗೆ ಮುಸುಗಿತೊಂದಸ್ಪಷ್ಟತೆಯ ಮಬ್ಬುರ್,
ಮನಕೆ ಮಾಯೆಯ ಮೋಹಮಂ ಬೀಸಿ. ನೆಳಲ್ಗಳುಂ
ಜೀವವಸ್ತುಗಳೊಲಭಿನಯಿಸಿದುವು ನಾಟ್ಯಮಂ
ಕುಡ್ಯಕಂಭಗಳೊಡನೆ ಮೇಳಮಂ ಕಟ್ಟಿ. ಆ
ರಕ್ತದೀಪಾರ್ಚಿ ರೋಚಿಯ ವರ್ಣಮನೆ ಪೋಲ್ವ
ಕಟಿವಸ್ತ್ರ ಮಾತ್ರ ಧಾರಿಗಳಲ್ಲಿ ಪೇರೊಡಲ
ಜಟ್ಟಿಗಳ್, ಪ್ರೇಕ್ಷಣಪ್ರಾಣರೆನೆ, ಸುತ್ತುಂ
ವಿಜೃಂಭಿಸಿರೆ, ಗೂಳಿ ನಾಲ್ಕಂ ಮಲೆತುಮೊರ್ವ ಕಲಿ

ಮಲ್ಲಗಾಳೆಗವಾಡುತಿರ್ದನು, ಮರುತ್ಸುತನ
ಪೆರ್ಮೆಗೆ ನಿಮಿರ್ವಂತೆ ರೋಮಾಂಚನಂ! "ದೈತ್ಯ
ವೀರರೊಳಗಾವನೀತನೊ? ದಿಟಂ ಪಟುಭಟಂ!
ನಮಗೆ ಮಲೆಯಲ್ ತಕ್ಕನೀತನದಟಂ!" ಎನುತ್ತೆ
ಮೆಚ್ಚಿ ನೋಡಿದನಾ ಮಹಾದೇಹಮಂ: ಹೇರಿ
ಬಂಡೆಗೆ ಬಂಡೆಯಂ ಗಿರಿಯ ರಚಿಸಿದರೆನಲ್ಕೆ,
ಬೇರ್ಗ್ಗಂಟುಗಳ್ ಪಿಣಿಲ್ ಪಿಣಿಲೆದ್ದು ಪೆರ್ಮರನ
ಮೆಯ್ಗೆ ಪೆಣೆದುವೆನಲ್ಕೆ, ಭೈರವನೊಡಲ ಸುತ್ತಿ
ನಿದ್ರೆಯಿಂದೇಳ್ವ ಪೆರ್ಬಾವ್ ಮೈಮುರಿವೆನಲ್ಕೆ
ಕುತ್ತಿಗೆಯ ಭುಜದ ಬೆನ್ನಿನ ಜಾನು ಜಂಘೆಯ
ವಕ್ಷದೇಶಸ್ನಾಯು ವಜ್ರಖಂಡಗಳುರ್ಬಿ
ಮಾಂಸಜೀವಿಯ ಮಾಂಸಲಭ್ರುಕುಟಿಗಳ ತೆರದಿ
ತೋರ್ದುವು ಅಗುರ್ವಾಗಿ. ಪೊದೆ ಪೊದೆ ಕೆದರ್ದ ತಲೆ
ಮಾಂಕರಿಸಿತದ್ರಿ ಶಿಖರದ ಮುಖವನಾವರಿಸಿ
ಬೆಳೆದಟವಿಯಂ. ಇಭಸ್ಥೂಲತೆಯನಾಂತೊಡಂ
ಚಕಿತ ಹರಿಣನ ಚಲಚ್ಚರಣ ವೈಖರಿಯಿಂದೆ
ಚಿರತೆನೆಗೆಯಂ ಸರ್ಪರಸನ ವಿನ್ಯಾಸಮಂ
ಬಳ್ಳಿಮಿಂಚಂ ಮೆರೆಯುತಿರ್ದನು ನಿಶಾಚರಂ,
ಕುಪಿತ ಪುಂಗವ ಚತುಃಶಕ್ತಿ ಚಾತುರ್ಯಮುಂ
ಸೋಲ್ತು ಸುಯ್ಯುತ್ತೊರಲ್ದುರ್ಚಿ ಗೋಮಯವಿಕ್ಕಿ
ನೆಲಕ್ಕುರುಳ್ವವೋಲ್!
ತೋಳ್ಮೊದಲನಂಗಯ್ಗಳಿಂ
ಚಪ್ಪರಿಸಿ, ತೋರ ತೊಡೆಗಳನಪ್ಪಳಿಸಿ, ಚಿಮ್ಮಿ
ಪುಟನೆಗೆದು ಕುಪ್ಪಳಿಸುತಟ್ಟಹಾಸಂಗೆಯ್ದು
ನಿಮಿರಿ ನಿಂತನು ಚವರಿಮೀಸೆಯ ಮುಗುಳ್ನಗೆಯ
ವ್ಯಾಯಾಮ ವ್ಯಸನಿ. ತೆಕ್ಕನಲ್ಲಿಂದೊಯ್ದರಾ
ಕಾಳೆಗದ ಗೂಳಿಗಳ ದಡಿಗ ದೇಹಂಗಳನ್
ರಾಕ್ಷಸ ಭಟರ್. ಮತ್ತೆ, ನೋಡುತಿರ್ದಿರ್ದ್ದಂತೆ,
ಪುಗಿಸಿದರ್ ಪೊಚ್ಚಪೊಸ ಕಾಡಾನೆಯೊಂದನಾ
ದೈತ್ಯಸಿಂಹನ ಮೃತ್ಯುಸಮ್ಮುಖಕೆ. ಉಸಿರ್ ಕಟ್ಟಿ
ಕಂಟಕಿತಮಾಯ್ತಂಜನಾಸುತನ ಕೌತುಕಂ.

ಮುಂದೆ ಏನ್ ಎಂಬನಿತರೊಳ್ ತಿಂದು ತೇಗಿತಾ
ಪ್ರಶ್ನೆಯಂ ನಡೆದ ಘಟನಾದ್ಭುತಂ:
                                        ರೋಷದಿಂ
ಘೀಂಕರಿಸಿ ರಂಗಮಂ ಪೊಕ್ಕಾ ಮದದ್ವಿಪಂ
ಬೆರ್ಚಿ ನಿಂದುದು ಘಕ್ಕನೆಯೆ, ಮುಂದೆ ಆಕಳಿಸಿತೆನೆ
ದೈತ್ಯದೇಹಪ್ರಪಾತಂ! ಕೀಲಿಸಿತು ದಿಟ್ಟಿ.
ಕೀಲಿಸಿತು ನೆಲಕೆ ಕಾಲ್. ಕೀಲಿಸಿತು ಮನಕೆ ಮೆಯ್.
ಕೀಲಿಸಿತುಸಿರ್. ಕೀಲ್ಗೊಂಬೆಯೋಲಿರ್ದುದಾನೆ,
ಒಂದೆರಳ್ ಮೂರ್ ಚಣಂ. ಕೆಂಬೆಳಕಿನಾ ಮಾಯೆ
ತಳಿದ ಮಂಕಿಂದೊಯ್ಯನೆಚ್ಚತ್ತು ತಿಳಿದವೋಲ್
ತಲೆಯೊಲೆದು, ಸೊಂಡಿಲಂ ತೊನೆದು, ನಿಡು ಪನೆಗಳಂ
ತೂಗಿ, ಮೊರಗಿವಿಗಳಂ ಬೀಸಿ, ಘೀಳಿಟ್ಟೊಡನೆ
ಮುನ್ನುಗ್ಗಿ ಹೋರಾಡಲನುವಾದುದಾ ಹೋರಿ
ಹೇರಾನೆ. ನಿಶ್ಚಲಂ ನಿಂದು ಕಣ್‌ಬೆಸೆದಿರ್ದ
ಮಲ್ಲರಕ್ಕಸನದಂ ಕಂಡು, ಬಂಡೆ ಮಂಡೆಯ
ಗದೆಯ ತೋಳಿನ ವಜ್ರಮುಷ್ಟಿಯಿಂ ಗುದ್ದಿದನ್
ಪಣೆಗೆ. ಪೆಟ್ಟಿಗೆ ಸೆಡೆತು ಚೀರಿದಾ ಮದಹಸ್ತಿ
ಮತ್ತೆ ಸೊಂಡಿಲನೆತ್ತಿ ನುಗ್ಗಿತು, ಮಲೆತು ಕೆರಳಿ,
ತನಗೆಣೆಯ ಗಾತ್ರದ ನಿಶಾಚರನ ತನುಗಿರಿಯ
ಸಾನುವಪ್ರಕ್ರೀಡೆಗೆಂಬಂತೆ. ದಂತಾಸಿ
ಕೀಸಿತಾತನ ತೊಡೆಯ ಮೊರಡಿಯಂ. ಗಜಘಟಾ
ಕುಂಭಸ್ಥಲಂ ಥಿಕ್ಕಿ ಹೊಡೆದುದು ಹೊಕ್ಕುಳೆಡೆಗಾ
ಜಟ್ಟಿಗನ ಹೊಡೆಗೆ. ಮೇಣಿಭಕರಂ ಪಗೆಯೊಡಲ
ನೇಮಿಯಂ ಸುತ್ತಲೆಳಸಿಯುಮದರ ಬಿತ್ತರಕೆ
ಬೇಸರುತ್ತಿರೆ, ರಕ್ಕಸನ ಬಾಹು ಪೆಣೆದುದಾ
ಹಸ್ತಿ ಹಸ್ತಕೆ; ತನ್ನ ಮಸ್ತಕವನೊತ್ತಿದನ್
ಹಸ್ತಿ ಮಸ್ತಕಕೆ; ಮತ್ತೊಂದು ಕಯ್ಯಿಂದದರ
ರದಮಂ ತುಡುಕುತದುಮಿದನ್. ಹೆಪ್ಪುಗಡುವವೊಲ್
ವಾರಣಪ್ರಾಣಮಾರ್ದುರ್‍ಪ್ವರೆಗೆ ಪದಂಗೊಟ್ಟು
ನಟ್ಟು ಚಿಮ್ಮಿದನಚಲ ಭಾರಮಂ. ಕೋಡುಡಿದು,
ಮುಂಗಾಲ್ಗಳೆದ್ದು, ಹಿಂಗಾಲ್ಗಳುಂ ತತ್ತರಿಸಿ,

ಬೆನ್ನಡಿಯಾಗಿ ಬಿದ್ದುದು ಮದದ್ವಿರದಮೊಳ್ಕಿ
ಕೆನ್ನೆತ್ತರಂ. ಮತ್ತೆ, ಕೇಳ್, ಮೇಲೆಳ್ದುದಿಲ್ಲಾ
ಮಹಾಪ್ರಾಣಿ!
ನಿಡುಸುಯ್ದನಾಂಜನೇಯಂ: "ದಿಟಂ,
ಇನ್ನನ್ನರೊಂದು ನೆರಮಿರೆ ಅಜೇಯಮೆ ವಲಂ
ಈ ಲಂಕೆ! ಈ ದೈತ್ಯನನ್ನೆಂತು ಗೆಲ್ಲುವೆವೊ
ಮುಂದೆ? ಧರ್ಮಮೆ ಸಹಾಯಂ ನಮಗೆ!" ಚಿಂತೆಯಿಂ
ಪೊರಮಟ್ಟನಲ್ಲಿಂದೆ, ಪಾತಾಳಮಂ ಪೊಕ್ಕು
ಬರ್ದುಕಿ ಬಂದವನಂತೆವೋಲ್. ಅರಿಲ್ವಟ್ಟೆಯಂ
ಸಮೀಕ್ಷಿಸಿದನರಿಯೆ ಪೊಳ್ತಂ: ಮಿನುಗುತಿರ್ದತ್ತು
ಮೃಗಶಿರಂ ಪಶ್ಚಿಮವರ್ತಿಯಾಗಿ. ಮಿರುಗಿದುವು
ಉತ್ತರದ ಬಾನ್‌ಬಿತ್ತಿಯೊಳ್ ಸಪ್ತಋಷಿಗಣಂ.
ಏರ್ದ ತಿಂಗಳ್‌ಜೊನ್ನಮಂ ಮರ್ಬುಗೈದತ್ತು
ಹೊಗೆಯ ಹಿಟ್ಟಿನ ಮಾಗಿಮಂಜು. ದೇವಿಯ ದೆಸೆಗೆ
ಕುದಿಕುದಿದು, ಹುಡುಕಿ ನಡೆದನು ಬೇಗಬೇಗನೆ
ಸಮೀರಾತ್ಮಜಂ.
ಗೃಹದಿಂದೆ ಗೃಹಕೆ, ನೋಟದಿಂ
ನೋಟಕ್ಕೆ, ಶ್ರದ್ಧೆಯಿಂದೊರ್ಮೆ ಶಂಕೆಯಿನೊರ್ಮೆ,
ರೋಷದಿಂದೊರ್ಮೆ ರೋಸುತ್ತೊರ್ಮೆ, ಹೇಸಿಗೆಯ
ಕಾಣ್ಕೆಗಳಿಗವಚರುತ್ತೊರ್ಮೆ, ಮಹಿಮಾಸ್ಪದದ
ದೇವಭಕ್ತಿಯ ಧರ್ಮದೃಢತೆಯ ಮಹೋದಾರ
ವೈಭವಕೆ ಬಗೆವೆರ್ಚುತುತ್ಸಾಹಗೊಳುತೊರ್ಮೆ
ತರತರದ ಭಾವಾನುಭವಗಳಿಂ, ಕಾವ್ಯದೊಳ್
ಪ್ರವಹಿಪ ನವರಸಂಗಳೊಳ್ ತೇಲ್ವ ಸಹೃದಯಂ
ತುತ್ತತುದಿಗೆಂತು ರಸಸರ್ವಕೆ ಸಮಾಧಿಯಹ
ಶಾಂತಕೆ ಸಮೀಪಿಸುವನಂತು, ಸಾರ್ದನು ಬಳಿಗೆ
ವಿಭೀಷಣ ನಿಕೇತನಕೆ. ಸಾತ್ವಿಕ ಸುಗಂಧದಿಂ
ಸ್ವಾಗತಂ ಬಯಸಿ, ವೀಣಾಮೃದುಲವಾಣಿಯಿಂ
ಪಾಡುತೆ ಸುಖಾಗಮನ ಗೀತೆಯಂ, ಹೃದಯಮಂ
ತೆರೆವವೋಲ್ ಸನ್ನೆಯಿಂ ಕರೆವವೋಲ್ ಶೋಕಮಂ
ಮೀಂಟಿ ಬಾಳಿನ ಗೋಳನೊರೆವವೋಲಿರ್ದುದಾ

ಶ್ರೀಮಂತ ಮಂದಿರ ಶ್ರೀ. ಕದಲಿಸಿತು ಕಂಪು
ಹನುಮ ಹೃದಯದ ವಜ್ರಮಂ ಕಣ್ ಪನಿಯುವಂತೆ
ತಂತಿಯಿಂಪಿಗೆ ಕರಗಿತಂತಃಸ್ಮೃತಿಯಲಂಪು.
ಪಶುಪಕ್ಷಿ ನಾನಾ ಅಮಂಗಳಾಕೃತಿಗಳಂ
ತಳೆಯುತೊಂದಾದ ಮೇಲೊಂದನೆಂತುಂ ಪುಗಲ್
ಸಮರ್ಥನಾಗದೆ, ಮನದಿ ಸಂತೋಷಿಸಿದನಲ್ಲಿ
ಕಲ್ಪಿಸಿ ಶುಭಸ್ನೇಹಮಂ. ದೇವಿ ಜನಕಜೆಗೆ,
ದಶರಥ ಕುಮಾರಂಗೆ, ಕಪಿಕುಲ ನರೇಂದ್ರಂಗೆ,
ಮೇಣಂಜನಾ ಮಾತೃದೇವಿಯ ಮಗಂಗೆನಗೆ
ದೊರೆಕೊಳ್ವುದಿಲ್ಲಿ ಸಜ್ಜನಸಂಗಮೆನುತ್ತಾ
ಸಮೀರಜಂ, ತಾಳುತೋಂಕಾರ ಶುಭರೂಪಮಂ,
ಪೊಕ್ಕನು, ವಿಪಂಚೀಕ್ವಣನ ಸಂಗಿ ತಾನಾಗಿ,
ಆ ವಿಭೀಷಣ ವೇಶ್ಮಮಂ.
                    ಕತ್ತಲೆಯೆ, ಬೆಳಕೆ,
ಚಿತ್ತಮಿಂದ್ರಿಯಮಾದವಂಗೆ? ನೋಡಲೆಳಸಿದೊಡೆ
ಕಣ್ಣಾಗಿ, ಕೇಳಲೆಳಸಿದೊಡೆ ಕಿವಿಯಾಗಿ, ಮೇಣ್
ಜನದ ಮನದಂತರಂಗವನರಿಯಲವರಾ
ಮನಃಪ್ರಚೋದನೆಯಾಗಿ ಸುಳಿದನಲ್ಲಿ ಅನೇಕ
ಲೋಕದಲಿ. ಕಂಡಾ ಕಲೆಯ ನಯದ ಅಭಿರುಚಿಯ
ಸಂಯಮದ ಸಾತ್ವಿಕಕೆ ಸೊಗಸುತ್ತೈತರುತಿರಲ್
ಮುಂದೆ ಮೆರೆದುದು ದೃಶ್ಯಮೊಂದತಿಸುಂದರಂ:
ಚೆಲುವೆ ಅನಲಾ ಕನ್ಯೆ, ಮಗಳಾ ವಿಭೀಷಣಗೆ,
ರತ್ನ ಕಂಬಳ ಚಿತ್ರ ವೇದಿಕೆಯ ಮೇಲಿರ್ದು
ಮೀಂಟಿದಳ್ ತಂತಿಯಿಂಚರವೊನಲ್‌ಬೀಣೆಯಂ,
ಮಂದಿರದ ಮರದ ಮಣ್ಣಿನ ಜಡಪದಾರ್ಥಗಳ್
ಪ್ರತಿರಣಿಸುವೋಲ್. ನಾದರೂಪಿ ಮರುತಾತ್ಮಜಂ
ಮೋದಮೂರ್ಛೆಗೆ ಸಂದನವ್ಯಕ್ತ ಶೋಕಮಯ
ಸ್ವರಸುಖವನೀಂಟಿ. ಬಳಿಯೊಳೆ ವಿಭೀಷಣನ ಸತಿ
ಸರಮೆ ಕುಳ್ತಿರಲನತಿದೂರದೊಳವಂ ತನ್ನ
ಮಗಳ ಕಲೆಯಂ ಮೆಚ್ಚಿ, ಕಣ್‌ಮುಚ್ಚಿ, ಕಿವಿದೆರೆದು
ಸವಿಯುತಿರ್ದನು ನಿಶ್ಚಲಂ. 'ಲಂಕೆಗತಿಥಿಗಳೊ?'

ಎಂಬ ಶಂಕೆಗೆ ಸೋಲ್ತು ನೋಡುತಿರೆ ಪವನಜಂ,
ಬೀಣೆ ನಿಂತುದು ತೆಕ್ಕನೆಯೆ; ಬೆಚ್ಚಿದಳ್ ಕುವರಿ;
ಸುತ್ತ ನೋಡಿದಳಾರ ಬರವನೊ ನಿರೀಕ್ಷಿಸುವ
ತೆರದಿ. ಕಣ್‌ತೆರೆದ ತಂದೆಯ ಪ್ರಶ್ನೆಯಿಂಗಿತಕೆ
'ಆರೊ ಬಂದಂತಾದು'ದೆನೆ, ಮಗಳ ಮಾತಂ
ಸಮರ್ಥಿಸುತೆ ತಾಯ್ 'ದಿಟಂ; ಪುಳಕಿಸುತ್ತಿದೆ ನನ್ನ
ತನು' ವೆನಲ್, ಮುಗುಳುನಗೆ ನಕ್ಕನ್ ವಿಭೀಷಣಂ;
ಧ್ವನಿಯ ಗಾಂಭೀರ್ಯಕ್ಕೆ ಗಾಳಿಯ ಮಗನ ಮನದ
ಗೌರವಮರಳಲೊರೆದನಿಂತು: "ಸೋಜಿಗಮೇಕೆ?
ದಿವ್ಯಕಲೆಯೆಲ್ಲಿರ್ದೊಡಲ್ಲಿಗೈತಹರಲ್ತೆ ದಲ್
ಪಗಲಿರುಳ್ ವಿಶ್ವಮಂ ಸಂಚರಿಸಿ ರಕ್ಷಿಸುವ
ಸತ್‌ಶಕ್ತಿಗಳ್, ದೇವತಾತ್ಮಗಳ್? ನಮ್ಮವೋಲ್
ಅವರುಂ ರಸಪ್ರಿಯರ್. ನಮಗಿಂ ಮಿಗಿಲ್! ರಸಮೆ
ಅವರುಣ್ಬಮೃತಮಲ್ತೆ?"
"ಮನಮೇಕೊ ಬೆಚ್ಚುತಿದೆ!
ಸುಖವೊ ದುಃಖವೊ ತಿಳಿಯೆನೆದೆಯನಳ್ಳಾಡುತಿದೆ!"
ಎಂದ ಮಗಳಿಗೆ ತಂದೆ:
"ನಿನ್ನ ಸಂಗೀತಮುಂ
ಲೋಕ ಶೋಕವನೆಲ್ಲಮಾಲಿಪರ ಹೃದಯದೊಳ್
ಕದಡುವೋಲಿರ್ದತ್ತು. ವತ್ಸೆ, ಹರಯದ ಮಹಿಮೆ
ಅಂತುಟೆ ವಲಂ!"
ಸರಮಾದೇವಿ ಪತಿಯಂ ಕುರಿತು:
"ಅಶೋಕವನಿಕಾ ಮಧ್ಯೆ ರಾಮನ ತಪಸ್ವಿನಿಯ
ಕಂಡಾ ಮೊದಲ್ಗೊಂಡು, ಮೇಣಾ ಮಹೀಯಸಿಯ
ವಾಗಮೃತಧಾರೆಯಂ ಸವಿದಾ ಮೊದಲ್ಗೊಂಡು
ಅನ್ಯಳಂತಿಹಳೆಮ್ಮ ಕನ್ಯೆ!"
ಮರುತಾತ್ಮಜನ
ಮನದೊಳಾಸೆಯ ಬಿಸಿಲ್ ಪೊಳಪನುಜ್ಜಳಿಸಿದಾ
ಮಾತುಗಳ್ ಕವಿಸಿದುವು ದುಗುಡದ ಮುಗಿಲ ಮಬ್ಬಿನ್
ದೈತ್ಯವರ್ಯನ ಮುಖ ಪ್ರಸನ್ನತೆಗೆ! ಸಂಕಟದ
ಛಾಯೆ ತಂದೆಯ ಕಣ್ಗೆ ಸುಳಿದುದನರಿತು, ಇಂತು

ಅನಲಾ ಕುಮಾರಿ:
"ಬೊಪ್ಪಯ, ಮುಚ್ಚುವಿರೆ ನನಗೆ
ನಿಮ್ಮಾತ್ಮಮಂ ಸುಡುತ್ತಿರ್ಪಳಲ ಬೇಗೆಯಂ?
ನನಗಿನ್ ಮಿಗಿಲ್ ದುಃಖಿಗಳ್ ನೀಮ್, ಧರಾತ್ಮಜೆಯ
ದೆಸೆಗೆ! ಮರುಗಿಹಿರಿ ನೀಂ ಪಿರಿಯಯ್ಯಗಾಗಿಯುಂ;
ಮತ್ತೆಮ್ಮ ಕುಲಕೆ ಕೀರ್ತಿಗೆ ದೇಶದವನತಿಗೆ
ಧರ್ಮಾಭ್ಯುದಯಕಾಗಿಯುಂ. ಅರಸನೋಲಗದಿ
ನಿಮಗೆ ನಿಮ್ಮಣ್ಣಂಗೆ ಮೇಣಿತರ ಮುಖ್ಯರಿಗೆ
ನಿಚ್ಚಮುಂ ನಡೆವ ಚರ್ಚೆಯ ತೋಟಿಯೇಂ ನಮಗೆ
ತಿಳಿಯದೆಂಬಿರೆ?. . . ನಿನ್ನೆ ಸಂಜೆ, ಲಂಕೆಗೆ ಲಂಕೆ
ಕಂಡುದಾ ನೋಟಮಂ. ಬಿಳ್ದುದೊಂದುರಿವರಿಲ್
ನಗರದುತ್ತರ ಗಿರಿಯ ನೆತ್ತಿಯಲಿ!. . . ದೇವಿಯನ್,
ಆ ನನ್ನ ಗುರುದೇವಿಯನ್, (ಒಯ್ಯನಿಟ್ಟಳ್ ಕಯ್ಯ
ವೀಣೆಯನ್, ಗದ್ಗದವನೆಂತಾದೊಡಂ ಸಂಯಮಿಸಿ;
ಕಣ್ಬನಿಯನೊರಸಿದಳ್ ಸೆರಗುದುದಿಯಿಂ. ಮತ್ತೆ)
ನಿರ್ಭಾಗ್ಯೆಯನ್ ಮರಳಿ ಪತಿಯೆಡೆಗೆ ಕಳುಹದಿರೆ,
ಲಂಕೆಗಿನ್ ಸುಖಮೆಲ್ಲಿ? ಲಂಕೆಗಿನ್ ಶುಭಮೆಲ್ಲಿ?
ಲಂಕಿಗರ್ ನಮಗೆ ನೆಮ್ಮದಿಯೆಲ್ಲಿ?. . . ಬೊಪ್ಪಯ್ಯ,
ಮಿಡಿಯಲೊಲ್ಪನೆ ನುಡಿಯುವೀ ನನ್ನಿನಿಯ ಬೀಣೆ
ಮಿಂಟಲೀಗಳ್ ಮುನಿದು ಪರಿತಪಿಸುತಿದೆ; ಸುಯ್ದು
ಶಪಿಸುತಿದೆ! ನೀಮಿಂದು ಕೇಳ್ದುದೆಂಬುದುಮದರ
ಗಾನಮಲ್ತುನುರೋದನಂ!. . . ಕೇಳಿಮಿನ್ನುಮಾ
ಓಂಕಾರದಾಲಾಪನೆಯ ತೀಕ್ಷ್ಣಸಂಕಟಂ
ತುಂಬಿದೋಲಿದೆ ಮನೆಯ ತುಂಬಿಯಂ!" ಮೂವರುಂ
ಅಚ್ಚರಿಯಿನಾಲಿಸುತ್ತಿರೆ, ಒಯ್ಯನೊಯ್ಯನೆಯೆ
ದೂರ ದೂರಂ ನಡೆದುದಾ ನಾದಮಶ್ರುತಂ
ಸ್ಮೃತಿಮಾತ್ರಮಾಗಿ!
"ಇನ್ನನ್ನರಿಂ ಕ್ಷೇಮಿಯೀ
ಲಂಕಾ ಕನಕಲಕ್ಷ್ಮಿ!" ಎನ್ನುತಲ್ಲಿಂ ಮುಂದೆ
ನಡೆಗೊಳುತ್ತಾಂಜನೇಯಂ ಏರ್ದನುತ್ತಮ
ತ್ರಿಕೂಟಮಧ್ಯಮ ಶಿಖರ ಶಿರಕಾಗಿ. ಬರಬರುತೆ

ದರ್ಶನಕಗುರ್ವಿದುದು, ಪರ್ವತಂಬೋಲ್, ಬಂಡೆ
ಬಂಡೆಯ ಮಸೆದು ಬೆಸೆದು, ಕೋಟಾವಲಯ ಭಿತ್ತಿ.
ಕಾಣ್ಬುದೆ ತಡಂ ತಿಳಿದನರಮನೆಯೆಂದು ದೈತ್ಯ
ರಾಜೇಂದ್ರನಾ. ನೋಣಂ ಸುಳಿದೊಡಮದಂ ಬೆಳಗಿ
ತೋರ್ಪಂತೆ, ಮೇಲಿಕೆಳಗೆತ್ತಲುಂ ಮೆರೆದತ್ತು
ಸುತ್ತಿ ನೆಯ್ದಾ ಸೊಡರ ಶೈಲಿ. ಪೆರ್ಬಾಗಿಲಂ
ಕಾವಲಲೆಯುವ ಕೈದುಕಾರನ ತನುಚ್ಛಾಯೆ
ಮಂದಮಂದಂ ಚಲಿಸಿದುದು ಧೀರಗತಿಯಿಂ,
ಬೃಹದ್‌ಭೀತಿಯೋಲ್, ಭಿತ್ತಿಪಟದಲ್ಲಿ! ಮಸ್ತಕದಿ
ಮೆರೆದುದುಕ್ಕಿನ ಶಿರತ್ರಂ; ಹಸ್ತದಿ ಶತಘ್ನಿ.
ರಕ್ಷಿಸಿತ್ತಾ ಭೀಮದೈತ್ಯನ ಶರೀರಮಂ,
ಖರ್ಪರಂಬೋಲ್ ಪೆಣೆದು, ಮುಳ್ಳುಮುಳ್ಳಿನ ಮೊನೆಯ
ಕಣೆವೆತ್ತ ಸರಪಣಿಯ ವೃಶ್ಚಿಕಾಂಕಿತ ತನುತ್ರಂ.
ಬೆನ್ಗೆ ಭೀಕರಮಾಗಿ ಬಾಗಿದುದು ಕರ್ಬುನದ
ಬಿಲ್, ಬತ್ತಳಿಕೆವೆರಸಿ. ನೇಲ್ದು ಕಟಿಯಿಂ ಖಣಿಲ್
ಖಣಿಲೆಂದು ಕರ್ಕಶಸ್ವನಂಗೆಯ್ದುದಾಭೀಳ
ದೀರ್ಘಖಡ್ಗಂ, ಕಡಿವವೋಲ್ ಕುಳಿರ್ದಿಂಗಳಾ
ಚಳಿಮೌನಮಂ. ವಾಮಭುಜದಿಂ ಜಗುಳ್ದತ್ತು
ವೀರತೂರ್ಯಂ, ನಿದ್ರೆಗಂಕುಶವೆನಲ್ ನಗರ
ರಕ್ಷಕರಾ.—
ಇಂತು ವೃಶ್ಚಿಕರೋಮನಾ ಮಹಾ
ದ್ವಾರಪಾಲಕನಿರ್ಪುದಂ ದೂರದಿಂ ನೋಡಿ,
ಅರಿತನತಿ ಮಾಯಾವಿಯೆಂದು. 'ಪೊಕ್ಕಪೆನೆಂತೊ
ವಂಚಿಸೀ ಮಾಯಾಪ್ರವೀಣನಂ? ತಗದಿವನ
ಕೂಡೆ ಬಹಿರಂಗ ಘರ್ಷಣಂ. ಬಾಯ್ಗಿಟ್ಟನೆನೆ
ಪೆಗಲೆಳಲ್ವಾ ಭೀಮತೂರ್ಯಮಂ, ಕಿಡುವುದಾ
ರಾಮಕಾರ್ಯಂ. ಮಸುಳಿದಪುದಮಿತ ಹೃತ್ಕಮಲ
ಚೈತ್ರಸೂರ್ಯಂ!' ಚಿಂತಿಸುತೆ ತರಿಸಂದನೊಂದು
ಹರುವಂ. ಮಿದುಳ್ಗೆ ಸಂಮೋಹನ ಭ್ರಾಂತಿಯಂ
ತೀವಿ, ಪುಸಿನಿದ್ದೆಯಿಂ ಪ್ರಜ್ಞೆಯಂ ಮಳ್ಗಿ ಪೋಲ್
ಕಳ್ಗಾಳಿಯಾಗಿ ತೀಡಿದನವನ ನಾಸಿಕದ

ಸೀಮೆಯೊಳ್. "ಇದೇನಿಂದು ಎಂದಿಲ್ಲದೀ ನಿದ್ದೆ?
ಕಣ್ ಭಾರಮಾಗುತಿದೆ? ಕುಗ್ಗುತಿದೆ ಕಾಲ್‌ಬಲ್ಮೆ!
ಮಾಗಿಯಾಗಮನದ ಮಹಿಮೆಯಲ್ತೆ?" ತನ್ನೊಳಗೆ
ತಾಂ ಗೊಣಗುತಂತು ವೃಶ್ಚಿಕರೋಮನಾಯೆಡೆಯೆ
ಕುಳ್ತಿತೊಯ್ಯನೆ ನೆಲಕ್ಕೊರಗಿದನು, ಮರಸೊಂದಿದೋಲ್.
ಪೊಕ್ಕನಣುವಂ ಸತೀತಸ್ಕರನ ಲೋಕಮಂ,
ಭಾಸ್ಕರ ಕುಲದ ತಪಸ್ವಿನಿಯೆಡೆಯ ಮಾರ್ಗಿತಕೆ
ಧರ್ಮಕಾರ್ಮುಕಮೆಚ್ಚ ಮಾರ್ಗಣದವೋಲ್. ನೃಪನ
ಸದ್ಮಮಂ ಬಳಸಿದುಪವನದ ವಿಸ್ತೀರ್ಣಮಂ
ಕಂಡುಬ್ಬಿದನು, ಅದೆ ವಿಭೀಷಣನ ಸತಿಯೊರೆದ
ಅಶೋಕವನಮಿರಲಪ್ಪುದೆಂದು. "ಕಾಣ್ಬೆನೈಸಲೆ
ಇಲ್ಲಿ ಆ ದೇವಿಯಂ!" ಎಂಬುದಂ ನೆನೆನೆನೆದು,
ಕುದಿಕುದಿದು, ತವಕಿಸಿದನನಿಲಾತ್ಮಜಂ, ಕಾಂಬ
ಕಾತರದಿ. ಬನಚೆಲ್ವನೊಂದಿನಿತು ಗಮನಿಸದೆ,
ಪರಿಮಳಂಗಳನಿನಿತು ಲೆಕ್ಕಿಸದೆ, ಸೀತೆಯಂ
ನೋಡುವ ನಿರೀಕ್ಷಣೆಗೆ ತನ್ನಂ ನಿವೇದಿಸುತೆ
ಸಂಭ್ರಮಿಸುತಿರೆ ವನಚರಂ ಕಂಡನೊಂದಲ್ಲಿ
ದೇವಕುಟಿಯಂ. ಕಂಡು ಬಳಿಸಾರ್ದದಂ ಪುಗಲ್
ಕುಶಲ ಸುಂದರ ಶಿಲ್ಪಮಯದಮೃತರಚನೆಯಿಂ
ಚಿತ್ತಕೆ ಪವಿತ್ರತೆಯನೊಡರಿಸುತ್ತಿರ್ದುದಂ,
ಹನುಮದೇವಂಗಾದುದೊಂದತಿ ನವಾನುಭವ
ಸಂತೃಪ್ತಿ. ಬುದ್ಧಿಗೆ ಅತೀತಮಂ ಭಾವದಿಂ
ಗ್ರಹಿಸಿ. "ಇಲ್ಲಿಯೆ ವಲಂ ಪೂಜ್ಯೆಯಿಹಳಾ ದೇವಿ!
ಅಲ್ಲದಿರೆ ನನಗೇತಕೀ ಅಕಾರಣಂ ಸುಖಂ?
ಹಿಂದೆಲ್ಲಿಯುಂ ಲಂಕೆಯೊಳ್ ನನಗೆ ಈ ಪರಿಯ
ಪುಣ್ಯಾನುಭವಮಾದುದಿಲ್ಲ. ಕಾಣ್ಬೆನೀಗಳೆ
ನನ್ನ ಸಾಗರ ಲಂಘನದ ಗಗನ ಸಾಹಸದ
ಗಂತವ್ಯ ಲಕ್ಷ್ಮಿಯಂ!" ಎಂದೀಕ್ಷಿಸುತ್ತಿರಲ್,
ಹೃದಯದಾನಂದಮೆ ಘನೀಭವಿಸಿ ತೋರ್ದುದೆನೆ
ಮುಂದೆಸೆದಳೊರ್ವ ಮಹಿಳಾಮೂರ್ತಿ, ಪುಷ್ಪಮಯ
ಶಿವಶಿವಾಣಿಯರಮಲ ವಿಗ್ರಹಂಗಳ ಚರಣ

ತಲದಿ ಶಿರಂಬಾಗಿ. ಸಂಭ್ರಮ ಮತ್ತ ನೇತ್ರದಿಂ
ನೋಡಿದನು ಬೆಳ್ಪುಡೆಯನುಟ್ಟಾ ಕೃಶಾಂಗಿಯಂ,
ಶೋಕಾರ್ತೆಯಂ, ದೀನೆಯಂ, ಪುಣ್ಯಮುಖಿಯಂ,
ಸಗದ್ಗದೋತ್ಕಂಠೆಯಂ. 'ರಾಮಚಂದ್ರಂ ಗೆಲ್ಗೆ!'
ಎಂದುಗ್ಗಡಿಸುವ ಚಪಲತೆಗೆ ಕಡಿವಣವಿಕ್ಕಿ,
ಕೇಳ್ದನಾಕೆಯ ದನಿಯ ದೈನ್ಯಮಂ:
"ಕರುಣೆಸಯ್
ಭುವನಗುರು, ಓ ಆರ್ತಜನ ಕಲ್ಪತರು, ಪತಿಗೆ
ನೀಡಾತ್ಮ ಶಾಂತಿಯಂ. ಮತಿಗೆ ಮಂಗಳಮೆಸಗು.
ನೀಡೆನಗೆ ಪತಿಭಿಕ್ಷೆಯಂ. ಹೇ ಮನ್ಮಥಾರಿ,
ಮದನಚಿತೆಗೆನ್ನ ಪತಿ ಬೇಳ್ವೆಯಾಗದ ತೆರದೆ
ರಕ್ಷಿಸೆನ್ನಯ್ದೆತನಮಂ. ತಾಯೆ, ಗಿರಿಜಾತೆ,
ಕಲ್ಯಾಣಿ, ನೀಂ ತಪಂಗೈದೆಂತು ಪಡೆದೆಯೋ
ನಿನ್ನೆರೆಯನಂ, ನಾನಂತೆ ಪಡೆವವೋಲೆನ್ನ
ಮನದನ್ನನಾತ್ಮಮಂ ಕೃಪೆಗೆಯ್, ಫಲಪ್ರದೇ.
ಕೊನೆಗಾಣಿಸೀ ಸಂಕಟದ ಬೆಂಕೆಸಂಕೋಲೆಯಂ;
ಪೊರೆ ನಿನ್ನ ಬಾಲೆಯಂ!"
ಪೆಣ್ಕೊಂಚೆಯಂತೆವೋಲ್
ಇಂತು ಆಕ್ರಂದಿಸುತೆ ದೇವದಂಪತಿಯಡಿಗೆ
ಮತ್ತಮೆರಗಿದಳಬಲೆ, ಶೋಕದ ಸಿಡಿಲ್ ಬಡಿದು
ಬೀಳ್ವಂತೆ! ಸಹಿಸಲಾರದೆ ತಾಯಳಲ್ಕೆಯಂ,
ರಾಮ ಸಂಪ್ರೀತೆಯಂ ಸಂತೈಸಲೆಂದೆಳಸಿ,
'ರಾಮಚಂದ್ರಂ ಗೆಲ್ಗೆ! ಜನಕ ನಂದಿನಿ ಬಾಳ್ಗೆ!'
ಎಂದುಗ್ಗಡಿಸಿದುದೆ ತಡಂ ಚೀರಿದಳ್ ಮಹಿಳೆ,
ಬ್ರಹ್ಮಚಾರಿಗೆ ಬೆಳ್ಪಮರ್ವಂತೆ. ಬೆಬ್ಬಳಿಸಿ,
ತಪ್ಪಿದೇನೆಸಗಿದೆನೊ ನಾನೆನುತೆ, ಮಿಳ್ಮಿಳನೆ
ನೋಡುತಿರೆ ಬೆಪ್ಪುಬಡಿದಾಂಜನೇಯಂ, ಕದಂ
ತೆರೆದುದೊಯ್ಯನೆ; ಪೊಕ್ಕನೊರ್ವಂ ಸ್ಫುರದ್ರೂಪಿ
ತಾನಭಯಸ್ವರೂಪಿ! ಆ ಗಾತ್ರಕ್ಕೆ, ತೇಜಕ್ಕೆ,
ಶೃಂಗಾರ ಶೀಲ ವಿನಯದ ರಸಿಕ ಪೌರುಷಕೆ,
ಸೂತ್ರಕಾಂಚನದಂಚಲದ ಪೀತಾಂಬರದ

ಸಿರಿಯುಡೆಯ ಕೂಡೆ ಪಡಿಮಲೆತಿರ್ದ ರಾಜತೆಗೆ
ಮಾರುತಿಯ ಮೂಕ ವಿಸ್ಮಯಮುಲಿಯುತಿರ್ದುದು
ತನಗೆ ತಾನೆ: ಇವನಾರ್? ಈತನಾರ್? ಈ ಮಹಾ
ಪುರುಷನಾರ್? ನಾಂ ಕಾಣೆನಿನ್ನೆಗಮ್ ಇವಂಗೆಣೆಯ
ಓಜಸ್ವಿಯಂ!
ಮಂದಿರದ ಮೌನಮದುರಿದುದು
ಬಂದವನ ದರ್ಪಧ್ವನಿಯ ಬಿರುಬಿಂಗೆ: "ಕಾಂತೆ,
ನಿನ್ನದೇನೀ ಭ್ರಾಂತಿ? ಪಲದಿನಗಳಿಂದಮಾಂ
ಶಾಂತಿಯೆಂಬುದನರಿಯೆ ನಿನ್ನ ದೆಸೆಯಿಂ! ಭ್ರಮೆಗೆ
ಮಾರುವೋಗಿದೆ ನಿನ್ನ ಬುದ್ಧಿಸ್ಥಿರತೆ. ರಾಜ್ಞಿ
ನೀನಾಗಿಯುಂ ಕ್ಷಾತ್ರಮಂ ತ್ಯಜಿಸಿ ಜೀವಿಸಿಹೆ
ನಿರ್ಲಜ್ಜೆಯಿಂ. ನನ್ನನುಂ ಸೆಳೆಯಲೆಳಸುತಿಹೆ
ನಿಸ್ತೇಜತೆಗೆ. ನಿನ್ನ ಬಿಸಿಮಿದುಳ್ ಕುದಿಯಿಸುವ
ಪುಸಿಭೀತಿಯಿಂ ನಿನ್ನನೆಂತುಂ ಪೊರೆಯಲೆಂದು,
ನಿದ್ದೆಗೆ ತಿಲಾಂಜಲಿಯನಿತ್ತು, ಬಂದೆನಿಲ್ಲಿಗೆ
ಕಾಪಿರಲ್! ಈ ಬನದೊಳಿಂದಿಲ್ಲಿಗಾರುಮನ್
ಬರದವೋಲಾಣತಿಯನಿತ್ತಿಹೆನ್. ಪೂಜೆಗೆಯ್
ಶಾಂತಮನದಿಂ. ನಾನೆ ಕಾವಲಿರೆ ನಿನಗದೇಂ
ಭೀತಿ! ಚೀರ್ದುದದೇಕೆ? ಕಂಪಿಸುತ್ತಿಹೆಯೇಕೆ
ಪೇಳ್, ಪ್ರಿಯೆ?" ಕಂಠಸ್ವರದ ಕರುಣರೋಷಕ್ಕೆ
ನಡುಗುತಿರೆ ನೀರವತೆ, ನಡುಗುತಂತೆಯೆ ಕಾಂತೆ
ಮುಡಿಮಣಿದೊರೆದಳಿಂತು: "ಪೋದ ಬಯ್ಗುಂಬೊಳ್ತು
ಕೆಡೆದ ಉಳ್ಕೆಯ ಅಶುಭಮಂ ಪರಿಹರಿಸಲೆಂದು
ಪರಮೇಶನಂ ಪ್ರಾರ್ಥಿಸಲ್ ಬಂದೆನಯ್, ಪ್ರಭೂ.
ನಿನಗೆ ಸೈಪಂ ಬೇಡುತಿರಲಾರೊ ಬಳಿಯೊಳೆಯ
'ರಾಮಚಂದ್ರಂ ಗೆಲ್ಗೆ! ಜನಕ ನಂದಿನಿ ಬಾಳ್ಗೆ!'
ಎಂದು ಸುಸ್ಪಷ್ಟಮುದ್ಘೋಷಿಸಿದವೋಲಾಯ್ತು,
ಪ್ರಜ್ಞೆಗೆ ದಿಗಿಲ್ ತಗುಳ್ವಂತೆ! ಚೀರ್ದೆನೊ ಏನೊ
ನಾನರಿಯೆ, ಪ್ರಾಣಪ್ರಭೂ."
ಸುಯ್ದು, ತನ್ನೊಳಗೆ
ತಾನೆಂಬವೋಲ್: "ನಿನ್ನ ಹೃದಯಮೆ ನಿನಗೆ, ದೇವಿ,

ಕಿವಿಯಾಯ್ತು. ನಿನ್ನುಸಿರ ಹರಕೆಯನೆ ನಿನ್ನ ಕಿವಿ
ಧ್ಯಾನಸಮಯದೊಳಾಲಿಸಿತು. ಬೇರೆಯಿನ್ನೆಲ್ಲಿ
ವಾಣಿ, ಪೇಳ್, ನನ್ನ ರಾಣಿ?"
"ನಿನಗೆ ಅಶುಭವನೆಂತು
ನೆನೆಯುವೆನ್, ಜೀವೇಶ?"
"ನನಗೆ ಅಶುಭವನಲ್ತು
ಅವರ್ಗೆ ಶುಭಮಂ."
"ಸರ್ವರ್ಗೆ ಶುಭಮಿರ್ಕೆ, ಪ್ರಭೂ.
ಕಲ್ಯಾಣ ಕಲ್ಪತರು ಲೋಕಗುರು, ಶಿವನಿದಿರ್
ಪ್ರಾರ್ಥನೆಗೆ ಕಾರ್ಪಣ್ಯಮೇಕೆ?"
"ಶುಭಮಿತ್ತಪನ್,
ತನ್ನಿಚ್ಛೆಯೋಲ್; ನಿನ್ನಿಚ್ಛೆ ನನ್ನಿಚ್ಛೆಯಂತಲ್ತು!. . .
ಸೀತೆಯನ್ ನೀನ್ ಕಂಡುದುಂಟೇನ್?"
"ಕಂಡಿಹೆನ್!
ಕ್ಷಮಿಸು. ನಿನ್ನಾಜ್ಞೆಯಂ ಮೀರ್ದಳಲ್ತಾದೊಡಂ,
ನನಗೆ ದರ್ಶನಮಿತ್ತಳಾ ಪೂಜ್ಯೆ!"
"ಆ ಪೂಜ್ಯೆ
ನಿನಗೆ ದರ್ಶನಮಿತ್ತುದೇಂ ಸ್ವಪ್ನಲೋಕದೊಳ್?"
"ಅಲ್ತಲ್ತು, ಅಶೋಕವನದೊಳ್!"
"ಎಂತೊ? ಅಂತು ನೀಂ
ಕಂಡುದು ದಿಟಂ!"
"ದಿಟಂ." "ಕೆಟ್ಟೆನಾನ್!" "ಶಿವಶಿವಾ
ತೊಲಗಲಿ ಅಮಂಗಳಂ!"
"ಕೆಟ್ಟೆನಾನ್! ಕೊಂದೆ ನೀಂ!
ಹಿಂದೆಂದು ಸೋಲರಿಯದೆನ್ನಮ್, ಮಯ ಕುಮಾರಿ,
ನೀಂ ಸೋಲಿಸಿದೆ, ಶುಭಕೆ! ಕೇಳ್, ದೇವಿ, ಪೇಳ್ದಪೆನ್.
ರಣರಂಗಮಾಗಿರ್ಪುದೆನ್ನ ಹೃದಯಂ ಹಿತಕೆ
ಮೇಣ್ ಪ್ರಿಯಕೆ, ರುಚಿಗೆ ಮೇಣ್ ಶುಚಿಗೆ; ನಿನ್ನ ಮುಂದಿರೆ
ನಿನಗೆ, ಮೇಣಾಕೆಯಂ ನೆನೆಯಲಾಕೆಯ ಸುಖದ
ಸಂಗಕ್ಕೆ!"
"ನಿನ್ನೊಡನೆ ನಾನುಮ್ಮೆತಂದಪೆನ್,

ಮನದನ್ನ, ನಡೆಯಿಂ ಅಶೋಕವನಕೀಗಳೆಯೆ!''
''ಚಂದ್ರನಖಿಗೊರೆದಿಹೆನ್. ನಾಳೆ ಸೂರ್ಯೋದಯಕೆ
ಹೋಹೆನೊರ್ವನೆ, ಕಡೆಯ ಸೂಳ್. ನಿನ್ನ ರಾವಣನ್
ಕೆಮ್ಮನೆಯೆ ಸೋಲ್ವನೆಂದರಿಯದಿರ್, ಮಂಡೋದರಿ!''
ಕಾಮರೋಷಧ್ವನಿಯ ಕಠಿನತೆಗೆ ಸೆಡೆಯುತಿರೆ
ಸತಿಯಳ್ಕಿ, ತುಳ್ಕಿದುದು ವಿಕೃತಿ ದಶಶಿರಮುಖದ
ಮೆಯ್ಸಿರಿಗೆ. ಓಡಿದಳೆನಲ್ಕೆ ಮುಂದಕೆ ನುಗ್ಗಿ
ಕಾಲ್ಗಳಂ ತಬ್ಬಿದಳ್; ಬಳ್ಳಿಯಾದಳು ಮರಕೆ;
ಹೂವಾದುದವಳುಸಿರ್: ''ಬೇಡ ಬೇಡೀ ಹಠದ
ಸಾಹಸಂ, ರಾಜೇಂದ್ರ. ರುಚಿಗೆ ಕೈಕೊಂಡುದಂ
ಛಲಕೆ ಮುಂಬರಿಪುದೇಂ ಸುಖವೆ, ಸರಸವೆ, ಮತಿಯೆ,
ಸಚ್ಚರಿತ್ರವೆ, ಜೀವಿತೇಶ್ವರ? ಪತಿವ್ರತೆಯ
ಸುವ್ರತದ ಮಹಿಮೆಯಿಂ ಸಂಯಮವನೆರ್ದೆಗೊಳಲ್
ಸೋಲೆಂಬರೇನದಂ ಸುಕೃತಮತಿಗಳ್? ಶಿವಕೆ
ಶರಣಾದರದು ಸೋಲೆ? ಆ ಗೆಲ್ಗೆ ಮಿಗಿಲೊಳದೆ
ಬೇರೆ ಗೆಲ್ಲಂ? ಇಂದ್ರವಿಜಯಿಗಿಂ ನೂರುಮಡಿ
ವೀರವಿಕ್ರಮಿಯಲ್ತೆ ಇಂದ್ರಿಯ ವಿಜಯಿ? ಬರಿಯ
ಈ ಬಿಂಕದಂಕಮಂ ತೊರೆ. ಸೋಲು ಸತ್ಯಕ್ಕೆ;
ನಮಗದುವೆ ಗೆಲ್. ಸೋಲು ಧರ್ಮಕ್ಕೆ; ನಮಗದುವೆ
ಗೆಲ್. ಸೋಲ್ ಒಲವಿಗದುವೆ ಸಾಮ್ರಾಜ್ಯಸಂಪದಂ
ನಮಗೆ ದಲ್!''
ಭಾವಭಾರಕೆ ನಸುಮಣಿದ ನೃಪನ
ನೇತ್ರದಿಂ ಬಿಸುಗಣ್ಬನಿಗಳುದುರುತಿರೆ ಸತಿಯ
ನೆಗಹಿದ ಮೊಗಕ್ಕೆ: ''ಸೋಲಂ ಬಯಸಿ ಪಡೆಯುವುದೆ
ಕ್ಷಾತ್ರತೇಜಂ? ದಯಿತೆ, ಬೀರರ್ಗೆ ಬಯಕೆ ಗೆಲ್;
ಸೋಲಲ್ತು. ನಿನ್ನರಕೆ, ಆ ನನ್ನ ಸೋಲ್, ತನಗೆ
ತಾನ್ ಬಂದಪುದೆ ಬರ್ಕೆ... ಸೀತೆಯನ್ ಮೊದಮೊದಲ್
ಚೆಲುವಿಗೊಲಿದೆನ್. ಮಸುಳಿಸಿದಳದನ್, ತೊರೆದು ನಲ್
ಉಣಿಸು ಮೀಹಂಗಳಂ... ಛಲಮೆ ಮೋಹಿಪುದಿಂದು
ನನ್ನ ಛಲಮಂ... ನನಗುಮೀಗಳಿನ್ನೊಂದಳ್ಕು...
ಹಿಂದಣಂದದೊಳಿಂದು ಮತ್ತೆಮತ್ತಾಕೆಯಂ

ನೋಡುತಿಲ್ಲಾಂ. ಭೀತಿ ತಲೆದೋರುತಿಹುದೆನಗೆ,
ಕರುಣೆಯಿಂದೆಲ್ಲಿ ದೃಢತೆಗೆ ಭಂಗ ಬಂದಪುದೊ
ಎಂದು. ಅವಳೊಂದು ಕಡೆ, ನೀನೊಂದು ಕಡೆ, ಮತ್ತೆ
ಆ ವಿಭೀಷಣನೊಂದು ಕಡೆ, ನನ್ನ ಚಿತ್ತಮಂ
ಚಲಿಸುತಿರ್ಪಿರಿ, ಮದನ ಧೈರ್ಯದ್ರುಮದ ಬೇರ್ಗೆ
ಬೆನ್ನೀರನಡಕಿ. ಆದೊಡೇಂ? ಗೃಹವೈರಿಗಳ್
ಗೆತ್ತು ನಿಮ್ಮನಿಬರಂ, ರಾಮನನ್ನೆಂತಂತೆ,
ಗೆಲ್ವೆನೆಂಬುದೆ ನನ್ನ ಪೂಣ್ಕೆ!... ಅದೇನಾ ತೂರ್ಯ
ನಿಸ್ವನಂ? ಭಯಚಕಿತಮೆಳ್ಚರಿಸುವಂತೆವೋಲ್
ಮತ್ತೆಮತ್ತೊದರುತಿದೆ...''
ಪೊಳ್ತಿನಿತನಂತರಂ
ಮಾಯೆ ತಿಳಿದೆದ್ದ ವೃಶ್ಚಿಕರೋಮನಾಶಂಕೆ
ಕೈತವವನೂಹಿಸಿತು ತನಗೊದಗಿದಾ ಸ್ಥಿತಿಯ
ಸೋಜಿಗಕೆ. ತುಡುಕಿ ಹೆಗಲಿನ ತುತ್ತುರಿಯನೂದಿದನ್,
ಒಂದು ಸೂಳ್, ಎರಡು ಸೂಳ್, ಪಲವು ಸೂಳ್! ಲಂಕೆ ತಾಂ
ಬೆಚ್ಚಿ ಕೇಳ್ದತ್ತದಂ. ಬೀದಿಯನಲೆವ ಶುನಕ
ಸಮುದಯಂ ಬಳ್ಳಿಕ್ಕಿದುವು ಕೂಡೆ. ಪತ್ತನದ
ಕೋಲಾಹಲಂ ಪೆರ್ಚಲಿರುಳ ಕಾಪಿನ ದಳಂ
ಚಕಿತಮಾಯ್ತಿರ್ಮಡಿಸಿದೆಳ್ಚರಿಕೆಯಿಂ. ಓಡೋಡಿ
ತನ್ನೆಡೆಗೆ ಬಂದ ಕಾವಲ್ ಪಡೆಗಳೊಡೆಯರಿಗೆ
ಕಟ್ಟಾಜ್ಞೆಯೊರೆದನರಮನೆಯ ದೌವಾರಿಕಂ
ವೃಶ್ಚಿಕರೋಮನಿಂತು:
''ಶಂಕೆ ನನಗಿಹುದಾರೊ
ಮಾಯಾವಿ ಪುರಕೆ ಪೊಕ್ಕಿಹನೆಂದು. ಶೋಧಿಸಿಮ್
ಲಂಕಾ ಸಮಸ್ತಮಂ. ಮೂಲೆ ಮೂಲೆಯನಿರದೆ
ಸೋವಿ, ಮಾಯಾ ಮಂತ್ರತಂತ್ರಮೆಲ್ಲಂದದಿಂ
ಪುಡುಕಿನೋಳ್ಪುದು. ಸಹಜಮಲ್ಲದ ನಿದ್ದೆಯಡಸಿ
ನನ್ನನಿನ್ನೆಗಮೇಗಳುಂ ವಂಚಿಸಿದುದಿಲ್ಲಿಂತು!''
ದಶಗ್ರೀವನೊಡನೊಡನೆ ಕೇಳ್ದನಾ ತೂರ್ಯಮಂ
ಸುಗ್ರೀವನನುಚರಂ. ತಿಳಿದನದರರ್ಥಮಂ.
ಜಾನಿಸಿದನೊರ್ ಚಣಂ ಮುನ್‌ಗೆಯ್ವುದಂ: ತನ್ನ

ಚರಣ ತಲದೆಡೆ ನಾಲಗೆಯನುಳಿದ ಬಿನ್ನಪದ
ಮಾಳ್ಕೆಯಿಂದಿರ್ದ ಮಂಡೋದರಿಯ ಜಡೆಗಳಂ
ಸೊಗಸಿ ನೋಳ್ಪಂತಿರ್ದ ಲಂಕೇಶ್ವರನ ಮೇಲೆ
ಮುನ್ನ ಮನದೊಳಗಿರ್ದ ಮುನಿಸು ನಸು ಕಾವಾರಿ,
ಸತಿಯ ಸನ್ನಿಧಿಮಹಿಮೆಗೆಂಬಂತೆವೋಲ್, ಕರುಣೆ
ಕಣ್ಮಲರಿದುದು ಹನುಮಹೃದಯದಲಿ! "ಈ ಸತಿಯ
ತನುಮನವ ಪಡೆದವಗೆ ಆ ಸತಿಯ ಊ ಸತಿಯ
ಮೋಹಮೆಂತುಟೊ? ಮದನನಲ್ತಿದಕೆ ವಿಧಿಯಲಾ
ಕಾರಣಂ! ಏ ತೇಜಮೇ ಗತಿಗೆ ವಂದಪುದೊ
ಇಂದ್ರಿಯದ ದೌರ್ಬಲ್ಯಮೊಂದಿರಲ್? ತ್ರೈಭುವನ
ಗೌರವಕೆ ಯೋಗ್ಯನೀಪರಿ, ಮಕ್ಕಳಳುವಂತೆ
ಕೈಸೇರದಿರೆ ಬಯಸಿದೊಂದು ಬಣ್ಣದ ಗೊಂಬೆ,
ರೋದಿಪುದನಾರಾದೊಡಂ ಕಾಣ್ಬರೇಂ? ಕಂಡೆ
ನಾನ್! ಕಂಡ ನಾನಿವಂಗಿನ್ ಮುಳಿವೆನೆಂತುಟೊ
ಮೊದಲ್ ಮುಳಿದವೋಲ್? ಪ್ರಜೆಗಳಿದಿರ್ ಬಹಿರಂಗದೊಳ್,
ವೈರಿಗಳ ಮುಂದೆ ರಣರಂಗದೊಳ್, ತೋರ್ಪನೇನ್
ಈ ಶಿಥಿಲ ಅಂತಸ್ಥಮಂ?. . . ಪೂಜ್ಯೆ ಈ ಸತಿಗೆ
ತನ್ನ ಪತಿಯಾತ್ಮದುದ್ಧಾರ ಕಾರ್ಯದೊಳಿಂದು
ನೆರವಾಗದಿರ್ದೊಡಾಂ ಧರ್ಮಚ್ಯುತಂ. ನನ್ನ
ಬಂದ ಕರ್ತವ್ಯಕವಿರುದ್ಧಮಂ ಗೈದು, ಮೇಣ್
ಚೋದಿಸುವೆನನುಕೂಲಮಂ! ಸತಿಯ ಕೇಳ್ದುದಂ
ಮತ್ತೊರ್ಮೆಯುಲಿವೆನ್ ದಶಗ್ರೀವನಾಲಿಪೋಲ್!
ಭ್ರಮೆಯೆಂದುದನ್ ಪ್ರಮೆಯನಾಗಿಪೆನ್!"

ಮತ್ತೆ

ಮಂದಿರಂ ಮೊಳಗಿತಾ ಧ್ವನಿಮೃದಂಗಸ್ತನಿತ
ಮಂದ್ರದಿಂ, ಮೊದಲೆ ತುತ್ತುರಿದನಿಗೆ ಕಿವಿನಿಮಿರಿ
ಕೇಳುತಿರ್ದಾ ದೈತ್ಯ ದಂಪತಿಗಳಿರ್ವರುಂ
ಬೆರಗಾಗುವೋಲ್, ಪತಿಯನಪ್ಪಿ ತಳ್ಕೈಸುವೋಲ್:
"ರಾಮಚಂದ್ರಂ ಗೆಲ್ಗೆ! ಜನಕನಂದಿನಿ ಬಾಳ್ಗೆ!"
ಸ್ತಂಭದಿಂದುಣ್ಮಿದುದೊ? ಕುಡ್ಯದಿಂ ಪೊಣ್ಮಿದುದೊ?
ಬೋದಿಗೆಯಿನವತರಿಸಿದುದೊ? ಕೆತ್ತಿದಾನೆಯಿಂ

ಬಂದುದೋ? ಶಿಲ್ಪಶುಕಮುಲಿದುದೋ? ವಚಿಸಿದುವೊ
ಚಿತ್ರಕರ್ಮಂಬೆತ್ತ ದೈತ್ಯಕುಲ ದೇವತಾ
ಮೂರ್ತಿಗಳ್? ಮೇಣದ್ಭುತಮ್, ಶಿವಶಿವಾಣಿಯರೆ
ಅರ್ಚಿತಪ್ರತಿಮೆಯಿಂದುಚ್ಚರಿಸಿದರೊ ಎನಲ್ಕೆ
ಆ ವಾಣಿ ಮೇಲಿಂದೆ, ಕೆಳಗಿಂದೆ, ಅಲ್ಲಿಂದೆ,
ಇಲ್ಲಿಂದೆ, ಸುತ್ತಣಿಂದೆತ್ತಣಿಂದುಲಿಬಲೆಯ
ಬೀಸಿದುದು ಸಿಕ್ಕಾಗಿ ಹಾಸುಹೊಕ್ಕಾಗಿ, ಕಿವಿ
ಕಣ್ಗೆಟ್ಟ ಮೀನಾಗುವೋಲ್ ಕೇಳ್ದರಿರ್ವರಿಗೆ!
 ನಕ್ಕನಾ ರಾವಣಂ, ಒಳ್ಕಿದಳ್ಕಂ ನಕ್ಕು,
ನಗೆಯಿಂದದಂ ದಮಿಸುವಂತೆ. ಧರ್ಮಭೀತಿಗೆ
ಬೆರಗಿನುಡುಗೆಯ ತೊಡಿಸುತಿಂತು ಮಂಡೋದರಿಗೆ
ಸಂತೈಕೆಯಂ:
 "ಭ್ರಾಂತಿ ಸಾಂಕ್ರಾಮಿಕಂ, ರಾಜ್ಞಿ!
ನಿದ್ದೆಯಡಸಿದ ನನ್ನ ಮಿದುಳಿಗುಂ ಸೋಂಕುತಿದೆ
ನಿನ್ನ ಮಿದುಳಿನ ಮರುಳ್ ಬಿಸುಪು! ನೀನಿತ್ತುದಾ
ದುರುಳ ಸೂಚನೆಯೆಂತು ಮರಳಿ ಮೈದೋರಿದುದು,
ಕಂಡೆಯಾ! ನಮ್ಮ ಬಗೆ ನಮಗೆ ಪಗೆ! ಪೋಗುವಂ
ಬಾ, ದೇವಿ, ನಿದ್ದೆಯಮರ್ದಿನ ಮರ್ದನೀಂಟಲ್ಕೆ!
ಬೇಡ, ಬಿಡು ಭೀತಿಯಂ. ಪುಸಿಯಳ್ಕನಾಚೆಗೊಗೆ.
ಲಂಕೆ ಆರ್ಗಂ ಪುಗಲ್ಕಸದಳಂ. ಕೇಳ್ದಿಯೇನ್
ಆ ತೂರ್ಯನಾದಂಗಳಂ? ಮಾಯಾಸಮರ್ಥರಾ
ನಮ್ಮ ರಕ್ಷಾದಳಂ. ಕಾಯುತಿದೆ ಪಗಲಿರುಳ್.
ನಮ್ಮ ಈ ವಿದ್ಯಾತ್ಮಕದ ದುರ್ಗಕಾರೆಂದೆ
ರಕ್ಷಕಳ್? ಸಾಮಾನ್ಯಳಲ್ತು ಲಂಕಾಲಕ್ಷ್ಮಿ.
ಆ ದೇವಿ ರಕ್ಷೆಯಾಗಿರೆ ಭಯಂ, ಭಯಮಲ್ತು,
ನಾಸ್ತಿಕತೆ! ಬೆದರದಿರ್. ಹೃದಯಕಿನ್ನುಂ ಶ್ರದ್ಧೆ
ಮೂಡದಿರೆ ನಿನಗೆ, ಇದೊ ಆಣತಿಯನಿತ್ತಪೆನ್,
ನಿನ್ನ ಸಂಶಯ ಹರಣಕಾಗಿ, ಲಂಕೆಯನಿರದೆ
ಗೋರಿ ಸೋವಲ್ ಶಂಕೆ ಸಾವನ್ನೆಗಂ! ದೇವಿ,
ಬಾ, ಪೋಗುವಂ." ಮೆಲ್ಲನೆತ್ತಿದನು ಮಡದಿಯಂ.
ತೋಳ್ಸಿಡಿಲ ಪಂಜರದಿ ತನ್ನ ಮೊದಲೊಲ್ಮೆಯಂ
ತೂಗಿ ಒಯ್ದನು ಉಯ್ಯಲೆಗೆ ಬಿಳಿಯ ಓಕುಳಿಯ!

## ಸಂಚಿಕೆ ೨

# ವನಮಂ ಪೊಕ್ಕನಶೋಕಮಂ

ಅಶೋಕವನಮಿರ್ಪ ತಾಣವನರಸಿ ತೊಳತೊಳಲಿ
ಚರಿಸಿ, ಕಾಣದೆಲ್ಲಿಯುಮಯೋನಿಜೆಯ ನೆಲೆಯಂ,
ಶಿಶಿರ ನಿಶಿಯವಸಾನದಾಸನ್ನತೆಯ ವೆತೆಗೆ
ಹೊತ್ತಿ, ಹನುಮನ ಚಿಂತೆ ಚಿತೆಯಾಯ್ತು. ಕಿಡಿಕಿಡಿಯೆ
ಮೂಡು ಬಾನೊಳ್ ಮೂಡಿ ಹೆಡೆಯೆತ್ತಿದಾ ರಾಶಿ
ವೃಶ್ಚಿಕಂ ಮಸುಳಿದುದು ಹೊಗೆಮಂಜಿನೈಕಿಲಿನ
ಸೋನೆಯಲಿ. ಪಥ ಪಥದೊಳಲ್ಲಿಯಿಲ್ಲುಳಿದಿರ್ದ
ದೀಪ ರಾಜಿಗಳೆಲ್ಲ, ಬಿಂದು ರೂಪದ ತಮ್ಮ
ಕಾಂತಿಕೇಂದ್ರವನುಳಿದು, ಪರಿವೇಷನೇಮಿಯನೆ
ಮುಸುಗಿಟ್ಟು ನಿಂದುವು, ಹಿಮಾಸಾರ ಸಾಂದ್ರತೆಗೆ
ನಿಸ್ತೇಜಮಾಗಿ. ಮಾಗಿಯ ಮಂಜು ಲಂಕೆಯಂ
ಸುತ್ತಿದುದು, ಮುತ್ತಿದುದು, ಲಗ್ಗೆನುಗ್ಗೊಳವೊಕ್ಕು
ನೊಣೆದು ನುಂಗಿದುದಖಿಲ ದೃಗ್ವಿಷಯಮಂ. ಭಟರ್,
ವೃಶ್ಚಿಕರೋಮನಿತ್ತ ಲಂಕೇಶನಾಜ್ಞೆಯಂ
ಪೊತ್ತು ನಗರವನೆಲ್ಲ ಸೋಸುತರಸುತ್ತಿರ್ದ
ಶಸ್ತ್ರಾಸ್ತ್ರ ಸಜ್ಜಿತ ಭಯಂಕರ ಭಟರ್, ತಮ್ಮ
ಕಟಿಯ ಖಡ್ಗದ ಖಣತ್ಕಾರಂಗಳಿಂ ಮತ್ತೆ
ಕಾವಲೆಚ್ಚರ್‌ವುಲಿವ ತುತ್ತುರಿಯ ದನಿಗಳಿಂ
ಬೆಚ್ಚಿಸಿದರನ್ಯರವ ಶೂನ್ಯದಾ ನಿಶ್ಶಬ್ದ
ನಿಶೆಯ ಹೈಮ ವೃದ್ಧಾಪ್ಯಮಂ. ಇಚ್ಛಾರೂಪಿ
ಆಂಜನೇಯಂ ಒರ್ಮೆ ಕಣ್ಣಾದನಿನ್ನೊರ್ಮೆ
ಕಿವಿಯಾದನಾಲಿಸಿದನಾಲೈಸಿದನ್; ಹೊಂಚಿ

ಪರಿಶೀಲಿಸುತ್ತೊಯ್ಯನೊಯ್ಯನೆಯೆ ಮುಂಬೊಕ್ಕು
ಏರ್ದನ್ ತ್ರಿಕೂಟಾಚಲ ನಿತಂಬಮೆನಲುಬ್ಬಿ
ರತಿಯಿಂಪನೆರ್ದೆಗೊಳಿಸುತಿರ್ದ ಜಗತಿಯ ಪೆಸರ
ಕೆಮ್ಮಣ್‌ವೆಟ್ಟಮಂ, ಅಶೋಕವನಿಕಾ ಮಧ್ಯೆ
ಕಡಲ ದಡಕನತಿ ದೂರಸ್ಥಮಂ. ಸಾಗರದ
ಘೋಷಮುಂ ಕಿವಿಗೆ ಬರೆ ಶೋಕಮುಕ್ಕಿತು ಮನಕೆ
ನೆನವಾಗಲಾ ಕಪಿಬಲ ನಿರೀಕ್ಷೆ, ಮೇಣಂತೆ
ಸುಗ್ರೀವ ರಾಮರುತ್ಕಟ ಘೋರ ಸಂಕಟದ
ಕಿಷ್ಕಿಂಧೆಯಾಶಂಕೆ, ಮೇಣ್ ದೇವಿಯಾ ಅನಿರ್
ವಚನೀಯ ದುಃಖನಾರಕತೆ:
"ತೆರೆಮೊರೆಯಲ್ತು;
ಇದು ಅಗಲ್ಕೆಯ ಕಡಲ ಕರುಳ ನೋವಿನ ಕರೆಯ
ನರಳಲ್ತೆ? ದೇವಿ ಸೀತೆಯ ಕಂಠಮೂಕತೆಗೆ
ಪ್ರತಿಮೆಯೋಲ್ ಪ್ರತಿನಿಧಿಯವೋಲುಲಿಯುತಿದೆ ಈ
ಸರಿತ್ಪತಿಯ ವ್ಯಾಕುಲ ಸಲಿಲ ಜಿಹ್ವೆ. ಕೋಪವೋ
ಕನಿಕರವೊ? ಮೂದಲಿಕೆಯೋ ಮುನಿಸೊ? ಅಥವಾ
ರಹಸ್ಯವನೊರೆದು ಪ್ರಚೋದಿಸುವ ಸಂಕೇತವೋ?
ಹೇ ಅಂಬುನಿಧಿ, ನಿನ್ನನುತ್ತರಿಸಿ ಬಂದೆನ್ನ
ಸಾಹಸಂ ಸಫಲಮಪ್ಪಂತೆನಗೆ ಕರುಣಿಸಯ್
ಸೂರ್ಯದೇವನ ಕುಲದ ಸೂರ್ಯನ ಸತೀಮಣಿಯ
ಪುಣ್ಯಸಾಕ್ಷಾತ್ಕಾರಮಂ. ವನಮಶೋಕಮಂ
ಕಾಣೆನಿನ್ನುಂ. ಶ್ರವಣಮುಖದಿಂದಮಾ ವಾರ್ತೆ
ಬುದ್ಧಿಗೋಚರಮಾದೊಡಂ ಸಿದ್ಧಿಗೋಚರಂ
ತಾನಾದಳಿಲ್ಲಮಿನ್ನುಂ ದೇವಿ. ಚರಿಸಿದೆನ್;
ಅರಸಿದೆನ್; ಸೋವಿದೆನ್ ಪತ್ತನ ಸಮಸ್ತಮಂ;
ಕಂಡೆನದ್ಭುತ ದೃಶ್ಯ ಬಹುಳಂಗಳನ್; ಅರಿದೆನ್
ಮಹಾವ್ಯಕ್ತಿಗಳ ಬಲಾಬಲ ಸೂಕ್ಷ್ಮ ಪರಿಚಯ
ಮಹದ್ವಿಷಯಮನ್; ಕಂಡೆನಖಿಲ ಗೌಣಂಗಳಂ,
ಕಂಡೆನಿಲ್ಲೊಂದನಾ ಪ್ರಾಧಾನ್ಯಮಂ. ಕಣ್ಗೆ
ಕಾಯುತಿಹ ಚೆಲ್ವಿನೋಲಂಧತೆಗೆ ರೋಸುತಿದೆ
ರಜನೀಶ್ರಮಂ. ಹೇ ಅನಂತತಾ ಪ್ರತಿರೂಪಿ,

ಓ ಶರಧಿ, ಬೋಧಿಸೆನ್ನೀ ಮಂಜು ಮುಸುಗಿರ್ಪ
ನಿಶೆಯವೋಲಿಹ ಮತಿಗೆ ಮಿಸುನಿವೆಳಗಿನ ಉಷೆಯ
ಮುಂಗಾಣ್ಕೆಯಂ! ಹತಳಿರಲಿ, ಮೃತಳಿರಲಿ; ಮತ್ತೆ
ಬರ್ದುಕುವ ತಪದ ತೀವ್ರತೆಗೆ ತವಿದು ಸುಕ್ಕಿರಲಿ;
ಎಲ್ಲಿರಲಿ, ಎಂತಿರಲಿ, ಕಂಡೆನಲ್ಲದೆ ನನ್ನ ಆ
ಸುವ್ರತಾ ಭಗಿನಿಯಂ ಬಿಡೆನೀ ದಶಗ್ರೀವ
ಸೀಮೆಯಂ.''
ಅಂತು ತನ್ನೊಳಗೆ ತಾಂ ಮುಂದನ್
ಆಲೋಚಿಸುತೆ ನಿಶ್ಚಲಂ ನಿಂದ ಹನುಮನ ಕಿವಿಗೆ
ಭೋಂಕನೆಯೆರಗಿದತ್ತು ಜಗತಿ ಶೈಲವನಡರಿ
ಪುಡುಕಿ ಬರ್ಪಿರುಳ ಕಾವಲ್ಪಡೆಯ ನೈಶಚರ
ಸೈನಿಕರ ಸಕ್ರಮದ ಸಮುದಾಯ ಪದಹತಿಯ
ಲೌಹ ಘೋಷಂ. ನಿಮಿರಿ ನಿಂದಾಲಿಸಿದನಾ
ನಿಮಿಷ ನಿಮಿಷಕೆ ಬಳಿಗೆ ಬಳಿಸಾರುತಿರ್ದುದಂ.
ಸಾರೆ ಬರೆವರೆ ಲೋಹರವಮಂ ಮೀರಿ ತೂರಿ
ಕೇಳಿ ಬಂದತ್ತವರ ಸಂಭಾಷಣೆಯ ದನಿಯ
ಕರ್ಣಾಮೃತಂ:
''ದೇವಿಯಂ ಲಂಕಿಣಿಯನೆಮ್ಮ
ನಗರ ರಕ್ಷಾಲಕ್ಷ್ಮಿಯಂ ಗೆಲ್ದು ಲಂಕೆಯಂ
ಪೊಕ್ಕಿರ್ಪನೆನೆ, ದಿಟಂ, ಸಾಮಾನ್ಯನಲ್ಲನಾ
ಮಾಯಾಸಮರ್ಥಂ!''
''ಇನ್ನೆಗಮಾ ತ್ರಿಶೂಲಮಂ
ಇದಿರ್ಚಿ ಬರ್ದುಕಿದರಿಲ್ಲ. ಭೇದಿಸಿಹನೆಂತುಂ
ಅಭೇದ್ಯಮಂ! ಮುರಿದಿಹುದೆ ಶೂಲದ ಬೃಹದ್ಬಲಂ,
ನಕ್ಷತ್ರನೇತ್ರ?''
''ಅಲ್ತಲ್ತು. ಕೊಂಕಿಹುದದರ
ಋಜುತೆ!''
''ದೇವಿಯ ಮುಖಂ ಲಂಕೆಗೆ ವಿಮುಖಮಾಯ್ತೆ?''
''ವಿಮುಖಮಾಗಿಹುದೊಂದೆಯಲ್ತು. ತೇಜಂಗೆಟ್ಟು
ಜಡತೆಯಾಂತಿರ್ಪುದಯ್! ನೋಡವೇಳ್ಕುಂ; ಬರಿದೆ
ಬಣ್ಣಿಸಿದರರದು ಬಗೆಗೆ ಬಾರದಯ್.''

"ನಮ್ಮ ದೊರೆ
ತಂದನೇತಕ್ಕೊ ಆ ಪೆಣ್‌ಮಾರಿಯಂ?"
"ನೀನ್
ಕಂಡುದಿಲ್ಲಾಕೆಯಂ! ಮೀಯದುಣ್ಣದೆ ಉಡದೆ
ಮಸುಳ್ದಿರ್ದೊಡಂ ಮಹಾಮಹಿಳೆಯಂ ನೋಳ್ಪೆ, ಬಾ,
ದೂರದಿಂ ತೋರ್ಪೆನಾಕೆಯನ್. ಎಮ್ಮನೆಡೆಗೊಳ್ವ
ಕಾವಲಿನ ಬಟ್ಟೆಯೆಡೆ ಇರ್ಪುದಾಕೆಯ ಸೆರೆಯ
ತೃಣಕುಟೀರಂ."
"ದುಶ್ಶಕುನಮಯಂ ಈ ರಾತ್ರಿ!"
"ಕಾಣ್, ಬಾ, ಅದೊಂದಾದೊಡಂ ನಿನಗೆ ಲಭಿಪುದೈ
ಶುಭದರ್ಶನಂ!"
ಇಂತು ಸಂವಚಿಸುತಾ ದಳಂ
ಪಿಟ್ಟುಮಂಜಿನ ದಟ್ಟ ಕಣ್ಕಟ್ಟಿನೊಳ್ ಮುಂದೆ
ಪರಿದತ್ತು. ವಾಣಿಮಾತ್ರರ್ ಭಟರನನುಸರಿಸಿ
ಹಿಂಬಾಲಿಸಿದನನಿಲಜಂ ತನ್ನ ಸುಕೃತಕ್ಕೆ
ಕೈಮುಗಿಯುತಾ.
ತನ್ನನರಸುತಿರ್ದವರಿಂದೆ
ತಾನರಸುತಿರ್ದರಸಿಯಿರ್ದರಸ ತೃಣಕುಟಿಯ
ಕುಟ್ಟಿಮಸ್ಥಾನಮಂ ತಿಳಿಯುತನಿಲಾತ್ಮಜಂ,
ಪತ್ತಿರಿರ್ದೆತ್ತರದ ಮರದ ನೆತ್ತಿಗೆ ಪತ್ತಿ,
ತನ್ನ ಹೊತ್ತಂ ಹೊಂಚಿ ಕಾದುಕುಳಿತನೊ ಹೊನ್ನ
ಹೊತ್ತರೆಗೆ!. . .ಆನಂದದಾವೇಶಕೆಂಬವೋಲ್
ಜುಮ್ಮೆಂದು ಪುಲಕಿಸಿತು ತನು. ತುರೀಯಮನುಭವಂ
ಕೈಸಾರ್ದುದೆನೆ ಚಿತ್ತವೃತ್ತಿಯ ನಿರೋಧದಿಂ,
ಸವಿದು ಕೃತಕೃತ್ಯತೆಯ ಮೃತ್ಯುಮಾಧುರ್ಯಮಂ,
ಜೋಂಪಿಸುತೆ ನಿದ್ದೆಗದ್ದುದು ಚೇತನಂ. ಅಶ್ರು,
ಸಂತೋಷ ತೀಕ್ಷ್ಣತೆಯ ನಿಷ್ಪೀಡನೆಗೆ ಬಿಡದೆ
ಆತ್ಮೇಕ್ಷು ಸೋರ್ವ ಅನವರತ ರಸಧಾರೆಯೋಲ್,
ತೊರೆಯೊಳ್ಕಿದುದು ಹನುಮನಕ್ಷಿಯ ಕೃತಜ್ಞತಾ
ಶತಪತ್ರದಿಂ. ಸ್ವೇದಮಯಮಾದುದಾ ದೇಹ
ವಜ್ರಂ, ಕುಳಿರ್‌ಕೋಳ್ವ ಮಾಗಿಯಿರುಳಿನ ತುದಿಯ

ಮೂಗು ಮುರಿವಂತೆ. ಸಂತೋಷಮಲ್ಲದೆ ಬೇರೆ
ಭಾವಕಿನಿತೆಡೆಯಿಲ್ಲದಾಯ್ತಾ ಮರುತ್ಸುತನ
ಚಿತ್ತದ ಘನಸಮಾಧಿ!
ಕಳೆದುವು ಮುಹೂರ್ತಗಳ್.
ಪರವಶತೆ ಮಾಣ್ದುದು. ಮರಳ್ದುದು ಮನಂ ಮತ್ತೆ
ಬುದ್ಧಿಸ್ಥಿತಿಯ ಕರ್ಮರಂಗಕ್ಕೆ. ಮರದ ತುದಿ
ಹರೆಯ ಮೇಲಿರ್ದು ಕಿವಿಯಾದನ್, ಕುಟೀರದಿಂ
ಪೊಣ್ಮುತಿರ್ದೊಂದೊಂದು ರವಕೆ ರೋಮಾಂಚನವೆ
ತನ್ನ ಭಕ್ತಿಯ ತುಳಿಲ್‌ಗಾಣ್ಕೆಯಪ್ಪಂತೆವೋಲ್.
ತನಗೊಳಗೆ ಹುಗಲಿಲ್ಲದಾ ಕಾರಣದಿ ನಿದ್ದೆ ತಾಂ
ಸದ್ದೆಗೆಡದೆಯೆ ಪೊರಗೆ ಬಾಗಿಲಂ ಕಾಯ್ವವೋಲ್,
ಮುದ್ರಿಸಿತ್ತಾ ಪರ್ಣಶಾಲೆಯಂ ಸುಯ್ಯುಸಿರ
ಸದ್ದಿಲಿತನಂ. ಗುಡಿಯೊಳಗೆ ನರಳುತಿರ್ದುದೆನೆ
ಜಾಗರಣೆ. ಈಗಳಾಗಳೆ ಪೊಣ್ಮೆಯೇರ್ದತ್ತು
ಅಬಲೆಯ ಕೊರಳ ಅಬಲರೋದನಂ. ಅನಿಲಜಂ
ಎನಿತು ಕಿವಿಗೊಟ್ಟಡಂ ಆ ನಾದಮರ್ಥಮಯ
ವಾಗ್‌ರೂಪಮಂ ಧರಿಸಲಾರದೆ ಸೋಲ್ತು, ಕಡಲ
ತೆರೆಕರೆಯ ಮೊರೆಯವೋಲಾಯ್ತು. ನಾನಾ ಚಿಂತೆ,
ದೇವ ದಾನವರಂತೆ, ಮಥಿಸಿತು ಸಮುದ್ರಮಂ
ಮರುತಜನ ಮನದಾ: "ನನ್ನುದ್ಯಮಕೆ ಗುರಿಯಿದುವೆ
ದಿಟವೆ? ಕಾಣ್ಬೆನೆ ಜನಕಜಾತೆಯಂ, ಸೀತೆಯಂ,
ರಾಮದಯಿತೆಯನಿಲ್ಲಿ? ಸಾಗರೋಲ್ಲಂಘನಂ
ಸಾರ್ಥಮಪ್ಪುದೆಯಿಲ್ಲಿ? ಸುಗ್ರೀವನಾತ್ಮಕ್ಕೆ
ತೃಪ್ತಿಯಪ್ಪುದೆ? ರಾಮನಾತ್ಮಕ್ಕೆ ನಾರಕತೆ
ತಪ್ಪುವುದೆ? ಕಪಿಬಲದ ಭಾರದಿಂದೇದುವ
ಮಹೇಂದ್ರಾದ್ರಿಯಂಚಿತ ಸಮುದ್ರವೇಲಾ ವಿಷಮ
ಉದ್‌ಗ್ರೀವತೆಗೆ ಫಲಂ ದೊರೆಕೊಳ್ಳುವುದೆ ಇಲ್ಲಿ?
ನನ್ನ ವಕ್ಷದ ವಜ್ರದೇವಾಲಯದೊಳಿರ್ಪ
ಶ್ರೀಮುದ್ರಿಕೆಗೆ ತನ್ನ ಪರಿಚಿತ ಮನೋಹರಿಯ
ಮುಖಚಂದ್ರಮಂ ಪುನರ್‌ಬಿಂಬಿಸುವ ಪೂಜೆಯಂ
ಸಲ್ಲಿಸುವ ಸೈಪಿಲ್ಲಿ ಸಿದ್ಧಿಸುವುದೇ ನನಗೆ

ಧನ್ಯಂಗೆ?. . ದುರುಳ ದಾನವ ದುರಾಶೆಯ ಬಲೆಯ
ಸೆರೆಯ ಸಂಕಟದಲ್ಲಿ ಬೇಯುವ ಪತಂಗದೋಲ್
ನಮೆವ ಸತಿಗಿಲ್ಲಿ ಗಡ ದೊರೆಕೊಳ್ಗೆ ತನ್ನಿನಿಯ
ದಾಶರಥಿಯಿತ್ತ ಸಂದೇಶ ಧೈರ್ಯಂ! ಮತ್ತೆ,
(ಪಲ್ಗಚ್ಚಿ ಪದಪದವನೊತ್ತಿ ಪೇಳ್ದನ್!) ಮತ್ತೆ,
ಧೂರ್ತಲಂಕೇಶ್ವರನ ಪಾಪದಿಂಧನಕಿಲ್ಲಿ
ಕಿಚ್ಚಿಕ್ಕುವೆನ್! (ಮೌನಮಿರ್ದೊಂದಿನಿತು ಪೊಳ್ತು)
ಎಂತೆನಗೆ ಪ್ರತ್ಯಕ್ಷಮಪ್ಪಳೋ ಆ ದೇವಿ?
ಎಂತು ಗುರುತಿಸುವೆನೋ ಆ ಪೂಜ್ಯೆಯಂ? ಎಂತು
ಮೈದೋರ್ದಪೆನ್? ಎಹಂಗೆ ನುಡಿಸುವೆನ್? ಬೆಚ್ಚದೋಲ್,
ಶಂಕಿಸದವೋಲ್, ಪೆರರ್ ತಿಳಿಯದೋಲ್, ಮೆಚ್ಚುವೋಲ್,
ಮೇಣ್ ಒಳ್ಪಿನಿಚ್ಚೆಗೆಂತುಂ ಗೆಲ್ಲಮಪ್ಪವೋಲ್
ವರ್ತಿಪೆನೆಹಂಗೆ?. . . ಚಿಂತೆಗೆ ಪೊಳೆವುದಲ್ತು. ಆ
ಆ ಕ್ಷಣಂ ಪ್ರತಿಭಾನಮೆಂತು ನಡೆಪುದೊ ಅಂತೆ
ನಡೆದಪೆನ್. ಪ್ರಾಕೃತಕೆ ಬುದ್ಧಿ; ಅಪ್ರಾಕೃತಕೆ,
ಭೂಮಕೆ, ಅನಲ್ಪಕೆ, ಮಹತ್ತಿಗೆಂತುಂ ಪ್ರತಿಭೆ
ಗುರುವಲ್ತೆ?''
ವಾಯುಜಂ ಕಾದು ಕುಳಿತಿರಲಿಂತು
ತರಿಸಂದು, ಗಿರಿಯ ನೆತ್ತಿಯನುಳಿಯುತೊಯ್ಯನೆಯೆ
ಕಣಿವೆಗಿಳಿಯಲ್ ತೊಡಗಿದುದು ಮಂಜು. ತಿಳಿಗೊಂಡ
ಬಾನೆಡೆಯ ಪಡುವಲೊಳ್ ಮಿನುಗಿದುವರಿಲ್ ಮರಳಿ
ಅರಳಿ. ಮೇಣ್, ಮೂಡಲ ಮನೋಧ್ಯಾನನೇಮಿಯೊಳ್,
ಸೂರ್ಯೋದಯದ ಸುದೂರಸ್ಮೃತಿಯವೊಲ್, ಲಸತ್
ಗೋಚರಿಸುತಿರ್ದುದು ಉಷಃಸ್ಮಿತಂ. ಇರಲಿರಲ್,
ಆ ಪ್ರಾತಃಪೂರ್ವ ಪ್ರತ್ಯುಷೆಯ ನಿಶ್ಶಬ್ದತೆಗೆ
ಸಿಳ್ಳಿರಿಯೆ ತೊಡಗಿದತ್ತೊಂದು ಮಡಿವಳವಕ್ಕಿ,
ಬಳಿಯಿರ್ದ ಪಾರಿವಾಳದ ಮರದ ಎಲೆಯಿರದ
ಹೂತ ಹರೆಯಿಂದೆ. ಮತ್ತೊಂದು ಮಾರುಲಿಯಿತ್ತು
ಹಾಡಿದುದು ಗೋರಂಟೆಯಿಂದೆ. ಮುತ್ತುಗವೇರಿ
ಕರೆದುದಿನ್ನೊಂದವರ ಒಡನಾಡಿ. ಬಕುಳದಿಂ
ಮಗುದೊಂದು ಬಾಯ್ದೆರೆದುದನಿಬರಂ ತನ್ನೆಡೆಗೆ

ಸೆಳೆಗೊಳ್ವವೋಲ್. ದನಿಯ ಹಾಸುಹೊಕ್ಕುಗಳಿಂದೆ
ನೇಯುತಿರಲುಲಿಯ ಬಲೆಯಂ ಮಡಿವಳಂಗಳ್,
ಅದೂರದಿಂದಾಲಾಪನೆಗೆ ಮೊದಲ್‌ಗೆಯ್ದುದೊರ್
ಖಂಜನಂ. ಹಿಂಬಾಲಿಸಿದುವದಂ ಒಂದೆರಳ್
ಮೂರ್ ನಾಲ್ಕುಮೈದಾರ್ಗಳೇಳೆಂಟುಗಳ್, ಇಲ್ಲಿ
ಬಿದಿರ ತುದಿಯಿಂದಲ್ಲಿ ನಂದಿಮರದಿಂದಿತ್ತ
ತೆಂಗುಗರಿಯಿಂದತ್ತ ಕೌಂಗುದಲೆಯಿಂದೆತ್ತ
ಕಿವಿಯಿತ್ತೊಡತ್ತಣಿಂದೆ. ಒಯ್ಯನೊಯ್ಯನೆಯೆ
ತುಂಬುದಿಂಗಳ ಕನಕ ಬಿಂಬಕ್ಕೆ, ಪೊನ್‌ತನಂ
ಬಾಡಿ, ಮೂಡಿದುದು ಬೆಳ್ಳಿಯತನಂ. ಬೆಣ್ಣೆವೂ
ಬಣ್ಣಮಂ ಕಣ್ಣರಿವವೊಲ್ ಮೊದಲ್, ನಸು ನಸುಕು;
ತರ್ವಾಯ ಮುತ್ತುಗದ ಪಾರಿವಾಳದ ಮರದ
ಹೂಗೆಂಪನರಿಪವೊಲ್, ಮುಂಬೆಳಕು; ಅನಂತರಂ
ಪಳದಿ ನೀಲಿಗಳಂ ಪ್ರದರ್ಶಿಸುವ ಬೆಳ್ವೆಳಗು;
ತರತರದ ತೆರೆತೆರೆಯ ಬೆಳಕಿನಾ ದಿನದ ಶಿಶು
ತಿಪ್ಪತಿಪ್ಪನೆ ಪಜ್ಜೆವಜ್ಜೆಯಿಡುತ್ತೈತಂದು
ಉದಯಾಚಲದ ತೊಡೆಯೇರ್ದುಷೆಯ ಮಡಿಲೊಳಗೆ
ತನ್ನ ತಾವರೆಗೆಂಪಿನೆಳಮೆಯ್ಯನಿಟ್ಟುದೆನೆ
ಹೊಗರಾಂತುದುದಯ ವದನಂ. ಮೂಡಲೆತ್ತಿದಾ
ಉಷೆಯ ಆರತಿಗೆ ಮಂಗಳಗಾನಮಂ ಪಾಡಿ
ಸೇಸೆಯಂ ತಳಿವಂತೆ, ಲಕ್ಷಪಲ್ಲವಿಯುಲಿವ
ಪಕ್ಷಿಯಕ್ಷತೆಯೆರಚಿದಳು ಅಶೋಕವನಿಕಾ
ಲಕ್ಷ್ಮಿ: ಗಿಳಿವಿಂಡುಗಳ್, ಕಾಮಳ್ಳಿವಿಂಡುಗಳ್,
ಪಿಕಳಾರವಿಂಡುಗಳ್ ಗೂಡು ಗೊತ್ತುಗಳಿಂದೆ
ಮುಕ್ತಕಂಠಗಳಾಗಿ ಮುಕ್ತಪಕ್ಷಗಳಾಗಿ
ಗುಂಪುಗುಂಪೆದ್ದು ಹಾರಾಡಿದುವು, ಹರ್ಷದಿಂ,
ಧ್ವನಿಚಾರು ವರ್ಷದಿಂ, ಆಲಿಸಿದಳಾತ್ಮಗಳ್
ತೊಪ್ಪನೆ ತೊಯ್ವವೋಲ್. ನಿಮಿರ್ದುದು ನವಿರ್, ಮೆಯ್ಗೆ
ಹನುಮನಾ! ಸಿದ್ಧಹಸ್ತವನೊತ್ತಿದತ್ತಾಶೆ
ಹೃದಯದೊಳ್. ತುಂಬಿದತ್ತುಸಿರ ಕೋಶಂ ಮಲರ
ಕಂಪಿಡಿದ ತಂಬೆಲರ ಪೂರೈಕೆಯಿಂ. ಕಣ್ಣರಳಿ

ನೋಡಿದನು, ಬೆಳೆವ ಎಳವೆಳಗಿನೊಳ್, ಹಿಮವಗಲಿ
ತಾನಿರ್ದ ಗುಡ್ಡನೆತ್ತಿಯ ತೋಂಟನೋಟಮಂ.
ಚಿತ್ರಕರ್ಮದ ರತ್ನಕಂಬಳಿಯವೋಲಂತೆ
ರಂಗುರಂಗಿನ ಓಕುಳಿಯನೆರಚಿದುದು ಬಗೆಗೆ
ಆ ಅಶೋಕೋದ್ಯಾನ ಕಲೆಯ ಲೋಕಂ. ಮುತ್ತುಗಳ್
ರಾಸಿ ಸುರಿವಂತೆ ನೀರ್ಬೀಳಗಳ್ ಬೆಳ್ಳಿಯೋಲ್
ಬೆಳ್ಳಂಗೆಡೆದು ಪರಿದುವಲ್ಲಲ್ಲಿ. ಪಸುರುವುಲ್,
ಪಚ್ಚೆರೋಮಾಂಚನಂ ತಾನೆಂಬಿನಂ, ಮುಚ್ಚಿ
ಅಲಂಕರಿಸಿದುದು ಪೃಥ್ವಿಯಂ. ರೋಮಮಯ ಧರೆಯ
ಕೋಮಲ ತೃಣಾಜಿನಕೆ ತೊಡಿಸಿದ ಪರಲ್ಗಳೆನೆ,
ಕಾಮಧನುಕಾಂತಿಯಿಂ ಪೊಳೆವ ಕಲ್ಬಂಡೆಗಳ್
ಕಂಡರಣೆಗೊಂಡಿರ್ದುವಲ್ಲಲ್ಲಿ. ನಡುನಡುವೆ,
ಹಳದಿಗೆಂಪಿನ ಹೊಯಿಗೆ ಹೊಯ್ದ ಬನಬೀದಿಗಳ
ದೀರ್ಘ ವಂಕಿಮ ವೃತ್ತ ಚಿತ್ರರೇಖಾಶೈಲಿ
ಚೆಲ್ವಾಯ್ತು, ಚಿನ್ನರನ್ನರಂಗೋಲಿಯೋಲ್. ಎಲ್ಲ
ಚೆಲ್ವಿಂಗೆ ಮುಡಿಯಾಗಿ, ಮರುತಜನ ಕಣ್ಗುರಿಗೆ
ಗುಡಿಯಾಗಿ, ಕಡಲ ನೀರ್ನಡೆಗೆ ನಿಲ್‌ಗಡಿಯಾಗಿ,
ಮಾರುತಿಯ ನಿಃಶ್ರೇಯಕೊಂದು ಮುನ್ನುಡಿಯಾಗಿ
ಕುಳ್ತುದೆಲೆವನೆವಕ್ಕಿ, ತನ್ನ ಬೆಚ್ಚನೆ ಗರಿಯ
ರೆಕ್ಕೆತಿಪ್ಪುಳೊಳಿಕ್ಕಿ ರಕ್ಷಿಪ್ಪವೋಲ್, ದುಃಖಿ
ಭೂಜಾತೆಯಂ!

“ಕಾಣೆನಾರುಮನ್. ಆದೊಡಂ
ಪೊದೆ ಪುಳಿಲ್ ತೆರೆತೆರೆಯ ಮರಮರದ ಮರೆಯಲ್ಲಿ
ಕಾವಲಿರ್ಪುದನರಿತು ಪರ್ಚುವೋಲದುರುತಿದೆ
ನನ್ನ ಹೃದಯಂ. ನಂಬುಗೆಯ ನಟಿಸಿ, ದೇವಿಯಂ
ವಂಚಿಸಿ ವಶಕೆ ತಾರಲಿಂತು ನಾರೀ ಹೃದಯ
ಚೌರ್ಯನಿಪುಣಂ ಗೆಯ್ದ ಮಾಟಮೆ ದಿಟಂ. ನನ್ನ
ಬಂದ ಬೇಹಿನ ಕಜ್ಜಮೆಂತುಂ ಬಯಲ್ದವೋಲ್
ಹೊತ್ತ ಹಾರುತ್ತಿಲ್ಲೆ ಕಾಯ್ದಪೆನ್, ಈ ಬೃಹದ್
ಬಾಹುಶಾಖೆಯ ಶಿಂಶುಪದ ಪತ್ರ ಸಾಂದ್ರತೆಯ
ನೀರಂಧ್ರ ರಕ್ಷೆಯಲಿ. ಬಂದೆ ಬರುವಳ್ ದೇವಿ

ಈಯೆಡೆಗೆ. ಬದುಕಿರ್ದರಿಲ್ಲಿರ್ದರೀಯೆಡೆಗೆ
ಬರದಿರಳ್ ಗಿರಿವನಪ್ರಿಯರಾಮನರ್ಧಾಂಗಿ,
ಆ ವಿಪಿನ ಸಂಚಾರ ಕುಶಲೆ. ಬಂದೆ ಬರ್ಪ್ಪಳ್
ಧ್ರುವಂ: ಪಂಚ್ಮೆರಮ್ಯಮೀ ದ್ರುಮಚಾರುಗೋಷ್ಠಿ;
ದುಮುಕುತಿಹುದಿಲ್ಲಿ ಶಿವಜಲದ ಗಿರಿನಿರ್ಝರಿಣಿ.
ಹೇಮಕೃತ ನೇಮಿಯಿಂ ಶೋಭಿಸುವ ಶಾದ್ವಲದ
ಮಧ್ಯೆ ವಿವಿಧಾಕೃತಿಯ, ಪರಮ ಶೀತಲ ಜಲದ,
ಕಂಗೊಳಿಸುತಿದೆ ಕನಕ ಸೋಪಾನ ದೀರ್ಘಿಕೆಯ
ದ್ರವರೂಪಿದರ್ಪಣಕೆ ರಚಿಸಿದಂಚೆಂಬಿನಂ
ಮುಕ್ತಾಸಿಕತ ಶೋಭೆ; ಚಂಪಕಂ, ಚಂದನಂ,
ನಾಗಚಂಪಕಮಂತೆ ಬಕುಳಂ; ಸಮೀರಣನ ಮೇಣ್
ಸಹಯೋಗ ಶಾಂತಿ. ಬಂದೆ ಬರ್ಪ್ಪಳ್, ಧ್ರುವಂ, ದೇವಿ,
ಪಾರ್ಥಿವೇಂದ್ರನ ಪತ್ನಿ, ಬದುಕಿರ್ದೊಡೀ ಶಾಂತ
ಮೇಣ್ ಕಾಂತ ಕುಂಜದೈಕಾಂತಕೆ!''
ಮನಂ ಪೊಂಗೆ
ಧ್ಯಾನ ನೈವೇದ್ಯಮಂ ನೀಡಿ ಕಪಿಕುಲಯೋಗಿ
ವಿಶ್ವದೇವರ್ಕಳಿಗೆ, ಶಿವಶಕ್ತಿಗಳಿಗೆ ಮೇಣ್
ಅಂತರ್ಯಾಮಿ ಸಚ್ಚಿಂತೆಗಳಿಗೆ ಕಯ್ಮುಗಿದು
ಬೇಡಿದನ್ ಮತ್ತೆ: ''ಹೇ ಕಲ್ಯಾಣ ಕೃತಿಗೆಯ್ವ
ಪುಣ್ಯಸನ್ಮತಿಗಳಿರ, ಕಲ್ಲವೊಲ್ ಮರದವೊಲ್
ಜಡದವೊಲ್ ಜೀವದೊಲ್ ಖಗದಂತೆ ಮೃಗದಂತೆ
ಗಾಳಿ ಬೆಂಕಿಗಳಂತೆ ಮನಸೆಂದು ಕನಸೆಂದು
ಚರವೆಂದಚರವೆಂದು ವಿವಿಧರೂಪಿಗಳಾಗಿ
ವಿವಿಧ ಕರ್ಮವ ನಟಿಪ ನಿಯತಿಯ ನಟರ್ಕಳಿರ,
ಧರ್ಮದ ಭಟರ್ಕಳಿರ, ಸಂಕಲ್ಪಿಸಿಮ್ ಜಯಕೆ
ಸೌಜನ್ಯದಾ. ನಿಮ್ಮ ಸಂಕಲ್ಪಮೇ ತನ್ನ
ಋತರಥಕೆ ಕಲ್ಪಿಪುದು ಹೆದ್ದಾರಿಯಂ; ತಿದ್ದಿ
ನಡೆಯಿಪುದು ಘಟನೆಗಳ ಗಾಲಿಯಂ. ನಿಮ್ಮಿಚ್ಛೆ
ನೆರಮಾದೊಡೊಂದೆಲೆಯ ಬೀಳುವಿಕೆಯೊಂದುಲಿಯ
ಕೇಳುವಿಕೆ ದಶಶಿರನ ಮನವಿಮಾನದ ಗತಿಯ
ಬದಲಿಸದೆ? ನಾನ್ ಕಂಡ ಮಂಡೋದರಿಯ ಪತಿಯ

ಕಾಮಕಾತರತೆಯಂ ಶಿವದೆಡೆಗೆ ಕದಲಿಸದೆ?
ಹದಿಬದೆಯ ಕೊಲ್ಲದೋಲ್ ಬಲದಿಂದೆ ಗೆಲ್ಲದೋಲ್
ಬಿರಿಯನಿಕ್ಕದೆ, ಚಿತ್ತಸರ್ಪದ ಕುವರ್ತನೆಯ
ವಿಷದ ಹಲ್ಲಿಗೆ ಗರುಡಮಣಿಯಾಗಿ?''
                                        ಅನಿತರೊಳ್,
ಕುಳಿರಪನಿ ಮಿರುಮಿರುಗುವೆಲೆಗಳ ಬಿದಿರ್ ಮೆಳೆಯ
ಕೊನೆಗಣೆಯ ನೆತ್ತಿಯಂ ಪತ್ತಿ, ಮೂಡಲ ಕಡೆಗೆ
ಮೊಗಂಮಾಡಿ, ತಿಪ್ಪುಳ್ಗರಿಗಳಂ ಕೆದರ್ಬಿರ್ಚ್ಚಿ
ಕುಳಿತ ಪಕ್ಕಿಗಳೆದೆಗೆ ಬೆಚ್ಚನೆಯೊಲವನೊತ್ತಿ
ನೆರೆದುದು ಸುಸಿಲ್‌ವಿಸಿಲ್. ನೊರೆಗಡಲವೊಲ್ ಮಂಜು
ಲಂಕಾಪುರದ ಧರೆಯ ನಿಮ್ನಪ್ರದೇಶಂಗಳಂ
ಮುಸುಗಿ ಪರ್ವಿರೆ, ಶಿಖರಗಳ್, ದ್ವೀಪಖಂಡಗಳ್
ತೇಲ್ವಂತೆವೊಲ್, ಭವ್ಯಮಿದಿರೆದ್ದುವಲ್ಲಲ್ಲಿ
ಪರ್ವತ ಜಟಾಜೂಟಗಳ್ ಆ ತ್ರಿಕೂಟಗಳ್!
ಇದ್ದಕಿದ್ದಂತೆ, ಇಂದ್ರಿಯಂಗಳ ವಿನಿಮಯವೊ? ಮೇಣ್
ನಿಯತಿ ವಿಪರೀತತೆಯ ಫಲವೊ? ಮರುತಜ ಮನದ
ಕೋರಿಕೆಯ ಮಾಧುರ್ಯಮದೆ ಬಹಿರ್‌ಲೋಕದೊಳ್
ಭವಿಸಿದುದೊ? ಮೇಣ್ ಕಣ್ಣಿನೋಟಮೆ ಕರ್ಣಸುಂದರಂ
ತಾನಾದುದೋ? ಎನಲ್, ತೇಲಿ ಬಂದುದು ಕಿವಿಗೆ
ತಂತಿಯಿಂಚರದೈಂದ್ರಜಾಲಿಕಂ! ಮೊದಮೊದಲ್
ಕೇಳ್ದತ್ತು ದೂರಧ್ವನಿಯ ಮಂದ್ರತಾನದಿಂ;
ಆಲಿಸಿರೆಯಿರೆ ಸನಿಹಮಿಪ್ಪವೊಲ್ ನರ್ತಿಸಿತು
ಸುತ್ತಣಿಂದಿತ್ತಣಿಂದತ್ತಣಿಂದೆತ್ತಣಿಂ,
ಗಾನವಿದ್ಯಾಧರಂ ವಾಯುಜಂ ಬೆಬ್ಬಳಿಸಿ
ಬೆರಗಾಗುವಂತೆ. ಅಕ್ಕಜಮಿಂಪಿನೊಡನೆ ಮೇಣ್
ಆಶ್ಚರ್ಯಮಾನಂದದೊಡನೆ ಹೊಯ್‌ಕಯ್ಯಾಗೆ
ಸೊಗಸಿತಾ ತಾನ ತಾನ ಸ್ವನದ ಸಂತಾನಃ
ಬೇರ್ಗಳಿಂ ಮರಮೆಯ್ಗೆ ರಸಮೇರ್ವ ಛಂದಸ್ಸೊ?
ವಿವಿಧ ವರ್ಣಂಗಳಿಂ ವಿವಿಧ ಪರ್ಣಂಗಳಿಂ
ಗಾಳಿಬೆಳಕಂ ಪೀರ್ವ ಪ್ರಕೃತಿ ಪ್ರಾಣಾಯಾಮ
ಯೋಗದೋಜಸ್ಸೊ? ತುಹಿನಕಣಗಳ್ ದಿನಕರ

ಮರೀಚಿಯಂ ಪ್ರತಿಕೃತಿಸಿ ರಂಜಿಪ ಲಯಕ್ರಮವೊ?
ಚೇತನಾಕಾಂಕ್ಷಿ ಜಡದಂತರಂಗದ ತಪದ
ವಿದ್ಯುದಣುಗಳ ರಣದ ಜಯಗಾಥ ಪಲ್ಲವಿಯೊ?
ಜಾನಕಿಯ ಜೀವ ಜಾಡ್ಯಕೆ ಕಾಮ ಕೌಶಲಿ
ದಶಗ್ರೀವನನುದಿನಂ ಪ್ರಾಭಾತವೇಳೆಯೊಳ್
ನೀಡುವ ನಿನಾದಸುಖ ಭೇಷಜವೊ? ರತಿಕಲಾ
ಸಂಗೀತದಿಂಗಿತವೊ?—ರಸಸುಖಾಕಸ್ಮಿಕಕೆ
ಕಿವಿಸೋಲ್ತನನಿಲಜಂ: ಲೋಕದೋಲವ ತೂಗಿ
ತೊನೆದುದಾ ತಾನ ತಾನ ಸ್ವನದ ಸಂತಾನ!

ಸಂಚಿಕೆ ೩

## ಕಂಡನಾ ಹದಿಬದೆಯರಧಿದೇವಿಯಂ

ಪ್ರವೇಶಿಸಿತು ಪ್ರಥಮ ಕಿರಣಂ, ಪೃಥಿವಿಜಾತೆಯ
ಪರ್ಣಕುಟಿಯಂ, ತರಗೆಲೆಯ ತಡಿಕೆಗೋಡೆಯ
ಬಿರುಕಿನಿಂದೆ. ಕಂಡುದೇನಾ ಕದಿರ ಕಣ್ ಅಲ್ಲಿ?
ಕಳೆಯುತೆ ವಿಭಾವರಿಯ ದೀರ್ಘತಾ ಕ್ಲೇಶಮಂ
ಪಾರುತಿರ್ದಳು ದೇವಿ ಇನ್ನೊಂದು ದೀರ್ಘತರ
ಸಂಕಟದ ದೀರ್ಘ ದಿನದವತಾರಮಂ! ಆ
ಮರುಕೆದೆಯ ಬಿಸಿಲ್ವಸುಳೆ ತನ್ನ ಕೋಮಲ ಕರದ
ಕಿಸಲಯೋಪಮ ಮೃದುಲ ರೋಚಿಯ ಬೆರಲ್ಗಳಿಂ
ಸೋಂಕಿ ಸಂತಯ್ಸಿದುದೊ ಸೀತೆಯ ತಪಃಕ್ಲಾಂತ
ಚರಣಾರವಿಂದಂಗಳಂ: ಹೈಮ ಶೈಲ ಶಿರ
ಗುಹೆಯ ಗರ್ಭದಿ, ಕಳ್ತಲಿಡಿದ ಕರ್ಗ್ಗವಿಯಲ್ಲಿ,
ಶೈತ್ಯದೈತ್ಯನ ಭಯಕೆ ಹೆಪ್ಪುಗಟ್ಟಿರ್ದ ನೀರ್
ಉತ್ತರಾಯಣ ರವಿಯ ಛವಿಯ ಚುಂಬನಕೆಂತು
ಮಂಜುಗಡ್ಡೆಯ ತನ್ನ ಘನನಿದ್ರೆಯಂ ದ್ರವಿಸಿ,
ಪೆಡೆನಿಮಿರ್ದೊಯ್ಯನೆ ಸುರುಳಿವಿಚ್ಚುವೊಲ್ ಸ್ರವಿಸಿ
ಪರಿವಂತುಟಾ ತಪಸ್ವಿನಿ, ವಂಶದೇವಾಂಶು
ಶುಶ್ರೂಷೆಯಿಂ ಸೊಗಸಿ, ಮರವಟ್ಟ ಮರವೆಯಿಂ
ಮೈತಿಳಿದು, ಕಣ್ದೆರೆದು, ಸುಯ್ದು ಸುತ್ತುಂ ನೋಡಿ,
ಕಯ್ಮುಗಿದಳಿಷ್ಟದೇವತೆಗೆ, ಮೈಥಿಳಿ, ಮನೋ
ರಾಮಚಂದ್ರಂಗೆ. ಕೈಮುಗಿದಳು ಸಮುದ್ರಂಗೆ,
ಉಲ್ಲೋಲಕಲ್ಲೋಲ ಛಂದ ವೈಖರಿಯಿಂದೆ
ಮುಂದೆ ಪರ್ವಿರ್ದ ನೀಲಾನಂತತೆಯ ಮಹಾ

ಧೈರ್ಯದಾತೃವಿಗೆ. ಮೇಲಂ ನೋಡಿ, ಶಾಂತತಾ
ಪ್ರಜ್ಞಾಮಹೋದಾರನಾಕಾಶ ದೇವಂಗೆ,
ನಿತ್ಯಗುರುವಿಗೆ, ನಮಸ್ಕರಿಸಿದಳ್ ರಘುರಾಮ
ವರ್ಣರಮ್ಯಂಗೆ. ವಂದಿಸಿದಳಾಶಾರೂಪಿ,
ಮತ್ತೇಭ ಸನ್ನಿಭ ತಮೋವೈರಿ, ಪ್ರಾಚ್ಯಗಿರಿ
ಕಿರಣಕೇಸರಿಗೆ. ಆ ನಾಲ್ವರ ಕೃಪಾಶಕ್ತಿ
ಚೇತರಿಸಿತೆನೆ ತನ್ನ ಚೇತನದಿ, ಜಾನಕಿಗೆ
ಮಾಣ್ದತ್ತು ನಿರಶನವ್ರತಜನ್ಯ ನಿಶ್ಶಕ್ತಿ:
ಪ್ರಾಣಮಯಮಾಶ್ರಯಿಸಲನ್ನಮಯ ಕೋಶಮಂ
ತನುವ ತುಂಬಿತು ಬಲಮಭೌತಂ. ಅಕಾರಣಂ
ಸಂಚರಿಸಿತಾನಂದಮೊಂದಾತ್ಮಪಾತ್ರದಲಿ:
ಪೊನಲಿಟ್ಟಳಿದುವಶ್ರುಗಳ್ ಮಲಿನ ದೀನಾನನಾ
ಸಂಮ್ಲಾನ ನೇತ್ರಂಗಳಿಂ.
ಸ್ಥಾವರಸ್ಥಿತಿಯೊಂದು
ತಪಕೆ ಜಂಗಮತೆ ದೊರೆಕೊಳ್ವವೋಲೊಯ್ಯನೆಯೆ
ಮೇಲೆಳ್ದು, ಬಳಿಯೊಳೆಯೆ ನೆರಮೀಯಲೊಳ್ದೊರ್ವ
ತ್ರಿಜಟೆವೆಸರಿನ ರಾಕ್ಷಸೋತ್ತಮ ಸಖಿಯ ಕಯ್ಯ
ಸಾಹಾಯ್ಯಮಂ ಸನ್ನೆಯಿಂ ಬೇಡವೆಂದೆನುತೆ,
ಪನ್ನಗುಡಿ ತಡಿಕೆಪಡಿಯಂ ಕೆಲಕ್ಕೋಸರಿಸಿ
ಬಂದಳು ಬಯಲ್ಗೆ, ತನ್ನಿರ್ಕೆಯನುಳಿದು ಬರ್ಪ
ಬೆದರ್ದ ಜಿಂಕೆಯ ಕಣ್ಣವೋಲ್. ಕುಳಿರ್‌ದಿಂಗಳಾ
ಮುನ್ನೆಳಗು ಅಶೋಕವನ ವನಿತೆಯನ್ ಇರ್ಪನಿಯ
ಮಿರುಗು ಮುತ್ತುಗಳಿಂದೆ ಸಿಂಗರಿಸಿ, ಮರಮರಕೆ
ನಿಡು ನೆಳಲ್ಗಳನಿತ್ತು ಬರ್ಚಿಸಿದವೋಲಿರ್ದ
ತರತರದ ಬಣ್ಣಬಣ್ಣದ ಅಲರ ತುರುಗಲಿನ
ಶೋಭೆಯಂ ಪೆರ್ಚಿಸುತೆ, ನಿಷ್ಕಾರಣಮೆನಲ್ಕೆ,
ಮೈಥಿಲಿಯ ಮನಕೊಂದು ತಂದುದಿಂಪಂ. ಅದರ್ಕೆ
ಶುಭ ಶಕುನಮಂ ಮಧುರಮುಲಿವವೊಲ್, ಮುಂದುಗಡೆ
ಬಳಿಯಿರ್ದ ಹಾಲಿವಾಣದ ಮರದ ಬರಲಾದ
ಹರೆಯ ತುಂಬಿದ ಕೆಂಬಲರ್ಗಳಿಗೆ ಹೂ ಕುಡಿಯೆ
ಬಂದೆರಗುತಿರ್ದ ಕನ್ನಡವಕ್ಕಿ ಕಾಜಾಣಗಳ್

ಹಾಡಿದುವು ಸಿಳ್‌ಸವಿಗಳಂ. ಕೇಳಿ, ಮೇಲಂ ನೋಡಿ,
ಬಹುಕಾಲದಿಂದೆ ನಗದೊಂದು ನಗೆಯ ಮುಗುಳಂ
ಸುಳಿಸಿದಳ್ ಮೊಗದಿ. ಆ ಆನಂದಕೊಂದೇನೊ
ಹಿಮ್ಮೇಳಗಾನಮುಕ್ಕಿದ ತೆರದಿ, ತೆಕ್ಕನೆಯೆ
ಮಾಧುರ್ಯ ಗಿರಿಶೃಂಗಮೆನಿಪೊಂದು ಸುಂದರಂ
ಕೇಳ್ದತ್ತು ತೌರ್ಯತ್ರಿಕಂ. ಕಣ್ಗೆ ಕಂಗೊಳಿಪ
ಕುಸುಮ ಮಯ ವರ್ಣಕಿರ್ಮಿೞರತೆಯನೇಂ ಕಿವಿಗೆ
ಓಲೈಸುವುದೊ ಎನಲ್, ಆ ಇನಿದನಿಯವೊನಲ್
ಜೋಗುಳಂಗೈದು ತೇಲಿಸಿತೆರ್ದೆಯ ದೋಣಿಯಂ
ಜಾನಕಿಯಾ. ಗಾನವಿದ್ಯಾಧರಂ ವಾಯುಜಂ
ಶಿಂಶುಪದ ಮೇಲೆಂತು ಬೆರಗಾದನಂತೆವೋಲ್
ರಾಮನರ್ಧಾಂಗಿಯುಂ ಬೆರಗುವಟ್ಟಿರೆ, ಮತ್ತೆ,
ಕೇಳ್ದು ಬಂದಂತೆವೊಲೆ, ತೆಕ್ಕನೆಯೆ, ನಿಂದುದಾ
ಇಂಚರದಮರ್ದುಸೋನೆ. ದೂರಮಿರವೇಳ್ದಖಿಳ
ಪರಿವಾರಮಂ, ಮೌನಮಿರಲೊರೆದಸುರ ಗಾನ
ಚತುರರಂ, ಲಂಕಾ ತಿಲೋತ್ತಮೆಯೆನಿಪ್ಪಂತೆ
ಮಿಂಚುತಿರ್ದಾ ತನ್ನ ತಂಗಿ ಚಂದ್ರನಖಿಯಂ,
ಮೇಣಿಂದು ನಸು ಖಿನ್ನಮುಖಿಯಾದಳಂ, ಬೆರಸಿ ತಾನ್
ಒರ್ವನೆಯೆ ನಡೆದು ಬಂದನೊ ದೈತ್ಯನೃಪವರಂ,
ಅಚ್ಚರಿಯೆನಲ್ ಸೌಮ್ಯವೇಷಂ! ಪೀತಾಂಬರಂ
ಪೆಣೆದ ಶ್ವೇತಾಂಬರಂ ಸುತ್ತಿರಲ್ ಗಾತ್ರಮಂ
ಮನಮೋಹಿಪೋಲ್; ಮಿಂದು, ಮಡಿಯುಟ್ಟು, ದೇಗುಲಕೆ
ಜಾತ್ರೆ ನಡೆವವನಂತೆ ಐತಂದನಾ ಇಂದ್ರವೈರಿ,
ಕಣ್ಣರಿತು, ನೇರಮಿಳೆಗುವರಿಯಿರ್ದೆಡೆಗೆ!
ಅಂತಾ
ಲಂಕೇಶನಾಗಮಿಸುತಿರ್ದುದಂ ಕಂಡೊಡನೆ
ನಡುಗಿದಳ್ ವೈದೇಹಿ, ಕದಳಿ ಕಂಪಿಸುವೋಲ್
ಪ್ರವಾತಕೆ. ಅನೈಚ್ಛಿಕಂ, ಮುನ್ನೆ ಮುಚ್ಚಿದ ಮೆಯ್ಗೆ,
ಮುಚ್ಚಿಕೊಂಡಳ್ ಮತ್ತೆ ನಾರುಡೆಯ ಸೆರಗಂ,
ನಿವಾರಿಸಲೆನಲ್ ದುಶ್ಶುನಕ ದೃಷ್ಟಿಯಂ. ನೌಕೆ
ಹೊರೆಯ ಭಾರವ ತರಹರಿಸಲಾರದೆಯೆ ಕಡಲ

ನಡುವಳ್ದುವಂತೆ, ದುಃಖಕೆ ಭಯಕೆ ನಿರಶನಕೆ
ತತ್ತರಿಸಿ ಕುಸಿದಳ್ ರಘೂದ್ವಹನ ರಾಣಿ, ಆ
ಏಕವೇಣಿ. ಕಂಬನಿತುಂಬಿ ಪಿಡಿದೆತ್ತಲಾ
ತ್ರಿಜಟೆ, ಹಾಲಿವಾಣದ ಮರದ ಗಾತ್ರಮಂ ಬಲ್
ಪಿಡಿದದನೆ ಮರೆಯೊಡ್ಡಿ, ನೆಮ್ಮಿ, ನಿಂತಳು ಸೀತೆ,
ಬೆದರ್ದ ಧೃತಿಯಂ ಮರಳಿ ಹುರಿಮಾಡಿ.
ಬದ್ಧಭ್ರೂ
ಕರ್ಬುರೇಂದ್ರಂ ಖಿನ್ನಮುಖಿಯಾಗಿ ಕಂಡನಾ
ನೋಟಮಂ, ಬರ ಬಡಿದ ತೋಟಮಂ, ಬೇಟದ
ಬಿಸಿಗೆ ಕುಳಿರ್ಕೂಟಮಂ. ತಂಗಿಯ ಕಡೆಗೆ ತಿರುಗಿ,
ನೆಲಂನೋಡುತಿರ್ದಳನ್, ನಿಡುನೋಡಿದನ್. ಸಿಗ್ಗು
ಕೆರೆಯುಳಿದು ದಡಕೆ ನೆಗೆದಾ ಮೀನಿನೋಲಂತೆ
ಮಿಡುಮಿಡನೆ ಪುಡುಪುಡೊದ್ದಾಡಿಕೊಳುತಿರ್ದೆದೆಯ
ರಾವಣಂ ಬರಿದೆ ಸುಯ್ದನ್; ಬಗೆಯೊಳಾರನೊ
ಕಿಮುಳ್ಚಿ ಬಯ್ದನ್. ತನ್ನ ಕಿನಿಸಿಂಗೆ ತ್ರಿಜಟೆಯಂ
ಗುರಿಮಾಡಿದನ್ ಕೊನೆಗೆ: "ನಿನ್ನ ಸೇವಾಫಲಮೊ
ಮೇಣ್ ಸ್ತ್ರೀಸಹಜ ಛಲಮೊ? ದೇವಿಗೀ ಪಾಂಗಿದೇನ್,
ತ್ರಿಜಟೆ?" ಮೆಲ್ಲನೆ ನುಡಿಯುತಿರ್ದೊಡಂ, ಹೊಟ್ಟೆಯೊಳ್
ಸಿಟ್ಟು ಪೊಟ್ಟಣಗಟ್ಟೆ ಸಿಡಿವುದೆಂಬಂತಿರ್ದ,
ರಾಕ್ಷಸೇಶಧ್ವನಿಯ ಭೀಷ್ಮತೆಗೆ ಸೆಡೆತಳ್ಕಿ
ಬೆಪ್ಪುನುಡಿದಳ್ 'ಅಪ್ಪುದಪ್ಪುದಿರ್ಪಳ್ ದೇವಿ!'
ಎಂದು. 'ಇರ್ಪಳೆ ದೇವಿ? ನಿನ್ನ ಕಾಪಿನ ಮೈಮೆ!
ಇರ್ಪುದಚ್ಚರಿಯಲ್ತೆ?' ಕಣ್‌ಕೆರಳಿ ಗುಡುಗಿದನ್
ಮುಂದೆ 'ಇರ್ಪಳಿಲ್ಲವೊ ಅದನ್ ಕೇಳ್ದುದಿಲ್ಲಾನ್!
ಕಣ್ಣಿರ್ಪುದೆನಗುಮ್, ಬೆಪ್ಪುತೊಳ್ತೆ!—ಇರ್ಪ ಈ
ಪಾಂಗಿದೇನ್? ಈಕೆಯಾರ್? ಅಲ್ಲಿ ನಿಂತಿರ್ಪಾಕೆ?'
ಸೀತೆಯಿರ್ದೆಡೆಗೆ ಕೈದೋರಿ ಮೊಳಗಿದನ್ ಆ
ಭಯಂಕರನ್: "ಸೀತೆಯೋ ಪ್ರೇತವೋ ಪೇಳ್, ತ್ರಿಜಟೆ?
ನಿದ್ದೆ ಪಾಸುಣಿಸು ಮೀಹಂಗಳಂ ಕಾಣದೀ
ಪೆಣ್ ಪೆಣ್ಣೊ? ಮೇಣ್ ಪೆಣ್ಣೊಡಲಿನಸ್ಥಿಪಂಜರಮೊ?
ಬಿನ್ನನಿರ್ದೇಕೆ ಪೀಡಿಪೆಯೆನ್ನ ಹರಣಮನ್?

ಮಾಣ್ ಪ್ರೇತಮೌನಮಂ, ಪ್ರೇತಪರಿಚಾರಿಕೇ,
ಮಸಣಗೈಯದಿರೀ ಅಶೋಕವನಮಂ!" ತ್ರಿಜಟೆ
ಬೆಬ್ಬಳಿಸಿದಳ್: "ನೆನೆವಳಾ ರಾಮಚಂದ್ರನಂ
ಮೂರುವೊಳ್ತುಂ, ಸ್ವಾಮಿ!" ದೆವ್ವಕ್ಕೆ ಧೂಪಮಂ
ತೋರ್ದವೋಲೊದರಿದನ್: 'ಮಿಳ್ತು ಬರ್ಕೆಲ್ಲರ್ಗೆ,
ಪಾಳ್ ತೊಳ್ತೆ!' ಎನುತೊಡನೆ ತಿರುಗಿದನ್ ರೋಷದಿಂ
ಚಂದ್ರನಖಿಯೆಡೆಗೆ: 'ಏನಿದು, ಭಗಿನಿ?' ಎನಲವಳ್
ಮೊಗಮೆತ್ತಿ ಕಣ್ತುಂಬಿ ನೋಡಿ ತನ್ನಣ್ಣನಂ,
ಪೇಳ್ದಳತಿ ದೃಢವಾಣಿಯಿಂ: "ಸೀತೆ ಪೆಣ್ಣಲ್ತು
ನಮ್ಮನ್ನರೊಲ್, ದೈತ್ಯರಾಜೇಂದ್ರ: ದೇವಿಯಯ್;
ನೀನಾಕೆಯಂ ಮೊದಲ್ ಕರೆದವೋಲ್ ಆ ಪೂಜ್ಯೆ
ದೇವಿಯೆ ದಿಟಂ!" ಕುದುರೆನಗೆ ನಕ್ಕನಸುರಂ
ತಿರಸ್ಕರಿಸುವೋಲ್; ಮತ್ತೆ ದುರುದುರುದುರನೆ ನೋಡಿ
ತನ್ನನುಜೆಯಂ: "ನಿಲ್, ಸಾಲ್ಗುಮಾನರಿತೆನ್ನ
ತಂಗೆ ನೀನಲ್ತೆ?" ಮಿಂಚಿರಿವವೋಲ್ ಚಂದ್ರನಖಿ
ನುಡಿದಳ್ ತುಟಿಯ ಕೊಂಕಿನ ಕಠಾರಿಯಿಂ: "ದಿಟಂ
ನೀನಗ್ರಜಂ! ದಿಟಂ ನೀನಸುರ ಕುಲ ನೃಪಂ!
ಆದೊಡೇನ್? ದಿಟವನೊರೆವೆನ್! ನಿನ್ನ ಕೈಯಿಂದೆ
ಹತನಾದನೆನ್ನ ಪತಿ ಪಾತಾಳಯುದ್ಧದೊಳ್.
ನೀನಿತ್ತ ವೈಧವ್ಯದಿಂದುರಿದೆನಾಂ. ಮತ್ತೆ,
ನಿನ್ನ ದೆಸೆಯಿಂದೆನಗನುತ್ತಮದ ಜೀವಿತಂ
ಮೊದಲಾಯ್ತು! ಪಾಪಿ ನೀನ್ ಎನ್ನನುಂ ಪಾಪಕ್ಕೆ
ನೂಂಕಿದಯ್. ನಿನ್ನವೋಲೆನಗುಮಾ ಪಾಪಮೇ
ರುಚಿಯಾಯ್ತು. ಈ ಪೂಜ್ಯೆಯಿಂದರಿತೆ ಆ ರುಚಿ
ನರಕಮೆಂದು. ಆ ಕೂಪಕಿನ್ನೆಂದುಮಿಳಿಯೆನಯ್.
ನಿನ್ನನುಂ ಪ್ರಾರ್ಥಿಪೆನಿಳಿಯದಂತೆ!" ಬೆದರಿದನ್
ದಶಗ್ರೀವನೊಳಗೊಳಗೆ. ಮೇಲೆ ಕಿಚ್ಚುರಿದೆದ್ದು
ಕೂಗಿದನ್: "ನೀನಾದೊಡಂ, ಅನಲೆಯಾದೊಡಂ,
ಮತ್ತಮಿನ್ನಾರಾದೊಡಂ ಇತ್ತಲೀ ಬನಕೆ
ಕಾಲಿಟ್ಟುದಂ ಕೇಳ್ದೆನಾದೊಡೆ," ಎಂಬನಿತರೊಳ್
ಹೂಕುಡಿವ ಹಕ್ಕಿ ಕೆಡಹಿದ ಹಾಲಿವಾಣದ

ಮರದ ಕೆಂಪುವೂವೊಂದು ದೊಪ್ಪನೆರಗಲ್ ತಲೆಗೆ
ರಾವಣನ, ಕಿನಿಸಿ ತಲೆಕೊಡಹಿ, ಮೇಗಂ ನೋಡಿ,
"ಕೊರಳ್ ಉರುಳ್ದಪು" ದೆಂದು ಪೂರೈಸಿದನ್ ತನ್ನ
ದುರ್ವಾಕ್ಯಮಂ! ತಿತ್ತಿರಿರಿಯೆಂದುಲಿಯುತಾ ಪಕ್ಷಿ
ಹಾರಿದುದು ಬೇರೊಂದು ಹರೆಗೆ! ರಾವಣನೇಕೊ
ಮೌನಮಿರ್ದಾಲಿಸಿದನಾ ಪಕ್ಕಿಯುಲಿಹಮಂ!
ನಕ್ಕು, ತಂಗೆಗೆ ಮರಳಿ: "ದಿಟಕೆ ಪೇಳಿದೆನೆಂದು
ಬಗೆಯದಿರ್, ತಂಗೆ! ನೀನರಿಯಲಾರೆಯೆ ನನ್ನ
ಗೂಢಾಂತರಂಗಮಂ?" ಇದ್ದಕ್ಕಿದ್ದಂತೆವೋಲ್
ತನ್ನ ವೇಷಕೆ ತಗುವ ಸೌಮ್ಯತೆಯನಾಂತನಾ
ಕಾಮನಿಪುಣಂ. ಮಿಗುವ ವಿನಯದಿಂ ತಿರುಗಿದನ್
ಮೈಥಿಲಿಯೆಡೆಗೆ ಮತ್ತೆ:
"ನಿನ್ನ ದುರವಸ್ಥೆಯಂ
ಕಂಡ ದುಃಖಕೆ ಕೋಪಿಸಿದೆನಾಂ, ಕ್ಷಮಾಪುತ್ರಿ,
ಕ್ಷಮಿಸೆನ್ನ ದುರ್ವಿನಯಮಂ. ಬ್ರತಮಿದೇನ್, ದೇವಿ,
ವಿಪರೀತಮೀ ಆತ್ಮಹತ್ಯೆ? ನೀಂ ನಡೆಯುವಾ
ವೇದೋಕ್ತ ಧರ್ಮಮುಂ ಪಳಿಯುತಿದೆ, ಪೇಸುತಿದೆ
ನಿನ್ನ ನಡೆಯಂ. ಪೇಡಿಗಳ್ಗಿದು ತರಂ. ಪಥಂ
ತಾನಲ್ತು ಧೀರಮತಿಗಳ್ಗೆ. ಈ ಮಾರ್ಗಮಂ,
ಅಲ್ಪರೊಂದಪವರ್ಗಮಂ, ಬಿಟ್ಟುಕಳೆ, ಮಹಿಳೆ.
ನಾನರಿಯೆನೆಂದಲ್ತು ನಿನ್ನ ಮನದಾಳಮಂ;
ನಾನಳೆಯೆನೆಂದಲ್ತು ನಿನ್ನೆರ್ದೆಯ ಗೂಢಮಂ;
ನಿನ್ನ ಆದರ್ಶದುನ್ನತಿಗೇರದೆಂದಲ್ತು
ನನ್ನಾತ್ಮದಾಶೆ. ಆ ವ್ಯರ್ಥಪರ್ಯಟನದಿಂ
ಪುರುಷಾರ್ಥಮೇಂ, ಮಿಥಿಳೇಂದ್ರ ಸಂಭೂತೆ, ನಮಗೆ
ದೊರೆಕೊಳ್ವುದೌ? ಸಾಹಸವನುಳಿ; ವಿವೇಕಮಂ
ಪುಗು ಶರಣ್. ಹೇ ವ್ಯರ್ಥ ದುಃಖಾರ್ಥೆ, ಇನ್ನೆಲ್ಲಿ
ನಿನಗೆ ರಾಮನ ವಾರ್ತೆ? ದೇವ ದುರ್ಲಂಘ್ಯಮಿಾ
ಮಹಾಂಭೋಧಿ ನಿನಗುಮಾತಂಗುಮೆಂದೆಂದಿಗುಂ
ಸಾಧ್ಯಮಲ್ಲದ ಸಂಧಿಯಂ ಘೋಷಿಸುತ್ತಿದೆ; ಕೇಳ್,
ಬುದ್ಧಿಮತಿ! ನಿನ್ನನುಳಿದಾತನಿನ್ನಾವಳನೊ

ನೆರೆದು ಸುಖಿಯಾಗಿಹನ್ ಕಿಷ್ಕಿಂಧೆಯೊಳ್! ನನಗೆ
ತಿಳಿದುದೆಂತೆಂದು ಶಂಕಿಪ್ಪೆಯೇನ್? ತ್ರೈಜಗದಿ
ನನ್ನ ಬೇಹಿನ ಕಣ್ಗೆ ಬೀಳದಿಹುದೊಳದೆ, ಮೇಣ್
ಕಿವಿಗೆ? ನಿನ್ನನ್ ತೊರೆದು ಮರೆತಾ ಕೃತಘ್ನನನ್
ನಿಷ್ಪ್ರಯೋಜನಮಿಂತು ನೆನೆನೆನೆದು, ಬೇಳ್ವೆಯೇನ್
ವ್ಯರ್ಥಮಿಾ ನಿನ್ನ ಹೂವಿನ ಜೀವಮಾನಮಂ?
ಹರಧನುವನವನೆತ್ತಿ ಮುರಿದ ಮಾತ್ರದಿ ನಿನಗೆ
ರಮಣನಪ್ಪೊಡೆ, ನಾನುಮದಕೆ ನೂರ್ಮಡಿ ಬಲದ
ಕಜ್ಜಮನೆಸಗಿ ತೋರಲಾರೆನೆಂದರಿಯದಿರ್,
ಪ್ರಾತಃಕಮಲನೇತ್ರೆ!"
ಶಿಂಶುಪಾಗ್ರದೊಳಿರ್ದು,
ಕೊಲೆಗೈವ ಪೊಲೆಪುಸಿಗೆ ಕುದಿವವೋಲನಿಲಜಂ
ರಾವಣನ ಜಲ್ಪಮಂ ಕೆರಳುತಾಲಿಸುತಿರಲ್,
ಮರನ ಮೆಯ್ಯಂ ನಂಬಿ ನಿಂದಿರ್ದ ಧರಣಿಸುತೆ
ಬಿಕ್ಕಿಬಿಕ್ಕಳುತಳುತೆ, ತಾಯಡಿಗೆರಗುವಂತೆ,
ಕೆಡೆದಳ್ ಕುಸಿದು ಬೇರ್ಗೆ. ತ್ರಿಜಟೆಯ ಸಹಾಯದಿಂ
ಕುಳ್ತಳಲ್ಲಿಯೆ ಮುದ್ದೆಮುದುರಿ.
"ನಿನ್ನನೀವೊಲ್
ಸಂಕಟಕ್ಕೀಡುಮಾಡಿದ ನನ್ನ ನಾಲಗೆಯ
ಕಹಿನನ್ನಿಯಂ ಪೇಸುವೆನ್; ಮನ್ನಿಸದನಾರ್ಯೆ;
ಮಿಥ್ಯೆಯಂ ನಂಬಿ ಕೆಡದಿರಲೆಂದು ಕಠಿನಮಂ
ಪೇಳ್ದೆನಲ್ಲದೆ ಮತ್ತೆ ಭಾವಿಸದಿರನ್ಯಮಂ,
ಸಚ್ಛೀಲ ಮುಗ್ಧೆ. ಕೈತವದಗ್ಧೆಯಾಗದಿರ್
ಪೋದ ಪುಸಿಗನಸೊಂದು ನಿರುತಮಾದಪುದೆಂದು
ಬಯಸಿ. ಇಲ್ಲದರ್ಕೆಳಸದಿರ್; ಇರ್ಪುದನೊಪ್ಪಿ
ಸೊಗವನುಣ್!"
ಚೀರಿದುದು ಚಿಳಿಚಿಳಿಚಿಳಿಲ್ಲೆಂದು
ಹಾಲಿವಾಣದ ಹೂವಿನೆದೆಯೀಂಟುತಿರ್ದೊಂದು
ಚಿಟ್ಟಳಿಲ್. ಮೀರ್ದದರುಲಿಗೆ ಹುಬ್ಬುಗಂಟಿಕ್ಕಿ
ವಿರಮಿಸಿದನೀರ್ಗೈದು ತಲೆಯ ಬಿರುದಿನ ಭೀಮ
ರಾಕ್ಷಸಂ. ಭೀತಿಯಂ ಕೆಲಕ್ಕೊತ್ತಿ, ದುಕ್ಕಮಂ

ಮೆಟ್ಟಿಕ್ಕಿ, ಸುಯ್ದೋರಿದುದು ಕೋಪಫಣಿ ಜನಕ
ನಂದಿನಿಯ ಮೌನವಲ್ಮೀಕದಿಂ:
"ಪೇಳ್, ತ್ರಿಜಟೆ,
ಪಿತ್ತೋತ್ಥನ್ನ ಜಲ್ಪಕುತ್ತರವಿದಂ ನಿನ್ನ
ಅನ್ನದಾತಂಗೆ: ಕತ್ತೆಯ ತತ್ತ್ವಮಂ ಕತ್ತೆ
ಕತ್ತೆಗಳ್ಗುಪದೇಶಿಸಲ್ವೇಳ್ಕುಮಲ್ಲದೆಯೆ
ಉತ್ತಮ ರಘುಕುಲೋತ್ತಮನ ಸತಿಯ ಮುಂದದಂ
ಗಳಪಲ್ ಪ್ರಯೋಜನಮೆ? ಪ್ರತ್ಯುತ್ತರಕ್ಕಮೀ
ಅರ್ಹನಲ್ತಲ್ಪಾಸು! ಮರುಕಮಂ, ಕರುಣೆಯಂ,
ವಿನಯಮಂ, ಸೌಜನ್ಯಮಂ ನಟಿಸುವೀ ನಟನ
ಶುನಕಾಭಿನಯಕೆ ಧಿಕ್! ಪುಸಿವೇಳ್ವ ನಾಲಗೆಗೆ
ಧಿಕ್, ಧಿಕ್! ಕೋಟಿ ಧಿಕ್! ಇವನ ಪೊಲೆಸಿರಿಗೆ ಧಿಕ್!
ಇವನ ಬಲ್ಮೆಗೆ ಲಕ್ಷಧಿಕ್! ಉಗುಳುಮಪವಿತ್ರಮಕ್ಕು,
ಈತಂಗೆ ಪೇಸಿ ಆ ದಿಕ್ಕಿಗೆಂಜಲನೆಸೆಯೆ ನಾಂ!
ಶ್ರೀ ರಾಮಚಂದ್ರನೆಲ್ಲಿರ್ದೊಡಂ ನನಗೆ ಪತಿ!
ಶ್ರೀ ರಾಮನೆಂತಿರ್ದೊಡಂ ನನಗೆ ಪತಿ! ಸತ್ತೆ ನಾಂ
ಸೇರ್ದಪೆನಾತನೊಡನೆ; ಬದುಕಮೇರ್ಧ್ಯಮೆ ದಿಟಂ
ಇನ್ನರಿರ್ಪೀ ಜಗದಿ! ಈ ಸೊಣಗಮರಿಯದಾ
ಭೀಮ ವಿಕ್ರಮಿ ರಾಮ ಮಹಿಮೆಯಂ. ಬಲ್ಲೆನಾಂ.
ಪೇಳ್, ತ್ರಿಜಟೆ, ನಿನ್ನನ್ನದಾತಂಗೆ. ಕೂಳ್ ಕೊಟ್ಟು
ಸಲಹಿದಾ ಜೋಳವಾಳಿಗೆ ಉಪಕೃತಿಯನೆಸಗಿ
ಋಣಮುಕ್ತೆಯಾಗು. ಪಾಪಿಗೆ ಮೋಕ್ಷಮೆಂತಂತೆ
ದುರ್ಲಭಳ್ ನಾನೀ ನಿಶಾಚರಗೆ. ನಾಂ ಮುನ್ನೆ
ಗೆಂಟರಿಂ ಕೇಳ್ದ ರಾಕ್ಷಸವಿಕೃತಿ, ಪೊರಗಲ್ತು,
ಒಳಗಿರ್ಪುದೀತಂಗೆ. ಕೇಳದೊ ವಿಹಂಗಮಂ
ಕುಕಿಲಿದೆ ಭವಿಷ್ಯಮಂ: ತರುವುದೀ ಸಾಗರಂ
ತಾನೆ ಸೇತುವೆಯಾಗಿ ರಾವಣನ ಮೃತ್ಯುವಂ,
ಬೇಗಮಿವನೆನ್ನನಾ ಮುನ್ನಮೊಪ್ಪಿಸದಿರಲ್
ಆ ಕೃಪಾಕರನಡಿಗೆ ಮುಡಿಯಿಟ್ಟು!"
ತ್ರಿಜಟೆಯಂ
ಕುರಿತಿಂತು ತನಗೆ ಪೇಳ್ದುದನಾಲಿಸಿದನಾ

ತ್ರಿಕೂಟಲಂಕಾಧಿಪಂ. ಕಟು ತಿರಸ್ಕೃತಿಗದೆಯ
ಘಾತಕ್ಕೆ ಕಣ್ಮುಚ್ಚಿದನ್; ಸತ್ತು ಪುಟ್ಟಿದೋಲ್
ಮತ್ತೆ ಕಣ್ದೆರೆದನಾರಕ್ತೇಕ್ಷಣಂ:
“ಅಣುಗಿ ನೀಂ;
ನೀನರಿಯದಾಡಿದರೆ ನಾನುರಿವೆಯೆಂಬೆಯೇನ್?
ನಿನಗೆ ಅಲ್ಪಾಹಾರದಿಂ ಮತಿಭ್ರಮಣೆಗಿರ್ಪುದು
ಸುಕಾರಣಂ!—ತ್ರಿಜಟೆ, ಕೇಳ್ ಲಂಕೇಶನಾಜ್ಞೆಯಂ.
ಮತ್ತೆ ಪೇಳ್, ಉಣಿಸಿಲ್ಲದೀ ಮೆದುಳ್‌ಗೆಟ್ಟಳ್ಗೆ
ಬುದ್ಧಿಸ್ಥಿರತೆ ಮರಳ್ದಾಮೇಲೆ. ಮೊದಲ್, ಇಲ್ಲಿ
ಬಂದಿರ್ದರಾರೆಂಬುದಂ. ಪೇಳ್ದುದೇನೆಂಬುದಂ
ಮತ್ತೆ. ಇನ್ನೆರಳ್ ತಿಂಗಳಿಹುದಿತ್ತವಧಿ. ಆ
ಮೇರೆಯೊಳ್ ಪುರ್ಚಿನೀ ಬಗೆಕದಡು ಹಣಿಯದಿರೆ,
ಭೇಷಜಂ ಬರ್ಪುದು ಬಲಾತ್ಕಾರ ರೂಪಮಂ
ತಾಳ್ದು! ಮೇಣ್,” ಸುಯ್ದು ನಿಡುನೋಡುತಾ ಸೀತೆಯಂ
ವಿರಳಾಕ್ಷರದಿ ತಡೆತಡೆದು ನುಡಿದನಿಂತು: “ಮೇಣ್,
ನಿರಶನವ್ರತರೂಪದಾತ್ಮಹತ್ಯೆಯಿನಾಕೆ
ಮಡಿಯುವೊಡೆ, ಅದೆ ಚಿತೆಯನೇರುವೆನ್; ಪೆಣದೆಡೆಯೆ
ಪವಡಿಪೆನ್; ಭಸ್ಮರೂಪದಿನಾದೊಡಂ ಕೂಡಿ
ಪೊಂದುವೆನ್ ಸಾಯುಜ್ಯಮಂ!”
ಕೊರಳ್ ಗದ್ಗದಿಸೆ
ನುಡಿದು, ಹಿಂತಿರುಗಿದನು ಲಂಕೇಶ್ವರಂ, ಬಂದ
ಬಟ್ಟೆಯೊಳೆ. ಕಾಯ್ದ ಕಬ್ಬುನವಿಕ್ಕಿದಂತಾಯ್ತು
ರಕ್ಕಸನ ಕಡೆನುಡಿಯ ಕರ್ಕಶವನಾಲಿಸಿದ
ಕಿವಿಗೆ ಜಾನಕಿಗೆ. ಮರಣಂ ತ್ರಿಗುಣಘೋರಮೆನೆ
ತೋರೆ, ಬರ್ದುಕಿನ ಕಡೆಗೆ ಬಾಗಿತು ಮನಂ. ಮತ್ತೆ,
ಭೇಷಜಂ ಬರ್ಪುದು ಬಲಾತ್ಕಾರ ರೂಪಮಂ
ತಾಳ್ದೆಂಬ ವಿಷವಚನಮಂ ನೆನೆದು, ಮಿತ್ತುವಂ
ನೀನೆ ಗತಿ ರಕ್ಷಿಸೆಂದಪ್ಪಿದಳ್ ಮಾನವತಿ ಆ
ಸೀತೆ. ಭೀಕರಮಾಗೆ ಮಿತ್ತುಬಾಳೆರಡುಮುಂ,
ದೆಸೆಗೆಟ್ಟೊರಲಿದಳ್ ಧರೆಯ ಕುವರಿ! ಕೇಳ್ದದಂ
ತ್ರಿಜಟೆ, ತಾನುಮಳುತುಂ, ಸಂತೈಸತೊಡಗಿದಳ್

ಮನುಜೇಂದ್ರನರ್ಧಾಂಗಿಯಂ:
"ಸಂತಾಪದಗ್ಧೆ,
ಸ್ವಪ್ನ ಕೇಸರಿಗಳ್ಕಿ ನೈಜ ನೈರಾಶ್ಯಕ್ಕೆ
ಬಲಿಗೊಡದಿರಾಶಾಬ್ಜಮಂ. ಪೇಳ್ದುದನಿತುಮುಂ
ಪುಸಿ ರಾಕ್ಷಸೇಶ್ವರಂ: ರಾಮನಿನ್ನೊರ್ವಳಂ
ಕೂಡಿ ನಿನ್ನಂ ಮರೆತುದಾವ ನನ್ನಿಯೊ ಅಂತೆ,
ನಿನ್ನಂ ಬಲಾತ್ಕರಿಪುದುಂ ನಿನ್ನೊಡನೆ ಚಿತೆಗೆ
ಬೀಳ್ವುದುಂ ನನ್ನಿಗಳ್! ಬಲ್ಲೆನಾನಾತನಂ.
ಬಲದಿನೆಳತಂದೊಡಂ ಬಲದೊಳೊಡವೆರೆವನಿತು
ಪಶುಮಾತ್ರನಲ್ತು; ಕಾಮುಕನಪ್ಪೊಡಂ ಮೆಚ್ಚಿ
ಬಗೆಸೋಲ್ತರನ್ನಲ್ಲದೆಯೆ ಸೋಂಕನಾವಗಂ;
ಕಠಿಣನಾದೊಡಮಸಂಸ್ಕೃತನಲ್ತು; ನಾರಿಯಂ
ಮೀರಿ ಕೂಡುವ ಪೇಡಿಯಲ್ತು; ಪೌರುಷಶಾಲಿ
ತಾನಾವಗಂ!"
"ಪುಸಿಯೆ ಪೇಳ್ದೆಲ್ಲಮುಂ, ತ್ರಿಜಟೆ?"
ಸೀತೆ ಬೆಸಗೊಂಡಳತಿದೀನರವದಿಂ. ತ್ರಿಜಟೆ
ಧೈರ್ಯಮಂ ಕರೆವ ದೃಢವಾಣಿಯಿಂ: "ಪುಸಿ ದಿಟಂ;
ನನ್ನಾಣೆ! ಪ್ರಾರ್ಥಿಸುವೆನೊಳಸೋರದಿರ್, ದೇವಿ.
ಆ ಚಂದ್ರನಖಿಯುಮಂ ಧವಳ ಮಾರ್ಗಕೆ ಗೆಲ್ದ
ನಿನಗೆ ನಿನ್ನುದ್ಧಾರಮನತಿದೂರಂ ವಲಂ!
ಮೇಣ್, ಕೇಳ್, ಪೇಳ್ವೆನೊಂದಂ ಸ್ವಪ್ನಸಾಕ್ಷಿಯಂ,
ಕಡೆಯ ಜಾವದೊಳಿಂದು ನಾಂ ಕಂಡುದಂ:" ಸೀತೆ
ಮೂಡಿದಾಶೆಗೆ ಕಣ್ಣರಳಿ ಕಿವಿಗೊಡಲ್, ತ್ರಿಜಟೆ
ಕಣ್ತೊಯ್ದು ಮುನ್ನೊರೆದಳಿಂತು: "ಪುಣ್ಯಶಾಲಿನಿ,
ನೆನೆಯೆ ರೋಮೋದ್ಗಮಂ ಸಂಭವಿಪುದೆನಗೆ ಆ
ಸುಸ್ವಪ್ನಮಂ! ಸೂಚಿಪುದು ನಿನಗೆ ದಲ್, ಭದ್ರೆ,
ಶುಭ ಶಕುನಮಂ!—ಸರೋವರಮೊಂದರೊಳ್ ಕಂಡೆನ್
ಅಬ್ಜಂಗಳೆರಡಂ, ಸಹಸ್ರದಲ ವಿಭವದಿಂ
ಶೋಭಿಸುತ್ತಿರ್ದುವಂ. ನೀಲಮೆಸೆದತ್ತೊಂದು;
ಕನಕಸುಂದರಮಿರ್ದುದಿನ್ನೊಂದು. ತೆಂಬೆಲರ್
ತೀಡೆ, ತುಂಬಿಗಳಾಡೆ, ಚುಂಬಿಸುವವೋಲೊಂದು

ಮತ್ತೊಂದನಿನಿತು ಸೋಂಕುತ್ತಲ್ಲಿ ಸೊಗಯಿಸಿರೆ,
ನಕ್ರಮೊಂದೆದ್ದುದತಿಭೀಕರಂ, ಕೊಳದ ನೀರ್
ಭಯಚಕಿತಮಾಗೆ. ಕರ್ಕಶ ಖರ್ಪರಾಜಿನದ
ಆ ನೆಗಳ್ ಮೆಲ್ಲಮೆಲ್ಲನೆ ಹತ್ತೆ ಸಾರ್ದುದಾ
ಪೊನ್ದಾವರೆಯ ಸುಖಸ್ಪರ್ಶಕೆರ್ದೆಸೋಲ್ತವೋಲ್
ಮೂಗು ಮುಸುಡಿಯನರಳಿಸವರ ಕಂಪಂ ಮೂಸಿ
ಮೂಸಿ. ನಡುಗಿತು ಮಲರ್, ಪೇಸಿ. ನೋಡುತಿರೆಯಿರೆ,
ಮಕರಂದ ಪಾನದೊಳ್ ಮಗ್ನಮಿರ್ದಳಿಕುಳಂ
ಭೋಂಕನೆಯೆ ಝೇಂಕರಿಸುತೆದ್ದು, ಮೊಸಳೆಯಮೇಲೆ
ಬಿದ್ದು, ಕೊಂದುವು ಕಚ್ಚಿ, ಪುಷ್ಪಬಾಣಂಗಳಿಂ
ಚುಚ್ಚಿ! ಕುಂಭೀರಮದು ತೇಲಿ ಬರಲೆನ್ನೆಡೆಗೆ,
ಕಂಡುದು ಕಳೇಬರಂ ದೈತ್ಯೇಂದ್ರನಾ! ಬೆಚ್ಚಿ,
ತಾವರೆಯೊಳಿರ್ದ ನಿನ್ನಂ ಕಂಡೆನಚ್ಚರಿಯ
ತೇಜದಾ ನೈದಿಲೆಯನಪ್ಪಿರ್ದಳಂ! ಕುಮುಟಿ
ಕಣ್ದೆರೆಯೆ, ಕಂಡೆ ನಿನ್ನಂ ಧ್ಯಾನಮಗ್ನೆಯಂ,
ಪದ್ಮಾಸನಸ್ತಿಮಿತೆಯಂ!"

ಮಿಂಚಿಮುದು ಬಗೆಗೆ
ಸೊಗದಿಂಪು ಮೈಥಿಲಿಗೆ. ಉಕ್ಕುವಕ್ಕರೆಯಿಂದೆ
ತಬ್ಬಲೇಳ್ತರೆ ಕೆಳದಿಯಂ, ತ್ರಿಜಟೆ ಕೈತಡೆದು
ಸನ್ನೆಗೈದಳ್, ಕಣ್ಗೆ ಬೀಳದಿರ್ಪೊಡಮಲ್ಲಿ
ಸುತ್ತಲುಂ ಕಾವಲಿರ್ಪುದನವಳ ಜಾಗ್ರತಿಗೆ
ತಿಳುಹಿ. ಸಂಹರಿಸಿದಳ್ ಸೀತೆ ತನ್ನಾತ್ಮದಾ
ಬಹಿರಂಗದುತ್ಸಾಹಮಂ. ಸುಯ್ದು ಪರ್ಚಿದಳ್
ಕಿವಿಗೆ: "ನಿನ್ನನ್ನರಿಂ ಸುಕ್ಷೇಮಮೀ ಲಂಕೆ,
ತ್ರಿಜಟೆ. ರಾಕ್ಷಸ ನೀಚನಪವಚನ ನಿಚಯಮಂ
ನೂಂಕಿ, ಭೀರುಗೆ ಧೈರ್ಯಮಂ ನೀಡಿತಯ್ ನಿನ್ನ
ವಾಣಿ. ಕನಸಿಗೆ ಮಿಗಿಲ್, ನಿನ್ನ ಹರುಷಮೆ ನನಗೆ
ಕೊಟ್ಟಪುದು ಕಲ್ಯಾಣಮಂ. ನನಗುಮೊಂದಾಯ್ತು,
ಸಖಿ, ಸುಖಸ್ವಪ್ನಮದನುಸುರಲ್ಕೆ ನಾಣ್ಚುವೆನ್!
ಈ ದುಷ್ಟನಪಚಾರದಿಂದೆನ್ನ ಬಗೆ ಕದಡಿ
ವಿಹ್ವಲಿಸುತಿರ್ಪೊಡಂ, ಇಂದು ಪೊಳ್ತರೆಯಿಂದೆ

ನಿರ್ನೆರಂ ಸಂತೋಷಮುಕ್ಕುತಿಹುದಾತ್ಮಕ್ಕೆ,
ಕ್ಷೇಮಂ ಸಮೀಪಿಸಿದವೋಲ್!'' ಮಾಗಿಯೆಳವಿಸಿಲ್
ಬನ ಪಸುರ್ ಸಿರಿಯೊಡನೆ ಸರಸವಾಡುತ್ತಿರ್ದ್ದ
ಚಂದಮಂ ಕಣ್ ಸುಳಿಸಿ ಕಂಡು, ಸೀತಾದೇವಿ
''ಇಂದಿದೇನ್ ಚೆಲ್ವು, ಸಖಿ, ಶಿಶಿರ ಸಾಮ್ರಾಜ್ಯಕ್ಕೆ
ಒಲ್ಮೆಸುತಿದೆ ಚೈತ್ರಸೌಂದರ್ಯಮಂ? ಅದೋ
ಆ ಭವ್ಯ ಶಿಂಶುಪಾಂಘ್ರಿಪಮಿಂತು ಮನ್ಮನಕೆ
ಪಿಂತಾವಗಂ ತಂದುದಿಲ್ಲಮನುಭೂತಿಯಂ
ರಾಮಸಾನ್ನಿಧ್ಯದಾ!'' ಮೊಗಮಾಗುತತ್ತಣ್ಗೆ
ನೋಟಮಂ ಕೀಲಿಸಿದ ಸಾಶ್ರುಸುಖನೇತ್ರೆಯ
ಸುಖಕೆ ಸುಖಿಸುತಾ ತ್ರಿಜಟೆ, ತನ್ನ ಕನ್ನೆಗೆ ತಾಯಿ
ಬೇಡುವಳ್ಕರೆಯಿಂದೆ, ಬಿನ್ನಯ್ಸಿದಳ್: ''ಮಗಳೆ,
ಬರ್ದುಕಿರಲ್ ಕಾಣ್ಬೆಯೊಳ್ಪಂ. ಸೇವಿಸಲ್ಪಮಂ,
ತೀರ್ಥಪ್ರಸಾದಂಗಳೊಲ್, ಫಲಜಲಂಗಳಂ,
ಪ್ರೀತಿಯಿಂದಾನೀವುದಂ.'' ಸೀತೆ ಮೊಗದಿರುಹಿ,
ತ್ರಿಜಟೆಯಂ ಸಂಪ್ರೀತಿಯಿಂ ನೋಡಿ: ''ನಿನ್ನಾಶೆ
ಮಂಗಳಂ ನನಗೆ. ಆ ಶಿಂಶುಪದ ಪಾದಮಂ
ತೊಳೆದು ಪರಿಯುವ ನಿರ್ಝರಿಣಿಯೊಳ್ ಮೊಗಂದೊಳೆದು,
ಬಳಸಿರ್ಪ ತರುಗುಲ್ಮಕೃತಿಯ ಏಕಾಂತದೊಳ್
ಕುಲಗುರುಗೆ ರವಿಗೆ ಅರ್ಘ್ಯವನೆತ್ತಿ, ಬಂದಪೆನ್
ಪೂಜೆಯಂ ಪೂರೈಸಿ.'' ಮೆಲ್ಲನೆತ್ತಿದಳವಳ
ಕೈವಿಡಿದು; ಮತ್ತಮೊರೆದಳ್ ತ್ರಿಜಟೆ: ''ಸುತ್ತಲುಂ
ಕಾಪಿರ್ಪುದಂ ನೆನೆದು, ನೆನೆಯದಿರಕಾಮ್ಯಮಂ,
ದೇವಿ. ನಿನ್ನ ಹರಣಕ್ಕೊತ್ತೆಯಿಟ್ಟಿಹೆನೆನ್ನ
ಹರಣಮಂ. ನಿನ್ನುಸಿರಿಗೇನಾದೊಡಂ ಕೇಡು
ಸಂಭವಿಸೆ, ನೇಲುವುದು ನನ್ನ ಪೆಣಮದರ ಬಳಿ;
ತಿಳಿ, ಮಗಳೆ!''
ಮಂದಸ್ಮಿತಂ ಬೆರಸಿ ರಾಮಸತಿ,
ಕಿಂಕರಿಯ ಶಂಕೆಯಂ ದಿಟ್ಟಿಯಿಂದಪಹರಿಸಿ,
ಒಯ್ಯನಿಳಿದಳು ನಿರ್ಝರಿಣಿ ತಟಿಗೆ. ಪೊಕ್ಕಳಾ
ತ್ರಿಜಟೆ ತೃಣಕುಟಿಗೆ, ಪಣ್ಣುಣಿಸನಣಿಮಾಡಲಾ

ಪತಿವ್ರತೆಯ ವ್ರತಕೆ. ಸಿಸಿರದ ಬಿಸಿಲ್ ಹಿತಮಾಗೆ,
ಕುಳಿರ ಚಳಿಯಂ ಗೆಲ್ದಿರಂಕೆಯ ವಿಹಂಗಗಳ್
ಬಂಡೀಂಟಿ, ಪಣ್ಣುಂಡು, ಕೊಂಬೆಕೊಂಬೆಗೆ ನೆಗೆದು
ದಾಂಟಿ, ಹಾರಾಡುತಿರ್ದುವು ಹಾಡಿ ದಶರಥನ
ಸುತನ ಮಡದಿಯ ಮಹಾಯಾತ್ರೆಯನೊಲಿದು ನೋಡಿ!

## ಸಂಚಿಕೆ ೪

# ಅಶ್ರುಗಂಗೋತ್ರಿ

ಜನ ಚರಣ ಚಲದ್ ಧೂಳಿದೂರಂ, ಮೃಗಖುರಾ
'ಕ್ಷುಣ್ಣ ಶಾದ್ವಲ ಸುಂದರಂ, ಜಲಪಾನ ಸಂತೃಪ್ತ
ಪಕ್ಷಿಪಾದಾಂಕಿತ ಶಿಲಾ ಕಲಾ ಶೈವಾಲ
ಚಿತ್ರಿತಂ, ವೃಕ್ಷಗುಲ್ಮವ್ರತತಿ ಸಂವೃತಂ,
ಝರ ಪತನಘೋಷ ಗದ್ಗದ ವಿಹಗಕೂಜಿತಂ,
ಸಂಕ್ಷಿಪ್ತ ವಿಪಿನದೋಲಿರ್ದುದಾ ನಿಕುಂಜ ಭೂ,
ಕಿಂಶುಕ ಕದಂಬಾದಿ ತರು ನಿಸೇವಿತ ಮಹಾ
ಶಿಂಶುಪಾಶೋಕ ಸಂಶೋಭಿತಂ. ನಿಬಿಡಮಾ
ಶಿಂಶುಪದ ಶಾಖಾಗ್ರದೊಳಗಿರ್ದು, ಕಂಟಕಿತ
ರೋಮ ತನು, ನೋಡುತಿರೆಯಿರೆ ಸಮೀರಾತ್ಮಜಂ
ನಿರುದ್ಧೋಚ್ಛ್ವಾಸನೊಲ್ ನಿಷ್ಪಂದಿತಂ, ದೇವಿ
ಇಳಿತಂದಳೊಯ್ಯನೊಯ್ಯನೆ ನಿರ್ಝರದ ತಟಿಗೆ,
ಭಕ್ತಶಿಲ್ಪಿಯ ರಮ್ಯವಿಗ್ರಹಕೆ ದೇವತಾ
ಪ್ರಾಣಮವತರಿಸುವೋಲ್. ಕೊಂಬೆಯೆಳ್ತರದಿಂದೆ,
ಹತ್ತೆ ಸಾರಿರ್ದಳಂ ಕಂಡಾಕೆಯುಂ, ಆ
ಕೃಶಾಂಗಿಯಂ, ಮೀಹಮಿಲ್ಲದ ಮಲಿನಗಾತ್ರೆಯಂ,
ವಿವಿಧ ಭಾವ ಕ್ರಕಚ ಪೀಡನಕೆ ಸಿಲ್ಕಿತೊ
ಸಮೀರಜಾತ್ಮಂ! ಸಂತೋಷವುಕ್ಕಿತದನಿಕ್ಕಿ
ದುಃಖಧೂಮಂ ತುಂಬಿದತ್ತದನಿರಿದು ಸೀಳ್ದು
ಉಜ್ವಲಿಸಿತುರಿ ರೋಷಭೀಷಣವಿಷಾದದಾಃ
"ಇವಳಹುದೆ ಆ ದೇವಿ, ನನ್ನ ಸಾಹಸದಂತ್ಯ

ಗಂತವ್ಯಲಕ್ಷ್ಮಿ! ದಿಟಮಾ ರಾಮನರ್ಧಾಂಗಿ
ಇವಳಲಾ! ಧನ್ಯನಾಂ, ಸಾರ್ಥಕಮೆನ್ನ ಜನ್ಮಂ!
ಅನಿಲದೇವನೆ ನಮೋ; ಸೂರ್ಯದೇವನೆ ನಮೋ;
ದೇವತೆಗಳಿರ ನಮೋ; ಸರ್ವದೇವರ ದೇವ,
ಧರ್ಮಮೂರ್ತಿಯೆ ನಮೋ! ಸೀತೆಯಂ ತೋರ್ದುದಕೆ,
ಆ ತಾಯಿ ಸಾರ್ದುದಕೆ, ಕೃತಕೃತ್ಯನಾದುದಕೆ,
ಮುಹುರ್ ಮುಹುರಿದೋ ನಿಮಗೆ ನಮೋ! ನಮೋ! ನಮೋ!''
ತನ್ನೊಳಗೆ ತಾನಿಂತು ವಂದನೆಯನರ್ಪಿಸಿರೆ,
ಬೀಸುವೆಲರಿಗೆ ಬೀಳ್ವ ಮರದೆಲೆವನಿಗಳೊಡನೆ
ಬಳಬಳನುದಿರ್ದತ್ತು ಕಣ್ಣಾಲಿನೀರ್. ಮತ್ತೆ
ಮರುಕದಿಂದಾಂಜನೇಯಂ: ''ಅಯ್ಯೊ, ದಾಶರಥಿ
ಬಣ್ಣಿಸಿದ ತನ್ನ ದಯಿತೆಯ ಚಿತ್ರವೆಲ್ಲಿ? ಈ
ದೀನ ದುಃಖಿನಿಯೆಲ್ಲಿ? ಬರ್ಣಿಸಿದ ಚೆಲ್ವೆಸೆವ
ಚಿತ್ರಪಟಮಂ ಮಸಿಯ ಕೈ ಹಿಸುಗಿ ಬಿಸುಟಂತೆ
ತೋರ್ಪಳೀ ಮಹಿಳೆ! ವಿಧಿಯ ನಿಷ್ಠುರ ಹೃದಯಮಂ
ಸುಡು ಸುಡು, ದಯಾಶೂನ್ಯಮಂ!. . . ಬರಿದೆ ಬಯ್ಯಲೇನ್
ಕಾಣದಿರ್ಪುದನಿಲ್ಲಿ ಕಂಡ ಕಾರಣವನಾಂ
ಕೈಬಿಟ್ಟೆನಲ್ತೆ? ನೀಚನ ಮಂಡೆಯಂ ನನ್ನ
ದೋರ್ದಂಡ ಮುಷ್ಟಿವಜ್ರದಿನಪ್ಪಳಿಸಿ ಬಡಿದು
ಕೆಡಹದೆಯೆ ಕೆಮ್ಮನಿರ್ದನದೇಕೆ ನಾಂ, ಮರದಿ,
ಮರವಟ್ಟನೋಲ್? ಇರ್ಕೆ; ಪಶ್ಚಾತ್ತಾಪಮಿರ್ಕೆ.
ದೇವಿಯೇನನೊ ಪೇಳ್ವಳಾಲಿಪೆನ್. ತರಿಸಲ್ವೆನ್
ಆಬಳಿಂ ಮುಂ ಸಲ್ವ ಮೇಲ್ವಟ್ಟೆಯನ್!''
ಪುಳಿಲ್
ತಾಣದೈಕಾಂತಮಂ ಪೊಕ್ಕುದೆ ತಡಂ ಸೀತೆ,
ಸುತ್ತಂ ನೋಡಿ, ಸುಯ್ದು, ನಿಂತಳಂತರ್ಮುಖಿ,
ಸಮಾಧಿಸ್ಥಳೋಲ್. ಗುಹ್ಯಮಾವುದನೊ ಪೊತ್ತದಂ
ಪೇಳಲಾತುರಮಿರ್ದೊಡಂ ಪೇಳಲಾರದೆಯೆ
ತುಟಿಗಚ್ಚಿ ಬಾಯ್ಮುಚ್ಚಿ ಬಿನ್ನನಿರ್ದಂದರೋಲ್
ಇರ್ದುವು ಗಿಡುಮರಂಗಳಲ್ಲಿ, ಸಂತೋಷಮಂ
ಚೆಲ್ಲಿ. ಮಾಗಿಯ ಮಂಜನೆಲೆಯ ಬಟ್ಟಲೊಳಿಟ್ಟು,

ಪೊತ್ತಿಸಿರ್ಪನಿಯ ಕರ್ಪೂರಕಿನರೋಚಿಯಂ,
ಪೂಗಂಪಿನಾರತಿಯನೆತ್ತುವ ನಿಮಿತ್ತದಿಂ
ಸೂಚಿಸಿತ್ತಾ ಸ್ಥಾವರಂ ಶುಭವನವನಿಜೆಗೆ
ಮಂಗಳಾಶೀರ್ವಾದದಾ. "ತಾಯಿ, ಭೂದೇವಿ,"
ಗದ್ಗದಿಸಿ, ಕೈಮುಗಿಯುತಾ ಪ್ರಕೃತಿ ವಿಗ್ರಹಕೆ,
ಮುನ್ನೊರೆದಳಿಂತು: "ನೀನಾದೊಡಂ ಕಾಯಮ್ಮ
ನಾಥವತಿಯಾದೀ ಅನಾಥೆಯಂ. ಲಂಕೆಯುಂ
ನಿನ್ನಂಕಮಲ್ತೆ? ಅಂತಲ್ಲದಿರೆ ಈ ಶಾಂತಿ
ನನಗೆ ದೊರೆಯುವುದೆಂತುಟಿಲ್ಲಿ? ಪೆತ್ತಂಬೆಯೇ
ಮುದ್ದಿನಿಂದೆತ್ತಿ ಮುತ್ತಿಟ್ಟು ಸಂತೈಸುವೋಲ್
ಮತ್ತೆ ಮಗುವಾದೆನಾಂ! ದೇವತಾತ್ಮಗಳಿಲ್ಲಿ
ಸತ್ ಶಕ್ತಿಗಳ್ ಸುತ್ತಣಿಂ ಮೂಡಿ ಪೊರೆವುವೆನೆ
ಧೈರ್ಯಮೊಂದುಕ್ಕುತಿಹುದಿಂದೆನಗಭೂತಪೂರ್ವಂ!
ಹರಧನುವನೆತ್ತಿದಂದೆನ್ನ ಮನದನ್ನಂಗೆ
ಹೂಮಾಲೆಯಿಕ್ಕುವಂದುಕ್ಕಿದೊಂದುತ್ಸವಂ
ಬಗ್ಗಿಪುದು ಸುಗ್ಗಿಗೋಗಿಲೆಯಾಗಿ ಮಾಗಿಯಾ
ನನ್ನೆದೆಯೊಳಿಂದು: ನಿನ್ನಂಕಮೆ ದಿಟಂ, ತಾಯೆ,
ಈ ಲಂಕೆಯುಂ!"
ಪುಳಿಲ್‌ಚೆಲ್ವನಾಲಿಗಳಿಂದೆ
ಪೀರ್ದಿಂಟಿ ಪೂಜಿಪೋಲೀಕ್ಷಿಸುತೆ, ಚಲಿಸಿದಳ್
ಸುರಸುತೋಪಮೆ ಧರಣಿಸುತೆ, ನಿರ್ಝರಂ ನೆಗೆವ
ಕಡುಗೆಯ್ಮೆಯಂ ಸಹಿಸೆ ನೀರ್‌ಬೀಳಕೊಂದಂಚು
ಕಟ್ಟಿದೊಲಗುರ್ವಿರ್ದ ಪಾಸರೆಗೆ. ನೋಡಿದಳ್
ಆ ಮಹೋನ್ನತಿಯಿಂದೆ ಜಲಪಾತದಾಳಮಂ,
ಕೌಂಗುತರುಮೇಯಮಂ. ಕಾಣ್ಮೆಗಳ್ಕಿದ ಮನಂ
ಮತ್ತೆ ಸಂತೋಷಿಸಿತು. ಭಕ್ಷಿಸೆ ತೆರೆದ ಬಾಯ್
ರಕ್ಷಿಸುವ ಮನೆಯಾಯ್ತು: ಕೊಟ್ಟವಧಿಯೊಳಗಾಗಿ
ತನಗೆ ರಾಮನ ರಕ್ಷೆಯೊದಗದಿರೆ, ರಾವಣ
ಬಲಾತ್ಕಾರದಿಂದಮುಂ ಮೇಣವನೊಡನೆ ಬೇಳ್ವ
ಹೇಸಿಗೆಯ ಗತಿಯಿಂದಮುಂ ಪಾರಾಗಲಿದುವೆ
ಪರಮಾಶ್ರಯಂ! ತೊರೆಯನನುಕರಿಸಿ ಧುಮುಕಲ್ಕೆ,

ನೀರಂತೆವೋಲ್, ತುಂತುರಾಗದೇನೀ ನನ್ನ
ಬಡವೊಡಲ್? ಪೊರೆಯಾಗದೆನ್ನ ಛಿದ್ರಿತ ಶವಂ;
ಕರುಣೆಯೀ ನಿರ್ಝರಿಣಿ; ಕಡಲನತಿ ದೂರಮ್;
ನೆಲಂ ಪೆತ್ತಳೆಂ; ನೀರ್‌ಬಸಿರ್ ಪೇಸುವುದೆ? ಮೀನ್ಗೆ
ಪಸಿವಿರದೆ? ಪಲ್ಲಿರದೆ? ತಿಂದಿಲ್ಲಗೈಯದೇನ್
ಪರದೇಸಿಯೀ ಪಾಳ್ಕಾಯಮಂ?''
ಕೊರಳ್ ಬಿಗಿದು
ಮೂಗಳ್ತಳಾ ದಿವ್ಯದುಃಖಿನಿ ಸಗದ್ಗದಂ,
ತನ್ನ ಕಲ್ಪನೆ ಮಥಿಸಿದಾ ತನ್ನ ದುರ್ಗತಿಗೆ
ತಾನೆ ಕುದಿದಿರ್ದೆ ಕರಗಿ ಮರುಗಿ. ಧೃತಿಯಿಂ ಮತ್ತೆ
ತೊಳೆದಳಶ್ರು ಮಲಿನ ಕಪೋಲಮಂ. ಝರ ನಟತ್
ಸ್ಫಟಿಕ ಶೀತಲ ಲಸತ್ಕೋಮಲ ಶಿವಾಂಬುವಂ
ಕೊಂಡಳಂಗೈಗಂಜಲಿಯನೆತ್ತಿದಳ್ ತನ್ನ
ವಂಶಾಧಿದೇವನಿಗೆ ರವಿಗರ್ಘ್ಯಮಂ: ''ನಮೋ,
ಹೇ ಜಗಚ್ಚಕ್ಷು, ವಂಶದ ಮಗಳ್ ಪ್ರಾರ್ಥಿಪಳ್
ಕೇಳ್, ಕರುಣೆ. ನೀಂ ವಿಶ್ವಶಕ್ತಿಪ್ರತೀಕನಯ್;
ಮೇಣ್ ಋತಪ್ರತಿಮಾ ಸ್ವರೂಪನಯ್; ಪ್ರತಿದಿನಂ
ಪ್ರತ್ಯಕ್ಷಮಪ್ಪ ಪರಮಾತ್ಮನಯ್ ನೀಂ ನಿಖಿಲ
ಜಲ ಸಸ್ಯ ಮೃಗ ಮನುಜ ಜೀವರಿಗೆ. ನಿನ್ನಿಂದೆ
ಲೋಕಂ ನವೀನಂ ನಿರಂತರಂ. ನಿನ್ನಿಂದೆ
ಸೃಷ್ಟಿಗುತ್ಸಾಹಂ; ಲಯಂ ಸೃಷ್ಟಿಮುಖಿ ನಿನ್ನ
ಚೈತನ್ಯದಿಂ; ಸ್ಥಿತಿಗೆ ನೀನೆ ಗತಿ, ಮತಿ, ಶಕ್ತಿ,
ಮೇಣಕ್ಷರಜ್ಯೋತಿ. ನಾಮರಿಯದಿರ್ಪೊಡಮೇನೊ?
ಕಳ್ತಲೆಗೆ ಮಿಳ್ತುವಾಗಿರ್ಪಂತೆ, ಪಾಪಮಂ
ಸಂಹರಿಸಿ ಪುಣ್ಯಮಂ ಪೊರೆವೆ ನೀಂ, ಹೇ ಜಗತ್
ಕಲ್ಯಾಣಮೂರ್ತಿ. ರಕ್ಷಿಸೊ ನಿನ್ನ ಇಕ್ಷ್ವಾಕು
ಕುಲ ಕುಮಾರ್ತೆಯ ಪುಣ್ಯಮಂ, ಮಾನಮಂ, ಮತ್ತೆ
ವಂಶಗೌರವ ಕೀರ್ತಿಯಂ! ವಿಶ್ವತಿಮಿರಮಂ
ಕೊಲೆಗೈವ ನಿನಗೆ ರಾಕ್ಷಸನೆದೆಯ ಪೊಲೆಗುಹೆಯ
ಕತ್ತಲೆಯ ಕಿರುಬಿತ್ತರಂ ಪಿರಿದೆ? ಕುಲಗುರುವೆ,
ಕೈಬಿಡದಿರೆನ್ನಂ ಪತನಗತಿಗೆ. ರಕ್ಷೆಯಿರೆ

ರಘುರಾಮ ಸತಿಗೆ ನೀಂ, ಮಂಗಳಮಹುದೊ ದಿಟಂ
ಮತ್ಪ್ರಾಣ ಪತಿಗೆ!''
                    ಅರ್ಘ್ಯವನೆತ್ತಿದಂಜಲಿಯ
ತೀರ್ಥಮೊಯ್ಯನೆಯೆ ತೊಟ್ಟಿಕ್ಕುತಿರೆ, ತೊರೆಯ ಮೊರೆ
ಪಕ್ಷಿಕಲರುತಿ ಪುಷ್ಪಮೋಂಕಾರ ಘೋಷಮಂ
ಜಪಿಸಿ ಪರಿದಿರೆ, ನಿಮೀಲಿತನೇತ್ರೆಯಾ ಕೃಶಗಾತ್ರೆ
ಧ್ಯಾನಗಂಗಾಸ್ರೋತ ಸಂಸ್ನಾತೆ ತಾಂ ಕೇಳಿದಳ್,
ವಿಸ್ಮಿತಾಂತಃಕರಣೆ, ದೇವಕಂಠಧ್ವನಿಯ
ತಾರ ಮಂದ್ರೋದಾರಮಂ. ನೀರ್ದನಿಯ ಮೀರ್ದು,
ಧುಮ್ಮಿಕ್ಕುತುರುಳ್ವಬ್ಬಿಯಬ್ಬರವನಾಕ್ರಮಿಸಿ
ಪೆರ್ಚಿ, ಪರ್ವಿದುದು ಖಗರವ ಸಮಶ್ರುತಿಯಾಗಿ
ವೇದನಾದೋಪಮಂ ಆ ಗಂಭೀರವಾಣಿಃ
''ಇರ್ಪುದುತ್ತರ ದಿಶೆಯೊಳಂಬುಧಿಯಿನಂಬುಧಿಗೆ
ಪೂರ್ವ ಪಶ್ಚಿಮ ದಿಶಾಧೀಶರಣಿಮಾಡಿದರೊ
ಕುಂಭಿನಿಗೆ ತಲೆಗಿಂಬನೆನೆ ಪರ್ವಿ ಪರ್ವತಂ,
ಚಂದ್ರಚೂಡಪ್ರಿಯಂ, ಹಿಮವಂತನಾಮಂ,
ನಗೇಂದ್ರ ರುಂದ್ರಂ. ತೆಂಕಲೊಳಲ್ಲಿಗನತಿದೂರಂ
ದೇಶ ಕೋಸಲಮಿಹುದು ಧನ ಧಾನ್ಯ ಜನ ತುಂಬಿ
ಸರಯೂ ನದಿಯ ಮೇಲೆ. ದೇವ ದಶರಥನಾಳ್ದ
ರಾಜಧಾನಿಯದರ್ಕೆ ಮನುಕೃತಮಯೋಧ್ಯೆ. ಆ
ಕ್ಷಿತಿಪತಿಗೆ ಮೂವರಿರ್ದರ್ ಚೆಲ್ವುನೀರೆಯರ್
ಕೌಸಲೆ ಸುಮಿತ್ರೆಯರ್ ಕೈಕೆ. ಮಕ್ಕಳವರ್ಗೆ
ರಾಮ ಲಕ್ಷ್ಮಣ ಭರತ ಶತ್ರುಘ್ನರಾದರಯ್,
ಚಕ್ರವರ್ತಿಗೆ ಚತುರ್ಭುಜಗಳೋಲ್. ಅಗ್ರಜಂ,
ನೀಲಮೇಘಶ್ಯಾಮಕೋಮಲಂ,'' ಜನಕಜೆಗೆ
ನಾಳ ನಾಳದಿ ದುಮುಕುತಿರೆ ಜೇನ್ಸೊಗಂ, ಮೆಯ್ಗೆ
ಮುಳ್ನವಿರ್ ಮೂಡಿ ರಸವಶವಾಗುತಿರೆ ಮನಂ,
ದ್ರವಿಸುವೊಲ್ ಬಾಷ್ಪಾರ್ದ್ರ ಚೇತನಂ, ಮತ್ತಮಾ
ಮುಂದುವರಿದುದು ದಿವ್ಯವಾಣಿಃ ''ಚೇತೋಹರಂ,
ಮನ್ಮಥಂಗೆನಿತೊಮಡಿ ಸುಂದರಂ, ಕಲಿಧನ್ವಿ,
ಭೀಮವಿಕ್ರಮಿ, ಶಾಸ್ತ್ರಕೋವಿದಂ, ದೈತ್ಯಾರಿ,

ಮಂತ್ರಾಸ್ತ್ರಶಸ್ತ್ರನಿಪುಣಂ, ಚಂದ್ರರಮ್ಯನಾ
ರಾಮಚಂದ್ರಂ ಶಿವಧನುವನೆತ್ತಿ ಸೀತೆಯಂ,
ಮಿಥಿಳೇಂದ್ರ ಸಂಪ್ರೀತೆಯಂ, ಧರಾಜಾತೆಯಂ,
ಲೋಕವಿಖ್ಯಾತೆಯಂ ಮದುವೆನಿಂದಂ ಅನರ್ಘ್ಯ
ಸೌಂದರ್ಯ ಲಕ್ಷ್ಮಿಯಂ ತ್ರೈಭುವನದಾ!''
'ಆ' ಎಂಬ
ಆಲಾಪನೆಯ ದೀರ್ಘ ಮಾಧುರ್ಯಮಂತ್ಯಮಂ
ಸೇರ್ವನಿತರೊಳೆ ದೇವಿ, ತಾಳಲಾರದೆ, ಶುಭದ
ಸಂದೇಶ ಕಾರಣವನರಿಯುವ ಕುತೂಹಲಕೆ
ಕಣ್ದೆರೆದಳತಿಸುಖಮುಖೀಃ ಹರಿಯುತಿರ್ದತ್ತು
ತೊರೆ, ಮೊರೆದು. ಭೋರ್ಗರೆಯುತಿರ್ದತ್ತು ಝರಶರ
ನಿಪಾತಘೋಷಂ. ಶಿಶಿರರ್ತು ಪೂರ್ವಾಹ್ನ ರವಿಯ
ರೈರಶ್ಮಿ ನಲಿದುದು ತರಂಗಾಗ್ರದೊಳ್ ಮಿಣುಕಿ
ಮಿಂಚಿ. ಹಕ್ಕಿಗಳುಲಿಗಳಡವಿಜೋಗುಳವೆನಲ್
ತೂಗಿದುವು ಕಿವಿದೊಟ್ಟಿಲಂ. ಕಾಣದಾರುಮಂ
ಬೆರಗಾಗಿಃ ''ಕೇಳ್ದೆನಲ್ಲವೆ ದಿವ್ಯವಾಣಿಯಂ?
ಪೇಳ್ದುದೈಸಲೆ ಶುಭದ ವಾರ್ತೆಯಂ? ಕಣ್ದೆರೆಯೆ,
ಕಿವಿಮುಚ್ಚಿದಂತಾಯ್ತು! ಕಾಣೆನಾರುಮನಂತೆ
ನಿಂತುದಾ ವಾಣಿಯುಂ! ಕುಲದೈವ ರವಿಕೃಪೆಯೊ?
ಪೆತ್ತಮ್ಮ ಭೂಮಿತಾಯಿಯ ಕೃಪೆಯೊ? ಮೇಣಾವ
ವೃಕ್ಷಯಕ್ಷನ ವಚನ ಸಾಂತ್ವನವೊ? ಮೇಣೆನ್ನ
ಪಸಿದ ಮೆದುಳಿನ ಬೆಮೆಯೊ? ಬಯಕೆಯೊಡ್ಡಿದ ಬರಿಯ
ಬಯಲೊ? ರಕ್ಕಸ ಕವಡೊ?—ಅಲ್ತಲ್ತು! ದಿಟಮೆ ದಲ್!
ಗಾಂಭೀರ್ಯಮೆಲ್ಲಿ ಕಪಟಕೆ? ಭ್ರಾಂತಿಗಾ ಧ್ವನಿಯೆ?
ಏಂ ಮಧುರಮೇಂ ಶಾಂತಮೇಂ ಧೀರಮಿರ್ದುದಾ
ಕಂಠ ಘಂಟಾ ರವಂ! ಈ ಚೆಲ್ವನೀಕ್ಷಿಸಲ್
ಸುರರೆನಿತೊ ಚರಿಪರಿಲ್ಲಿಗೆ. ನೋಡದಿರ್ದೊಡೇಂ
ನರರ ಕಣ್? ಪ್ರೇಕ್ಷಕರಭಾವದಿಂದಿಂತಪ್ಪ
ಸೌಂದರ್ಯಮಂ ವ್ಯರ್ಥಮಾಗಿಸಲ್ಕೊಪ್ಪದೀ
ಸೃಷ್ಟಿ. ಆವನೊ ಸುರನಿರಲ್‌ವೇಳ್ಕುಮೆನ್ನಮೇಲ್
ಕರುಣೆ, ಸಂತೈಸಲೆನ್ನಂ, ನುಡಿದನಾ ಮಧುರ

ವಾಕ್ಯಂಗಳಂ! ಏನಾನುಮಾರಾನುಮಿರ್ಕೆ!
ಧನ್ಯೆಯಾನೆನ್ನ ಹೃದಯೇಶ್ವರನ ರೂಪಗುಣ
ನಾಮಮಯ ಕಾವ್ಯಮಂ ಕೇಳ್ದು. ಸಟೆಯಾದೊಡೇಂ?
ದುಃಖಜೀವಿತೆಯೆನಗೆ ಧೈರ್ಯಮೀವುದೆ ದಿಟಂ;
ಕಷ್ಟಬಂಧಿತೆಯೆನಗೆ ನೆಚ್ಚನೀವುದೆ ದಿಟಂ;
ನಿಷ್ಠೆಯಂ ಸಾಧಿಸುವಳೆನಗೆ ಹರಕೆಯೆ ದಿಟಂ;
ಪ್ರತ್ಯಾಶೆಯಾ ಶಿಷ್ಟಮಿಷ್ಟಮೆ ದಿಟಂ!"
                                        ಮತ್ತೆ
ಅರ್ಘ್ಯಪೂರ್ಣಂ ಕರಪುಟಾಂಜಲಿಯನೆತ್ತಿದಳ್;
ಕಣ್ ಮುಚ್ಚಿದಳ್. ಮತ್ತೆ, ಇಂದ್ರಿಯಾತ್ಮಕ ಮನಂ
ವಿದ್ಯುದಣು ಚಕ್ರನರ್ತನದಿಂದೆ ವರ್ಣಮಯ
ಸೃಷ್ಟಿ ವೈವಿಧ್ಯಮಂ ರಚಿಪೊಲಾ ಜಲಪಾತ
ಘೋಷದಿಂದುಣ್ಮಿದುದೆನಲ್ ಕಿವಿಗೆವಂದುದಾ
ಆಕಾಶ ವಾಕ್:
                        "ನೀನರಿತಿರ್ಪುದಂ, ನೀನೆ
ಕಂಡುಂಡುದಂ ನಿನಗೆ ಪೇಳಲೇಂ ಸಾರ್ಥಕಂ?
ಮುನ್ನೊರೆವೆನಾಲಿಸಾ, ಸುಗ್ರೀವ ಸನ್ಮಿತ್ರ
ಶ್ರೀರಾಮ ಪುಣ್ಯಸತಿಃ ದುರುಳ ಲಂಕಾಧಿಪಂ,
ಮಾರೀಚ ಮೃಗಯಾ ನಿಮಿತ್ತದಿಂ ರಾಮನಂ
ಮೇಣಂತೆ ಲಕ್ಷ್ಮಣನುಮಂ ದೂರಮೆಳೆತಟಂ
ಮಾಡಿ, ಲಂಕೆಗೆ ನಿನ್ನನಾ ಪಂಚವಟಿಯಿಂ
ಕವರ್ದುಯ್ದನಂತರಂ ದುಃಖಹತಚೇತಸಂ,
ದೀನಾತಿದೀನಮತಿ, ನಿನ್ನ ಪತಿ, ದಾಶರಥಿ
'ಹೇ ವರಾರೋಹೇ, ಅನಿಂದಿತೇ, ಸರೋಜಮುಖಿ,
ದಯಿತೆ, ಮೈಥಿಲಿ, ಸೀತೆ' ಎಂದೊರಲ್ದಲೆದಲೆದು
ಕರೆಕರೆದರಸಿ, ಮರಣಮುಖಿ ಜಟಾಯುವಿನರಿತು
ನಿನಗೊದಗಿದಪದಶೆಯ ಕಥೆಯಂ, ನಿರಾಶಾ
ಕಬಂಧನಂ ಕೊಂದು, ಮುನ್ನಡೆಯೆ, ತಾಪಸಿ ಶಬರಿ
ತನ್ನ ಜೀವವನಿತ್ತು ರಕ್ಷಿಸಿದಳೆಲೆ ದೇವಿ
ನಿನ್ನಾಣ್ಮನಂ. ಮುಂದೆ ವಾನರ ನೃಪೇಂದ್ರನಾ
ರವಿತನಯ ಸುಗ್ರೀವನೊಳ್ ಲಭಿಸಿದುದು ಮೈತ್ರಿ,

ಸುಕೃತಮಂಗಳೆ, ನಿನ್ನ ಜೀವಿತೇಶ್ವರಗೆ. ಆ
ವಾನರ ವರೇಣ್ಯಾಂ ಕಪಿಧ್ವಜಾಲಂಕೃತಾ
ಗಿರಿಗಹ್ವರಾದ್ಭುತಾ ಕಿಷ್ಕಿಂಧೆಯನ್ನಾಳ್ವ
ರುಂದ್ರವಿಕ್ರಮಿ. ನಾನವಂಗನುಚರಂ, ಪೂಜ್ಯೆ,
ನಿನ್ನ ಮಾರ್ಗಿತಕಾಗಿ ಬಂದಸಂಖ್ಯೇಯರೊಳ್,
ಶತಯೋಜನಾಂಭೋಧಿಯಾ ಪಾರದೊಳ್ ನಿಂದು
ನಿನ್ನ ವಾರ್ತೆಯನುಯ್ವ ನನ್ನಂ ನಿರೀಕ್ಷಿಸುವ
ಸಾಧನಾಸಕ್ತರೊಳಮೇಯ ಶಕ್ತರೊಳೊರ್ವ
ಸಾಮಾನ್ಯನೆಂ. ಪುತ್ರನಂಜನಾ ದೇವಿಗಾಂ;
ಮರುತನಿಂ ಸಂಭವಿಸಿದಾಂಜನೇಯಂ!"
ವಾಣಿ
ಮಾಣ್ದುಂ ಸುಖಸ್ವಪ್ನಭಂಗ ಭಯ ಭೀತೆ, ಸತಿ,
ಕಣ್ದೆರೆಯಲಂಜಿರಲ್, ಅರ್ಘ್ಯಮೆತ್ತಿದ ಕೈಯ
ಅಂಜಲಿಗದೇನೊ ಬಿಳ್ದವೊಲಾಗುತವಳ ಮೆಯ್
ಜುಮ್ಮೆನೆ ನವಿರ್ನಿಮಿರಲೊಯ್ಯನೆ ಮಲರ್ದುವಾ
ಮುಗುಳುಗಣ್: ಗೋಚರಿಸಿತರ್ಘ್ಯ ತೀರ್ಥದೊಳೊಂದು
ಪೊನ್ನುಂಗುರಂ ಬಿಸಿಲೊಳುಜ್ವಲಿಸಿ ಥಳಥಳಥಳನೆ
ಥಳಿಸಿ, ಕಿವಿಯಾಲಿಕೆಗೆ ತಾಂ ಕಣ್ಣುಮಿತ್ತುದೆನೆ
ಸುರ ಸಾಕ್ಷಿಯಂ! ಸುಖಂ ಶಂಕೆಗಾಸ್ಪದಮಾಗೆ
ಕಣ್ಣಾದುದೆತ್ತೆತ್ತಲುಂ ಭಯಂ. ವಿಸ್ಮಯಂ
ಸುಯ್ದುದೇನೊಂದಪೂರ್ವಮನಲ್ಲಿ ಕಾಣದಿರೆ
ಸುತ್ತಣಾ ಪ್ರಕೃತಿ ದೃಶ್ಯದ ಯಥಾಸ್ಥಿತಿಯ ನಿಯಮ
ನಿಷ್ಠೆಯಲಿ. ಬೆದರುತದ್ಭುತಕೆ ಚೀರ್ದಪಳೊ ಮೇಣ್
ಮೂರ್ಛೆಬೀಳ್ವಳೊ ಅಬಲೆ ಎಂಬನಿತರೊಳೆ, ಮರಳಿ
ದನಿಗೇಳ್ದುದಮರ್ದು ಸೋರ್ದಂತೆ: "ಒಳಸೋರದಿರ್,
ಮಾತೆ; ಕಾಣ್, ನಿನ್ನಾಣ್ಮನಂಗುಳೀಯಕಮಲ್ತೆ
ನೀನೆತ್ತಿದರ್ಘ್ಯದೊಳದೊ ಮಹಾರ್ಘ್ಯಮೆಸೆಯುತಿದೆ,
ಹೇ ಪುಣ್ಯಲಕ್ಷ್ಮಿ!" ಬೆಕ್ಕಸವಟ್ಟು ನೋಡಿದಳ್;
ಮತ್ತಮತ್ತಂ ನೋಡಿದಳು ನೋಟಮಂ ನಟ್ಟು,
ನಂಬಲಾರದ ಸೊಗಕೆ ಮರಂಬಟ್ಟು! ಪ್ರಕೃತಿಯುಂ
ತಾಂ ಸಸಂಭ್ರಮೆಯಾದವೋಲ್, ಪೀಲಿನವಿಲೊಂದು,

ಪೀತಾಂಬರದ ಪಿಡಿಯ ಪಿಂಛ ಚಾಮರದಂತೆ
ಕಂಗೊಳಿಸಿ, ಪಾರಿದತ್ತಾ ದಡದಿನೀ ದಡಕೆ,
ನುಣ್‌ತಿಪ್ಪುಳಿದೆ ನೀರ್‌ಕೀಸುವಂತೆ. ಬೆಚ್ಚಿದೊಲ್,
ತೆಕ್ಕನುಕ್ಕಿದ ಸಂತಸಕೆ ಕೊರಳ್‌ಬಿಚ್ಚಿದೊಲ್,
ಹಕ್ಕಿ ಹಾಡಿದುವೆಕ್ಕೆಯುಲಿಗಳಂ. ತಂಬೆಲರ್
ತರುಗಳೊಳ್ ಮರ್ಮರಿಸಿದತ್ತು, ತನಗೊದವಿತೆನೆ
ರತ ಗದ್ಗದಂ. ಪನಿಗಳುಂ ಪೂಗಳುಂ ಸೇಸೆ
ತಳಿದುವು ತೊರೆಗೆ, ನೀರಿಗೊದಗೆ ರೋಮಾಂಚನಂ.
ರವಿಕಿರಣಸಂಬಂಧಿ ಜಲಪಾತಶೀಕರಂ
ನಿರ್ಮಿಸಿರ್ದಿಂದ್ರಚಾಪಂ ದೃಶ್ಯಮನಿತುಮಂ
ತುಂಬಿತೆಂಬಂತೆ, ಸೀತೆಯ ಕಣ್ಗೆ ಲೋಕಮೇ
ರಂಜಿಸಿತು ನವರತ್ನಧೂಳಿಯನೆರಚಿದಂತೆ.
ಜಲತರಂಗಗಳೆ ಬಹುವೀಣೆಗಳನೊಡನೊಡನೆ
ಮಿಡಿದುವೆನೆ ತಂತಿಯಿಂಚರಮುಣ್ಮುತಿರೆ, ನೋಡೆ
ನೋಡೆ, ಆ ಇಂದ್ರಧನುರಾಕಾಶಮನೆ ಕಡೆದು
ಕೈಗೈದು ಬರ್ಚಿಸಿದ ಚೆಲ್ವು ಪುತ್ತಳಿಯೆನಲ್,
ಘನಿಸಿತಯ್, ನವ್ಯ ನವರತ್ನರೋಮಾಜಿನದ
ಹೊಂಗಪಿಯ ರೂಪಮಲ್ತಂ ಮೇಣ್ ಮಹಾದ್ಭುತಂ!
"ಗೆಲವಕ್ಕೆ! ಸೊಗವಕ್ಕೆ! ಶುಭಮಕ್ಕೆ! ಶಿವಮಕ್ಕೆ!
ಗೆಲ್ಗೆ ಧರ್ಮಂ! ಗೆಲ್ಗೆ ಶರ್ಮಂ! ಋತಂ ಗೆಲ್ಗೆ!
ಗೆಲ್ಗೆ ರಘುರಾಮಚಂದ್ರಂ! ಗೆಲ್ಗೆ ಮಿಥಿಳೇಂದ್ರ
ಸುತೆಯ ಹೃದಯ ಸರೋಜ ಶುಭ್ರ ಕುಟ್ಮಲ ಮಧುರ
ಮಧುಷಟ್ಪದಂ! ಗೆಲ್ಗೆ, ಸರ್ವ ಕಪಿಕುಲ ಗರ್ವ
ಧೈರ್ಯ ಪಾರಾವಾರನಾಂಜನೇಯಂ ಗೆಲ್ಗೆ!
ಕೈಮುಗಿವನಿದೊ, ದೇವಿ ಸುಗ್ರೀವನನುಚರಂ,
ಶ್ರೀ ರಾಮ ಸದ್ಧರ್ಮ ದೂತಂ!"
ತನಗೆ ಶುಭಮೇಳ್ದು
ಮನಕೆ ನಿಶ್ಶಂಕೆಯುಂ ಮಾತೃಭಾವವನೆರ್ದೆಗೆ
ನೆಮ್ಮದಿಯನಾತ್ಮಕುಕ್ಕಿಸುತಿದಿರೆ ಮೈದೋರ್ದ
ಕಪಿರೂಪಿಯಾಂಜನೇಯನ ದಿವ್ಯಶೋಭೆಯುಂ
ಕಂಡು, ಮೇಲೇಳಲಾರದ ಹರ್ಷಭಾರದಿಂ

ಕುಳ್ತಲ್ಲೆ ತಳ್ತು, ರಾಮನ ಮುದ್ರಿಕೆಯನಪ್ಪಿ
ಪಿಡಿದಿರ್ದ ಕರದಿಂದೆ ಪರಸಲೆಳಸಿಯುಮದಂ
ನೆಗಹಲಾರದೆ, ನುಡಿಯಲೆಳಸಿಯುಂ ಬಾಯ್ ಬರದೆ
ಭಾವಮೂಕೋದ್ವಿಗ್ನೆ, ನಡನಡನೆ ನಡುಗುತಾ
ಭದ್ರೆ ತುಟಿಯದುರಿದಳ್ ಬರಿದೆ. ವಾತ್ಸಲ್ಯದಿಂ
ಕ್ಷೇಮ ಕಾತರೆ ದೇವಿ ಸುತ್ತಲೆತ್ತೆತ್ತಲುಂ
ಕಣ್ಣಟ್ಟುತಿರಲಂಜನಾ ಹಿತಾಕಾಂಕ್ಷೆಯಿಂ,
ನುಡಿದನಣುವಂ:
"ಬೇಡೌ ಬೆದರ್ಕೆ, ನನಗಾಗಿ,
ತಾಯಿ. ನಿನಗಲ್ಲದೆಯೆ ದರ್ಶನಾಸಾಧ್ಯಮೀ
ಯೋಗಜಂ ರೂಪಮಪ್ರಾಕೃತಂ; ಮೇಣೆನ್ನ
ದನಿಯುಮಶ್ರಾವ್ಯಮನ್ಯರ್ಗೆ. ಮೇಣೇ ನೆಲಂ
ಮಾಯಾಪ್ರವೀಣ ದಾನವರ ಬೀಡಾದೊಡಂ
ನನ್ನ ಹಿತರಕ್ಷಣೆಗೆ ನಾಂ ಸಮರ್ಥನೆ ವಲಂ,
ಹೇ ತಪಸ್ವಿನಿ, ನಿನ್ನ ನಲ್ವರಕೆಯಿಂ. ಪೂಜ್ಯೆ,
ನಿಡುವೊಳ್ತನಾಂ ಕಳೆದೆನಾಗಳೆಯೆ. ಬೇಗದಿಂ
ಪೋಗವೇಳ್ಕುಂ ರಾಮಸನ್ನಿಧಿಗೆ. ನೀನಿರ್ಪ
ನೆಲೆಯರಿತು ವಾರ್ತೆಯಂ ತಿಳಿಸಲಾಜ್ಞಪ್ತನೆಂ
ಕಪಿರಾಜ ಸುಗ್ರೀವನಿಂ. ಕಡಲನುತ್ತರಿಸಿ
ನಿನ್ನೆ ಬೈಗಿನೊಳಿಲ್ಲಿಗೀ ಲಂಕೆಗೈತಂದೆನವ್.
ಪೆರ್ಬಾಗಿಲೊಳ್ ಪೊಕ್ಕೆನಾಕ್ರಮಿಸಿ ಭಂಗಿಸುತೆ
ಲಂಕಾಧಿದೇವಿಯಂ. ಯೋಗಮಾಯಾ ಬಲದಿ
ಸೋಸಿ ಕಂಡಿಹೆನಖಿಲ ನಗರಿಯಂ. ತಿಳಿದೆನಾಂ
ರಾಕ್ಷಸ ರಹಸ್ಯಂಗಳಂ. ಬೆಳಗು ಜಾವದೊಳ್
ಬಂದೆನಿಲ್ಲಿಗೆ; ಕುಳ್ತೆನೀ ಶಿಂಶುಪದ ಮರದ
ಶಾಖಾಗ್ರದೊಳ್. ಕಂಡೆನೆಲ್ಲಮಂ, ಕಲ್ಯಾಣಿ;
ಮೇಣ್ ಕೇಳ್ದೆನಖಿಲಮಂ ನಿನ್ನ ಕೀರ್ತಿಗೆ ಮತ್ತೆ
ತೇಜಕ್ಕೆ ಕೋಡು ಮೂಡಿಪ ದಿವ್ಯಭಾಷಣವದಂ!
ಧನ್ಯನಾಂ; ಆಲಿಸಿದೆನಾತ್ಮ ಸಂಸ್ಫೂರ್ತಿಕರಮಂ
ನಿನ್ನಸ್ಖಲಿತ ಚಿತ್ತವೃತ್ತಾಂತಮಂ? ಪೂಜ್ಯೆ,
ಕಂಡುದೆಲ್ಲವನೊರೆವೆನಾ ರಾಮಭದ್ರಂಗೆ.

ನನ್ನ ಪೇಳ್ವುದೆ ಸಾಲ್ವೊಡಂ, ನಿನ್ನ ಕಡೆಯಿಂದೆ
ಕಂಡುದಕೆ ಚಿಹ್ನೆಯೊಂದಂ ಪಡೆದು ಪೋಪುದುಂ
ನೀತಿ. ಜವದಿಂ ನೀಡು ಕುರುಪಂ, ಜಗದ್ವಂದ್ಯೆ;
ತಳುವಲಾಗದು; ಸಾಗರೋಪಮಮಿಹುದು ಮುಂದೆ
ಮಾಳ್ಪ ಕಜ್ಜಂ!''
ಇಂತೊರೆದು ಕೈಮುಗಿಯುತಿದಿರ್
ನಿಂದ ಹನುಮಂತನಂ ಪೆರ್ಮೆಯಿಂದೀಕ್ಷಿಸುತೆ,
ಮನದನ್ನನುಂಗುರವನಿಟ್ಟು ಪಣೆಗೆದೆಗೊತ್ತಿ,
ಮತ್ತಮತ್ತಂ ತೆಗೆದು ಕಣ್ಗೊತ್ತಿ, ಮುತ್ತಿಟ್ಟು,
ಆ ಅವಿನ್ನಾಣದೊಳೆ ತನ್ನಾಣ್ಮನಂ ಕಂಡ
ಕಾದಲ್ಮೆಯುನ್ಮಾದದಿಂದೆ ರಸವಶೆಯಾಗಿ
ಪ್ರೇಮದ ಸಮಾಧಿರತ ಸಂಮಗ್ನೆ, ತೊದಲುಣ್ಮೆ,
ಪಸುಳೆವೊಲ್ ಸಂಬೋಧಿಸಿದಳಿಂತು:
''ಕುಶಲಮತಿ,
ಹೇ ಮಹಾ ವಾನರೋತ್ತಮ, ನೀಂ ವಿವೇಕಿಯೈ.
ಹರ್ಷಾತಿಸಂಮೂಢಮೆನ್ನ ಮತಿಯಂ ಕ್ಷಮಿಸಿ
ತಾಳ್ಮೆದೋರ್. ಬಹುದಿನಾನಂತರಂ ಲಭಿಸಿತೀ
ನಿನ್ನನೀಕ್ಷಿಸುತೆನ್ನ ಪತಿವಾರ್ತೆಯಂ ಕೇಳ್ವ
ಮಂಗಳ ಸುಖಂ. ಮಾಡದಿರದರ್ಕೆ, ಸ್ವಪ್ನದೊಲ್,
ಶೀಘ್ರೋಪಸಂಹಾರಮಂ. ಸ್ವಪ್ನಮಲ್ತಾಯು;
ದೀರ್ಘಾನುಭವರೂಪಿಯಲ್ತೆ ಸತ್ಯಂ. ಶ್ರದ್ಧೆ
ಸಂಶಯಾತ್ಮಕಮಾಗುವನಿತುಮಾಕಸ್ಮಿಕಂ
ಬಂದೊದಗಿದೀ ಸೊಗವನಲ್ತಾಯು ಗೈಯದಿರೊ,
ಹೇ ಚಿರಂಜೀವಿ! ನೀಂ ಮರೆಯಾದ ಮೇಲೆನಗೆ
ಕಂಡುದೆಲ್ಲಂ ಮತ್ತೆ ಕೇಳ್ದುದೆಲ್ಲಂ ಬರಿಯ
ಪುಸಿಯೆಂದೊ ಕನಸೆಂದೊ ನಿರಶನ ಮನೋಭ್ರಮಾ
ಕೃತಿಯೆಂದೊ ತೋರ್ಪುದೆ ತಡಂ ಆ ಹತಾಶೆಯೇ
ಕೊಲ್ವುದೆನ್ನಂ. ಕೊಲ್ಲದಿರಲೀ ಪ್ರಪಾತದ ಕರುಣೆ
ದಯೆಗೆಯ್ವುದಯ್ ನನ್ನಳಲ್ಗಂತ್ಯಮಂ!''
''ಹೇ ಪೂಜ್ಯೆ,
ಮಾಣ್ ಅಮಂಗಳವನೀ ಮಂಗಳ ಮುಹೂರ್ತದೊಳ್!

ರಾಮಚಂದ್ರನ ನಾಮ ಮುದ್ರಿಕೆಯನಿತ್ತೆನಾಂ
ಪ್ರತ್ಯಯಾರ್ಥಂ, ನಿನ್ನ ಪತಿ ಕೊಟ್ಟುದಂ, ನಿನಗೆ,
ಬಾಲೆ! ಸತ್ಯಕೆ ಸಾಕ್ಷಿ ಬೇರೆಯಿರ್ಪುದೆ ಮಿಗಿಲ್
ಪೇಳ್ ಅದಕೆ? ತರಮಲ್ತು ನಿಷ್ಕಾರಣಾಶಂಕೆ
ನನ್ನಮೇಲ್, ಎಲೆ ತರಳೆ!''
                                    ಪುಟ್ಟ ಆಕಾರದಿಂ
ಪೊಣ್ಮಿದಾ ದಿಟ್ಟನುಡಿಗಳಿಗಿನಿತು ಸೆಡೆತಳ್ಕಿ,
ನೋಡುತ್ತಲಘುಧೀರನಂ, ತನ್ನ ಸಂದೆಗಕೆ
ತಾನೆ ನಾಣ್ಚುತೆ ಸೀತೆ:
                              ''ಮುನಿಯದಿರ್, ಮಹಾತ್ಮಾ,
ನಿನಗಾಂ ಕೃತಜ್ಞಳೆಂ. ನಿನ್ನನೆನ್ನೀ ಬಳಿಯೆ
ನೀಡುವೊಳ್ತುಂ ನೋಡುವಾಸೆಯಿಂ, ನಿನ್ನಿಂದೆ
ರಮಣ ವೃತ್ತಾಂತಮಂ ಮನದಣೆಯುವನ್ನೆಗಂ
ಕೇಳ್ವಾಸೆಯಿಂ ಪೇಳ್ದೆನಲ್ಲದೆಯೆ ನಿನ್ನೊಳಾಂ
ಸಂಯೋಜಿಸಿದೆನಲ್ತು ಕಪಟಾರ್ಥಮಂ.''
                                              ''ಕ್ಷಮಿಸು,
ದೀನ ದುಃಖಿನಿ, ನನ್ನ ಜಿಹ್ವೆಯೊರಟಂ. ದೊರೆಯ
ಕಾರ್ಯ ಸಾಧನೆಗಂತೆ ನಿನ್ನಭ್ಯುದಯಕೆಲ್ಲಿ
ಭಂಗಮಪ್ಪುದೊ ಕಾಲಹರಣದಿಂದೆಂಬಳುಕೆ
ನುಡಿಸಿತೆನ್ನಂ. ಮತ್ತೆ ಬೇರೆ ಕಾರಣಮಿಹುದೆ
ನಿನ್ನ ಕಾರಣಕಾಗಿ ವಾರಿಧಿಯನುತ್ತರಿಸಿ
ದೈತ್ಯಲಂಕೆಗೆ ಪೊಕ್ಕ ನನಗೆ?''
                                    ''ಪ್ರಾಜ್ಞನೆ ದಿಟಂ
ನೀನುದ್ಯೋಗನೀತಿಕೋವಿದಂ. ಕಳುಹುವನೆ
ಮಮ ಜೀವಿತೇಶನೇನಿತರರಂ? ಲಘುಗಳ್ಗೆ
ಲಂಘ್ಯಮೇನಾ ಮಹಾಂಭೋಧಿ, ಶತಯೋಜನ
ಭಯಂಕರಂ? ಭರ್ತೃವಾರ್ತಾವಹಂ, ಪ್ರಿಯನೆನಗೆ
ನೀಂ ಸಹೋದರ ಸಮಂ. ಸ್ವಾಮಿ ಸಂದೇಶಮಂ
ಕೇಳ್ದೆನಗೆ ಪತಿಯ ವಾರ್ತೆಯನಾಲಿಪಾತುರಂ
ಕುದಿಸುತಿದೆ ಹೃದಯಮಂ. ಪರದುಃಖ ಕಾತರಂ
ನಿನ್ನನಾಂ ಪ್ರಾರ್ಥಿಪೆನದಂ ಪೇಳ್ದು ತಣಿಸೆನ್ನ

ಪ್ರಾಣತೃಷೆಯಂ, ಹೇ ಜಗತ್‌ಪ್ರಾಣಸೂನು. ಪೇಳ್
ಪ್ರಾಣೇಶನೆಂತಿಹನ್? ಪ್ರಾಣಪತಿಯೆಲ್ಲಿಹನ್?
ಪ್ರಾಣವಲ್ಲಭನೇಕೆ ತಳುವಿಹನ್? ವಿರಹದಿಂ
ತವಿದಿಹನೊ? ಶೋಕದಿಂ ತಪಿಸಿಹನೊ?'' ಕೊರಳ ಸೆರೆ
ಬಿಗಿದು ಸಂಕಟವುಕ್ಕುತಿರೆ ಮರಳಿ, ''ನೆನೆಯುವನೆ?
ಮರೆತಿಲ್ಲನಲ್ತೆ ಈ ದೀನ ಹತಭಾಗ್ಯೆಯಂ?
ಸಹಜಸುಖಿಯಾತಂಗೆ ಸಕಲ ಶೋಕವನಿತ್ತ ಈ
ಮಂದಮತಿಯಂ?''
                    ಜಿಹ್ವೆ ತತ್ತರಿಸಿ ಬರೆ, ಮುಂದೆ
ನುಡಿಯಲಾರದೆ ಬಿಕ್ಕಿ ಬಿಕ್ಕಿ ಸಂತಪವುಕ್ಕಿ
ಬೇಯುತಿರ್ದಾಕೆಯಾ ಪ್ರಶ್ನಮಾಲೆಯ ಮಧ್ಯೆ
ಹುದುಗಿರ್ದ ಪೆಣ್ಣೆದೆಯ ಸಂದೇಹ ಸೂತ್ರಮಂ
ಸಂಭಾವಿಸಿದನಾ ಪರೇಂಗಿತಜ್ಞಂ:
                                        ''ಭದ್ರೆ,
ಬಿಡು ಶಂಕೆಯಂ; ಮಾಣಧೈರ್ಯಮಂ. ನಿನ್ನದೀ
ಕಷ್ಟಂ ತುದಿಯನೆಯ್ದಿತೆಂದೆ ತಿಳಿ. ನೀನಿರ್ಪ
ನೆಲೆಯನರಿಯದೆ ತಳುವಿಹನ್ ವಿರಹಿ ದಾಶರಥಿ.
ತಾಣಮಂ ತಿಳಿವುದೆ ತಡಂ ಮಹಾವೀರರಿಂ,
ಪರ್ವತೋಪಮ ಧೀರರಿಂ, ನಭಶ್ಚಲಿಗಳಿಂ,
ಕಾಮರೂಪಿಗಳಿಂ ಪುದಿದ ಕಪಿಧ್ವಜಿನಿಯಂ
ಕೂಡಿಕೊಂಡೀ ವಾರಿಧಿಯ ವಿಪುಲತೆಯನೊಂದು
ಗೋಷ್ಪದ ಜಲಕೆ ಸಮಂಗೈದು, ಲಂಕೆಯನಿದಂ
ದಹಿಸದೇನಿರ್ಪುದೆ ಧರಾತ್ಮಜಾವಲ್ಲಭನ
ರೌದ್ರರೋಷಂ? ನಂಬು ನನ್ನಾಣೆ! ನಿನ್ನಾಣೆ,
ರಘುರಾಮನಾಣೆ, ಪರಶಿವನಾಣೆ!—ಕಲ್ಯಾಣಿ,
ನಿನ್ನನಗಲಿದ ರಾಮನನ್ಯಮಂ ಮರೆತಿಹನ್;
ನೀನಲ್ಲದನ್ಯ ಜೀವಿತಮಿಲ್ಲಮಾತಂಗೆ:
ನೆನೆವುದೇ ಉಣಿಸು; ಕರೆವುದೆ ಮಾತು; ಸುಯ್ವುದೇ
ಉಸಿರು; ಚಿಂತೆಯೆ ಕನಸು; ಚಿಂತೆಯೆ ಮನಸು; ಮೇಣ್
ನಿನ್ನಿಂ ಪೊರಗೆ ಬೇರೆಯಂ ಕಾಣನಾ ನೃಪಂ
ಪ್ರಕೃತಿಯೊಳ್: ತಳಿತ ತರು ಕಣ್ಗೊಳಿಸೆ, ಕೋಮಲೆಯ

ಕಾಣುವನ್. ತೊರೆಯ ಮೊರೆ ಕಿವಿಗೊಳಿಸೆ, ತನ್ನಯ
ಮನೋಹರಿಯನಾಲಿಪನ್. ಪಣ್ಪೂಗಳಂ ಕಾಣೆ,
'ಓ ಎನ್ನ ಸೀತೆ, ಮೈಥಿಲಿ' ಎನುತೆ ಮರುಗುವನ್.
ಕಲಪಕ್ಷಿಯುಲಿಯಾಲಿಸಲ್, ನಿನ್ನನೇ ನೆನೆದು
ಮರವಟ್ಟು ನಿಲ್ವನ್. ಎಳ್ಚರುವಸರನಿದ್ದೆಯೊಳ್;
'ಚಾರುಕುಂಡಲೆ! ವಲ್ಗು ಬಿಂಬೋಷ್ಠೆ! ಏಣಾಕ್ಷಿ!
ನಾಗನಾಸೋರು! ರಮಣಿ! ಲತಾಂಗಿ! ತನ್ವಂಗಿ!'
ಎಂದೆಂದು ಪಂಬಲಿಸಿ ಕರೆವನಳುವನ್ ನಿನಗೆ,
ಹೇ ತ್ರೈಭುವನ ಸೌಂದರ್ಯಲಕ್ಷ್ಮಿ!—ನಿನಗಾಗಿ
ರಾಮನಿಂದು ತಪಸ್ವಿ: ಮುಟ್ಟನಾ ಪಾರ್ಥಿವಂ
ಮದ್ಯಮಾಂಸಂಗಳಂ. ಕಂದಮೂಲಂಗಳಂ
ಪಣ್ವಾಲಂಗಳನುಂಡು ಬರ್ದುಕಿಹನ್. ಧ್ಯಾನದೊಳ್
ಪೊಳ್ತುಗಳೆವನ್. ಶಕ್ತಿಯಾರ್ಜನೆಯ ಯೋಗದೊಳ್
ಮುಳುಗಿರ್ಪನಾ ಪ್ರತಿಜ್ಞಾಭೀಷ್ಮ ತೇಜಸ್ವಿ!''
    ಬೇವು ಬೆಲ್ಲಗಳನೊರ್ಮೆಯೆ ಸವಿದ ತೆರನಾಗಿ
ರಾಮಕೀರ್ತನ ವೀತಶೋಕೆ ಆ ಜನಕಸುತೆ
ತಾನಾದಳಯ್ ರಾಮಶೋಕ ಸಮಾನಶೋಕೆ.
ಶೋಕಾಶೋಕೆಯಾ ಪತಿವ್ರತಾಶ್ಲೋಕೆಯಾ
ಅಕ್ಷಿ ಕಾಂತಿಯ ಅಲೌಕತೆಗೆ ಬೆರಗಾದನಯ್
ಪವನಜಂ. ದೂರದಿಂದಾಕೆಯಂ ಕಂಡಂದು
ಮೀಹಮಿಲ್ಲದ ತನು ವಸನ ಮಲಿನತೆಯ ದೆಸೆಗೆ
ಮಾಸಿದೊಂದಮರ ಸೌಂದರ್ಯಮೆಸೆದುದು ಬೆಳಗಿ,
ರಾಗಸಾಗರ ಧೀರ ಸಂಯಮಿ ರಘೂದ್ವಹನ
ಅಧೈರ್ಯಮದ್ಭುತ ಧೈರ್ಯಮೆನಿಸಲ್ಕೆ.
                    ''ಮುಡಿ ಮಣಿದು
ಕೈಮುಗಿದೆನಿದೊ! ನಿನ್ನ ಪಡೆದಮ್ಮಗೆನ್ನದೀ
ವಂದನೆಯನೊಯ್, ಅಂಜನೆಯ ಕಂದ. ನಿನ್ನ ತಾಯ್
ತಂದೆಯರ್ ಧನ್ಯರಾಗಲಿ; ನಿನ್ನ ಕುಲದವರ್
ಮಾನ್ಯರಾಗಲಿ; ನಿನ್ನ ಪುಣ್ಯಕೀರ್ತಿಯ ಕಾಂತಿ
ಸರ್ವಲೋಕವ್ಯಾಪ್ತಿಯಾಗಿ ಬೆಳಗಲಿ ಸರ್ವ
ಕಾಲಕ್ಕೆ!—ಪೇಳ್ದೆನಗೆ ಮಮ ಜೀವಿತೇಶ್ವರಂ

ನಾನ್ಯಮನನೆಂಬುದಂ, ಬೆಂದೆನ್ನೆರ್ದೆಗೆ ಕರೆದೆ
ನೀನಮೃತಮಂ; ಶೋಕ ಸಂತಪ್ತನೆಂದೊಡನೆ
ವಿಷವೂಡಿದಯ್, ಕ್ರೂರಕರುಣೆ. ರಾಮಂಗೆನಗೆ
ಲಕ್ಷ್ಮಣಂಗೀ ಪಾಂಗನಿತ್ತ ವಿಧಿಯುಂ ಕ್ರೂರಿ
ತಾನಾದೊಡಂ, ತರ್ಪುದೆನಲೀ ಪರಿಯ ಸುಖದ
ಸಂಘಟನೆಯಂ ದಿಟಮದುಂ ಕರುಣೆಯಲ್ತೆ?—ಕೇಳ್,
ವಾನರವರೇಣ್ಯ, ಮರೆಯದೆಯೆ ಪತಿಗನಿತುಮಂ
ನೀನೊರೆಯವೇಳ್ಕುಮಯ್ ಕಂಡುದಂ, ಕೇಳ್ದುದಂ,
ದಿನಕರ ಕುಲೋತ್ತಮನ ಹೃದಯ ವಧುಗೊದಗಿರ್ಪ
ಈ ದೈನಂದಿನದ ದೈನ್ಯಮಂ. ವರ್ಷದವಧಿ,
ದಶಶಿರನ ಮಹಿಳೆ ಮಂಡೋದರಿಯ ದಯೆ ಕಣಾ,
ನೀಗಿರ್ಪುದಿಂದಿಂಗೆ ತನ್ನ ದಶ ಮಾಸಮಂ.
ತಿಂಗಳಿನ್ನೆರಡುರುಳ್ವನಿತರೊಳಗೈತಂದು
ನನ್ನನುದ್ಧರಿಸವೇಳ್ಕುಂ. ಸ್ವಾಮಿಗೊರೆಯಿದಂ,
ವಾಕ್ಕೋವಿದನೆ, ಸಫಲಮಪ್ಪಂತೆವೋಲ್ ನಿನ್ನ
ವಾಙ್ಮಹಿಮೆ. ಲಂಕೆಯೊಳಗುಂ, ವಾನರೋತ್ತಮನೆ,
ಸತ್ತ್ವದುತ್ತಮರಿಹರ್; ಧರ್ಮಕಾರ್ಯಕೀ ನೆರಂ
ಬರ್ಪರವರೆನ್ನ ಮನದನ್ನಂಗೆ. ತಿಳಿಸದಂ,
ಸುಗ್ರೀವ ಸಾಹಸೋತ್ಸಾಹ ತೇಜನಕರಂ
ನಯವಾರ್ತೆಯಂ. ಸಹೋದರನಿರ್ಪನಯ್ ದುರುಳ
ದಶಶಿರಗೆ; ಪೆಸರಿಂ ವಿಭೀಷಣಂ. ಸತ್ತ್ವಮತಿ
ಆ ಪೂಜ್ಯನೆನ್ನ ನಿರ್ಯಾತನಕೆ ಪೇಳ್ದೆಲ್ಲಮುಂ
ನೀತಿಯುಂ ಕಿವುಡು ಕಿನ್ನರಿಯಾಯ್ತು ಕಾಲವಶಿ
ಕಾಮಪಾಶದ ಮೃತ್ಯು ಕಾಯ್ದಿರುವ ರಾವಣಗೆ.
ಆ ವಿಭೀಷಣ ಕನ್ಯೆ ತನ್ನ ತಾಯೊರೆದುದಂ
ಪೇಳ್ದಳೆನಗನಲಾ ಕುಮಾರಿ. ಮತ್ತೊರ್ವನಾ
ವೃದ್ಧನಿರ್ಪಂ ಸಚಿವನಾ ದುಷ್ಟಚೋರಂಗೆ;
ಪೆಸರ್ ಅವಿಂಧ್ಯಂ. ಧರ್ಮದರ್ಶಿಯಾತಂ ಪೇಳ್ದ
ಸೌಜನ್ಯಮಂ ಪೇಸಿ ಬಿಸುಟನಾ ದುರ್ವಿಧಿಯ
ಧೂರ್ತದೂತಂ. ಮರಣಯಜ್ಞಸ್ತೂಪ ಬಂಧಿಯಾ
ಪಶು ರಾವಣಂ. ಪೇಳ್ವುದೆನ್ನಂತರಾತ್ಮಮುಂ,

ಹೇ ಹರಿಶ್ರೇಷ್ಠ, ನನಗಪ್ಪುದೆನ್ನಾನಂದ
ಸಂಪ್ರಾಪ್ತಿಯುಂ ಕ್ಷಿಪ್ರದಿಂ. ಜನಸ್ಥಾನದೊಳ್
ತಾನೊರ್ವನನುಜನ ಸಹಾಯಮಂ ಲೆಕ್ಕಿಸದೆ
ಕೊಂದನೈಸಲೆ ಚತುರ್ದಶರಿಂ ಸಹಸ್ರರಂ
ಖರದೂಷಣಾದಿ ಬಹುಘೋರರರಂ! ಆ ಮಹಾ
ರಿಪು ಭಯಂಕರನೀಗಳೆನಗಾಗಿ, ತನ್ನೊಲಿದ
ಕೈಹಿಡಿದಬಲೆಗಾಗಿ, ಶೋಷಿಸನೆ ಶರಧಿಯಂ
ಬಾಣಾಗ್ನಿಯಿಂ? ತವಿಸದಿರ್ಪುದೆ ಶರಧಿವೃಷ್ಟಿ
ರಾವಣಪ್ರಾಣಾಗ್ನಿಯಂ? ಪುರುಷಪುಂಗವಗೆ
ಪೇಳ್, ಸಮೀರಕುಮಾರ, ತನ್ನ ಮನದನ್ನನಂ
ಮನದೊಳನುಭಾವಿಸುತೆ, ಪಾದಾರವಿಂದಕ್ಕೆ
ಪಣೆಯೊತ್ತಿ ಕಣ್ಣೀರ್ಗಳಿಂದೆ ಮೀಯಿಸಿ, ಮತ್ತೆ
ಕೈಯಿಂದೆ ಮುಟ್ಟಿ ಸೊಗಸಿದಳೆಂದು ತನ್ನಬಲೆ!''
    ಪೇಳುತ್ತೆ, ಪೇಳ್ದುದಂ ನೆನೆನೆನೆದು ಗೋಳಿಡುತೆ,
ಮೂಗಳ್ಕೆಯಳುತಿರ್ದಳಂ ಕಂಡನಾ ಕರುಣೆ
ಮರುತಾತ್ಮಜಂ. ಬತ್ತಿದುದು ಸಹನೆ. ಕರಗಿತೆರ್ದೆ.
ಪೇಸಿದುದು ತನ್ನ ಬೀರಂ ತನ್ನ ದುರ್ಬಲ
ಸ್ಥಿತಿಗೆ. ಸಹಜ ವಿವೇಕಿಗಾದುದುತ್ಸಾಹದಿಂ
ಕ್ಷಣಿಕಾವಿವೇಕಮೆನೆ, ಕೈಮುಗಿದೊರೆದನಿಂತು
ಹದಿಬದೆಗೆ: ‘‘ದೇವಿ, ನಾನೇನ್ ಅನೌಚಿತ್ಯಮಂ
ನೆಗಳ್ದಿರ್ದೆನಿನಿತುವೊಳ್ತುಂ? ನೇರಮಪ್ಪುದಕೆ
ಗಳಪುತಿರ್ದೆನೆ ಬರಿದೆ ಬಳಸಿನಾಲೋಚನೆಯ
ಅಪ್ರಕೃತಮಂ? ದೇವ ರಾಮಚಂದ್ರನ ಕೂಡೆ
ನಿನ್ನನನುಬಂಧಿಸುವುದಲ್ತೆ ಗಂತವ್ಯಮೀ
ನನ್ನ ಮೇಣಖಿಲ ವಾನರ ಸಾಹಸದ ತಪದ
ಸಾಧನಕೆ? ಮಾಡೆನೆ ಮುಹೂರ್ತ ಮಾತ್ರದೊಳದಂ
ನಿನ್ನ ಕೃಪೆಯಿರೆ, ಅನಿಂದಿತೆ? ಅಗ್ನಿ ಹವಿಯಂ
ಸುರೇಂದ್ರಗೊಯ್ವಂದದಿಂ ನಿನ್ನನುಯ್ವೆಂ, ಪೂಜ್ಯೆ,
ಮಾಲ್ಯವತ್ ಪರ್ವತದ ಪ್ರಸ್ರವಣ ಶಿಖರದೊಳ್
ಕಿಷ್ಕಿಂಧೆಗನತಿದೂರಂ ತಪಂಬಡುತಿರ್ಪ
ಸತೀಚಿಂತನ ತಪಸ್ವಿ ರಾಘವೇಂದ್ರನ ದಿವ್ಯ

ಸನ್ನಿಧಿಗೆ! ರಾಜ್ಞಿ, ನಾಂ ನಿನ್ನ ಕಿಂಕರನೆನ್ನ
ಬೆನ್ನೇರುವುದೆ ತಡಂ ಕಾಲುವೆಯವೋಲಿದಂ
ಲಂಘಿಸುವೆನೀ ವಾರ್ಧಿಯಂ. ದಿಟದಿಯುಂ ನಿನ್ನ ಪಣೆ
ಸ್ವಾಮಿಪಾದವ ಸೋಂಕುವೋಲೆಸಗುವೆನ್, ಭಗಿನಿ,
ಶೀಘ್ರಾತಿಶೀಘ್ರದಿಂ! ನಾನಲೆವ ನಾನೊಲಿವ
ನಾನುಂಡು ಬದುಕುವೆನ್ನಾ ಮಲೆಯ ಮೇಲಾಣೆ,
ಕಾಡು ಬಯಲುಗಳಾಣೆ, ತೊರೆಕೆರೆಗಳಾಣೆ, ಮೇಣ್
ಪಣ್ಬಲಗಳಾಣೆ! ಕೇಳ್, ಸಾಲದಿರ್ಪೊಡೆ, ಮತ್ತೆ,
ಮಂದರದ ಮೇಲಾಣೆ! ಮೇರುವಿನ ಮೇಲಾಣೆ!
ವಿಂಧ್ಯ ಹಿಮವತ್ ಸಹ್ಯ ಮಲಯ ಶೈಲಗಳಾಣೆ!
ಗಂಗೆ ಯಮುನೆಯರಾಣೆ! ಕೃಷ್ಣೆ ಗೋದೆಯರಾಣೆ!
ಕಾವೇರಿ ತುಂಗಭದ್ರೆಯರಾಣೆ! ಸುಳಿಸದಿರು
ಸಂಶಯದ ಲವಲೇಶಮಂ ಛಾಯೆಯಂ ದೇವಿ:
ಅಮೋಘಮೆನ್ನೀ ಪ್ರತಿಜ್ಞಾ ವಚೋವಜ್ರಂ!''
   ಹರ್ಷವಿಸ್ಮಿತೆ ವಿಕಂಪಿಸಿದಳವನಿಸುತೆ, ತಟಿತ್
ಪ್ರವಹಿಸಿದವೊಲ್ ಪುಲಕಿತ'ಖಿಲಾಂಗಿ: ಇಚ್ಛಿಪುದೆ
ತಡಮಿಂದೆ ಅಗಲಿದಿನಿಯನ ಅಡಿಯ ತಾವರೆಗೆ
ತುಂಬಿಗೆಯ್ವೆನೆ ತನ್ನ ಮುಡಿಯಂ? ಇದಿರ್ಮೆರೆವ
ಈ ಕಪಿಯ ಕಿರಿಯಗಾತ್ರಕೆ ಸಾಧ್ಯಮದು ದಿಟಮೆ?
ಅಪ್ಪುದಾ ಧ್ವನಿಯ ಧೈರ್ಯಮೆ ತನ್ನ ಸತ್ಯಮಂ
ಸಾರುತಿದೆ!—ಪುರ್ಚ್ಚಿದೇನಂ ಪರ್ಚುತಿದೆ ಮರುಳ್
ಮನ್ಮನಂ ಚಿಃ!—ಭರ್ತ್ಸನೆಯನಡಗಿಪೊಲ್ ಸ್ಮಿತಂ
ಮೊಗದೊಳಾಡಲ್, ಮರುತ್ಸೂನುವಂ ನಡೆ ನೋಡಿ,
ಶುದ್ಧಾತ್ಮನುತ್ಸಾಹಕಪಚಾರಮೆಸಗಲ್ಕೆ
ಬೆದರಿ, ಪಿಂತಿಕ್ಕಿದಳ್ ಪ್ರಮುಖ ಕಾರಣಮದಂ;
ಮುನ್ನೊಡ್ಡಿದಳ್ ಗೌಣಮಿದನಿಂತು:
                                        ''ನಿನಗಿದೇಂ
ಧೂರ್ತಾತಿ ಸಾಹಸಂ, ಪವನಸುತ? ನೀಂ ತಳೆದ
ಈ ಆಕೃತಿಯ ಮಹಿಮೆಯಿರವೇಳ್ಕುಮದು ಕಣಾ!
ಅತ್ಯಲ್ಪಮೀ ನಿನ್ನ ದೇಹಮದರೊಳಗೆಂತು
ಪೊತ್ತು ನನ್ನಂ ಪಾರುವಯ್ ಸ್ವಾಮಿಯಿರ್ಪೆಡೆಗೆ,

ಸುದೀರ್ಘದೂರದಪಾರ ಸಾಗರವನುತ್ತರಿಸಿ,
ಪರ್ವತಾಟವಿ ಪೃಥ್ವಿಯಂ ಚರಿಸಿ?''
ಪ್ರಶ್ನೆಯಂ
ತನ್ನ ಶಕ್ತಿಯ ಮತ್ತೆ ಮಾನದ ಮುಖಕ್ಕೆಸೆದ
ಭಂಗಮೆಂದೆಯೆ ಬಗೆದನುತ್ಸಾಹಿ. ನಿಶಿತಮತಿ
ಹನುಮನಂಗನೆಯಿಂಗಿತವನರಿಯಲಾರದೆಯೆ
ತಪ್ಪಿದನೆನಲ್ ಬ್ರಹ್ಮಚರ್ಯಕೆ ಗರಿಮೆಯ್ಯೆಸೆ:
ನನ್ನ ಮಹಿಮೆಯನರಿಯಳೀ ಆರ್ಯೆ. ಪೇಳ್ವರುಂ
ಬೇರಿಲ್ಲಮಿಲ್ಲಿ. ತನ್ನಂ ಪೊಗಳಿಕೊಳ್ವುದುಂ
ತನಗೆ ತರಮಲ್ಲಮಾದೊಡಮಿಲ್ಲಿ ವಿನಯಕ್ಕೆ
ಕಾಣೆನನ್ಯೋಪಾಯಮಂ. ತೋರ್ದಪೆನಿವಳ್ಗೆ
ಸಂದೇಹ ವಾರಣಾರ್ಥಂ ಯೋಗಸಿದ್ಧಿಜಂ
ಸತ್ತ್ವಪ್ರಭಾವಂಗಳಂ.–ಎನುತ್ತೆ ತರಿಸಂದು
ಬಳೆಯತೊಡಗಿದನಚಲ ಸಂಕಾಶಮದ್ಭುತಂ
ಮರುತನೌರಸಪುತ್ರನಾಕಾಶಕೆ! ದವಾಗ್ನಿ
ತೇಜಂ ಸವಿಸ್ಫುಲಿಂಗಂ ಸ್ಫುರಿಸುತುಜ್ವಲಿಸೆ
ಧ್ವನಿಗೆಯ್ದನಿಂತಾ ಪ್ರಭಂಜನ ಸುತಂ:
''ಅನಘೆ,
ಕಾಣೆದಂ ನನ್ನೀ ಮಹದ್ರೂಪಮಂ. ಪೂಜ್ಯೆ,
ಭಾವಿಸದಿರೆನ್ನ ಸತ್ತ್ವದೊಳ್ ಸಂದೇಹಮಂ.
ಕಡಲೆನಗೆ ದನಗೊರಸು ನೀರೆಂದು ತಿಳಿ, ನೆಗೆಯೆ.
ಗಿರಿವನ ಸಹಿತ ಲಂಕೆಯಾದೊಡಂ ಸೀರ್ಪುಲ್ಲ
ಪೊರೆಯೆಂದು ತಿಳಿ, ತಾಯಿ, ನನ್ನೀ ಮಹಾಬಲಕೆ.
ಶೋಕಮಂ ಬಿಡು ನೀನಶೋಕೆಯಾಗೇರೆನ್ನ
ಭುಜಮೇರುವಂ. ತೇರು ದೇವರನೆಂತು ಪೊತ್ತು
ಗುಡಿಗೆ ನಡೆಯುವುದಂತೆ ಕಮಲಲೋಚನನೆಡೆಗೆ
ನಿನ್ನನಾಂ ಕೊಂಡೊಯ್ವೆನಿಂದು ಬೈಗಿಂದೊಳಗೆ
ಕೇಳ್, ಕೈರವಾಕ್ಷಿ!''
ವಾನರ ಪುಂಗವನ ಭೀಮ
ಭರವಸೆಗೆ ಗುಡಿಗಟ್ಟಿತಾ ಸೀತೆ, ನಸುನಗುತೆ,
ತನ್ನ ವಚನದ ಹೃದಯವರಿಯದುರ್ಬಿದ ಮಹಾ

ಬ್ರಹ್ಮಚಾರಿಗೆ: "ಮಹಾತ್ಮಾ, ನಿನ್ನ ಸತ್ತ್ವಮಂ
ತಿಳಿಯದಾಡಿದೆನೆಂದು ಕಳವಳಿಸದಿರು! ನಿನ್ನ
ಶರಧಿ ಲಂಘನಕಿಂ ಮಿಗಲ್ ಸಾಕ್ಷಿಯೇಕದಕೆ?
ಕಳುಹುವನೆ ರಾಮನಸಮರ್ಥನಂ ತನ್ನ ಈ
ನಾಮಾಂಕಿತಾಂಗುಳೀಯವನಿತ್ತು ತನ್ನಬಲೆ
ನನ್ನನರಸಲ್ಕೆ? ಇಚ್ಛೆಯೊ ಅಲ್ತೊ ಸ್ವಾಮಿಗೀ
ನಿನ್ನ ನೂತನ ಸಾಹಸಂ! ಪುಡುಕಲಲ್ಲದೆಯೆ
ನಿನಗಿಲ್ಲಮುಯ್ವಾಜ್ಞೆ. ನಿನಗೆನಗಮಂಗಳಂ
ಸ್ವಾಮಿಯಾಜ್ಞೋಲ್ಲಂಘನಂ. ಹೇ ಮಹಾವೀರ,
ಅಯುಕ್ತಮದರಿಂದೆನಗೆ ನಿನ್ನೊಡನೆ ಬಪ್ಪುದಯ್.
ಏನಾನುಮಕ್ಕೆಂದು ನಿಚ್ಚಯ್ಸಿ ಬರ್ಪ್ಪೆನೆನೆ
ತಡೆವುದೆನ್ನಂ ಪ್ರಬಲಭೀತಿ. ಕಡಲಂ ನೆಗೆವ
ನಿನ್ನ ಭೀಕರವೇಗಕಾಂ ಮೂರ್ಛೆಯಿಂ ನೀರ್ಗೆ
ಬಿಳ್ದಪೆನೊ? ತಿಮಿ ನಕ್ರ ಝಷಗಳ್ಗೆ ತಿನಿಸಹೆನೊ?
ನನ್ನನೊಯ್ಯಲ್ ನಿನ್ನನಟ್ಟುವ ನಿಶಾಚರರ
ಕೂಡೆ ನೀನೊರ್ವನಲ್ಲದನೆಂತು ಮಾರಾಂತು
ಕಾದುವೆಯೊ? ನನ್ನ ರಕ್ಷಣೆಯ ದೆಸೆಯಿಂ ನಿನಗೆ
ವಿಘ್ನಮಾದೊಡೆ, ಭಗ್ನಮಾಗದೆ ರಘೂದ್ವಹನ
ವೀರೋದ್ಯಮಂ? ಕಾದುವಾಗಳವರೊಡನೆ ನೀಂ,
ಭೀತಚೇತಸೆಯೆಂ, ಸಮುದ್ರಕ್ಕುರುಳ್ವಳಂ
ನನ್ನನವರೆತ್ತಿ ಬೈತಿಟ್ಟೊಡಾಮೇಲೆಂತು
ನೆಲೆಯರಿವೆಯಯ್? ನೀಂ ಮಹಾವೀರನಪ್ಪೊಡಂ
ಯುದ್ಧದೊಳನಿಶ್ಚಿತಂ ಗೆಲ್‌ಸೋಲಗಳ್. ಮೇಣ್,
ಮಹಾಮಹಿಮ, ನಿನ್ನ ಕೈತವವರಿತ ಕುಪಿತರೀ
ಘೋರ ರಾಕ್ಷಸರೆನ್ನನತಿಚಿತ್ರಹಿಂಸೆಯಿಂ
ಕೊಂದೊಡಂ ಕೊಲಬಹುದೊ? ಕೊಲ್ವೊಡೆ, ನಿರರ್ಥಕಂ
ತಾನಲಾ ನಿನ್ನೀ ಮಹಾಪ್ರಯತ್ನಂ? ನನ್ನ
ಸತ್ತುದಂ ಕೇಳ್ದೊಡಾ ರಾಮಲಕ್ಷ್ಮಣರೊಡನೆ
ಅಸುಗಳೆವರಯ್; ಅಂತೆ ಸುಗ್ರೀವನುಂ; ಅಂತೆ ಮೇಣ್
ವಾನರ ಸಮಸ್ತರುಂ. ಮೇಣಂತುಮಲ್ಲದೆಯೆ,
ರಾಮನ ಯಶಃಕಾರಣವನೇಕೆ ನೀನಿಳ್ದು

ಕೊಂಡೆಯೆಂಬಪಯಶಂ ನಿನಗೆ?'' ಜಾನಿಸುತಿರ್ದು
ತುಸುವೊಳ್ತನಂತರಂ ಮತ್ತೆ ಜನಕಾತ್ಮಜೆ:
''ದಶಗ್ರೀವಗೆಂತಂತೆ ಬಹುಜನರ್ಗಿರ್ಪುದಯ್
ಬಹುವಿಧದಿ ಸಮೆಯಲಿಹ ಬಹುಜನ್ಮ ಕರ್ಮಗಳ
ಪೊಲೆಕಿಲ್ಬಿಷಂ. ಸರ್ವರಾ ಸರ್ವ ಕರ್ಮಗಳ
ಪಾಸುಪೊಕ್ಕಿನ ಜಟಿಲ ಜಾಲಮೆ ಕೃತಿಪುದಲ್ತೆ
ನಡೆವೀ ಜಗನ್ನಾಟ್ಯಮಂ! ಕೇಳ್, ಕಪಿವರೇಣ್ಯ,
ನಿನ್ನೊಡನೆ ನಾಂ ಬರ್ಪುದೆಂತುಂ ಅಯುಕ್ತಮಯ್:
ಮುಟ್ಟೆನಾನ್ಯೈಚ್ಛಿಕಂ ಜೀವಿತೇಶಂ ವಿನಾ
ಅನ್ಯರಂ, ಪುರುಷರಂ ಪರಕೀಯರಂ! ಅಣ್ಣ,
ಕ್ಷಮಿಸೆನ್ನನ್; ಉಪಕಾರಮಂ ತಿರಸ್ಕರಿಸಿದಳ್
ಎಂದು ನೋಯದಿರೆನಗೆ. ಬಿತ್ತರಿಸಲೇವುದಯ್
ಶಿಷ್ಟಪ್ರಕಟಮಂ ಪ್ರಚುರ ನೀತಿಯಂ ನಿನಗೆ
ಸದಾಚಾರ ನೀತಿ ನಯವಿದಗೆ? ವಾನರಮುಖ್ಯ,
ನಡೆ ಬೇಗದಿಂ ಸ್ವಾಮಿಯೆಡೆಗೆ; ಕೊಡು ವಾರ್ತೆಯಂ
ಕಪಿ ಪಡೆಗೆ; ತಾರಯ್ಯ ನಿನ್ನ ತಂಗಿಯ ಕಡೆಗೆ
ಹರ್ಷಮಂ, ಮುಕ್ತಿಯಂ, ಪತಿಚರಣ ಸನ್ನಿಧಿಯ
ಮಾಂಗಲ್ಯಮಂ.''
ಕೇಳ್ದನಾ ಜಾಣೆ ಜಾನಕಿಯ
ಸಾಧ್ವಿಯ ವಚೋವ್ಯಂಗ್ಯಮಂ; ವಾಚ್ಯಮಂ, ಮತ್ತೆ
ಸೂಚ್ಯಮಂ, ಮತ್ತೆ ಗುರುಲಘು ಮಿಶ್ರಿತೋಕ್ತಿಯಾ
ಮುಖ್ಯ ಗೌಣಂಗಳಂ. 'ಪೇಳ್ದೆಂ ಸದಾಶೆಯಿಂ;
ಸದ್ಭಾವಮವಿವೇಕಮಾಯ್ತಲಾ; ವಿಕೃತಿಯಂ
ಪೆರುವ ಬಸಿರಿಯ ನಿರೀಕ್ಷಣೆಯ ಭಂಗದೊಲೆನಗೆ
ದುಕ್ಕಕೆ ಮಿಗಿಲ್ ನಾಣೆ ನೋವಾಯ್ತಲಾ!'—ಎನುತೆ,
ಪ್ರತೀಕಾರಮಿಲ್ಲದವಹೇಳನಕೆ ಕುಗ್ಗುವೊಲ್,
ಮುದುಗಿದುದೊ? ಸೆಡೆತುದೊ? ಕಿಮುಳ್ಚಿದೊಲ್ ಕಿರಿಕಿರಿದು
ಕಿರಿದಾಯ್ತೊ? ಮುನ್ನಿನಾಕೃತಿಗಿಳಿದನಣುವನ್
ವಿಸರ್ಜಿಸಿ ಬೃಹದ್ರೂಪಮಂ. ಗುರೂತ್ತೇಜನಂ
ತೊಲಗಿದುತ್ಸಾಹದೊಲ್ ಸಣ್ಣನಾಗುತ್ತಳಲ
ಸಿಗ್ಗಂ ನುಂಗಿಕೊಳುತೆ ಕೈಮುಗಿಯುತಂಬಿಕೆಗೆ

ದರಹಸನ್ಮುಖಿ ಅಸುಖಿ ಆಂಜನೇಯಂ:
"ಭಗಿನಿ,
ತಪ್ಪಾಯ್ತು. ಮನ್ನಿಸೆನ್ನಪಚಾರಮಂ. ಒಪ್ಪಿದೆನ್;
ನುಡಿದೆನ್ ಅಯುಕ್ತಮಂ. ಧರ್ಮಂ ಪತಿವ್ರತೆಗೆ
ನೀನೆಂದುದನಿತುಂ. ವಿವೇಕಮುತ್ಸಾಹದಿಂ
ತಡವರಿಸಿತೆಡವಿತಪರಾಧಮೆಸಗಿತು; ಅದಂ
ಕ್ಷಮಿಸೌ, ಕ್ಷಮಾಕನ್ಯೆ! ಅರಸಿಗಿದು ಗುಣ್ಪೆ ದಲ್.
ಆ ಅಳ್ಕು ಉಸಿರ ನಡೆ ಪೆಣ್ಗೆ. ಮೇಣಾ ನುಣ್ಪು
ನಿರಿ ಗರತಿಯಾದೊಳ್ಗೆ. ನನ್ನ ಬೆನ್ನೇರಿಯುಂ
ಪೆಣ್ಗೆ ಸಾಧ್ಯಮೆ ಕಡಲ ನೆಗೆ?—ನೀಂ ಪೇಳ್ದುದಾ
ಕೊನೆಯ ಕಾರಣಮಲ್ಲಕಿಂ ಮಿಗಿಲ್ ಘನಮೈಸೆ
ಶ್ರೀರಾಮಸತಿಗೆ! ಮತ್ತೊಮ್ಮೆ ಬೇಡುವೆನಂಬೆ;
ರಾಮನೊಳ್ ನನಗೆ ಪೆರ್ಕೆಳೆ ನುಡಿಸಿತಲ್ಲದೆಯೆ
ಭಾವಿಸದಿರನ್ಯಮಂ. ನಿನ್ನ ಸಂಕಟಮುಂ
ಪ್ರಚೋದಿಸಿತ್ತಾ ಧೈರ್ಯಮಂ, ತಾಯಿ!..."
ಬೆಬ್ಬಳಿಪ
ಬ್ರಹ್ಮಚಾರಿಯ ಸಂಕಟಸ್ಥಿತಿಯನರಿಯುತಾ
ಸಾಧ್ವಿ ಒಯ್ಯನೆ ತೆಗೆದಳುರದೆಡೆಯೊಳವಿತಿಟ್ಟುದಂ,
ಮದುವೆ ನಿಲ್ವಂದು ಪತಿ ಕೊಟ್ಟುದಂ, ಚೂಡಾಮಣಿಯ
ಕೃತ್ತಿಕಾಕೃತಿಯ ಚೆಲ್ವಂ. ಝುಗಝುಗಿಸುವದರ
ಕಿಡಿಕಿಡಿಯ ಕಿರಣ ದೀಧಿತಿಗೆನಲ್ ಜ್ವಲಿಸಿತಾ
ಮರುತಜಾತ್ಮಂ; ಮರಳ್ದುದು ಧೃತಿಗೆ ದೀಪ್ತಿ: ಮೇಣ್,
ತೊಲಗುತೆ ಮೊಗದ ಮಬ್ಬುರ್, ಮರುಕೊಳಿಸಿತಯ್ ಮೊದಲ
ತೈಜಸಂ. ಪೆರ್ಮೆಗೆ ನವಿರ್ ನಿಮಿರ್ದಂಜಲಿಯ
ನೀಡಿ, ಕೈಕೊಂಡನಾ ಪ್ರತ್ಯಭಿಜ್ಞಾನಮಂ;
ಮತ್ತೆ ಮಣಿಯುತೆ ಕೃತಜ್ಞತೆಗೆ, ಕಿವಿಗೊಟ್ಟನಾ
ಕೌಸಲೆಯ ಸೊಸೆಗೆ:
"ಕೊಳ್ ಪ್ರತ್ಯಭಿಜ್ಞಾನಮಂ,
ಮದುವೆ ನಿಲ್ವಾಗಳೆನ್ನೆರೆಯನೆನಗಿತ್ತಿದಂ,
ಅಂಜನೆಯ ಕಂದ. ಸುಪರಿಚಿತಮೀ ಮುಡಿಯೊಡವೆ
ಮಿಥಿಳೇಂದ್ರನಳಿಯಂಗೆನ್ನ ನಾಥಂಗೆ." ಮತ್ತೆ

ಮೌನಿಯಾದಳ್ ಸೀತೆ; ಅನಿಲಜನ ಕರಪುಟದಿ
ಮಿರುಗುತಿರ್ದವತಂಸಮಂ ಬಿಚ್ಚುಗಣ್ಗಳಿಂ
ನೋಡುತಿರ್ದಿರ್ದಂತೆ, ನಗೆಯ ನೇಸಲ್ ಸುಳಿಯೆ,
ಕಣ್ಮುಚ್ಚಿದಳ್ ಸ್ಮರಸುಖಸ್ಮರಣಸುಖಿ: "ಅನಘ,
ಪೇಳ್ವೆನೊಂದಂ ನಿನಗೆ ಸ್ಮೃತ್ಯಭಿಜ್ಞಾನಮಂ;
ನನಗೆ ನನ್ನಿನಿಯಂಗೆ ಪೊರತನ್ಯರಾರ್ಗುಮೀ
ಪೃಥಿವಿಯೊಳಲಭ್ಯಮಮಂ; ಪ್ರಾಣಮಿರ್ಪನ್ನನೇ
ಪ್ರಜ್ಞೆಯಿಂ ಕಂಡುದಕೆ ಚೂಡಾಮಣಿಗೆ ಮಿಗಿಲ್
ಸಾಕ್ಷ್ಯಮಂ: ಚಿತ್ರಕೂಟದ ಪಾದಮಂ ತೊಳೆದು
ಪರಿವ ಮಂದಾಕಿನಿಯ ಪುಳಿನರಂಗದೊಳೊಂದು
ನಡುವಗಲ್; ಚಿನ್ನವೂಗಳ ಚೈತ್ರತರುವಿಂ
ಜಗುಳ್ದಿರ್ದುವಯ್ ಪೊನ್ನಲರೆಲರ್ಗೆ, ಮೇಣ್ ಕರ್ನೆಳಲ
ತಣ್ಪಲ್ ಬಿಸಿಲ್ಗೆ; ನಾವಿರ್ಬರುಂ ನೀರಾಡಿ,
ಕನಕ ಸುಮ ರಂಗವಲ್ಲಿಯ ನೆಳಲ ನುಣ್ಮಳಲ
ಹಸೆಮಣೆಯ ಮೇಲ್, ಮರಳಿ ಮದುಮಕ್ಕಳಾದವೊಲ್
ಕುಳ್ತು ಸರಸದೊಳಿರಲ್; ಮರಕುಟಿಗವಕ್ಕಿ ದನಿ,
ಕಲ್ಪೊಳೆಯ ಮೊರೆ, ಬೇಸಗೆಯ ಕಾಡ ಬೇಸರಿನ
ನಿದ್ದೆಯ ಪಗಲ್‌ಗನಸ ಕನವರಿಕೆಯಾಗಿರಲ್;
ನನ್ನ ಬೆರಳಂ ಪಿಡಿದು ತಾನೆ ಮಳಲಂ ತಿದ್ದಿ
ಬರೆದನೊಂದಂ ಪ್ರಣಯಮಂತ್ರಮಂ. ಓದೆನಲ್
ಓದಿದೆನ್. ಕೆನ್ನೆಗೆಂಪೇರ್ದಳ್ಗೆ ಬೊಟ್ಟಿಟ್ಟು
ತೇಯ್ದ ಕಲ್ಗಾವಿಯಂ, . . ." ಮುಂದೆ 'ಮುದ್ದಾಡಿದನ್'
ಎಂದು ತನ್ನೊಳಗೆ ತಾಂ ಸವಿದುಕೊಂಡಳ್. ಮಹಿಳೆ
ತರಳೆಯೊಲ್ ನಾಣ್ಚುತಿರ್ದುದ ನೋಡಿ ತಾನುಂ
ಮುಗುಳ್ನಕ್ಕನಾಂಜನೇಯಂ:
"ಉಸಿರ್ವೆನನಿತುಮಂ,
ದೇವಿ. ಪೊಳ್ತುಗಳೆಯದೆ ಬೀಳ್ಕೊಡುವುದೆನ್ನನಿನ್."
"ವತ್ಸ, ಪಸಿದಯ್, ಫಲಾಹಾರಮಂ ತಂದಪೆನ್,
ಬೇಗದಿಂ; ಕೊಂಡು ಪೋಗಯ್!" "ಬೇಡಮಾ ಚಿಂತೆ.
ಯೋಗಬಲದಿಂ ಕ್ಷುಧಾತೀತನೆಂ. . . ಕೇಳ್, ಅದೋ,
ದೂರ ಕಹಳಾ ರವಂ!" "ಏನದಯ್?" "ಭಟರೆನಗೆ

ಸೋವುತಿರ್ಪರ್!'' ''ಅಯ್ಯೊ, ಶಿವಶಿವಾ, ಹುದುಗಿಕೊಳ್
ಈ ಪೊದೆಯ ಮರೆಗೆ!''
ಪೆಣ್ಣಳ್ಕಿಗುತ್ತರಮೆನಲ್
ನಕ್ಕನನಿಲಾತ್ಮಜಂ. ಗಾಳಿಯಾಯ್ತಿದಿರಿರ್ದ
ಗಾಳಿಯ ಮಗನ ತಳೆದ ಕಪಿಯ ರೂಪಂ. ಕಣಸು
ಬಿರಿದೊಡನೆ ನನಸು ನುಗ್ಗಿತು ಬಗೆಯ ಭೂಮಿಕೆಗೆ:
ಮರ ಬಳ್ಳಿಗಳ ನೋಟಮ್; ಆ ನಿರ್ಝರದ ಸಲಿಲ
ಗದ್ಗದಂ; ಮೇಣ್ ಧಳಂಧಳಮೆಂದು ಬಳಿಬಳಿಗೆ
ಸಾರುತಿರ್ದಾ ಭಯಂಕರ ಪಟಹ ಢಕ್ಕ ಧ್ವಾನ
ಭೀತಿ! ಕೈಯುಂಗುರವನೊತ್ತಿದಳ್ ವಕ್ಷಕ್ಕೆ:
ಬೇಂಟೆನಾಯ್ ಬೆನ್ನಟ್ಟೆ ಸೋಲ್ತ ಶಶಹೃದಯದೊಲ್
ಢವಢವಿಸುತಿರ್ದುದಾ ಪ್ರಾಣದುರ್ಗಂ! ಸಂಭ್ರಾಂತೆ,
ದೆಸೆದೆಸೆಗೆ ನೋಡುತಿರ್ದಾ ರಾಘವ ಶ್ರೀಕಾಂತೆ,
ಕಂಡಳಾ ತ್ರಿಜಟೆಯಂ, ತಳುವಿದಳದೇಕೆಂದು
ತನ್ನೆಡೆಗೆ ಓಡೋಡಿ ಬರುತಿರ್ದಳಂ!
''ಏಳು, ಓ
ಬೇಗೇಳು, ಭದ್ರೆ; ಕೇಳ್ದೆನೊಂದಪವಾರ್ತೆಯಂ!
ಅದೊ ಮೊಳಗುತಿವೆ ಭೇರಿ! ದೈತ್ಯೇಂದ್ರನಾಳುಗಳ್
ಸುತ್ತಿಹರ್, ಸೋಸಿಹರ್, ಬೇಂಟೆನುಗ್ಗಿಹರೀ
ಅಶೋಕವನಮಂ! ಹರಿಣಿಯಾಗದಿರವರ ಬಿಲ್ಗೆ!''
''ಏನಾದುದೌ, ತ್ರಿಜಟೆ?'' ಬೆಸಗೊಂಡಳಾ ಸೀತೆ,
ರಾಮಾಂಗುಳೀಯಕದ ಧೈರ್ಯಮಂ ಪುಗಿಸುವೊಲ್
ಹೃದಯಕ್ಕದಂ ತನ್ನುರಃಸ್ಥಳದೊಳವಿತಿಡುತೆ
ಚೂಡಾಮಣಿಯ ತಾಣದೊಳ್. ''ಪೇಳ್ವೆನೇಳೇಳ್!''
ಎನುತ್ತೆ, ತಾಯ್‌ಪುಲಿ ಮರಿಯನೆಂತು ರಕ್ಷೆಯ ಗವಿಗೆ,
ಬೇಂಟೆ ನುರ್ಗ್ಗಿದ ಬೇಡರಿಂ ನಾಯ್ಗಳಿಂ ಪೊರೆಯೆ,
ಕಚ್ಚಿಕೊಂಡುಯ್ದಪುದೊ ತಾನಂತೆವೊಲ್ ತ್ರಿಜಟೆ
ಕೈನಡುಗಿ ಪಿಡಿದೆತ್ತಿದಳ್ ಜಗಜ್ಜಾತೆಯಂ,
ತನ್ನ ರಾಕ್ಷಸಶಕ್ತಿ ದೈವಿಕೋದ್ಯಮದಿಂದೆ
ದೇವ ಬಲಕಿರ್ಮಡಿ ಸಫಲಮಾಗೆ!
ಇಳುಹಿದಳ್

ಪರ್ಣಕುಟಿಯೊಳಗೆ. ಮೇಣ್ ತಿಳುಹಿದಳ್ ತಾಂ ಕೇಳ್ದ
ಭಯವಾರ್ತೆಯಂ: "ಅದೇನೆಂದಾರರಿವರಮ್ಮ?
ರೂಪಮಿಲ್ಲದ ಭೀತಿ ಪೊಕ್ಕುದೆಂಬರ್ ಪುರಕೆ
ಪೋದಿರುಳ್! ಲಂಕೆಯನಲೆಯುತಿರ್ಪುದೆಂಬರಾ
ಬೂತು! ಪೆರ್ಬಾಗಿಲಂ ಕಾವ ಲಂಕಾಲಕ್ಷ್ಮಿ ತಾಂ
ಪಿಡಿದಿರ್ದಜೇಯ ಶೂಲಂ ಕೊಂಕಿರ್ಪುದೆಂಬರೌ!
ದೈತ್ಯಮುಖ್ಯರ ಮನೆಗಳೊಳ್ ರಾತ್ರಿ ನಿದ್ದೆಯನೆ
ಕಂಡರಿಯರಂತೆ! ಭೀಕರ ಶಬ್ದಗಳ್, ಪ್ರೇತ
ಧೂಮಗಳ್, ಪರಿಮಳ ಪಿಶಾಚಗಳ್, ಘೀಂಕಾರ
ಹ್ರೀಂಕಾರಮೋಂಕಾರಗಳ್, ಶ್ವೇತಛಾಯೆಗಳ್,
ಓರೊರ್ವರಿಗೆ ಬೇರೆ ಬೇರೆ ಕಣ್ಮಾಯೆಗಳ್!
ಅರಮನೆಯ ಗೋಪುರಮೊರಲ್ದುದೆಂಬರ್! ಭಟರ್
ಕಾಪುಳಿದು ಮೋಹನಿದ್ರೆಗೆ ಸಂದರೆಂಬರ್!
ಕೆಲರ್ ಸೈನಿಕರ್ ದಿಕ್ಕುಗೆಟ್ಟಲೆದರೆಂಬರ್!
ಕೆಲರ್ಗುನ್ಮಾದಮಮರ್ದುದೆಂಬರ್! ಆಲಿಸದೊ,
ಮಾಯಾಪ್ರವೀಣರುಂ ಮಂತ್ರತಂತ್ರಜ್ಞರುಂ
ಶೋಧಿಸುತ್ತಿರ್ಪರಾ ಪೊಕ್ಕ ಭೂತವನರಸಿ
ಬಂಧಿಸಲ್ಕೆ!"
                    ಹಗೆಯ ಹೆದರಿಕೆ ತನಗೆ ಕೆಚ್ಚಾಗೆ,
ಹರಸಿದಳ್ ದೇವಿ ಹನುಮಂಗೆ ನಿರಪಾಯಮಂ,
ತನ್ನ ಮನದೊಳಗೆ. ಸೀತೆಯ ಶಾಂತರೀತಿಯಂ
ಕಂಡಾ ತ್ರಿಜಟೆ ಬೆರಗುವಟ್ಟಿರಲ್: "ಬೆದರದಿರ್,
ರಾಕ್ಷಸೋತ್ತಮ ಭಗಿನಿ; ಭೂತಮಲ್ತದು, ದಿಟಂ,
ಧರ್ಮಮಟ್ಟಿದ ದೇವದೂತಂ! ಕುಕರ್ಮಿಗಳ್
ಬೆದರವೇಳ್ಕುಂ; ನಿನಗೆನಗೆ ಬೆದರ್ಕೆಯ ಗೊಡವೆ
ಏಕೆ?—ಏನದು ಬೊಬ್ಬೆಯಬ್ಬರಂ, ಕೇಳ್, ತ್ರಿಜಟೆ?
ಪೇರಾನೆ ಘೀಂಕಾರಗಳ್ ಕೂಡಿ ಕೇಸರಿಯ
ಗರ್ಜನೆಗಳಂ ತಾಗಿದೋಲಿರ್ಪುದಾ ಭೀಮ
ಘೋರಾರ್ಭಟಂ!"
                    ಬೆಳಕು ಕಂಡಿಯಿಂದಿಣುಕಿದಳ್
ತ್ರಿಜಟೆ, ಓಸರಿಸಿ ತರಗೆಲೆಗಳಂ. ಕಂಡುದಂ

ಕೂಗಿದಳ್: ‘‘ಅಯ್ಯಯ್ಯೊ, ಪೇಳ್ವೆನೇನಂ, ದೇವಿ?
ಸದೆದಲುಬಿ ತಿರುಪಿ ತರುಚಂಡಿಕೆಗಳಂ, ಭೋರ್
ಭೋರ್ಗ್ಗರೆದು ಬೀಸುತಿದೆ ಚಂಡ ಪ್ರಭಂಜನಂ!
ರೋಷ ಜಂಝಾವಾತಕೆದ್ದು ಕವಿದಿದೆ ಧೂಳಿ
ಬುವಿಬಾನ್ಗಳಂ ಕಲಸಿ! ಸುಟ್ಟುರೆಯ ಬಿರುಬಿಂಗೆ,
ತರಗೆಲೆಗಳಂತೆವೋಲ್, ಲರಿಲರಿಲ್ ಮುರಿಮುರಿದು
ಮರದಿಂದುರುಳ್ವನಿತರೊಳೆ ನಭಕ್ಕೇರುತಿವೆ
ಪೆರ್ಗ್ಗೋಡುಗಳ್, ತಾಯಿ, ಸಳವನೆರಗಿದ ಖಗದ
ತಿಪ್ಪುಳ್ಗರಿಗಳಂತೆ! ನಾನರಿಯೆನೆಮಗೆಂತೊ
ರಕ್ಷೆ?’’
‘‘ಬರದಿಲ್ಲಿಗಾ ವಾಯುದೇವನ ರೌದ್ರಮ್,
ಅಂಜದಿರು; ಬಾರಕ್ಕ ಒಳಗೆ. ಬಲ್ ಪಸಿದೆನಾ
ಪಣ್ಗಳಂ ತಾ.’’–ತ್ರಿಜಟೆ ತಾನಣಿಮಾಡಿದಾ
ಫಲಂಗಳಂ ತಂದಿತ್ತಳಚ್ಚರಿಯೊಳಾಕೆಯಂ
ನೋಡುತಾಃ ತರಣಿವಂಶದ ತರುಣಿ ಪಿಂತೆಂದುಮ್
ಅಂತೆವೊಲ್ ತಿಂದಳಿಲ್ಲೆಂಬಂತೆ ಸವಿಯುತಿರೆ,
ತ್ರಿಜಟೆ ಕಣ್ದಣಿಯೆ ನೋಡಿದಳದಂ, ಭಕ್ತಂ
ನಿವೇದಿತವನುಣ್ಬ ಭಗವಂತನಂ ನೋಳ್ಪಂತೆವೋಲ್!

## ಸಂಚಿಕೆ ೫

# ಕಿವಿಗೊಟ್ಟನವನಿಜಾ ರಮಣಂ

ಇತ್ತು ದೇವಿಗೆ ಧೈರ್ಯ ಸಂದೇಶಮಂ, ಮತ್ತೆ
ಪಡಿಪಡೆದು ಚೂಡಾಮಣಿಯ ಚಾರು ಚಿಹ್ನೆಯ
ಸುಧಾ ಸಾಕ್ಷ್ಯಮಂ, ಲೋಚನಾಗೋಚರ ಶರೀರಿ
ಪ್ರಳಯ ಜಂಝಾವಾತದೊಲ್ ಪ್ರಭಂಜನ ಸುತಂ
ಬೀಸಿದನಶೋಕವನದಿಂ. ತರುಗಳಂ ತಿರಿಪಿ
ಕೆಡಹುತ್ತೆ, ಪೊದವಿಯಂ ಕಡೆದು ಪುಡಿವುಡಿಗೆಯ್ದು
ಸುಟ್ಟುರೆಯ ಧೂಳಿಯಂ ಸ್ತೂಪದೋಲೆಬ್ಬಿಸುತೆ
ಬಾನ್ಗೆ, ಬಿದಿರಿನ ಮೆಳೆಯ ನಡುವೊಕ್ಕು ಘೀಂಕರಿಸಿ
ಕಾಡುಕಿಚ್ಚಿಗೆ ಕಿಡಿಯ ಮುನ್ನುಡಿಯನಿಕ್ಕುತ್ತೆ,
ದೈತ್ಯಭಟರೆದೆ ಧಿಗಿಲ್ಲೆನೆ ರೋಷಘೋಷದಿಂ
ನುಗ್ಗಿ ಬಂದಾ ಅಕಾಲಾಕಸ್ಮಿಕಾದ್ಭುತಂ
ಪ್ರಕಂಪನಾಟೋಪಕ್ಕೆ ಕಂಪಿಸಿತಖಿಲ ಲಂಕೆ!
ಬಿದ್ದರು ಕೆಲರ್; ತರಗೆಲೆಗಳೋಲೆದ್ದರು ಕೆಲರ್
ಕೆಲರ್. ನೆಲದೊಳೊದ್ದಾಡಿದರ್ ಕೆಲರ್, ಕಣ್ ಬಾಯಿ
ಮಣ್ ತಿಂಬುವೋಲ್; ವಾತಭೂತೋದ್ಧೂತ ಭೀತಿ
ಬಡಿದು ಬಗೆಗೆಟ್ಟುದು ಭಟಸ್ತೋಮ! ಮಲೆಗಳೊಳ್
ಮುಂಗಾರ್‌ಗರೆಯೆ, ನೆರೆಯೇರಿ, ಕರೆಯಂ ಮೀರ್ದ
ಹೊಳೆಯೆಂತು ದಡಗಳಂ ಕೊರೆದು, ಮರ ಬುಡಗಳಂ
ಸಡಿಲಿಸುತುರುಳ್ಚಿ, ತೇಲಿಸಿ, ಕೊಚ್ಚಿ, ರಭಸದಿಂ
ಮುನ್ನುಗ್ಗುವುದೊ ಅಂತು ಧಾವಿಸಿದನನಿಲಜಂ
ತಡೆಗಳಂ ಲೆಕ್ಕಿಸದೆ ಲಂಕಾಧಿದೇವಿಯಂ
ಮುರಿದು ತಾನೊಳಪೊಕ್ಕ ಪುರದ ಪೆರ್ಬಾಗಿಲಂ

ಕುರಿತು.
ವಿದ್ಯಾತ್ಮಕಂ ಕೋಂಟೆ ದುರ್ಗಮಮದಂ
ದ್ವಾರಮಲ್ಲದ ಬೇರೆಯೆಡೆಯೊಳುಲ್ಲಂಘಿಸುವ
ಸಾಹಸಕೆ ಸೀತಾ ಸುವಾರ್ತೆಯಂ ಕಾತರದ
ಕಿಷ್ಕಿಂಧೆಗುಯ್ವ ಸದ್‌ಬುದ್ಧಿಯ ಖಲೀನಮಂ
ತುಡಿಸುತಲ್ಲಿಗೆ ಬಂದ ಯೋಗವಿಕ್ರಮಿಗಾಯ್ತು
ಪೇರುಬ್ಬಸಂ, ತನ್ನ ನಡೆಗೆ ತಡೆಯಿಕ್ಕಿದಾ
ಪ್ರತಿಮಾಯೆಯಂ ಸಂಧಿಸಲ್. ಬಿರುಗಾಳಿಯಾಗಿ
ಬಂದವನ್ ತಿರಿಗಾಳಿಯಾಗಿ ತಿರ್ರನೆ ತಿರುಗಿ
ತತ್ತರಿಸಿದನ್. ವಾಯು ಮಂಥನದೊಳಗ್ನಿಗಳ್
ಜ್ವಾಲಾ ಜಟಾಧಾರಿ ತಾಂಡವ ಶಿವನ ತೆರದಿ
ವಿಲಯನರ್ತನದೊಳಾರ್ಭಟಿಸಿದುವು, ಬಳಿಯಿರ್ದ
ಮನೆ ಮರಗಳಂ ಬೂದಿಗೆಯ್ದು. ಆ ರೌದ್ರಮಂ
ಕಂಡು ಧೃತಿಗೆಡುತಿರ್ದ ತನ್ನವರ್ಗಭಯಮಂ
ಪೂಣ್ದು ಪುರ ರಕ್ಷಕ ಶಿರೋಮಣಿ, ಪ್ರಹಸ್ತನ
ಸುತಂ, ದೈತ್ಯಮಾಯಾ ಸಮರ್ಥಂ ಜಂಬುಮಾಲಿ
ತಾನುಂ ವಿಸರ್ಜಿಸುತೆ ತನ್ನ ನರ ರೂಪಮಂ
ಜಗುಳ್ದು ಪೊಕ್ಕನಯ್ ಜಂಝಾನಿಲನ ಜನ್ಮಕ್ಕೆ!
ಪೇಳ್ವುದೇಂ ಮುನ್ ನಡೆದುದಂ? ನೆರೆದ ಸುಭಟತತಿ
ಬೆರಗಾಗಿ ನೋಡುತಿರೆ, ಸಿಡಿಲಂ ಸಿಡಿಲ್ ತುಡುಕಿ
ಪಿಡಿದುದೆನೆ, ಸಂಘಟ್ಟಿಸಿದುವಂತರಿಕ್ಷದೊಳ್
ಪ್ರಚಂಡಾಭೀಳ ಜಂಝಾದ್ವಯಂ. ಕೆಮ್ಮಿಂಚು
ಕುಣಿದುವು ತಟಿತ್‌ಫಣೆಯ ನಾಲಗೆಗಳೋಲ್ ನೆಕ್ಕಿ
ದೆಸೆದೆಸೆಯ. ಗಗನಮಂಡಲವೊಡೆದು ಬಿದ್ದುದೆನೆ
ಸದ್ದಿರಿದುದಾಲಿಸಿದ ಕಿವಿಗೆ ಕಿವುಡಿನ ಚಂಡೆ
ಬಡಿದಂತೆ. ಬಾನೊಳಲೆದುವು ಕಣ್ಗೆ ಬಹುವಿಧ
ವಿಕಾರ ಚೀತ್ಕಾರಗಳ್. ಸೆತ್ತರ್ ಮಳೆಗಳಿಳಿದು
ಕೆಸರೆದ್ದುದೈ ಲಂಕಾ ಮಹಾದ್ವಾರ ಭೂಮಿ.
ಇರ್ದಿರ್ದವೋಲ್, ತೆಕ್ಕಸಾ ಗಾಳಿಗಳ್ ಚಣಂ
ನಿಂತವೋಲಾಗಿ, ಕೆಡೆದುದು ಕೋಂಟೆ ಬಾಗಿಲೆಡೆ
ಗತಜೀವ ಜಂಬುಮಾಲಿಯ ಕಳೇಬರಂ! ಮಾಯೆ

ಮಾಯಾವಿಯೊಡನಳಿಯೆ, ತಡೆಗೆಟ್ಟು ಬಾಗಿಲಿಂ
ಬೀಸಿ ಪೊಕ್ಕನು ಪೊರಗೆ ಮರುತಾತ್ಮಜಂ.
ಕೊಂದು
ನಗರ ರಕ್ಷಕ ಮುಖ್ಯನಂ ವಾತಭೂತಮದು
ಕೋಂಟೆವಾಗಿಲ ದಾಂಟಿದಾ ವಾರ್ತೆಯಂ ಕೇಳ್ದು
ದುರ್ಧರ, ವಿರೂಪಾಕ್ಷ, ಭಾಸಕರ್ಣ, ಪ್ರಘಸ,
ಯೂಪಾಕ್ಷರೆಂಬೈವರಂ ಕೂಟಕಲಿಗಳಂ
ಕರೆದು ಬೆಸಸಿದನಿಂತು ಲಂಕೇಶ್ವರಂ:
"ನಡೆಯಿ
ಬೇಗದಿಂದಸುರ ವಿದ್ಯಾ ಸಿದ್ಧರೆಂಬುದಂ
ತೋರಿಮಾ ಪ್ರೇತಕಿತವಂಗೆ. ಭೀತಿಯ ಬೂದಿ
ಲಂಕೆಯೆದೆಯಿಂ ತೂರುವೊಲ್ ಗಾಳಿಯಾಗೂದಿಮಾ
ಅಭಿಚಾರ ಸಂಭೂತಮಂ ಆ ವಾತಭೂತಮಂ.
ಸುರಪತಿಯ ಮಾಟವೊ? ಕುಬೇರನಟ್ಟಿದ ಕುಟಿಲ
ವಿದ್ಯಾಕಾಳಕೂಟವೊ? ಸಮುದ್ರನೊಳ್‌ಸೆರೆಗೆ
ನೂಂಕಿಮದನತಲಕ್ಕೆ!"
ವಜ್ರಿವೈರಿಯ ವಜ್ರ
ವಚನದ ಶಿರತ್ರಮಂ ಧರಿಸಿ ಪೊರಮಟ್ಟರಾ
ಕಲಿಗಳೈವರು ಪುರದ ಪೆರ್ಬಾಗಿಲಿಂ, ತಮ್ಮ
ಪಡೆಗೂಡಿ. ಕಂಡರಂಬುಧಿವೇಲೆಯಡವಿಯಂ
ಮುರಿಮುರಿದು ಮುಂಬರಿಯುತಿರ್ದ ಅನಿಲಸಿಂಹನ
ಅರೂಪಾಟೋಪ ರಥದ ಪಥಮಂ. ಹೋಹೊ ನಿಲ್
ಮಾಣೆನುತೆ, ಸಮರೂಪಮಂ ತಳೆದು, ತಾಗಿದರ್
ಕಪಿಕುಲ ಸಮರ ಭೈರವ ಭ್ರೂ ಕುಟಿಯ ನಿಟಿಲ
ನೇತ್ರನಂ. ಏನಾದುದೆಂತಾದುದೆಂಬುದಂ
ಬಣ್ಣಿಪರದಾರ್? ಗಾಳಿ ಹೊಗೆ ಬೆಂಕಿಗಳ್, ಸಿಡಿಲ್
ಮಿಂಚುಗಳ್, ಕಲ್ಮಳೆಗಳುಳ್ಕೆಗಳ್, ಕೂಗುಗಳ್,
ನರಳುಗಳ್, ವೀರಾಟ್ಟಹಾಸಗಳ್, ಕಟುವಿಕಟ
ಚೀತ್ಕಾರಗಳ್ ಪ್ರಳಯಶಂಕೆಯನೊದರ್ಚುತ್ತೆ
ದೆವ್ವಂಗುಣಿದುವಲ್ಲಿ! ದಾವಾಗ್ನಿ ದಹಿಸಲ್ಕೆ,
ಕಾಡಳಿಯಲೊಯ್ಯನುರಿ ನಂದಿ, ಸದ್ದಿಲಿತನಂ

ಬೂದಿಯೊಳ್ ಬೀಡುಗೈದಂತಾಯ್ತಸುರ ಸೇನೆ,
ಪಂಚ ಸೇನಾನಿಗಳ್ವೆರಸಿ. ದುರ್ವಾರ್ತೆಯಂ
ಕೇಳ್ದು, ಪಿತನನುಮತಿಯನಾಂತು, ಪಗಲಿಳಿವಿನಂ
ರಣಧರೆಗೆ ಬಂದಿಂದ್ರಜಿತುಗೆ ದರ್ಶನವಾಯ್ತು
ಭಸ್ಮಶ್ಮಶಾನದಾ. ವ್ಯರ್ಥಮಾಯ್ತಂತೆವೋಲ್
ಕೈಕೊಂಡ ವಾತಭೂತಾನ್ವೇಷಣಂ. ಪಲರ್
ಪಲಪಲವು ಕಲ್ಪನೆಗಳಂ ಕಡೆದು, ನನ್ನಿಯಂ
ನಿಚ್ಚಯಿಸಲಾರದೆ ಪುರಪ್ರವೇಶಿಸಿದರಯ್,
ಧಾತ್ರಿಯನಲೆಯಲಿಳಿದ ರಾತ್ರಿಛಾಯೆಗಳಂತೆವೋಲ್!
ಅತ್ತಲಾ ಅನಿಲತನುವಾಂತನಿಲನಾತ್ಮಜಂ,
ಲಂಕೆಗೆ ನಿರಾಕಾರ ಭೀತಿಯ ಮಹತ್ತರದ
ಭಯಬ ಶಂಕೆಯ ರಾಹುವಿಡಿದುಲ್ಲಸಕೆ ಪೆರ್ಚಿ,
ಅನಿಲ ವೇಗದಿ ಪಯೋಧಿಯ ನೀಲ ಸೀಮೆಯಂ
ಕಳೆಕಳೆದು ಹಿಂದಿಕ್ಕಿದನು ನೂರುಯೋಜನದ
ನಿಡುದೂರಮಂ. ಕೊರಳ್ ನಿಮಿರಿ ಕಾಯುತ್ತಿರ್ದ-
ಕಪಿಕುಲರ ಕಾತರತೆ ಕಂಡುದು, ಸಮುದ್ರಮಂ
ಕಡೆಕಡೆದು ತಮ್ಮೆಡೆಗೆ ಬಳಿಸಾರುತಿರ್ದೊಂದು
ಪ್ರಭಂಜನಾಟೋಪಮಂ. ಮೊಗದ ಮೇಲ್ ಪ್ರಶ್ನೆಗಳ್
ಮುಳ್ಮೂಡಿದಂಗದ ಕುಮಾರನಿಂಗಿತವರಿತು
ಗಿರಿ ಮಹೇಂದ್ರನ ಶಿರಶ್ಶಿಲೆ ಪೀಠಮಾಗಿರ್ದ
ಜಾಂಬವಂ: "ಕೌತುಕಂ; ಪೊಳ್ತಲ್ಲಗೀವೊಳ್ತು
ಕಡಲ ಕಡೆದೈತರುತ್ತಿದೆ ದಕ್ಷಿಣಾನಿಲಂ!
ಸಹಜಮಲ್ತಿದು ಕೃತಕಮಾಂಜನೇಯನ ವೇಗ
ಸಂಜನಿತಮೆಂಬವೋಲ್. ಇಂತೆ ಕಲಕಸೆ ಕಡಲ್
ನಿನ್ನೆ ಸೆಗೆದಂದು? ನೋಡುತಿರಿಮಾಕಾಶಮಂ
ದೂರ ದೃಷ್ಟಿಗಳಾಗಿ. ಕಾಣ್ಬನಂಬರಗಾಮಿ,
ವಿಜಯ ವಾರ್ತಾವಹಂ." ತಮ್ಮಂತರಂಗದಾ
ಮೂಕ ಇಷ್ಟಕೆ ನಾಲಗೆಯನಿತ್ತ ಮುದಿತನಕೆ
ಗೌರವಂ ತೋರ್ಪಂತೆ ಕಣ್ಣಾದರನಿಬರುಂ
ದಕ್ಷಿಣ ದಿಗಂತದತ್ತಣ್ಗೆ. ಕಾಮರೂಪಿಯ
ಕಾಣಲೆಳಸಿದ ಕಪಿಧ್ವಜರ ದೃಷ್ಟಿಯ ತೃಷೆಗೆ

ನಭದ ನೀಲವೆ ಮರುಸರಸ್ಸಾಯ್ತು!
ಇತ್ತಲಿದೊ
ಗೆಂಟರೊಳ್ ತೋರ್ದ್ದಾ ಕಡಲ್ಗಾಳಿ ಬಳಿಬಳಿಗೆ
ಸಾರೆ ಬಂದಪ್ಪಳಿಸಿದುದು ಗಿರಿಯ ನೆತ್ತಿಯಂ,
ತತ್ತರಿಸುವೋಲ್ ವಾನರರ ಸೇನೆ. ಮರಮರಂ
ಕೊಂಬೆ ಕೊಂಬೆಗೆ ತಿಕ್ಕಿಯೊರಲಿದುವೆ? ಕೀಚೆಂದು
ಕೀರಿದುವೆ ಬಿದಿರ ಮೆಳೆ? ಒಕ್ಕೊರಲ್ ಕೂಗಿದುವೆ
ಪಕ್ಷಿ ಸಂಘಾತ? ಒಕ್ಕಣೆಸಿದುದೆ ಪೇಳ್ ಗಾಳಿ
ಅಕ್ಕರಕ್ಕರಮಾಗಿ? ಬೆಕ್ಕಸದೊಳಾಲಿಸಿತೊ
ಅಕ್ಕಜವಗೆಗೆ ತೆಕ್ಕನುಕ್ಕಿದಾನಂದದೊಳ್
ತೇಲಿ ಸುಗ್ರೀವ ಭಟ ಸಮಿತಿ:
"ರಘುಕುಲ ಕಮಲ
ರವಿಯುದಯಮಕ್ಕೆ! ಕಪಿಕುಲದ ಕಡಲ ಶಶಾಂಕ
ಸಂಪದಕೆ ಅಭ್ಯುದಯಮಕ್ಕೆ! ಕೋಡು ಮೂಡುಗೆ
ವಾಲಿಸುತನನುಚರರ ಸಾಹಸದ ಕೇಸರಿಯ
ಬಾಯ ಬೇಂಟೆಯ ಗಜದ ಗರ್ವಕ್ಕೆ!—ಸಿಕ್ಕಿದಳ್
ದೇವಿ, ಸೀತಾದೇವಿ! ಕಂಡೆನಾ ಮಾತೆಯಂ;
ಕಂಡೆ ರಾಮನ ರಾಣಿಯಂ! ಕೊಟ್ಟು ತಂದಿಹೆನ್
ವಾರ್ತೆಯಂ, ಚಿಹ್ನೆಯಂ, ಸಂದೇಶಮಂ!"
ಘೇ ಉಘೇ
ಎಂಬುಲಿಗೆ ಕಡಲ ತಡಿ, ಗಿರಿ ಮೊರಡಿ, ಕಲ್‌ವೀಡು
ಕಾಡುಗಳ್ ಕಂಪಿಸುತ್ತಿರೆ ಪಾಡತೊಡಗಿದರ್
ಜಯಗಾಥೆಯಂ. ಅತೀಂದ್ರಿಯಮೊಯ್ಯನಿಂದ್ರಿಯ
ಗ್ರಾಹ್ಯತೆಗೆ ಕೃಪೆಯಿನಿಳಿದುದೆನೆ, ಹೇಮಧೂಳಿಯ
ಮಂಜು ಮುಸುಕಿತು ಮಾರ್ದನಿಯ ಮಹೇಂದ್ರಾದ್ರಿಯಂ:
ಬೈಗು ಗೋವಿನ ಖುರಪ್ರಹತಿ ಕುಂಕುಮವೆರಚಿ
ಸಶರೀರತೆಗೆ ಕರೆದುದೆನೆ ಮರುತ್ಕುಮಾರನಂ,
ಹೊನ್ನ ಮಂಜಿನ ನಡುವೆ ರೇಖೆಗೊಂಡುದು ರೂಪು
ರಾಮ ಸಖನಾ. ಪರಿಚಯದ ಮನುಜನಾಕೃತಿಯ
ಕಂಡುದೆ ತಡಂ, ಮಣಿದು ಮುನ್ನುಗ್ಗಿದುದು ಮಂದಿ
ದರುಶನಕೆ, ಮೇಣ್ ಪಾದ ಧೂಳಿಯನಾಂಪ ಧನ್ಯತೆಗೆ.

ತನ್ನ ಸೇನಾವಾರ್ಧಿಯುತ್ಸಾಹ ವೀಚಿಗಳ್,
ಸಂತೋಷ ಘೋಷಗಳ್ ತಣಿಯುತೊಯ್ಯನೆ ತಳ್ಗೆ,
ನೀಲಾದಿಗಳ್ ಬಳಸೆ, ಸಂಭ್ರಮದೊಳೈತಂದು
ಕೈಮುಗಿದು, ಕೈವಿಡಿದು ಕೊಂಡೊಯ್ದನಂಗದಂ
ಗಿರಿ ಮಹೇಂದ್ರನ ಪೊತ್ತ ಮಸ್ತಕದ ಮಣಿಶಿಲೆಯ
ಸಿಂಹಾಸನಕೆ ಆ ಮಹಾವೀರನಂ. ಸುತ್ತಲುಂ
ಸಭೆ ನೆರೆದರೈ ವಾನರರ್ ತಮತಮಗೆ ದೊರೆತ
ಬಂಡೆ ಮೇಣ್ ಮರಗೋಡುಗಳ ನೆಮ್ಮಿ. ಕಪಿಕುಲ
ಕುತೂಹಲಂ ಹರ್ಷವಿಸ್ಮಯ ಪುಲಕ ಕಂಟಕಿತ
ತನುವಾಗಲಾಂಜನೇಯಂ ಸೂತ್ರಮಾರ್ಗದಿಂ
ಸೂರೆಗೈದನೊ ತನ್ನ ಸಾಹಸದ ಸಾಹಿತ್ಯ
ಸರ್ವಸ್ವಮಂ! ಕೇಳ್ದು ಪುರ್ಚೆಳ್ದುದಾ ನೆರವಿ;
ಕೂಗಿದರು ಓರೊರ್ವರೊಂದೊಂದು ಹರುವಂ:
"ಸಮುದ್ರಮಂ ದಾಂಟುವಂ. ತಡಮೇಕೆ? ದೇವಿಯಂ
ತಂದೊಪ್ಪಿಪಂ ರಾಮಚಂದ್ರಂಗೆ!" "ಕೊಲ್ವಮಾ
ಖೂಳ ಲಂಕೇಶನಂ!" "ಅವಧಿ ಮೀರಿದುದಾಯ್ತು;
ಕಿಷ್ಕಿಂಧೆಗಿನ್ ಬರಿದೆ ಪೋಪುದು ತರಮೆ? ಕಜ್ಜಮಂ
ಕೈಗೂಡಿಸಿಯೆ ನಡೆವುದುಜ್ಜುಗಂ!" "ಗೆಲ್ಗೆ ಹನುಮಂ!
ಗೆಲ್ಗೆ ಮರುತಾತ್ಮಜಂ! ಗೆಲ್ಗಂಜನಾ ಸುತಂ!" ಆ
ಘೋಷಕನುರಣಿತಮಾದುದು ನಭೋಮಂಡಲಂ;
ಮರುದನಿಯನೆಸೆದುದು ಮಹೇಂದ್ರ ಗಹ್ವರ ಮುಖಂ;
ಜಯಕಾರಮಂ ಕಡೆಕಡೆದು ಕಡಲ್ ಮೊರೆದುದು,
ದಿಗಂತ ದಂತಿಯ ಕಿವಿಯ ನಿದ್ದೆಗೆ ಕಠಾರಿಯಂ
ಕನಸೊಡವೆಗೈವಂತೆವೋಲ್!
ವೃದ್ಧನೆದ್ದನಾ
ಜಾಂಬವಂ, ಬುದ್ಧಿ ವಿಳ್ಪಂದದಿಂದುತ್ಸಾಹ
ಮದ್ಧೈ. ಭಲ್ಲೂಕ ಚರ್ಮರಂಜಿತ ವರ್ಮದಾ
ಗಂಭೀರ ಗಾತ್ರನಂ, ಸರ್ವ ಗೌರವ ಪಾತ್ರನಂ
ಕಂಡು ಶಾಂತವಾದುದು ಸೈನ್ಯ ಸಂಭ್ರಮ ಶಬುದ
ಸಂಕ್ಷೋಭೆ: "ಮುಪ್ಪಿಗುಂ ಬಗೆ ಕದಡುವೋಲುಕ್ಕಿ
ಮಗಮಗಿಸಿ ಪರಿಯುತಿದೆ ನಿಮ್ಮ ಸೊಕ್ಕಿನ ಸೋಮ

ಫೇನಂ! ಮುದುಕನಾನುಂ ನಿಮ್ಮ ಚಟುಲ ಗತಿಯ
ಸಾಹಸಾಶ್ವದ ಬೆನ್ನನೇರಿರ್ಪೆನಾದೊಡಂ
ಬಿರಿಯಿಕ್ಕುತಿದೆ ವಿವೇಕಂ ಖಲೀನವನೆಳೆದು
ಜಗ್ಗಿ. ನಮ್ಮಾತ್ಮನೀ ಕಲಿ ಮಾರುತಾತ್ಮಜಂ
ತನ್ನ'ಪ್ರತಿಮ ಸಾಹಸಂ ಸಕಲ ಸುಲಭಮೆನೆ
ನಿರ್ಮೋಹದಿಂ ಬಣ್ಣಿಸಿದನೆಂದು ನೀಮದಂ
ಸಾಮಾನ್ಯಮೆಂದರಿಯದಿರಿ: ನೂರು ಯೋಜನಂ
ದಾಂಟಲಿದೆ ಈ ಶರಧಿ! ದುರ್ಲಂಘ್ಯಮಾ ಕೋಂಟೆ
ವಿದ್ಯಾತ್ಮಕಂ! ಬರಿಯ ಕಥೆಯ ರಾಕ್ಷಸರಲ್ತು
ಲಂಕಿಗರ್; ಮಾಯಾ ಸಮರ್ಥರತಿ ನಾಗರಿಕ
ಯುದ್ಧಯಂತ್ರ ಪ್ರವೀಣರುಂ ದಿಟಂ! ಬರಿ ಕೆಚ್ಚು
ಸಲ್ಲದಿಲ್ಲಿಗೆ. ಸಮರ್ಥರ ಬುದ್ಧಿ, ಸಜ್ಜನರ
ಪುಣ್ಯಹೃದಯದ ಸಿದ್ಧಿ ನೆರವೀಯದಿರೆ, ವೃಥಾ
ಸಾಹಸಂ ನಮ್ಮುಲ್ಲಸಂ. ಮೀರ್ದುದಾದೊಡಂ
ನಮ್ಮ ದೊರೆ ಇತ್ತವಧಿ, ಈ ಮರುತ್ಸುತನೆರ್ದೆಯೆ
ಬಯ್ಕೆಯಾಗಿರ್ಪ ಚೂಡಾಮಣಿಯೆ ಸಾಕ್ಷಿಯುಂ
ರಕ್ಷೆಯುಂ ತಾನಪ್ಪುದೆಮಗೆ. ಅತಿಕಾತರನ್
ದಾಶರಥಿ ಸೌಮಿತ್ರಿಯರ್ ಕೂಡಿ, ಕಪಿನೃಪಂ
ಸುಗ್ರೀವನಲ್ಲಿ ಕಿಷ್ಕಿಂಧೆಯೊಳ್, ನಮಗಾಗಿ
ಮೇಣ್ ನಮ್ಮ ತರಲಿರ್ಪ ವಾರ್ತಾ ವಿಷಯಕಾಗಿ.
ನಡೆವಮೇಳಿಂ ಬೇಗದಿಂ. ತಾಯಿ ಕಿಷ್ಕಿಂಧೆ
ಕಾಯುತಿಹಳೆಮಗೆ. ದೊರೆಯಾಣತಿಯೆ ಮುಂದೆಮಗೆ
ಬಟ್ಟೆ; ಇಂದೆಮಗದುವೆ ನಿಷ್ಠೆ!"
                                        ಸಾರಿದುದೆನಲ್
ಒಮ್ಮನವನೊಕ್ಕೊರಲ್ ಒಪ್ಪಿಗೆಯನುಲಿದುದು
ಕಪಿಧ್ವಜಿನಿ. ಇಳಿದುದಲ್ಲಿಂ ಬಳಿಕಲಾ ಮಹಾ
ವಾನರರ ವಾಹಿನಿ ಮಹೇಂದ್ರೋತ್ತಮಾಂಗದಿಂ
ಧುಮುಕಿ. ಪರಿದುದು ಮುಂದೆ ಭೋರ್ಗರೆಯುತುತ್ತರಕೆ
ಕುರಿತು ಕಿಷ್ಕಿಂಧೆಯಂ. ದಟ್ಟಡವಿ ಬೆಟ್ಟುಗಳ್
ಕಣಿವೆ ಹೊಳೆ ತೊರೆ ಬಯಲ್ ಬೀಡುಗಳ್ ಕಳೆಕಳೆಯೆ
ಹಿಂದಿಕ್ಕಿ ನಿಡುದೂರಮಂ, ದಾರಿಯೊಳ್ ಕಾಣೆ

ದಧಿಮುಖನ ಮಧುವನಂ ಪೊಕ್ಕರದನೀಂಟಿದರ್
ಮಧುಸುಖವನಾತನಾತಿಥ್ಯದಿಂ ನೆರೆ ತಣಿದು,
ದಣಿವನಾರಿಸಿಕೊಂಡು ಮುನ್ ನಡೆದರಲ್ಲಿಂದೆ
ಕಾಣ್ಬನ್ನೆಗಂ ಸ್ವರ್ಗಮಾ ಗಿರಿವಿಪಿನ ದುರ್ಗಮಾ
ಕಮನೀಯ ಕಿಷ್ಕಿಂಧೆ. ಕಂಡುದೆ ತಡಂ ಕೋಟಿ
ಕೋಟಿ ಕಂಠಧ್ವನಿಯ ಜಯ ವಜ್ರಘೋಷಕ್ಕೆ
ಪ್ರಸ್ಪಂದಿಸಿತ್ತಾ ಅಚಲ ನಗರಿ. ಪ್ರಸ್ರವಣ
ಶೃಂಗದೊಳ್, ರಾಮನಂ ಸಂತೈಸಲೈತಂದು,
ಮಾತನುಳಿದಾತನಾ ದುರ್ದರ್ಶನ ಸ್ಥಿತಿಗೆ,
ಖಿನ್ನಮುಖಿಯಾಗಿರ್ದ ಸುಗ್ರೀವನುಸ್ಸೆಂದು
ತಲೆಯೆತ್ತಿದನ್. ದೂರಮಟ್ಟಿದನು ದಿಟ್ಟಿಯಂ
ಪ್ರತ್ಯಾಶೆಯಿಂ. ದಿಗ್ಗನೆದ್ದನ್, ಅಲಘುದೇಹಿ,
ಲಘು ಶೈಲಿಯಿಂ. ತುದಿವೆರಳ ಮೇಲ್ ನಿಗುರಿ ನಿಂತು
ಕಾಲಡಿಯೊಳಿರ್ದ ಬಂಡೆಯನೊತ್ತಿದನ್, ಬೆರಳ್
ಅಚ್ಚೊತ್ತುವೋಲೊಣಗಿ ಹತ್ತಿರ್ದ ಹಾವಸೆಗೆ!

ಅವಧಿ ಮೀರ್ದುಂ ತಳುವಿದುದಕೆ, ನೋಣನ್ನೆಗಂ
ಸುದ್ದಿಯ ಸುಳಿವನೇನೊಂದುಮಂ ಕಳುಹದಿರ್ದುದಕೆ,
ರಾಮನಂತಃಕರಣ ಖೇದಾಗ್ನಿ ದಳ್ಳುರಿದು
ತನ್ನ ಸಂಕಟವಳುರುತಿರ್ದುದಕೆ, ಕಪಿಕುಲದ
ಗೌರವ ಯಶಃಶ್ವೇತಕೊಯ್ಯನೆ ಮಷೀಮಯತೆ
ಸಾರ್ಚುತಿರ್ದುದಕೆ ಕಟುರುಷ್ಪತೆಯನಾಂತಿರ್ದ
ರವಿಸುತ ಭ್ರೂ ಧನುರ್ ಮೌರ್ವಿಗೆ ಪ್ರಹೃಷ್ಟತಾ
ಶಿಥಿಲತೆ ಲಭಿಸಿದತ್ತು. ನಗೆವೆಳಗು ಮಲರಿದುದು
ಮೊಗಕೆ. ಹೇರೆದೆಯುರ್ಬಿತಯ್ ಹಿಗ್ಗುವುಲ್ಲಸದ
ಸುಯ್ಗೆ. ಹೊಮ್ಮಿತು ನುಡಿಗಳುಗ್ಗಡಣೆ, ತನ್ನತ್ತಲಾ
ನಟ್ಟ ನೋಟವನಿತ್ತ ಹೊಡರಿಸದೆಃ "ಏಳ್, ಏಳ್,
ರಘೂದ್ವಹ, ನಿನಾದಮಂ ಕೇಳ್ ಶುಭಾವಹಮಂತೆ
ಕಾಣ್ ಶುಭದ ದರ್ಶನವ! ಮೂಡುತಿದೆ ನೋಡು ಬಾ,
ದಾಶರಥಿ, ನಮ್ಮ ಕೇಡಿನ ಕತ್ತಲೆಯನೊತ್ತಿ
ಪುಣ್ಯದುದಯಾಚಲದ ಪುಣ್ಯಾರುಣಜ್ಯೋತಿ!
ಮಲೆಗಳಿಕ್ಕಟ್ಟಿನಲಿ, ಕಾಡುವೀಡಿನ ನಡುವೆ,

ಲಂಕೆಯಿಹ ತೆಂಕಣದ ದಿಕ್ಕಿನಿಂ, ಸುರಿಯುತಿದೆ
ಕಿಷ್ಕಿಂಧೆಗೆಮ್ಮ ಬೇಹಿನ ಸೇನೆ! ಕಿಲಕಿಲದ
ಕೋಲಾಹಲಮೆ ಸಾಲ್ಗುಮದರ ಕೃತಕೃತ್ಯತೆಗೆ
ಡಂಗುರಂ: ಅಲ್ಲದಿರೆ ಪಿಂತಿರುಗಲಮ್ಮನೇಂ
ಯುವರಾಜನಂಗದನವಧಿ ಮೀರ್ದ್ದಂ! ಪತ್ತುವಿಡು
ದುಗುಡಮಂ, ಮಿತ್ರಕುಲ ಮಿತ್ರವರ್ಯ. ಬಾ, ಬಾ,
ನೋಡು, ಸೀತೆಯ ಸೈಪು ಶರಣುಬರುತಿದೆ, ದಿಟಂ,
ರಾಮರಕ್ಷೆಯ ಚರಣ ದುರ್ಗಕ್ಕೆ!''
ವಿದ್ಯುತ್
ಕಶಾಘಾತಕೆಂತು ಲೋಹದ ಜಡತೆ ಚೇತನಕೆ
ಚಿಮ್ಮುವುದೊ ಅಂತೆಯೆ ವಲಂ ಮೈಥಿಲಿಯ ವಾರ್ತೆ
ತುಂಬಿದುದು ರಘುನಂದನನ ಮನವನಮೃತಮಯ
ರತಿಮದಿರೆಯಿಂ. ವ್ರತಶ್ಮಶ್ರು ಭೀಷ್ಮಾನನಂ
ಮೇಲೆಳ್ದನಶ್ರುಸೌಮ್ಯಂ. ಕಂಡನದ್ಭುತಂ
ನಾದಕಾರಣ ದೃಶ್ಯಮಂ ದುರ್ಗಮಂ ಪುಗುವ
ವಾಲಿಸುತನಂಗದನ ಸೇನಾ ಸಮುದ್ರಮಂ,
ನೀಲ ನಳ ಜಾಂಬವ ಸಮೀರಾತ್ಮಜರ ಮಹಾ
ಪ್ರತ್ಯಾಗಮನ ಯಾತ್ರೆಯಂ. ಬಳಿಯೆ ನಿಂದಿರ್ದ
ಸೌಮಿತ್ರಿಯಂ ನೋಡೆ, ಕಣ್ಣ ಶಂಕೆಯನರಿತು
ನುಡಿದನಣ್ಣಂಗೆ: ''ಅಕೃತ ಕೃತ್ಯರಿಗೆ ಸಾಧ್ಯಮೇನ್
ಆ ಸಂಭ್ರಮಂ? ಪ್ರಾಜ್ಞನೀ ವಾನರೇಶ್ವರಂ;
ತನ್ನವರೆರ್ದೆಯನರಿತವನ್. ಮೇಣ್ ತಪೋಜ್ವಲಳ್
ನಿನ್ನ ಚಾತುರ್ಮಾಸ ಸಾಧನಾಶ್ರೀಮಂತಿನಿ ತಾನ್
ಅವಂಧ್ಯೆ!''
ಇಂತಿವರ್ ನಿಂತು ಮಾತಾಡುತಿರೆ
ಮಾಲ್ಯವತ್ ಚಿತ್ರ ಕಾನನ ಸಾನುವೋರೆಯಂ
ಏರಿ ಬಂದುದು ಅಂಗದನ ಸಂಗ್ರಾಮ ಸಮಿತಿ,
ಹನುಮ ಜಾಂಬವ ನೀಲ ನಳ ಮುಖದಿ. ನಗೆಮೊಗದಿ
ಶುಭವನೊರೆಯುತ ಬಂದು ಕೈಮುಗಿದರನಿಬರುಂ
ಮೂವರಿಗೆ. ರಾಮಚಂದ್ರನ ಮೊಗದ ನವಿರಿಡಿದ
ಭೀಷ್ಮ ಗಾಂಭೀರ್ಯಕ್ಕೆ ಬೆರಗಾಗುತಂಗದಂ

ಜಾನಕೀವೃತ್ತಾಂತ ಕೋವಿದಗೆ ಪವನಜಗೆ
ಕಣ್‌ಮಾಡಿದನು ವಾಕ್ಯಜ್ಞನಾಂಜನೇಯಂಗೆ.
ಮೊಳಗಿದುದು ವೇದಘೋಷ ಸಮಾನ ವಾಣಿ ಆ
ಯೋಗಿಯುರದಿಂದಿಂತುಃ "ನಿಯತೆ! ಅಕ್ಷತೆ! ದೇವಿ
ಸುವ್ರತೆ! ಅಶೋಕವನಗತೆ! ಶೋಕಸಂಮ್ಲಾನೆ!
ತವ ವಿರಹ ದೀನೆ! ಹೇ ದಾಶರಥಿ, ಧನ್ಯನಾಂ
ಕಂಡು ಪುಣ್ಯಶ್ಲೋಕೆಯಂ!" ಎನುತೆ ಹೃದಯದ ಖನಿಗೆ
ಕೈಯಿಕ್ಕಿ, ವಕ್ಷದ ವಜ್ರರಕ್ಷೆಯೊಳಿರ್ದದನ್
ಚೂಡಾಮಣಿಯನಂಜುಳಿಗೆ ತೆಗೆದು, ನೋಳ್ಪರ್ಗೆ
ಕಣ್‌ಮಣಿಯೆ, ನೀಡಿದನವಿನ್ನಾಣಮಂ ಪ್ರೀತಿ
ಗೌರವಸ್ಫೀತನೇತ್ರಂಗೆ, ಸೀತಾ ಶ್ವಾಸ
ಸೂತ್ರಂಗೆ. ನಾನಾ ಸ್ಮೃತಿಗಳುಣ್ಮುತಿರೆ ಮನಕೆ,
ಭಾವದುಬ್ಬರವೇರುತಿರೆ ಕಣ್ಗಳಿಗೆ, ಕಾಂತೆ
ಕಾನನದಿ ಮರೆಗೊಂಡು ರೂಪಾಂತರವನಾಂತೆ
ಮರಳಿ ಮೈದೋರ್ದಳೆಂಬಂತೆ ಆ ಸುಪರಿಚಿತ
ಮಣಿಯ ಕೊಂಡನು ಕೈಗೆ ಕಂಪಿಸುತ. ಧೀರನಾ
ಊರ್ಮಿಳೇಶಾಗ್ರಜಂ, ತನ್ನ ಅಸ್ಥೈರ್ಯಕ್ಕೆ ತಾಂ
ಕನಲಿ, ನೋಡಿದನೊಮ್ಮೆ ಚೂಡಾಮಣಿಯನೊಮ್ಮೆ
ಆಂಜನೇಯನ ಅದ್ರಿಭವ್ಯ ಮುಖಮುದ್ರೆಯಂ.
ಉಕ್ಕುವಕ್ಕರೆಗಿದಂ ಹೆಮ್ಮೆ ಹೊಮ್ಮಲ್ಕದಂ
ನೋಡೆ ನೋಡುತೆ, ತೋಳ್ಗಳಂ ನೀಡಿ ಮುಂಬರಿದು
ನಡೆದನ್ಃ ಪರಿಷ್ವಂಗಿಸಿದನಾಂಜನೇಯನ
ಪವಿತ್ರ ಗೋಪುರ ಗಾತ್ರಮಂ! ಕಂಡರೆಲ್ಲರ್ಗೆ
ಪುಲಕ ಜಲ ಚಿಮ್ಮಿದುವು ಕಣ್ಗೆಃ ದರ್ಶನಮಲ್ತೆ
ದಿವ್ಯಮಾ ರಾಮಾಂಜನೇಯರ ಪರಸ್ಪರಂ
ಕೃತಜ್ಞತಾಲಿಂಗನಂ?
ಪ್ರಸ್ರವಣ ಗಿರಿಶಿರ
ಗುಹಾಮುಖ ಪ್ರಸ್ತರಾಸನವಾದುದಾಸ್ಥಾನ.
ರಘುಸೂನುಗಳ್‌ವೆರಸಿ ಸುಗ್ರೀವನೊಂದರೆಯ
ಮೇಲೆ ಮಂಡಿಸೆ, ಇತರರುಂ ಕುಳಿತರಲ್ಲಲ್ಲಿ.
ಮೊಳಕೈಯನೊತ್ತಿ ಬಂಡೆಯ ಚಾಚುದುಬ್ಬಕ್ಕೆ,

ಕರ್‌ನವಿರ ಕರಡಗಲ್ಲವನಿಳುಹುತಂಗಯ್ಗೆ,
ಇದಿರೆ ಸನಿಯವೆ ಕುಳಿತ ಹನುಮನೊಳೆ ಕಣ್‌ನಟ್ಟು,
ಕಿವಿಗೊಟ್ಟನವನಿಜಾ ರಮಣಂ ಸಮೀರಜನ
ಸಾಹಸಾನ್ವೇಷಣದ ಮೇಣ್ ಆವೇಶ ಭೀಷಣದ
ಆ ಕಾವ್ಯಸುಂದರ ಭಾಷಣದ ವಿವರವರ್ಣನೆಗೆ.

## ಸಂಚಿಕೆ ೬

# ರಣವ್ರತರ್ ವಹ್ನಿರಂಹರ್

ದಳದಳವಲದ್ದುರ್ದ್ಯೆ, ಮೂಡು ಬಾನಂಚಿನೊಳ್,
ಪ್ರತೀಕ್ಷಿಸಿದ ಫಾಲ್ಗುಣದ ಪೂರ್ಣಿಮೆಯ ದಿನಪುಷ್ಪ
ಪುಣ್ಯೋದಯದ ಉಷಃಕಾಂತಿ. ಧಳಧಳಧಳಂ
ಮೊಳಗಿದುದು ಪ್ರಸ್ಥಾನ ಭೇರೀ ರವಂ. ನವಿರ್
ನಿಮಿರಿ ಕಂಪಿಸಿತಾ ಘನೋನ್ನತ ಪ್ರಸ್ರವಣ
ಶಿಖರಿ. ದಳದಳ ತರಂಗಿತ ವಾನರರ ಮಹಾ
ಸೇನಾ ಸಮುದ್ರಮುಕ್ಕಿದುದು ದಕ್ಷಿಣ ದಿಶಾ
ದೈತ್ಯ ಲಂಕಾಮಥನ ವಿಪ್ಲವಕೆ. ಪ್ಲವಗೇಂದ್ರ
ಸುಗ್ರೀವನಾಜ್ಞಾಪ್ರಚೋದಿತನ್ ಸೇನಾನಿ
ನೀಲಂ, ಸಹಸ್ರಸಂಖ್ಯೆಯ ಪಥಜ್ಞರಿಂ ಕೂಡಿ,
ಮಾರ್ಗರಚನಾ ಬಲ ಸಮರ್ಥರಿಂ ಕಡಿಯಿಸುತೆ
ಪೆರ್ವಟ್ಟೆಯಂ, ಸಸ್ಯ ಜಲ ಫಲ ಸಮೃದ್ಧಿಯಿಂ
ಕ್ಷೇಮಕರಮಾಗಿರ್ದ ಸಹ್ಯಮಲಯಾದ್ರಿಗಳ
ಸಾನು ಸುಂದರ ಸೀಮೆಯಲಿ ಮುಂಬರಿದನಯ್,
ಹಿಂಬರಲಸಂಖ್ಯೇಯ ಅಕ್ಷೌಹಿಣಿಯ ಬಲದ
ವೈರಿ ಭೀಕರ ಕಪಿಚಮೂ. ಹೇಳಲೇನಳವೆ?
ಕೇಳ್ ಸಹ್ಯಶೈಲಮಂ; ಕೇಳ್ ಮಲಯಗಿರಿಯಂ:
ಅರಣ್ಯ ನಿರ್ಝರ ನದಂಗಳಂ ಕೇಳ್; ಪ್ರತಿಸ್ಪರ್ಧಿ
ಮಲೆತುದಿನ್ ಮುಂದೆ ಗತಿಯೇನೆಂದೊರಲ್ವವೋಲ್
ಉದ್ವೇಗಗೊಂಡಾ ಉದನ್ವಂತನಂ ಕೇಳ್!
ಅನಂತಮಂ ಅಳೆಯಲಳವೇ? ಎಣಿಸಲಳವೇ
ಮಳಲ್ ಕಣಗಳಂ ಕಡಲ ತೀರದಾ? ಅಗಣಿತಂ
ಅಮೇಯಮ್, ಅಯೋಧ್ಯೆ ತಾಂ ನಡಸೆ, ಲಂಕೆಯ ಕಡೆಗೆ

ಅದ್ಭುತಮೆನಲ್ ನಡೆದುದು ಅಪಾರ ಧೀರಮಾ
ಕಿಷ್ಕಿಂಧೆ!
        ಗಿರಿಸನ್ನಿಭಂ ಗಜಂ; ಗವಯಂ
ಮಹಾ ಬಲಿಷ್ಠಂ; ಗವಾಕ್ಷಂ ಸಂದ ಕಲಿ; ಮುಂದೆ,
ತಂತಮ್ಮ ಪುಲಿಯ ಚಿರತೆಯ ತೊಗಲ್ ಕಯ್ಗಯ್ದ
ಬಲ್ಪಡೆಗಳಂ ಕೂಡಿ, ನಡೆದರ್ಯ್ ತರುಮೂಲ
ಭೀಮಾಭೀಲ ಗದೆಗಳಂ ಪೊತ್ತು. ಬಲಗಡೆಗೆ
ವಾನರರ್ಷಭ ಋಷಭನೈತಂದನೈ ತನ್ನ,
ಸಿಂಹ ಚರ್ಮದಿ ಸಮೆದ ಸಮರೂಪ ವರ್ಮಮಂ
ಧರಿಸಿ, ರುದ್ರನ ಶೂಲಗಳ ಸಹೋದರರೆನಲ್
ಶೂಲಪಾಣಿಗಳಾಗಿ, ಹಗೆಯೆದೆಯ ಹೆದರಿಕೆಯ
ಹೇರಾಳ್ಗಳೊಡನೆ. ಗಂಧಹಸ್ತಿಯವೋಲ್ ತರಸ್ವಿ,
ಗಂಧಮಾದನವೆಸರ ದುರ್ಧರ್ಷವಾನರಂ
ಖಡ್ಗಹಸ್ತದ ಖಡ್ಗಿಚರ್ಮದ ಪರಾಕ್ರಮದ
ಕೋಟಿಕೋಟಿಗಳೀಟಿಗಳ್ಗೆ ದಳಪತಿಯಾಗಿ
ಐತಂದನೈ ಸವ್ಯಪಾರ್ಶ್ವದಲಿ. ಅಂಗದಂ
ಜಾಂಬವ ಸುಷೇಣ ಶತಬಲಿ ವೇಗದರ್ಶಿಗಳ್
ನೂರು ಸಾವಿರ ಲಕ್ಷ ಕೋಟಿಯಾಳ್ಗಳ್‌ವೆರಸಿ
ಕಾವಲಾದರು ಸೈನ್ಯಹೃದಯಕ್ಕೆ. ಮೈಂದಂ
ದರೀಮುಖಂ ರಂಭಂ ಪ್ರಜಂಘಂ ನಳಂ ದ್ವಿವಿದ
ವಿನತಾದಿ ಪನಸ ತಾರಾದಿ ಸೇನಾನಿಗಳ್
ತಂತಮ್ಮ ಸೇನೆಗಳ್‌ವೆರಸಿ ನಾನಾ ಮುಖದಿ
ನಡೆದರಲ್ಲಲ್ಲಿ. ಕಪಿರಾಜನೈತಂದನಯ್ ಕೇಳ್,
ಕೋಸಲೇಶ್ವರ ಸೂನುಗಳ್‌ವೆರಸಿ, ಸೇನಾಮಧ್ಯೆ
ಆಂಜನೇಯನ ಅಂಗರಕ್ಷೆಯಲಿ!
                    ಮಾಗಿಗೆ
ಚರಮಗೀತೆಯನುಲಿದುವಳಿವಿಂಡು; ಸುಗ್ಗಿಯ
ನಾಟಕಕೆ ನಾಂದಿಯನುಲಿಯೆ ಹಿಗ್ಗಿದುದು ಕೊರಳ್
ಕೋಗಿಲೆಗೆ. ಮೆಲ್ ತೀಡತೊಡಗಿತು ಗಂಧಗಾಳಿ;
ತಿಳಿದು ನೀಳ್ದುವು ದಿಶಾಳಿ. ಸುಖವಾಯ್ತುಲೆವ ದಾರಿ;
ಶೀತಕಾನನ ವಾರಿ ಹಿತವಾಯ್ತು. ತಳಿರ ತಲೆ

ತರುತಾಯಿಯಿಂದಿಣುಕಿ, ಕಣ್ಗೆ ಕಡು ಚೆಲ್ವಾಯ್ತು.
ಸಹ್ಯ ಮಲಯಾದ್ರಿ ಸೌಂದರ್ಯಮಂ ಸೌಖ್ಯಮಂ
ಸವಿದು ಮುನ್ನುಗ್ಗುತಿರೆ ಆ ರಾಮ ಸಖ ಸೇನೆ,
ತೊರೆಗಳೊಳ್ ಕೆರೆಗಳೊಳ್ ಕುಡಿದು ಬತ್ತಿದುದು ನೀರ್;
ತವಿದುದೈ ಮರಬಳ್ಳಿಗಳಲಿ ಪಣ್; ಪುತ್ತಿನೊಳ್
ಕಲ್ಪೊಡೆನೊಳ್ ಮರದ ತೂಂತಿನೊಳ್ ಬರಿದಾಯ್ತು
ಜೇನ್: ಬೀಡುವಿಟ್ಟೆಲ್ಲ ಕೋಟಿ ಕೋಟ್ಯನುಕೋಟಿ
ಜೇನ್ನುಳುಮುಗಿಲ್ ಕರ್ಪ್ಪನೆಳೆದುವು ಮುಗಿಲ್ಮೊಗಕೆ,
ಝೇಂಕರಿಸಿ. ನಿಂತಲ್ಲಿ ನಿಲ್ಲದಿಂತಾ ಸೇನೆ
ತೊತ್ತಳದುಳಿದು ದರಿಕಂದರದ ಗಿರಿವಕ್ಷಮಂ
ದಾಳಿಟ್ಟುದಯ್ ಮುಂದೆ ಮುಂದೆ!
ಲಂಕೇಶ್ವರನ
ಬೇಹುಗಾವಲ್ಪಡೆಯ ಸೀಗೆಮೆಳೆಗಳನೆಲ್ಲಿ
ಕಂಡಲ್ಲಿ ಕಡಿದಿಕ್ಕುತುಂ, ತನ್ನ ಪಡೆಯ ನಡೆ
ತಡವರಿಸದಂದದಲಿ ಹಗಲಿರುಳ್ ಮುನ್‌ನಡೆದು
ಸೇನಾನಿ ನೀಲನಗ್ನಿಯ ಮಗಂ ಬರೆವರೆ
ದವಾಗ್ನಿಯೋಲ್, ಮುಂದೆದ್ದುದು ಮಹೇಂದ್ರಭೂಧರಂ
ದ್ರುಮಚಾರು ಪಂಕ್ತಿನೀಲಂ. ಮಾರುತಾತ್ಮಜಂ
ಸುಗ್ರೀವ ರಾಮಲಕ್ಷ್ಮಣರಿಗಾ ಸಾಲ್ ಮಲೆಯ
ಮಹಿಮೆಯಂ, ವಿಭವಮಂ, ಉನ್ನತಿಯ ಘನತೆಯಂ,
ಸಂಪಾತಿ ಕುಳ್ತಿರ್ದ ಶಕುನಿಶಿಲೆಯಿರ್ಪ್ಪೆಡೆಯ
ಕಡಿಪುಮಂ, ಸಾಗರೋಲ್ಲಂಘನಕೆ ಮುನ್ನಂದು
ಹುಡುಕುಪಡೆ ಸಭೆ ನೆರೆದ ಸಾನುಪ್ರದೇಶಮಂ,
ಲಂಕೆಯಿಹ ದಿಗ್ಭಾಗಮಂ ದೂರಮಂ ಕುರಿತು
ಬಣ್ಣಿಸುತಿರಲ್ ಕಿವಿಗೆ ಬಂದುದು ಭೀಮ ನಿಸ್ವನಂ,
ರುಂದ್ರ ಸಾಗರ ಸಲಿಲ ನಿರ್ಘೋಷಮಂದ್ರಂ.
ಅಯೋನಿಜಾ ವಲ್ಲಭ ಮನಂ ಪ್ರಫುಲ್ಲಿಸುತಿರಲ್
ಬಹುದಿನಗಳಾಶೆ ಸಿದ್ಧಿಸಿತೆಂದು ಸಡಗರಿಸಿ
ಶರಧಿ ಗುರು ದರ್ಶನಕೆ, ಮುಟ್ಟೆ ಬೆಟ್ಟವನದರ
ಪ್ರತ್ಯಂತ ಸೀಮೆಯನಡರಿದುದು ಸೇನೆ. ಏರಿ,
ದಳಪತಿಯ ಸಂಜ್ಞೆಯಿಂ ಮತ್ತಮಲ್ಲಿಂದಿಳಿದು,

ಕಂದರದ ಸುಪಥಮಂ ಕೊಂಡು, ಗಿರಿಯ ಚರಣದ
ಶರಧಿಪರಿಧಿಯ ಸಿಕತಮೃದುಲ ಧೌತೋಪಲದ
ವೇಲಾವನದಿ ಬೀಡು ಬಿಟ್ಟುದು ಬೃಹದ್ ಬಲಂ
ಸಾಗರೌಘಸ್ಪರ್ಧಿ ತಾನಾಗಿ!
　　　　　　　　　　　　ಅಂಬುಧಿಯ
ಮೊದಲ ಕಾಣ್ಕೆಗೆ ಮುದಂ ಮಿಕ್ಕು, ಮಾತಿಲಿಯಾಗಿ
ನಿಂದು, ನಿಷ್ಪಂದನಾದಂ ಸಿಂಧುಧೀರನ್
ಸಗರಬಂಧು. ಅಂಬರದ ಸಲಿಲಾವತಾರಮೆನೆ,
ನೋಟದೋಟಂ ಸುಯ್ದು ಸೋಲ್ವನ್ನೆಗಂ ಪರ್ವಿ,
ಪರ್ವತಂಬೋಲುರ್ಬಿದುದು ದಿಗಂತಂ ಬರಂ,
ಮೇಲ್ವಾಯ್ದುರುಳ್ವುದೆಂಬೊಂದಗುರ್ವಿಂ ಭ್ರಮಾ
ಭೀಕರಮಪಾರತಾ ಪ್ರತಿಮಮಾ ಅಪ್ರತಿಮ
ಸಲಿಲಾಕರಂ. ಪಿಂತೆ ತಾಂ ಕಂಡುದಾವುದುಂ
ಆ ಶರಧಿದರ್ಶನದನುಭವವನಿಂಗಿತದೊಳುಂ
ಸೂಚಿಸಿದುದಿಲ್ಲಮೆನೆ ಭವ್ಯಮಾಯ್ತನುಭೂತಿ
ಪ್ರಸ್ರವಣ ಗಿರಿಶಿರ ಗುಹಾ ತಪೋಯೋಗದಿಂ
ರಸದರ್ಶಿಯಾಗಿರ್ದ ರಸಋುಷಿ ರಘೂದ್ವಹ
ಮಹಾನ್ ಮತಿಗೆ. ಮುನ್ನೀರ್ಗ್ಗೆಣೆಯೆ ಬಾನೊ? ಬಾನ್ಗೆಣೆಯೆ
ಮುನ್ನೀರೊ? ಮೇಣೆರಡುಮುಂ ತಾನೊ? ನೋಡುತಿರೆ,
ಕಣ್ ಪೀರ್ದುವಾ ನೀಲದ್ವಯಂಗಳಂ; ನನೆದು
ತೊಯ್ದುದಂತಃಕರಣಮಾ ವರ್ಣದಿಂ; ನೀಲಿ
ನಾಳ ನಾಳದಿ ಪರಿದು, ನೀಲಮಾಯ್ತಾ ಮೆಯ್ಯ
ನೆತ್ತರುಂ; ನೀಲತರವಾದನಾ ನೀಲತನು
ರಾಮಚಂದ್ರಂ. ಹೃದಯಮಲೆಯಲೆಯೆದ್ದು ನರ್ತಿಸಿ
ಫೇನ ಚಂದನ ಶೋಭಿಯಾದುದು, ಸಮುದ್ರಮಂ
ಪ್ರತಿಕೃತಿಸಿ; ವಾತದೋಲಿತಮಾಯ್ತು ಜೀವನಂ,
ಉಚ್ಚಲಜ್ಜಲಧಿಯೋಲ್, ಉಲ್ಲೋಲ ಕಲ್ಲೋಲ
ರುಂದ್ರ ರಮ್ಯಂ!
　　　　　　　　ನೀಲನಾಣತಿಗೆ ಮುಡಿಬಾಗಿ
ಪಡೆಪಡೆಯೊಡೆಯರಲ್ಲಲ್ಲಿ ಬಿಡಿಸಿದರು ಶಿಬಿರಮಂ
ಕಡಲ ದಡದಲ್ಲಿ. ಸೀಮೆಯನುಳಿದು ಸೀಮಾಂತರಕೆ

ಗೂಳೆಯದೆಗೆಯುತೊಕ್ಕಲ್ವೋಪ ಹಕ್ಕಿಯ ಹಿಂಡು,
ಬಿತ್ತರದ ಕಡಲನುತ್ತರಿಸಿ, ಪಕ್ಕಂ ದಣಿದು
ಸೋಲೆ, ಸಿಕ್ಕಿದ ಮೊದಲ ನೆಲಕ್ಕಿಳಿದು ವಿಶ್ರಮಿಸೆ
ಕಿಕ್ಕಿರಿಯುವಂತೆ ಕವಿದುವು ಕಡಲ ತೀರಮಂ
ಪರ್ಣಗೃಹಗಳ್ ಚರ್ಮಛಾದಿತಂ. ಹೊಗೆಗಳುಂ
ಮೇಲೆದ್ದುವಲ್ಲಲ್ಲಿ ಪಾಕ ಕರ್ಮಕೆ ಬರೆದು
ಪೀಠಿಕೆಯ. ಪುಡುಕಿ ತಂದರು ಕೆಲರು ಪುಳ್ಳಿಯಂ;
ಹಣ್ಣುಹಂಪಲನರಸಿದರು ಕೆಲರು; ಕೆಲರಗೆದರಯ್
ಗೆಡ್ಡೆಗೆಣಸುಗಳ. ದಡದೆಡೆಯೆ ತೆಳ್ಳೆಯೊಳಿಳಿದು
ಕೆಲಕೆಲರ್ ಮಿಂದರೆದೆಯಾಳದಾ ನೀರೊಳಗದ್ದಿ,
ತೆರೆತೆರೆಗಳೊಡನಾಡಿ ಮೆಯ್‌ಸೊಗಸಿ. ಕೆಲಬರಿನ್
ಹರೆಯದವರಲ್ಲಲ್ಲಿ ಮಳಲ ಮೆತ್ತೆಯೊಳೊರಗಿ
ಕಡಲೆಲರಿಗೊಡಲೊಡ್ಡಿದರು ಚಾಚುತಂಗಾತ.
ಕೆಲರು ಕಿರಿಯರು ಮಳಲನಾಡಿದರು; ತೋಡಿದರು;
ಬಾಯ್ಗೆ ಬಂದುದನುಲಿದು ಪಾಡಿ, ಕುಣಿಕುಣಿದಾಡಿ,
ಒಬ್ಬರೊಬ್ಬರನಟ್ಟುತೋಡಿದರು!

ಇಂತಿರುತಿರಲ್,
ಅನ್ನೆಗಮಿಳಿದು ಬಂದುದು ಬಯ್ಗು ಪಡುವಣ ಮುಗಿಲ
ಮಂಚಕ್ಕೆ. ಒಸಗೆಯೋಕುಳಿಯಾದುದಾ ದೆಸೆಗೆ
ಕಡಲ ನೀರ್. ಅಗ್ನಿಚೂರ್ಣವನೆರಚಿದೋಲಂತೆ
ಲೋಲಿತ ತರಂಗೋರಗಾಭೀಳಮಾಯ್ತಾ
ಮಹಾರ್ಣವಂ. ರಾಗಮನುರಾಗಮಂ ಸ್ಮೃತಿಗೆ ತರೆ
ಧಗಿಸಿತಾತ್ಮಂ ವಿರಹದುರಿಗಾ ರಾಮಚಂದ್ರಂಗೆ.
ಹಕ್ಕಿ ಹಾಡನು ಮುಗಿಸಿ ಗೂಡಿಗೋಡಿತು; ಮಿಗಂ
ಹಕ್ಕೆ ಸೇರಿತು, ಮೇದುದಂ ಮೆಲುಕು ಹಾಕಲ್ಕೆ;
ಮೌನಮಪ್ಪಿದುದಬ್ಧಿಶಬ್ದಮಂ, ಮೇಣ್ ಸೈನ್ಯ
ಸಂನಾದಮಂ. ಕರ್ಪು ತಾನೊಯ್ಯನಿಳಿತಂದಪ್ಪಿ
ಮಸಿಮುದ್ದೆಯಾದುದು ಗಿರಿಧರಿತ್ರಿ. ಚುಕ್ಕಿಗಳ್
ಕಿಕ್ಕಿರಿದುವಾಗಸದೊಳೆಂತಂತೆ ಮುನ್ನೀರ
ಚಕಿತ ವಕ್ಷದಲಿ, ಲಕ್ಷೋಪಲಕ್ಷಂ. ಅಲ್ಲಲ್ಲಿ
ಶಿಬಿರಶಿಬಿರದೊಳಗ್ನಿವೂ ರಂಜಿಸಿದುವರಳ್ವವೋಲ್!

ದಯಿತೆ ಸೆರೆಯಾಗಿರ್ದ ದೈತ್ಯಲಂಕಾದ್ವೀಪಮಾ
ತಾನಿರ್ದ ದಕ್ಷಿಣ ದಿಶೆಗೆ ದೃಷ್ಟಿಯಾಗಿರ್ದು,
ಮೇರೆಗಾಣದ ಸರಿತ್ಪತಿಯನೀಕ್ಷಿಸುತ ಬಹು
ಭಾವೋರ್ಮಿಮಾಲಾ ಸಮುದ್ರನಾಗಿರ್ದ ರವಿ
ಕುಲ ಶಿರಶ್ಶೇಖರಂ ಚಿತ್ರಭಾನುಜಗಿಂತು
ಗಾಢ ಸುಪ್ತಿಯಿನಚಿರಮೆಳ್ಚತ್ತನೋಲ್:
"ಅಗ್ರ
ಸೇನಾನಿ ನೀನ್, ಅಗ್ನಿಪುತ್ರ; ನಿನ್ನೊಡನಿನಿತು
ನನಗೆ ವೇಳ್ಕುಂ ಮಂತಣಂ. ಗುಹ್ಯಮೇನಿಲ್ಲ;
ಕಪಿರಾಜನಂತರಂಗದ ಮಂತ್ರಿಗಳ್ ಎಲ್ಲರ್
ಆಲಿಸಲ್ ತಕ್ಕುದೆ ವಲಂ. ಆದೊಡಂ ನನಗೆ,
ಭಾವಭಾರದಿನೇದುತಿರ್ಪೆನಗೆ, ಓರ್ವನಿರೆ
ಸುಕರಮಪ್ಪುದು ಬಗೆಯ ಮೇಣ್ ನಾಲಗೆಯ ನಡೆಗೆ.
ನೀನವರ್ಗಾ ಬಳಿಕಮೊರೆಯಲಪ್ಪುದು ನಮ್ಮ
ಈ ನಡೆವ ಸಂಭಾಷಣೆಯ ಸಾರಮಂ. ಮೌನಿ
ನೀಂ. ನಿನಗೆ ಮೌನಂ ಪ್ರಕೃತಿಸಹಜಮಾದೊಡಂ,
ಹೇ ವಾನರ ವರೇಣ್ಯ, ನೀಲ, ಬಾಯ್ದೆರೆದೆದೆಯ
ಉತ್ತರವನೊರೆಯವೇಳ್ಕುಂ ನನ್ನ ಕೇಳ್ವುದಕೆ.
ಮುಚ್ಚು, ಮರೆ, ಸಂಕೋಚವಿನಿತು ಸಲ್ಲದು ಇಲ್ಲಿ,
ನನ್ನ ನಿನ್ನಯ ಹೃದಯಸಭೆಯಲ್ಲಿ!"
"ರಘುಶ್ರೇಷ್ಠ,
ನಿನ್ನಿಷ್ಟಮೆನಗಾಜ್ಞೆ. ಸೇನಾನಿಗಳಿಗೆಲ್ಲ
ಪರಮ ಸೇನಾನಿ ನೀನ್. ಬಗೆಬಿಚ್ಚಿ ಪೇಳ್ದಪೆನ್;
ಕೇಳ್."
ಇರ್ದರಿರ್ವರುಮಚಂಚಲರ್ ರತ್ನಧಿಯ
ಚಂಚಲಾಂಚಲದೊಳಿರ್ದೊಂದರೆಯ ಬೆನ್ನಿನೊಳ್.
ಮುಂಗಾಲ್ ಮುಳುಗಿ, ಸೊಂಡಿಲಂ ನೀಡಿ, ನೀರ್ ಕುಡಿವ
ಹೇರಾನೆಯೋಲ್ ಅರ್ಧ ಮೇಲರ್ಧ ಕೆಳಗಿರ್ದ
ಆ ಬಂಡೆಯಂ ಬಡಿದುದವ್ವಳಿಸಿ ತೆರೆನೊರೆಯ
ಮುತ್ತುಗೊಂಚಲ್; ಬಡಿಯಲೊಡಮಾಯ್ತು ಪಾಲ್‌ಚವರಿ
ಕೈವೀಸುವೋಲ್; ಬೀಸುವುದೆ ತಡಂ ತುಂತುರಿನ

ಸೋನೆ ಸಿಂಚಿಸಿತಿರ್ವರಂಗಮಂ; ಹಂಚಿದೊಲ್
ವಾಃಕಣ ಕಣದಿ ಮಿಂಚಿತುಡುಕಾಂತಿ!
"ಈ ಕಡಲ್
ಲಂಕೆಯಿಹ ದೂರ ಪಾರಕೆ ನೂರು ಯೋಜನಂ
ನೀಳ್ದಿರ್ಪುದಲ್ತೆ? ಬಹು ಯೋಜನಂ ಪಸರಿಸಿಹ
ಈ ದೀರ್ಘ ವೇಲೆಯನೆಲ್ಲ ತುಂಬಿ, ಧೈರ್ಯಮಂ
ಮನಕೆ ಮೇಣ್ ಕಣ್ಗೆ ಹಬ್ಬವನೀವ ಈ ಬೃಹದ್
ಧ್ವಜಿನಿಯಂ ದೈತ್ಯತೀರಕೆ ದಾಂಟಿಸುವ ಬಗೆಗೆ
ಕಳವಳಿಸುತಿದೆ ಬಗೆಯೆನಗೆ. ನೀಂ ದೀರ್ಘದರ್ಶಿ;
ಪೇಳೆನಗುಪಾಯಮಂ."
"ಬಿಡು ಚಿಂತೆಯಂ, ರಘುಜ;
ಧರ್ಮಂ ಸಹಾಯಮಿರೆ, ಧರ್ಮದೇವತೆಯೆಮಗೆ
ಕಟ್ಟುವಳ್ ಸೇತುವಂ. ನಿನ್ನೊರ್ ತಪಃಶಕ್ತಿ,
ಪೇಳ್, ಚಲಿಸಲಾರದೆ ಋತಪ್ರಕೃತಿಯಂ? ಕಡಲ್
ಬಟ್ಟೆಯಿೀಯದೆ ಬೆದರಿ, ಇಚ್ಛೆಗೆ ಒಡಲ್ ಬಿರಿದು?
ಕಲ್ ತೇಲದೇನ್, ವಿಸರ್ಜಿಸಿ ತನ್ನ ನಿಯತಿಕೃತ
ನಿಯಮಮಂ?–ಅಲ್ಲದೆಯೆ, ನಮ್ಮ ಸೇನೆಯೊಳಿಹರ್
ಅಪ್ರಾಕೃತ ಬಲಾನ್ವಿತರ್: ಕಡಲನೊರ್ ಕಯ್ಯ
ಅಪ್ಪಳಿಕೆಯಿಂದಮಿರ್ಕಡೆಗೆ ಸರಿವಂತೆವೋಲ್
ಬಡಿವ ಬಲ್ಮೆಯ ಪಡೆವ ಗಾತ್ರಕೆ ವಿಜೃಂಭಿಸುವ
ದೈತ್ಯಕಲಿಗಳ್; ವಿಶ್ವಕರ್ಮಂಗೆಣೆಯ ಯಾಂತ್ರಧೀ
ಕುಶಲಿಗಳ್; ನೌಕಲಾ ಕೋವಿದರ್; ಖೇಚರರ್!
ನಿನ್ನ ತಪಕಿನ್ನನ್ನರೊಂದು ಕೈಂಕರ್ಯಮಿರೆ,
ಕಡಲೊ ಕಾಲುವೆಯೊ, ಪೇಳ್, ಈ ಕಾಣ್ಬುದಕರಾಶಿ
ನಮ್ಮೀ ಅನೀಕಿನಿಗೆ?"
ಸಹಜ ಮೌನಿಯ ಮಹದ್
ಧ್ವನಿಯ ಧೈರ್ಯಕೆ ರಾಮನೆರ್ದೆಗಳ್ತಲಳಿವವೋಲ್
ವರುಣಾಲಯದ ಸಲಿಲ ಚಂಚಲ ದಿಗಂತದಿಂ
ಮೈದೋರಿದನು ಕೃಷ್ಣಪಕ್ಷದ ಶಿಶಿರ ರುಚಿರ
ಧನುರುಪಮನಾ ಮಂದಚಂದ್ರಂ. ಮಿನುಗುವಲೆತಲೆಯ
ಚೆನ್ನೀರ ಚೆಲ್ವನೀಕ್ಷಿಸಿ ಜಾನಕೀಜಾನಿ ತಾಂ

ಮತ್ತೆ ಜಾನಿಸುತಿಂತು ನೀಲಂಗೆ:
"ಕೇಳಿದಯ್
ನೀನ್, ಆಂಜನೇಯನಿಂ, ಲಂಕೆಯೊಂದುಗ್ರ ಬಲ
ವೃತ್ತಾಂತಮಂ?" "ತಿಳಿದೆನ್." "ಈ ಮಹಾಸೇನೆಯೊಳ್
ಮುನ್ನೀರನಿರ್ಮ್ಮೆ ದಾಂಟುವ ಸಯ್ಪು ಅನೇಕರ್ಗ್ಗೆ
ದೊರೆಯಲಾರದು!" "ದಿಟಂ, ದಾಶರಥಿ." "ಪಡೆಗಳಾಳ್
ತಿಳಿದಿರ್ಪರೇನೆರಡುಮಂ?" "ಮಹಾವೀರನೆಯೆ,
ಕಿಷ್ಕಿಂಧೆಯಿಂ ಪೊರಮಡುವ ಮುನ್ನಮೆಯೆ, ನೆರೆದ
ಸರ್ವ ಸೈನಿಕ ಮಹಾಸಭೆಗೆ ತಿಳಿಸಿಹನೆಲ್ಲಮಂ
ಕಷ್ಟ ನಷ್ಟದ ಕಠಿನ ಕಥನಮಂ." "ಬಹು ಜನರ
ಸತಿ ಸುತರ ಸಂಸಾರ ಸುಖವನೇತಕೆ ನನ್ನ
ಮೇಣೆನ್ನ ಸತಿಯ ಮುಂದಣ ಅನಿಶ್ಚಿತ ಸುಖಕೆ
ಬೇಳ್ವುದೆಂದೆದೆ ಚುಚ್ಚುತಿಹುದೆನಗೆ, ಅಗ್ನಿಭವ."
"ಸ್ವಾರ್ಥಮಲ್ತೀ ಸಾಹಸಂ. ಪುರುಷಾರ್ಥಮೊಂದು
ಗಂತವ್ಯಮೀ ತ್ಯಾಗಯಜ್ಞಕ್ಕೆ. ನೀನುಮಾ
ದೇವಿಯುಂ ಪ್ರತಿಮೋಪಮರ್ ಮಾತ್ರರೈ, ಪ್ರಾಜ್ಞ."
"ಶ್ಲಾಘ್ಯಮಂ ಪೇಳ್ದೆ; ನೀಂ ದಿಟಂ ತತ್ತ್ವಜ್ಞನಯ್!"
"ಬಹುಮಾನಮೆನಗೆ ಋಷಿಗಳ ಶಿಷ್ಯನಿಂತೆನಲ್!"
"ಆರೊ ಇರ್ವರ್, ಅಲ್ಲಿ, ಸಾಮಾನ್ಯ ಸೈನಿಕರ್
ತಿರುಗಾಡುತಿಹರಲ್ತೆ?" "ಬರುತಿರ್ಪರೀ ದೆಸೆಗೆ."
ನೋಡುತಿರಲಿರ್ವರಾಳ್ಗಳ್, ದೀರ್ಘನೊರ್ವನೆಡೆ
ಕುಬ್ಜನೊರ್ವಂ, ಬರಬರುತ್ತೆ ಬಳಿ ಸಾರಿದರ್.
ಕರೆ ಅವರನೆನೆ ರಾಮನಂತೆ ನೀಲಂ ಕರೆಯೆ,
ಕೇಳ್ದು ತೆಕ್ಕನೆ ಮಾತನುಳಿದರಾ ದನಿಗೇಳ್ದ
ದೆಸೆಗೆ ನಡೆದರ್: ಮಹಾ ಸೇನಾನಿಯಂ ಮತ್ತೆ
ಕಾಣುತೆ ರಘುಕುಲೇಂದ್ರನಂ ನಮಸ್ಕರಿಸಿದರ್
ಧೀರ ಮರ್ಯಾದೆಯಿಂ.
"ನೀಮಾರ ಪಡೆಯವರ್?"
ಕೇಳ್ದರಾ ರಾಮಚಂದ್ರಸ್ನೇಹ ವಾಣಿಯಂ.
ಕುಳ್ಳನುದ್ದನ ಮೊಗವನೀಕ್ಷಿಸಲವನ್: "ದೇವ,
ಕಪಿ ಕುಲೋತ್ತಮ ವೀರ ದಧಿಮುಖೇಂದ್ರನ ಧೀರ

ದಳದವರ್!'' ''ಪೆಸರ್ ನಿಮಗೆ?'' ''ರಂಹನಿವನೆನ್ನ ಕೆಳೆಯಂ;
ನನ್ನನೆಂಬರ್ ವಹ್ನಿ.'' ''ನೀಮಾವ ಯುದ್ಧದೊಳ್
ನುರಿತವರ್?'' ''ವಜ್ರಮುಷ್ಟಿಯ ಮಲ್ಲಯುದ್ಧದಿ
ಪೆಸರ್ವೆತ್ತ ಕಲಿಯೀತನೆನ್ನ ಮಿತ್ರನ್. ಕಾಡಾನೆಯನ್
ಕೋಡುಡಿದು, ನೆತ್ತಿಯೆ ಪಿಸುಳ್ವಂತೆ, ನಾವೆಲ್ಲ
ನೋಡೆ, ಮೋದಿದನೊರ್ಮೆ; ನಾಂ ಬಂದ ಬಟ್ಟೆಯೊಳ್,
ಮೊನ್ನೆ!'' ''ನೀನ್?''
ರಾಮನಾ ಪ್ರಶ್ನೆಗುತ್ತರವೀವ
ವಿನಯ ಶೈಲಿಯ ನೆನೆಯುತಿರಲಾಜಾನುಬಾಹು
ಆ ವಹ್ನಿ, ಋಜು ಹೃದಯದುತ್ಸಾಹಿಯಪ್ಪೊಡಂ
ರೂಕ್ಷ ಜಿಹ್ವೆಯ ರಂಹನವಸರದೊಳೊರೆದನಾ
ಪೃಥುಲ ಕುಬ್ಜಂ: ''ಗಗನಗಮನದೊಳ್ ನಿರುಪಮನ್,
ವೈರಿಗಜ ಸಿಂಹನೀ ವಹ್ನಿದೇವಂ! ಮಹಾ
ಮಾಯಾವಿ, ಮೇಣ್, ಕಾಮರೂಪಿ! ಬಂಡೆಯ ನೆಗಹಿ
ಕವಣೆಕಲ್ ಬೀರಿದನೆನಲ್, ಬಲಿದ ಕೋಂಟೆಗಳ್
ಬಿರಿವುವೀತಂಗೆ! ಬಿಲ್ ಬಿಜ್ಜೆಯೀತಂಗೊಂದು
ಮಕ್ಕಳಾಟಂ! ಖಡ್ಗ ಕಲೆಯೊಳುಂ ಕಲಿ! ಗದಾ
ಯುದ್ಧದೊಳ್ ಈತನತಿ ಭೈರವಂ!. . .''
ತಡೆದನಾ
ಸನ್ಮಿತ್ರನಂ ಮುನ್ನುಡಿಯಲೀಯದೆಯೆ ವಹ್ನಿ;
ಮತ್ತೆಂದನಾ ರಾಮಭದ್ರಂಗೆ: ''ರಾಜೇಂದ್ರ,
ಮನ್ನಿಸೀ ಮಿತ್ರನತ್ಯುತ್ಸಾಹ ಜಲ್ಪಮಂ.''
''ನಿನ್ನ ನೋಡಿದರಾತನೊರೆದನತ್ಯಲ್ಪಮಂ,
ವಹ್ನಿ!'' ಕೋಸಲನೃಪನ ನುಡಿಗೆ ತಲೆಬಾಗಿದನ್
ದೀರ್ಘೋನ್ನತಂ; ಮತ್ತೆ ''ದಧಿಮುಖೇಂದ್ರನ ದಳದಿ
ನಾನೊರ್ವನತ್ಯಲ್ಪನೆಯೆ ದಿಟಂ, ದೇವ.'' ''ನೀನ್
ಅಲ್ಪನಾಗಿರ್ಪವೊಲ್ ತುಳಿಲಾಳ್ಗಳಂ ಪಡೆದ
ದಧಿಮುಖೇಂದ್ರನೆ ಧನ್ಯನೈಸೆ!—ನೀಮಿರ್ವರುಂ
ಮಹಿಮರೆ ವಲಂ, ಪರಸ್ಪರ ಸಖ್ಯದಿಂ, ಮತ್ತೆ
ಪೇರದಟಿನಿಂ.—ವಹ್ನಿ, ನಿನಗೆ ಸಹಧರ್ಮಿಣಿಯ
ಸುಖ ಸಂಗಮಿರ್ಪುದೇನಯ್?'' ''ಇರ್ದುದೆನ್ನೂರೊಳಗೆ.''

ಪ್ರತ್ಯುತ್ತರದ ಇಂಗಿತವ್ಯಂಗ್ಯಕೊಂದಿನಿತೆ
ನಕ್ಕು, ಸೀತಾಪ್ರಾಣವಲ್ಲಭಂ: "ಇರ್ದುದೇನ್?
ಅಯ್ಯೊ ಇರ್ಪುದನುಳಿದು ಬಂದು ಸಂಕಟಕೇಕೆ
ಸಿಲ್ಕಿದಯ್? ನಿನ್ನವೊಲೆ ನಿನ್ನಾಕೆಯುಂ ದುಃಖಿ!"
ಸುಯ್ದು ಕೇಳ್ದನ್, "ನನ್ನ ಕತದಿಂದಾದುದಲ್ತೆ
ನಿಮಗೆ ಬನ್ನಮ್, ವಹ್ನಿ?"
                                        ತತ್ತರಿಸಿದನು ವಹ್ನಿ
ಸುಯ್ಲುರಿಗೆ ಸಿಲ್ಕಿ. ಕೈಮುಗಿದು, ಮೊಣಕಾಲೂರಿ,
ಬೇಡಿದನ್: "ದೇವ, ಮನ್ನಿಸು ನನ್ನ ಬಿನದಮಂ.
ತಪ್ಪಿತರ್ಥವ್ಯಾಪ್ತಿ!"
                                "ಏಳೇಳ್, ಭಟವರೇಣ್ಯ;
ಮಕ್ಕಳಿಹರೇ ನಿನಗೆ?" ರಘುಜನೆಂದನು, ದನಿಯೆ
ನೇಹವ ಸೂಸುವಂತೆ.
                                "ಇರ್ವರ್ನೊರ್ವನ್, ದೇವ."
"ಚಿಕ್ಕವನೆ?" "ಅಲ್ಲದಿರೆ ನನ್ನ ಪಕ್ಕದೊಳಿರನೆ
ನಿನ್ನ ಸೇವೆಯ ದೇವ ಕಾರ್ಯಕ್ಕೆ?" "ಅವರ್ಗಾರ್
ರಕ್ಷಕರ್?" "ನಾನೆ!" ಸುಯ್ಯುತೆ ದಶರಥಾತ್ಮಜಂ
ವೀರ ವಹ್ನಿಯ ಕಣ್ಗಳಂ ಕರುಣೆಯಿಂ ನೋಡಿ
"ನೀನೆ?" ಎಂದಿನಿತು ಜಾನಿಸಿ ಮತ್ತೆ, "ಮರಣದೊಳ್
ರಣಮಿಹುದು, ವಹ್ನಿ; ಹಣೆಬರೆಹಮೊರೆಯುವುದಿರ್ಕೆ,
ಸಾರುತಿದೆ ಕೈಬರೆಹಮುಂ!" ಧ್ವನಿಯರಿತು ನಕ್ಕನಾ
ರಾಮ ನೀಲರ ಕೂಡೆ ಭಟವರಿಷ್ಠಂ ವಹ್ನಿ; ಮೇಣ್
ತನ್ನ ಧೈರ್ಯಕೆ ನೀಡಿದನು ನಾಲಗೆಯನಿಂತು:
"ಆವ ಧರ್ಮಕೆ ಸಾವನಪ್ಪುವೆವೊ ಪೊರೆವುದಾ
ಧರ್ಮಮೀ ಲೋಕಮಂ. ನನ್ನ ಸತಿಸುತರೊಂದು
ಹೊರತೆ? ಕೇಳ್, ರಾಜೇಂದ್ರ, ಸರ್ವಸೇನಾಧಿಪತಿ
ಈ ನೀಲದೇವನೆಮ್ಮಂ ನಡಸೆ, ಬಾಳ್ವೆರಸಿ
ಕಾಣ್ಬೆವೆಲ್ಲರ್ ಮನೆಯ ಮಂಗಳವ. ಅಲ್ಲದಿರೆ,
ಬಿದಿ ಬಗೆಯಲನ್ಯಮಂ, ಬಿದಿ ಬಗೆಯಲನ್ಯಮಂ,
(ಬಿದಿಗಿಲ್ಲಮೆರ್ದೆ ಬಲ್ಲೆ!) ಸಾವೆ ಮೇಲ್ ಬರ್ದುಕಿಗಿಂ!
ದಶಶಿರಂ ಪೊತ್ತುಯ್ದುದೊರ್ಬ್ಬನ ಸತಿಯನಲ್ತು;

ಸತಿತನವನುಯ್ದಿಹನ್! ಪುರುಷನಿರಲಾಗದೀ
ಧರೆಯ ಮೇಲೊರ್ವನುಂ ಪೊರೆಯದನ್ನೆಗಮಾ
ಸತೀತ್ವಮಂ! ರಘುವರ, ಸುರಕ್ಷಿತರ್ ನನ್ನವರ್
ನಿನ್ನ ಈ ಕೇಳ್ದ ಕುಶಲಪ್ರಶ್ನ ಕೃಪೆಯಿಂದಮುಂ!''
ಸೇನಾಪತಿಯ ಸನ್ನೆಯನ್ನರಿತು, ಕೈಮುಗಿದು
ಬೀಳ್ಕೊಂಡರಾ ಸೈನಿಕಸ್ನೇಹಿತರ್. ಜೊನ್ನಿರುಳ್
ಭೂವ್ಯೋಮ ಸಾಗರಂಗಳನೊಂದುಮಾಳ್ಪಂತೆ
ಬೆಸೆದಪ್ಪಿದುದು, ಮುಡಿದ ಬಿಲ್ದಿಂಗಳಿಂದೊಪ್ಪಿ.
''ನಿಮ್ಮ ಸಂಸ್ಕೃತಿ ಮಿಗಿಲ್ ನಿಮ್ಮ ನಾಗರಿಕತೆಗೆ
ಪಿರಿದು, ಸೇನಾನಿ!'' ವಹ್ನಿಯ ವಚನ ವೈಖರಿಯ
ವಿನಯದ ವಸಂತತೆಯ ಸವಿಯ ರೋಮಂಥಿಸುತ
ನುಡಿದನಾ ಔತ್ತರೇಯೋತ್ತಮಂ, ರವಿಕುಲದ
ರಾಘವಂ, ಕಪಿಕುಲದ ಕಿಷ್ಕಿಂಧೆಯಾತಂಗೆ, ಕೇಳ್,
ಆ ವಾನರ ಕ್ಷಾತ್ರತೇಜೋ ಹಿರಣ್ಯರೇತಜಗೆ.

## ಸಂಚಿಕೆ ೭

# ಅತ್ತಲಾ ದೈತ್ಯ ಸಭೆಯೊಳ್

ಶಿಲೆಯ ಸೃಷ್ಟಿಸಿದವನೆ ಶಿಲ್ಪಿಗಾವೇಶಮಂ
ಕೊಡುವಂತೆ, ರಾಮಕಥೆಯಂ ಕಲ್ಪಿಸಿದ ನೀನೆ
ಕೃಪೆಗೆಯ್ಯುವೇಳ್ಕುಂ ನನಗೆ ಮಹತ್ ಪ್ರತಿಭೆಯಂ,
ಜಗದ್ಭವ್ಯ ದೈತ್ಯ ಕಾವ್ಯವನಿದಂ ದಿವ್ಯಮೆನೆ
ಮುಂದೆ ನಡಸಲ್ಕೆ. ಹೇ ದೇವಕವಿ ವಾಲ್ಮೀಕಿ,
ಮಹಿಮೆ ಶಿಲ್ಪಿಗೆ ಕಲೆಯದಲ್ಲದೆಯೆ ಶಿಲೆಯನೇಂ
ನಿರ್ಮಿಸಿದ ಪೆರ್ಮೆ ಸಲ್ವುದೆ? ನಿನ್ನ ಸೃಷ್ಟಿಯಾ
ವ್ಯೋಮ ಚುಂಬಿತ ಭೂಮ ವೈಭವದ ಶಾಶ್ವತಂ
ಶ್ರವಣಶೈಲದ ಶಿಲಾಜೂಟದಿಂ, ಕಾಣ್ಕೆಯಂ
ಕಂಡವೊಲೆ, ಕಂಡರಿಪೆನೀ ಕಾವ್ಯಗೋಮಟನ!
ಕೈಮುಗಿದೆರಗಿ ಬೇಡುವೆನು; ಹರಸಿ ಕೊಡು, ತಂದೆ,
ವರವಲ್ಲದೆಯೆ ಬರಲೊಲ್ಲದಾ ಚಿರಂತನಂ
ಶ್ರೀ ಸ್ಫೂರ್ತಿಯಂ.
ಭರ್ಮದೀಪ್ಯ ಹರ್ಮ್ಯಾಂತರದಿ
ರತ್ನ ನಾನಾ ರಮ್ಯ ಕರ್ಬೂರಿತಾಸನದಿ
ಬರ್ಬರಶ್ರೀಯುತಂ ಕಲಿ ಕರ್ಬುರೇಶ್ವರಂ
ಶೋಭಿಸಿದನುನ್ನತ ದಶ ಕಿರೀಟಿ, ತ್ರೈಲೋಕ್ಯ
ಬೀಭತ್ಸು, ಬಲಿ ರಾವಣಂ. ರೋಷಭೀಷಣಂ,
ಬಹುಶ ಭಗ್ನಾಶೆಯಿಂ ಕರ್ಕಶದಶಾನನಂ,
ಪೆಣ್ಣೊರ್ವಳವಹೇಳನದಿ ಗಂಡುಗೆಟ್ಟೆರ್ದೆಯ
ನಾಣ್ ಮುಳಿಸನನ್ಯರ್ಗೆ ತೋರಗೊಡದಿರ್ದೊಡಂ
ಹೋರಾಡುತೊಳಸೋರ್ದವಂ, ತನಗೆ ತಾನಳುಕಿದಾ

ತನ್ನಂತರಾತ್ಮನ ಭಯದಿನಪ್ರಸನ್ನಂ, ನೆರೆದ
ದೈತ್ಯ ಪ್ರಮುಖ ಸಮ್ಮುಖದೊಳಿಂತು, ಕೆಮ್ಮೀಸೆ
ಕಿಡಿಯುಗುಳೆ, ಕೊಡಹಿದನು ಸರ್ಪರೋಮದ ತನ್ನ
ದರ್ಪ ಕೇಸರವ:
                    "ಲಂಕಾ ಮಹೋದಯರಿರ,
ಸಚೀಶರಿರ, ಪಡೆವಳರ್ಗಳಿರ, ಸತ್‌ಪ್ರಜೆಗಳಿರ,
ರಾಕ್ಷಸ ಕುಲಾಕಳಂಕ ಶಶಾಂಕರಿರ, ನಮ್ಮ
ಜನನಿಗೆ ಮಿಗಿಲ್ ಜನ್ಮಭೂಮಿಗೆ ಕುಲೋನ್ನತಿಗೆ
ಜಾತಿ ಗೌರವಕಿಂದು ಬಂದಿದೆ ಮಹಾತಂಕ
ಶಂಕೆ. ದೈತ್ಯ ನಾಗರಿಕತೆಯ ತಾಯಿಬೇರಂ
ನೆಕ್ಕತೊಡಗಿದೆ ದಸ್ಯುದೌಷ್ಟ್ಯದ ದಂದಶೂಕೋಗ್ರ
ಜಿಹ್ವಾಗ್ರದಗ್ನಿ. ಪೂರ್ವಿಕರೆಮ್ಮ ಮುಡಿಗಿಟ್ಟ
ಸಂಸ್ಕೃತಿ ಕಿರೀಟಕೊದಗಿದೆ ಮಹಾ ವಿಲಯದ
ವಿಪತ್‌ಸಮಯ. ನಮ್ಮ ಮಕ್ಕಳ್ ತಾಯಿ ತಂಗೆಯರ
ನೆಮ್ಮದಿಗೆ ಕರುಬಿ ಹೊಂಚುತಿದೆ ಬಡಗ ದಿಕ್ಕಿನ
ಪಲ್ಲುಗುರ್ ಪುಲಿಯ ಕಣ್. ಲಂಕಾ ಲತಾಂಗಿಯರ,
ದೈತ್ಯ ವೀರರನೊಲಿದ ನಲ್ಲೆಯರ, ಪಾಲೆದೆಯ
ಧವಳಿಮಕ್ಕೆಳಸಿ ಶರಧಿಯ ವಾಮವೇಲೆಯಲಿ
ಬೀಡುಬಿಟ್ಟಿದೆ ಭೀಮ ಕಪಿಕೇತು ಸಂಕೇತ
ರಾಮಸೇನಾ ರುಷಿತ ರಾಹು. . . ಬಂದಿಹುದೆಮಗೆ
ಬೇಹು. ಬಹು ದಿನಗಳಿಂದಟ್ಟುತಿಹುದದು ನಮ್ಮ
ಶಾಂತಿ ಶಶಿಯಂ. ನಿನ್ನೆ ಮೊನ್ನೆಯ ವೈರಮಲ್ತು.
ತಾಟಕಾ ದೇವಿಯಂ ಕೊಂದುದೆ ಮೊದಲ್. ನೆವಂ
ಋಷಿ ರಕ್ಷಣಂ. ಗುರಿಯೊ? ನಮ್ಮ ಕುಲನಾಶನಂ!
ನಮ್ಮಾಳ್ವಿಕೆಯ ನೆಲದ ನೇಮಿಯನತಿಕ್ರಮಿಸಿ,
ತಡೆದರೆಮ್ಮನೆ ಆಕ್ರಮಣಕಾರರೆಂದಿರದೆ
ನಿಂದಿಸಿ, ಕುಲಾಂಕಿತವನನ್ವರ್ಥವೆಂದಾಡಿ
ನಮಗೆ ರಕ್ಕಸತನದ ಬಿರುದಿಕ್ಕಿ, ನಮ್ಮ ಕೊಲೆ
ತಮಗೆ ಸಗ್ಗದ ಬಟ್ಟೆಯೆಂಬ ಧರ್ಮವನೊರೆದು,
ಕೊಲೆಗಾರರಿಗೆ ವೀರಪಟ್ಟಮಂ ಕಟ್ಟುವಾ
ಅನ್ಯಾಯ ಶೀಲರಾರ್ಯರ್ಗೆ ರಾಮನೆಂಬೊನ್

ಅವರ ದೇವರ ಅವತರಣವಂತೆ. . . ಕೊಂದನು
ಸುಬಾಹುವಂ. ಸಾಲದೆಯೆ, ಮುಂದು ಮುಂದಕೆ ನುಗ್ಗಿ
ಕಾಮರೂಪಿಗಳೆಮ್ಮ ಕುಲಕೆ ಭೂಷಣರೆನಿಸಿ
ದೈತ್ಯ ಗೌರವ ಪಾತ್ರರಾಗಿರ್ದ ವಾತಾಪಿ
ಇಲ್ವಲರನಳಿಪಿದ ಅಗಸ್ತ್ಯನೆಂಬನ ಮತಂ
ಮರುಳ್ವಿಡಿಯೆ, ಪಂಚವಟಿಗೈತಂದು, ನಿರ್ನೆರಂ,
ಕಾಲ್ ಮೆಟ್ಟಿ ಕದನಮಂ ಕೆದಕಿ, ಖರದೂಷಣರ್
ಮೊದಲಾಗೆ ಕೊಲೆದನ್ ಚತುರ್ದಶ ಸಹಸ್ರರಂ,
ಲಂಕಾಧಿಪನ ಬಂಧುಮಿತ್ರರಂ, ಲಂಕಾ
ಪ್ರಕೃತಿ ರತ್ನರಂ. ಮತ್ತೆ, . . . ಹತನಾದನಾ ತಪಸ್ವಿ
ಮಾರೀಚನತ್ಯಂತ ಸಾತ್ವಿಕಂ.''
ನಡು ನಡುವೆ
ಭಾವದಾವೇಗದಿಂದೆಂಬವೊಲ್ ಕೆಲವೊಳ್ತು
ಕೆಮ್ಮನಿರುತಿರ್ದವಂ ಮಾರೀಚ ನಾಮಮಂ
ಪೇಳ್ದುದೆ ತಡಂ, ಬಾಷ್ಪಮಂ ಸ್ರವಿಸಿ, ಕಣ್‌ಮುಚ್ಚಿ,
ಸಲಿಸಿದನು ಗೌರವದ ನೈವೇದ್ಯಮಂ. ನೃಪಂ
ಕಣ್ಣೀರಿಡಲ್ ತಣ್ಣಗಿರಲಹುದೆ ನೃಪನ ಸಭೆ?
ಅಳ್ತರ್ ದಿಟಂ ಕೆಲರ್. ಕಣ್ಣೊರಸಿಕೊಂಡರ್
ಪಲರ್. ರಾಕ್ಷಸೇಶ್ವರಂ ಹೊದೆದ ಹೊಂಬಟ್ಟೆಯಿಂ
ಮೆಲ್ಲನೊತ್ತಿದನಶ್ರು ತರ್ಪಣವಃ ಅನ್ಯರಿಗೆ
ವೇದ್ಯಮೆಂತಾ ಅಕ್ಷಿವಾರಿಯುಷ್ಣಂ?
''ಇರ್ಕೆ.
ಪಳೆಯಳಲ ನೆನೆಹುನೀರಿಂದೇಕೆ ಚಿಗುರಿಪುದು
ಪೊಸತಳಲ?'' ಮತ್ತೆ ಸುಯ್ದನು ದಿಟ್ಟದನಿಯಿಂ
ದಶಗ್ರೀವಃ ''ನಮ್ಮ ಮುಂದಿದೆ ನಮಗೆ ಬೇಳ್ಪನಿತು
ಬರ್ಪ ನಿಜಸಂಕಟಂ. ನೀಮನಿಬರರಿತಿಹಿರಿ.
ಕೆಲದಿನಗಳಾಚೆ ಪೊಕ್ಕುದು ನಮ್ಮ ಪೊಳಲಿಂಗೆ,
ಬಾಗಿಲೊಳ್ ಭಂಗಿಸಿ ನಗರ ಲಕ್ಷ್ಮಿಯನ್, ತಾನೊಂದು
ಭೀತಿಭೂತಂ. ಪ್ರಹಸ್ತಾತ್ಮಜಂ, ಜಂಝೆಯೊಲ್
ಸಮರೂಪಿಯಾಗಿ ತಾಗುತ್ತದಂ, ವೀರನಾಕ
ನಿವಾಸಿಯಾದನು ಜಂಬುಮಾಲಿ. ಮತ್ತಮಂತೆಯೆ

ದುರ್ಧರಾಧಿಗಳೈವರೆಮ್ಮ ಸೇನಾನಿಗಳ್
ಕೂಟ ರಣದೊಳ್ ತೆತ್ತರಸುವನಾ ಭೂತಕ್ಕೆ;
ಪೊರೆದರ್ ತ್ರಿಕೂಟಮಂ. ತಿಳಿಯದದ್ಭುತಕಂದು
ಲಂಕಾ ನಿವಾಸಿಗಳ್ ಭ್ರಾಂತರಾದರ್. ತಿಳಿದು
ಶಾಂತರಾಗಲಿ ಸಕಲರಿಂದು. . . ಪೆರತಾರುಮಲ್ತು.
ಬೇಹಿನವರರಿತೊರೆದುದಂ ಪೇಳ್ವೆನಾಲಿಸಿಂ.
ಹೇಡಿ ರಾಮನ ಕೈಯೊಳೆಮ್ಮ ಕೆಳೆ ವಾಲಿಯಂ
ಬೆನ್ನಟ್ಟು, ಮರೆಯಿಂ ಕೊಲಿಸಿ, ಗದ್ದುಗೆಗೇರ್ದ
ವಾನರ ಕುಲಕಳಂಕ ಸುಗ್ರೀವನನುಚರನ್
ಆಂಜನೇಯನೆಯೆ ಆ ಬಂದವಂ. ಇಂದ್ರಜನ
ಸನ್ಮಿತ್ರರಿರ್ಪರಾದೊಡಮಿಲ್ಲಿ, ಮುಯ್ಗೆ ಮುಯ್
ತೀರ್ಚದೇಂ ಬಿಟ್ಟಪರೆ? ಅಂತಪ್ಪ ಕೆಳೆಯರೊಳ್
ಒರ್ವನೆನ್. . . ಅಂತುಮಾ ನೀಚಪಂಥಿಗಳೆಲ್ಲರ್
ಒರ್ವರೊರ್ವರ ನೆರಂ ಬಡೆದು, ಪೆರ್ ಪಡೆಗಟ್ಟಿ,
ಕಡಲನುತ್ತರಿಸಿ ಲಂಕೆಗೆ ಲಗ್ಗೆ ನುಗ್ಗಲ್,
ಸ್ವತಂತ್ರರೆಮ್ಮಂ ಗೆಲ್ದು ದಾಸ್ಯದೀಕ್ಷೆಯನೀಯೆ
ಪೂಣ್ದು ತರಿಸಂದು ಬೀಡು ಬಿಟ್ಟಿಹರಲ್ಲಿ, ಆ
ದೂರಪಾರದಪಾರತೆಯುಮೆಡೆಸೋಲುವೋಲ್.
ನಮ್ಮ ಸೈನಿಕ ಶಕ್ತಿಗಿದಿರಿಲ್ಲಮೆಂಬುದಂ
ನಾನ್ ಬಲ್ಲೆನಾದೊಡಂ, ಪಗೆಯುಂ ಸಮರ್ಥನೆ
ವಲಂ. ದೇಶಭಕ್ತರಿರ, ಸಮರ ಸರ್ವಜ್ಞರಿರ,
ನೃಪನೀತಿ ಕುಶಲರಿರ, ಮಾಯಾ ಸಮರ್ಥರಿರ,
ತಿಳಿಯಲಾಟಿಪೆನಿಲ್ಲಿಗೇಂ ಮುಂದೆ ಪದನೆಂಬ
ನಿಮ್ಮ ಮಂತಣವಟ್ಟೆಯಂ.''
ಅದ್ದವೋಲಂತೆ
ಮೋನಮಿರ್ದತ್ತೋಲಗಂ. ದೈತ್ಯೇಂದ್ರ ವಾಗ್‌ಝರಿಯ
ಘೋಷಮಿನ್ನುಂ ಪ್ರತಿಧ್ವನಿಸಿತೆನೆ ಮೊಳಗಿತಾ
ಸಭೆ, ಹರಾದ್ರಿಗುಹೆ ಝರಸಿಂಹಗರ್ಜನೆಗೆಂತೊ
ಅಂತೆ. ಅವ್ಯಕ್ತ ಮರ್ಮರ ಸ್ವರಗಳೊಯ್ಯನೆಯೆ
ಅಲ್ಲಲ್ಲಿ ಮೂಡಿದುವು ವಿವಿಧ ವ್ಯಕ್ತಿಧ್ವನಿಯ
ಬುದ್ಬುದಂಗಳ್. ನೋಡೆ ನೋಡೆ, ಚಲಿಸಲ್ ಸಭೆಯ

ಪೆರ್ಮ್ಮಡು, ವನೇಭಮಂ ಪಿಡಿಯಲೆಳಸುತ್ತೇಳ್ವ
ಪೆರ್ಬಂಡೆಮೆಯ್ಯ ಕರ್ಮೊಸಳೆವೋಲೆದ್ದನ್
ಪ್ರಹಸ್ತಂ, ಪೃಥುಲ ಗಾತ್ರಂ, ಪ್ರಥಮ ಸೇನಾನಿ.
ಇಲ್ಲ ಲಂಕೆಯೊಳವಂಗಿಂ ಮಿಗಿಲ್ ಭೀಕರರ್,
ಪಶುಸಹಜ ಸುಖ ಸೂಕರರ್. ಸುಖದೊಳೆಂತಂತೆ
ಶಕ್ತಿಯೊಳುಮಂಗಜವನಲ್ಲದಾತ್ಮಜವನ್
ತಿರಸ್ಕರಿಸಿದಾತನ್ ಪುಲಸ್ತ್ಯಜಾತಂಗಿಂತು
ಕೆಯ್ಮುಗಿದು ಬಿನ್ನೈಸಿದನು ತನ್ನ ಕುಮತಿಯಂ:
“ಅಚ್ಚರಿಯೊ? ಬಿನದವೋ? ನಾನರಿಯೆನೀ ಕೇಳ್ದ
ದಾನವೇಂದ್ರನ ಜಿಹ್ವೆಯಿಂಗಿತವ! ಬಿನದಮೆ
ವಲಂ: ನುಸಿಯ ಮಂದೆಯ ಬಾಧೆಯಂ ನಿವಾರಿಸಲ್
ನೆರೆದೀ ಮದದ್ವಿರದ ಸಭೆಯೊಳೆಯೆ, ಸಲಗಗೆ ಶಂಕೆ,
ಘನ ಘಟೆಗಳಜಿನ ರಕ್ಷೆಯ ಮಹದ್ ವಿಷಯದೊಳ್!
ಶೂಲ ಪಟ್ಟಸ ಪರಿಘ ಶಕ್ತಿ ಸಂಕುಲ ಬಲದ
ತನ್ನ ರಾಕ್ಷಸ ಸೇನೆಯಿರ್ಕೆ. ತಾನೊರ್ವನೆಯೆ
ಸಾಲ್ವನಸುಹೃದ್ದಳವನುರುಹಲ್ಕೆ. ಭೋಗವತಿಯಂ
ಪೊಕ್ಕು ಪನ್ನಗರಂ ಪಡಲ್ವಡಿಸಿದಾತಂಗೆ,
ಕೈಲಾಸವಾಸಿಯಾ ಫಾಲಾಕ್ಷ ಸಖನಮ್
ಕುಬೇರನಂ ಯಕ್ಷಬಲವೆರಸಿ ಗೆಲ್ದಾತಂಗೆ,
ಮಯನಂ ಭಯಂಗೊಳಿಸಿ ಅವನ ಮಗಳಂ ಪಡೆದು
ಮದುವೆನಿಂದವಗೆ, ವಾಸುಕಿ ಶಂಖ ತಕ್ಷಕರ್
ಬಾಯ್ಬಿಡೆ ರಸಾತಳವನಳ್ಕಾಡಿದಾತಂಗೆ,
ನಾಶರಹಿತರ್ ಕಾಲಕೇಯರ್ಗೆ ಬರಿಸಂ ಮಿಗಲ್
ಕಾಳೆಗಂಗೊಟ್ಟು ಸೋಲಿಸಿದಾತನೀತಂಗೆ,
ಕಡಲವೋಲೆದ್ದು ಮೇಲ್ವಾಯ್ದ ಯಮಸೇನೆಯನೆ
ತರುಬುತೆಳ್ಬಟ್ಟಿದೀತಂಗೆ, ದೇವೇಂದ್ರಾದಿ
ದಿಕ್ಪಾಲರಂ ಬಡಿದು ಬಾಯ್ಕೇಳಿಸಿರ್ಪನಂ
ಕಂದನೆಂಬೀತಂಗೆ?—ಕಪಿಸೇನೆ ಭೀತಿಯೆನೆ,
ಅಚ್ಚರಿಯೆ? ಬಿನದಮೆ ದಿಟಂ! ಕಿತವ ವಾನರಂ
ಕುಟಿಲ ವಿದ್ಯೆಯೊಳೆಳ್ಚರಿಕೆ ವಿಹರಿಸಿರ್ದೆಮ್ಮ
ಪೊಳಲನಿರುಳಿನಲಿ ಕಳ್ದೊಳಪೊಕ್ಕ ಮಾತ್ರದಿಂ

ಕಪಿಸೈನ್ಯ ಶಕ್ತಿಸ್ತುತಿಯದತ್ಯುತ್‌ಪ್ರೇಕ್ಷೆ. ನೀಂ
ಧೀರೋದಾರ ವೀರನದರಿಂ ವೈರಿವೀರ್ಯಮಂ
ನಿರ್ಮತ್ಸರಂ ಶ್ಲಾಘಿಸಿರ್ಪೆಯದು ನಿನ್ನವೋಲ್
ದೊರೆಗೆ ದೊರೆ; ಪಿರಿಯರ್ಗೆ ತಗುವ ನಡೆ, ದೈತ್ಯೇಂದ್ರ.
ಕೇಳ್, ಆದೊಡಂ, ನೆರವಿ ನನ್ನಿಯನರಿಯಲೆಂದಾಂ
ಪೇಳ್ವೆನೆಮ್ಮ ಪಡೆಯಗ್ಗಳಿಕೆಯಂ:—ಸಂಖ್ಯೆಯಂ
ಪರಿಗಣಿಸೆ, ಅಕ್ಷೌಹಿಣಿಗಳಿದಿರ್ ಸೋಲ್ವುವಯ್
ನಕ್ಷತ್ರಗಳ್. ಗಣಾಗಣದೊಳಿರ್ಪ ದಳದಳಗಣನೆ?
ಸುಲಭಮೆಣಿಕೆಗೆ ಮಳಲ ಕಣಗಳ್, ಕಡಲ್ ಸುತ್ತಿ
ಬಳಸಿದೀ ದ್ವೀಪ ವಿಸ್ತೃತ ವೇಲೆಯೊಳ್! ನೆಲದ ಪಡೆ,
ನೀರಪಡೆ, ಗಾಳಿಪಡೆಗಳ್—ಕೋಟಿ ಕೋಟಿಗಳ್—
ಸಿದ್ಧವಾಗಿಹವಿಂದು ಯುದ್ಧ ಲೀಲಾ ವಿಲಯ
ಕಲೆಗೆ. ಬಾನಲೆಯುವರ್; ನೀರ್ ಮುಳುಗುವರ್; ಮನುಜ
ಪರಿಜಂ ಬಿಸುಟ್ಟು, ಪೆರ್ಬಂಡೆಗಳವೋಲುರುಳಿ,
ಪಗೆಯಾಳ್ಗಳಂ ಪುಡಿಯರೆದು, ಮಾಂಸಲೇಹ್ಯಮಂ
ನೆಗಳುವರ್; ಕಿಡಿ ತಗುಳೆ, ಬೆಟ್ಟಗಳೆ ಪುಡಿವೋಗಿ
ಸಮದೇಶಮಪ್ಪವೋಲ್ ಸಿಡಿವ ಸಿಡಿಲಿನ ಫಣೆಯ
ಪೊಟ್ಟಣಂಗಳ ಮಹಾ ಹೇಳಿಗೆಗಳಾಗುವರ್;
ಬೀಸುವರ್ ವಿಷಗಾಳಿಯಾಗಿ; ಬೀಳ್ವರ್ ಬೆಂಕಿ
ಮಳೆಯಾಗಿ. . . ಬರ್ಕೆ ಕಪಿದಳಮಿಲ್ಲಿ; ಕಾಣದಯ್
ಲಂಕೆಯಂ: ನರಕಮೇಳುಂ ಕೋಟಿ ಬಾಯ್ಗಳಂ
ತೆರೆದುದಂ ಕಾಣ್ಬುದಲ್ಲದೆ ಕಾಣದೀ ನಮ್ಮ
ಸೊಬಗುವೊಳಲಂ!''
ಸುಮಾಲಿಯ ಸುತಂ ಕುಳಿತೊಡನೆ
ಎದ್ದುದು ಸಭಾಟ್ಟಹಾಸಂ. ನಗೆ ಮುಗುಳ್ ಮಾಲೆ,
ಸಂತೃಪ್ತಿಸೂಚಕಂ, ಸುಳಿದುದು ಮುಖದ ಮೇಲೆ
ದಾನವೇಂದ್ರಂಗೆ. ಪೆರ್ಮೆಗೆ, ನೆರೆದ ನೆರವಿಯಂ
ಬಳಸಿ ಕುಣಿದತ್ತವನ ನೋಟದ ನವಿಲ್, ಕೆದರಿ
ಕಣ್ಣು ಕಣ್ಣಿನ ಜೈತ್ರಪಿಂಛಮಂ. ಇರಲಿರಲ್,
ಇದ್ದಿದ್ದವೊಲ್, ಸದ್ದು ಹೊಳವಾಯ್ತು. ನೋಡುತಿರೆ
ಮತ್ತೊರ್ವನೆದ್ದನು, ಮಹತ್ ಶಿಖರ ಭವ್ಯಗಿರಿ

ಸಮುದ್ರದಿಂದೇಳ್ವವೋಲ್. ಭೂಕ್ಷೇಮ ಭಾರಮಂ
ಭರಿಸೆ ಸಂಭವಿಸಿರ್ಪ ಭೂಧರಂಗಳ ತೆರದಿ
ಭುಜಂಗಳಾತಂಗೆ. ಭೀತಿಯರಿಯದ ಭರವಸಂ
ಓಲಗಂಗೊಟ್ಟುದಾತನ ಸಿಂಹ ಸಮನಹ
ವಿಶಾಲ ಧೈರ್ಯದ ವಕ್ಷವೇದಿಯಲಿ. ಮೂರನೆಯ
ಕಣ್ಣೆನಲ್ ಪಣೆಯೊಳೆಸೆದುದು ಶಕ್ತಿಪೂಜಾ
ತ್ರಿಶೂಲಾಭೀಳಚಿಹ್ನೆ. ಬೆಳಗುತಿರೆ ಕಣ್ಮೊಗದಿ
ಸಾಧನೆ ವಿನಾ ಲಭಿಸದೊಂದು ತೇಜಂ, ಮಹಾ
ಸಮಿತಿ, ದಶಗ್ರೀವನುಂ ಬೆರಸಿ, ಗೌರವದಿಂದೆ
ಸೊಲ್ಲುಳಿದು ಕಣ್ಬೆಸೆದು ಕಿವಿಗೊಡಲ್, ನುಡಿದನು
ನಿಧಾನದಿಂ, ವಿರಳಾಕ್ಷರ ವಚೋವಿಧನಾದಿಂ,
ಮಂತ್ರ ಸಂಗ್ರಾಮ ವಿದ್ಯೆಯ ಪರಮಗುರು, ದೈತ್ಯ
ದಳಪತಿ ಮಹಾಪಾರ್ಶ್ವಂ:
''ಪೊಸತನೇನುಮನಿಲ್ಲಿ
ಪೇಳಲೆಂದೆಳ್ದೆನಿಲ್ಲಾಂ. ಪ್ರಹಸ್ತೇಂದ್ರನಿಂ
ನೀಂ ಕೇಳ್ದಿರೆಮ್ಮತುಲ ಸೈನ್ಯಪ್ರಶಂಸೆಯಂ.
ಆ ಪೊಗಳ್ಕೆಗೆ ನಿವೇದಿಪೆನೆನ್ನ ಗೌರವದ
ಕಾಣ್ಕೆಯಂ.'' ವ್ಯಕ್ತಿಯಿಂ ವ್ಯಕ್ತಿಗೆನೆ ದಿಟ್ಟಿಯಂ
ಪಸರಿಸಿ ಸಭಾವಲಯ ವಿಸ್ತಾರಮಂ ನೋಡಿ,
ಮುನ್ನೊರೆದನಭಿಮಾನದಿಂ: ''ಇನ್ನನ್ನರಿರ್ಪ
ಈ ಸಭೆಯೊಳನ್ಯಕ್ಕೆ ಭಿನ್ನಕ್ಕೆ ಭಾವಕ್ಕೆ
ಎಡೆಯಿಹುದೆ? ನೆರೆದೀ ಕಲಿಗಳಿದಿರ್ ನಾಣ್ಚದೆ
ನಿರಾಶೆ? ತಲೆಯಿಣುಕಲಣ್ಮುದೆ ಭಯಂ? ಶಂಕೆ
ಬಾಲವ ಮುದುರಿ, ಕಾಲಡಿಗಿಕ್ಕಿ, ನಾಯೋಡದೇಂ
ನಿಲಲಹುದೆ? ಪೆಸರ ಪಟ್ಟಿಕೆಯೆ ಸಾಲ್ಗುಂ: ಹಗೆಗೆ
ಹೊಳ್ಳುಗಳೆವುದು ಹೃದಯಮಂ! ದಿಗಿಭಕರ್ಣಗಳ್
ನಾಮಶ್ರವಣ ಮಾತ್ರದಿಂ ನಡುಗವೇನುಡುಗಿ
ಯುವರಾಜಗಿಂದ್ರಜಿತುಗೀ ಮೇಘನಾದಂಗೆ?
ಆ ಒರ್ವನಿಲ್ಲಿಲ್ಲ ಅಖರ್ವ ಗರ್ವಂ, ಮಹಾ
ಕುಂಭಕರ್ಣಂ! ಮುಖಸ್ತುತಿಯಾಗದೆನ್ನಿಂ
ಪೊಗಳ್ದೊಡಾನಾತನೊಂದಳವಂ. ಪುಲಸ್ತ್ಯಜನ್,

ವಿಶ್ರವಸ ಕೈಕಸಿಯರೆರಡನೆಯ ಮಗನವನ್;
ಜನ್ಮಮಾತ್ರದಿನೆರಡನೆಯ ಮಗನ್. ಸಹಜದಿಂ
ಪರ್ವತಾದ್ಭುತನವನ್; ವಿಕ್ರಿಯಾಬಲದಿಂ
ವಿಗುರ್ಬ್ಬಿಸಿ ವಿಜೃಂಭಿಸಿದನೆನೆ, ಹಿಮಾಚಲಮೊಂದು
ಕಡೆ, ವಿಂಧ್ಯಮೊಂದು ಕಡೆ, ತೂಗಿ ತೊನೆಯುವುವವನ
ನಡೆಗೆ! ಗದೆಗೊಂಡು ಮಲೆತನೆನೆ ಏದುವುದುಸಿರ್
ಯಮನಳ್ಳೆಯೊಳ್! ವಜ್ರದಿಂದಿಕ್ಕಿದಿಂದ್ರನಂ
ಸಹಿಸಿ, ಐರಾವತದ ದಂತವೊಂದಂ ತಿರಿಪಿ
ಕಿತ್ತು, ಗದೆಗೈದದನೆ, ಬಡಿದಟ್ಟಿದಾತಂಗೆ
ಬ್ರಹ್ಮನಿಂದಾಯ್ತು ನಿದ್ರಾಶಾಪಮಲ್ಲದಿರೆ,
ಸಭೆಗಳೇತಕೆ? ಸೇನೆಯೇತಕೆ? ನಮ್ಮ ರಾಷ್ಟ್ರ
ರಕ್ಷಣೆಗೆ! ಆದೊಡೇನಾತನೊರ್ವನ ನಿದ್ರೆ
ಮಿಗಿಲಗುರ್ವೆಮ್ಮನ್ನರನಿಬರೆಳ್ಚರಿಕೆಗಿನ್!
ಮದ್ದಿನ ಮನೆಯ ನಿದ್ದೆಯನ್ ಕೆಡಿಸೆ ಸಾಲದೇನ್
ಒಂದೆ ಕಿಡಿ? ಅಂತಪ್ಪರಿಪ್ಪೀ ನಮ್ಮ ಲಂಕೆ ತಾಂ
ದುಸ್ಸಾಧ್ಯಮಾರ್ಗ್ಗಂ ದಿಟಂ. ಸಾಲದುದಕಿಲ್ಲಿ
ನೆರೆದಿರ್ಪರೋರೊರ್ವರುಂ ಭೀಮ ವಿಕ್ರಮರ್:
ಈ ಸೂರ್ಯಶತ್ರುವೀ ಶೋಣಿತಾಕ್ಷಂ; ಈ
ಅಕಂಪನಂ; ವಜ್ರಹನು, ಮಕರಾಕ್ಷ, ರಾಹುರೋಷರ್;
ಸುಪ್ತಘ್ನ, ರಶ್ಮಿಕೇತು; ಧೂಮ್ರಾಕ್ಷನ್, ಅಗ್ನಿಕೇತು;
ವಿದ್ಯುನ್ಮಾಲಿ, ವಿದ್ಯುಜ್ಜಿಹ್ವ, ದೇವಾಂತಕರ್;
ಆ ದುರ್ಮುಖನ ಮರೆಯೊಳಿರ್ಪುನ್ನತಂ ಮಹಾ
ವಜ್ರದಂಷ್ಟ್ರಂ; ದೂರಮಿರ್ಪೊಡಂ ಬಳಿಯೊಳೆಯೆ
ಬಂದವೋಲಿರ್ಪಾ ಮಹೋದರಂ; ಅತ್ತಲಾ
ಶಾರ್ದೂಲ ಶುಕ ಸಾರಣರ್; ಮತ್ತಮತ್ತಲಾ
ಬ್ರಹ್ಮಾಕ್ಷ ಯಜ್ಞಹರ್; ಮೇಣ್, ಮೇಣ್, . .ಇತ್ತಲೀ
ಎಲ್ಲರ್ಗೆ ಮಿಗಿಲಿರ್ಪನವನ ಪೆಸರಂ ಪೇಳೆ
ಪುಣ್ಯಮಂತೆಯೆ ಕೇಳ್ದೊಡಂ ಪುಣ್ಯಮದರಿಂದೆ
ಪೇಳ್ವೆನಲ್ಲದೆ, ನಿಮಗೆ ತಿಳುಪಲೆಂದೊರೆಯಲಾನ್
ಬೆಳ್ಪಹೆನ್: ಪೌಲಸ್ತ್ಯನಾ ವೈಶ್ರವಣನಾ
ಕೈಕಸಿಯ ಮೂರನೆಯ ಮಗನಾ ವಿಭೀಷಣಂ,

ನಮ್ಮ ಲಂಕೆಗೆ ಧರ್ಮವರ್ಮೋಪಮಂ!'' ಉಘೇ
ಘೇ ಎನ್ನುತಿರೆ ಸಭೆ, ಅದನ್ ಬೆರಳ ಸನ್ನೆಯಿಂ
ಸಂತಯ್ಸಿ, ''ಪೆಸರ ಪಟ್ಟಿಯೆ ಸಾಲದೇನ್ ಅರಿಗೆ
ಪೇಳಿಮೆರ್ದೆಯಂ ಪೊಳ್ಳುಗೈಯಲ್ಕೆ? ಸಾಲ್ಗುಂ
ದಿಟಂ. ಕೇಳಿಮಾದೊಡಂ; ಪೇಳ್ವೆನೊಂದಂ ನಿಮಗೆ
ಬಿಸವಂದಮಂ. ಪ್ರಹಸ್ತನ ಪೇಳ್ದುದಂ ಕೇಳ್ದಿರ್;
ಅಖಿಲ ವಿದಿತವನಾಂ ಮುಹುರ್ ವಚಿಸಲೇವುದೋ?
ಕಿರುಳನಲ್ತೀ ದಾನವಾಧಿಪಂ, ನನಗಿನ್,
ಪ್ರಹಸ್ತಂಗಿನ್, ಇಲ್ಲಿ ರಾಜಿಪ ಶೂರರೆಲ್ಲರಿನ್.
ಅಂತಿರ್ಪೊಡಂ, ಏಕೆ ಈ ವಿಶ್ವವಿಜಿಗೀಷು,
ರಿಪುಶಕ್ತಿಯಂ ಗೌರವಿಸಿ, ವಿನಯವಾಣಿಯಿಂ
ನುಡಿದನು ಸಶಂಕೆಯಿಂ? ತಿಣ್ಣಮಾಲೋಚಿಸಿಮ್.
ಹಡಗಿನ ಕಾಣ್ಬ ಭಾಗಮಂ ಬಣ್ಣಿಸಿದರಾಯ್ತೆ?
ಕಣ್ಗೆ ಕಾಣದೆಯೆ ನೀರಡಿಯಿರ್ಪ ಪಕ್ಕದೊಳ್
ಕಿರಿಯ ಬಿರುಕಿರಲದುವೆ ಸಾಲದೆ ಮುಳುಂಗಿಸೆ
ಬೃಹನ್ನೌಕೆಯಂ? ಕ್ಷೇಮ ಯಾತ್ರೆಯಂ ಕೋರುವರ್
ಮುಚ್ಚಲಾಗದು ಕಣ್ಣನಂತರಂಗದ ರಂಧ್ರ
ದೋಷಕ್ಕೆ. ಕಾಣುತಿಹುದೆಮ್ಮ ದೊರೆಯೊಳಗಣ್ಗೆ
ಕುಹರಮಾ ಸರ್ವನೈನಾಶಿಕಂ. ಬರಿಯದಟು
ಸಲ್ಲದಿಲ್ಲಿಗೆ. ಧರ್ಮದೇವತಾ ಕೋಪಮಂ
ಪ್ರತಿಭಟಿಸಿ ಗೆಲ್ಲರಾರುಂ! ಸಾಕ್ಷಿ ಬೇಳ್ಪೊಡೆ,
ಮಹಾದ್ವಾರದೊಳ್ ಮೊಗಂದಿರುಹಿ ನಿಂದಿಹ ನಮ್ಮ
ನಗರ ಲಕ್ಷ್ಮಿಯ ಕಯ್ಯ ಕೊಂಕಿಹ ತ್ರಿಶೂಲಮಂ
ನಡೆದು ನೋಡಿಂ!''
ತನ್ನ ಹೆಗ್ಗಣ್ಗಳಂ ಹಿರಿದು
ತೆರೆದು, ಇಂಗಿತವರಿತು ನಿಸ್ತಬ್ಧಮಾಗಿರ್ದ
ರಾವಣ ಸಭಾ ಸಮುದ್ರವನಿಕ್ಕದೆವೆಯಿಂ
ಸಮೀಕ್ಷಿಸುತೆ, ಗಂಭೀರ ಮುಖಮುದ್ರೆಯಿಂ ಸುಯ್ದು,
ತನ್ನೊಳಗೆ ತಾನ್ ಪುಗುವನೆಂಬಂತೆ ನಯನಂ
ನಿಮೀಲತೆಯನೈದುತಿರೆ, ಪ್ರಿಯವಲ್ಲದಿರ್ದೊಡಂ
ಸತ್ಯವನೊರೆದ ತಿಕ್ತತೃಪ್ತಿಯಿಂ, ಕುಳಿತನಾ

ಮಹಾಪಾರ್ಶ್ವನಮೃತಮಂ ಮಥಿಸಿ ಕೊಟ್ಟಾ ಬಳಿಂ
ವಿಶ್ರಮಿಸಲೆಂದು ದಡಮಂ ಸೇರ್ದ ತಾಟಸ್ಥ್ಯ
ಮಂದರಮೆನಲ್!. . ಬಳಿಕಲೆದ್ದನು ಅಕಂಪನಂ,
ಸುಮಾಲಿಯ ತನೂಭವಂ; ಅನುಜಂ ಪ್ರಹಸ್ತಂಗೆ.
ಮಾರ್ನುಡಿಯೆ ಮಾರ್ಮಲೆತುದವನೇಳ್ಕೆಯೊಳ್. ನುಣ್ಪು
ನಯಗಳಂ ಕಂಡರಿಯವವನೊಳಗು ಹೊರಗುಗಳ್.
ವ್ಯಂಗ್ಯಮಿಂಗಿತಮೆಂಬ ಸೂಕ್ಷ್ಮತೆಯ ತೈಲಕ್ಕೆ
ಸೀಗೆಯಾತನ್; ರೂಕ್ಷನಿಷ್ಠುರಂ. ಬಾಯ್ದೆರೆಯೆ
ನುಡಿಗಳೊಡನಾಡಿಯಾಗಿಯೆ ಸಿಡಿಯುವುದು ಪೊಲೆಯ
ಕೌರುಗಳ್. ಕಣ್ಗಳೊಳ್ ರೋಷಮಲ್ಲದೆ ಬುದ್ಧಿ
ಲವಲೇಶಮಿಲ್ಲದಾತಂ ಮದಿಸಿದಾನೆವೊಲ್
ನೆಗಹಿ ಹಸ್ತವನತ್ತಲಿತ್ತಲೊಲೆಯುತ್ತಿಂತು
ಘೀಂಕರಿಸಿದನು ತನ್ನ ಪ್ರತಿಮತವ:
“ವಿದ್ರೋಹಿ
ನಾನಾಗೆನೆನ್ನನ್ನದಾತಂಗೆ. ಮೇಣ್ ಸಹಿಸೆನಾ
ಹೀನ ಹೃದಯವನನ್ಯರೊಳ್. ದ್ರೋಹಮೆಲ್ಲಿರಲ್,–
ದ್ರೋಹಮೆಂತಿರ್ದೊಡೇನ್? ದ್ರೋಹಿ ಆರಾದೊಡೇನ್?–
ಶಿಕ್ಷೆಗರ್ಹಂ. ಕಣ್ಗೆ ಕಾಣ್ಬ ದೈವಂ ನೃಪಂ.
ದೊರೆಯ ಸೇವೆಯೆ ದೈವ ಸೇವೆ. ದೊರೆಯಂ ಪಳಿಯೆ
ಜಗದೀಶ ನಿಂದೆ. ರಾಜೇಂದ್ರ ರುಚಿಯಂ ತೆಗಳೆ,
ನೃಪನ ಸುಖಕಿದಿರಾಡೆ, ಪ್ರಭುವಿನಾನಂದಮಂ
ಸಾಧಿಸಲ್ ತ್ಯಜಿಸದಿರೆ ನಮ್ಮ ಸರ್ವಸ್ವಮಂ,
ಪ್ರಭುವಿನಿಷ್ಟಂ ನಡೆವ ಮಾರ್ಗಮಂ ಪ್ರಶ್ನಿಸಲ್,
ಖಂಡಿಸಲ್, ದೈವ ನಿಂದೆಯೆ ದಿಟಂ! ಪ್ರಜೆಗಳಾರ್?
ಪ್ರಭುಕೃಪಾ ಮಹಿಮೆಯಿಂ ಬರ್ದುಕುವ ಪುಳುಗಳಲ್ತೆ?
ಕ್ರಿಮಿಗಳ್ ಸ್ವತಂತ್ರರೇಂ? ತಾಯ್ಬೇರಿಗೊದಗದಿರೆ
ನೀರ್ ಪರ್ಣಗಳ್ ಬಾಡುವೊಲ್, ನೃಪಂಗಿಲ್ಲದಿರೆ
ಸಂತೃಪ್ತಿ ನಿಸ್ತೇಜಮಾಗಿ ಸಾವರ್ ಪ್ರಜಾ
ಕೋಟಿಗಳ್. ಪ್ರಮುಖಮದರಿಂ ನರೇಂದ್ರನ ಸುಖಂ.
ನಾವೆಸಗವೇಳ್ಪುದಂ ತಾನೆ ಸಾಧಿಸಿಹನಾ
ದ್ವಿಷದ್‌ಯೋಷೆಯಂ ತಂದು. ನೃಪನಭ್ಯುದಯಕಾಂ

ಕೃತಜ್ಞರೆಂ. ಕರುಬುವರ್ ಕೀಳ್ಮಾನಿಸರ್. ಪ್ರೀತಿಯುಂ,
ನೃಪನೀತಿಯುಂ ಮೇಣ್ ಪ್ರತೀಕಾರಂಗಳೆಲ್ಲಮುಂ
ಏಕವಾಣಿಯೊಳೊರೆದುದಂ ನೆಗಳ್ದನ್. ಮುನ್ನೆ
ತಾನೊಲಿದಳನ್, ತಪ್ಪಿ ಪೆರರ ಪಾಲಾದಳನ್,
ಮರಳಿ ಪಡೆದನ್ ಕಾಲವೊದಗಲ್ಕೆ. ತಂಗೆಯನ್,
ದೈತ್ಯೇಂದ್ರ ಭಗಿನಿಯನ್, ಪಂಚವಟಿ ವಿಪಿನದೊಳ್
ತನಗೆ ತಾನ್ ವಿಹರಿಸುತ್ತಿರ್ದಳನ್, ನಿರ್ದಯಂ
ಭಂಗಿಸಿದವಂಗೆ ಪರಿಭವಮಾಯ್ತು, ಪೋಲ್ವಂತೆ.
ಪ್ರಬಲ ವೈರಿಯ ತೇಜಮಳಿವುದೊಂದೆಯೆ ಅಲ್ತು,
ಬೆಂಗೊಡುತ್ತಾತಂಗೆ ಪಗೆಗಳೆನಿಬರೊ ಕೂಡಿ
ಇಲ್ಲಿಗೈತಂದೊಟ್ಟಜೆಯಿನಳಿವವೋಲೊಂದು
ಹೂಡಿಹನರಸುಪಾಯಮಂ. ಆ ಉಪಾಯಮಂ
ಸಾಧಿಸುವುದೆಂತೆಂಬುದೆಮಗಿಲ್ಲಿ ಮಂತಣಂ.
ವ್ಯರ್ಥಮಾಳಾಪಮಾ ಗುರಿಗೆ ಹೊರಗಾಗಿರಲ್
ಮತ್ತೆ ಕುರುಡಾಗಿರಲ್ ನುಡಿಯ ಕಣ್!''

ನಿಲ್ಲಿಸಲ್

ಅಕಂಪನಂ, ಮೆಲ್ಲನೆಳ್ದನ್ ಮತ್ತಮೊರ್ವನ್
ಸಭಾನೇಮಿಯಿಂ, ಮಧುದಿನೋದಯ ಸರೋವರದಿ
ಕೋಕನದ ಕುಟ್ಮಲಂ ಪ್ರಫುಲ್ಲಿಪೋಲ್. ಬೆರಗಾಗೆ
ಸುಪ್ರಸಿದ್ಧರ್, ಉಘೇ ಎನಲಪ್ರಸಿದ್ಧರ್, ಆ
ಸುಪ್ರಸಿದ್ಧರೊಳಪ್ರಸಿದ್ಧನ್, ಅಖ್ಯಾತರೊಳ್
ವಿಖ್ಯಾತನಕ್ಷಿವನ ಚೈತ್ರನಾದನ್ ಸಕಲ
ಸದಸ್ಯರಿಗೆ. ಹೊಂಬಣ್ಣದ ಕುರುಳ್ಗಳೋಳಿಗಳ್
ಸುರುಳಿಗೊಂಡಲೆಯುರುಳ್ದುವು ಮನೋಹರಂ,
ಸುಂದರ ವದನ ಸಂಪದದ ಕಾವ್ಯವೈಖರಿಗೆ
ಚವರಿ ವೀಸಿ. ಕೌಮಾರ್ಯಮಂ ತೊರೆಯಲೊಲ್ಲದಿಹ
ತಾರುಣ್ಯಮೆಸೆದುದಾತನ ಮುಖದ ಮುಗ್ಧತೆಗೆ
ಮೋಹವನೊಡರ್ಚ್ಚೆ. ಲಂಕೆಯೊಳವಂಗಿಂ ಮಿಗಿಲ್
ಇರ್ಪರೆ ಲಸದ್ರೂಪಿಗಳ್? ಎಂಬ ಶಂಕೆಯಿಂ,
ಸಂತೋಷದಿಂ, ಮತ್ತಮಾತನೇನಂ ಪೇಳ್ದೊಡಂ
ಭಾರಮಿರದೆಂಬುಪೇಕ್ಷೆಯ ಹಗುರ ಹೃದಯದಿಂ,

ಪಿರಿಯರಿರ್ದರು ನಾಟಕಪ್ರೇಕ್ಷಕರೆನಲ್
ರಸಾಪೇಕ್ಷೆಯಿಂ. ಸಭಾಕೈರವ ಕುತೂಹಲಕೆ
ಬಿದಿಗೆದಿಂಗಳ್ ನಗೆಯ ಜೊನ್ನಮಂ ಸಿಂಚಿಸುತೆ,
ಮಿಡಿಯ ತೊಡಗಿದನಿಂತು ತನ್ನುಸಿರ್ತೇನೆಯಂ
ಹೆಸರಾ ಹಿರಣ್ಯಕೇಶಿ:
"ಸಭೆಗೆ ಕೈಮುಗಿದಪೆನ್;
ಪಿರಿಯರ್ಗೆ ನಮಿಸುವೆನ್; ಕೆಳೆಯರ್ಗೆ ವಂದಿಪೆನ್;
ಮೇಣ್ ಗೌರವವನರ್ಪಿಪೆನ್ ದಾನವೇಂದ್ರಂಗೆ.
ಪಿರಿಯರಿರ್ಪೀ ರಾಜಸಭೆಯ ಮಧ್ಯದೊಳೇಳ್ವ
ಪೆರ್ಮೆ ತನಗಿನಿತಿಲ್ಲಮಾದೊಡಂ, ಕಿರಿತನದ
ಸಾಲ್ವುದುತ್ಸಾಹಮಿಲ್ಲಿಗೆ ಸಲ್ವ ಕಾರಣಂ.
ಕಿರಿಯನೆಂ; ಸಾಮಾನ್ಯನೆಂ; ಕಿರಿಯ ಸಾಮಾನ್ಯ
ಜನಮನಪ್ರತಿನಿಧಿಯುಮೆನ್. ಪಿರಿಯರೆಂತೆಂತು
ಚಿಂತಿಪ್ಪರೆಂಬುದಂ, ಸಭೆಯಾಲಿಸಿದೆ, ನಮ್ಮ
ಪೆರ್ಮೆಯಾಳ್ಗಳ್ ನಾಲ್ವರಿಂ. ಕಿರಿಯರೆರ್ದೆಗಳೊಳ್
ಚಲಿಪ ಚಿಂತೆಯ ಚರಣಚಿಹ್ನೆಗಳನೀ ಗೋಷ್ಠಿ
ದಿಕ್‌ತಿಳಿಯೆ ಚಿತ್ರಿಸುವುದೆನಗಿಷ್ಟ ಕರ್ತವ್ಯಮ್."
ಅಕಂಪನಂ ಕುಳ್ತ ಕಡೆಗಕ್ಷಿಪ್ರಸಾರದಿಂ
ಸೂಕ್ಷ್ಮದಿಂ ವ್ಯಂಗ್ಯದಿಂ ಮುಂಬರಿದನುದ್‌ಗ್ರೀವನ್
ಉತ್ತೇಜಕೋತ್ಥಿತ ಧ್ವನಿಯಿಂದಮಾ ತರುಣ
ಮೇಧಾವಿ: "ಸುಖಮಮೂಲ್ಯಂ ಅದಾರ್ಗಾದೊಡಂ.
ರಾಜಸುಖದಂತೆಯೆ ಪ್ರಜಾಸುಖಂ. ರಾಮಗೇಂ
ಸುಖಮೊ? ಸೀತೆಗೆ ಸುಖಮೊ? ಮೇಣೆಮ್ಮ ದೊರೆಗುಮೇಂ
ಸುಖಮಹುದೊ? ಸುಖಮೊರ್ವನದೆ ಸರ್ವಸುಖಮಹುದೊ?
ಬಹುಜನರ ಸುಖಕೆ ಒರ್ವನ ಸುಖಂ ಬೆಲೆಯಹುದೊ?
ಬೆಲೆಯಪ್ಪೊಡಂ, ಸುಖಕೆ ಸುಖಮೆ ತಾಂ ನಾಣ್ಯಮೋ?
ಮೇಣ್ ಅಳತೆಗಿನ್ ಬೇರೆ ಪೊನ್ನಿಹುದೊ? ಧರ್ಮಮಾ
ಪೊನ್ನಹುದೊ?. . . ತತ್ತ್ವದರ್ಶಿಗಳಿಪ್ಪರಿಲ್ಲಿ; ಅವರ್
ತರಿಸಲ್ಗೆ. . . ಪೇಳ್ವೆನೆನ್ನನ್ನರೊಂದು ಮತಮಂ:
ಸುಖಮದೊರ್ವನದು ಸಕಲರ ದುಃಖಕಾರಣಂ
ತಾನಪ್ಪೊಡದು ನಿಂದನೀಯಂ, ನೃಪನದಾದೊಡಂ.

ಮುಸುಗಿಹುದು, ಲಂಕಿಣಿಯ ಭಂಗಮಾದಂದಿನಿಂ,
ರೂಪಮಿಲ್ಲದ ಭೀತಿ ಭೂತದ ಬೃಹಚ್ಛಾಯೆ
ನಮ್ಮ ನಗರದ ಮಂದಿವಾಳ್ಕೆಯಂ. ಶಕುನಗಳ್,
ದುಶ್ಶಕುನಗಳ್, ಸಾರಿ ಹೇಳುತಿಹವೆಂಬರ್
ಪುರೋಹಿತರ್, ಬರಲಿಹ ದುರಂತಮಂ. ನಂಬಿ, ಬಿಡಿ,
ಮೌಢ್ಯಮೆಂಬರ್. ತಿರಸ್ಕರಿಸುವರೆ ತಿಳಿದವರ್
ಜನಮನದ ಮೇಲಪ್ಪ ಪರಿಣಾಮಮಂ? ಭಯಂ
ವೈರಿಯಿಂದಲ್ತು; ಧರ್ಮದ ಮುನಿಸಿನೊಂದಳ್ಕು
ಕಲಕುತಿದೆ ಪುರಧೈರ್ಯಮಂ. ಲಂಕೆ, ನಮ್ಮೀ
ಕನಕಲಂಕೆ, ದೈತ್ಯನಾಗರಿಕತೆಯ ನಂದನಂ:
ಅಮರರೈಶ್ವರ್ಯಮಂ ಸೂರೆಗೊಂಡಿಹರೆಮ್ಮ
ಅಸುರ ವೀರರ್. ಸುರಾಂಗನಾ ಸೌಂದರ್ಯಮಂ
ಸೂರೆಗೊಂಡಿಹರೆಮ್ಮ ಲಲನೆಯರ್. ಶಿಲ್ಪಿಗಳ್
ವಿಶ್ವಕರ್ಮನ ಕೈಯ ಮರ್ಮಮಂ ಸೆಳೆದಿಹರ್
ನಮ್ಮ ಪುರರಚನೆಯೊಳ್. ಮಲೆತಿಹವು ಮಲೆಗಳುಂ
ಅಲಕಾವತಿಯ ಗಿರಿವನಾಟವಿಗಳಂ. ಲಂಕೆ
ದೈತ್ಯಸಂಸ್ಕೃತಿಯ ದೇವಾಲಯಮೆ ದಲ್! ಇದನ್
ಪಾಳ್ಗೆಯ್ಯಲೆರ್ದೆಯಿಹುದೆ ನಮಗೆ, ರಾಕ್ಷಸ ಕುಲದ
ಮಕ್ಕಳ್ಗೆ? ಮೇಣ್ ಪೆರರ್ಗಾದೊಡಂ ಪಾಳ್ಗೆಯ್ಯೆ
ಬಿಟ್ಟಪೆವೆ? ಸರ್ವರ ಕರ್ಮ ಕಟ್ಟಿದೀ ದಿವ್ಯ
ಕನಕಲಂಕಾ ಗರ್ವ ಗೋಪುರವನೊರ್ವನ
ಅನಿಶ್ಚಿತ ಸುಖಕೆ ಮಾರಲೊಪ್ಪುವುದೆ, ತಿಳಿದೀ
ಸಭಾ ಪ್ರಜ್ಞೆ?. . ಪೆಣ್ಮೊಗಕೆ ಮಿಗುವ ಚೆಲ್ವುಂ, ಮತ್ತೆ
ಮೆಯ್ಸೊಗಕೆ ಮಿಗುವ ಸೊಗಮುಂ, ಇರ್ಪುವೀ ಪುಣ್ಯ
ಲಂಕೆಯಲಿ: ಚಲಿಸುತಿರಲಿಂದು ಬೆಳಗುಂಬೊಳ್ತು,
ವೇಲಾದ್ರಿವಿಪಿನದೊಳ್, ಕಂಡೆನು ವಸಂತನಂ,
ಮರಮರದ ಹರೆಹರೆಯ ಸಿಂಗರಿಸುತಿರ್ದನಂ;
ಬಳ್ಳಿವಳ್ಳಿಗೆ ನಡೆದು, ಸುಮಸುಮದ ಗಲ್ಲಮಂ
ಪಿಡಿದು, ಕೆನ್ನೆಗೆ ಬಣ್ಣಬಣ್ಣವಿಡುತಿರ್ದನಂ;
ಹಕ್ಕಿಹಕ್ಕಿಯ ಕರೆದು, ಕೊರಳುಲಿಯ ಕೈಗೈದು,
ಗರಿಗೆ ಕಾಮನ ಬಿಲ್ಲನುಜ್ಜುತಿರ್ದಾತನಂ!

ನಿಂತೆನೊಂದೆಡೆ ಪೂತ ಪನ್ನೇರಿಳೆಯ ಮರದ
ಮೂಲದೊಳ್. ಚವರಿ ಚವರಿಯ ಜಂತನವಿರೆನಲ್
ಬೆಳ್ಪಂ ಕೆದರ್ವ ತುಂತುರಿನ ಬುಗ್ಗೆಗಳವೋಲ್
ಕುಚ್ಚುಕುಚ್ಚಿನ ಕೇಸರದ ಅರಳ್‌ಮಲರುಗಳ್
ಸಿಂಗರಿಸಿ ತುಂಬಿರ್ದುವಾ ತರು ತರುಣಿಯಂ. ಬಿಳಿಯ
ಪೂಗಳೊಳ್ ಕರ್‌ಪರಮೆ ಬಂಡೀಂಟಲ್ಕೆತಂದು
ಮೊರೆದು ಝೇಂಕರಿಸಿದುವು, ಮಿಡಿದು, ಕುಸುಮ ಕೋಮಲ
ಕುಟಜ ಹೃದಯಮಂ. ಹೊಂಗೆ ಚೆಲ್ಲಿತು ಸೇಸೆಯಂ
ತನ್ನ ಹೂವಕ್ಕಿಯಿಂ ರಂಗವಲ್ಲಿಯನಿಕ್ಕಿ,
ತಾನೆ ಪೂಜಿಸಿ ತನ್ನ ಪದವಲಯಮಂ. ಕಿಚ್ಚು
ಕುಚ್ಚಾಯ್ತೊ, ಹೂವಿನೋಕುಳಿಯ ಜೇರ್ಕೋವಿಯಿಂ
ವಿಪಿನರತಿ ಮಧುನೃಪಂಗೊಸಗೆಯಂ ರಚಿಪೊಂದು
ಮಾಳ್ಕೆಯಚ್ಚಾಯ್ತೊ ಎನೆ, ಕಣ್ ಸೋತು ಶರಣಾಗೆ,
ಪೂತೆಸೆದುವಸುಗೆಗಳ್... ಇರ್ಪುವೀ ಲಂಕೆಯೊಳ್
ಪೆಣ್‌ಮೊಗಕೆ ಮಿಗುವ ಚೆಲ್ವುಂ, ಮತ್ತೆ ಮೆಯ್‌ಸೊಗಕೆ
ಮಿಗುವ ಸೊಗಮುಂ!... ಬರಿಯ ಸೈನ್ಯಬಲಮಂ ನೆಮ್ಮಿ
ಲಂಕೆಯಂ ಪಾಳ್ಗೆಡಿಪುದನುಚಿತಂ. ಧರ್ಮಮಂ
ಕೆರಳಿಸುವ ಕಾರಣವನುಳಿಯಿಮ್. ಅನಂತರಂ,
ಬರಲಿ ನೋಳ್ಪಂ ಮೂರು ಲೋಕಗಳ್! ನಮಗಿದಿರೆ?
ನಮ್ಮೊಳೊರ್ವಂಗಿದಿರೆ? ಶೌರ್ಯಖನಿ ಈ ಲಂಕೆ;
ಋತದ ರೋಷವನುಳಿಯಲನ್ಯವೈರಿಯ ಶಂಕೆ
ತನಗೆ ತೃಣಮಿಲ್ಲ."
ಅಚ್ಚರಿಗಳಚ್ಚೊತ್ತಿದೋಲ್
ಇರ್ದರು ಸಭಾಸದರ್, ಆಲಿಸಿ ಹಿರಣ್ಯಕೇಶಿಯ
ಉಪನ್ಯಾಸಮಂ ಮತ್ತೆ ವಿಷಯವಿನ್ಯಾಸಮಂ.
ಕುಳ್ತು ಮರೆಯಾದೊಡಂ ಆತನಿರ್ದಾ ದಿಕ್ಕೆ
ಪಕ್ಕಾದುದೆನಿತೊ ಕಣ್ಗಳ್ಗೆ. ಅವನಾರ್? ಆತನಾರ್?
ಎಂದೊರ್ವರೊರ್ವರಂ ದೃಷ್ಟಿಸುತ್ತಿರೆ ಪ್ರಶ್ನೆಯಂ
ಸುಪ್ರಸಿದ್ಧರ್, ಘೋಷಿಸಿತು ಘೇ ಉಘೇ ಎಂದು
ಅಪ್ರಸಿದ್ಧರ ನೀಳ್ದ ತೋಳ್ಗಳಗ್ರದ ಕುಣಿವ
ಕರವಸ್ತ್ರಕೇತನಂಗಳ್... ಇದ್ದಕಿದ್ದಂತೆ,

ಪ್ರತೀಪವಾಗದೆ ಮನಂ, ತಿರುಗಿತು ಸಭಾನನಂ
ಸಿಂಹಾಸನದ ಬಳಿಯ ಮನ್ನಣೆಯ ಮನ್ನೆಯರ
ಏರ್ಮಣೆಗಳಿರ್ದೆಡೆಗೆ. ಮತ್ತೆ ಘೇ ಗೈದುದಾ
ಸಭೆ ಕಾಣಲುದ್ದಮೆಳ್ದಿರ್ದನಂ, ದೈತ್ಯಕೀರ್ತಿಯ
ಕಲಶದಗ್ರಮಣಿಯಂ, ಇಂದ್ರಜಿನ್ ಮೇಘನಾದನ
ರತ್ನರಂಜಿತ ಖಡ್ಗಭೀಷಣ ಕಟಿಯ ಚಟುಲ
ಭವ್ಯಕ್ಷಾತ್ರಮಯ ಗೌರಗಾತ್ರಮಂ. ತುಟಿಗಳೆಡೆ
ಮಿಂಚಾಡಿದುದು ರಜತ ಸರ್ಪಸ್ಮಿತದ ರಜೋ
ಜಿಹ್ವೆ. ತುಪ್ಪುಳ್ ಮೀಸೆಗಳ ಬಿಂಕಗೊಂಕುಗಳ್
ಕಾವಲಿರ್ದುವು ಲಘುತ್ವವನೆಡೆಗೆ ಬರಗೊಡದೆ,
ವದನ ದುರ್ಗ ದ್ವಾರಪಾಲಕ ಕರ ಪ್ರಖರ
ಛುರಿಕೆಗಳವೋಲ್. ಪೊದೆಯ ಪುರ್ಬ್ಬಿನ ಚೆಲ್ವುಕರ್ಪಿನ
ಕೃಪಾಶ್ರಯದಿ, ಕರ್ದ್ದಿಂಗಳಂತರಿಕ್ಷಾಭೋಗದೊಳ್
ಪ್ರಜ್ವಲಿಪ ಕಿರಣ ತಾರಾ ಸ್ಮರಣ ಕಾರಿಗಳ್,
ಕಣ್ಣಾಲಿಯಲೆದುವು ಸಭಾವಲಯ ವಿಶ್ವಮಂ,
ಕೋಪಪ್ರಚುರ ರಾಹುಕೇತುಗಳವೋಲ್! ದ್ರವೀ
ಕೃತ ಶಿಲಾ ಲೋಹ ಮಿಶ್ರಪ್ರವಾಹಂಗಳಂ
ಓಕರಿಸುವಗ್ನಿ ಕುತ್ಕೀಲದಂದದೊಳಿಂತು
ಕರೆದನುರಿವೆಂಕೆಯಂ ಮೇಘನಾದಂ:

"ಪ್ರಭುಗೆ,
ಪ್ರಭು ಕಿಂಕರರ ಮಂಡಲೇಶ್ವರರ ಮಂಡಲಿಗೆ,
ಲಂಕಾ ಪ್ರಕೃತಿ ಪೌರುಷ ಪ್ರಾತಿನಿಧ್ಯರಿಗೆ,
ದೈತ್ಯ ವಿಕ್ರಮ ಸಿಂಹರಿಗೆ ನಿವೇದಿಪೆನೆನ್ನ
ಗೌರವ ನಮಸ್ಕಾರಮಂ. ಇಂದಿನೀ ಸಭೆಗೆ
ಬಂದೆನಿಲ್ಲಾಂ ನಾಲಗೆಯ ಚಮತ್ಕಾರಮಂ
ತೋರಲ್ಕೆ. ಮಾತನಾಡುವ ಮನಂ ಇನ್ನೆಗಮ್
ಇನಿತಿರ್ದುದಿಲ್ಲೆನಗೆ. ಕೇಳ್ದೀಗಳೊರ್ವನಂ,
ಕಾರ್ಯವಂಚಕ ವಾಕ್ಯ ಚತುರನಂ, ಕೋಮಲ
ಕಿಶೋರನಂ, ಸವಿನುಡಿಯ ಶೂರನಂ, ಸರ್ವಕೆ ಮಿಗಿಲ್
ಲಂಕಾ ತರುಣರೆರ್দೆಗಳೊಳ್ ಚರಿಪ ಚಿಂತೆಯ
ಚರಣ ಚಿಹ್ನೆಗಳನೀ ಬೃಹದ್ ಗೋಷ್ಠಿಗರಿಪವೊಲ್

ಕೆಚ್ಚಾಡಿದಾತನಂ, ಕೆರಳ್ದುದೆನ್ನೀ ಮನದ
ಮೌನವ್ರತಂ. ಅರಿಯೆನಾಂ ಆತನಾರೆಂದು.
ಮೊಳೆವ ಕಬ್ಬಿಗನಿರಲ್ ವೇಳ್ಕುಮೆಂಬುದೆ ದಿಟಂ
ನನಗೆ ನಿಶ್ಶಂಕೆ. ಅಂತಲ್ಲದಿರೆ ಅನ್ಯರ್ಗೆ ದಲ್
ಆ ಸ್ತ್ರೈಣ ಚಾರುತೆ ಸುಲಭಮಲ್ತು! ಬುದ್ಧಿಯನ್
ಮಲಗಿಸಲ್ ಮೊದಲು ಜೋಗುಳವುಲಿದು, ತರ್ವಾಯ
ಭಾವಕೇನೊರೆದಡೇನಹಿತಮಪ್ಪುದೆ? ಕವಿಯ
ಕಾವ್ಯಕೈತವಮಂತುಟೆ ವಲಂ ಅಬೋಧಪೂರ್ವಂ
ಹೃದಯವಿಜಯಿ! ಹೊಂಗೆವೂ ಚೆಲ್ವು: ಪೂರ್ವಪಕ್ಷಂ;
ಸಿದ್ಧಾಂತಮೆಮಗೆ ಪೆಣ್ತನಮೆ ಸಲ್ಲಕ್ಷಣಂ!
ಬಂಡೀಂಟಿ ಮೊರೆಯುತಿದೆ ತುಂಬಿ: ಪೂರ್ವಪಕ್ಷಂ;
ಸಿದ್ಧಾಂತಮೆಮ್ಮ ಲಂಕಾ ಲಕ್ಷ್ಮಿಗಿನಿತುಮಂ
ಗಾಯಮೆಸಗದೆ ವೈರಿಗಕ್ಷತೆಯನಾಕೆಯಂ
ಸಮರ್ಪಿಸಿಂ!. . .'' ನೃಪ ಸಭಾಮಂದಿರಂ ಬಿರಿವುದೆನೆ
ಗೊಳ್ಳೆಂದು ಗುಲ್ಲೆದ್ದುದಟ್ಟಹಾಸಂ! ನಗದೆ,
ಬದ್ಧ ಭ್ರುಕುಟಿಯಿಂ ಸಭಾಲಘುತ್ವವನಿಕ್ಕಿ
ಮೆಟ್ಟುತೆ, ಗುರೂತ್ತಾಲ ಕಂಠದಿಂದಿಂದ್ರಜಿತು
ಮತ್ತೆ: ''ಸಹಜಂ; ಕವಿಗೆ ಮೇಣ್ ಸ್ತ್ರೀಗೆ ತರ್ಕಂ
ಪ್ರಕೃತಿವಕ್ರಂ. ರಾಜಕಾರಣಕಬಲೆಯೊರ್ವಳನ್
ಅಕಾರಣಂ ನೆವವೊಡ್ಡಿ, ವಾದಮಂ ಜಟಿಲತೆಯ
ಮುಳ್ಮೆಳೆಗೆ ತಳ್ಳಿ, ತಾನ್ ಬಟ್ಟೆಗೆಟ್ಟು, ಪೆರರ್ಗೆ
ಕಣ್ಗೆಡಿಸುವಾ ಕುಶಲಕಲೆ ಇಲ್ಲಿಗಪ್ರಕೃತಮ್
ಅಸ್ಥಾನಮವಿವೇಕಮಪಮಾನ ಕಾರಣಂ.
ಧರ್ಮಜಿಜ್ಞಾಸೆಗಿದು ಲಂಬಕೂರ್ಚರ ವಲಿತ
ಫಲಿತಸ್ಥವಿರ ಸಮಿತಿಯಲ್ತು. ರಾಕ್ಷಸ ಬಲಂ
ನಿಶ್ಶಂಕಿ; ತನಗೆ ಬೇಡನ್ಯಾಶ್ರಯದ ಶಕ್ತಿ,
ಸೀತೆಯಿಂದಕ್ಕೆ, ಮೇಣ್ ರಾಮನಿಂದಕ್ಕೆ, ಮೇಣ್
ಧರ್ಮದಿಂದಕ್ಕೆ. ಹಗೆ ಬೀಡು ಬಿಟ್ಟಿಹುದಲ್ಲಿ,
ದೂರದಾ ಶರಧಿ ವೇಲೆಯ ಸಿಕತವೇದಿಯೊಳ್.
ಲಂಕೆಗೆ ಬಹುಳಮಪಾಯಂ. ನಮ್ಮ ದೊರೆಗಿಲ್ಲಿ
ಬೇಕಾದುದೆಮ್ಮ ಹರಣಂ; ಕಾವ್ಯಮಲ್ತು ಮೇಣ್

ಧರ್ಮಬೋಧೆಯುಮಲ್ತು. . .'' ಎನುತ್ತೆ, ಸಿಂಹಾಸನದ
ಕಡೆಗೆ ಕಣ್‌ನಟ್ಟು ದಶಶಿರನ ಮೆಚ್ಚಿನ ಮಗಂ
ಚಕ್ರೇಶ್ವರಂಗರ್ಪಿಸಿದನಿಂತು ತನ್ನುರುವ
ಶಕ್ರಜಿತ್ ಧೈರ್ಯದೈರಾವತಸ್ಕಂಧಮಂ:
''ತ್ರೈಭುವನ ವಿಜಯಿ, ಹೇ ದೈತ್ಯ ಚಕ್ರೇಶ್ವರಾ,
ನೀಂ ನಿರಂಕುಶನುಮಸಹಾಯ ಶೂರನುಮಾಗಿ
ಈ ಬೆರಕೆನೆರವಿಯ ಮಂತಣಕ್ಕೆ ಕಿವಿಗೊಡಲ್
ಬಗೆದಂದುದದು, ನಮ್ಮ ಮತಿಯ ಮೇಲ್ಮೆಯನಲ್ತು,
ಮೇಣೆಮ್ಮ ಕೈದುಗಾರಿಕೆಯ ಹಿರಿಮೆಯನಲ್ತು,
ಸೂಚಿಪುದು ರಾಜಹೃದಯ ಪ್ರಜಾ ವತ್ಸಲ
ಮಹೌದಾರ್ಯಮಂ. ತಿಳಿಯದದನೆಳೆಮೊಗಕೆ ನವಿರ್
ಕರ್ಪಿನಂಕುರಮಿನ್ನುಮುದ್ಭವಿಸದಿರ್ಪ್ಪಣುಗುಗಳ್
ಬಣಗುಗಳ್ ಭಾವುಕ ಸಹಜ ಬಾಲಭಾಷೆಯಿಂ
ಬೋಧಿಸುತ್ತಿವೆ ನಿನಗೆ, ಸಮರ ನಟರಾಜಂಗೆ,
ರಣ ತಾಂಡವದ ರಾಜಕೀಯಮಂ. ಕೇಸರಿಯ
ನಖಕೆ ನರಿ ನೀಡುತಿದೆ ತನ್ನ ಹಲ್ಲಿನ ಹುಲು
ತನುತ್ರಮಂ! ಬಜ್ಜರಕ್ಕಿದ್ದಲಿನ ಸಾಣೆಯಂ
ಪಿಡಿವ ಗಾಂಪಿಗೆ ಜಗುಳ್ವೊಂದು ಜಂಗುಳಿಜಸಕೆ
ಬಾಯ್ವಿಡುವ ನೀರಳ್ಕೆಯೆನ್ನೆಡೆ ಸುಳಿಯದಿರ್ಕೆ:
ನಿನಗೆ ನಾಂ ಬುದ್ಧಿವೇಳುವ ಮರುಳಮರದಿರ್ಕೆ!
ನಿನಗೆ ಮಗನೆಂಬುದೊಂದೆಯೆ ಅಲ್ತು; ದೊರೆಗೆ ನಾಂ
ಪ್ರಜೆಯೆಂಬುದುಂ ತರ್ಕಮಿಲ್ಲಿಗೆನ್ನಯ ಧೃತಿಯ
ನಿರ್ಣಯಕೆಃ ನಿನ್ನಿಷ್ಟದಂತೆ ನಡೆವುದೆ ಧರ್ಮ;
ನಿನ್ನಾಜ್ಞೆಯಂ ಪಾಲಿಪುದೆ ತನೂಭವನೆನಗೆ
ಕರ್ತವ್ಯ ಕರ್ಮ. ರಾಕ್ಷಸ ಕುಲಕ್ಷೇಮಕ್ಕೆ
ರಾಕ್ಷಸೇಂದ್ರಗೆ ವಿಧೇಯತೆಯನುಳಿದನ್ಯಮಂ
ಕಾಣೆ ರಕ್ಷೆಯ ವರ್ಮಮಂ!. . . ತಮ್ಮ ಬಲ್ಮೆಯಂ
ತಾಮೆ ಕೊಂಡಾಡುವುದು ಸಭ್ಯ ಲಕ್ಷಣಮಲ್ತು;
ಪೇಳ್ವೆನಾದೊಡಮೀ ಸಭೆಗೆ ಸಮಾಧಾನಮಂ.
ಬೇಡ ಬೆದರಿಕೆ ನಿರ್ಜರಂ. ಕಳವಳಮೆ ನಮಗೆ
ವೈರಿಗೆ ಮಿಗಿಲ್ ಪರಮವೈರಿ. ದುರ್ಗಂ ಲಂಕೆ;

ದುಷ್ಪಾರಮಂಭೋಧಿ; ನಮ್ಮ ಪಡೆಯುಂ ಭೀಮ
ಭೀಷಣಮದಮ್ಮ ರೌದ್ರಂ. ಚೋರ ನಿಪುಣನಾ
ಕಿತವ ವಾನರನೊರ್ವನೊಳವೊಕ್ಕು ಜುಣುಗಿದನ್
ಪಿಡಿಯಲಾಂ ನಡೆವನಿತರೊಳ್. ಹನುಮನೆಂಬವನ್,
ಬೇಹಿನವರೊರೆದವೋಲ್, ವಿಕ್ರಿಯಾ ವಿದ್ಯೆಯಿಂ
ಶರಧಿಯಂ ಲಂಘಿಸೆ ಸಮರ್ಥನಾದನ್. ಅದರ್ಕೆ
ಮಾಯಾ ಪ್ರತಿಕ್ರಿಯೆಯನೊಡ್ಡಿ ನಿಂದೆನಪ್ಪೊಡೆ,
ಮಾರುತಿಯ ಮಾತಿರಲಿ ಸೋಲ್ವನವನಯ್ಯನೆ
ಗಮನಗೆಟ್ಟು. ಇಂದ್ರಾದಿ ದೇವ ದಿಗುಪಾಲರಂ
ಸೊರ್ಕಿಳಿಸಿ ಬಾಯ್ಕೇಳಿಸಿರ್ಪುರ್ಕಿನೊರ್ ಸಿಡಿಲ್
ಸುಟ್ಟುರಿಪುದರಿಗಳಂ; ಬರಲಿ ರಾಮನ ಸೇನೆ,
ಕಾಡಿನ ಕಪಿಧ್ವಜದ ವಾನರ ಚಮೂ! ಕಡಲ್
ನೀರ್ಮಸಣವಾಗದಿರಲವರಿಗೆ, ಸಮಾಧಿಯಂ
ತನ್ನ ಮಣ್ಣೊಡಲೊಳೀ ಲಂಕೆ ರಚಿಪುದೆ ದಿಟಂ
ಶತ್ರುಗಾತ್ರಕ್ಕೆ! ಬಿರುಗಾಳಿ ತರಗೆಲೆಗಳಂ
ಬೀಸುತೆಳ್ಬಟ್ಟುವೋಲ್, ಕಾಳ್ಗಿಚ್ಚು ಕರಡಬೆಣಮಂ
ನೊಣೆನೆಕ್ಕಿ ಕರಿಕುವರಿವೋಲ್, ಕಲ್ತ ಮಾಯಾ
ಸಮಸ್ತ ವಿದ್ಯೆಯನವರ ಮೇಲ್ ವ್ಯಯಿಸುವೆನ್; ಪಿಳ್ಳೆ
ಪಿಂತಿರುಗದೊಲ್ ದಹಿಸುವೆನ್. ದೈತ್ಯ ಕುಲ ದೇವ,
ನಿನಗೆ ಮುಡಿಪಿತ್ತೆನಿದೊ ನನ್ನ ಸರ್ವಸ್ವಮಂ:
ಬೆಸನೆಸಗುವುದೆ ನನಗುಸಿರ್ವಟ್ಟೆ; ಸತ್‌ಪ್ರಜೆಗೆ,
ಮೇಣ್ ಕ್ಷಾತ್ರತೇಜಕೆ, ಉಚಿತನಿಷ್ಠೆ!''
ಕರ್ನಿಶೆಯ
ನಕ್ಷತ್ರದೋಲಗದೊಳೊಂದರಿಲ್ ತಾನಿರ್ದ
ತಾಣದಿಂದೆದ್ದು ಧಾವಿಸಿ ನುಗ್ಗುತುಜ್ವಲಿಸಿ
ಜವದಿ ಕಣ್ಮರೆಯಾದೊಡಂ ವಿಯದ್‌ಯವನಿಕೆಯ
ಕರ್ಪಿನೊಳ್ ಪಿನ್‌ತಳ್ವದರ ರಂಜಕೋದ್ದೀಪ್ತ
ಪಥರೇಖೆಯಂ ನೋಳ್ಪ ವಿಸ್ಮಿತರವೋಲ್, ಸಭೆಯ
ಜನರುಲ್ಲಸದ ಕೊರಳ್ ಬಿನ್ನನಿರ್ದುದು ಮರೆತು
ಘೇಘೋಷಮಂ, ಶ್ರವಣದರ್ಥ ರೋಮಂಥನದಿ
ಭಾವಮಂಥರಮೆನಲ್. ವಿರಮಿಸುತ್ತಿಂದ್ರಜಿತು,

ಮಣಿಗಣ ಫಣಾಹಿ ಹೆಡೆಯಾಟಮಂ ನಿಲ್ಲಿಸಿ
ಮರಳ್ವವೋಲ್ ತನ್ನ ವಲ್ಮೀಕಕೆ, ಸಸಂಭ್ರಮಂ
ಸರಿದನಯ್ ತನ್ನುನ್ನತಾಸನಕೆ. ಲಂಕಾ
ಪ್ರತಾಪಕೆ ಪರಾಕ್ರಮಕೆ ಕಲಶಮಣಿಯಾಗಿರ್ದ
ಮೇಘನಾದನ ವಾಗಶನಿ ಬಡಿದ ಮೂರ್ಛೆಯಿಂ
ಸಭೆ ಮೆಲ್ಲನೆಳ್ಚರುತ್ತಿರೆ, ಪೊರೆಯನುರ್ಚುತ್ತೆ
ನಾಲಗೆಯನೊರೆಗಳಚಿ ಕೋರೆದಾಡೆಯ ಮಸೆವ
ಮಾರುತ್ತರದ ಮಸಕದಿಂದೇಳಲಿರ್ದಾ
ಹಿರಣ್ಯಕೇಶಿಯ ಕಣ್ಗೆ ಬಿಳ್ದುದು ವಿಭೀಷಣನ
ಮೇಲೇಳ್ವ ಭಾಷಣೋನ್ಮುಖ ಹೃದಯಧೈರ್ಯಕರ
ಪೂಜ್ಯಚಿತ್ರಂ. ತಟಕ್ಕನೆ ಕುಳ್ತು ಕಣ್ಣಾಯ್ತು,
ಕಿವಿಯಾಯ್ತು, ತರುಣನಾತ್ಮಂ!
                                        ಭವ್ಯಮೆಳ್ತರಂ
ಬೆಳ್ಪುಡೆಯೊಡಲ ವಿಭೀಷಣನ ಸಾತ್ತ್ವಿಕ ದೀರ್ಘ
ವಿಗ್ರಹಂ ವೇದಿಕಾಪ್ರಾಂಗಣಾಗ್ರದೊಳಲ್ಲಿ
ತಾನಾಯ್ತು ನೇತ್ರನಿರ್ವಾಣಕರಮಖಿಲರಿಗೆ,
ಅಮೃತ ಫೇನಾಂಬರ ಸುಶೋಭಿತ ಜೈನದೇವತಾ
ಪ್ರತಿಮೆಯೋಲ್. ನಿಶ್ಶಬ್ದಮಿರ್ದುದಾ ಮಂದಿರಂ,
ನೆನಹಿಗೆಳೆವಂತೆವೋಲಾಚಾರ್ಯ ವಕ್ತೃತಾ
ಶ್ರವಣಕಾತರ ಛಾತ್ರ ವೃಂದಮಂ. ಅಸ್ಥೂಲ
ಚಟುಲೋನ್ನತನ ಮುಖದ ಧರ್ಮತೇಜಕೆ ತಮೋ
ದೃಷ್ಟಿದೋಷಂ ತಗುಳದಿರ್ಕೆಂದು ಸತ್ತ್ವ ತಾಂ
ಬರೆದುದೆನೆ, ಕೊಂಕುಬಿಂಕಗಳಿರದ ಮೀಸೆಗಳ್
ಮನವೊಲಿಪವೋಲೆಸೆದುವಾತನಾನನದಲ್ಲಿ,
ಸರಳ ಶೈಲಿಯ ನಿರಭಿಮಾನದ ತಪಃಪರುಷ
ಸಭ್ಯ ಭಂಗಿಯಲಿ. ಬುದ್ಧಿಯ ತೀಕ್ಷ್ಣತೆಗೆ ಸಾಕ್ಷಿ
ತಾನೆನಲ್ ನೀಳ್ದ ತೆಳ್ಪನೆ ನಾಸಿಕಂ, ಕಣ್
ಸರೋವರಂಗಳೆರಡರ ನಡುವಣೇರಿಯ ತೆರದೆ,
ತಿರುಗುವಾಡುಂಬೊಲದ ಶಾಂತಿಪಥವಾದುದಾ
ನೆರೆದ ನೆರವಿಯ ನಯನ ಸಂಚರಕೆ. ರಾವಣಂ
ಸೇರಿ ಸರ್ವರುಮಿಷ್ಪಗಂಭೀರ ಗೌರವದಿ

ಚಾತಕಗಳಾದರನಲೆಯ ಜನಕನಾತ್ಮದ
ವಿಪಂಚೀ ಕ್ವಣನ ಮಧುರ ಮಧುಸುಧಾ ಶೀಕರಕೆ:
''ಸರ್ವರುಂ ಲಂಕಾಕ್ಷೇಮ ಕಾತರರಿಲ್ಲಿ; ಮೇಣ್
ದೈತ್ಯ ಕೀರ್ತಿಯ ಕಲಶದ ಕಿಲುಂಬನುಜ್ಜಲ್ಕೆ
ತವಕಿಪ್ಪರನ್ ಬಿಟ್ಟು ಬೇರೆ ಬಗೆಯಿರ್ಪರನ್
ಕಾಣೆನೊರ್ವನನಿಲ್ಲಿ; ನೆರೆದಿಹ ಸದಸ್ಯರಿಗೆ
ತಮ್ಮ ಭಾಷಣ ಮಧುವನುಣಬಡಿಸಿದೆಲ್ಲರೊಳ್,
ಪಿರಿಯರೊಳ್ ಕಿರಿಯರೊಳ್, ಒಂದೆ ಮತಿ, ಒಂದೆ ಗತಿ,
ಒಂದೆ ಗುರಿಯಿರ್ಪುದನ್ ಕಂಡೆನಾನ್. ಅವರವರ
ಪ್ರಕೃತಿಗನುಗುಣಮೆನಲ್ ಬೇರೆ ಬೇರೆಯ ರೀತಿ
ಪೊಣ್ಮಿದತ್ತವರವರ ಧ್ವನಿಯೊಳ್, ವಿಧಾನದೊಳ್,
ಶೈಲಿಯೊಳ್, ಧಾಟಿಯೊಳ್, ಮತಿಯ ವಿನ್ಯಾಸದೊಳ್,
ಮೇಣ್ ಉಪನ್ಯಾಸದೊಳ್. ಆರ್ಗಾದೊಡಂ ಇಲ್ಲಿ
ಗುರಿಯೊಳಗೆ ಕವಲಿಲ್ಲ. ಭಿನ್ನಮೇನಿದೊರ್ಡಂ
ಬಟ್ಟೆಯೊಳ್. ತಾತ್ಪರ್ಯಮಿನಿತೆ:–ರಕ್ಷಿಸವೇಳ್ಕುಮ್
ಈ ಲಂಕೆಯಂ. ದೈತ್ಯ ಗೌರವವಳಿಯದಂತೆ
ರಾಕ್ಷಸ ಕುಲದ ಕುವರರೆಲ್ಲರುಂ ಹೋರುವರ್
ಹರಣದ ಹಂಗುದೊರೆದು.–ಆರಿಂದಲಾದೊಡಂ
ಕೇಡಡಸದೊಲ್ ಸೊಗವಾಳ್ತೆಗಂತೆ ಮಸಿ ತಗುಳದೊಲ್
ಬೆಳ್‌ಜಸಕೆ, ನಾಮೆಳ್ಚರಿಂ ನಡೆವುದುತ್ತಮಂ.
ಸೊಗವಾಳ್ತೆ ಬೆಳ್ಜಸಗಳೆರಡುಂ ಅಧರ್ಮದಿಂ
ಕಿಡುಗುಮೆಂಬುದು ಪಿರಿಯರನುಭವಂ. ಎಂತಪ್ಪ
ಬೀರಮುಂ, ಅರದ ಬೆಂಬಲಮಿರದ ಎಂತಪ್ಪ
ಬಲ್ಮೆಯುಂ, ವ್ಯರ್ಥಮಪ್ಪುದು ತುದಿಗೆ. ಪೆಣ್ ತನಗೆ
ತಾನೊಲಿದು ಬರೆ, ಸೊಗಂ ಮೇಣರಂ. ಬರದಿರಲ್,
ತವಿವುವೆರಡುಂ. ಏಕ ಪತ್ನೀವ್ರತನ ರಾಮನ
ಪತಿವ್ರತೆಯ ತಪದ ತೀವ್ರಾತಪದ ರೌದ್ರಮಂ,
ಪೆಣ್ಕೊರಂಗದೇವುದೆಂದೇವಯ್ಸುವುದು ತರಮೆ,
ಪಲವು ಹದಿಬದೆಯರಿಂ ಧನ್ಯಮಾದೀ ನಮ್ಮ
ದಾನವ ಕುಲದ ಬಲದ ಪೌರುಷಕೆ? ಅನುದಿನಂ
ಇನಿಯನಂ ನೆನೆನೆನೆದು ಕೊರಗಿ ಕರಗುವ ಸತಿಯ

ಸುಯ್ಯುಸಿರ ಶಾಪತಾಪಂ ವಿಧಿಯ ವಜ್ರಕೆ ಮಿಗಿಲ್
ಕ್ರೂರಮಪ್ರತಿಹತಂ. ಸಹಸ್ರ ಲಂಕೇಶ್ವರರ
ಮತ್ತೆ ಶತ ಮೇಘನಾದರ ಶಕ್ತಿ ಶೈಲಗಳ್,
ಬೆಂಗದಿರಗೈಕಿಲೊಟ್ಟಿಲ್ ಮಿಣ್ಣನಳಿವಂತೆ,
ತಿಳಿವ ಮುನ್ನಮೆ ಮಳಲರಾಸಿಗಳ್, ಪೆಣ್ಣಳಲ್
ತಿಣ್ಣಮರೆಯಲ್ಕೆ! ಕುಲ ಕೀರ್ತಿ ನಾಶನ ಕರಂ
ಪರಿಹರಿಪುದಾ ಒಂದು ಪಾಪಮನ್! ಅನಂತರಂ,
ರಾಮಲಕ್ಷ್ಮಣರಿರ್ಕೆ, ಕಪಿ ಸೇನೆಗಳ್ ಬರ್ಕೆ,
ಲಂಕೆ ದುರ್ಗಂ; ಸ್ವರ್ಗಮೆಮಗಂತೆ ವೈರಿಗುಂ
ಸ್ವ ರ್ಗಕಾ ರ ಣ ಕವಾಟಂ!...”
ಸಿಂಹವಿಷ್ಟರದಿ
ತೆಕ್ಕನೆಳ್ದನ್ ತ್ರಿವಿಷ್ಟಪಾರಿಗಳಗ್ರಗಣ್ಯನ್,
ಅನಿಷ್ಟದಿಂದೋಡಲೆಳಸುವನಂತೆವೋಲ್. ನೆಮ್ಮಿ
ಕೆಲದೊಳಿರ್ದಾ ವೃದ್ಧಮಂತ್ರಿಯನವಿಂಧ್ಯನಂ
ನಿಂದನಸ್ವಸ್ಥನೊಲ್ ಸುಯ್ದು. ತೆರೆಸುರ್ಕೆೀರ್ದು
ಕಳೆಗೆಟ್ಟುದಾ ರಾಕ್ಷಸೇಶ್ವರನ ವಿಸ್ರಸ್ತ
ವದನ ತೇಜಂ. ಪ್ರಜ್ಞೆ ಮಸುಳಾಗಿ, ಕಣ್ಣಾಲಿ
ತೇಲಿ, ಮೆಲ್ಲನಲ್ಲಿಂ ತೆರಳ್ದನಸುರಾಧಿಪಂ,
ಭಯ ಕುತೂಹಲ ಚೇಷ್ಟಿತಂ ತಾನಾಗಲಾ
ಸಭಾ ಚೇತನಂ. ಸಹೋದರನ ಅಂತಃಸ್ಥಿತಿಯ
ತಿಳಿದಾ ವಿಭೀಷಣಂ, ಸಭೆಯಂ ವಿಸರ್ಜಿಸುತೆ,
ರಾಕ್ಷಸ ಕುಲಕ್ಷೇಮ ಚಿಂತನ ಮಥಿತ ಮನನಾಗಿ,
ತೇರ್ಸೈಸಿದನು ನೇರಮಲ್ಲಿಂ ತನ್ನ ತೇರ್‌ಮನೆಗೆ.

ಸಂಚಿಕೆ ೮

# ನಿನ್ನ ಮಗಳಲ್ತೆನ್ನವಳ್ ಅನಲೆ!

ಅನಲಾ ಕುಮಾರಿಗಗ್ರಜನ ಅಸ್ವಸ್ಥತೆಯ
ಸುದ್ದಿಯಂ ತಿಳುಹಿ, ದೊಡ್ಡಯ್ಯಂಗೆ ಶುಶ್ರೂಷೆಯಂ
ದೊಡ್ಡಮ್ಮನೊಡನೆಸಗಲವಳನಲ್ಲಿಗೆ ಕಳುಹಿ,
ಇರುಳೆಲ್ಲಮಾಳೋಚಿಸುತ್ತೆ ಮುಂಬಟ್ಟೆಯಂ,
ಹೊತ್ತರೆಯನಿದಿರುನೋಡುತ್ತೆ ಪೂರ್ವಾಚಲದ
ನೆತ್ತಿಯಂದದಿ ತವಕಿಸಿರ್ದಾ ವಿಭೀಷಣಂ
ಮಥಿಸಿ ನಿಚ್ಚಯಿಸುತ್ತೆ ತನ್ನ ಮತಮಂ, ಮತ್ತೆ
ರಾಕ್ಷಸ ಕುಲದ ರಕ್ಷಣೆಗೆ ಮೇಣ್ ಸಹೋದರನ
ಹಿತಕೆ ತಾಂ ಮುಂ ಪಿಡಿಯಲಿರ್ಪ ಸತ್‌ಪಥಮುಮಂ;
ಕಾಣ್ಬುದೆ ತಡಂ ಬೆಳ್ಳಿ, ಕೇಳ್ವುದೆ ತಡಂ ಮೊದಲ
ಪಕ್ಕಿ, ಪೊರಮಟ್ಟನಯ್ ತನ್ನ ಧವಳ ಗೃಹದಿಂ
ರಾಕ್ಷಸೇಂದ್ರನ ರತುನ ಸೌಧಕ್ಕೆ. ಇರ್ದುದಾ
ಗೋಪುರ ಚಯಾನ್ವಿತ ನೃಪೇಂದ್ರ ವೇಶ್ಮಂ, ಮಹಾ
ಗಿರಿಚೂಡದೊಲ್ ಘೋರ ಚಾರು. ವಿಕ್ರಮ ರುಂದ್ರ
ವೃಶ್ಚಿಕರೋಮನಾ ಭೀಮವಪು ದೌವಾರಿಕನ
ಕೈಮುಗಿಹಮಂ ಮುಗುಳುನಗೆಯಿಂದಮಾದರಿಸಿ,
ಮತ್ತ ಮಾತಂಗ ನಿಃಶ್ವಾಸ ಮಾರುತ ಚಲಿತ
ಪುಷ್ಪ ಪರಿಮಳ ತರುಲತೋದ್ಯಾನ ಪಥದಿಂ
ಪ್ರವೇಶಿಸಿದನವರಜಂ ಅಗ್ರಜ ದಶಗ್ರೀವ
ಚಂಡಿಕಾಧ್ವಜ ಗರ್ವಿತ ಮಹದ್ ಬೃಹದ್‌ಗೃಹಕೆ!
ತಿಳಿದು ಚರರಿಂ ತಂದೆಯೈತಂದುದಂ, ಜವದಿ
ನಡೆತಂದಳನಲೆ. ಮಗಳ ಮೊಗದುಬ್ಬೇಗಮಂ

ಸಂವೀಕ್ಷಿಸುತೆ, ಸುರ್ಕ್ಕು ತೆರೆಯೇರ್ದ ಪುರ್ಬ್ಬಿನ
ವಿಭೀಷಣಂ ಬೆಸಗೊಂಡನಗ್ರಜಾತಕ್ಷೇಮ
ಕಾತರ ವಚಃಪ್ರಶ್ನಂಗಳಂ. ಬೆದರ್ದಳೆನೆ
ರಾಕ್ಷಸ ರಾಜನರಮನೆಯ ಶಬ್ದ ಶೂನ್ಯತೆಯ
ನಕ್ರ ನಿದ್ರೆಗೆ ತರಲ್ ಭಂಗಮಂ, ತುಡುಕಿದಳ್,
ಪಿಡಿದಳಯ್ಯನ ಕಯ್ಯನುಸಿರದೇನೊಂದುಮಂ;
ಕಿವಿಗರಿದೆನಲ್ ಪರ್ಚುತುಯ್ದಳಾತನನಗಂ
ವೃದ್ಧವರ್ಯನವಿಂಧ್ಯನಿರ್ದೆಡೆಗೆ. ಮಗುಮೊದಲ್
ಕೈಕಸಿಯ ಕಂದನಂ ಮುಂಡಾಡಿದಾ ಸಲುಗೆ
ದೈತ್ಯೇಂದ್ರಗಿನ್ನುಂ ಬೆಸುಗೆಯಾಗಿರ್ದವನ್,
ಮುಪ್ಪರಿವು ತಾಳ್ಮೆ ಮುಪ್ಪುರಿಗೊಂಡ ಬೆಳ್ನವಿರ
ಪೂಜ್ಯನನಲೆಯ ಬೊಪ್ಪನಂ ಕಂಡೊಡನೆ, ಸುಯ್ದು,
ತೂಲ ಪೀಠದಿನೆಳ್ದು, ತಳ್ಕಯ್ಸಿದನ್. ಅಜ್ಜನಾ
ಭಾವ ವೇಗಕ್ಕೆ ಬೆರಗಾಗಿ ಸರಮಾ ಧವಂ
ಅಣ್ಣನೆಂತಿಹನೆಂದು ಬೆಸಗೊಳಲ್, ನೀನಾತನಂ
ಕಾಣ್ಬುದೊಳಿತಲ್ತೆನಲ್, ಏಕೆನಲ್, ನೇರಮಂ
ಪೇಳಲಳುಕುತ್ತೆ ಪೋದಿರುಳೊಳಾತಂಗಿನಿತುಮುಂ
ನಿದ್ದೆಯಿಲ್ಲೆಂದನಾ ಬಾಳ್‌ಪಣ್ತವಂ. ಕೆಮ್ಮನೆಯೆ
ಕುಳ್ತಿರಳ್ ಮೂರ್ ಚಣಂ ಮತ್ತಮನಲೆಯ ಪಿತೃ
ಅವಿಂಧ್ಯಂಗೆ: ''ಎಂತಿರ್ಪನೀಗಳ್?''
''ಮಲಗಿಹನ್.''
''ನಿದ್ರಿಪನೆ?'' ''ನಿದ್ರಿಸಿಪ್ಪೊಡಮಲ್ಲಿಯುಂ ನಿದ್ದೆಯ
ಕುಳುಂಪೆಯಂ ಕಲಂಕುತಿರ್ಪುದು ಮತ್ತೆಮತ್ತೆಯುಂ
ಮತ್ತ ಜಾಗ್ರದ್‌ವಾರಣಂ!'' ''ಬಟ್ಟೆದೋರ್ ಆಯೆಡೆಗೆ.''
ಎನುತ್ತೆಳ್ದ ದಶಶಿರಾವರಜನಂ ತಡೆದಾ
ಅವಿಂಧ್ಯನಂ ಲೆಕ್ಕಿಸದೆ, ತನಗೆ ಕೈವೀಸಿದಾ
ಪಿತನ ಮುಖಮುದ್ರೆಯ ಗುರುತ್ವಮಂ ಕಂಡಳ್ಕಿ,
ವಿನಯ ಗೌರವದಿ ಕೊಂಡೊಯ್ದಳವನಂ, ರಾಣಿ
ಮಂಡೋದರಿಯ ಪ್ರೇಮ ಕೈಂಕರ್ಯ ಭೇಷಜದ
ಮಂತ್ರದಿಂ ಮುಗ್ಧತೆಯನಾಂತ ತಾತ್ಕಾಲಿಕದ
ಅಂತಸ್ಥಿತಿಯ ಲಂಕೇಶ ಪರ್ಯಂಕದೆಡೆಗೆ, ಕೇಳ್,

ಪೆಣ್ಮಕ್ಕಳಿಲ್ಲದ ದಶಗ್ರೀವನೆರ್ದೆಯಳ್ಕರೆಯ
ಅರಗಿಳಿಯ ಹರಣಮಂ ಹೊರೆವ ಹಂಜರಮೆನಲ್
ಚೆಲ್ವುಕಣೆಯಾಗಿರ್ದ ಆ ತನ್ನ ಮಗಳನಲೆ.
    ನಮಸ್ಕರಿಸುತ್ತಮಾ ನಮಸ್ಕರಿಸಿದತ್ತಿಗೆಗೆ;
ದಿಗ್ದಂತಿ ದಂತ ರಚನೆಯ ರತ್ನರಮಣೀಯ
ಭವ್ಯಮಂಚದ ಭೀಮವಿಸ್ತಾರಮಂ ತುಂಬಿ
ಹಬ್ಬಿ, ಮಲಗಿರ್ದೊಡಂ ತನ್ನ ಲೋಕಾಕ್ರಮಣ
ವಿಕ್ರಮವ ಬಿಡನೆಂಬವೋಲದನ್ನಾಕ್ರಮಿಸಿ,
ಮುಖಮುದ್ರೆಯಿಂದೆ ನಿದ್ರಾರುದ್ರನೆಂಬಂತೆ,
ಸುಯ್ದಿರ್ದ ರಾಕ್ಷಸಾಧೀಶನಂ ನಿಟ್ಟಿಸುತೆ,
ಹೊಂಗೆತ್ತನೆಯ ಬೆತ್ತದಾಸನದೊಳೊಯ್ಯನೆಯೆ
ತಳ್ತು ಕುಳ್ತನ್ ವಿಭೀಷಣಂ. ಕ್ಷಣಂ, ಕ್ಷಣಂ, ಕ್ಷಣಂ,
ಕಾಲಪುರುಷಗೆ ಕಾಲೆ ಹೆಳವಾಯ್ತೆನಲ್, ಕುಂಟಿ
ಹನಿಯುತಿರ್ದುವು ಹೊರಳಿ, ಯುಗಂ ಯುಗಂ ಯುಗಂಗಳ್
ಪೊರಳ್ವಂತೆವೋಲ್. ದಶಗ್ರೀವನುಸಿರ್ಗಲ್ಲದೆಯೆ
ಬೇರೆ ಸಪ್ಪುಳಕಿಲ್ಲಿ ಕೆಚ್ಚಿಹುದೆ ಕಾಲಿಡಲೆನಲ್
ಹೆಪ್ಪಾಯ್ತು ಹೊತ್ತಿನ ಹೊನಲ್!
                                        ಧೂಪ ಕುಂಡದಿಂ
ಪೊಣ್ಮಿ ಕಕ್ಷೆಯನೆಲ್ಲ ತುಂಬಿರ್ದ ಪರಿಮಳಂ
ಹಗುರಗೈಯುತ್ತಿನಿತು ರವಶವದ ಭಾರಮಂ.
ಗೆಂಟರಿಂದೈತರುತ್ತಿರ್ದ ಪಟ್ಟದಾನೆಯ
ಕಂಠ ಘಂಟಾಸ್ವನಂ ಪರಿಹರಿಸುತಿರ್ದುದಯ್
ಜನ ಶೂನ್ಯತಾ ಭಾವಮಂ, ತನ್ನ ಸಂಗದಿಂ
ಪ್ರಕಟಿಸುತ್ತನ್ಯ ಸಾನ್ನಿಧ್ಯಮಂ. ಅನಿತುಂ
ಮನೋಭೂಮಿ ನೇಮಿ ರಾಜ್ಯಪ್ರಜೆಗಳಾದೊಡಂ
ಕೇಂದ್ರಂ ದಶಗ್ರೀವಾಸ್ಯಮಾತ್ರಮಾದಾ
ವಿಭೀಷಣಪ್ರಜ್ಞೆ ತಾಂ ಪ್ರೇಕ್ಷಿಸುತ್ತಿರ್ದುದಾ
ವದನ ವೇದೀ ಪ್ರವೇಶಂಗೆಯ್ದು ಕೆಲವೊಳ್ತು
ಕುಣಿಯುತ್ತೆ ಮತ್ತೆ ಚಿತ್ತದ ಗುಪ್ತ ನೇಪಥ್ಯ
ಪಾತಾಳಮಂ ಪುಗುವ ದುಃಸ್ವಪ್ನ ಶೈಲೂಷ
ನಾಟ್ಯಂಗಳಂ. ನೋಡುತಿರ್ದಿರ್ದಂತೆ ಮುಖಂ

ಸುರ್ಕ್ಕಿ, ಸೆಡೆತುದು ಪುರ್ಬ್ಬು. ಮಸುಳಿತೆನೆ ದರ್ಪಾರ್ಚಿ,
ಸೋತು ಜೋಲ್ದುದು ಮೀಸೆಯ ನಿಮಿರ್ಕೆ. ತುಟಿಗಳ್
ವಿಕಂಪಿಸಿದುವಚ್ಚರಿಯೆನಲ್ ಭಯಂಗೊಂಡಂತೆ.
ರೋಮರೋಮದಿನೊಳ್ಕಿದುದು ಬೆಮರ್. ಪೇರೊಡಲ್
ನಡುಗೆ, ತೆರೆತೆರೆಯಾಯ್ತು ಪೊರೆಯ ತೆರೆ ಮಂಚದಾ.
ಪಿಂತೆಂದುಮಣ್ಣನೊಳ್ ಕಂಡರಿಯದಾ ಸ್ಥಿತಿಯ
ಕರುಣಾರಸಕೆ ಕರಗುತಿರಲನಲೆಯಯ್ಯಂಃ
ತುಳುಂಕಿದುವಶ್ರುವಾರಿ; ದೈತ್ಯಚಕ್ರೇಶ್ವರಂ
ನಿದ್ದೆಯೊಳಳಲ್‌ತೊಡಗಿದನ್, ಪಸುಳೆವೋಲಂತೆ,
ಸರ್ವಲೋಕ ಭಯಂಕರನ್ ಆ ಮಹೇಂದ್ರಾರಿ!
    ಭೋಂಕನೆಯೆ ಕಣ್ ತೆರೆದನಾವೇಕ್ಷಿಸಿದನಿಲ್ಲ
ಸೋದರನ ಸಾಮೀಪ್ಯಮಂ. ಕಾಣಲನಲಾ
ಕುಮಾರಿ, ಕಿರುನಗೆಯಿಂದೆ ನಾಣ್ಗೆ ತೆರೆಮರೆಯೊಡ್ಡಿ,
ಭಾವಗೋಪನಕೆಳಸಿ ಸುರವೈರಿ ಕರೆದನ್
ಮೃದುಸ್ವರದಿಃ ''ಅನಲಾ!'' ಬಾಗಿದಳ್ ಮೊಗದೆಸೆಗೆ;
ತಳ್ಳಿದಳ್ ತೂಗಿ ಹಿಂದಕೆ, ಮುಂಬರಿದ ತನ್ನ
ನಿಡುಜಡೆಯ ಕಾಳಾಹಿಯಂ; ಓ ಕೊಂಡಳೊಂದು
ಕೋಕಿಲೆಯೆನಲ್. ''ಇರ್ಪೆಯೇನಿಲ್ಲಿ?'' ''ದೊಡ್ಡಯ್ಯ?''
ಕೇಳಿದಳ್ ಗ್ರಹಿಸಲಾರದೆ ಪ್ರಶ್ನಭಾವಮಂ.
''ಏನಿಲ್ಲ! ನೀನೆನ್ನನಗಲಿದೋಲೆನಗೊಂದು
ಕನಸಾದುದಕ್ಕ!'' ನಕ್ಕನಾದೊಡಮವನ ಕಣ್,
ಪುಸಿವೋದ ದುಕ್ಕದಾನಂದಕುಕ್ಕಿದುವೆನಲ್,
ತೆಕ್ಕನೊಳ್ಕಿದುವಶ್ರು ತೀರ್ಥಮಂ. ''ನಿದ್ದೆಗೆಯ್,
ದೊಡ್ಡಯ್ಯ, ನಾನೆಲ್ಲಿಗೂ ತೆರಳ್ದೆನಿಲ್ಲೀಯೆಡೆಯೆ
ಇರ್ದಪೆನ್.'' ''ದಿಟವೊರೆದೆ, ಅಕ್ಕ, ಆರ್ ತೊರೆದೊಡಂ
ನೀನೆನ್ನನುಳಿವಳಲ್ತು!'' ಚವರಿ ಗಾಳಿಗೆ ಮರಳಿ
ಮುಚ್ಚಿದನೆವೆಯನಸುರಪತಿ. ಮಯನ ಮಗಳವನ
ಹೊದ್ದುದಂ ತಿದ್ದಿದಳ್. ನೋಡಿದಳನಲೆ ತನ್ನ
ತಂದೆ ಕುಳ್ತೆಡಗಿಂಗಿತಾಕ್ಷಿ. ಬಿಸುಸುಯ್ಯುತ್ತೆ,
ನೊಂದು, ತನ್ನೊಳಗೆ ತಾಂ ಬೆಂದನು ವಿಭೀಷಣಂ.
    ಮತ್ತೆ ತೆಕ್ಕನೆ ತೆರೆಯುತೆವೆಗಳಂ, ಬಿಕ್ಕಳಿಸಿ

ಬೆಸಗೊಂಡನಕ್ಕರೆಸುಳಿಗೆ ಸಿಕ್ಕ ರಕ್ಕಸಂ:
''ಅಕ್ಕ, ನಿನ್ನಯ್ಯನೆಮ್ಮಂ ಬಿಡಲ್?'' ''ಬಿಡುವನೇನ್
ನಿನ್ನನ್? ಒಡಹುಟ್ಟಿದವನೆನ್ನ ಪಡೆದಯ್ಯನ್?''
''ನೀನೆ ನೋಡುವೆ, ಅಕ್ಕ, ತೊರೆದಪನ್!'' ''ದೊಡ್ಡಯ್ಯ,
ತೆಗೆ ಈ ತೊದಲ್ ನುಡಿಗಳನ್! ಬಿಡುವನೆಂದೇಕೆ
ಕೆಮ್ಮನೆಯೆ ಶಂಕಿಪ್ಪೆ? ಕಾಣ್, ನಟ್ಟು ಕುಳ್ತಿಹನ್,
ಈ ಬಳಿಯೆ, ನಿನ್ನೆಡೆಯೆ, ಇಂದು ಪೊಳ್ತರೆಯಿಂದೆ!''
ಎನುತೆ ಕೈತೋರ್ದನಲೆಯಿಂ ಸಹೋದರನೆಡೆಗೆ
ದಿಟ್ಟಿಯಂ ಹೊರಳಿಸಿದಸುರರಾಜನಾನನದ
ಭಾವ ಪರಿವರ್ತನೆಗೆ ಹಮ್ಮೈಸಿದರು ಅನಲೆ ಮೇಣ್
ಮಂಡೋದರಿಯರಿರ್ವರುಂ, ನಟ್ಟು ನಿಲ್ಲುತೆ
ಮರಂಬಟ್ಟರೋಲ್!
                                        ತನ್ನ ಮೃದುಹೃದಯದೊಂದು
ದೌರ್ಬಲ್ಯಮಂ, ಗುಪ್ತಮಂ, ಕಳ್ದಡಗಿ ಕಾಣ್ಬನಂ
ಕಾಣ್ಬ ಕಲಿಯಾತ್ಮದಮೃತಂ ಕಾಳಕೂಟಕ್ಕೆ
ತಿರುಗುವೊಲ್ ಕ್ರೂರವಾಯ್ತಾ ಕರ್ಬುರೇಂದ್ರನ
ಭುಗಿಲ್ ಕೋಪ ಕರ್ಕೋಟಕಂ: ''ಬಿಟ್ಟರಾರೆನ್ನ
ಬಳಿಗೀ ಕುಲದ್ರೋಹಿಯಂ, ಶತ್ರುಮಿತ್ರನಂ,
ಗೃಹವೈರಿಯಂ, ಗರುಂಕೆ ಮುಸುಂಕಿ ಕಣ್ಗೊಳಿಪ
ವಂಚನೆಯ ಶಿಥಿಲ ಮಲಕೂಪಮಂ?. . . ಅವಿಂಧ್ಯಾರ್ಯ!''
ಕೂಗಿದನು ದಶಕಂಠನಾ ಬಿರುದ ಸಾರ್ಥಕತೆ
ಸರ್ವ ವಿಶ್ರುತಮಾಗೆ. ''ಕರೆ ಅವಿಂಧ್ಯನ, ಅನಲೆ!''
ಎಂದಾರ್ದನನಿತರೊಳೆ ಬಂದಾತನಂ ಕಂಡು,
''ನೀಮೆಲ್ಲರೆನ್ನ ಕೊಲೆಗೊಳಸಂಚನೊಡ್ಡಿ ಈ
ರಾಜ ವಿದ್ರೋಹಿಯಂ ರಾಜನರಮನೆಗಿಂತು
ಪುಗಿಸಿರ್ಪಿರಲ್ತೆ!'' ತೆರೆ ತೆರೆ ನಡುಗೆ ಬೆಳ್‌ನವಿರ್,
ಕೈಮುಗಿದು ಮುದಿಯನ್ ''ಮಹಾ ಪ್ರಭೂ, ಬಂದವನ್
ಪೌಲಸ್ತ್ಯಜಂ, ಕೈಕಸೆಯ ಕುವರನವರಜಂ
ಕುಂಭಕರ್ಣಂಗೆ; ಮೇಣ್ ದೈತ್ಯ ಚಕ್ರೇಶ್ವರಗೆ,
ನಿನಗೆ, ತಮ್ಮನ್; ತಪಂಗೈದು, ಸದ್ಧರ್ಮಮಂ
ತನ್ನ ಜೀವಿತಕೊಂದು ಜೀವಾತುವೆನೆ ಪಡೆದ

ಸತ್ತ್ವ ತೇಜಂ; ಬ್ರಹ್ಮವರದಿಂ ಚಿರಂಜೀವಿ.
ಅಗ್ರಜಕ್ಷೇಮ ಕಾತರನಾಗಿ ಬಂದೀತನನ್
ತಡೆವುದಶುಭಂ, ದೇವ, ಸೈಪಿನಂತಿಪ್ಪನನ್,
ಮೇಣನಲೆಯೀ ಬೊಪ್ಪನನ್.''
ಕೇಳ್ದು, ಕಣ್‌ನಟ್ಟು,
ಸುಯ್ದನಸುರಂ. ಮತ್ತೆ, ಮಂಡೋದರಿಯನೊಮ್ಮೆ,
ಬಳಿ ಬಾಗಿ ನಿಂದಳುತ್ತಿರ್ದ ಅನಲೆಯನೊಮ್ಮೆ
ನೋಡಿದನೆರ್ದೆಯ ಮರುಕಮುಕ್ಕಲ್ಕೆ. ಬಿರುಕೊಡೆದು
ಸೀಳಾಗಲಿಪ್ಪ ತನ್ನಾತ್ಮದಿಕ್ಕುಳದಲ್ಲಿ
ಸಿಲ್ಕಿ ಲಿವಿಲಿವಿಯೊದ್ದುಕೊಳುತಿರ್ದ ಕುದಿಬಗೆಯ
ರಾವಣಂ ತೆಕ್ಕನೆದ್ದನ್; ಪಿಡಿದು ಬರಸೆಳೆದು
ತಕ್ಕಯ್ಸಿ, ಸಂತೈಸಿ, ಮುದ್ದಾಡಿದನ್ ತನ್ನ ಆ
ಪ್ರೀತಿಪುತ್ಥಳಿಯನಲೆಯಂ: ''ಅಳದಿರಳದಿರೌ,
ಅಕ್ಕ! ಸಾವಪ್ಪೊಡಂ ನನಗೆ, ನಿನಗೆಸಗೆನಾಂ
ನೋವಪ್ಪುದಂ!'' ಎನುತೆ, ತನ್ನ ಸೆಜ್ಜೆಗೆ ಸೆಳೆದು
ಕುಳ್ಳಿರಿಸಿ, ತಾನವಳ ಮೆಯ್ಯೊತ್ತಿನೊಳೆ ಕುಳಿತು,
ಮೌನದಿಂದೆಲ್ಲಮಂ ನೋಡುತಿರ್ದನುಜನಂ
ಕುರಿತು ಶಾಂತಧ್ವನಿಯ ದನುಜೇಶ್ವರಂ: ''ಅನಲೆ
ನಿನ್ನ ಮಗಳಲ್ತೆನ್ನವಳ್! ಇವಳೆನ್ನ ಕಾಪಿಡುವ
ದೇವಿ!'' ಅಗ್ರಜಾತ್ಮೋದ್ಧಾರಮಂ ಭಾವಿಸುತೆ
''ಆ ಪುಣ್ಯಮೆನಗಕ್ಕೆ!'' ಎಂದನು ವಿಭೀಷಣಂ.
ತಿಳಿನಗೆಯ ಸುಳಿ ಸುಳಿದುದಲ್ಲಿರ್ದರೆಲ್ಲರ
ಮೊಗಂಗಳೊಳ್; ನಗೆವೆಳಗಿಗುದ್ಭವಿಸಿದತ್ತಲ್ಲಿ
ಮೈತ್ರಿಯ ನೆಳಲ್.
''ಪುಣ್ಯಪ್ರಚೋದಿಯೆನಗಿದೊಂದೆ
ಸೌಂದರ್ಯಮನಲೆಯೀ ಮುದ್ದು ಚೆಲ್ವು!'' ಎಂದಾ
ದಶಗ್ರೀವ ಚಿಂತೆ ಅಂತರ್ಮುಖತೆಯಾಂತಿರಲ್,
''ತಾಯ್ ಸರಮೆ ಗಂಧರ್ವಕನ್ಯೆ, ತಂದೆಯುಮಂತೆ
ಸತ್ತ್ವನಿಧಿ! ಕುವರಿಯಿಂತಿರ್ಪುದೇಂ ಸೋಜಿಗಮೆ?''
ಎಂದವಿಂಧ್ಯಂ, ತನ್ನೊಳಗೆ ತಾನ್ ''ಮಗಳ್ ನಿನಗೆ
ಪುಟ್ಟಿರ್ದಳಿರ್ಪೊಡೆಲ್ಲಿಯದೆಮಗೆ ಮೇಣೆಮ್ಮ

ಲಂಕೆಗೀ ತೋರ್ಪ ದುರ್ಮಂಗಳಂ? ಪೆಣ್ಗಳಂ
ಪೆತ್ತು ಪಡೆಯದ ರುಜೆಗೆ ಪೊತ್ತಾದೊಡಂ ಪಡೆವ
ಭೇಷಜಮೆ ರೋಗಕಾರಣಮಾಗಿ ನಿನ್ನತುಲ
ಪುರುಷಕಾರದ ತೇಜಮಂ ತುತ್ತುಗೊಳ್ಳುತಿದೆ!''
ಎನುತಿರಲ್, ಕಂಡುದು ವಿಭೀಷಣನ ಕಣ್‌ಸನ್ನೆ:
ತೆರಳಿದನು ಮೆಲ್ಲನಲ್ಲಿಂ.

"ಮನ್ನಿಸೆನ್ನನ್,
ಮಹೇಂದ್ರಾರಿ. ನಿನ್ನೆ ನಾನಾಡಿದುದೆ ನಿನ್ನೀ
ಮನಃಸ್ಥಿತಿಗೆ ಕಾರಣಂ ತಾನಪ್ಪೊಡದು ದಿಟಂ
ನಿಷ್ಕಾರಣಂ. ನಿನ್ನಭ್ಯುದಯಮಲ್ಲದೆನಗೆನ್ನ
ನಾಲಗೆಗೆ ಬೇರಿಲ್ಲ ಗುರಿ. ಸವಿಯನೊರೆಯದಿರೆ
ಶತ್ರು ಎಂಬರೆ ತಿಳಿದವರ್? ಈ ಜ್ವರಭ್ರಾಂತಿ
ತೊಲಗೆ, ಸಾವಧಾನದಿ ಮಥಿಸಿ ನನ್ನೆಂದುದಂ,
ನಿರ್ಣಯಿಸು ಮುಂಬಟ್ಟೆಯಂ, ಬಾಳ್ವ ಬಟ್ಟೆಯಂ.''
ಒಯ್ಯನೆ, ಅನ್ಯೆಚ್ಛಿಕವೆನಲ್ಕೆ, ಸಡಿಲ್ದುದು ತಳ್ಕೆ
ಸಹೋದರನ ಸುತೆಯ ತನುವಿಂ. ಅಂತರಂಗದೊಳುಳ್ಕೆ
ಉರಿವವೋಲಾಯ್ತಸುರನಾ. ಹುಬ್ಬುಗಂಟಿಕ್ಕಿ
ತಮ್ಮಂಗೆ: "ಸಮನಿಸಿದೆ ಸಮರಂ. ಸಮುದ್ರಮಂ
ದಾಂಟೆ ಹರುವಂ ನೆನೆಯುತಿಪ್ಪನ್ ಮಹಾವೈರಿ.
ತಿಲಮಂ ತುಲಾದಂಡಕೇರಿಪ ಕಲೆಗಿದಲ್ತು
ಪೊಳ್ತು. ನೀಂ ಮಹಾಕಲಿ. ನಿನಗೆ ಬಾಣಗಳೆಲ್ಲ
ಬ್ರಹ್ಮಾಸ್ತ್ರಗಳ್. ಕುಲವನಂತೆಯೆ ದೇಶಮಂ
ಸಲಹುವುದು ಕಲಿತನಕೆ ಸಲ್ಲಕ್ಷಣಂ. ನಿನಗೆ
ಮನಮಿರಲ್ ನೆರವಾಗು, ಇರದಿರಲ್, ಇರದಿರಲ್,''
ತಳುವಿದನೆರಳ್ ಚಣಂ ತರಿಸಲ್ಪನಂತೆವೋಲ್,
ಮತ್ತೆ ದೃಢವಾಣಿಯಿಂ "ರಾಜಶಾಸನವಿರ್ಪೊಡಂ,
ಸೋದರನ ಕೊಲೆಗೆ ಕಾರಣಮಪ್ಪ ದುರ್ಯಶಕೆ
ಪೇಸುವೆನ್... ಮನಮಿರಲ್ ನೆರವಾಗು. ಇರದಿರಲ್
ಲಂಕೆಯನುಳಿದು ಪೋಗು. ಅನ್ಯ ವಾದಕ್ಕಿಲ್ಲಿ
ಕೇಳಿನಿತುಮನುವಿಲ್ಲ... ನನ್ನ ಮಾರ್ಗಂ ನನಗೆ;
ನಿನ್ನದು ನಿನಗೆ!'' "ಕಟ್ಟಕಡೆ ನಿರ್ಣಯವೊ?'' "ಕೊಟ್ಟ

ಕೊನೆ ನಿರ್ಣಯಂ!'' ''ನಿನಗೊಳ್ಳಿತಕ್ಕೆ! ಸದ್ಬುದ್ಧಿ
ಬರ್ಕೆ! ತಂದೆಯ ತಪದ ಮೈಮೆಯಿಂದಪ್ಪೊಡಂ
ನಿನ್ನಾತ್ಮಕುದ್ಧಾರಮಿರ್ಕೆ! ಪೋಪೆನಿಲ್ಲಿಂದೆ,
ಬೀಳ್ಕೊಡಿಮ್!'' ''ಎತ್ತಣ್ಗೆ?'' ''ಅನಿಶ್ಚಿತಂ.'' ''ಕಡಲಾಚೆ
ದಡದೆಡೆಗೊ?'' ''ಏನರ್ಥಮದಕೆ?'' ''ಅರಿದಿದೆ ನಿನಗೆ;
ನೀಂ ಪೇಳಲಕ್ಕುಮಯ್!'' ''ನೀನಿನಿತು ಕೀಳ್‌ಮನನ್
ಎಂದರಿದೆನಿಲ್ಲಿನ್ನೆಗಂ!'' ''ಪರಸ್ಪರಮಲ್ತೆ ಪೇಳ್
ಆ ಅರಿವು!'' ''ನಮಸ್ಕಾರ!'' ಎಂದೆದ್ದು ನಡೆದಿರೆ
ವಿಭೀಷಣಂ, ಮೇಲೆಳ್ದಳನಲೆ. ಕಂಡಾಕೆಯಂ
ತೆಕ್ಕನೆಳ್ಚತ್ತನೊಲ್ ರಾವಣಂ: ''ಆಜ್ಞೆಯಿಂ
ಸಾಧ್ಯಮಪ್ಪೊಡಮಿದನ್ ಬೇಡುವೆನ್. ಅನಲೆಯಂ
ಕೊಂಡೊಯ್ದು, ಸುಕುಮಾರಿಯಂ ಕಠಿನಕೊಡ್ಡದಿರ್.''
''ಮನ್ನಿಸೆನ್ನನ್; ತಂದೆಯೊಡವೋಗಿ, ಧರ್ಮಮನ್
ಸೇವಿಪೆನ್.'' ಎಂದನಲೆಗೆಂದನ್ ದಶಾನನಂ,
''ಇಲ್ಲಿರ್ದ್ದೆ ಧರ್ಮಕ್ಕೆ ಸೇವೆಗೆಯ್!'' ''ಧರ್ಮಮಂ
ಪೊರಗಟ್ಟಿ ಸೇವಿಪ್ಪುದೆಂತು?'' ಪರಿಹಾಸ್ಯಕೆನೆ,
ಅಸುರನಾಕೆಯ ಕಯ್ಯನಾಂತು: ''ನನ್ನನ್ನರಂ
ನಿನ್ನನ್ನರುಳಿಯೆ, ಧರ್ಮಮುದ್ಧಾರಮಾದಪುದೆ?
ನಿನ್ನಯ್ಯಗಿಂ ಮಿಗಿಲ್ ನೀನ್ ವೇಳ್ಕುಮೆನಗಲ್ತೆ?''
''ಬೊಪ್ಪನಪ್ಪಣೆಯೆನಗೆ ಬಟ್ಟೆ.'' ಎನುತ್ತಾ ತರಳೆ
ನಿಂತಿರಲ್ ಪಿತೃಚರಣಮೂಲಮಂ ನಿಟ್ಟಿಸಿ,
ವಿಭೀಷಣಂ: ''ಪಿರಿಯಯ್ಯನೆಂಬುದೆ ದಿಟಂ, ಮಗಳೆ,
ನೀನಿರಲ್ ವೇಳ್ಕುಮದೆ ನೀತಿ.'' ''ತೊರೆವೆನೆ ನಿನ್ನ
ಸಾನ್ನಿಧ್ಯಮಂ?'' ''ನಿನಗೆ ತಡೆಯುಂಟೆ, ಪೇಳಕ್ಕ?
ನಿನ್ನಯ್ಯನೆಲ್ಲಿರ್ದೊಡಲ್ಲಿಗೆ, ಏಗಳಾದೊಡಂ,
ಪೋಗಿ ಬರಲನುಮತಿಯನಂತೆಯೆ ವಿಮಾನಮನ್
ಪುಷ್ಪಕವನೀವೆನ್!'' ಎನುತ್ತವಳ ಬಳಿ ನಿಂದ
ದಶಶಿರನ ಆ ದೈನ್ಯದೊಳ್ ದನುಜನುದ್ಧಾರಕರ
ಭಾವಬೀಜವ ಕಂಡು ಹರ್ಷಿಸಿ ವಿಭೀಷಣಂ
ಬೀಳ್ಕೊಟ್ಟನಣ್ಣನರಮನೆಯ ಪೆರ್ಬಾಗಿಲಂ!

## ಸಂಚಿಕೆ ೯

# ಮರಣಮಥವಾ ಶರಧಿತರಣಂ

ಬಡಬನಂತಶ್ಶಿಖಿಗೆನಲ್ ಪುಡುಪುಡನೆ ಕುದಿಯಲ್
ಕಡಲ್, ನಡುಗಿ ವರುಣಂ ವಿಶ್ವಕರ್ಮಂಗೆ: ''ಜವದಿ
ನಡೆಯಯ್, ದಿವೌಕಸರ ಶಿಲ್ಪಿ. ಬರ್ದುಕಿಸು ಜಲಧಿ
ಜೀವನವ. ಕಾಯಿ ಜಲಚರ ಜೀವರಾಶಿಗಳ.
ಬೇಗದಿಂದಾ ಮಹೇಂದ್ರನ ಚರಣತಲವರ್ತಿ
ಶರಧಿವೇಲೆಯನಿರದೆ ಸೇರಯ್, ಕಪಿಧ್ವಜಿನಿ
ಬೀಡುಬಿಟ್ಟೆಡೆಗೆ. ವಿಸ್ತೃತ ಸಲಿಲ ಸೀಮೆಯ
ಸರಿತ್ಪತಿಯ ಸಮ್ಮುಖದೊಳಾ ಸಿಕತನೇಮಿಯ
ಮಹನ್ಮಂಚದೊಳ್ ಕುಶಾಸ್ತೀರ್ಣದೊಳ್, ಮಖಸುಕೃತ
ವೇದಿಯೊಳ್ ಮಂಡಿಪ ಹುತಾಶನನವೋಲಿರ್ದು
ಅನಶನವ್ರತಿಯಾಗಿ, ಸತಿಗಾಗಿ ತಪಮಿರ್ಪ,
'ಮರಣಮಥವಾ ಶರಧಿ ತರಣಂ' ಪ್ರತಿಜ್ಞೆಯಿಂ
ಸರ್ಪಭೂಷಣ ಭಾಳನೇತ್ರ ಭೀಷಣನಾಗಿ
ಲೋಕಪ್ರಳಯಕರ ಭಯಂಕರಕೆ ಕಾರ್ಯಕ್ಕೆ
ಕೋಪ ಚಾಪಕೆ ಘೋರ ಚಿತ್ತನಾರಾಚಮಂ
ಸಂಧಾನಗೈವ ವಿಕಟಕ್ರಿಯಾ ನಿಕಟನಂ
ಬಳಿಸಾರ್, ಕಪೀಂದ್ರ ಸಂಕಟ ತಪ್ತ ಸಂವೀತ
ಕಟಕನಂ! ಪ್ರೇಮನಿಷ್ಠೆಯ ಪರಮ ತಪದಿಂ
ತ್ರಿಲೋಕ ಗೌರವಕರ ಪವಿತ್ರಂಗೆ ಮೈದೋರ್,
ಮಹರ್ಷಿ ಪೂಜಿತ ರಾಮ ಭವ್ಯಂಗೆ! ಕಯ್‌ಮುಗಿದು,
ಬಿನ್ನಯ್ಸಿ, ತಡೆ ರೌದ್ರಮಂ. ನಿನ್ನ ಬಲ್ಲಂತೆ,
ಪ್ರಕೃತಿ ಮರ್ಯಾದೆಯುಂ ಕಿಡದಂತೆ, ಅಂಭೋಧಿ

ಗಾಂಭೀರ್ಯಕೂನ ಬರದಂತೆ ಕಪಿಸೇನೆಯಂ
ದಾಂಟಿಸು ಸಮುದ್ರಮಂ; ತಪ್ಪಿಸು ಅಕಾಲದೀ
ಲಯಕಾಲಮಂ, ಹೇ ದೇವಶಿಲ್ಪಿ!'' ಕಡಲೊಡೆಯ
ವರುಣ ವಿಜ್ಞಾಪನಾಜ್ಞೆಗೆ ವಿಶ್ವಕರ್ಮಂ,
ದಿವೌಕಸರ ಶಿಲ್ಪವಿದ್ಯೆಗೆ ಪರಮ ಮಂತ್ರಗುರು,
ವಿಜ್ಞಾನಿ, ಅಲೌಕಿಕ ಪ್ರತಿಭಾಸಮನ್ವಿತಂ
ಬಾಗಿ ಸಾಗಿದನೂರ್ಮಿ ತೇಜಿಗಳೆಳೆವ ಸುಧಾ
ಫೇನ ಸುಂದರ ಕೂರ್ಮರಥದೊಳ್ ಸಮೀರಣನ
ಸಾರಥಿತ್ವದ ಸಿಡಿಲ ಚಾಟಿಯ ತಟಿಚ್ಚಟುಲ
ಸೂಟಿಯಲಿ!
''ದಿವಸತ್ರಯಂ ಮುಗಿದುವಿನ್ನುಮೀ
ಸಾಗರೌದಾಸೀನ್ಯಮಿರ್ಪುದಚ್ಯುತಮೆನಲ್,
ನಗುವವೋಲೆನ್ನೆರ್ದೆಯ ದುಃಕಮಂ ತನ್ನೀ
ತರಂಗಾಟ್ಟಹಾಸದಲಿ! ಸಗರನಿಂದಾದನೀ
ಸಾಗರಂ. ಮರೆತನುಪಕಾರಮಂ ನಮ್ಮವರ್
ಗೈದುದನ್. ವಿಸ್ಮೃತಿ ಕೃತಘ್ನರಿಗೆ ಸಹಜಮಯ್,
ಸೌಮಿತ್ರಿ. ಚಾಪಮಂ ತಾ!'' ಆಗಳಾಗಳೆಯೆ
ನಸುಕು ನಸುಗಣ್ದೆರೆಯುತಿರ್ದಾಗಸದ ಕಡೆಗೆ
ನೋಡಿ, ನಿಡುಸುಯ್ದು, ಸೋದರ ಹಸ್ತದಿಂ ತನ್ನ
ಕೋದಂಡಮಂ ಕೊಂಡು ಮೇಲೇಳುತಾ ಶ್ಮಶ್ರು
ಭೀಷ್ಮಾನನಂ ಮತ್ತೆ ತನಗೆ ತಾನೆಂಬವೋಲ್:
''ನಡೆವೆನೀ ತಡಿಯಿನಾ ತಡಿಗೆ. ಬಟ್ಟೆಗೊಡದಿರೆ
ತುಡುವೆನಂಬಂ ಬಡಬ ಸಂಕಾಶಮಂ. ಕುಡಿದು
ಬರಿಗೆಯ್ವುದೀ ಕಡಲಿನೊಡಲಂ. ಕಪೀಂದ್ರ, ಕೇಳ್,
ನನ್ನ ಬೆಂಬಳಿವಿಡಿದು ಬರಲೀ ಮಹಾ ಸೈನ್ಯ
ಸಾಗರಂ!''
ತನ್ನಾತ್ಮಸಾಮರ್ಥ್ಯ ಸರ್ವಮಂ
ತತ್ಕಾರ್ಯಕಾಹ್ವಾನಿಸುತ್ತಾ ಮಹಾಯೋಗಿ
ದರ್ಭಾಸ್ತರಣದಿಂ ಮಳಲ್ಗಿಳಿದು ನಡೆದನೊ
ಸರಿತ್ಪತಿಯ ಮೇಲೆ! ಏದಿತು ಮಹೇಂದ್ರಾಚಲ
ಶಿಲಾಹೃದಯ ಪಿಂಡಂ. ಅರಣ್ಯರೋಮಾಂಚನದಿ

ಗದಗದಿಸಿದುದು ಪೃಥಿವಿ. ಕುದಿದುದೈ, ಬೆದರ್ದುದೈ
ರೋದಿಸಿದುದೈ ಮಹಾಂಭೋಧಿ, ಆಘೂರ್ಣಿತ
ತರಂಗೌಘ ಕರಂಗಳಂ ಮುಗಿದು, ಕರುಣಿಸು ಶರಣು
ಶರಣೆಂಬವೋಲ್! ಕ್ಷಮಾಯಾಚನೆಗೆ ಕಾಲ್ವಿಡಿದು
ಬೇಡಲೆಳಸಿಯುಮದಂ ಸೋಂಕಲಂಜುತೆ ಸೆಡೆತು
ಹಿಂಜರಿಯುತಿರ್ದುದೆಂಬಂತೆ, ಮುನ್ನೀರ್‌ಮೇರೆ
ಸೀತಾಪತಿಯ ಪಜ್ಜಪಜ್ಜೆಗೆ ಪೆಡಂಮ್ಮೆಟ್ಟಿ
ಓಡತೊಡಗಿದುದೊ, ಹಾವಾಡಿಗನ ಕೈಯೊಳಿಹ
ಗರುಡ ಮಂತ್ರದ ಮಣಿಗೆ ಮಣಿದಳ್ಕಿ ಹೆಡೆಸೆಡೆವ
ಫಣಿಯಂತೆವೋಲ್! ಸುಟ್ಟುರೆಯ ಕಡು ಕಡೆಹದೊಂದು
ಕಟ್ಟೆಸಕಕೆಂತು ಮರುಭೂಮಿಯೊಳ್ ತೆಕ್ಕನೆಯೆ
ಸ್ತೂಪ ಭೀಮಂ ರಾಶಿಗೊಳ್ವುವುವೊ ರಕ್ಕಸ
ಮಳಲ್ವೆಟ್ಟುಗಳ್ ಅಂತೆವೋಲ್ ಕಾಳಜಲಶರಧಿ,
ಮೆಯ್ಯ ಮುರಿಯುವ ತೆರದಿ ತೆರೆಮಗುಳ್ಚುತೆ, ಭರದಿ
ಮಲೆತುದು, ಮಹೇಂದ್ರ ಶಿಖರಂಗಳುಂ ನಾಣ್ಚೆದರಿ
ಗೋಣ್ತಾಳ್ಗುವೋಲ್!
ಕೇಳ್ದುದನಿತರೊಳಬುಧಿರಾವಮಂ
ಮೀರ್ವಂತೆ ವರುಣನಟ್ಟಿರ್ದಮರ ಶಿಲ್ಪಿಯ
ಮಹಾಧ್ವನಿ ರಘೂದ್ವಹಂಗೆ:
''ನಿಲ್, ತಾಳ್, ಮಹಾತ್ಮಾ,
ತಡೆ, ತಡೆ ಅಕಾಲಪ್ರಳಯ ಕರ್ಮಮಂ! ಕೊಳ್ಳಿದೆಕೊ
ವರುಣದೇವನ ನಮಸ್ಕಾರಮಂ! ದೂತಂ;
ದಿವೌಕಸರ ಶಿಲ್ಪಿಯೆಂ; ವಿಶ್ವಕರ್ಮಂ. ನಿನಗೆ
ಪೇಳಲೆಂದೈತಂದೆನೀ ಉದನ್ವಂತನಂ
ನಿಯತಿ ಮರ್ಯಾದೆಯಿಂದುತ್ತರಿಪ ಉತ್ತಮ
ಉಪಾಯಮಂ. ಉಪಸಂಹರಿಸು ನಿಯತಿನಿಯಮದ
ತಿರಸ್ಕಾರಮಂ, ಪ್ರಾಜ್ಞ! ಸಮುದ್ರನಪರಾಧಿಯೆ?
ಋತಾಜ್ಞೆಯಂಪರಿಪಾಲಿಪೊರ್ವನಧಿಕಾರಿ ತಾನ್.
ಕಾರ್ಯಗೌರವದಿಂದೆ, ತೀವ್ರ ತಪದಿಂದೆ ಮೇಣ್
ನಿಜಮಹಿಮೆಯಿಂ ನಿನಗೆ ಲಭ್ಯಮಾಗಿರ್ಪುದು
ಋತಪ್ರಭುತ್ವಂ ದಿಟಂ. ಆಳ್ವನುಲ್ಲಂಘಿಪುದೆ

ಲೀಲೆಯೊಳಗಿರ್ದುಮಾ ಸೂತ್ರಸಮಯಂಗಳಂ
ಸುಪ್ರಕಟಮಿಂತು?''
ನಿಂದೆಡೆ ನಿಂದು, ಕಣ್ಣಾಲಿ
ತನ್ನಿದಿರ್ ನಟ್ಟು, ಆಲಿಸುತಿರ್ದ ರಾಮಂಗೆ,
ಒರ್ವನಿಗೆ, ತೆರೆ ಮಸಗಿದಂಬುಧಿಯ ತುಂತುರಿನ
ಹೊಗೆಯ ಮುಗಿಲಿನ ನಡುವೆ ಮೈದೋರ್ದುದಸ್ಫುಟಂ
ಗಾತ್ರಮಾ ಸುಮನಸರ ವರಶಿಲ್ಪಿಯಾ. ಮುಗಿದ
ಕೈತೋಳ್ಗಳಂ ಮಳೆಯ ಬಿಲ್ಲವೊಲ್ ನೆಗಹುತಾ
ವಿದ್ಯುದ್‌ವಿಯನ್‌ಮೂರ್ತಿ ಮತ್ತಮೊರೆದತ್ತಿಂತು
ವರುಣನ ಹಿತಾದೇಶಮಂ:
''ತಿರುಗು ತೀರಕೆ, ತರಣಿ
ವಂಶೋದ್ಭವನೆ; ಮರಳಲಂಬುಧಿಯ ಮರ್ಯಾದೆ
ತನ್ನ ಮುನ್ನಿರ್ದುನ್ನತಿಗೆ. ನಿನ್ನ ಸೇನೆಯೊಳ್
ಇರ್ಪನೊರ್ವಂ ವಸನಧವಳಂ; ಪೆಸರ್ ನಳಂ.
ಬರ್ದಿಲರ ಬಡಗಿಗೆನಗೆ ಪುಟ್ಟಿದಾತಂ; ನನ್ನ
ಕಲ್ಲೋಜತನಮವಗೆ ಗುಪ್ತವರಮಿರ್ಪುದಯ್.
ವಿರಚಿಸವನಿಂ ಮಹಾಸೇತುವಂ, ರಾವಣ
ವಿನಾಶಕೇತುವನವನಿಜಾ ಕ್ಷೇಮಕಾಮಿನೀ
ಸೀಮಂತ ಸಂಕೇತಮಂ. ಪ್ರಚೋದಿಸುವೆನಾಂ
ಹೃದ್ಯಾಮಿಯಾತನಾತ್ಮದ ಶಿಲ್ಪಬೋಧಮಂ.
ಮತ್ತಮಂತರ್ಯಾಮಿಯಾಗಿ ವಾನರರೆಲ್ಲರೊಳ್
ತನುಗಳೊಳ್ ಶಕ್ತಿ, ಮನದೊಳ್ ಯುಕ್ತಿ, ಕಾರ್ಯದೊಳ್
ಭಕ್ತಿ ನೂರ್ಮಡಿಯಪ್ಪವೊಲ್ ಮಾಳ್ಪೆನದ್ಭುತಮೆ
ತಮತಮಗೆ ಸಾಮಾನ್ಯಮಾಗಿ ತೋರ್ಪಂತೆವೋಲ್.
ಕಾಣ್, ಜಾನಕೀಜಾನಿ: ನಿನ್ನ ಮೇಣ್ ನಿನ್ನಾ
ಕೃಶಾಂಗಿ ಸೀತಾ ಪ್ರೇಮಮಾಗಳೆಯೆ ವಿರಚಿಸಿಹ
ಸೂಕ್ಷ್ಮರೂಪದ ಮಹಾಸೇತು ಕಂಗೊಳಿಪುದದೊ
ತನ್ನ ದೀರ್ಘಾಯತದ ವಿಸ್ತೀರ್ಣಮಂ ಬೀಸಿ,
ಆ ಪಾರದಿಂದಮೀ ಪಾರಂಬರಂ, ಈ
ಮಹಾರ್ಣವಕೆ! ತುಂಬಿಸುವನಾ ಪ್ರಾಣಸೇತುವೆಯ
ಪ್ರೇತಪಂಜರಕೆನ್ನ ಪುತ್ರಂ ಜಡಂಗಳಂ,

ವೃಕ್ಷಂಗಳಂ, ಮೇಣ್ ಶಿಲಾ ಖಂಡಂಗಳಂ, ಬಲ್ಮೆ
ನೂರ್ಮಡಿಸುವೀ ವಾನರರ ಶತಶತ ಸಹಸ್ರ
ದೋರ್ದಂಡ ಭೀಮರ್ಕಳಿಂ. ಅತೀಂದ್ರಿಯ ಭಾವ
ಪಂಜರಮೆ ತಾನಾಧಾರಮಲ್ತೆ ಸೇಂದ್ರಿಯ ಸೃಷ್ಟಿ
ರಚನೆಗೆ? ಅದಾಗಳೆಯೆ ನಿರ್ಮಿತಂ ನಿರ್ಮ್ಮಿರ್ವರಿಂ:
ಕಾಣ್, ರಘೂದ್ವಹ, ರಾಮಸೀತಾರಚಿತ ಸೂಕ್ಷ್ಮತನು
ಸೇತುವಂ!''
ನೋಡುತಿರೆ ಕರಗಿದುದೊ ಕಣ್ಣೊಳೆಯೆ
ವಿಶ್ವಕರ್ಮನ ಮೂರ್ತಿ! ಗೋಚರಿಸಿತೊಡನೊಡನೆ
ಆ ಪೇಳ್ದ ಭಾವ ಸೇತು ಪ್ರೇತಪಂಜರಂ,
ದಶರಥಾತ್ಮಜ ರೋಮ ಹರ್ಷಣಕರಂ, ಮೇಣ್
ಜಗನ್ನೇತ್ರಾದ್ಭುತಂ! ನೋಡೆ ನೋಡುತೆ, ಹಿಗ್ಗಿ
ಬಿರಿದುದೆನೆ ಚೇತನಂ, ಲಕ್ಷ್ಮಣಾಗ್ರಜ ಮನಕೆ
ಬಡಿದುದಾನಂದದ ಸಿಡಿಲ್. ಸಡಿಲ್ದೊಯ್ಯನೆಯೆ
ಜೋಂಪಿಸಿತೊಡಲ್. ಶಾಂತಮಾಯ್ತುಯ್, ಪವಾಡಕೆನೆ,
ತಕಪಕಿಸುತಿರ್ದಾ ಪೆರುಂಗಡಲ್. ಏನುಮಂ
ಕಾಣದೆಯೆ, ಕೇಳದೇನೊಂದುಮಂ, ಕೆಮ್ಮನೆಯೆ
ಬೆರಗಾಗಿ ರಾಮಚರ್ಯೆಯನೀಕ್ಷಿಸುತ್ತಿರ್ದ
ಕಪಿಮಹಾಸಮಿತಿ ಹಮ್ಮಯ್ಸಿದುದು, ಮೂರ್ಛಿತ
ಮಹೀಪತಿಯನಾಂಜನೇಯನ ತೋಳ ತಳ್ಕೆಯೊಳ್
ಕಂಡು. ಸೀತಾನಾಥನಂ ಪೊತ್ತು ಪಿಂತಿರುಗಿ
ದರ್ಭಾಸ್ತರಣದೆಡೆಗೆ ಗಮಿಸುತಿರ್ದಂಜನಾ
ಸುತನ ಚರಣಾನುಚರನಾದುದೊ ಸುನೀಲಾಬ್ಧಿ
ತನ್ನ ಮುನ್ನಿನ ಮೇರೆಗೆಯ್ದುವತ್ಯಾತುರದಿ,
ಕುದಿವ ಪಶ್ಚಾತ್ತಾಪದಿಂ ಪತಿತ ಸಾಧಕನ
ಹೃದಯವಾದರ್ಶದೆಡೆಗಿನ್ನೊಮ್ಮೆ ಹಂಬಲಿಸಿ
ಮುಂಬರಿಯುವಂತೆ!
ಏರಿದುದಂತೆ ಪೊಳ್ತರೆಯ
ನೇಸರ್, ದಿನೇಶವಂಶಜನ ಸುತ್ತುಂ ನೆರೆದು
ಬೇಲಿಗಟ್ಟಿರ್ದಾ ಕಪೀಂದ್ರರ ನೆಳಲ್ಗಳಂ
ಮಳಲ ಹರಹಿನ ಮೇಲೆ ಪಟ್ಟೆ ಪಟ್ಟೆಯಿನೆಳೆದು

ನಿಡುದೂರಮೆಸೆದು. ತೆರೆದನಕ್ಷಿಯನೊಯ್ಯನೆಯೆ
ಸುಪ್ತನೋಲವಶವಾಕ್. ನೋಡಿ ವದನವ್ಯಥೆಯ
ವಾನರ ಮಹಾ ವಾಹಿನೀಪತಿಗಳಂ, ಸುಯ್ದು,
ಕಣ್ಣಾದನಂಬುಧಿಯ ಕಡೆಗೆ. "ನಳನ ಪೆಸರಂ
ಕೇಳ್ದೆನೈಸಲೆ ದಿವೌಕಸ ಶಿಲ್ಪಿಯಿಂ! ಸೇತು
ರಚನಾ ಸಮರ್ಥನೈಸಲೆ ನಳಂ! ಮಗನಲ್ತೆ
ವಿಶ್ವಕರ್ಮಂಗೆ!" ತನ್ನೊಳಗೆ ತಾನಿಂತೆನುತೆ
ತಿರುಗಿದನು ರಾಮಚಂದ್ರಂ ಮರಳಿ ಕಪಿವರನ
ಕಣ್ಗೆ. ಸಂಧಿಸೆ ನೇರಮಾ ನಳನ ನೇತ್ರಮಂ
ರಾಮನೇತ್ರಂ, ದೀಪಮಿನ್ನೊಂದು ದೀಪಕ್ಕೆ
ದೀಪ್ತಿದಾನಂಗೆಯ್ದುದೆನೆ, ತೆಕ್ಕನುದ್ಭವಿಸಿ
ಬಗೆಯಾಳದಿಂದೆದ್ದುದಯ್, ಬುದ್ಬುದದ ತೆರದಿ,
ಬುದ್ಧಿಯ ಬಹಿರ್ಮುಖಕೆ ವಿಶ್ವಕರ್ಮನ ಮಗನ
ಶಿಲ್ಪಸಿದ್ಧಿಸ್ಮರಣ ಬೋಧಿ. ರೋಮೋದ್ಗಮಂ
ಕಂಪಿಸುತ್ತಿರೆ ತನ್ನ ತನುವಂ, ನವಿರ್ ನಿಮಿರೆ
ಕೇಳ್ದರೆಲ್ಲರ ಮೆಯ್ಗೆ, ಕೈಮುಗಿಯುತಿಂತಾ
ನಳಂ ಮೈಥಿಲೀಪ್ರೇಮಜೀವಿತಗೆ: "ತೊರೆ, ದೇವ,
ತಳ್ಪಂಕಮಂ. ಮರೆತ ಮನದ ನಿಧಿಯೊಂದೆನಗೆ
ಕೈಸಾರ್ದುದೀಗಳಚ್ಚರಿಯೆನಲ್. ಪಿತೃಕೃಪಾ
ಬಲದಿ ಕಟ್ಟುವೆನದ್ಭುತದ ಸೇತುವಂ, ಕೇಳ್, ಈ
ಘೋರಾರ್ಣವದ ದರ್ಪಮಿರ್ಭಾಗಮಪ್ಪಂತೆ!...
ಸ್ತಂಭಿತನವೋಲಪ್ಪನೀ ಸಾಗರಂ! ನೀನೆ
ಕಾಣ್ಬೆಯಯ್... ಬಂಡೆ ತೇಲ್ಪುವು; ಬೃಹತ್ತರುಗಳುಂ
ಮುಳುಗದಿರ್ದ್ದಲ್ಲಿರ್ಪುವಚಲಗಳವೊಲ್ ದೃಢಂ,
ಸುಸ್ಥಿರಂ! ನೀನೆ ಕಾಣ್ಬಯ್... ಇಲ್ಲಿ ನೆರೆದಿರ್ಪ
ಕೀಳ್ಗಳೊಳ್ ಕೀಳ್ಗಳುಂ ಪೊತ್ತುತರ್ಪರ್ ಕಿತ್ತು
ಶೈಲ ಭಾರಂಗಳಂ ಪ್ರಾಕ್ ಶಿಲಾಖಂಡಗಳಂ!
ನೀನೆ ನೋಳ್ಪಯ್... ಬೆಸಸೆನಗೆ; ಬೆಸಸೀ ಮಹಾ
ಕಪಿಧ್ವಜಿನಿಯಕ್ಷೌಹಿಣಿಗಳುತ್ಸಾಹಕೆ! ಕಟ್ಟಿ
ಸೇತುವಂ, ಮುಟ್ಟಿಸುವೆನಖಿಲರಂ ಲಂಕೆಯ
ನೆಲಕೆ, ಶಂಕೆಯಿಲ್ಲದ ನಮ್ಮ ವಿಜಯವೇದಿಕೆಗೆ!"

ಮುಂದೆ ನಡೆದದ್ಭುತವನಾವ ಕವಿ ಬಣ್ಣಿಪನೊ?
ಜೋಲುತೆ ಬಳಲ್ದು ಗರಿಗೆಟ್ಟುದುರದೇ ಮನಂ?
ಭೂಮಾನುಭೂತಿಯಾ ಭವ್ಯದೃಶ್ಯಕೆ ಬೆದರಿ
ತೊದಲದೇ ಜಿಹ್ವೆ? ಬಲ್ಲನಿತೆ ಬಣ್ಣಿಪ್ಪೆನಾಂ
ಕಾಣ್ಬುದಂ, ನನ್ನಿಯಂ, ಕಾಣ್ಮೆಯಿರ್ಪೆಲ್ಲರ್ಗೆ
ಅನುಭವಪ್ರತ್ಯಕ್ಷಮಂ. ಪೇಳ್ವೆನತ್ಯಲ್ಪಮಂ,
ಕಲ್ಲುಮಣ್ಣಂ ಕಡೆದು ಕೊರೆದುಮಪ್ರತಿಮನಂ
ಪ್ರತಿಮಿಸುವವೋಲ್. ಭಾವ ಸತ್ಯವನರಿಯದಿರ್ಪ
ಕಲ್ಪನಾ ಕುಬ್ಜರಿಗಿದಲ್ಪಮಲ್ತುದ್ಯಮಂ, ಕೇಳ್,
ಸೇತು ಬಂಧನ ಬೃಹದ್ದರ್ಶನಂ!
ಪೇಳ್ವುದೇಂ?
ಕೇಳ್ವುದೆ ತಡಂ ನಳನ ವಾಣಿಯಾಶಾ ವಾರ್ತೆ
ಘೇ ಉಘೇ ಘೋಷಮೆಳ್ಚಿಸಿತದ್ರಿನಿದ್ರೆಯಂ
ಬಡಿದಪ್ಪಳಿಸಿತುಪ್ಪವಡಿಸಿತ್ತು ಭೂವ್ಯೋಮ
ತಾಟಸ್ಥ್ಯಮಂ. ಕಂಡುದದ್ಭುತಂ ರಾಮಂಗೆ,
ಕಣ್ ಭೋಂಕನೆಯೆ ಭೂತಕನ್ನಡಿಯಿಕ್ಕಿದಂತೆವೋಲ್:
ಸುರರ ಶಿಲ್ಪಿಯ ವರದ ಮಹಿಮೆಯೋ? ಮೇಣ್, ನಳನ
ನವ್ಯ ಸಿದ್ಧಿಯ ಭವ್ಯ ವಿಕ್ರಿಯೆಯೊ? ಬಳೆದರ್
ಮಹಾದ್ಭುತಕೆ ವಾನರರೊಳತ್ಯಲ್ಪಗಾತ್ರರುಂ,
ಶಿಖರಸಮಮೆಂಬುಪಮೆ ಸೋಲ್ವಂತೆ! ಗಿರಿಗಳಿಗೆ
ಗಿರಿರಾಜನಾಣತಿಯನೀವಂತೆ ಕೈವೀಸಲಾ
ವಿಂಧ್ಯಮಂದರ ಸನ್ನಿಭಂ ನಳಂ, ಮತ್ತೇಭ
ಸಮುದಯಂ ಸಲಗ ಸನ್ನೆಯನರಿತು ನಡೆವಂತೆ,
ನೂಲ್ವಿಡಿದು ನಿಂದರ್ ಕೆಲರ್; ಕೋಲ್ವಿಡಿದು ನಿಂದರ್
ಕೆಲರ್: ಹಿಂಡು ಹಿಂಡೆದ್ದು ಮಲೆಯೇರಿದರ್ ಪಲರ್,
ನದ ನದೀ ಪತಿಗೆ ಸಾರಂಗಟ್ಟುವೊರ್ ಚಲದ
ಬಲದ ವಾನರಕುಲದ ಕ್ಷಿಪ್ರಕಾರ್ಮಿಕಕೌಶಲರ್.
ಬೆಂಡುವೋದುವೊ ಬಂಡೆ ಎನೆ ಮಹದ್ಭಾರದಾ
ಪ್ರಾಕ್‌ಶಿಲಾ ಕಕುದಂಗಳಂ ತಬ್ಬಿ ಪಿಡಿದಲುಗಿ
ಕಿತ್ತು ಪೊತ್ತೆತ್ತಿದರು; ಬೀಸಿದರು ಚೆಂಡೆಸೆದು,
ಕೈಯಿಂದೆ ಕೈಗೆ, ಕಡಲನ್ನೆಗಂ. ಕಿರುಕಳೆಯ

ಪಳುವಾದುವೆನೆ ಬೃಹತ್ತರುಗಳುಂ, ದಿಂಡಲುಗೆ,
ಬರಲಾಗಲೆಲೆಯುದುರೆ, ಹರೆ ಮುರಿಯೆ, ಬೇರುಡಿಯೆ,
ಲರಿಲರಿಲ್ಲೆಂದು ಪರಿದರು; ಬೀಸಿಯೆಸೆದರು
ಕಡಲ್‌ಗಡಿಗೆ. ಭೂಮಿಕಂಪವ ನಗುವ ಘಾತಕೆನೆ
ಧರಣಿ ದಳದುಳವಾಯ್ತು; ಬಯಲಾದುವೈ ಕಾಡು;
ನೆಲಸಮವಾದುವೈ ಬೆಟ್ಟಗೋಡು. ನೀರ್ ಬತ್ತಿ,
ತೊರೆಗಳಿರ್ದೆಡೆ ಕೊರಕಲುಳಿದುವು; ಸರೋವರಂ
ಸಂಭವಿಸಿದುವು ಬೃಹದ್‌ಗ್ರಾವಂಗಳಂ ಕಿತ್ತ
ರುಂದ್ರ ರಂಧ್ರಂಗಳಂ ಬುಗ್ಗೆಚಿಮ್ಮಿದ ಜಲಂ
ತೀವಲ್ಕೆ. ಬಿದಿರ್ಗಾಡೊಳಿರ್ದಾನೆವಿಂಡುಗಳ್,
ಚಂದ್ರಭಾಸ್ಕರಪಥದ ದೇವ ರಥಿಕರ ಕಣ್ಗೆ,
ಕೆಟ್ಟು ಕೆದರಿದುವತುಲ ಗಾತ್ರದ ಕಪಿಗಳಿದಿರ್
ಪರಿವ ಕರಿ ಗೊದ್ದಗಳೊ ತಾಮೆಂಬವೋಲ್! ಒಡಲ್
ಕಡಲ ನೀರ್ಗಳ್ದೊಡೇನುಳಿವುದೈಸಲೆ ಜಸಂ
ಎಂಬ ದಾರ್ಢ್ಯದೊಳಿರ್ದನಾ ಮಹೇಂದ್ರ ಮಹೀಧ್ರಂ,
ಚಣಚಣಕೆ ತಗ್ಗಿ ನೆಲಸಮ ಕುಗ್ಗುತಿರ್ದೊಡಂ
ಹೆಸರ ಹೆಮ್ಮೆಗೆ ಧನ್ಯನೆನೆ ಹಿಗ್ಗಿ!

ಅತ್ತಲಾ
ದಿವಿಜ ಶಿಲ್ಪಿಯ ಮಗನ ನಳನ ನೇತೃತ್ವದಲಿ,
ಸತ್ತ್ವದಲಿ, ಮಂತ್ರಮುಗ್ಧಮಹಾಬ್ಧಿವಕ್ಷದ
ಬೃಹನ್ನೀಲಿಮಾ ಜಲಕ್ಷೇತ್ರದಲಿ, ಸುರಕಲಾ
ಸೂತ್ರದಲಿ, ಹೆಡೆನಿಮಿರಿ ಹರಿವಂತೆ ಹರಿದುದಾ
ಸೇತುಸರ್ಪಂ, ಕ್ಷಣಕ್ಷಣಕೆ ಮುಂಮುಂ ಬೆಳೆದು,
ಭೀಮ ಭವ್ಯಾದಮ್ಯ ರೀವಿಯಲಿ. ಕಲ್ಬಂಡೆಗಳ್
ಬಿಳ್ದ ರಭಸಕ್ಕಂಬುರಾಶಿ ಸೌಳನೆ ಸೀಳ್ದು,
ಕಣವೆ ಬೆಟ್ಟಗಳಾಗಿ ವಾರಿ, ನೊರೆನೊರೆವೋಗಿ
ಬಾಯ್ಬಿಟ್ಟುದಂಭೋಧಿ. ಹೊತ್ತ ಅರೆಬಂಡೆಯಂ
ಹೆಗಲಿಂದೆ ಹಾಯ್ಕಿ, ಮೆಯ್ಗಂಟಿದೆರೆಯಂ ಕೊಡಹಿ,
ಬಲ್ದನಿಯ ಚಪ್ಪಳೆಗಳುಣ್ಮುವೋಲಪ್ಪಳಿಸಿ
ತೋಳ್‌ಗಳಂ, ಜಂಘೆ ಧಮ್ಮಸವಿಕ್ಕೆ ಕುಪ್ಪಳಿಸಿ,
ಪೋಣಿಸಿದವೊಲ್ ಪೋಗಿ ಬರ್ಪಾ ಮಹಾಕೃತಿಯ

ವಾನರರಸಂಖ್ಯ ಪಂಕ್ತಿಗಳೆಸೆದುವಲ್ಲಲ್ಲಿ,
ಶಿಲ್ಪಾಚಾರ್ಯ ದಳಪತಿ ನಳನ ಇಚ್ಛಾರಜ್ಜು
ಪಡೆದು ಪಿಡಿದು ನಡೆಯಿಪನೇಕ ಸೂತ್ರಂಗಳೋಲ್.
ಆಶ್ವೀಜದಾದಿಯೊಳ್, ವರುಣದಿಗ್‌ವೇದಿಯೊಳ್,
ಸಾಯಂ ಸಮಯ ದಿವಾಕರ ಪಾದ ವೀಧಿಯೊಳ್
ಪುಂಜೀಭೂತ ಬೃಹಜ್ಜೀಮೂತದೊಡ್ಡುಗಳ್
ಓಳಿಗೊಳ್ವಂದದಿಂ ಪೆರ್ಬ್ಬಂಡೆ, ಪೆರ್ಮ್ಮರಂ,
ಮಳಲೊಟ್ಟು, ಮಣ್‌ಗುಡ್ಡೆಗಳ್ ಸಂಕವರಿದುವಾ
ರಾಕ್ಷಸದ್ವೀಪಕೀ ವಾನರ ದ್ವೀಪಕೃತಿ ತಾಂ
ವಾರ್ಧಿ ವೀಥೀ ತೋರಣಂಗಟ್ಟುವೋಲಂತೆ!
ಇಂತೊಂದು ಪಗಲೊಂದಿರುಳ್ ಪತ್ತು ಮೇಲ್ ನಾಲ್ಕು
ಯೋಜನಂಗಳ್ ಮುಂದುವರಿದಿರೆ ಮಹಾ ಸೇತು,
ನಾಯಕ ಶಿಲ್ಪಿ ನಳಂ ಕೃತಿಯಗ್ರಭಾಗದೊಳ್
ಶೃಂಗ ಸದೃಶಂ ನಿಂದು, ಕಟ್ಟಣೆಯ ಮುನ್ನಡೆಗೆ
ಬಟ್ಟೆಯಂ ತರಿಸಲ್ವ ಕಣ್ಣ ಕರ್ತವ್ಯದೊಳ್
ತೊಡಗಿರಲ್, ತೆಂಕಣದ ದಿಗುತಟದಿನೆದ್ದುದು
ವಿಚಿತ್ರಮೆನಲೊಂದಪೂರ್ವಂ ವಸ್ತುರೂಪಂ.
ಕುತೂಹಲದಿ ನೋಡುತಿರೆಯಿರೆ, ಪಿರಿದುಪಿರಿದಾಗಿ,
ತೆರೆವೊಲವನುಳುವ ಹಲವೆನೆ ಸೀಳಿ ಶರಧಿಯಂ
ಬಂದುದು ಕರಾಳ ಕೃತನಿಶ್ಚಯದ ದುಶ್ಶಕುನ
ಘನ ವಿಘ್ನ ವಿನ್ಯಾಸದಿಂ. ಕರೆದು ಸಂಜ್ಞೆಯಿಂ
ತೋರಲದನಗ್ನಿಪುತ್ರಂಗಾ ಮಹಾ ಸೇನಾನಿ,
ಪುರ್ಬ್ಬು ಸುರ್ಕಲ್ ನೋಡಿ, ಶಂಕಿಸುತೆ, ಬಳಿಯಿರ್ದ
ವಾನರಂಗೊರ್ವಂಗೆ ಪೇಳ್ದನೊಂದರೆಯಂ
ಗುರಿಯಿಡಲ್ಕೆ. ಬಂದನನಿತರೊಳಲ್ಲಿಗಾಂಜನೇಯಂ;
ಕಂಡನವನುಂ ಸೇತುಮುಖಕಿದಿರಾಗಿ ತೇಲಿ
ಭೀಮವೇಗದಿ ಬರುತಲಿರ್ದಾ ಭಯಂಕರದ
ಬಂಡೆಗುಂಡಂ. ರಾಮಲಕ್ಷ್ಮಣರುಮನ್ನೆಗಂ
ಬಂದರಲ್ಲಿಗೆ; ಕಂಡರದ್ರಿಕೂಟೋಪಮದ
ಶಿಲೆಯ ಸಿಡಿಲಂ, ತ್ರಿಕೂಟಾಚಲರ ರಾಕ್ಷಸೀ
ಕೂಟವಿದ್ಯಾ ಕುಟಿಲ ಪಾರಂಗತೆಗೆ ಪ್ರಮಾ

ಸಾಕ್ಷಿಯಂ ಪ್ರತ್ಯಕ್ಷಮಂ. ಸೇತು ಮುಖದಲ್ಲಿ
ಮೊಗಸಿ, ಸಾಗರದೆಡೆಗೆ ದಿಟ್ಟಿ ನಿಕ್ಕುಳಿಸಿರ್ದ
ವಾನರ ಮಹಾಮುಖ್ಯರಂ ಕಂಡು, ದೂರದೊಳ್
ರಚನಾ ಕ್ರಿಯೆಯೊಳಿರ್ದ ನರೆನವಿರ ಜಾಂಬವಂ
ಬಂದನಲ್ಲಿಗೆ. ನಿಂದು ನೋಡಿದನು ಪಡಗೆನಲ್
ತೇಲಿ ಬರ್ಪಾ ಸಿಡಿಲ್‌ಬಂಡೆಯಂ. ಸೇನಾನಿ
ಬೆಸಸಲರೆಯಂ ತುಡುಕಿ ಗುರಿವಿಡಿದು ನಿಂದಿರ್ದ
ವಾನರಂಗೆಂದನ್: ''ಎಸೆ ಬೇಗಮಿದು, ಇದು ಗುರಿಗೆ!
ತಳುವದಿರ್. ಬಳಿಸಾರಲನುವಿತ್ತೊಡಾ ಮಹಾ
ಮಾಯಾವಿ ಕಿಡಿಸದಿರನೀ ಸೇತು ಕಾರ್ಯಮಂ.
ಬಲ್ಲೆನವನಂ: ಜಿಹ್ಮಯೋಧಿ; ವಿದ್ಯುಜ್ಜಿಹ್ವನಾ
ಪೆಸರ ದೈತ್ಯಂ! ಸೇತು ಬಂಧನದ ವಾರ್ತೆಯಂ
ಬೇಹಿನವರಿಂದರಿಯುತದರ ಭಗ್ನಕೆ ಲಂಕೆ
ಕಳುಹಿದೀ ಪ್ರಲಯಾಗ್ನಿ ವಿಘ್ನನಂ ದೂರದೊಳೆ
ಪರಿಹರಿಸದಿರೆ, ನೀರ್ಗೆ ಹೋಮಮ್ಮೆಸಲೆ ನಮ್ಮ
ಗೆಯ್ದ ಕಜ್ಜಂ!''
ಜಾಂಬವನ ನುಡಿಗೇಳುತಾ ಭೀಮ
ವಾನರಂ ಕವಣೆಯೆಸೆದನು ಕೈಯ ಕೋವಿಯಿಂ
ಸಿಡಿಲೆಸೆಯ ಬಂಡೆಗುಂಡಂ. ಕೋನಕೋನಮಯ
ಕರ್ಕಶಾಕೃತಿಯ ಕಲ್‌ಮೊರಡಿಯದು ಸರಿಸರಿದು
ಮೇಲೇರಿ, ದುಂಡಾಗಿ ನುಣುಪಾಗಿ ಕಿರಿದಾಗಿ
ದೂರ ದೂರಕೆ ಸಾರಿ, ತನ್ನ ಪಥದಿಂ ರಚಿಪವೊಲ್
ಜ್ಯಾರೇಖೆಯಂ ಜಿಹ್ಮಯೋಧಿ ದೈತ್ಯನ ಕಡೆಗೆ
ಧಾವಿಸಿತು, ಧುಮುಕಿತು ಜವಂಜವದಿ. ಕ್ರೂರವಿಧಿ
ಬ್ರಹ್ಮಾಂಡ ಚಂಡೆಯಂ ಸಿಡಿಲ ಕುಡುಹಿಂ ಬಡಿದು
ನುಡಿದುದೋ ನಾಂದಿಯಂ ಲಯನಾಟಕಕ್ಕೆನೆ
ಪೊದಳ್ದುಣ್ಮಿದುದು, ಪೊಡವಿಯ ಕೊಡಂಕೆ ಕಿವುಡೇಳೆ,
ಢಣಢಣಢಣತ್ಕಾರ ಘೋರ ರಾವಂ. ಕೂಡೆ
ಕಿಡಿಕಿಡಿಯೆಳ್ದು ಪುಡಿಪುಡಿವೋಗಿ ಬಿಳ್ದುದು ಬಂಡೆ
ತುಂತುರು ತುಂತುರಾಗಿ. ಹತಿಗೆ ತೆಕ್ಕನೆ ತೆರೆದ
ಶತ ಶತ ಮುಖಂಗಳಿಂ ಹೊಗೆಯುಗುಳ್ದೊಡನೊಡನೆ

ಓಕರಿಸುತುರಿವೆಂಕೆಯಂ ಆ ಭೈತ್ರದೈತ್ಯಂ,
ತಟಿತ್ತು ಮೇಘಂಬೊಕ್ಕು ಮರೆಯಪ್ಪವೊಲ್, ಮುಳುಗಿ
ಮಾಯವಾದನು ಮಹಾಬ್ಧಿಕುಕ್ಷಿಯಲಿ. ಮಂಜೆನಲ್
ಕವಿದ ಧೂಮದ ಸಾಂದ್ರ ಜವನಿಕೆಯೊಳಡಗಿದಾ
ಪಡಗುರಕ್ಕಸನಿರವನರಿಯಲೆಂದಾ ದೆಸೆಗೆ
ಹುಡುಕುದಿಟ್ಟಿಯೊಳಿರ್ದ ಕಪಿಗಳಚ್ಚರಿ ತಾನೆ
ತಮಗೆ ವೃಶ್ಚಿಕಮಾಯ್ತಲಾ ಪಶ್ಚಿಮ ದಿಶಾ
ಸಮೀಪದೊಳ್ ಕಡಲ ಹೊದೆಸೀಳ್ದೆದ್ದು ಮೂಡಿದ
ಮಹೀಧರೋಪಮ ನೌಚರ ನಿಶಾಚರನ ಬೃಹದ್
ಭ್ರೂಕುಟಿಯನವಲೋಕಿಸಲ್! ''ಸುಲಭನಲ್ತಿವಂ.''
ಎನುತೆ ಕಪಿನೃಪನಲ್ಲಿ ನಿಂದಿರ್ದ ಶತಬಲಿಗೆ
ಬೆಸಸಿದನು ಕಲಿಗೆ. ಗಗನ ಚರರಗ್ರೇಸರಂ,
ಕಾಮರೂಪಿಗಳೋಜನುರುವ ಶತಬಲಿ ಕರೆದು
ಕಟ್ಟಾಣತಿಯನಿತ್ತನೈವರಿಗೆ, ತನ್ನಯ
ಚಮೂ ಗೌರವ ತ್ರಾಣರೆನಿಪರ್ಗೆ.

ಮುಗಿಲೆಡೆಗೆ
ನೆಗೆದರವರೈವರುಂ. ಮರೆಯಾದರಭ್ರದೊಳ್.
ವಾನರ ಕುತೂಹಲಂ ನೋಡುತಿರೆಯಿರೆ ಕೊರಳ್
ನಿಮಿರಿ, ಧುಮುಕಿದರು ವಿದ್ಯುಜ್ಜಿಹ್ವನಿರ್ದೆಡೆಗೆ
ಧೂಮಕೇತುಗಳಾಗಿ, ಹೊಲದ ಹೊದರೊಳು ಹುದುಗಿ
ಹೊಂಚುತಿಹ ಹೊರಸಿಗೆರಗುವ ಡೇಗೆಬೇಗದಲಿ.
ಪೊರಕೆವೋಲ್ ನೀಳ್ದ ಲಾಂಗೂಲಾಗ್ನಿ ಜಟೆಗಳಂ
ಬಾನ್ದೆಸೆಗೆ ಬೀಸಿದುಲ್ಕೋಜ್ವಲ ಮುಖಂಗಳಂ,
ತನ್ನ ಮೇಲ್ವಾಯ್ವ ಮೃತ್ಯುವ್ಯಾಘ್ರ ಭೈರವ
ನಖಂಗಳಂ ಕಂಡು ವಿದ್ಯುಜ್ಜಿಹ್ವ ರಾಕ್ಷಸಂ
ಹೊಡೆಮಗುಚಿ ಕಡಲೊಡಲ ಬಗಿದಡಗುವನಿತರೊಳೆ
ಹೊಕ್ಕುಳೊಡೆಯಲ್ ಹೊಕ್ಕರೈವರು ರಕ್ಕಸನ ಮೆಯ್ಯ
ಸಿಡಿಮದ್ದಿನಾಗಾರಮಂ. ಹಗಲೆ ಇರುಳಾಯ್ತೊ
ಎನಲ್ಕೊಂದು ತೆಕ್ಕನುಕ್ಕಿತು, ಚಕ್ಕಮುಕ್ಕಿಯಂ
ಕುಕ್ಕಿದೊಲ್, ಭಾಸ್ಕರ ಲಕ್ಷ ತಿಗ್ಮ ಖರ ರೋಚಿ.
ಬಡಿಯಲೊಡೆದುದೊ ಸಿಡಿಲ ಡಿಂಡಿಮವೆನಲ್, ಕೇಳ್ದ

ಕಿವಿ ಮೂರ್ಛೆಯಂ ಮರೆವೊಗಲ್ ಪೊಣ್ಮಿದುದೊ ಸದ್ದು
ದಿಗಿಭ ಹೃದಯದ ಧೈರ್ಯಮಳ್ಕಾಡುವೋಲ್! ಬೆಂಕೆ
ತಗುಳಿದೆಣ್ಣೆಯ ಗಣೆಯಿನುಣ್ಮುವಂದದಿ ಕರಿಯ
ಮುದ್ದೆ ಮುದ್ದೆಯ ರಾಸಿರಾಸಿಯ ಹೊಗೆಯ ಹೊರಳಿ,
ಧೂಮಕಾಳಾಂಧಕಾರದಿ ಮುಸುಗುತಂಬುಧಿಯ
ಸೀಮೆಯಂ, ಘುಳುಘುಳುಘುಳುಂ ಮುಳುಗಿದನು ಮಹಾ
ಧ್ವಾನ ಚೀತ್ಕಾರದಿಂದಾ ಭಯಂಕರಾಭೀಳ
ಭೈತ್ರಾವತಾರಿ ದೈತ್ಯಂ. ಮುಳುಗಿ, ಮುಳುಮುಳುಗಿ,
ಮುಳುಗಿದನು ಮರಳಿ ಮೇಲೇಳಗೊಡದಿಹ ಕಡಲ
ಕುಳಿರು ಕೋಳುವ ತಣ್ಣನೆಯ ತಳಾತಳ ತಳಕ್ಕೆ.
    ಇಂತಯ್ದು ಪಗಲ್ಯೆದಿರುಳ್, ಪೃಥಿವೀ ಬೃಹನ್
ವಲ್ಮೀಕದಿಂದುಣ್ಮಿದಾದಿಶೇಷಂ ದೇವಿ
ಲಕ್ಷ್ಮಿಯನರಸಿ ವಿಷ್ಣುಶಯ್ಯಾಗಾರಮಂ
ಪ್ರವೇಶಿಸುವ ಮಾಳ್ಕೆಯಿಂ, ವಾರ್ಧಿವಕ್ಷದೊಳಖಿಲ
ದೈತ್ಯ ವಿಘ್ನದ ದಂತ ಕೋಟಿಯಂ ಮುರಿದಿಕ್ಕಿ
ಸಂವರ್ಧಿಸಿತು ದೇವಶಿಲ್ಪಿಯ ತನೂಭವನ
ಭವ್ಯರಚನೆಯ ಸೇತುಸಿಂಹಂ. ಸುವೇಲಾದ್ರಿ
ಸುಖದುಃಖ ರೋಮಾಂಚನಕೆ ವಿಕಂಪಿಸುತ್ತಾ
ತ್ರಿಕೂಟಾದ್ರಿಯಂ ಸನ್ನೆಯಿಂದೆಚ್ಚರಿಪ್ಪವೋಲ್
ತನ್ನ ತರುವಸ್ತ್ರದಿಂ ಬೀಸಿತಿಂಗಿತದೊಂದು
ಬಲ್ಗಾಳಿಯಂ. ಐವಗಲ್ ಮೊದಲ್ಗೊಂಡಿರದೆ
ಅಸ್ಥಿರತೆಯಾಂತಿರ್ದ ಸಾಗರಸ್ಥಿರಜಲದ
ಸುಖೋದ್ವಿಗ್ನ ಸಂಕ್ಷೋಭೆಯಂ ಕಂಡು ಮೈಥಿಲಿಗೆ
ಮನದಾಸೆ ಕೊನರಿದುದು; ಹೃದಯಮನುಕರಿಸಿದುದು
ಸಲಿಲ ಸಂಭ್ರಮದ ಉಲ್ಲೋಲ ಕಲ್ಲೋಲಮಯ
ಜಲಧಿಯಂತಃಕರಣಮಂ. ಕನಕ ಲಂಕಾ
ಪ್ರಜಾಮನಂ ಕಡೆದೊಲ್ ಕಲಂಕಿದತ್ತಾ ಪ್ರಕೃತಿ
ಶಕುನಂಗಳಿಗೆ ಶಂಕೆಗೊಂಡು. ಲಂಕೇಶ್ವರಂ
ನೆರೆವೊನಲ್ಗಾಂಕೆಗೊಂಡದರ ಬೇಗಕೆ ಕುಸಿದು
ಹಿಸಿದು ಬೀಳುತ್ತೊಯ್ಯನೆಯೆ ಹಿಂದು ಹಿಂದಕ್ಕೆ
ಸರಿವ ಪುಸಿಯೆರೆಮಣ್ಣಿನೊರ್ವೊಳೆಯ ದಡದಂತೆ

ಮತ್ತ ಮತ್ತಂ ಕಡಿದು ಕಡಿದುಗ್ರನಾಗುತ್ತೆ
ಬೆಸಸಿದನು ಪಡೆಗೆ ಬೇಹಿಂಗೆ ಚತುರೋಪಾಯ
ಚತುರಂಗ ಸಮರ ಸನ್ನಾಹಮಂ.

ಹೆಮ್ಮರನ

ಬೇರರಿವುದೆಂತೈ ಕೊನೆ ಹೂತು ಕಾತುದನಂತೆ
ಪಣ್ತುದಂ? ತರುಗಳಂ ಕಿಳ್ತು, ಗಿರಿಗಳನೆತ್ತಿ,
ಕಲ್ಲು ಮರ ಮಟ್ಟು ಮಟ್ಟಿಯನಿತ್ತು ಸೇತುವೆಯ
ಕಟ್ಟಿತಕೆ, ಬೆಟ್ಟಗಾಡಂ ಬಯಲ್‌ಗೆಯ್ಯುತ್ತೆ
ನೆಲದ ಮಟ್ಟಕೆ ಮೆಟ್ಟುತಿರ್ದ ಕಪಿಯಾಳ್ಗಳುಂ
ಪೇಳರಿವರೆಂತಾ ನಿಪುಣ ನಲ ವಿಪುಲ ಕೃತಿ
ಶ್ರೀರಾಮಸೇತು ಗುರಿಸೇರ್ದುದಂ? ಐದನೆಯ
ಪಗಲೆಯ್ದುತಿರ್ದತ್ತು ದಿಙ್ಮೇಖಲಾರುಣಿಮ
ವರುಣ ಮಂಚಕೆ. ಬೈಗಿನೋರೆಯ ಕದಿರ್ಗೆಂಪು
ಪೆತ್ತುದು ಬೃಹಚ್ಛಾಯೆಯಂ ಭೀಮದೀರ್ಘಮಂ
ಬಂಡೆಗಾ ಗಿರಿಮಹೇಂದ್ರನ ರುಂದ್ರರುಂಡದಾ.
ತಪಸ್ವಿ ಸಂಪಾತಿಯಂ ಶತಮಾನ ಶತಗಳಿಂ
ಪೊತ್ತೊಂದು ಗುರುತಪದ ಗೌರವದ ಭಾರದಿಂ,
ಪತ್ತು ಸೂಳ್ ಪತ್ತಾನೆಯೆತ್ತರದ ಮೇಣನಿತೆ
ಬಿತ್ತರದ ತೋರದಿಂ ನಿಂತಾ ಬೃಹಚ್ಛಿಲೆಯ
ಬಳಿಯೆ ನಿಂದನೊರ್ವಂ ಬೃಹತ್ತರ ವಾನರಂ.
ಅದ್ರಿಯೊ ಅರಣ್ಯವೊ? ವನೇಚರನ ರೂಪದಿಂ
ಪೊಣ್ಮಿತೊ ಮಹೀಧ್ರಕೂಟಾಗ್ರಂ? ಎನಿಪ್ಪಂತೆ
ರುಂದ್ರಮಿರ್ದಾತನ ಶರೀರಮಂ ಕಿಕ್ಕಿರಿದು
ರೋಮಮಿರ್ದುವು ಮುದ್ಗರ ಭಯಂಕರಂ. ಮಲೆಯ
ತಲೆನೆಳಲ್ಗಾಂಕೆಗೊಂಡಿರ್ದುದಾತನ ನೆಳಲ್,
ದೈತ್ಯಗಾತ್ರಂ, ಭೂತ ಭೀಷಣಂ!

ಜಾಂಬವನ

ದಳದವನದೊರ್ವನಾ ಮೇರು ನಾಮಕ ಮಹಾ
ವಾನರಂ, ಶಕುನಿಶಿಲೆಯೆಡೆ ನಿಂತು, ಸುತ್ತಲುಂ
ನೋಡಿದನು, ಸೋಜಿಗದ ಮುಖಮುದ್ರೆಯಿಂ: ''ಇದೇನ್!
ಕಲ್ ಮರಗಳನಿತುಮಂ ಕಿಳ್ತವರ್ಗೀ ಬಂಡೆ

ತಾನೊಂದೆ ಭಾರಮಾದುದೆ? ಕಾಂಬೆನೊಂದು ಕಯ್!
ಕಿಳ್ತೆತ್ತಿ ಪೊತ್ತುಯ್ದನಾದೊಡೀ ಕಲ್ಲೊಂದೆ
ಸಾಲ್ವುದೈಸಲೆ ಯೋಜನಂಗಳ್ಗೆ!'' ತರಿಸಂದು
ಉಸಿರೆಳೆದು ನಿಮಿರಿದನ್, ವಕ್ಷಖಂಡಗಳುರ್ಬೆ
ವೃಕ್ಷಮಯ ಗಂಡಶೈಲದ ಬಂಡೆಗಳವೋಲ್.
ಕೆದರ್ದ ಕೇಶದ ಮೇಘರಾಶಿಯಂ ಬೆಳಗುತಿರೆ
ಬೈಗಿನ ಬಿಸಿಲ್, ತಬ್ಬಿದನು ತೋಳ್‌ಬಿಗಿದು ಶಿಲೆಯ
ಡುಬ್ಬಮಂ, ವಾಸುಕಿಯ ತನು ಮಂದರದ ಮೆಯ್ಗೆ
ಸುರುಳಿಯುರುಳಂ ಸುತ್ತಿಬಿಗಿವಂತೆ. ಪಲ್ಗಚ್ಚಿ,
ಕಣ್ಬೆಚ್ಚಿ, ಉಸಿರ್‌ಕಟ್ಟಿ; ನವಿರುನವಿರಿಂ ಬೆಮರ್
ತೊರೆಯಿಳಿಯೆ, ಮೆಯ್ ನರಗಳೆಲ್ಲ ಹೆದೆಯೇರ್ದವೊಲ್
ನಿಮ್ಮನೆ ನಿಗುರೆ, ನೆತ್ತರ್ ಚಿಮ್ಮಿ ಮೊಗಗೆಂಪೇರೆ;
ಮಲೆಯ ಮಂಡೆಯ ಶಕುನಿಶಿಲೆಯ ಬಲ್‌ಬಂಡೆಯಂ
ತಳ್ಳಿದನ್, ನೂಂಕಿದನ್, ಸೆಳೆದನೆಳೆದನ್, ಮತ್ತೆ
ಮತ್ತಲುಗಿದನ್. ಪೇಳ್ವುದೇನಂ? ಸಡಿಲ್ದುದಾ
ಶಕುನಿಶಿಲೆ! ಯೋಜನಜ್ಯಾರೇಖೆಯಂ ಗೀಚಿ
ತೊನೆದತ್ತದರ ಛಾಯೆ! ನಡುಗಿತು ನೆಲಂ. ಗುಡುಗಿ
ಗೈರಗರ್ಭಂ ಕರೆದುದು ಕಳಚಿ ಕಳಲ್ದರೆಯ
ಕೂರ್‌ಬರಿಸಮಂ. ಸದ್ದುಹದ್ದುಗಳೆದ್ದು ದಿಗ್ದೆಸೆಗೆ
ಚೀರಿ ಹಾರಿದುವಚಲ ಚೀತ್ಕಾರ ಶಕುನಗಳವೋಲ್.
ಬಂಡೆಯಡಿ ಗುದ್ದಿನೊಳಗೊರಗಿ ನಿದ್ದೆಯೊಳಿರ್ದ
ಕಣೆಹಂದಿಗಳ್ ದಿಗಿಲ್‌ಗೊಂಡೆದ್ದು ಹೊರನುಗ್ಗಿ
ಬೀಳ್ವನಿತರೊಳೆ ನುಚ್ಚುವೋದುವೊ, ಒರಳ್‌ಗುಂಡು
ಕಡೆದರೆದವೋಲ್!
ಕಂಡನುತ್ಪಾತಮಂ, ಬಳಿಯ
ಮತ್ತೊಂದು ಶಿಖರದಿಂ, ಶರಗುಲ್ಮ. ಅಲ್ಲಿಂದೆ
ದೈತ್ಯಕಂಠದಿ ಕೂಗಿ ಕರೆದನೀ ಮೇರುವಂ.
ಕೇಳುತಾ ವ್ಯಾಘ್ರೋಗ್ರನಧಿಕಾರ ವಾಣಿಯಂ
ರುಂದ್ರಕರ್ಮವನಿನಿತು ಕೈತಡೆದು, ಶಿರವೆತ್ತಿ,
ಶರಗುಲ್ಮನಂ ನೋಡಿ, ಗುರುತಿಸಿ, ಮುಗುಳ್ನಕ್ಕು,
ಕಿವಿಗೊಟ್ಟನೈ ಮೇರುಃ ಲಂಕೆಯಿಹ ತಾಣಮಂ

ತೋರಿ, ಸೀತೆಯನುಯ್ದ ರಾವಣನ ವಾರ್ತೆಯಂ
ಪೇಳ್ದ ಸಂಪಾತಿಯಂ ತಾಳ್ದೊಂದು ಪುಣ್ಯದ
ಪವಿತ್ರತೆಗೆ ಕೀಳಲೊಲ್ಲದೆ ಬಿಟ್ಟರ್, ಆರದೆಯೆ
ಬಿಟ್ಟರಲ್ಲೆಂಬುದನ್ನರಿತು ಉಪಸಂಹರಿಸುತಿರೆ
ತನ್ನ ಕಡುಗೆಯ್ಮೆಯಂ, ಬಂದುದು ಧಳಂ ಧಳಂ
ಧಳಧಳಧಳಂ ಮಹೋತ್ಸಾಹ ಭೇರೀ ರವಂ,
ಪ್ರತಿರಣಿಸೆ ಶೈಲ ವನ ಸಂಧ್ಯಾಭ್ರ ಸಂಭ್ರಮತ್
ಪ್ರಾಣಾನಕಂ!
ಓಡಿ ಬಂದೊರೆದರೈ ಚರರ್,
ಡಿಂಡಿಮೋದ್ಘೋಷದಿಂ: ''ಕೇಳಿಮೆಲ್ಲರ್, ಓ
ಕಪಿಧ್ವಜರಿರಾ, ಸೋತುದಂಬುಧಿ ನಮ್ಮ ಸೇತುವಿಗೆ!
'ಮರಣಮಥವಾ ಶರಧಿತರಣಂ' ರಘೂದ್ವಹನ
ಪೂಣ್ಕೆ ಪೂಡಿದುದು ಲಂಕೆಯ ನೆಲದಿ ತನ್ನಡಿಯ
ಗೆಲ್ಗಂಬಮಂ! ದೇವ ಸುಗ್ರೀವನಾಜ್ಞೆಯಿಂ,
ಗಿರಿಗಳನಿಳಿದು ಬನ್ನಿ; ವನಗಳನುಳಿದು ಬನ್ನಿ;
ಬೆಟ್ಟಗಳಿರಲಿ ಬನ್ನಿ; ಕಾಡುಗಳಿರಲಿ ಬನ್ನಿ;
ಸೇನೆ ನೆರೆದಿದೆ ದಾಂಟಲಿಂದಿನೊಂದಿರುಳಿನೊಳೆ
ನೂರು ಯೋಜನ ಸೇತುದೂರಮಂ! ಬನ್ನಿ, ಓ,
ಬನ್ನಿ, ಬೇಗನೆ ಬನ್ನಿ!''
ಕಿತ್ತ ಬಂಡೆಯನಲ್ಲೆ
ಮತ್ತೆ ಜಡಿದೊತ್ತಿದನ್; ಕಾಳ್ಕೋಣವಿಂಡುಗಳ್
ತೊತ್ತಳದುಳಿಯುತಡವಿಯಂ ಧಾವಿಸುವ ತೆರದಿ,
ಪದದ ಘಾತಕೆ ಗಿರಿಯ ಬರಿ ಕುಸಿದು ದರಿಬೀಳೆ,
ಗುಡುಗುಡನೆ ನಡೆದನಾ ಮೇರು, ಪಡೆಯಂ ಕೂಡಿ
ದೈತ್ಯದುರ್ಗಕೆ ಲಗ್ಗೆ ನುಗ್ಗುವ ತವಕದೊಂದು
ತೇರುರುಳ್ವಂತೆ. ನಡೆತರೆ ಕಂಡನಲ್ಲಲ್ಲಿ,
ಹಾದಿಯೆಡೆಯೊಳೆ ಹೊತ್ತ ಬಂಡೆಯನೆಸೆವರಂ;
ಬೇರಸರೆಪರಿದ ತರುವರವನೋರೆಯೆ ತೊರೆದು
ಬರುತಿರ್ದರಂ; ಹೆಡಗೆ ಮಣ್ಗಳಂ ಹೆಗಲಿಂದೆ
ಗುಪ್ಪೆ ಗುಪ್ಪೆಯೆ ಹಾಯ್ಕಿ, ಮಣ್‌ವೆಟ್ಟುಗಳನೊಟ್ಟಿ
ಹಜ್ಜೆ ಹಜ್ಜೆಗೆ, ಹಂತಿಗೆಯ್ದೋಡುತಿರ್ದರಂ;

ಶುಭದ ವಾರ್ತೆಯನೊಬ್ಬರೊಬ್ಬರಿಗೆ ಕೊರಳೆತ್ತಿ
ಕೂಗಿ, ಕೈವೀಸಿ ಸಾರುತ್ತಿರ್ದರಂ; ದಾರಿ
ಕಿಕ್ಕಿರಿದು ಮುನ್ನಡೆವ ತವಕಕ್ಕೆ ನಾನು ತಾನ್
ಪೋರ್ದಿರ್ದ್ದರಂ!
ಇರುಳ್ ಮುಡಿಗೆ ಮಲರಿದುವರಿಲ್.
ಪರ್ಬಿದತ್ತಂಬುಧಿಯ ಮೇಲೆ ಮರ್ಬುದಿಂಗಳ್
ಮಂಜುಜೊನ್ನಂ. ಪೊನಲ್ವರಿದುದು ಕಪಿಧ್ವಜಿನಿ,
ಸೇತುಪಾತ್ರಂ ತುಂಬಿ ತುಳ್ಕಿತೆನೆ, ಲಂಕಾ
ಸರಿಲ್ಲಕ್ಷ್ಮಿಯಂ ಅಘ ನಿದಾಘದಿಂ ಪೊರೆಯಲ್
ಸಮುದ್ರ ಮಘವಂ ಕಳುಹಿದಂಬುದಾಕ್ಷೌಹಿಣಿಯ
ಅಸಂಖ್ಯ ವಾಹಿನಿಗಳೋಲ್. ಅಂತುಟಾ ಇರುಳೆಲ್ಲ
ಗಿರಿ ಮಹೇಂದ್ರನನುಳಿದ ವಾನರರ ವಾಹಿನಿಯ
ಕೋಲಾಹಲಂ, ಸಾಗರದ ಸೀಮೆಯಂ ದಾಂಟಿ,
ಶಿಬಿರವಿಕ್ಕಿತು ಸುವೇಲಾದ್ರಿನಿದ್ರೆಯನೊದ್ದು
ಕಡೆದೆಬ್ಬಿಸುತ್ತದರ ಜಲ ಸಸ್ಯ ಸುಂದರದ
ಸಾನು ಕಂದರದ ವಂಕಿಮ ವಕ್ಷವೇದಿಯಲಿ!

ಸಂಚಿಕೆ ೧೦

## ಶುಕಂ ಸಾರಣಂವೆರಸಿ

ಪ್ರತೀಕಾರ ಬದ್ಧಭ್ರುಕುಟಿ ಸತೀ ತಸ್ಕರನ
ದುರ್ಮಂತ್ರಕುಟಿಯಿಂ ಪೊರಮಟ್ಟನಯ್ ಶುಕಂ,
ಸಾರಣಂ ವೆರಸಿ. ಅಸ್ಥೂಲತೆಯಿನದೈತ್ಯಮಾ
ತನುವಿರ್ದುದಾತಂಗೆ, ರೇಖಾಸ್ಮರಣಕಾರಿ,
ಶುಕ ಚಂಚು ಮುಖಂಗಾ ಶುಕಂಗೆ. ಸಾರಣಂ ತಾಂ
ಶುಕ ಮುಖಸ್ತುತಿಯೊ ಮೇಣಾತನುತ್ಪ್ರೇಕ್ಷೆಯೊ
ಎನಲ್ಕವನನನುಸರಿಸಿ ನಡೆದನಯ್, ಕಾವ್ಯಕ್ಕೆ
ಕೈಂಕರ್ಯವೆಸಗುವ ಅಲಂಕಾರದೋಲಂತೆ.
ಲಂಕೇಶ್ವರನ ಗುಪ್ತಚಾರರೊಳಗ್ರಮಾನ್ಯರಾ
ಇರ್ವರುಗ್ರರ್, ತ್ರಿಕೂಟಾದ್ರಿಯಂ ಪಿಂತಿಕ್ಕಿ,
ಗಾವುದಂಗಳ ಕಳೆದು, ಸೇರ್ದರು ಸುವೇಲಾದ್ರಿ
ಶೃಂಗೋತ್ತುಂಗ ರಂಗಮಂ. ಕಂಡರೌನ್ನತ್ಯದಿಂ
ವೈನತೇಯವ್ಯೂಹದಿಂ ಬೀಡುಗೊಂಡಿರ್ದ
ಕಪಿಸೈನ್ಯ ಶೇಷ ಶತ ಶತ ತರಂಗಿತ ಫಣಾ
ವಿಸ್ಫಾರಣಾ ರುಂದ್ರ ರಣ ರಾಮ ವೈರಮಂ.
ಸಿಂಧು ತಟ ಗತ ಗಿರಿಶ್ರೇಣಿಯ ಲಸತ್‌ಸಾನು
ಕಂದರ ಬೃಹದ್‌ರಂಗಮಂ ತುಂಬಿ ಪರ್ವಿದಾ
ಶ್ಯೇನ ರಚನಾಕೃತಿಯ ವಾನರ ಮಹಾನೀಕಿನಿಯ
ಚಂಚುದೇಶದೊಳಿರ್ದುದಯ್ ವಜ್ರಕಠಿನಂ
ಪಡೆ ಗಂಧಮಾದನನಾ. ಖಡ್ಗಿಯ ಮುಖಾಗ್ರದೊಳ್
ಕೂರ್ಪಿಂ ನಿಮಿರ್ದೊಂದೆ ಕೋರೆಗೊಂಬಿನ ತೆರದಿ

ನಿಂದಗುರ್ವಿರ್ದನಾ ಗರ್ವಪರ್ವತ ಶೃಂಗ
ಸನ್ನಿಭಂ ಗಂಧಮಾದನನವನ ಸೇನೆಯ
ಶಿರಶ್ಶಿಖರದಲಿ. ತಂತಮ್ಮ ಸೇನೆಗಳ್‌ವೆರಸಿ,
ವಾಲಿಯ ಮಗಂ, ಸರ್ವಸೇನಾನಿ ನೀಲನಂ
ಕೂಡಿ, ಹಗೆಯೆದೆಯ ಹೆದರಿಕೆಯಾಗಿ ಮೆರೆದನೈ
ಆ ವ್ಯೂಹ ವಕ್ಷದಲಿ. ಪಕ್ಷ ದಕ್ಷಿಣದಲ್ಲಿ,
ತನ್ನ ಪಡೆಗಡಲ ನಡುವಣ ದೀವಿವೆಟ್ಟೆನಲ್,
ಪಡೆವಳಂ ವಾನರರ್ಷಭ ಋಷಭನಿರ್ದನು
ಅಜೇಯವೀರ್ಯಂ. ಸವ್ಯಪಾರ್ಶ್ವದಲಿ ಜಾಂಬವಂ,
ವೇಗದರ್ಶಿ ಸುಷೇಣರೊಡಗೂಡಿ, ರಕ್ಷಣೆಯ
ಕಾರ್ಯದಧ್ಯಕ್ಷನಿರ್ದನು, ವಯೋಗೌರವದಿ
ಭವ್ಯವಪುವಾಗಿ. ಸುವಿಭಕ್ತಮಾ ವ್ಯೂಹದಾ
ಕುಕ್ಷಿ ಪ್ರದೇಶದೊಳ್ ಕಪಿರಾಜನೆಸೆದನಯ್
ರಾಮಲಕ್ಷ್ಮಣ ಸಹಿತಮಾಂಜನೇಯನ ಭೀಮ
ಬಾಹುದೈತ್ಯರ ರಾಹುರಕ್ಷೆಯ ಭಯಂಕರ
ಕ್ಷೇಮದಲಿ. ದೇವಶಿಲ್ಪಿಯ ತನೂಜಂ ನಳಂ,
ಇತರ ವಾನರ ಮುಖ್ಯರಂ ನೆರಂಬಡೆದು, ತಾಂ
ಸರ್ವಸೈನ್ಯ ನಿಯಂತೃವಾಗಿರ್ದನಯ್, ತನ್ನ
ತಂದೆಯ ವರದ ಮಹಿಮೆಯಿಂ ಬೃಹದ್ರೂಪಕ್ಕೆ
ಮೇಣ್ ಮಹಚ್ಛಕ್ತಿವೈಭವಕೇರ್ದ ವಾನರ
ಧ್ವಜಿನಿಯ ಮಹೋತ್ಸಾಹನೇಮಿಯೆಂಬಂತೆವೋಲ್!
 ನಿಶಾಚರೇಂದ್ರನ ಗೂಢಚರರಿರ್ವರುಂ ಪಗಲ್
ತುದಿಯೆಯ್ದುವನ್ನೆಗಂ ಕಾಯ್ದರು ಸುವೇಲಾದ್ರಿ
ಚೂಡಾಗ್ರದೊಳ್. ಇರುಳ್ ಕರ್ಪ್ಪಿಳಿಯಲೊಡನೊಡನೆ
ತಾಮುಮಿಳಿದರ್ ಶಿಬಿರಕಭಿಮುಖರ್. ಕಳ್ದೊಯ್ಯನೆಯೆ
ಪೊಂಚಿ ಸಂಚರಿಸಿದರ್ ಪಡೆಯ ಪೊರವೀಡಿನೊಳ್
ಕಳ್ಗಂಡಿಯಂ ಪುಡುಕಿ. ಬಲಿದ ಕಾವಲ್‌ವೇಲಿ
ನುಸಿ ಪುಸಿಯಲೆಡೆಯಿಲ್ಲದಿರೆ ಕುಟಿಲಮೊಂದಮ್
ಉಪಾಯಮಂ ತರಿಸಂದರಾ ಪ್ರವೀಣರ್. ಶುಕಂ
ರಾಕ್ಷಸ ಪ್ರಕಟ ವೇಷವನಾಂತು ಪಾಳೆಯದ
ಕಡೆಗೋಡತೊಡಗಿದನ್. ವಾನರಾಕೃತಿವೆತ್ತ

ಸಾರಣಂ ''ರಾಕ್ಷಸನ್! ಬೇಹುಗಾರನ್! ಕೊಳ್‌ಕೊಳ್!''
ಎನುತ್ತವನ ಬೆಂಬತ್ತಿದನ್. ಕೂಡೆ ಕಾವಲ್ ಪಡೆಯ
ಕೊರಲ ಕೂಗುಗಳೆದ್ದುವಾ ಸದ್ದನತಿಗಳೆದು
ಕೈದುಗಳ ಕರ್ಬುನ ಖಣತ್ಕೃತಿಗಳೇರ್ದುವಾ
ಲೌಹರವಮಂ ನುಂಗಿನೊಣೆದುದು ಚಮೂ ಚರಣ
ರಣ ತುಮುಲ ಕೋಲಾಹಲಂ. ಬೇಂಟೆನಾಯ್ಗಳಂ
ವಂಚಿಸಲೆಳಪ ವಂಚನಾ ಚತುರ ವೃಕಂಬೋಲ್
ಶುಕಂ, ಸರ್ಪಗತಿ ಚಮತ್ಕೃತಿಯಿಂ ಪಳಂಚಿದನ್
ಪಾಳೆಯದ ಪೊರಲಂಚಿನುದ್ದಕೂ ಗದ್ದಲದ
ಗಲಿಬಿಲಿಯ ಜಂಗುಳಿಯ ಜಟಿಲ ಜಾಲಭ್ರಮೆಯ
ಬೀಸಿ. ಬೆಂಬತ್ತಲಾ ಸರ್ವವಾನರ ದೃಷ್ಟಿ
ರಾಕ್ಷಸ ಪ್ರಕಟ ವೇಷದೊಳೋಡುತಿರ್ದನಂ,
ವಾನರಾಕೃತಿಯಿಂದಮವನನಟ್ಟುತ್ತಿರ್ದ
ಸಾರಣಂ ಜನಜಂಗುಳಿಯ ಪಾಸುಪೊಕ್ಕಿನೊಳ್
ಪೊಕ್ಕನೊಯ್ಯನೆ ಜುಣುಗಿದನು ಬೀಡಿನೊಳಯಿಂಕೆ.
ಸಾರಣೋದ್ಯಮ ಸಫಲತೆಯನರಿಯುತಾ ಶುಕಂ
ಪಂತಿ ಪಂತಿಯ ಪೊಂಜುಗಳ ಕೆಂಜೊಡರ್‌ವೆಳಗು
ತನ್ನನೆಣ್ದೆಸೆಯಿಂದಮಾವರಿಸುವಂತೆವೋಲ್
ಬಿರಿಯಿಕ್ಕಿದನು ತನ್ನಂಘ್ರಿ ಶೀಘ್ರತೆಗೆ. ನಟಿಸಿ
ಕಾಲ್ ಸೋಲಮಂ, ತತ್ತರಿಸಿ, ತಿರುಗಿ, ದೊಪ್ಪನೆ
ನೆಲಕ್ಕುರುಳ್ದನತ್ತಿತ್ತಮೊದರಿ ಕೈಕಾಲ್ಗಳಂ
ಕೆದರಿ. ಕಾಪಿನಾಳ್ಗಳ್ ಬಳಿಗೆ ಬಪ್ಪನಿತರೊಳ್
ಕೆಂಜೊಡರ್ ವೆಳಗಿನೊಳ್ ಕಂಡುದಾಕೃತಿ, ಪೆಣನ
ಮಾಳ್ಕೆಯಿಂ, ನಿಮಿರಿ ನಿಟ್ಟಯ್ಸಿ. ಬಡಿಗೆಗಯ್ಯಿಂ
ಬಡಿವರಂ ತಡೆದೆತ್ತಿ ತಂದರಾ ರಾಕ್ಷಸ
ಶರೀರಮಂ ಪಡೆವಳಂ ಗಂಧಮಾದನನಿರ್ದ
ಪಟಕುಟಿಗೆ. ಸೇನಾನಿ ಬೆಸಸಿದಂದದಿ ಗೆಯ್ದ
ಶಿಶಿರ ಶುಶ್ರೂಷೆಗೆಂಬವೊಲಾ ಕಪಟಿಗಳ
ಶಿರೋಮಣಿ ಶುಕಂ, ಮುಚ್ಚೆದಿಳಿದನೆನೆ, ಕಣ್‌ಬಿಚ್ಚಿ
ನೋಡಿದನು ಬೆಬ್ಬಳಿಪ ಬೆಳ್‌ನೋಟದಿಂ ತನ್ನ
ಸುತ್ತಿರ್ದರಂ.

''ಆರೊ ನೀನ್? ಲಂಕಿಗರ ಕಡೆಯ
ಬೇಹಿನವನೇನ್?''
''ಬಳಿಯ ಪಳ್ಳಿಯ ಕೃಷೀವಲನ್.''
ಎನೆ ಶುಕಂ, ಪ್ರಶ್ನಿಸಿದನಾ ಗಂಧಮಾದನಂ
ಮತ್ತೆ ''ಕಳ್ತಲೊಳಗೇಂ ಕಜ್ಜಮೀ ತಾಣದೊಳ್
ನಿನಗೆ?''
''ಮೇವಿಗೆಯ್ದಿದ ಗೋವು ಪಿಂತಿರುಗದಿರೆ,
ಪುಡುಕುತದನಿತ್ತಣ್ಗೆ ಕಪ್ಪಿನೊಳ್ ತಪ್ಪಿ ಬರೆ,
ಕೊಳ್‌ಕೊಳ್ ಎನುತ್ತೆ ಬೆನ್ನಟ್ಟಿದನ್ ನಿಮ್ಮೊರ್ವ
ಮುಂಗಾಪಿನಾಳ್.''
''ಶೋಧಿಸಾತನಂ!'' ಬೆಸಸಲ್ಕೆ
ಸೇನಾನಿ, ಪುಡುಕತೊಡಗಿದನೊರ್ವ ಸೈನಿಕಂ
ಸರ್ವತ್ರಮಾ ಶುಕನ ಸರ್ವಸ್ವಮಂ. ತೆಗೆದ
ನಾನಾ ಪದಾರ್ಥಂಗಳೊಳ್ ಕಾಣುತೊಂದನಾ
ಕಟಿಯ ಬಂಧನಮೆನಲ್ ಫಣಿರೂಪದಿಂದಿರ್ದ
ಮಣಿಮಯ ಕಠಾರಿಯಂ, ಕೇಳ್ದನವನಂ: ''ಎಲವೊ,
ಪೊಲಂಗೆಯ್ಮಗೇತಕೀ ಗುಪ್ತಾಯುಧಂ? ಪೊಲಮೊ
ಮೇಣ್ ಪೊಲೆಯ ಕೊಲೆಯೊ? ಪೇಳಾವುದೈ ನಿನ್ನವರ್
ನಿನಗಿತ್ತ ನೇಮಂ?'' ಎನುತ್ತಿರಲ್, ತಳ್ಳಿದನ್
ತೆಕ್ಕನೆ ಶುಕಂ ತನ್ನನರಸುತಿರ್ದಾತನಂ
ಕಪಿದೂತನಂ. ನಿಂದು, ಶೋಧನೆಗೆ ತಡೆಯಿಕ್ಕಿ,
ಕೋಪೋಗ್ರನಾದಾತನಂ ಪಿಡಿದು ಪುಡುಕಲ್ಕೆ
ಪಡೆವಳಂ ಬೆಸಸೆ, ಮುಷ್ಟಾಮುಷ್ಟಿಯಾಯ್ತಲ್ಲಿ!
ಸುಗ್ರೀವ ಮಾರುತಾತ್ಮಜರೊಡನೆ, ಸೌಮಿತ್ರಿ
ಸಹಿತ, ಮುಂದಣ ಮಾರ್ಗಮಂ ಮಂತ್ರಿಸುತ್ತಿರ್ದ
ಸೀತಾ ಹೃದಯನಾಥನಾಲಿಸಿದನಾ ಶುಕನ
ಕಾರಣದ ಕಳಕಳಧ್ವಾನಮಂ. ''ರಕ್ಷಿಸಯ್,
ರಾಮ, ರಕ್ಷಿಸು ನನ್ನನಯ್ಯೊ ಕೊಲುತಿಹರಯ್ಯ
ದೂತನಂ!'' ಎಂಬ ಪುಯ್ಯಲ್‌ಗೇಳುತೇಳ್ವನಂ
ಶ್ರೀರಾಮನಂ ವಿನಯದಿಂ ತಡೆದು ಸಂತಯ್ಸಿ,
ರವಿಸುತಂ ಹನುಮನಂ ನೋಡಲಾತಂ ಬಂದು

ತಡೆದನಾ ಸದೆಬಡಿಯುತಿರ್ದರಂ: ''ದೂತನಂ
ಕೊಂದಪರೆ? ಸಾಲ್ಗು ಬಿಡಿಮಾತನಂ.'' ಎಂದನಿಲ
ಸಂಭವಂಗಾ ಗಂಧಮಾದನಂ: ''ಪುಸಿವನಯ್,
ಆಂಜನೇಯ, ದೂತನಲ್ತಿವನೆಮ್ಮ ಘಾತಿಸಲ್
ಬಂದ ಋುಳನ್: ಪಗೆವರೊಳಸಂಚು ಕಳ್ಗೊಲೆಗೆ
ಕಳುಹಿರ್ಪ ಬೇಹುಗಾರನ್. ಚೋರನೀತಂಗೆ
ತಕ್ಕುದನೆ ಬೆಸಸಿದೆನ್. ಕಾಣೇ ಕಠಾರಿಯನ್!
ಪಳ್ಳಿಯೊಕ್ಕಲಿಗನೆಂದಾಡಿದಿವನೊಡನಿರ್ದ
ನೋಡೀ ಕಿಮುಳ್ಳಿದೋಲೆಯೊಳೆಸೆವ ಸಂಕೇತ
ಲಿಪಿ ಲಿಖಿತಮಂ!'' ''ದಿಟವನರಿವಂ. ರಘೂದ್ವಹಂ
ಪೇಳ್ದಟ್ಟಿದನ್. ಕಳುಹಿಸೀತನನ್ ನನ್ನೊಡನೆ,
ವಾನರೇಂದ್ರನ ಕೇಂದ್ರ ಶಿಬಿರಕ್ಕೆ.'' ಕೇಳ್ದದಂ
ಮೇರೆ ಮೀರ್ದಾನಂದದಿಂ ಶುಕಂ, ತನ್ನಪಾಯಂ
ಸಫಲಮಾದುದಕಂಜನಾ ಸೂನುವಿಗೆ ಮನದೆ
ವಂದಿಸುತೆ, ಹಿಂಬಾಲಿಸಿದನಾತನಂ ಧೂರ್ತ
ಸಹಜಮೆಂಬತಿವಿನಯದಿಂದೆ.

ರಘುವೀರನಂ,
ಶ್ಮಶ್ರು ಭೀಷ್ಮಾನನದ ಸಿಂಹ ಗಂಭೀರನಂ,
ವಿಪ್ರಲಂಭಗ್ರೀಷ್ಮ ಸಂಕಟ ತಪಸ್ತೇಜೋ
ಪ್ರದೀಪ್ತಾಕ್ಷಿ ತೀಕ್ಷ್ಣನಂ ಕಂಡುದೆ ತಡಂ ಶುಕಂ
ಜಾನಕೀಜೀವನಂ ತಾತ್ಕಾಲಿಕಕೆ ತಾಂ
ನಿರಿಚ್ಛನಾದನೆನೆ, ಮಾಣ್ದುದು ಜಿಂಹಜೀವಿಯ
ನಿಸರ್ಗ ವಕ್ರತೆ; ಮುಗ್ಧಸರಳತೆಯನನುಕರಿಸಿ
ಮೂಡಿದತ್ತೊಂದಪೂರ್ವಂ ಮೂರ್ಖತಾ ಋಜುತೆ.
ದೈತ್ಯೇಂದ್ರ ಸಮ್ಮುಖದೊಳನುಭವಿಪ ಗೌರವಕೆ
ಮಿಗಿಲಪ್ಪ ಗೌರವವನನುಭವಿಸಿ, ಮರೆಯುತ್ತೆ
ಮುನ್ನ ತರಿಸಂದ ಬೇಹಿನ ಬಟ್ಟೆಯಂ, ಸತ್ಯ
ಸಾನ್ನಿಧ್ಯಮಹಿಮೆಗೆನೆ, ಮಣಿದು ಕೈಮುಗಿದನೈ
ರಾವಣಾರಿಯ ರಾಜವಿಗ್ರಹಕೆ! ಸತ್ತ್ವದೆಡೆ
ಸತ್ಯಮೇ ಪರಮ ಸತ್ಫಲವನಿತ್ತಪುದೆಂಬ
ವಾದಪೂರ್ವದ ಬೋಧದಿಂ ಸತ್ಯಧೈರ್ಯಮಂ

ಧರಿಸಿದ ದಶಗ್ರೀವ ಗುಪ್ತಚಾರಂ ಶುಕಂ,
ಪ್ರಶ್ನಿಸಿದ ಸುಗ್ರೀವನಂ ತಿರಸ್ಕರಿಪವೊಲ್,
ಮಿಥಿಳಾತ್ಮಜೆಯ ಮನಃಪ್ರಿಯನ ಮೊಗದೊಳ್ ನಟ್ಟ
ನೋಟಮಂ ಪಿಂ ಮರಳ್ಚದೆಯೆ, ಇರ್ದುದನೆಲ್ಲಮಂ
ಉಸಿರ್ದನಿರ್ದಂತೆವೋಲ್:
"ಲಂಕೇಶ್ವರನ ಬೇಹಿನಾಳ್
ದಿಟಮೆಂ. ಪೆಸರ್ ಶುಕಂ. ಐತಂದೆನರಿಯಲ್ಕೆ
ನಿಮ್ಮ ಪಡೆಯಂ, ಮತ್ತೆ ನಡೆಯನಂತೆಯೆ ನಿಮ್ಮ
ಪುರುಳುಮಂ." "ನೇರಮೈತರದಿಂತು ಬಳಸಿನೊಳ್
ಬಂದೆಯೇಕಯ್?" "ಪಗೆಯನರಿಯಲ್ಕೆ ಮುನ್ನಮಾ
ಬಟ್ಟೆ ಜಾಣಲ್ತು. ವೈರಿಯ ಬಲಕೆ ಮಿಗಿಲವನ
ಹೃದಯ ಪರಿಚಯಮಲ್ತೆ ಬೇಹಿಂಗೆ ಮೊದಲ ಗುರಿ!
ಶೀಲವರಿಯದ ಮುನ್ನಮಲಸಿದೆನ್ ನೇರ್‌ನಡೆಗೆ."
"ಅಳ್ಕಿದಯ್?" "ಅಲ್ತಲ್ತು. ಅಲಸಿದೆನ್." "ಪುಯ್ಯಲ್ಚಿ
ನೀನೊರಲ್ದುದು ಅಲಸಿಕೆಯ ಕುರುಹೊ?" ನಗೆಯಂ
ಕಿವುಳ್ಗೇಳ್ದು ಬೇಹುಗಾರರ ಬಲ್ಲಹಂ: "ನಮ್ಮ
ರೀತಿಯ ರಹಸ್ಯಗಳ್ ನಿಮ್ಮ ನಗೆಗೀಡಾಗೆ,
ಬೇಹುಗಾರಿಕೆಗದುವೆ ಜಯಲಾಂಛನಂ." ಕಂಡು
ಶುಕನಲಘು ಭಂಗಿಯಂ ರಘುಜಂ ಕಪೀಂದ್ರಂಗೆ:
"ಹಗುರನಲ್ಲೀತನಂ ಸಾಮಾನ್ಯನೆಂದೆಣಿಸಿ
ಕೈತವಕ್ಕೀಡಾಗದಿರ್. ಸರಳಮೆಂಬವೋಲ್
ಈತನೊಳ್ ತೋರ್ಪೀ ಋಜುತ್ವಮುಂ, ಸರ್ಪದ
ಋಜುತ್ವದೊಲ್, ವಿಷಪೂರ್ಣಮಾಭೀಳಕರಮಲ್ತೆ?
ಸಮಯವೊದಗಲ್ ಮರಳಿ ನೈಜವಕ್ರತೆಯಾಂತು
ಸಾಧಿಸದೆ ಬಿಟ್ಟಪುದೆ ತನ್ನ ಸಂಕಲ್ಪಮಂ?
ಪಾಪದ ರಥಂ ಸ್ವಾರ್ಥಸಾಧನೆಗೆ ಕೆಲವೊರ್ಮೆ
ಪಿಡಿದಪುದು ಪುಣ್ಯಪಥಮಂ!" ಜಾನಿಸುತ್ತಿನಿತು,
ದೃಢಮೊರೆದನಿಂತಾಜ್ಞೆಯಂ: "ವಾನರೇಂದ್ರ, ತೋರ್
ದನುಜೇಂದ್ರ ದೂತನೀತಂಗೆಮ್ಮ ಪಡೆಗಡಲ
ಬಿತ್ತರಮನಾಳಮನ್. ದಿಟದ ಕೆಚ್ಚಿರಲೆಮಗೆ
ಮುಚ್ಚೇವುದಯ್? ತಿಳುಹಲೀತಂ ದಶಾನನಗೆ

ತನಗೊದಗಲಿರ್ಪ ದಶೆಯಂ!''
ತೆಕ್ಕನೆಳ್ಚರ್ತು
ರಾಮ ಸಂಮ್ಮೋಹ ಶಕ್ತಿಯನುರ್ಚುವಂದದಿಂ
ವಕ್ಷಮುಬ್ಬುರ್ವೊಲುಸಿರ್‌ಸುಯ್ದು ನಕ್ಕಾ ಶುಕಂ:
''ನುಡಿಯದಿರ್ ಮತ್‌ಪ್ರಭುಗೆ ಧಿಕ್ಕಾರಮಂ! ನೀಂ
ನರೇಂದ್ರನಪ್ಪೊಡಮೆನ್ನ ಪ್ರಭು ದಿಗುಪಾಲರ್ಗೆ
ಸಾರ್ವಭೌಮಂ! ನಿನ್ನ ಸೇನೆಯನೆನಗೆ ತೋರ್ದು,
ಸಾನದಂ ದೊರೆಗೊರೆವ ಬಳಸುಗೆಯ್ಮೆಗೆ ಬರಿದೆ
ದಣಿಯದಿರ್. ಮೀಸಲಾಗಿಪ್ಪುದಾ ಕಿರುಗೆಯ್ಮೆ
ನನ್ನಿಂದಮೆನ್ನ ಕಿಂಕರರಿಗೆ. ಅದಂತಿರ್ಕೆ.
ನಿನ್ನ ಮೇಲ್ ಕರುಣೆ ನನ್ನಿಂದಮೀ ನುಡಿಸುತಿದೆ
ವಾಕ್ಯಂಗಳಂ. ನಿನ್ನನೊಲ್ಲದಾ ಸತಿಗಾಗಿ
ನಿನ್ನ ತಾಯಿಗೆ ಪುತ್ರನಿಧನವ್ಯಥೆಯನೇಕೆ
ತಂದೊಡ್ಡುವೈ ವೃಥಾ? ಮಿಥಿಳಾತ್ಮಜೆಯ ಲಜ್ಜೆ
ಲಂಕೇಶ್ವರಂಗಾಗಿರ್ಪುದಯ್ ಸೊಗದ ಸಜ್ಜೆ!. .''
ಮತ್ತೆ ಮುನ್ನೊರೆವ ಮುನ್ನಮೆ ಆಂಜನೇಯನ
ಚಪೇಟಪ್ರಹಾರದಿಂ ಜಡಮಾಯ್ತು ಶುಕ ಮುಖಂ!
ತತ್ತರಿಸಿ ಬೀಳ್ವನಂ ತಾಂಗದಿರೆ ಸೌಮಿತ್ರಿ,
ಚರಣ ಘಾತಕೆ ಚರಂ ಪೊರ್ದುತಿರ್ದನೊ ಏನೊ
ಪಂಚತ್ವಮಂ? ಮಾತನಾಡದೆ ಮರುತ್ಸುತಂ
ಸೀತೆಯೊಡೆಯನ ನೋಟದಂಕೆಗೆ ಅವುಂಕಿದನ್
ತನ್ನೆರ್ದೆಯ ರೋಷದವಮಂ: ''ಸಲ್ಲದಿಲ್ಲಿಗೆ,
ಅರಿಂದಮ, ಸಾತ್ವಿಕ ವಿಧಾನಂ. ಅಮರ್ತ್ಯ ಭೂ
ಈ ಲಂಕೆ. ಮರ್ತ್ಯರೀತಿಗುಮಂತೆ ನೀತಿಗುಂ
ಪೊರಗು. ಕುಲದಿಂ ಮಾತ್ರಮಲ್ತಿವರ್ ಸ್ವಗುಣದಿಂ
ರಾಕ್ಷಸರ್! ಭಯಕ್ಕಲ್ಲದೆಯೆ ನಯಕೆ ಸೋಲರೀ
ನಕ್ತ ಜೀವರ್. ವಿಭೀಷಣದೇವನೊರ್ವಂ ವಿನಾ
ಕಂಡೆನಿಲ್ಲೊರ್ವನಂ ಸತ್ತ್ವಪ್ರಧಾನನಂ
ಲಂಕಾ ಪುರುಷಮುಖ್ಯರೊಳ್. . .'' ತನಗೆ ಭಂಗಮಂ
ನೆಗಳ್ದಾಂಜನೇಯಂಗೆ ಮುಖಭಂಗಮಂ ಮಾಳ್ಪ
ಮಾಳ್ಕೆಯಿಂದಾತನ ನುಡಿಗೆ ನಡುವೆ ಬಾಯಿಕ್ಕಿ

ಬೇಹುಗಾರಂ: ''ಇಂದು ನಿನ್ನಾ ವಿಭೀಷಣಂ
ಲಂಕಾ ಪ್ರಮುಖನಲ್ಲಯ್. ಅರಸನಾಕ್ರೋಶಕ್ಕೆ
ದ್ರೋಹಕಾರಣದಿಂದೆ ಸಿಲ್ಕಿ ನಗರಚ್ಯುತಂ,
ದೇಶಗೌರವ ಬಾಹಿರಂ! ತನೂಜೆಯನಂತೆ
ಸತಿಯುಮಂ ತೊರೆದು, ದೇಸಿಗನಾಗಿ ಪೊರಮಟ್ಟು
ವ್ರತಿಯಂತೆ ಪೊಳ್ತುಗಳೆಯುತ್ತಿರ್ಪನಾ ದ್ರೋಹಿ,
ದಿಕ್ಕುಗೆಟ್ಟೊಂಟಿಗಂ, ವೇಲಾದ್ರಿ ಪಂಕ್ತಿಯ
ವಿಪಿನ ಮಧ್ಯೆ. ಕಾಗೆಯುಂ ಕರೆಯದವನತ್ತಣ್ಗೆ!
ಇರ್ದನಂತರ್‌ವೈರಿಯೊರ್ವನವನುಂ ನಿಮಗೆ
ನೆರಮೀಯದಂತಾಯ್ತಲಾ?'' ಶುಕನ ನುಡಿಗೇಳ್ದು
ಸುಖನಯನನಾದಾಂಜನೇಯಂ, ಸುವಾರ್ತೆಯಂ
ತರ್ಪ ಸನ್ಮಿತ್ರನಂ ತಳ್ಕೈಸುವೋಲ್, ಅವನ
ಗಾತ್ರಮಂ ತಬ್ಬಿದನ್; ಕಂಡರಚ್ಚರಿಗೊಳಲ್
ಮುಂಡಾಡಿದನ್: ''ನೀನ್ ಸುಹೃತ್ತೆನಗೆ, ಶುಕ! ಪೇಳ್
ವಿಭೀಷಣನ ನೆಲೆಯನಾಂ ನಿನಗೆ ದಲ್ ನಿತ್ಯಋಣಿ!
ಎಲ್ಲಿದನ್? ಏಕೆವೋದನ್? ಆರ್ಗೆ ಮೈತ್ರಿಯಂ
ಮಾಡೆ ಲಂಕಾದ್ರೋಹಿಯಾದನ್?'' ಕಿತವ ವಿದ್ಯಾ
ಗುರು, ಶುಕಂ, ಚಟುಲಾಶುಮತಿ, ಹಾಸ್ಯಗೈವಂತೆ
ಕುಟಿಲ ಮಂದಸ್ಮೇರ ಮುಖದಿಂ ಮರುತ್ಸುತನ
ಮೋರೆಯನರಿತು ನೋಡಿ: ''ಪರಿಹಾಸ್ಯಕೆಂದೆನಯ್
ಪುಸಿ ಅದನ್! ಬೆಳ್ಪನಂದದಿ ತಪ್ಪನಪ್ಪಿ, ನೀಂ
ಕೋಳುವೋದಯ್!'' ಕರ್ಕಶತೆಯಾಂತುದಂಜನಾ
ವತ್ಸವದನಂ. ಒಯ್ಯನವನಂ ತಳ್ಳಿ ಸರಿದನ್
ಮುನ್ನಮಿರ್ದಾ ತನ್ನ ಪೀಠಕೆ. ಕಪೀಂದ್ರನಂ
ಕಣ್ಣರಿಯೆ ನೋಡಿದನ್. ಬಳಿಯಿರ್ದ ವಾನರಗೆ
ಪರ್ಚಿದನ್ ವಾನರೇಂದ್ರಂ: ''ಬೆಸಸು ಬೇಗದಿಂ
ಶರಗುಲ್ಮಗೀತನಂ ಪಿಳಿದು, ನಿಜಮನಿತುಮಂ
ತಿಳಿದು, ಬಾಳ್ವೆರಸಿಯೆ ವಿಸರ್ಜಿಸವೇಳ್ಕುಮೆಂಬ
ನಮ್ಮಿಚ್ಛೆಯಂ.''
ಬಂದರಾಗಳೆ, ಭಯಂಕರಂ,
ವ್ಯಾಘ್ರೋಗ್ರರಾ ನರಕ ಶಿಕ್ಷಾ ಪ್ರವೀಣರಾ

ಶರಗುಲ್ಮ ಯಮಕಿಂಕರರ್. ರಾಹು ಬಾಹುಗಳ್
ಪಿಡಿಯೆ ತಿಂಗಳ್ ಕಾಣದಾಗುವೋಲಾ ಶುಕಂ
ಮರೆಯಾಗುತವರ ಬಲ್‌ನೆಳಲ್‌ಗಳ ನಡುವೆ ತಾಂ
ಪುದುಗಿ ಪೋದನ್, ವಂಚನೆಯೆ ವೋಪಂತೆವೋಲ್!

ಸಂಚಿಕೆ ೧೧

## ಸಫಲಮಾಯ್ತಾ ರಾಯಭಾರಂ

ಮಲೆಯ ಓರೆಯ ಮರಗಳಿಡುಕುರೊಳ್, ಗದ್ಗದಿಸಿ
ದುಮುಕುತಿರ್ದೊಂದು ಗಿರಿನಿರ್ಝರದ ತೀರದೊಳ್,
ಪುದುಗಿದುಟಜದೊಳೋದುತಿರ್ದನು ವಿಭೀಷಣಂ
ತನ್ನ ಮಗಳನಲೆ ಕಳುಹಿರ್ದೋಲೆಯಂ. ಕದಂ
ನಸು ತೆರೆದುದನಿಲ ಸಂಚರಕೆ ಹಣತೆಯ ಸೊಡರ
ಕುಡಿ ಕುಣಿದು, ಕುಣಿಸಿದುದು ಮೊಗವೆತ್ತಿದಾತನ
ಬೃಹಚ್ಛಾಯೆಯಂ. ಗರ್ಜಿಸುತ್ತುರುಳ್ವರ್ಬಿದನಿ
ಪೊರಗಿಟ್ಟಣಿಸಿದಂಧಕಾರವ ಕಡೆವವೋಲುಕ್ಕಿ
ಬಂದತ್ತು. ಪಣೆ ಸುರ್ಕಿ ನೋಡುತಿರೆ, ಬಾಗಿಲೊಳ್
ಕಂಡನಾಳ್. ಕಣ್‌ಪ್ರಶ್ನೆಗಾತನ್ ತುಳಿಲ್‌ಗೆಯ್ದು
ಬಿನ್ನಯ್ಸಿದನು ಬರವನಪರಿಚಿತರಾ! ಕುತುಕ
ಚಿತ್ತನ್ ವಿಲೋಕಿಸುತ್ತಿರೆ, ದೊಂದಿವೆಳಗಂ
ಸಮರ್ಪಿಸಿ ನಿಶೀಥಿನಿಯ ವಶಕೆ, ದಾಂಟಿದರಗಂ
ಇರ್ವರ್ ಸುಧೀರಗಮನದ ವಿದೇಶವೇಷದ
ಕಪಿಧ್ವಜರ್!
ಕೈಮುಗಿದರಿಗೆ ವಿನಯ ವಿನಿಮಯಂ
ಗೆಯ್ದಾ ವಿಭೀಷಣಂ ತೋರ್ದಾಸನದಿ ಕುಳ್ತು,
ಹರುಷದೆಳನಗೆವೆರಸಿ ನೋಡಿದರು, ಬೆರಗಾಗಿ,
ರಾಕ್ಷಸ ಕುಲೋತ್ತಮನ ವದನದೋಜಸ್ಸತ್ತ್ವ
ಸುಭಗ ಗಾಂಭೀರ್ಯಮಂ. ಅನಲೆ ಬರೆದೋಲೆಯಿಂ
ರಾಜಕೀಯ ಸ್ಥಿತಿಯನಾಮೂಲಾಗ್ರಮಖಿಲಮಂ
ಅರಿತಾ ವಿಭೀಷಣಂ ಸ್ಮಿತಸೌಮ್ಯನಿಂತೆಂದು

ಬೆಸಗೊಂಡನಾ ಬಂದವರ ಪೆರ್ಮೆಯಂ ಗ್ರಹಿಸಿ
ಚಲನ ಚಾರಿತ್ರದಿಂ:
“ಧನ್ಯಮಾಯ್ತೆನ್ನ ಕುಟಿ
ಮಾನ್ಯರಾಗಮನದಿಂ!”
“ಮಾನ್ಯನಿರ್ಪುದರಿಂದೆ
ಮುನ್ನಮೆಯೆ ಧನ್ಯಮಾಗಿರ್ಪ ಧರ್ಮಸ್ಥಳಕೆ
ಪುಣ್ಯಕಾರ್ಯಕೆ ಪುಣ್ಯಪಕ್ಷದ ನೆರಂ ಬೇಡಿ
ಯಾತ್ರೆವಂದಿರ್ಪೆವೆನೆ ನಿನ್ನೆಂದುದರ ನನ್ನಿ
ನೆರೆವುದಿನ್ನುಂ, ಮಹಾಸತ್ತ್ವ.” ವಾನರ ಕವಿಯ
ವಾಗ್‌ಧ್ವನಿಯ ಮೈತ್ರಿಗಾಹ್ಲಾದಿಸುತ್ತಾ ದೈತ್ಯ
ಸಾಗರ ಸುಧೋಪಮ ವಿಭೀಷಣಂ ಮೈಂದಂಗೆ
ಸುಪ್ರಸನ್ನಂ:
“ನಿನ್ನ ಸೌಜನ್ಯಮೇ ಪೇಳ್ವುದಯ್
ನೀಂ ತಂದ ಕಜ್ಜದೊಳ್ಪಂ. ನಗೆಯ ಬೆಳ್ಮಡಿಯೆ
ಸಕ್ಕಿಯೊರೆದಿದೆ ಬಗೆಯ ಸಯ್ಪಿಂಗೆ. ನಿಮ್ಮವರ್
ನಮ್ಮ ಲಂಕೆಗೆ ವೈರಿಗಳ್ ತಾಮಾದೊಡಂ
ವೈರಮೇಳದು ನಿನ್ನ ಮೇಲೆನಗೆ.”
“ಲಂಕೆಗಲ್ತಾಂ
ವೈರಿಗಳ್; ಪಾಪಕ್ಕಧರ್ಮಕ್ಕೆ.”
“ಸ್ವಹಿತಕ್ಕೆ
ಪುಣ್ಯವರ್ಣಂ ಬಳಿದು, ಧರ್ಮನಾಮವನಿತ್ತು,
ತನ್ನ ಪಕ್ಷಕೆ ಲೋಕದನುಕಂಪಮಂ ಸೆಳೆದು,
ಬಲ ಸಂಗ್ರಹಂಗೈದು ಶತ್ರುವೈನಾಶ್ಯಮಂ
ಸಾಧಿಪ್ಪುದಲ್ತೆ ಪದ್ಧತಿ ರಾಜತಂತ್ರಕ್ಕೆ?
ಪಲ್ಲವಿಯನುಲಿಯುತಿಹೆ ನೀನೆಲ್ಲರುಲಿವುದನೆ,
ವಾನರೋತ್ತಮ!”
“ಮೈಂದನೆಂ! ದ್ವಿವಿದನೀತಂ
ತನೂಜಂ ಸುಷೇಣ ಸೇನಾಪತಿಗೆ; ಮೇಣೆನಗೆ
ಪರಮ ಗೆಳೆಯಂ; ತಾನುಮೊಂದಕ್ಷೌಹಿಣಿಯನಾಳ್ವ
ಗೌರವಕ್ಕರ್ಹನಾಗಿರ್ಪ್ಪಂ! ಲಘುತ್ವಮಂ
ಕಾಣನೀತಂ, ಅನೇಕಾನೇಕಪ ಮಹದ್ಬಲ
ಸಮನ್ವಿತಂ! ಬಂದೆವಾವ್ ಸುಗ್ರೀವನಾಜ್ಞೆಯಿಂ,

ರಾಘವಾಪೇಕ್ಷೆಯಂ ನಿನಗರುಹೆ, ದೈತ್ಯವರ.
ನಿನ್ನ ಕೀರ್ತಿಯ ವಾರ್ತೆಗಿದಿರಾಡುತಿದೆ ನಿನ್ನ
ಜಿಹ್ವೆ. ನಿನ್ನೆಲ್ಲ ಕಥೆಯಂ ವಿವರಿಸಿದ ಶುಕಂ
ಪುಸಿವೇಳ್ದನೇಂ? ಶರಗುಲ್ಮನಿತ್ತುರುವ ಶಿಕ್ಷೆಗೆ
ಒರಲ್ದನೇಂ ತನ್ನರ್ದೆಯ ಕೌಟಿಲ್ಯಮಂ? ಮೇಣ್
ದಶಾನನಂ ನಿನ್ನನೆಮ್ಮಂ ವಂಚಿಸಲ್ಕೆಂದೆ
ತೋರ್ಕೆಯಂತಃಕಲಹಮಂ ರಚಿಸಿ, ಶುಕನವೊಲೆ
ಬೇಹುಗಾರಂ ಗೆಯ್ದು, ನಿರಸನಂ ಗೆಯ್ದಿರ್ಪನೇಂ
ಲಂಕೆಯಿಂ?—ಅಲ್ತಲ್ತು! ನಯನ ಸಾತ್ತ್ವಿಕ ಕಾಂತಿ,
ಮೊಗದೋಜೆ, ಮೇಣ್ ಧ್ವನಿಯ ಧೈರ್ಯಂ, ಇವೆಲ್ಲಮುಂ
ಬಯ್ಯುತಿವೆ ನನ್ನೂಹೆಯಂ.—ಸ್ವಹಿತಮೇಂ ನನಗೆ
ಮೇಣ್ ದ್ವಿವಿದನೀತಂಗೆ ಇಲ್ಲಿ, ಈ ಲಂಕೆಯೊಳ್,
ಪೇಳ್, ವಿಭೀಷಣ? ಕಪಿಧ್ವಜ ಕುಲಕೆ ನೆಲದ ತೃಷೆ,
ರಾಜ್ಯ ರಚನಾಕಾಂಕ್ಷೆ, ಬಾಯ್ಕೆಳಿಪಾಸೆಗಳ್
ಬಹು ದೂರಮಿಂದುಮೆಂದುಂ. ವಾನರೇಂದ್ರಂ
ಧರಾಜಾತೆಯಾಣ್ಮಂಗೆ ನೆರವಾದುದೀ ನಿಮ್ಮ
ಲಂಕೆಯಂ ಗೆಲ್ದು ಭೋಗಿಸಲಲ್ತು. ನೀನೆಲ್ಲಮಂ
ಬಲ್ಲೆ. ರಾವಣನಿದಿರ್ ನೀನೆಮ್ಮ ಸಲುವಾಗಿ
ಪೇಳ್ದುದಕ್ಕಿಂ ಮಿಗಿಲನೊರೆಯಲಾರೆನ್.—ಪೆಣ್
ಪಾಣ್ಬೆಯಾದೊಡಮವಳನಿಚ್ಛೆಗೆ ವಿರುದ್ಧಮ್
ಕವರ್ದುಯ್ಯೆ ಶಿಕ್ಷೆಗರ್ಹಂ. ಪತಿವ್ರತೆಯರ್ಗೆ
ಆರಾಧನಾ ಪ್ರತಿಮೆಯೊಲ್ ಪೂಜ್ಯೆಯಾಗಿರ್ಪ
ದೇವಸಮ ರಘುಕುಲ ಲಲಾಮನಾ ಭಾರ್ಯೆಯಂ
ಕಳ್ದುಯ್ದ ನೀಚಂಗದಾವುದಕ್ಕುಮೊ ಬಿದಿಯೆ
ಬರೆದಿರ್ಪುದೆನೆ, ನೀನುಮಾನುಮದನೋದುವುದೆ
ಸಾಧ್ಯಕಾರ್ಯಂ. ತಿದ್ದಲಕ್ಕುಮೆ, ವಿವೇಕನಿಧಿ,
ಪೇಳ್? ನೀಂ ತಟಸ್ಥಮಿರು ಮೇಣ್ ದಶಗ್ರೀವಂಗೆ
ನೆರಂಬೋಗು, ರಾಮನ ವಿಜಯ ವೀಥಿಗೆ ವಿಧಿಯೆ
ಕಿಂಕರ ಶಿಲ್ಪಿ. ವಾನರರ ಸೇನೆಗನ್ಯರ ನೆರಂ
ಜಯಪೀಠಮಲ್ತು, ಬೀಸುವ ಚಾಮರಂ!—ಕೇಳ್,
ಮಹಾಪ್ರಾಜ್ಞ, ದುರಿತವನರಿಯುತದಂ ತ್ಯಜಿಸುತ್ತೆ

ದೂರಕೆ ಸರಿದ ಮಾತ್ರದಿಂ ಕೈಸಾರ್ವುದೇಂ ಸಯ್ಪು?
ದೇವನಟ್ಟುವ ಕೃಪಾ ದೂತರ್ಗೆ ಕಿವಿಗೊಟ್ಟು,
ಪುಣ್ಯ ಪಕ್ಷದಿ ನಿಂತು, ಕರ್ಮಂಗೆಯ್ಯದೆಯೆ ಸಿದ್ಧಿ
ಲಭಿಸುವುದೆ? ನಾಂ ಪೇಳ್ವುದಿದು ಬರಿ ಸಾಮ್ಯಮಲ್ತು;
ಕಂಡೊರ್ಗೆ ಕಡು ದಿಟಂ ಕಾಕುತ್‌ಸ್ಥನಂ!''
ಕೇಳ್ದು,
ಕಪಿ ಕವೀಂದ್ರನ ಭಾವದೀಪ್ತ ವಾಕ್‌ತೀರ್ಥದೊಳ್
ಮಿಂದನಲೆಯಯ್ಯನ ಬಗೆಯ ಕಣ್ಗುಣ್ಮಿದತ್ತು
ಮಗಳೆಡೆಯ ಮೂರ್ತಿ ಸೀತಾದೇವಿಯಾ. ಸುಯ್ದು,
ಕಣ್ಗೆ ಬಂದೊಂದಶ್ರು ಬಿಂದುವಂ ಹಿಂಗಿಸುತೆ
ಕರವಸ್ತ್ರದಿಂ, ಮೈಂದನಂ ದೈನ್ಯದಿಂ ನೋಡಿ
ಇಂತೆಂದನಾ ಇಂದ್ರಜಿತುಪಿತನವರಜಂ:
''ನೀನ್
ಪೇಳ್ದುದನಿತುಂ, ಮೈಂದ, ಕಟುವಾದೊಡಂ ದಿಟಂ.
ರಘೂದ್ವಹ ಮಹಾ ಸತೀ ಮೈಥಿಲಿಯ ರಕ್ಷಣೆಗೆ
ಮಡದಿಯಂ ಮಗಳಂ ನೆವಂ ಪೇಳ್ದು ನಗರಿಯೊಳ್
ಬಿಟ್ಟು ಬಂದಿರ್ಪೆನ್ನ ಈ ಕುದಿಬಗೆಯನರಿಯದೆಯೆ
ಕ್ರೂರ ವಾಗಸಿಪತ್ರದಿಂದೆನ್ನ ಹೃದಯಮಂ
ಸೀಳುತಿರ್ಪಯ್. ದುರಿತಮಂ ನಿವಾರಿಸಲೆಮಗೆ
ಕೈಲಾಗದಿರೆ ದುರಿತದಿಂ ದೂರಮಿರ್ಪುದುಂ
ನಿವಾರಣಾ ಸಮರ್ಥರಿಗೆ ಸಾಹಾಯ್ಯಮೈಸೆ?
ಪೇಳ್, ದ್ವಿವಿದ, ನೀಂ. ಕಪಿಧ್ವಜರೊಡನೆ ಕೂಡಿ ನಾಂ
ಪೆತ್ತ ತಾಯ್ಗೆಣೆಯೆಮ್ಮ ಪುಟ್ಟಿದೂರಂ ಪಾಳ್ಗೆಯ್ಸೆ
ದುರ್ಯಶೋ ನರಕದೊಳ್ ಚಿರಂ ಬೀಳ್ವೆನೈಸಲೆ?
ಪೊಲ್ಲಮಂ ಗೆಯ್ದನಣ್ಣಂ; ತೊರೆದೆನದರಿಂದೆ,
ತಿದ್ದಲೆಲ್ಲಮನೆಸಗಿ ಸೋಲ್ತು. ಪಗೆಯೊಡವೆರೆದು
ಸ್ವಜನಸ್ವದೇಶಂಗಳಂ ವೈರಿವಶಮಾಳ್ಪವೊರ್
ಕ್ಷುದ್ರ ವಿದ್ರೋಹಿಯಲ್ತಾಂ. ಧರ್ಮಕ್ಕೆ ಜಯಮಕ್ಕೆ
ಎಂದಾ ಜಗಚ್ಚೈತನ್ಯಮಂ ಪ್ರಾರ್ಥಿಸುತ್ತಿಲ್ಲಿ
ತಪಂಗೈಯ್ಯುವುದೆನ್ನಾಶೆ.''
''ತಪಧ ಮಹಿಮೆಯೊಳೆನಗೆ

ವಿಪುಲಮೈ ಶ್ರದ್ಧೆ. ಸೀತಾಸಾಧನಾಶೆಯನೆ
ನೀನಾಶಿಸಿದೆಯೈಸೆ! ಸೈನ್ಯ ಶಕ್ತಿಗೆ ಮಿಗಿಲ್
ದಲ್ ಸಂತರಾಶೀರ್ವಾದಮಪ್ರತಿಹತಂ,
ವಿಭೀಷಣಾಖ್ಯ.'' ಪರ್ವತಂ ಗುಹಾಧ್ವನಿಗೈವವೋಲ್
ಧ್ವನಿಗೈದುದಾಭೀಳ ಕಂಠಮಾ ದ್ವಿವಿದನಾಃ
''ರಾಮನಾಸೆಗೆ ನಿನ್ನದಿದಿರಲ್ತು. ಲಂಕೆಯೊಳ್
ಬರ್ದುಕಲರ್ಹತೆಯಾಂತುದೆಲ್ಲಮಂ ಪೊರೆಯಲ್ಕೆ
ಪಾರುತಿರ್ಪಂ ನಿನ್ನ ನೆರಮಂ. ಕಪಿಧ್ವಜರ್
ಉತ್ತಮಾನುತ್ತಮಂಗಳನೆಂತುಟರಿವರಯ್?
ನಿಷ್ಪಕ್ಷಪಾತದಿಂ ನಿರ್ಮೂಲನಂಗೈದಪರ್
ಲಂಕಾ ಸಮಸ್ತಮಂ. ನೀನೆಮ್ಮ ಪಕ್ಕಮಿರೆ,
ಅಳಿವುದಧಮಂ, ಉಳಿವುದುತ್ತಮಂ. ನಮಗಾಗಿ
ಬರದಿರ್ದೊಡಂ ನಿನ್ನ ದೇಶಕ್ಕೆ, ಜನಕೆ, ಮೇಣ್
ಧರ್ಮಕೆ ಹಿತಂಗೆಯ್ಯಲೆಂದಾದೊಡಂ ನೀಂ
ಬರಲ್ವೇಳ್ಕುಮಯ್, ಸತ್ತ್ವಶೀಲ.''
ವಿಪುಲ ವಪುವಿಂ
ಸ್ಫುರಿಸಿದಾ ತರ್ಕದ ಸುಸೂಕ್ಷ್ಮತೆಗೆ ತಲೆದೂಗಿದನ್;
ಬಾಗಿದನ್; ಕಿರುನಗೆಗೂಡಿ ನೋಡಿದನು ಮೈಂದ
ದ್ವಿವಿದರಂ: ''ವಾದ ಮಾತ್ರಕೆ ನುಡಿದುದಾದೊಡಂ
ನೀನೆಂದುದೆನಗೆ ಮಾನ್ಯಂ, ದ್ವಿವಿದ. ಪೊಳ್ತರೆಗೆ
ನಿಮಗೊರೆವೆನೆನ್ನ ನಿರ್ಧಾರಮಂ. ಈಗಳೇಳಿಂ;
ಪಣ್ಬಲಂಗಳ ಬಡವು ನೈವೇದ್ಯಮಂ ಸವಿದು
ಪವಡಿಪೊಂ. ಸಾಗಿತಾಗಳೆ ರಜನಿ ಬಹುಳದೂರಂ.''
ಎನುತ್ತಾ ದಶಗ್ರೀವಸೋದರಂ ಮೇಲೆಳ್ದು,
ಬಾಗಿಲಂ ನಸುತೆರೆದಿಣುಕಿದನ್: ''ಶಶಾಂಕಾಕ್ಷ,
ಬರವೇಳ್ ಹಿರಣ್ಯಕೇಶಿಯಂ.'' ಆಣತಿಯನೊರೆದು
ತನ್ನ ನಚ್ಚಿನ ಸೇವಕಗೆ, ತಿರುಗಿ, ಸುಗ್ರೀವ
ದೂತರಿಗೆ: ''ಅಮಿತ್ರಗೃಹ ಭೋಜನದೊಳೇನಾನುಮ್
ಆಕ್ಷೇಪಮಿರ್ಪುದೇಂ ನಿಮಗೆ?'' ''ನೀನಮಿತ್ರನ್?''
ಮೈಂದನೆಂದನ್ ಮುಗುಳ್ನಗುತೆ ''ನಿನ್ನೊಡನುಣಲ್
ಮಿತ್ರಕುಲರಿರ್ವರುಂ, ಸುಗ್ರೀವ ರಾಘವರ್,

ಮೈತ್ರಿಗೆಳಸುತ್ತಿರಲ್, ನಮಗೆ ದೂತರ್ಗದುವೆ
ದಿಟದಿಂ ಪ್ರಸಾದಮಯ್, ಸುಹೃದ್ವರ! ಭೋಜನಂ
ಸ್ನೇಹ ಕಾರಕಮಂತೆ ದೀಪಕಂ!'' ಹಾಸ್ಯಕ್ಕೆ
ಮೂವರುಂ ನಕ್ಕರಾ ನಗೆಯೆ ಬೆಸೆದುದು ಅಳಿಸಿ
ಭೇದವನವರನೆರ್ದೆಯೆರ್ದೆಗೆ.
ಬಂದನನಿತರೊಳ್
ರಾಕ್ಷಸ ತರುಣನೊರ್ವನಕ್ಷಿಗಾನಂದಮಂ
ಪ್ರೋಕ್ಷಿಸುವವೋಲ್. ''ವಯೋಮಾನದಿಂ ಕಿರಿಯನ್;
ಪಿರಿಯನಭಿಮಾನದಿಂ; ಪೆಸರ್ ಹಿರಣ್ಯಕೇಶಿ.
ಲಂಕೆಯೊಳಗಿರ್ಪೆಮ್ಮವನ್. ತಂದನನಲೆಯಿಂ,
(ನನ್ನ ಮಗಳಿಂ ಮೇಣ್ ಧರಾತ್ಮಜೆಯ ಶಿಷ್ಯೆಯಿಂ)
ಪತ್ರಮೊಂದಂ ಮಿತ್ರನೆಮಗೆ.'' ವಿಭೀಷಣನಿಂತು
ಪರಿಚಯವನುಸುರೆ, ಮೊಗಮರಳಿ ಕೈಮುಗಿದಾ
ಹಿರಣ್ಯಕೇಶಿಗೆ, ಹಸ್ತಲಾಘವನೀಯುತಿರ್ವರುಂ
ವಂದಿಸಿದರಾ ವಾನರರ್. ''ಅತಿಥಿಗಳಿವರ್
ಹಿರಣ್ಯಕ, ಕಪಿಧ್ವಜ ಚಮೂಪತಿಗಳೆಮ್ಮೆಡೆಗೆ
ನೀತಿಗೈತಂದಿಹರ್. ಮೈಂದನೀತಂ, ಮಹಾ
ಮಧುರಮತಿ, ಮೇಣ್ ವಶ್ಯವಾಕ್. ದ್ವಿವಿದನೀತಂ,
ಬೃಹದ್ ವ್ಯಕ್ತಿ, ಯುಕ್ತಿಶಕ್ತಿಗಳೆರಡರೊಳ್! ನಾಳೆ
ನೀನಿವರೊಡನೆ ಪೋಗವೇಳ್ಕುಂ ರಘೂದ್ವಹನ
ಸನ್ನಿಧಿಗೆ, ನನ್ನ ಪ್ರತಿನಿಧಿಯಾಗಿ. . . ಅದಂತಿರ್ಕೆ.
ಈಗಳಣಿಗೆಯ್ದುಣಿಸಿಗಿವರನುಯ್ವೊಂ. ಮುಂದೆ
ನಡೆ; ದಾರಿ ತೋರ್.''
ನಡೆದರನಿಬರುಂ ಹಿಂದಾ
ಹಿರಣ್ಯಕನಾ. ಅನತಿದೂರದೊಳಿರ್ದ ಶಾಲೆಯೊಳ್
ಸಿದ್ಧಮಿರ್ದುದು ದೈತ್ಯ ಭೋಜನಂ! ತರತರದ
ಪರಿಮಳವೆರಸಿದಾವಿಗಳ್ ವಿಧವಿಧದ ವರ್ಣ
ವರ್ಣಂಗಳಿಂ ಮೆರೆದ ಭೋಜ್ಯಂಗಳಿಂದೇರ್ದು
ಮೋಹಿಸಿರ್ದುವು ನಾಸ ನೇತ್ರಂಗಳಂ. ದ್ವಿವಿದ
ಮೈಂದರಾ ರಕ್ಕಸರೆ ಬೆಕ್ಕಸಂಬಡುವವೋಲ್
ಹೊಡೆ ಡೊಳ್ಳಲುಂಡರೆಸೆ, ಬೇರೆವೇಳ್ಕುಮೆ ಪೇಳ್
ಶಕುನ ಸಾಕ್ಷಿ, ರಾಯಭಾರ ಸ್ನೇಹ ಸಫಲತೆಗೆ?

## ಸಂಚಿಕೆ ೧೨

# ಸೈನ್ಯ ಗುಪ್ತಿ

ಏನು ಮೌನವಿದೆನ್ನ ಕೋಮಲೆ? ಕೋಪವೆ ನಿನಗೆ
ಕಾಮಿಸಿದನಿನಿಯನೆಂದನ್ಯ ವಿಷಯ ವಧೂ
ಸರೋಜ ಶಾರದೆಗೆ? ತಂಗೆಗೆ ಕರುಬುವರೆ, ಪೇಳ್,
ಉದಾತ್ತೆ ನೀಂ? ರೂಪಕ ರೂಪಿಯಾದೊಡೇನಾ
ಪ್ರೇಮಮುಂ ರಾಮ ಮಹಿಮಾ ಕೀರ್ತಿ ಕಥೆಯಲ್ತೆ?
ಕವಿಯೊಲ್ಮೆ ಕಡಲಲ್ತೆ? ಬಡಬ ಕುಂಭೋದ್ಭವರ್
ಕುಡಿದು ಪೂರೈಸುವರೆ? ನಿನಗೆ ರಸಮಿರದವೋಲ್
ಪೀರ್ವಳೆಂತೊರ್ವಳ್ ಕೃಶಾಂಗಿ ತಾನದನ್? ಏಳ್,
ಮುನಿಸುನುಳಿ; ಏಳ್, ಕೊಳ್ ಸಹಸ್ರತಂತ್ರಿಯ ನಿನ್ನ
ಗೀರ್ವಾಣ ವೀಣೆಯಂ; ಪೇಳ್, ಮೀಂಟು ಮುಂದಣ ಕಥಾ
ಹರಜಟಾ ಜೂಟಪ್ರಪಾತ ಗಂಗಾ ಸ್ರೋತಮಂ
ಸಂಗೀತಮಂ!
ಶುಕಂ ಸ್ವೇಚ್ಛೆಯಿಂದರಿಗಳ್ಗೆ
ಸೆರೆವೋದುದಂ, ತಾಂ ಕಂಡ ರಿಪು ಬೃಹದ್ಬಲದ
ರುಂದ್ರ ಸಾಮರ್ಥ್ಯಮಂ, ರಾಮಂಗೆ ಸ್ನೇಹಂ
ವಿಭೀಷಣನ ಕೂಡೆ ದೊರೆಕೊಂಡುದಂ, ದುರ್ಗಮಂ
ಲಗ್ಗೆನುರ್ಗ್ಗಲ್ ಕಪಿನೃಪನ ದಂಡಯಾತ್ರಾ
ಪ್ರಚಂಡ ಸನ್ನಾಹಮಂ ಬಣ್ಣಿಸಿದನಸುರಂಗೆ,
ಭಯ ಗದ್ಗದಂ ಬೆರಸಿ, ರಾಮ ಸೇನಾ ಶಿಬಿರ
ಮೃತ್ಯು ಪಂಜರದಿಂ ಜಗುಳ್ದು ಜುಣುಗಿ ಬಂದಾ
ಸಾರಣಂ. ''ಹಂಚದಿರು ನಿನ್ನಳ್ಕನಿತರರಿಗೆ!
ನಡೆ, ಹೊಂಚಿ ಬಂದೊರೆಯುತಿರು ನನಗೆ ವೈರಿಯ

ರಹಸ್ಯಂಗಳಂ.'' ಎನುತೆ ತೊಲಗಿಸಿದನಾತನಂ
ಪುರ್ವು ಜರ್ವಿಂ. ಒಡನೆ ಬರಿಸಿದನು ಸಂಜ್ಞೆಯಿಂ
ಸನಿಹದೊಳೆ ತೆರೆಯ ಮರೆಯೊಳ್ ಕಾವಲಡಗಿರ್ದ
ದುರ್ಮಂತ್ರಸಿದ್ಧನಂ, ಕಪಟ ಕೋವಿದನಂ,
ಕಠೋರ ಮತಿ ಶಾರ್ದೂಲನಂ. ಮೊಸಳೆ ಮೋರೆಯಾ
ಕ್ರೂರ ಚಾರಿಗೆ ಬೆಸಸಿದನು ದೈತ್ಯ ದೇವಂ:
''ಸಮೀಪಿಸುತ್ತಿದೆ ಕಪಿಧ್ವಜ ಗಜಂ, ಶಾರ್ದೂಲ,
ಕಲಂಕಲೀ ಅಕಳಂಕ ಲಂಕಾ ಸರೋಲಕ್ಷ್ಮಿಯಂ.
ಮಂತ್ರಯಂತ್ರಂಗಳಂ ಸೃಜಿಸಿ, ಗುಪ್ತ ವಿಧದಿಂ,
ಪಡೆ ನಡೆಯುವೆಲ್ಲೆಡೆಗಳಂ ಮಿತ್ತುವಿಂದಡಕಿ
ತಡೆಗಟ್ಟುತಿರ್! ಅಸುರ ವಾಹಿನಿಗಳನಿತರೊಳ್
ಮೃತ್ಯು ಮೇಖಲೆಯಾಗಿ ನಿಲ್ವುವೀ ದುರ್ಗಮಂ
ನೀಚ ನರ ನಿಷ್ಠ ಕಪಿದುಷ್ಟರಿಂ ಸಂರಕ್ಷಿಸಲ್!''
''ಆಜ್ಞೆಯಂ ನಡೆವುದಲ್ಲದೆ ನಿನಗೆ ಸಲಹೆಯಂ
ಪೇಳ್ವುದಲ್ತೆನ್ನ ಧರ್ಮಂ. ಸ್ವಾಮಿಭಕ್ತಿಯಿಂ
ಬಿನ್ನೈಪೆನೆನ್ನ ಮನಮಂ. ಮಂತ್ರಯಂತ್ರಗಳ್,
ಸುವ್ರತಂ ಪ್ರತಿಭಟಿಸೆ, ಕಳೆದುಕೊಳ್ಳುತೆ ತಮ್ಮ
ಶಕ್ತ್ಯಂಶಮಂ, ಕರೆಯಲಾರವು ಪೂರ್ಣ ಫಲಮಂ.
ಕಿಡಿಸವೇಳ್ಕುಂ ಮೊದಲ್ ವ್ರತಪ್ರತೀಕಾರಮಂ.
ವಾನರರ ಸರ್ವ ಸೈನ್ಯಕೆ ಮಿಗಿಲ್ ಗುರುವೈರಿ
ನಮಗೆ ಸೀತಾವ್ರತಂ! ಸತಿ ಪತಿವ್ರತೆಯೆಂಬ
ಧರ್ಮಧೈರ್ಯಮೆ ಭಯಂಕರತರಂ ನಮಗಾ
ರಘೂದ್ವಹ ನಿಷಂಗ ನಾರಾಚಂಗಳಿಂ! ಅದರಿಂದೆ
ಹದಿಬದೆಯ ನೋಂಪಿಯಂ ಸೋಲಿಸಲ್‌ವೇಳ್ಪುದುಂ
ಕದನದೊಳೆಮಗೆ ಮೊದಲ ಗೆಯ್ಮೆ!''
ಶಾರ್ದೂಲನಂ
ನೋಡಿದನು ನೀಡುವೊಳ್ತು ದನುಜನನಿಮಿಷನಾಗಿ
ಚಿಂತಾಬ್ಧಿಯಲ್ಲದ್ದಿ. ಬಹುದಿನಗಳಿಂ ಕಾಂತಿ
ಕುಂದಿದಾನನಕೆ ಶಾಂತಿಯ ತೇಜಮಂಕುರಿಸಿ
ನಕ್ಕನೊಯ್ಯನೆ, ಮುದಂ ಮಿಕ್ಕನೋಲ್, ತನಗೆ ತಾನ್.
ಸುಯ್ದು, ಶಾರ್ದೂಲಂಗೆ ನುಡಿದನಾತ್ಮಸೌಮ್ಯಂ

ವ್ಯಂಗ್ಯ ವಾಕ್ಯಂಗಳಂ:
                    ''ನೀನೊರೆವುದತಿ ದಿಟಂ,
ಶಾರ್ದೂಲ. ಹರೆಗಡಿಯಲಾಣತಿಯನಿತ್ತೆನಾನ್;
ಬೇರ್ಗೊಯ್ವು ಬೇಹಾರಮಂ ಪೇಳ್ವೆ ನೀನ್! ಅಯ್ಯೊ,
ವಾನರರ ಪಡೆಯೊಳೊರ್ವನುಮುಳಿಯದೋಲಂತೆ
ಕೊಲ್ವ ಕಷ್ಟಂ ತೃಣಂ. ಪರ್ವತಂ, ಶಾರ್ದೂಲ, ಕೇಳ್,
ಪರ್ವತಂ ಸೀತಾವ್ರತಂ! ಆ ರಜತ ಶೈಲಮಂ,
ಶಿವ ಶಿವಾಣಿಯರೊಡನೆ, ಬೇರ್ ಬಿಡಿಸುತಳ್ಳಾಡಿ
ನೆಗಹಿದೀ ದೈತ್ಯರ ದೊರೆಯ ತೋಳ್ ಸ್ಥಿರಾತ್ಮಜೆಯ
ಹೃದಯದುದ್ಯಾನದೊಳ್ ಉದಿರ್ದೊಂದು ಪೂವೆಸಳ
ಪೊರೆಗುರುಳ್ದುದು ಸೋಲ್ತು, ಪಿಂತೆ ಹರಧನುವೆತ್ತಿ
ಕೆಡೆದಂತೆ! ರಾವಣನ ಬಾಳ್ದೋಣಿ ಬಡಿದೊಡೆವುದೇನ್,
ಕಿಂಕರ, ನೋಂಪಿಯೈಕಿಲ್ಬಂಡೆಯಂ ತಾಗಿ, ಪೇಳ್,
ಪೆಣ್ಣೊರ್ವಳಾ?''
                ''ಶಂಕೆ ಮಾಣ್, ಲಂಕೇಶ್ವರಾ.
ಪೇಳ್ವೆನೊಂದಂ ಕುಟಿಲ ನೀತಿಯಂ. ಮಾಯೆಯಿಂ
ಸೃಜಿಸುವೆನ್ ರಾಮಶಿರಮಂ, ರಕ್ತಸಿಕ್ತಮಂ.
ತೋರದನ್ ದೇವಿಗೆ. ರಣಾಗ್ರದಿ ರಘೂದ್ವಹಂ
ಸೈಗೆಡೆದನೆಂದೊಡೆ...''
                    ಸುಯ್ವೆರ್ಚಿದಸುರಾಧಿಪಂ
ಶಾರ್ದೂಲನಂ ತಡೆಯುತುಗ್ರಕಂಠದೊಳಿಂತು
ಗುಡುಗಿದನ್: ''ಏನ್ ಪೇಳ್ದೆ, ಶಾರ್ದೂಲ? ಪೇಳ್ದುದೇನ್?
ಮತ್ತಮೊರೆ!''
            ''ಪತಿ ಸತ್ತನೆಂದಾದೊಡಂ ನಿನ್ನ
ವಶವಾಗುವಳ್!''
                ''ದಿಟಂ, ವಶವಾಗುವಳ್ ದಿಟಂ!
ವಶಮಪ್ಪುದವಳಾ ಕಳೇಬರಂ! ಸ್ಥೂಲಮತಿ
ನೀನ್, ಶಾರ್ದೂಲ; ಮೂರ್ಖಮಾಡದಿರ್! ನಡೆ, ನಡಸು
ನನ್ನಾಜ್ಞೆಯಂ! ರಾವಣಂಗಲ್ಲದಿನ್ನಾರ್ಗೆ, ಹೇಳ್,
ಸೀತಾ ಹೃದಯ ಸೂಕ್ಷ್ಮತಾ ಸಿದ್ಧಿ? ನಡೆ, ಪೋಗು,
ಬರವೇಳ್ ಪ್ರಹಸ್ತ ಸೇನಾನಿಯಂ!''

ಪ್ರಭುವಿನಾ
ಉಗ್ರ ರೀತಿಗೆ ಮೇಣ್ ನವೀನ ನೀತಿಗೆ ಬೆಚ್ಚಿ
ಬೆರಗಾಗಿ ಕಿಂಕರಂ ಪೋದುದಂ ಕಂಡಾ
ಮಹೇಂದ್ರಾರಿ ಪೀಠದಿಂದೆದ್ದಲೆಯತೊಡಗಿದನ್,
ಪಂಜರದ ವೇದಿಕೆಯನಲೆವ ಕೇಸರಿಯವೋಲ್.
ಚಿಂತೆಗಳ್, ಭಾವಗಳ್, ಬಗೆಯ ಹೋರಾಟಗಳ್,
ನೆನಪುಗಳ್, ತಾಪಗಳ್, ಮತ್ತೆ ಪಶ್ಚಾತ್ತಾಪಗಳ್,
ಆಶಾ ನಿರಾಶೆಗಳ್, ಪುಣ್ಯಗಳ್, ಪಾಪಗಳ್,
ಕ್ಷಾತ್ರಪ್ರತಿಜ್ಞೆಗಳ್, ಧರ್ಮಗಳ್, ನೀತಿಗಳ್,
ಪ್ರೀತಿಗಳ್, ಮತ್ತೆ ಧೀರೋದಾತ್ತ ಭೀತಿಗಳ್
ಮೂಡಿ ಮುತ್ತಿದುವಾತನಾತ್ಮಮಂ, ಲಂಕೆಯಂ
ಮುತ್ತಲೈತಂದವರ ಸಂಖ್ಯೆಯಂ ಮೀರಿ:
"ಆರ್?
ಈಕೆಯಾರ್ ಈ ಸೀತೆ? ಈಕೆಯಂ ಪಡೆಯಲ್
ತಪಂಗೆಯ್ದುದದು ಸಫಲಮಾದಪುದೆ? ನೀನಂದು
ಪಂಚವಟಿಗೆನ್ನ ಪುಷ್ಪಕವನೇರುವ ಮೊದಲ್
ನುಡಿದ ನುಡಿ ತೊದಲಲ್ತು, ಮಾವ! ಪುಸಿಗೆಯ್ಯಲ್
ಪ್ರಯತ್ನಿಸುವೆನಂತ್ಯಂ ಬರಂ: ಆ ಪ್ರಯತ್ನಮೆ
ತಪಸ್ಸಾಧನಂ! ಅವ್ಯರ್ಥಮೇಗಳುಂ ತಪಂ!"
ಪುದುಗಿ ಪಾವೊಳವೊಕ್ಕ ಪಿರಿಯ ಪುತ್ತೆಂಬಂತೆ
ತೆಕ್ಕನೆಯೆ ತಾಟಸ್ಥ್ಯಮಂ ನಟಿಸಿ ನಿಂತಾ
ನಿಶಾಚರ ನೃಪಂ, ಪ್ರಸನ್ನಾನನಂ ತಾನಾಗಿ,
ನಿಶ್ಶಂಕಿ ಧೈರ್ಯಮಂ ನಿಲವಿಂ ಪ್ರದರ್ಶಿಸುತೆ,
ಕಂಡನ್ ಪ್ರಹಸ್ತನಂ ತನ್ನೆಡೆಗೆ ಬಂದಾ
ಪ್ರಧಾನ ಸೇನಾನಿಯಂ. ಕನಕ ರತ್ನ ಪ್ರಚುರ
ನಾನಾ ರಣಾಲಂಕಾರ ರಿಪುಭಯಾಕಾರಮಾ
ವಿಪುಲ ವಪುವಂ ಮೆಚ್ಚಿ ನೋಡಿ, ಕುಳ್ಳಿರವೇಳ್ದು,
ತಲೆಯೊಲೆತದಿಂ ಪಡಿತುಳಿಲ್ಗೆಯ್ತುಮಂ ಸಲಿಸಿ,
ತಾನುಂ ಕುಳಿತನಾ ಕುಬೇರಾರಿ.
"ಬರವೇಳ್ದ
ಬೆಸನೇನ್, ಮಹಾಪ್ರಭೂ?"

"ತಿಳಿದೆಯೇನ್, ಸೇನಾನಿ.
ಶತ್ರು ಶಕ್ತಿಯ ಮೇರೆಯಂ?"
"ತಿಳಿದೆನ್; ಆದೊಡಂ,
ಬಿರುಗಾಳಿ ಲೆಕ್ಕಿಪುದೆ ತರಗೆಲೆಯ ಸಂಖ್ಯೆಯಂ?"
"ನಮ್ಮ ಪಡೆಗಳ್ ತಮ್ಮ ತಾಣಂಗಳಂ ಪಿಡಿದು
ಸಜ್ಜಿತಮೊ?"
"ಕಳೆದಿರುಳ್ ಬೆಳಗಪ್ಪುವನಿತರೊಳೆ!"
"ಸೈನ್ಯಗುಪ್ತಿಯನರಿಯಲಾಟಿಪೆನ್."
"ಇದೆ ಕೊಳ್
ರಣಕ್ಷೇತ್ರ ವಿನ್ಯಾಸಮಂ ತೋರ್ಪ ಚಿತ್ರವಸ್ತ್ರಂ."
ಹರಡಿದನು ದಳಪತಿ ರಣಾಂಗಣದ ನಕ್ಷೆಯಂ
ರಣಪಟು ದಶಗ್ರೀವನಿದಿರಿನಲಿ. ನೋಡುತಿರೆ
ದೊರೆ, ಸವಿಯುತಿರ್ದನ್ ಪ್ರಹಸ್ತನಾತನ ಮುಖದ
ಮುಕುರ ರಂಗದಿ ಮಿಂಚುತಿರ್ದ ಚಿತ್ತದ ವಿವಿಧ
ವೃತ್ತಿಗಳ ಖಂಡನೆಯ ಮೇಣ್ ಶ್ಲಾಘನೆಯ ಬೇವು
ಬೆಲ್ಲಂಗಳಂ. ದೀರ್ಘ ವೇಳೆಯಂ ಜಾನಿಸಿ
ಪರೀಕ್ಷಿಸುತೆ, ಪಗೆಯ ಶಕ್ತಿಗೆ ತನ್ನ ಶಕ್ತಿಯಂ
ಯುಕ್ತಿಯಿಂ ತೂಗಿ ನಿರ್ಣಯಿಸುತಾ ನಿಶಿತಮತಿ,
ರಣರುಚಿಯ ರಾವಣಂ, ಪಡೆವಳನ ಮೊಗಸಿರಿಗೆ
ಮೊಗಂಗೆಡದವೋಲೊಯ್ಯನಿಂತೆಂದನಾಜ್ಞೆಯಂ
ತನ್ನೊಂದು ಭಿನ್ನರುಚಿಯಿತ್ಯರ್ಥಮೆಂಬಂತೆ:
"ಶ್ಲಾಘ್ಯಮೆ ದಿಟಂ, ವೀರವರ, ನಿನ್ನ ಗುಪ್ತಿಯ
ವಿಧಾನಂ. ಆದೊಡಮೆನಗೆ ಬಗೆ ಬೇರೆ. ಸಮ್ಮತಿಸೆ
ನೀನ್. . ." ಎನುತ್ತಾ ಪ್ರಹಸ್ತನ ಕಡೆಗೆ ಕಣ್ಣಾಗಿ
ತಾನೆ ಮುಂಬರಿದನಾತನ ಮಾತಿಗೆಡೆಗೊಡದೆ:
"ಪಡೆವಳರ್ ವಜ್ರಹನು ರಾಹುರೋಷರ್ವೆರಸಿ
ಪೂರ್ವಮಂ ಪೊರೆ ನೀನ್. ಮಹಾಪಾರ್ಶ್ವನಿರಲಾ
ಮಹೋದರರಂವೆರಸಿ ದಕ್ಷಿಣ ದಿಶಾ ರಕ್ಷಣೆಗೆ.
ಮೇಣ್, ಪೇಳ್ ಕುಮಾರನಂ, ಶೋಣಿತಾಕ್ಷಂ ಕೂಡಿ,
ಪಶ್ಚಿಮದ್ವಾರ ರಕ್ಷೆಗೆ. ಅಕಂಪನನಿರ್ಕೆ ಉತ್ತರಕೆ,
ವಜ್ರದಂಷ್ಟ್ರಂ ವೆರಸಿ. ರಕ್ಷಿಸಲಿ ಸುಪ್ತಘ್ನ ಮೇಣ್

ಮಕರಾಕ್ಷರೀಶಾನ್ಯಮಂ. ಅಗ್ನಿಕೇತುವಾ
ದುರ್ಮುಖನ ಪಡೆಗೂಡಿ ಪೊರೆಯಲಾಗ್ನೇಯಮಂ.
ಸೂರ್ಯಶತ್ರುವೆ ಸಾಲ್ಗುಮಾ ನೈರುತ್ಯ ದಿಶೆಗೆ.
ಬ್ರಹ್ಮಾಕ್ಷ ಧೂಮ್ರಾಕ್ಷರಿರ್ಕೆ ವಾಯವ್ಯದೊಳ್.
ಗುಲ್ಮ ಮಧ್ಯದೊಳಿತರ ದಳಪತಿಗಳಂ ನಿಲಲ್
ಪೇಳ್, ಕ್ಷಣಾರ್ಧದಿ ರಣಾಗ್ರಕೆ ಬೆಂಬಲಂ ನಡೆಯೆ
ತಗುವಂತೆವೋಲ್. ಮೇಣ್, ಪ್ರಧಾನ ಸೇನಾನಿ, ಕೇಳ್:
ಚಂಡಿಕಾಧ್ವಜದರ್ಪದಾಶ್ರಯದಿ, ದಾನವರ
ಸರ್ವ ಸೇನಾಧ್ಯಕ್ಷತೆಯನಾಂತು, ನಾನೀ
ಮಹೋಗ್ರ ಸಂಗ್ರಾಮ ದೀಕ್ಷಿತನಾಗಿ, ದೈತ್ಯಕುಲ
ದಿಗ್ವಿಜಯ ಯಜ್ಞಮಂ ಕೊನೆಗಾಣ್ಬುವೆನ್!''
ಇರ್ವರುಂ
ಮೋನಮಿರ್ದರ್ ಸುದೀರ್ಘಮೆನೆ. ರಾಜಧ್ವನಿಯ
ದರ್ಪ ಭಾರಕೆ ಬಾಗಿದಂತಿರ್ದ ಸೇನಾನಿ
ಮೆಲ್ಲನೇಳುತೆ, ಮಣಿದು, ಬೀಳ್ಕೊಂಡನಸುರನಂ,
ಕ್ರುದ್ಧ ಭ್ರುಕುಟಿ ಬದ್ಧನಂ, ಕಾಲ ಚೋದಿತ
ಭಯಂಕರ ಜಗತ್‌ಕ್ಲೇಶಕರ ಯುದ್ಧಸಿದ್ಧನಂ,
ಬ್ರಹ್ಮ ವರ ಬಲ ವರ್ಮ ಸನ್ನದ್ಧನಂ!
ಅತ್ತಲಾ
ವಾನರೇಂದ್ರಂ ತನ್ನ ಗುಪ್ತಚರರಿಂ ಮೇಣ್
ವಿಭೀಷಣಾನುಚರರಿಂದರಿತನ್ ದಶಾನನ
ಸರಸ್ವತಿಯ ಸಮರ ನಾಟಕ ಸಂವಿಧಾನಮಂ.
ನರದೇವ ಚಂದ್ರಮನ, ರಾವಣ ಸಹೋದರನ,
ನೀಲ ನಳ ಹನುಮ ಜಾಂಬವ ಮುಖ್ಯ ವಾನರರ
ಮತಿಯರಿತು, ದಳದಳದ ದಂಡನಾಯಕ ಸಭೆಗೆ
ಬೆಸಸಿದನು ತನ್ನಾಜ್ಞೆಯಂ:
''ಬೆಂಬಲಂ ಬಡೆದು
ಮೈಂದ ದ್ವಿವಿದರಂ, ವಾನರರ ಸೇನಾನಿ
ಅಗ್ನಿಯ ಕುಮಾರಂ ಪ್ರಹಸ್ತಂಗಿದಿರ್ ನಿಲ್ಗೆ,
ಯಾತುಧಾನ ಪ್ರಮುಖ ಸೇನೆಗಳ್ಗಭಿಮುಖಂ,
ನೀಲದೇವಂ, ತ್ರಿಕೂಟಾಚಲದ ಪೂರ್ವಮಂ

ಪಡೆದು. ತೆಂಕಣಕಿರಲಿ ಯುವರಾಜನಂಗದಂ,
ಋಷಭಂ ಗವಾಕ್ಷಂ ಸಹಾಯರಿರೆ, ಇದಿರ್ಚಲ್
ಮಹಾಪಾರ್ಶ್ವನ ಮಹಾಭೀಳ ರಣರೌದ್ರಮಂ.
ದೈತ್ಯೇಂದ್ರ ಸೂನುವಂ ಕಲಿ ಮೇಘನಾದನಂ
ಪಶ್ಚಿಮ ಶೌರ್‍ಯಭಾನುವಂ ವಿನತನೊಡಗೂಡಿ
ಪ್ರತಿಭಟಿಪುದಾಂಜನೇಯನ ವಜ್ರವಿಕ್ರಮಂ.
ಶಿಲ್ಪದೇವಂ ನಳಂ, ದರೀಮುಖಂ ವೆರಸಿ,
ನಿಲ್ವನ್ ಅಕಂಪನಂಗಿದಿರಾಗಿ, ಉತ್ತರದ
ದಿಗ್‌ದ್ವಾರ ದಿಕ್ಕುಂಜರಾಂಕುಶಮೆನಲ್. ಗಜಂ
ಗವಯನೊಡಗೂಡಿ ತಡೆಯಲಿ ಅಗ್ನಿಕೇತುವಂ
ಆಗ್ನೇಯದೊಳ್. ತಾರ ದೇವನುಂ, ಕೇಸರಿಯ
ಕೂಡಿ, ತಾಗಲಿ ಸೂರ್‍ಯಶತ್ರುವಂ, ನೈಋತ್ಯ
ದಿಗ್ವಲಯದಿ. ಗಗನಚರಮಾ ಶತಬಲಿಯ ಸೇನೆ
ವಾಯವ್ಯದೊಳಗಿರ್ಪ ಬ್ರಹ್ಮಾಕ್ಷ ಬಲ ಗಿರಿಗೆ
ಪಣೆವೆಣೆದು ನಿಲ್ಗೆ. ಈಶಾನ್ಯದೊಳ್ ಧಗಿಸುತಿಹ
ಸುಪ್ತಘ್ನ ಮಕರಾಕ್ಷ ಸೇನಾ ದವಾನಲಕೆ
ವಿಲಯ ವಾರಿಧಿಯಾಗಿ ನಿಲ್ವುದು ಸುಷೇಣನ
ಚಮೂ ಸಮುದ್ರಂ. ಸುಮಿತ್ರಾತ್ಮಜಂ, ಜಾಂಬವನ
ಬಲದ ಬೆಂಬಲಮಿರಲ್, ಪಡೆಪಡೆ ನಡೆಯನರಿತು
ನೆರಮಪ್ಪನನಿಬರಿಗೆ. ರಕ್ಕಸರ ಕೈತವದ
ಕೊಲೆಬಲೆಗೆ ಸಿಲ್ಕದೋಲೆಮ್ಮ ಮಿತ್ರಂ, ನಾನೆ
ರಕ್ಷಣಾವ್ಯೂಹಮಂ ರಚಿಸಿ, ಮೆಯ್ಗಾವಲಿರ್ಪೆನ್,
ಸರ್ವ ಸೇನಾ ಸೂತ್ರಧರನಾಗಿ. ಮೇಣ್ ಈ
ಕಪಿಧ್ವಜದ ಪೆರ್ಮೆ ನೂರ್ಮಡಿಯಪ್ಪವೋಲಂತೆ
ಶ್ರೀರಾಮಚಂದ್ರಂ, ವಿಭೀಷಣಶ್ರೀಬುದ್ಧಿ ತಾಂ
ಮಂತ್ರಿಯಾಗಿರೆ, ಕೃತ್ಸ್ನಮೀ ಸಂಗ್ರಾಮ ವಿಭುವಾಗಿ,
ದಾನವ ಕುಲದ ದೌಷ್ಟ್ಯಕೆ ದವಾಗ್ನಿ ತಾನಾಗಿ,
ನಮ್ಮನುಯ್ವನ್ ದೇವಿ ಸೀತೆಯ ಪತಿವ್ರತಾ
ಧರ್ಮಧವಳ ಅರಾಕ್ಷಸಾಲಯಕೆ!''
ಕೇಳುತಾ
ಸುಗ್ರೀವನಾಜ್ಞೆಯಂ ವಾನರೋತ್ಸಾಹಂ

ಮಹಾರ್ಣವಂ ಮೇರೆದಪ್ಪಿದೊಲಾಯ್ತು. ಬಲ್ದೆರೆಗಳೋಲ್
ವಾಹಿನಿಗಳೆದ್ದು ವೇಲಾವನಿಯ ಶಿಬಿರಮಂ
ಧಿಕ್ಕರಿಸುತೇರ್ದುವು ಸುವೇಲಾದ್ರಿಯಂ; ಕಾರ್ಗಾಳಿ
ಕೈವೀಸೆ, ಪೆರ್ಬಿಂಡೆಗಳೆ ದಂಡಯಾತ್ರೆಯಂ
ಕೈಕೊಂಡುವೋ ಎನಲ್ ಕರ್ಮುಗಿಲ್ ವಿಂಡುಗಳ್
ಸಹ್ಯ ಶಿಖರದ ಸೀಮೆಯಂ ದಂಡುದಂಡುರ್ಕ್ಕಿ
ಸಂಕ್ರಮಿಪವೋಲ್! ಗೋಚರಿಸಿತಯ್ ಸುವೇಲಾದ್ರಿಯಾ
ಶಿರದಿಂ ತ್ರಿಕೂಟೋತ್ತಮಾಂಗಮಂ ಸಿಂಗರಿಸಿ
ಪರ್ವಿದ ದಶಗ್ರೀವ ಬಾಹುಪಾಲಿತ ಪುರಂ,
ಗಗನ ವಿಸ್ತೃತ ಗಗನ ನಗರಿಯೆನಲಾ ಬೃಹದ್
ರಮಣೀಯ, ಮಾರೀಚಮಾಯಾ ಮೃಗೋಪಮದ,
ಅಮರ್ತ್ಯಭೂಮಿಯ, ಕನತ್ಕನಕ ಗೋ ಶ್ರೀರುಚಿರಮಾ
ಲಂಕೆ! ವಿವರಮೆನೆ ವರ್ಣಿಸಲ್ಕಾ ವಿಭೀಷಣಂ,
ಕಿಡಿಯಿಡುವ ಕಣ್ಗಳಿಂ ನೋಡಿದನು ದಾಶರಥಿ
ವಿತ್ತೇಶ ಪತ್ತನದ ವಿಭವಮಂ ವಿಸ್ಮಿತದಿ
ಸೂರೆಗೊಂಡಾ ದೈತ್ಯದುರ್ಗಮಂ: ಮಲೆದಲೆಯ
ಕಲ್ಗವಿಯೊಳಿನಿಯಳೊಡನಿರ್ದ ಮೃಗರಾಜನಂ
ಬೇಡರೊಡೆಯಂ ದೀವದೆರೆದೋರುತೆಳತಟಂ
ಮಾಡಿ ಗೆಂಟರ್ಗುಯ್ಯುನತ್ತಲ್. ಇತ್ತಲ್ ಮರೆಯ
ಬಿಯದ ಪಡೆ ಮಿಣಿವಲೆಯನೊಡ್ಡಿ ಸೆರೆವಿಡಿಯುತಾ
ಸಿಂಹಿಣಿಯನುಯ್ವುದರಸನ ಬೇಂಟೆವೀಡಿರ್ಪ
ಕಂದರಕೆ. ಹೊನ್ನ ಹಲ್ಲಣದ ಹೇರಾನೆಗಳ್
ಸುತ್ತಿ ಬಳಸುತೆ ಬೇಲಿಗಾಪಿರಲ್, ಕರ್ಬೊನ್ನ
ಕಣ್ಣಿಯಿಂ ಕಟ್ಟುಗೊಂಡಾ ಸಿಂಗವೆಣ್, ತನ್ನ
ಮನದನ್ನನಂ ನೆನೆದೊರಲ್ವುದು, ವನಾಂತರಂ
ಗೋಳ್ಗರೆವವೋಲ್. ದೀವದೆರೆಯ ಕೈತವವರಿತು
ಪಿಂತಿರುಗಿದಾ ರುಷ್ಟ ಪಂಚಾನನಂ ತನ್ನ
ಪೆಂಡಿತಿಯ ಪಾಡರಿತು, ಕೋಡುಗಲ್ಲಂ ಪತ್ತಿ
ಕಾಣ್ಬುದಾ ಸಿಂಹಿಣಿಯ ಸುತ್ತಲುಂ ಕಾಪಿರ್ಪ
ಸಾಲಂಕೃತಿಯ ದಂತಿಪಂಕ್ತಿಯಂ. ಗುಡುಗುಡಿಪ
ಸಿಡಿರೋಷಮುಕ್ಕಿ, ತಾಂ ನಿಂತ ಬಂಡೆಯನಾನೆಯೊರ್

ಮಂಡೆಯಂ ಗೆತ್ತು, ನಖವಜ್ರದಿಂದವ್ವಳಿಸೆ
ಬಿರಿವುದಾ ಕಲ್, ಗರ್ಜನೆಗೆ ದಿಗಿಲ್ ತತ್ತರಿಸಿ
ಬೆಟ್ಟಮೆರ್ದೆಯೊಡೆವವೋಲ್!
ಅಂತೆವೋಲ್ ಸುಯ್‌ಸುಯ್ದು,
ಪಲ್‌ಗಚ್ಚಿ, ಕೋದಂಡ ದಂಡದಿಂದುಗ್ರಮತಿ
ದಾಶರಥಿ ಮಲೆಯ ನೆತ್ತಿಯನೊತ್ತಿದನ್, ತನ್ನನಾ
ಆಂತಿರ್ದ ಪಾಸರೆಯ ಬಲ್‌ಬಂಡೆಯಂ. ಒತ್ತಲ್,
ಧರಿತ್ರಿ ಕಂಪಿಸಿತೊಂದು ಭೀತಿವೀಚೀ ತಟಿತ್
ತಾಡನಿಯ ಪೊಯ್ಲಿಗೆಂಬಂತೆ! ರಾಕ್ಷಸ ನಾಶ
ದುಶ್ಶಕುನಗಳ್–ಗಾಳಿ, ಧೂಳಿ, ಸಿಡಿಲ್‌ಗುಡುಗುಗಳ್,
ಖಗದ ಕಂಠದ ಗಗನ ಚೀತ್ಕಾರಗಳ್,–ಲಂಕೆಯೊಳ್
ಬೀಸಿದುವು ಕಾಲಲೀಲೆಯ ಕಪಿಧ್ವಜ ಬಲದ
ಮೃತ್ಯುಕರ ಕರವಾಲಮಂ. ಅನಲೆಯಿಂದನಿತುಮಂ
ಅರಿತಿರ್ದ ಅವನಿಜೆಗಶೋಕವನದಸ್ಥಿರತೆ
ತನಗಶೋಕವ ಸೂಚಿಸಲ್, ತ್ರಿಜಟೆಯನ್ ಒಲಿದು
ನೋಡಿದಳ್; ಒಯ್ಯನಿಂತಾಡಿದಳ್:
"ಕೇಳ್, ತ್ರಿಜಟೆ,
ರಣಭೇರಿಯಂ! ದಿಗಿಭಹೃದಯ ವಿದ್ರಾವಕಂ,
ಕೇಳ್, ಅಂಜನೆಯ ಮಗನವರ ಕಡೆಯ ಭೈರವ
ಭಯಂಕರದ ಸಿಂಹನಾದಂಗಳಂ! ಆಲಿಸೀ
ಅಸುರ ಸಮರ ಸನ್ನಾಹಜಂ ಸ್ವನಶ್ವಾನಂಗಳಂ
ಬಿಡದಟ್ಟಿ, ಪಿಡಿದು, ಬೆನ್ನೇರಿ, ಗೋಣ್ಮುರಿದಿಕ್ಕಿ,
ನೆತ್ತರಂ ಪೀರ್ವ, ಬಾನ್ಗೇರ್ವ, ಗೆಲ್ಲಂ ಸಾರ್ವ
ರಘುನಾಥ ಚಾಪ ವೀಣೆಯ ಕೋಪ ಸಿಂಜಿನಿಯ
ಶರಕೋಣ ಭೇರುಂಡ ಕಂಠ ಡಿಂಡಿಮ ರುಂದ್ರ
ರಣ ಗಾಥಮಂ!"
ಧ್ವನಿರಸಾತಿಶಯಕೆನೆ ಸೀತೆ
ಮೈಮರೆತಳಾ ತ್ರಿಜಟೆ ಸುಯ್ ನಡುಗುತಾಕೆಯಂ
ಸಂತಯ್ಸುತಿರೆ ಶಿಶಿರ ಶುಶ್ರೂಷೆಯಿಂ, ದ್ಯುಮಣಿ
ಮುಳುಗಿದನು ಕೆಮ್ಮುಗಿಲ ರಕ್ತೋಕುಳಿಯನೆರಚಿ,
ಗಿರಿ ಸುವೇಲದೊಳಿರ್ದ ವಾನರ ಬಲಾಬ್ಧಿಯಂ

ಮೇಣ್ ತ್ರಿಕೂಟದೊಳಿರ್ದ ದಾನವ ಬಲೌಘಮಂ
ರಕ್ತ ಕರ ರಕ್ತವರ್ಣಂಗಳಿಂ ಪರಸಿ!
ನಿಶೆ ತಾಂ
ನಿಶಾಚರರ ಸೀಮೆಯಲಿ, ತನ್ನ ದೊರೆತನಮಿರಲ್,
ರವಿವಂಶನಂ ಮುತ್ತದಿರ್ಪುದೆ? ನಿಶಾಪತಿ
ಶಶಾಂಕನಾಗಿರೆ ರಾಮಚಂದ್ರಂಗೆ ಕತ್ತಲೆಯ
ಮುತ್ತಿಗೆಯೆ? ಮೂಡಿದನು ಮಧುಸಮಯ ಪೂರ್ಣಿಮಾ
ಹಿಮರೋಚಿ, ನೋಡದೊ, ಸುವೇಲ ಮಸ್ತಕದಲ್ಲಿ
ಕಪಿನಾಯಕರ್ ಬಳಸೆ ನಿಂದಿರ್ಪ, ಧನುರ್ಧರ
ಭಯಂಕರ ಮನೋಹರ ರಘೂದ್ವಹನ ರಣಭವ್ಯ
ದರ್ಶನಕೆ! ಮಿಂದತ್ತು ಬೆಳ್ದಿಂಗಳಮರ್ದಿನೊಳ್
ವಾನರರ ಪಡೆಯಡವಿ ತದಿರುಗಿರ್ದ ರಾಕ್ಷಸರ
ಪೊಡವಿ. ತಮತಮಗರಿಯದಿರ್ದೊಡಂ, ಸುರಶಿಲ್ಪಿ
ವರ ಮಹಿಮೆಯಿಂ ಬೃಹದ್ ಗಾತ್ರಂಗಳಂ ಪೊರ್ದ್ದಿ,
ಗಿರಿ ತುಂಗ ಶೃಂಗಗಳೆ ಜಂಗಮತೆಯಾಂತಲ್ಲಿ
ಜೈತ್ರ ಯಾತ್ರೆಗೆ ದಂಡುನೆರೆದಂತೆ, ಜೃಂಭಿಸುತೆ
ಭವ್ಯಮಾಗಿರ್ದ ಕಪಿರಾಜ ಸೈನ್ಯಂಗಳಂ
ನೋಡಿ ದಶರಥ ಸೂನು ಸುಖಿಸುತ್ತೆ, ನಳನಂ
ಬಳಿಗೆ ಕರೆದು:
''ಪ್ರತ್ಯಕ್ಷಮೆನಗೆ ಮೇಣ್ ನಿನಗೆ ಆ
ನಿನ್ನ ತಂದೆಯ ವರದ ಮಹಿಮೆಯಿಂ ನೂರ್ಮಡಿಸಿ
ಬೆಳೆದೀ ಕಪಿಧ್ವಜರ ಬಲ್‌ಮೆಯ್ಯ ಮೇಣ್ ಬಲದ
ಭವ್ಯದೃಶ್ಯಂ, ಶಿಲ್ಪಿಸೇನಾನಿ. ತಿಳಿದೊಡಾ
ಆತ್ಮಗೋಚರ ಸತ್ಯಮಕ್ಷಿ ಗೋಚರಮಾಗಿ
ನೂರ್ಮಡಿಪುದುತ್ಸಾಹಮೀ ನಮ್ಮ ಮಿತ್ರರ್ಗೆ.
ಅರಿವುದುಂ ಅಣ್ಮು. ಪೇಳ್, ವಿಶ್ವಕರ್ಮ ಕುಮಾರ,
ದಳಪತಿ ಸಮಿತಿಗೀ ರಹಸ್ಯಮಂ. ತಂತಮ್ಮ
ದಳಗಳಿಗೆ ಡಂಗುರಂಬೊಯ್ಸಲೀ ಅದ್ಭುತ
ಸುವಾರ್ತೆಯಂ. ಈ ಇರುಳ್ ಕೊನೆಗಾಣ್ಬುವನಿತರೊಳ್
ತಂತಮ್ಮ ತಾಣಂಗಳಂ ಪಿಡಿಯವೇಳ್ಕೆಮ್ಮ
ಸೇನೆಗಳ್. ಈ ಚಂದ್ರನೀ ಶುಕ್ಲಪಕ್ಷಮಾ

ಶುಕ್ಲಪಕ್ಷಕೆ ಸೇರ್ವ ಮುನ್ನಮೆ ದಶಾನನನ
ದಶೆ ಸೇರ್ವುದಾ ದಕ್ಷಿಣದ ದಿಶೆಗೆ!'' ಮತ್ತಮಾ
ಸುಗ್ರೀವನಂ ಕುರಿತುಃ ''ಮಿತ್ರವರ, ಯುದ್ಧಕೆ
ಮೊದಲ್ ರಾಯಭಾರಮಂ ಕಳುಹುವುದು ಪದ್ಧತಿ
ಮಹೀಶರಿಗೆ. ತಿಳಿದೆನು ವಿಭೀಷಣನ ಬುದ್ಧಿಯಂ.
ತಿಳಿದೆನದು ನಿಷ್ಫಲಂ. ಕಾಲವಶಿ ರಾವಣಂ.
ಕೇಳನಾರೆಂದುದಂ. ಆದೊಡಂ, ಸೆರೆಗಳಚಿ
ಕಳುಹಿಸಾ ಬೇಹಿನಾಳ್ ಶುಕನೆಂಬೊನಂಃ ನಾಳೆ
ನೇಸರ್ ತ್ರಿಕೂಟಾಚಲದ ನೆತ್ತಿಯಂ ತನ್ನ
ಪೊಂಗದಿರ್ಗಳಿಂ ಸೋಂಕುವನಿತರೊಳ್ ವನಿತೆಯಂ
ತಂದೊಪ್ಪಿಸುತೆ ಶರಣ್‌ಬೋಗದಿರೆ ಮೊಳಗುವುದು
ರಣಭೇರಿ, ವಾನರ ಪತಾಕಿನಿಯ ಪೂಣ್ಕೆಯಂ,
ತರಿಸಲ್ಕೆಯಂ, ಲೋಕ ಲೋಕಾಂತರಂಗಳಿಗೆ
ಸಾರಿ!''

ಕೇಳ್ದಳು ನಭೋಲಕ್ಷ್ಮಿ ಆ ನಟ್ಟಿರುಳ್
ಬಡಗಣಿಂ ತೆಂಕಣಕೆ ಜೊನ್ನ ಬಾನ್ಬಟ್ಟೆಯೊಳ್
ಬೇಗದಿಂ ಸಾಗುತಿರ್ದೊಂದಮೃತ ರೂಪಮಂಃ
''ನೀನಾರ್?'' ''ತಪೋಲಕ್ಷ್ಮಿ!'' ಮಾರ್ನುಡಿದುದಾ ಮೂರ್ತಿ.
''ಅದೆತ್ತಣ್ಗೆ ಅವಸರದ ಪಯಣಂ?'' ''ಸುವೇಲಾದ್ರಿ
ಶಿಖರಕ್ಕೆ!'' ''ಎತ್ತಣಿಂದೇಕೆ?'' ''ನಂದಿಗ್ರಾಮದಿಂ
ಪೊಣ್ಮಿದೆನ್; ಅಯೋಧ್ಯಾ ಪ್ರದಕ್ಷಿಣಂಗೆಯ್ದೆನ್;
ಚಿತ್ರಕೂಟಾದ್ರಿಯಂ, ದಂಡಕಾರಣ್ಯಮಂ,
ಪಂಚವಟಿಯಂ ಮತ್ತೆ ಕಿಷ್ಕಿಂಧೆಯಂ ಸುತ್ತಿ
ಬಂದೆನಿತ್ತಣ್ಗೆ. ಮೇಣ್ ಊರ್ಮಿಳಾ ಪ್ರಾಣಂಗೆ
ತಾಯ್ವರಕೆಯಂ, ತಮ್ಮನರಕೆಯಂ, ಮೇಣ್ ಸತಿಯ
ಮೇರುಕಂಪನಕಾರಿ ಸುವ್ರತದ ಋತಶಕ್ತಿಯಂ
ಪೊತ್ತು ಪೋದಪೆನಕ್ಕ, ರಕ್ಕಸರ ಕೊಂದಕ್ಕನಂ
ಪೊರೆದು, ಬೇಗನೆ ಮನೆಗೆ ಬಪ್ಪ ಶುಭಮಪ್ಪವೋಲ್!''

ಸಂಚಿಕೆ ೧೩

# ಸ್ವಪ್ನದೇವಿಗೆ ತಪೋಲಕ್ಷ್ಮಿ

ಮನುಷ್ಯಮತಿ ವಶಮೆ, ಪೇಳ್, ಅಮರ್ತ್ಯ ರಣಮೇದಿನಿಯ
ಅಲೌಕಿಕಬಲ ಬಲಾನ್ವಿತರ ದನುಜವಾನರ
ಚಮೂಕ್ರಿಯಾಪ್ರಾರಂಭಸಮಯ ತುಮುಲಂ? ಶುಕಂ
ರಾಮನ ನಿರೂಪಮಂ ಪೊತ್ತು ಪೋದವನಿತ್ತ
ಬಾರದಿರೆ, ಕಾದುದು ಕಪಿಧ್ವಜಿನಿ ಚೈತ್ರ ರವಿ
ಮೂಡುವ ಮುಹೂರ್ತಮಂ. ಕರ್ಪು ಕೊನೆಯಂ ಸೇರ್ವ
ಮುನ್ನಮೆ, ಬೆಳ್ಪು ಮೂಡಣದದ್ರಿ ಚೂಡಮಂ
ಚುಂಬಿಸುವ ಮುನ್ನಮೆಯೆ ಕೇಳ್ದುದು ತೆಕ್ಕನೆಯೆ
ರಕ್ಕಸರ ರಣಕಹಳೆ, ತ್ರಿಕೂಟಂ ಸುವೇಲಂ
ಧಿಗಿಲ್ಲನೆ ವಿಕಂಪಿಸಿ ಪುಲಕಿಸುವವೋಲ್! ಕೂಡೆ
ಕೇಳ್ದುದು ನಿಶಾಚರ ರಣೋತ್ಸಾಹ ಸೂಚಕಂ,
ಕೋಟಿ ಕಂಠಸ್ಫುರಿತ ಭೀಮಸ್ವನಂ! ಇತ್ತಲ್, ಆ
ಧ್ವನಿಗೆ ಮಾರ್ಮಲೆವಂತೆ, ಒಡನೆ ಉಕ್ಕಿತು ಬುಗ್ಗೆ,
ಮುಗಿಲ ಸರಿಸಕೆ, ಸಮರ ಸಂಕೇತ ತೂರ್ಯದಾ!
ದಳದಳದಳದಿ ಧಳ ಧಳ ಧಳಂ ಮೊಳಮೊಳಗಿದುವು
ಕೂಡೆ ಕೊಳುಗುಳದ ರಣಭೇರಿಗಳ್. ಕಿವಿಗೆಡಲ್
ಸದ್ದೆದ್ದುದೆದ್ದುದು ಧೂಳಿ ಕಣ್ಗೆಡಲ್. ಪೇರೊಡಲ
ಭಟರ ಬೇಗಕೆ ಪುಟ್ಟಿದತ್ತೊಂದು ಬಲ್ಗಾಳಿ,
ಗಿರಿಶಿಖರ ತರುವರ ತತಿಯ ತೂಳಿ. ತಳತಳಿಸಿ
ಮೂಡಿದಂದಿನ ದಿನೇಶ್ವರನ ಕಿರಣಹಸ್ತಂ
ಕೃಷ್ಣ ಕಲುಷಿತವಾದುದಾ ರಣದ ಮಾರಣದ
ರುಧಿರ ಭೀಷಣದರುಣ ಧರಣಿಯಲಿ!

ತಾಗಿದನು
ನೀಲಂ ಪ್ರಹಸ್ತನಂ; ಮೈಂದನಾ ವಜ್ರಹನುವಂ;
ದ್ವಿವಿದನಾ ರಾಹುರೋಷನ ಸೈನ್ಯ ಬಾಹುವಂ.
ತಾಗಿದನು ವಾಲಿಪುತ್ರಂ ಮಹಾಪಾರ್ಶ್ವನಂ;
ಋಷಭಂ ಗವಾಕ್ಷನಂ ಕೂಡಿ ತಾಗಿದನಾ
ಮಹೋದರನ ಸೇನೆಯಂ. ಮೇಘನಾದನ ಪಡೆಗೆ
ತಾಗಿದತ್ತಾಂಜನೇಯನ ದಳಂ, ತಾಗಿದನು
ನಳನಕಂಪನನಂ; ದರೀಮುಖಂ ಮಲೆತನಾ
ವಜ್ರದಂಷ್ಟ್ರಂಗೆ. ಸುಪ್ತಘ್ನ ಮಕರಾಕ್ಷರಂ
ತಡೆದನ್ ಸುಷೇಣನಾ ದಧಿಮುಖನ ಬೆಂಬಲದಿ.
ಶತಬಲಿಯ ಬಲಮವ್ವಳಿಸಿದತ್ತು ಬ್ರಹ್ಮಾಕ್ಷ
ಧೂಮ್ರಾಕ್ಷರಂ. ಗಜ ಗವಯರಗ್ನಿ ಕೇತುವಂ
ತಾಗಿದರ್ ದುರ್ಮುಖ ಸಮೇತನಂ. ನಡೆದನಾ
ಕೇಸರಿಯೊಡನೆ ತಾರನಾ ಸೂರ್ಯಶತ್ರುವಿನ
ಮೇಲೆ. ಬೆಳಗುವೊಳ್ತಿಗೆ ತೊಡಗಿ ಮುಂಬರಿದುದೈ
ಇಂತುಟಾ ದನುಜ ಕಾರಣ ದನುಜವಾನರ
ರಣಾಧ್ವರಂ, ಬೈಗಿನ ದಿಗಂಬರಂ, ಕಾಳಗದ
ಕಳನ ಕೆನ್ನೀರಾವಿಗುದಿಸಿದ ಮುಗಿಲ್ಗಳಿಂ,
ನೆತ್ತರೊಳ್ ಮಿಂದು ಕೆಂಗಾವಿಯಂ ತೊಟ್ಟೆಸೆವ,
ಸಾಕ್ಷಾತ್ ಮೃತ್ಯುವಿಂ ದೀಕ್ಷೆಯನ್ನಾಂತ, ತಾಂತ್ರಿಕ
ತಪಸ್ಸಾಧನಾಸಕ್ತ ರಕ್ತಾಜಿನಾಭೀಳ
ಕಾಪಾಲಿಕನವೋಲ್ ಜಿನದ್ವೇಷವೇಷದಿಂ
ಜ್ವಲಿಪನ್ನೆಗಂ!
ಮಡಿದರಾರ್? ಏರ್ವಡೆದರಾರ್?
ಕಡಿದರಾರ್ ಕೆಡೆದರಾರ್? ಆರನಾರ್ ಮಲೆತರಾರನ್
ಆರೆಂತು ಸೆಣಸಿದರ್? ಕೇಳ್ವರಿರ್ದೊಡಮದಂ
ಪೇಳ್ವರಾರ್, ಲೆಕ್ಕಂ ಪಕ್ಕಂಗಿಡಲ್ ಕಿಕ್ಕಿರಿದು
ಪೊಯ್ದಾಡಿದಿರ್ಕೈಲದ ಸೈನಿಕದಲಿ? ಪೆಸರಿರದ
ಸಾಮಾನ್ಯ ಪಟುಭಟರ ಮಾತಿರ್ಕೆ; ಪೆಸರಾಂತ
ಕಡುಗಲಿಗಳಂ ಪೆಸರಿಸಲ್ ಬಣ್ಣಿಸಲ್ ಬಹುದೆ
ಮರ್ತ್ಯಕವಿ ಜಿಹ್ವೆ? ಕೇಳ್, ಬಳಲಿದುದೊ ಬರೆವ ಕೈ

ಚಿತ್ರಗುಪ್ತಂಗೆ! ಮಸಿ ಬತ್ತಿದುದೊ ಲೇಖಣಿಗೆ!
ಸಾವಿನೂರಿನ ಸಗ್ಗವಾಗಿಲ್ಗಳಂ ಕಿತ್ತೆತ್ತಿ
ಪೊತ್ತು ಗೆಂಟರ್ಗುಯ್ದು ತಮ್ಮ ಕರ್ತವ್ಯಮಂ
ಕಾಯುತಿರ್ದರ್ ಕಾಪಿನಾಳ್ಗಳೆನೆ, ಸಾಲದೇನ್, ಪೇಳ್,
ಮಡಿದ ವೀರರ ಸಂಖ್ಯೆಯಂ, ಅಸಂಖ್ಯೇಯಮಂ,
ಸೂಚಿಸಲ್?
            ಕೇಳಾದೊಡಂ ಪೇಳ್ವೆನೊಂದೆರಡು
ಪೊಡವಿಯರಿಕೆಯ ಪೆಸರ್ವಡೆದವರ ಕೃತಿಗಳಂ,
ಗತಿಗಳಂ ಮೇಣ್ ಸಮರ ಸಂಗತಿಗಳಂ. ಕೊಂದು
ವಜ್ರಹನುವಂ ದ್ವಂದ್ವಯುದ್ಧದೊಳ್ ದ್ವಿವಿದಂ
ತಾನುಮೇರ್ವಡೆದುರುಳಿದನ್. ರಾಹುರೋಷನಂ
ಲಂಕೆಗೆ ಮರಳ್ವವೋಲರೆಗಳಿಂದರೆಯಟ್ಟಿ
ದಣಿದನಾ ಮೈಂದಂ, ಕಪಿಧ್ವಜರ ಕಲಿ ಕವೀಂದ್ರಂ.
ಅಂಗದನ ಮುಂದೆ ಹಿಮ್ಮೆಟ್ಟುತೆ ಮಹೋದರನ
ಸೇನೆ ದಳದುಳವಾಯ್ತು. ಋಷಭ ವಾನರ ಸೇನೆ
ಶಕ್ತಿಪೂಜಕ ಮಹಾಪಾರ್ಶ್ವನಿದಿರಿನಲಿರದೆ
ಹಿಂಜರಿದುದಯ್ ಗದಗದಿಸಿ ಬೆದರಿ. ಶತಬಲಿಯ
ಪಡೆಯತುಳ ಘಾತಕ್ಕೆ ಕೆಡೆದ ಧೂಮ್ರಾಕ್ಷನಂ
ಪೊತ್ತುಯ್ದುದವನ ಪಡೆ, ಔಷಧ ನಿಕೇತನದ
ಮಂತ್ರ ಶುಶ್ರೂಷೆಗೆ. ಮರುತ್ಸುತಂಗಿದಿರಾದ
ಶಕ್ರಜಿತು ಮೇಘನಾದನ ರಥಂ, ತಾನಾಯ್ತು
ಚೂರ್ಣೀಕೃತಂ, ಮುಷ್ಟಿಮುದ್ಗರ ಕುಠಾರದ
ಕಠೋರ ತಾಡನಕೆ. ತೆರಳಿದನು ತೇರುಡಿಯಲಾ
ರಾವಣ ಪ್ರಿಯ ಸೂನು, ಗರ್ವಭಂಗಿತನಾಗಿ,
ಶರ್ವರಿಯ ಸಂಶ್ರಯದಿ ಮಾಯಾವಿಧಾನದಿಂ
ನಿಶಾರಣವ ರಚಿಸೆ ನಿಶ್ಚಯಿಸಿ.
                        ಪಗಲನ್ನೆಗಮ್
ತುದಿಗೆಯ್ದಿ ಬರೆ, ನೆತ್ತರಿಂ ತೊಯ್ದು ಕೆಂಪೇರ್ದ
ರುಕ್ಮರೋಚಿಯ ಬೃಹದ್‌ವಸ್ತ್ರಮಂ ಶುಚಿಗೆಯ್ಯೆ
ರವಿ ಮುದ್ದೆಗೆಯ್ದದ್ದಿದನೊ ಪಡುಗಡಲ್ಗೆನೆ
ಭಯಂಕರೋಕುಳಿಯಾದುದಪರಾಬ್ಧಿ. ಅತ್ತಲಾ

ಇನನ ಬಿಂಬದ ಕೆಂಡಮಂಡಳಮುರುಳೆ ನೀರ್ಗೆ
ಕಲ್ಲಿದ್ದಲಿತ್ತೆದ್ದುದೋ ಎನೆ ಇರ್ದುದುದಯಾದ್ರಿ.
ಪೇಳ್ವುದೇನಾಶ್ಚರ್ಯಮಂ! ಪಾಡಿವದ ಶಶಿಯ
ಮೂಡಿದುದನಾರ್ ಕಂಡರಾ ಇರುಳ್? ಅದು ಕಣಾ
ಮೇಘನಾದನ ಮಾಯೆ: ತೀಡಿದುದು ಭುವನಮಂ
ಕಾಡಿಗೆಯ ಕಗ್ಗತ್ತಲಕ್ಷಿಗಳ್ಗದ್ವೈತ ತಾಂ
ಪ್ರತ್ಯಕ್ಷಮಪ್ಪಂತೆವೋಲ್. ಕೃತ್ರಿಮದ ರಾತ್ರಿ
ನಿಸ್ಸೂತ್ರಧಾರಿಯಾದುದು ನೇತ್ರ ನಾಟಕಕೆ.
ಪಗೆಯದಾರ್ ಕೆಳೆಯದಾರ್ ತಿಳಿಯದೊಂದನುಪಮದ
ಪೊಗೆಯ ಬೆಮೆ ಕವಿದುದು, ಕಪಿಧ್ವಜರ ಕಣ್ದಿಟ್ಟಿ
ಹೊಲಬುಗೆಡುವಂತೆ. ತಮಗೆ ಸುಸಮಯಮೆಂಬುದಂ
ತಿಳಿದಾ ತಮಿಸ್ರಚರರಿರ್ಮಡಿಸಿ ಮೇಲ್ವಾಯ್ದು
ತವಿಸಿದರ್ ನಾನಾಯುಧಪ್ರಹಾರಂಗಳಿಂ
ವನೇಚರಾನೀಕಮಂ. ಕತ್ತಲೆಯೊಳರಿಯದೆಯೆ
ತಮ್ಮವರನರಿಗಳೆಂದಿರಿದರ್ ಕೆಲರ್. ಕೆಲರ್
ಪಗೆಗಳನೆ ತಮ್ಮವರ್ಗೆತ್ತವರ ಪಕ್ಷದೊಳ್
ನಿಂದು ಬಡಿದಾಡಿದರ್. ರಣಭೇರಿ ಪಣವಾದಿ
ರಣವಾದ್ಯ ರಣನಮಂ ಗೆಲೆವಂದುದಯ್ ಭಟರ
'ನಿಲ್ ಕೊಲ್ಲು ಇರಿ ಕೆಡಹು ಪೊಯ್' ಎಂಬ ಸುತುಮುಲಂ
ಶಬ್ದಮತುಲಂ.
ಕಳ್ತಲೆಯ ಕಣ್ಗೇಡಿತನಕೆ
ಕಡಿವಣವಿಕ್ಕೆ ಪೊತ್ತಿಸಿದರಲ್ಲಲ್ಲಿ ಪೆರ್ ಬಿದಿರ್
ಮೆಳೆಗಳಂ, ಮರಗಳಂ, ಕುತ್ತುರ್ಗಳಂ. ಕೆಂಬೆಂಕೆ,
ತಿಮಿರದ ಕೊರಳ್ಗೆ ತೋರಣದ ಕಟ್ವಾಣಿಯೆನೆ,
ಧಗಧಗಿಸುತೆದ್ದುದುರಿಗೋಪುರದ ಸಾಲ್ಗಳಂ
ಕಟ್ಟಿ. ಕೊಲೆ ಕಳೆಯೇರುವಂತೆ ರಂಜಿಸಿತೊಡನೆ
ಕೆಂಗಾಂತಿ. ನೂರ್ಮಡಿಸಿದುರ್ಕಿನಿಂ ಮುಂದೊತ್ತಿ
ಮತ್ತೆ ಕಾದಲ್ ತೊಡಗಿದುದು ನೀಲನಾಜ್ಞೆಯಲಿ
ಸುಗ್ರೀವ ಸೇನೆ. ಆ ರಭಸಕಸುರ ದಳಗಳ್
ಮೂಢವಾತಕೆ ಸಿಲ್ಕುವಬುಧಿ ನೌಕೆಗಳಂತೆ
ಕಂಗೆಟ್ಟು, ದೆಸೆಗೆಟ್ಟು, ಸುಳಿ ಸುತ್ತಿದುವು ಮರಳಿ

ತಿರ್‍ರನೆ ತಿರುಗಿ ಮರುಗಿ.
ಕಂಡನದನಿಂದ್ರಜಿತು.
ಕೈಕೊಂಡನದ್ಭುತದ ಕೈತವನ ಮಾರ್ಗದಿಂ
ಕಾಳ ಕೂಟೋಪಮದ ಕೂಟರಣಮಂ. ಮುಂದೆ, ಕೇಳ್,
ಪ್ರತಿಮಿಸುವೆನನುಪಮವನಪರಾಧಮಂ ಕ್ಷಮಿಸಿ,
ತಂತಮ್ಮ ಸಂಸ್ಕೃತಿಗೆ ಸುಕೃತಕ್ಕೆ ಸಾಧ್ಯಮಂ
ಸವಿಯುವುದು ಸಹೃದಯರ್ ಸಂವೇದ್ಯಮಂ:
ತ್ರಿಜಗಂ
ಗದಗದಿಸಿ ನಡುಗಿದುದು. ತಲ್ಲಣಿಸಿತಾಗಸಂ.
ತತ್ತರಿಸಿತದ್ರಿಕುಲಮಂತೆ ಕೂಳ್ಗುದಿಗುದಿದು
ಗದಗದಿಸೆ ಜೀವನಂ ಪ್ರಳಯಶಂಕೆಯಿನಳ್ಕಿ
ಸುಯ್ದುವು ಮಹಾಂಭೋಧಿಗಳ್. ಇರ್ದರ್ಕಿರ್ದ್ದಂತೆ,
ಕಡಲ ನೀರ್ಗಳೆ ಹೆದರಿ ಹಾರಿದುವೊ ಬಾನೆಡೆಗೆ,
ಭೂಧರಂಗಳೆ ಬೆದರಿ ಚೆದರಿದುವೊ ಗಗನಕೆನೆ
ಕತ್ತಲೆಗೆ ಕರ್ಪಿಟ್ಟು ಕವಿದುವೈ ಬಲ್‌ಮುಗಿಲ್.
ಮೊಳಗುರುಳ್ದುದು, ಗುಡುಗುಬಂಡೆಯೆನೆ, ದಿಕ್ತಟದಿಂದೆ
ದಿಕ್ತಟಕೆ. ಕತ್ತಲ್ಗೆ ಕಾಂತಿಯ ಕಠಾರಿಯೆನೆ
ಬಳ್ಪಿವರಿದಿರಿದುವೈ ಕೆಮ್ಮಿಂಚುಗಳ್. ಸಿಡಿಲ್
ಕಿವಿಯೊಡೆದುವಾ ಪ್ರಳಯ ತಾಂಡವದ ಕಾಲದಲಿ
ಭೈರವನೆ ಬ್ರಹ್ಮಾಂಡ ಚಂಡೆಯಂ ಬಡಿವಂತೆವೋಲ್.
ತಗುಲಿದರೆ ತಲೆಯೊಡೆವ ಪೇರಾಲಿಕಲ್ಲುಗಳ್
ವೆರಸಿ ಕರೆದುದು ಮುಸಲಧಾರೆ. ನಿಶ್ಶೇಷಮಾ
ಮೆಳೆಯುರಿಗಳಾರಿದುವು, ಪೇಳ್ವುದೇಂ, ಕಣ್ಮುಚ್ಚಿ
ತೆರೆವಲ್ಲಿಗಾ ಮಳೆಗೆ. ದರಿ ತುಂಬಿ ಕೆರೆಯಾಯ್ತು.
ಪರಿವ ಕಾಲುವೆ ಪಿರಿಯ ತೊರೆಯಾಯ್ತು. ಕೋಂಟೆಯಂ
ಬಳಸಿರ್ದ ಪಾತಾಳ ಕಂದಕಗಳಾದುವು
ಸಮುದ್ರಸಂಬಂಧಿಗಳ್. ಕೆಸರಿನೊಳ್ ನೀರಿನೊಳ್
ಪುಸಿಯುಸುಬಿನೊಳ್ ಸಿಲ್ಕಿದಾ ಕಪಿಕಟಕದಪ್ರಕಟ
ಸಂಕಟವನೇನೆಂಬೆನಕಟಾ ದಶಗ್ರೀವ
ಸುತಶ್ರೇಷ್ಠ ಕೂಟವಿದ್ಯಾಟೋಪದಿಂ!
ಇಂತು

ಕರುಣ ಸ್ಥಿತಿಗೆ ಸಿಲ್ಕಿದಾ ರಾಮ ಸೇನೆಯಂ
ಕಂಡುಬ್ಬಿದನು ಜಿಂಹಯೋಧಿ, ಆ ಬ್ರಹ್ಮವರ
ಗರ್ವಿಷ್ಠನಿಂದ್ರಜಿನ್ ಮೇಘನಾದಂ. "ರಾತ್ರಿ
ತೀರ್ವನಿತರೊಳ್ ತೀರ್ಚಿದಪೆನೀ ವನಾಲಯರ
ಪಡೆಯ ಪೆಸರಿನ ಬರಿಯ ಗಡಿಬಿಡಿಯ ಗಡಣಮಂ!"
ಎಂದಾರ್ದು, ಮುಗಿಲ ಮರೆಯಂ ಸೇರ್ದು, ಮಾಯೆಯಿಂ
ಮೆಯ್ಗರೆದು, ಕರೆಯತೊಡಗಿದನಸ್ತ್ರವರ್ಷಮಂ,
ವೈರಿಯ ವಿನಾಶಕಾಧುನಿಕ ವಿಜ್ಞಾನ ಕಲೆ
ಕೈಕೊಳ್ಳುತಿರ್ಪತಿ ಭಯಾನಕೋಪಾಯಗಳ್
ಪೋಲ್ವೆಗೆ ಬರಿ ಶಿಶುಕ್ರೀಡೆಯಪ್ಪಂತೆ. ಸಿಡಿಲುಗಳೆ
ಸರಳಾದುವೆನೆ ಬಿದ್ದುವಶನಿನಾರಾಚಗಳ್;
ಸಿಡಿದ ಸದ್ದಿಗೆ ಕಿವುಡುವೋದುವು ಕೊಡಂಕೆಗಳ್;
ಬಿರಿದ ರಭಸಕೆ ಛಿದ್ರವಾದುವು ಕಪಿಧ್ವಜರ
ಕಾಯಗಳ್; ಪೊಗೆಯ ಕೌರಂ ತಾಳಲಾರದೆ
ಉಸಿರ್ ಕಟ್ಟುತೋಡಿದರ್ ದೆಸೆದೆಸೆಗೆ ವಾನರರ್
ಶುಚಿ ಸಮೀರಂಗೆಳಸಿ ತಂಡತಂಡಂ. ವಿಭ್ರಾಂತಿ
ಮುಸುಗಿತು ಮಹಾ ಮತಿಯ ಮೇಧಾವಿಗಳಿಗುಮಾ
ವಾನರ ವರಿಷ್ಠರೊಳ್. ದುಸ್ಥಿತಿಯನರಿಯುತಾ
ಕೌಶಿಕಪ್ರಿಯಶಿಷ್ಯನಾ ರಘುರಾಮರುದ್ರಂ
ಪ್ರತೀಕಾರಮಂ ತನ್ನ ದಿವ್ಯಕೋದಂಡಮಂ
ಕೈಕೊಂಡನಯ್, ಪ್ರಾಣಂ ಮುಹುರ್ ಭವಿಸುವೋಲ್
ಸಮಸ್ತ ಸೇನೆಯ ತ್ರಸ್ತ ಚೇತನಕೆ.
"ಅರಸಿಮಾ
ಮಾಯಾವಿಯಿರ್ಪ ನೆಲೆಯಂ. ಬೆಳಗಿದಪೆನೀ
ನಭಸ್ಥಲವನಸ್ತ್ರಜ ಗಭಸ್ತಿಯಿಂ." ಬೆಸನಾರ್ದ
ದಶರಥ ಸುತನ ಕಂಡರಿಲ್ಲೊರ್ವರುಂ. ಜನಿಸಿ
ಸಿಂಜಿನಿಯ ದನಿ ಕಿವಿದೆಸೆಗೆ ಸೇರ್ವ ಮುನ್ನಮೆ, ಬಾನ್ಗೆ
ಬುವಿಯಿಂದೆ ರವಿಗಳಂ ಕವಣೆಯೆಸೆದಂತಾಯ್ತು.
ಪಗಲಿರುಳ್ಗಿಣಿಕಿತೆನೆ ಭೂವ್ಯೋಮಮೆರಡುಮುಂ
ಸೋಮಸುಂದರ ಸೂರ್ಯಸಂಸ್ಪಷ್ಟಮಾದುವಯ್
ತರು ಗುಲ್ಮ ವನ ಶೈಲ ವಿವಿಧ ಛಾಯಾ ಚಿತ್ರ

ರಮಣೀಯ ಕೃತಿಗಳಿಂ: ವಿವರವಾದುದೊ ವಿಶಿಖ
ಶಿಖಿಗಾ ವಿಯದ್ ವಿವರಂ!
ಪರಂತಪ ತರಸ್ವಿಗಳ್,
ಪ್ಲವಗರ್ಷಭರ್, ಗಗನ ಗಾಮಿಗಳ್ ಶೋಧಿಸಲ್
ನೆಗೆದರಂಬರ ತಲಕೆ ಶರಭರ್ ಸುಷೇಣರ್
ಗವಾಕ್ಷ ಗಜ ಗವಯ ಶತಬಲಿ ಋಷಭರಂಗದರ್
ಹನುಮ ಜಾಂಬವರಗ್ರ ಸೂತ್ರದಲಿ. ಕಂಡನೈ
ಕಾಣದಾ ಕಲಿ ಮೇಘನಾದನಿವರಂ; ಕರೆಯ
ತೊಡಗಿದನು ಸಿಡಿಲೆಣೆಯ ಕಣೆಗಳನವರ ಮೇಲೆ.
ಹಾಯ್ದರತ್ತಲ್, ಹಾಯ್ದರಿತ್ತಲ್, ವಿಹಂಗಗಳ್
ರಕ್ಷಣೆಗೆ ಪಾಯ್ವವೊಲಪಾಯದಿಂ ಡೇಗೆಯ
ನಖಂಗಳಾ! ಕುಪ್ಪಳಿಸಿದರ್ ಕಪ್ಪೆಗಳವೋಲ್;
ಕೊಂಕಿ ಬಳುಕುತೆ ಪರಿದರೈ ಸರ್ಪಗಳವೋಲ್;
ಮುಗಿಲ್ವಟ್ಟೆಯನ್ನೀಸಿದರ್ ಮೀಂಗಳೋಲ್. ಪೊಗೆಗಳೊಲ್
ಮೇಲೇರಿದರ್; ಕಲ್ಗಳೋಲುರುಳಿದರ್; ಸರಳ್
ತಾಗಿ ಮೆಯ್ ಸೀಳಲಸು ನಂದಿ ಕೆಡೆದವರೆನಿತೊ
ಮಂದಿ!
ಮಾಯೆಯಿಂ ಮೆಯ್ಗರೆದ ರಾವಣಿಯನಾರ್
ಕಾಣ್ಬರ್? ಅದಂತಿರಲಿ. ರಾಘವಾಸ್ತ್ರ ಜ್ಯೋತಿ
ತನ್ನ ಪಕ್ಷಕೆ ತಾನೆ ವಿದ್ರೋಹಿಯಾದುದೆನೆ
ವಾನರವ್ಯೂಹಸ್ಥಿತಿಯನಂತೆ ದಶರಥನ
ಸುತನಿರ್ಕೆದಾಣಮಂ ತೋರ್ದುದು ಬಯಲ್ಗೆ ಆ
ತಾರಾಕ್ಷಿವಲ್ಲಭಗೆ. ಕೊಲ್ವೆನೆಲ್ಲರನೊಂದೆ
ನಾಗಾಸ್ತ್ರದಿಂದೆಂದು ಹೂಡಿದನಮೋಘಮಂ
ಮರಣಮಯದಾಶೀವಿಷೌಘಮಂ. ತೊಟ್ಟುದೆ ತಡಂ
ತುಂಬಿದತ್ತಂಬರದ ಸೀಮೆಯಂ ಘೋರಾಂಧ
ಗರಳ ಧೂಮಂ. ಕಿಡಿಯ ಗಡಣದ ಹೆಡೆಮಣಿಗಳಂ
ಕೊಡಕೊಡಹುತೆಣ್ದೆಸೆಗೆ ಸಿಡಿದುವು. ಉಗುಳ್ದುವೆನೆ
ಒಂದು ಮತ್ತೊಂದನಾ ಎರಡು ಎರಡೆರಡನಾ
ನಾಲ್ಕೆಂಟನಾ ಎಂಟು ಪದಿನಾರನಾ ಅಂಕೆ
ತಾನೆ ತನ್ನಂ ಗುಣಿಸಿ ವರ್ಧಿಸಿತು, ಸ್ಪರ್ಧಿಸಿ

ಕಪಿಧ್ವಜರ ಸಂಖ್ಯೆಯನಮೇಯಮಂ. ಸಿಡಿದೊಡೆದ
ಕಣೆಕಣೆಯಿನುಣ್ಮಿದುವು ಹಾವುರೂವಿನ ಹೊಗೆಯ
ಸುರುಳಿಗಳ್. ಹರಿಹರಿಯುತೊಯ್ಯನೊಯ್ಯನೆ ಹಿಡಿದು
ಸುತ್ತಿದುವು ಮೆಯ್ಗಳಂ. ಘ್ರಾಣ ರಂಧ್ರಂಗಳಿಂ
ಪ್ರಾಣ ಗೃಹಮಂ ಪೊಕ್ಕು ನಂಜುಗಳನೋಕರಿಸೆ,
ಪಸುರೇರ್ದೊಡಲ್ಗಳಿಂ ಮಹಾ ಸುಭಟರ್ಕಳುಂ
ಚೇತನಮುಡುಗಿ ಕೆಡೆದರಿಳೆಯಲ್ಲಿ! ನಿಶ್ಚಲಂ
ನಿದ್ರೆಪೋಲ್ ನಿಶ್ಶಬ್ದಮಾಯ್ತಾ ಸಮಸ್ತಂ
ಸಮರಭೂಮಿ. ರಾಮಲಕ್ಷ್ಮಣಸಹಿತಮವನಿಗೆ,
ವಿಭೀಷಣಂ ಪೊರತಾಗಿ, ವಿಷಮೂರ್ಛೆಗಳ್ದಿದ
ಕಪಿಧ್ವಜಿನಿಯಂ ಕಂಡು ಕೃತಕೃತ್ಯ ಗರ್ವದಿಂ
ಪಿಂತಿರುಗಿದನು ಪುರಕೆ ಮೇಘನಾದಂ, ತನ್ನ
ತಂದೆಯ ಕರೆದ ರಜನಿಯೋಲಗಕೆ ಘೋಷಿಸಲ್ಕಾ
ಸಾಹಸದ ಸಂತೋಷಮಂ.
ಆತ್ಮ ಧಿಕ್‌ಕೃತ
ಅನಾತ್ಮ ವಿಜ್ಞಾನದೈಂದ್ರಿಯ ಸುಖ ವಿಮೋಹದ
ತಮಸ್ಸುಪ್ತಿಗುರುಳಿರ್ಪ ನಾಗರಿಕತೆಯ ನಿದ್ರೆ ತಾಂ
ಬಳಿಸಾರ್ವ ಕಾಲಲಬ್ಧಿ ಪ್ರಭಾವದಿನೆಂತುಟಾ
ತನ್ನ ಜಾಡ್ಯಕೆ ತಾನೆ ತನ್ನಂತರಂಗದಿಂ
ಮದ್ದನೊದಗಿಪುದಂತೆ, ಕೂಟರಾಕ್ಷಸ ಕೃತಿಗೆ
ರಾಕ್ಷಸ ವಿಭೀಷಣನೆ ನಿಷ್ಕೃತಿಯನಿತ್ತನಯ್
ರಾಮ ಸೇನೆಯ ಭೀಷಣಸ್ಥಿತಿಗೆ.
''ತಳುವಿದಡೆ
ಸರ್ವರುಂ ಮೂರ್ಛೆಯಿಂದೊಯ್ಯನೆಯೆ ಮಿತ್ತುವಿಗೆ
ತುತ್ತಾಗುವುದೆ ದಿಟಂ. ಕಾಲ ಮೀರುವ ಮುನ್ನ
ಗರಳ ಪ್ರಭಾವಮಂ ತಳ್ಗಿಸಲೆವೇಳ್ಕುಮ್.
ಸುಷೇಣನ್ ಮಹಾ ಮಂತ್ರ ವೈದ್ಯಪ್ರವೀಣನ್
ಎನಿಪ್ಪುದನ್ ಕೇಳಿಬಲ್ಲೆನ್. ಆತನೀ ವಿಷಕೆ
ಪಿರಿದು ಪೊಳ್ತೊಳಗಾಗಿರನ್.'' ಬಭ್ರು ಸಂಕೇತ
ಕೇತನವನರಸುತೆ ವಿಭೀಷಣಂ ತೊಳಲುತಿರೆ
ಕೇಳಿಸಿತು, ನೀರವದ ನಿಶ್ಚಲದ ಪೆಣಮಯದ

ರಣ ಧರೆಯ ಮೇಲಾಗಸದಿ, ಗಾಳಿದನಿಗಳೆನೆ,
ದಿವ್ಯಕಂಠದ ಮಧುರ ಸಂವಾದ:
"ಇದೆ ಕೊನೆಯೆ,
ಪೇಳಕ್ಕ, ಆ ಎಲ್ಲ ಉದ್ಯಮಕೆ?"
"ತೊರೆ, ತಂಗೆ,
ಶೋಕಮಂ. ಕಂಬನಿಯನೊರಸು." ಸ್ವಪ್ನಲಕ್ಷ್ಮಿಗೆ
ಧೈರ್ಯವಿತ್ತಳ್ ತಪೋಲಕ್ಷ್ಮಿ, "ಕಾಣ್, ಕಾಣಲ್ಲಿ,
ಧರ್ಮಶಕ್ತಿಯೆ ರಾಮಪಕ್ಷದಲಿ ನಿಂತೆಂತು
ಹೋರಾಡುತಿದೆ ಸೆಣಸಿ ದುಶ್ಶಕ್ತಿಯಂ! ಇಲ್ಲಿ
ದೇಹಂಗಳುರುಳಿದಾ ಮಾತ್ರದಿಂ ಮುಗಿಯುವುದೆ
ಆತ್ಮಕರ್ಮಂ? ವಿಶ್ವಶಕ್ತಿಗಳೆ ತಾಮ್ ದೇವತಾ
ರೂಪಂಗಳಂ ತಾಳ್ದು ಚಲಿಸುತಿಹವಾಗಳೆಯೆ,
ನೋಡದೊ, ಮನೋಮಯದ ಲೋಕದಲಿ. ಅವರಿಚ್ಛೆ
ತೋರ್ಪುದನ್ನಮಯದೊಳ್ ಪ್ರಕೃತಿ ನಿಯಮಂಗಳೋಲ್.
ಆ ಇಚ್ಛೆಗವಿಧೇಯತೆಯೆ ಭಯಂ. ಆ ಭಯಕೆ
ಉರಿವುದೀ ಅಗ್ನಿ; ಸೂರ್ಯನೆಸೆವನ್; ಯಮ ವರುಣ
ಇಂದ್ರಾದಿಗಳ್ ಪಾಲಿಪರ್ ನಿತ್ಯಕರ್ತವ್ಯಮಂ.
ನೋಡುತಿರು, ಭಗಿನಿ, ಸೀತಾ ತಪೋಮಹಿಮೆಯಂ:
ಮುನಿದೊಡೆಯನಾಣತಿಗೆ ಬೆದರಿದಾಳುಗಳೆಂತು
ತವಕದಿಂ ತಕಪಕನೆ ಕುದಿಕುದಿದು ಗದಗದಿಸಿ
ಕಜ್ಜದೇರ್ ನೊಗಕೆ ಮಣೆದಾಂಪರೊ ಪೆಗಲ್ಗಳಂ
ತಾನಂತೆವೋಲ್, ಸೃಷ್ಟಿಸೂತ್ರಂಗಳಂ ಪಿಡಿದು
ನಡೆಯಿಪ ಜಗಚ್ಛಕ್ತಿಯಮರ ದೂತರ್ಕಳೀ
ಯುದ್ಧ ಮೇದಿನಿಯನಿಂದವರ ಕರ್ಮಕೆ ಅಗ್ರಮಂ
ವೇದಿಕೆಯನಾಗಿಪರ್. ಮುನ್ನಡೆವುದಂ ನೋಡಿ,
ಜವದಿ ನಡೆದೊರೆ ದೇವಿಗನಿತುಮಂ, ನೀಂ ಕಾಣ್ಬ
ದೈವಿಕ ಮಹದ್‌ದೃಶ್ಯಮಂ."
ಕೇಳ್ದುಮಾ ಶುಭದ
ದೈವೇಚ್ಛೆಯಂ, ತದಿಚ್ಛಾಂತರ್ಗತಂ ತನ್ನ
ಕೈಕೊಳ್ವ ನೈಸರ್ಗಿಕ ವಿಧಾನಮೆಂಬುದಂ
ಕರ್ಮಾಕರ್ಮ ಮರ್ಮಮಂ ತಿಳಿದಾ ವಿಭೀಷಣಂ,

ಧರ್ಮವೇತ್ತಂ, ರಾಕ್ಷಸೋತ್ತಮಂ ಮುನ್ನಡೆದು
ಗೆಯ್ದುದಂ ಕವಿಕರ್ಮ ರಮಣೀಯಮಪ್ಪಂತೆ
ಬಣ್ಣಿಪೆನ್, ಸ್ವಪ್ನ ಸುಂದರಿಗೆ ಕಂಡಂದದಿಂ,
ಮನೋಲೋಕ ಸುಭಗಮಂ, ಸ್ವಚ್ಛಂದಮಂ, ಮೇಣ್
ರಸಪ್ರತೀತಿಯ ಸತ್ಯತರಮಂ:
ಚಲನೆಯುಡುಗಿರ್ದ
ಯುದ್ಧ ರಂಗದೊಳೊಂದು ಚಲಿಸಿದುದು ಮಾರುತಂ,
ವಾಯುದೇವ, ಪ್ರೇರಿತಂ, ವನ್ಯಂ, ನಗಂಗಳಿಂ
ಪೊತ್ತು ದಿವ್ಯೌಷಧಿಯ ಸಂಜೀವಮಂ. ಮತ್ತೆ,
ಬೀಸಿ ದೂರಕೆ ಓಸರಿಸಿದುದು ಮೇಘನಾದ
ಶರೌಘ ಸಂಭವ ಗರಳವಾತಂಗಳಂ. ನೋಡೆ
ನೋಡೆ, ಮೋಡಗಳೋಡಿ ತಿಳಿವೋದುದಾಗಸಂ;
ತುಂಬು ಬಿಂಬಂ ತೋರಿದುದು ಪಾಡಿವದ ಪೆರೆಗೆ!
ತಿರೆಗೆ ತುಳ್ಕಿತುಃ ಜೊನ್ನೊ? ಜೇನಿಂಗಡಲೊ? ನಗೆಯೊ
ರಾಮಕ್ಷೇಮ ಚಂದ್ರಮನಾ? ಆ ಅಖಿಲ ಕಾರ್ಯಕೆ
ಪ್ರಧಾನ ಕಾರಣಮೆ ಪಿಂದೋರ್ಪುದೆಂಬವೋಲ್
ತೋರ್ದುದು ವಿಯದ್ದೂರದಲ್ಲೊಂದು ಚರಿಪರಿಲ್,
ಚಂದ್ರ ಸುಂದರ ನಭದ ಬಹುವಿರಳ ತಾರೆಗಳ
ನಡುವೆ ವಿಪುಳೋಜ್ವಲಂ. ಬರಬರುತೆ, ತನ್ನಮರ
ಕಾಂತಿಯಿನಿತರ ದೀಪ್ತಿಗಳನೆಲ್ಲಮಂ ನುಂಗಿ,
ಮನುಜ ಲೋಕೇಂದ್ರಿಯಾವಶ್ಯಕಾಕಾರಮಂ
ಸ್ವೀಕರಿಸುತವತರಿಸ ತೊಡಗಿದುದು ಲಂಕಾ
ಬಹಿರ್ಭೂತಮಾ ಯುದ್ಧಮೇದಿನಿಗೆ. ತಾರೆಯ ತೆರದಿ
ತೋರುತೆ ಮೊದಲ್, ಬರಬರುತೆ ಖಗಾಕಾರಮಂ
ತಳೆಯುತೆ, ಮನುಷ್ಯತನುವಾಂತು ತಿರೆಗಿಳಿದುದಾ
ದಿವ್ಯತೇಜಂ. ಸ್ವರ್ಗ ಸಂಭವ ಸುವರ್ಣೋಜ್ವಲ
ಪರ್ಣಪಕ್ಷಗಳೆಸೆದುವೈ, ಭುಜಧ್ವಜಂಗಳೆನೆ
ಪೊಣ್ಮಿ. ತಳತಳಿಸಿದುವು ದಿವ್ಯವಕ್ಷಾಂಬರದಿ,
ಫಾಲ್ಗುಣೋದಯ ರವಿಯ ರೋಚಿಗಳೆನಲ್, ರೋಮ
ರಾಜಿ. ಮಿರುಗಿದುದು ನಿರ್ಜರ ಸಹಜ ದೇದೀಪ್ಯ
ಕೌಶೇಯಮಮರ ವಪುವಂ, ಭವ್ಯಶೈಲಿಯಿಂ

ನೆಯ್ದು, ಕಯ್ಗಯ್ದು. ಜೋಲ್ದಿಸೆದುದೈ ನಂದನ
ಕುಟಜ ಕುಸುಮ ಕಂಠಹಾರಂ. ರೆಂಕೆಗರಿಗಳಿಂ
ಬೀಸುತಿರ್ದೆಲರಿಗೆ ಮರಣಹರಣ ಜೀವಾತು
ಸೌಗಂಧಮಯದಮೃತದೌಷಧಗಳಂ ಸೂಸಿ.
ಅಂತುಟೈತಂದಾ ಗರುತ್ಮಂತ ಸಾನ್ನಿಧ್ಯ
ಮಂತ್ರ ಮಣೆಗಿರದೆ ಪರಿದೋಡಲಾ ಗರಳಫಣಿ
ಮೇಘನಾದನ ನಾಗನಾರಾಚದಾ, ಸುಪ್ತಮಾ
ರಣಚೇತನಮೆ ಮೂರ್ಛೆಯಿಂದೇಳ್ವವೋಲ್ ಅಕ್ಷಿ
ಅರಳಿದುವು ಇಕ್ಷ್ವಾಕು ಕುಲ ದೀಪಕಂಗೆ. "ಏಳ್
ಸ್ವಮಾಯಾ ವಿಮೋಹದಿಂ, ಹೇ ಜಗತ್ ಸ್ವಾಮೀ;
ನಿಮಿತ್ತಮಾತ್ರಂ ನಿನ್ನನೆಳ್ಚರಿಸೆ ಬಂದೆನಾಂ;
ನಿತ್ಯಜಾಗ್ರಚ್ಚಿತ್ತನಲ್ತೆ ನೀನ್!" ಕೈಮುಗಿದು
ನಿಂದಾ ಸಮುದ್ರ ಮಂದ್ರಧ್ವನಿಯ ತನ್ನಾತ್ಮ
ರುಂದ್ರ ಸತ್ತ್ವದ ಬಹಿಶ್ಚರ ವಿಗ್ರಹನ ಕಂಡು
ಮಂದಸ್ಮಿತಾನುಗ್ರಹಂ ಗೆಯ್ದು ರಾಮನೊಳೆ
ಪೊಕ್ಕಡಂಗಿದುದಾ ಗರುತ್ಮಂತ ದೇವತನು,
ಸ್ವಪ್ನದೇವಿಯ ಕಣ್ ತಪೋಲಕ್ಷ್ಮಿಯಕ್ಷಿಯಂ
ಬೆಬ್ಬಳಿಸಿ ಮಿಳ್ಮಿಳನೆ ನೋಳ್ಪಂತೆವೋಲ್!
                                                  ನೆಗಳ್ದ
ಶುಶ್ರೂಷೆಗೆಂಬಂತೆ, ಸುಯ್ದು ಕಣ್ದೆರೆದನಾ
ಕಣಸಿನಿಂದೀ ಕಣಸಿಗೆಳ್ಚರ್ವನಂತೆವೋಲ್
ರಾಮಚಂದ್ರಂ. ಕಂಡನಿದಿರಿನಲಿ ತನ್ನಂ
ಬಳಸಿ ನಿಂದ ಕಪಿಮುಖ್ಯನಾಯಕ ಮುಖಂಗಳಂ,
ದುಃಖ ಕರ್ದಿಂಗಳಿಂ ಹರ್ಷ ಬೆಳ್ದಿಂಗಳ್ಗೆ
ದಾಂಟಿ ಬರುತಿರ್ದುವಂ: "ತೊರೆಯಿ ತಳ್ಳಂಕಮಂ,
ಮಿತ್ರರಿರ್. ರಾವಣಗೆ ದೊರೆತಜನ ವರಬಲಮ್
ತವಿದುದಲ್ಲದೆ ತವಿದುದಿಲ್ಲೆಮ್ಮುಸಿರ್. ಕರೆದು
ನೆರೆಯಿಮ್ ಬೆದರ್ದು ಕೆದರ್ದೆಮ್ಮ ಪಡೆಯಾಳ್ಗಳಂ.
ಲಗ್ಗೆ ನುಗ್ಗುವ ನಮ್ಮ ಹುರಿಗೊಂಡ ಕಲಿತನಕೆ
ತನ್ನತುಳ ಸೈನ್ಯಶಕ್ತಿಯೊಳರ್ಧಮಂ ಮೀರ್ದಿಂದು
ಬಲಿಗೊಡುವುದೀ ಲಂಕೆ. ನೋಡುತಿರಿಘನ್ನಾಜ್ಞೆ

ವಿಧಿಗೆ ತನ್ನಿಚ್ಛೆಯಪ್ಪುದು; ದಿಟಂ!'' ಭಾವದಿಂ
ಬೆಸಸಿದಾ ಸತ್ಯವಾಕ್ಯನ ವಚನಧೈರ್ಯಕೀನೆ
ನಡೆದರಾ ವಾನರಾನೀಕಿನೀ ಸೇನಾನಿಗಳ್
ರಚಿಸೆ ತಂತಮ್ಮ ಮುರಿದ ರಣಮುಖಗಳಂ: ಮತ್ತೆ
ಮೊಳಗಿದುವು ರಣಭೇರಿ! ಕುಮುಟೆದ್ದುದು ವನಾದ್ರಿ
ನಿದ್ರೆ! ಕವಿದ ಕಂಬಳಿತಿಮಿರದಿಂ ಬಿಡುಗಡೆಯ
ಪಡೆಯೆ ಮೆಯ್‌ಕೊಡಹಿತುದಯಾಚಲಂ! ಉಷೆಯ ಕಣ್
ಕೇಸೆವೆದೆರೆದುದಾಶೆಯಂದದಿ ಇಂದ್ರನಾಶೆಯಲಿ!

## ಸಂಚಿಕೆ ೧೪

# ಅದ್ವಿತೀಯಮಾ ದ್ವಿತೀಯಂ ದಿನಂ

ಅದ್ವಿತೀಯಮೆನೆ ಮೂಡಿತಾ ದ್ವಿತೀಯಂ ದಿನಂ:
ಪ್ರಾಣಮಂ ಪೀರ್ವ ಘೋರಾಶೀವಿಷಾಸ್ತ್ರಮಂ
ಗೆಲ್ದು ಮೇಲೆಳ್ದ ವಾನರ ಸಿಂಹನಾದಂಗಳಂ
ಕೇಳುತಾಶ್ಚರ್ಯದಿಂ ರೋಷದಿಂ ರಾವಣಂ
ಮಿಳ್ತುನೇಮವನಿತ್ತು ಕಳುಹಿದನು ತನ್ನಾಯ್ದ
ಕಟ್ಟಾಳ್ಗಳೊಡೆಯರ್ಕಳಂ, ಕದನ ಯಜ್ಞಕ್ಕೆ.
ಅದ್ವಿತೀಯಮೆನೆ ಮೂಡಿತಾ ದ್ವಿತೀಯಂ ದಿನಂ!
ಲಂಕೇಶ್ವರನ ಭೀಷಣಾಜ್ಞಾ ಕಿರೀಟಮಂ
ಪೊತ್ತ ಭಾರಕೆ ಮತ್ತೆ ಬಿಂಕಕೆ ಪಿಂಗಿ ಪೊಂಗಿ
ತನ್ನ ಪೆರ್ಪಡೆಯೊಡನೆ ಧೂಮ್ರಾಕ್ಷರಾಕ್ಷಸಂ
ಬಂದು ಬಿದ್ದನು ಶತಬಲಿಯ ಮೇಲೆ, ಕಾಳ್ಕೋಣಗಳ್
ಪೇರಾನೆವಿಂಡಂ ಕೆಣಕುವಂತೆ. ಹೊತ್ತರೆಯ
ಬೆಟ್ಟನೆತ್ತಿಯ ಕಲ್ಲರೆಯ ಮೊರಡುಗೋಡಂತೆ
ಭೀಮತನು; ಕಾಡನಂಡಲೆವ ಬಿರುಗಾಳಿಯೋಲ್
ಭೀಮಕಲಿ; ತಟಮಂ ಕೊರೆದು, ತರುಗಳನುರುಳ್ಚಿ,
ತಿಳಿಯಂ ಕದಡಿ ಕೊಚ್ಚಿ, ಪರಿವ ಮುಂಗಾರ್ವೊನಲ
ಪೊಳೆಯಂತೆವೋಲ್ ಭೀಮ ಕರ್ಮಿ; ಆ ದೈತ್ಯನಂ
ತಾಗಿ ಹೊದಕುಳಿಗೊಂಡು ಬೇಗುದಿದುದೈ, ವ್ಯೋಮ
ಗಾಮಿಗಳ ಮೇಣ್ ಕಾಮರೂಪಿಗಳ ಶತಬಲಿಯ
ಭೀಮಸೇನಾಬ್ಧಿ. ಪಡೆ ಮಡಿದುದಂ, ದಣಿದುದಂ,
ಸೋಲ್ತುದಂ ಕಾಣುತಾ ಸೇನಾನಿ ಶತಬಲಿಯೆ
ಮಾರಾಂತನಸುರ ವೀರಂಗೆ. ಮರುಕೊಳಿಸಿ ಧೈರ್ಯಂ,
ಮುತ್ತಿದುದು ಮತ್ತೆ ಕಪಿಸೇನೆ ದಶದಿಶೆಗಳಿಂ

ಧೂಮ್ರಾಕ್ಷನ ವರೂಥಮಂ. ಕಿತ್ತ ಮರಗಳಿಂ
ಬೀಸಿ ಬಡಿದರು ಮುರಿಯೆ ತೇರ್ಗಾಲಿ. ಗಿರಿಗಳಿಂ
ಬಂಡೆಗುಂಡರೆಗಳಂ ಪೊತ್ತೆತ್ತಿ, ಬಾನ್ಗೇರಿ,
ಗುರಿಬಿಡಲ್ ಸತ್ತುವು ರಥಾಶ್ವಗಳ್, ಬೆನ್ಮುರಿದು,
ನೆತ್ತಿಯೆ ಪಿಸುಳ್ದು. ತೇರುಡಿಯೆ ರಿಪುಬೃಹದ್‌ವಪು
ವರೂಥದಿಂ ಧಿಮ್ಮನೆಯೆ ಧುಮ್ಮಿಕ್ಕಿದುದು ನೆಲಕೆ,
ದಿಗ್ಗಜಕೆ ಬೆನ್ ಜಗ್ಗೆನಲ್! ಪೇಳ್ವುದೇನಾ
ಮಹದ್‌ದೃಶ್ಯಮಂ? ನೋಡಿದುದು ನಿಬ್ಬೆರಗುವೋಗಿ
ರಾಕ್ಷಸ ಭಯಂಕರಾಕಾರಮಂ ಕಪಿಧ್ವಜಿನಿ:
ಹೆಗ್ಗಂಟೆಗಳ ಹಂತಿ ತೂಗಿದೊಡ್ಯಾಣಮಂ
ಸುತ್ತಿರ್ದ ಸೊಂಟದಿಂ ಜೋಲ್ದುದು ಮಹಾಭೀಳ
ನಗ್ನಖಡ್ಗಂ. ಕಣೆಹಂದಿಗಳ ಗೊಂಚಲೆಂಬಂತೆ
ನೇಲ್ದುವೈ ಮುದ್ಗರಂಗಳ ಗೋಷ್ಠಿ. ತಿಮಿರದ
ತಿಮಿಂಗಿಲದ ಖರ್ಪರೋಪಮ ಚರ್ಮಮಂ ಕೊರೆದು
ಸಮೆದುದೆನೆ, ಮೆರೆದುದೆಡಗೈ ರೌದ್ರಮುಷ್ಟಿಯಲಿ
ಖಡುಗಮಿಗದೊಗಲಿನ ಕರಿಗುರಾಣಿ. 'ಪರಿಘಮುಖಿ'
ಬಲ್ಗದೆಯದೊಂದು, ಬಲಗೈಯ ಭೈರವನೆನಲ್,
ತೂಗಿ ತೊನೆದುದು ತನ್ನ ಫಣೆಯ ಪೊದೆಯಂತಿರ್ದ
ಪೆರ್ಮಂಡೆಯಂ. ನೋಡಿತಯ್ ನಿಬ್ಬೆರಗು ಬಡಿದು
ಧೂಮ್ರಾಕ್ಷನುಗ್ರವಿಗ್ರಹವನಾ ಸುಗ್ರೀವ
ಸೇನಾಸಮಗ್ರಂ!
ಬಳ್ಳಿಯ ಮಿಂಚು ಬಲ್‌ಮೆಯ್ಯ
ಮೋಡದೊಳ್ ಸಂಚರಿಸದಂ ಸುತ್ತುವರಿವವೊಲ್
ಚಲಿಸಿ ಶತಬಲಿ ತವಿಸಿದನು ರಾಕ್ಷಸಸ್ಥೂಲ
ಸಾಮರ್ಥ್ಯಮಂ. ರಕ್ಕಸನ ಗದೆಗೆ ರಕ್ಕಸನ
ತನುವೆ ಗುರಿಯಾಯ್ತು; ಖಡುಗಂ ತೊಯ್ದುದಾತನದೆ
ರುಧಿರದಿಂ; ರಕ್ಕಸನ ಮುದ್ಗರಂಗಳ ಹತಿಗೆ
ರಕ್ಕಸನ ಸೇನೆಯಾಹುತಿಯಾಯ್ತು. ಹರೆಗಡಿದ
ಹೆಮ್ಮರಂ ಬುಡಗಡಿಯೆ ಬೀಳ್ವವೋಲುರುಳಲಾ
ಧೂಮ್ರಾಕ್ಷ ದೈತ್ಯಕಾಯಂ ಪೆಡಂಮೆಟ್ಟಿತಯ್
ಗಾಯಗೊಂಡಳಿದುಳಿದಸುರ ಸೇನೆ.

ಅತ್ತಲಾ
ದಕ್ಷಿಣದ್ವಾರದೊಳ್ ಮೇಲ್ವಾಯ್ದ ವಜ್ರದಂಷ್ಟ್ರನ
ಪಡೆಗೆ ನಡೆದತ್ತಿದಿರ್ ವಾಲಿಪುತ್ರನ ದಳಂ,
ಕಾಳ್ಗಿರ್ಚ್ಚಿಗಿದಿರ್ ನಡೆವ ಮತ್ತೊಂದು ಪೆರ್ಚುಗೆಯ
ಕಾಳ್ಗಿರ್ಚ್ಚಿನಲ್. ಕೂಡೆ ಪೊತ್ತಿದುದು ಧಗಧಗಿಸಿ
ಸಮರಾಧ್ವರಾಗ್ನಿ. ಬೇಳ್ದತ್ತಿರ್ಕ್ಕಡೆಯ ಸೈನಿಕಂ.
ಕಾಣುತ್ತದಂ ಮುನ್ನುಗ್ಗಿದನು ವಜ್ರದಂಷ್ಟ್ರಂ
ತ್ರಿಶೂಲಾಂಕುಶದಿ ತನ್ನಡರ್ದ ಮತ್ತೇಭಮಂ
ತಿವಿತಿವಿದರಿಯ ಮೇಲೆ. ಪಡುಮಲೆಯ ಮುಡಿಯೇರಿ
ಮುಂಗಾರ್ ಗುಡುಗಿ ಮುಂಬಾಯ್ವವೋಲ್ ಬಂದವನ
ಬಿರುಬಿಗಾರದೆಯೆ ತತ್ತರಿಸಿದತ್ತಂಗದನ
ಪಡೆಯಡವಿ. ಕಿಡಿಗರೆವ ತನ್ನ ಕರಚಕ್ರಮಂ
ಗಿರ್ರನೆ ತಿರುಗಿಸುತ್ತಾ ಕರ್ಬುರಂ ಕೆಯ್‌ಗೊಯ್ವ
ಪೇರೊಕ್ಕಲಿಗನಂತೆ ತರಿದೊಟ್ಟಿದನು ಬಣಬೆಯಂ
ಹಗೆಯ ತಲೆಮೆದೆಗಳಿಂ. ಹೆದರಿ ಹಿಂಜರಿದುದೈ
ಹರಿವಾಹಿನಿ! ಕಂಡದಂ ಕ್ರೋಧತಾಮ್ರಾಕ್ಷನಾ
ಕಪಿಯೂಥಪಂ ವಾಲಿಸೂನು ದೃಢಗಮನದಿಂ
ಮುಂಬರಿದನರಿಯ ಸರಿಸಕೆ ಕರಿಕರೋಪಮ
ಹಸ್ತದೊಳ್ ಪಿಡಿದೆತ್ತುತೊಂದುಗ್ರಮಂ, ಬೃಹದ್
ಗಾತ್ರಮಂ, ರೌದ್ರರೋಚಿಯ ನಿಶಿತ ಪರಶುವಂ,
ಸುಘೋರಮಂ.
ಪಡುಮಲೆಯ ಕಾಡೊಳೊಂಟಿಗ ಪಂದಿ
ಮಲೆವುದೆಂತುಟೊ ತನ್ನನಡಹಾಯ್ವ ಪೆರ್ಬ್ಬುಲಿಗೆ,
ಸೆಡೆತನಂತುಟೆ ವಜ್ರದಂಷ್ಟ್ರಂ ಪುರಂದರ
ಸುತನ ಸುತಗೆ. ಹೂಂಕರಿಸಿದನ್, ದಾಡೆಗಡಿದನ್,
ಕೆಂಗಣ್ಗಳಿಂ ನೋಡಿದನ್ ತನ್ನನೆವೆಯಿಡದೆ
ನೋಳ್ಪಾತನಂ; ನವಿರ್ ನಿಮಿರಿದನ್, ಸುಯ್‌ಸುಯ್ದು
ಕೋರೆಗಳಿನಿರಿವಂತೆ ದಂಷ್ಟ್ರಮಯ ಚಕ್ರದಿಂ
ಘರ್ಘರ ಧ್ವನಿ ಪೊಣ್ಮೆ ಬೀಸಿ ಪೊಯ್ದನ್. ಬರ್ಪ
ಚಕ್ರಾಯುಧಕೆ ತನ್ನ ಕೈಯ ಖರ್ಪರವೊಡ್ಡಿ
ಬಲ್ಗೊಡಲಿಯಿಂದಿಟ್ಟನಂಗದನಿಭದ ಮೂರ್ಧ್ನಿ

ಬಿರಿದು ಮಿದುಳಂ ವಾಂತಿಗೈವಂತೆ. ತತ್ತರಿಸಿ,
ಕೋಡೊತ್ತಿ, ಮಗ್ಗುಲಿಕ್ಕಿತು ಮತ್ತವಾರಣಂ.
ನೆಗೆದು ಚಂಗನೆ ನೆಲಕೆ, ಕಂಗನೆ ಕನಲಿ, ಕಯ್ಗೆ
ಸಿಲ್ಕಿದ ಕೈದುವಂ, ಮುಸಲಮಂ, ತುಡುಕಿಪಿಡಿದು,
ಮೇಲ್ವಾಯ್ವ ರಾಕ್ಷಸನ ತಲೆಗೆ ಕಲಿ ವಾನರಂ
ಗುರಿವೀಸಲೊಡನೆ ತೊಪ್ಪನೆ ತೊಯ್ದು ಕೆಂಪಾಯ್ತು
ರಾಕ್ಷಸ ರುಧಿರಸಿಕ್ತಮಾ ಸಿತ ಪರಶು ಜಿಹ್ವೆ.
ಚಿಪ್ಪೊಡೆದುದಸುರ ಮಂಡೆಗೆ; ಭಯಂಕರಮಾಗೆ
ಕಣ್ ಬಸಿದುದಂತಸ್ಥಮಂ; ಬಿದ್ದನವನಿಗೆ
ನಿಶಾಚರಂ; ಕೂಡೆ ಬಿದ್ದುದು ಧೈರ್ಯಮಸುರರಿಗೆ;
ಹಗೆಯ ಹಳು ಬಯಲೇಳೆ ನುಗ್ಗಿ ಸವರಿದನಂಗದಂ;
ಪೌರುಷಾತಪಕೆ ಕುದಿಕುದಿದಾವಿಯಾದುದೆನೆ,
ಮುಗಿಲವೊಲ್ ಸಗ್ಗಕೇರ್ದುದು ಶತ್ರು ಜೀವನಂ!
    ಅತ್ತಲುತ್ತರದಲ್ಲಿ ಕೋಂಟೆಯ ದಿಡ್ಡಿವಾಗಿಲಂ,
ಕಬ್ಬುರ್ನದ ಚಪ್ಪಡಿಗಳಿಂದೆ ಕೈಗೈದುದಂ,
ರಾಕ್ಷಸಕುಲದ ರಾಕ್ಷಸ ಬಲದ ಕಟ್ಬಾಳುಗಳ್
ತೆರೆದರಯ್, ನೂರ್ವರ್, ಪೊಣ್ಮಲ್ ಮಹಾಸ್ವನಂ
ಚಕಿತಗೊಳ್ವಂತೆವೋಲ್ ಕಪಿಚಮೂ. ಬೀಸಿದರ್
ಸೇತುವಂ ಕಂದಕಕೆ, ಯಂತ್ರಕರ್ಮಂಗಳಿಂ
ಪೆಣೆದ ದಿಮ್ಮಿಯ ಸಂಕ ಸಾಲ್ಗಳಿಂ. ನಡೆದುದ್ಯೆ,
ಭೋರ್ಗರೆದುದ್ಯೆ, ಪರಿದುದ್ಯೆ ಪಡೆವೊನಲ್, ಲಂಕಾ
ಸರೋವರಂ ಕೋಡಿದೆಗೆದಂತೆ. ಲಂಕೇಶ್ವರನ
ಮೆಚ್ಚಿನ ಚಮೂಪತಿ ಅಕಂಪನಂ ತಾನಿಂತು
ಸಾಗಿದನು ತನ್ನ ನಚ್ಚಿನ ಅದಟ ಪಟುಭಟರ
ವಾಹಿನಿಯೊಡನೆ ವೀರರದೇವ ವಾನರ ನಳನ
ಸೇನಾಸಮುದ್ರ ಸಮ್ಮುಖಕೆ. ಸೇನಾಪತಿಯ
ಕಯ್ಯ ಹೊಂಗೋಲ್‌ಗುಡಿಯ ಸನ್ನೆಯಾಣತಿಯಂತೆ
ತನ್ನ ದಳಸಹಿತಾ ದರೀಮುಖಂ ಮುನ್ನುಗ್ಗಿದನ್,
ತಾಗಿದನ್, ತಳ್ಳಿದನ್, ತಡೆದನ್ ಅಕಂಪನನ
ಬಲ್‌ಸೇನೆಯಂ. ಮಸೆದುದು ಗಾಳಿ; ಮುಸುಗಿತು ಧೂಳಿ;
ಅಗುರ್ವಿಸಿತ್ತಯ್ ಕದನ ಕೋಲಾಹಲದ ಕೇಳಿ.

ಕೇಳ್ದುದಲ್ಲದೆ ಕಂಡುದಿಲ್ಲೊಂದುಮಾ ಸಮರ
ಮಂಡಲದ ಭೈರವ ರಣಕ್ರೀಡೆ.
ಪಿಂಗಿದುದು
ನೆತ್ತರ್‌ಮಳೆಗೆ ರಜಂ; ಕೆಸರೆದ್ದುದೈ ನೆಲಂ;
ಶವಮಯಂ ತಾನಾಯ್ತು ಶಿವಮಯ ವಸುಂಧರೆಯ
ಮೆಯ್. ಕಂಡರಾಶ್ಚರ್ಯಮಂ ಸಕಲಸೈನಿಕರ್
ದರೀಮುಖಾಕಂಪನರ ಕೈದುವಿಲ್ಲದ ಕೈಯ
ಮಹದ್‌ಯುದ್ಧಮಂ:
ರಾಕ್ಷಸ ಸದೃಶ ವಾನರಂ
ಪೆಸರಿಂ ಮಾತ್ರಮಲ್ಲದೆಯೆ ದಿಟದಿಂ ದರೀಮುಖಂ!
ಮೇಣಂತೆವೋಲ್, ವಾನರ ಸದೃಶ ರಾಕ್ಷಸಂ
ಪೆಸರಿಂದೇ ಮಾತ್ರಮಲ್ಲಯ್, ದಿಟದಿಂದಕಂಪನಂ!
ಬಾಯ್ದೆರೆದ ಪಾತಾಳದಾಕಳಿಕೆಯೆಂಬವೋಲ್
ದರಿಭಯಂಕರಮಾಗಿ ನಿಂದನ್ ದರೀಮುಖಂ!
ಆಕಾಶದೆತ್ತರಕೆ ಶಿಖರಮೆತ್ತಿರ್ದವೋಲ್
ಗಿರಿಭಯಂಕರಮಾಗಿ ನಿಂದನ್ ಅಕಂಪನಂ!
ಆನೆ ಸೊಂಡಿಲ ತೂಗುವಂದದಿ ತೂಗಿದರ್
ತೋಳ್ಗಳಂ. ಸಿಂಹ ಸಿಂಹವ ಕೆಣಕುವಂದದಿ
ಕೆಣಕಿದರ್ ಕಣ್ಗಳಿಂ. ಪುಲಿ ಪುಲಿಗೆ ಮಲೆವಂತೆ,
ಫಣಿ ಫಣೆಗೆ ಸುಯ್ವಂತೆ, ಸುಯ್‌ಸುಯ್ದು, ಮಲೆಮಲೆತು,
ಗೂಳಿಸೆಣಸಿದನೊರ್ವನೊರ್ವಂಗೆ. ತೆಕ್ಕನೆಯೆ
ಕಂಡರೆಲ್ಲರ್ ಗಿರಿ ಬಿದ್ದುದಂ ದರಿಗೆ! ನೋಡಿದರ್,
ಓಡಿದರ್ ಮೈಂದದ್ವಿವಿದ ನಳರ್ ನೆರವೀಯೆ
ತಮ್ಮವಗೆ. ನಗುತಿರ್ದನಾ ಮಲ್ಲಗಾಳೆಗದ
ಕೋವಿದಂ, ಬಿದ್ದಂತೆ ನಟಿಸುತರಿಭಟನ ಕೀಲ್
ಮುರಿದು ಕೊಂದೆದ್ದಾ ದರೀಮುಖಂ!
ಅಕಂಪನಂ
ಪಡೆವೆರಸಿ ಮಡಿದುದಂ ಕೇಳ್ದು ದೈತ್ಯೇಂದ್ರಂ
ಪ್ರಹಸ್ತನಂ, ರಾಕ್ಷಸ ಸಮಸ್ತ ಸೇನಾಧ್ಯಕ್ಷನಂ,
ಬಳಿಯಟ್ಟಿ ಬರಿಸಿ ಬೆಸಸಿದನಿನಿತು ಖಿನ್ನಂ
ತನ್ನಮರ್ಷಮಯ ವಿಮರ್ಶೆಯಂ:

"ನಾನೇಗಳುಂ
ಪಗೆಬಲ್ಮೆಯಂ ಕಿರಿದು ಭಾವಿಸಿದೆನಿಲ್ಲಾದೊಡಂ,
ಕೇಳ್ ಪರಮಸೇನಾನಿ, ವನಚರರ ಮೇಣ್ ನರರ
ಸಮರ ಸಾಮರ್ಥ್ಯಮಿನಿತಧಿಕಮಾದುದೆ ದಿಟಂ
ಸೋಜಿಗಂ! ಬಿದ್ದುದಯ್ ಮೊದಲ ದಿನದಾಜಿಯೊಳೆ
ನಮ್ಮ ಸೈನ್ಯದೊಳೇಳು ಗುಲ್ಮಂಗಳಿಗೆ ಮಿಗಿಲ್
ತುಳಿಲಾಳ್‌ಬಲಂ. ಶಕ್ರಸೇನೆಯಂ ತನ್ನತುಳ
ವಿಕ್ರಮದಿ ಬಿರುಗಾಳಿಯಿದಿರ ತರಗೆಲೆಗೆಯ್ದ
ಮೇಘನಾದನ ಮಾಯೆಯುಂ ಮೋಘಮಾದುದೆನೆ
ಏನನೆಂಬೆನು ನಮ್ಮ ದುರ್ವಿಧಿಗೆ? ಎರಡನೆಯ
ದಿನದಿಂದಿನೀ ರಣದ ಕಥೆಯುಂ ವ್ಯಥೆಯನೇ
ತಂದೊಡ್ಡುತಿದೆ. ವಜ್ರದಂಷ್ಟ್ರ ಧೂಮ್ರಾಕ್ಷರ್,
ಮಹಾಕಲಿ ಅಕಂಪನಂ, ಯುದ್ಧವಿದ್ಯಾ ಪರಮ
ಪಾರಂಗತರ್. ಕಳೆದುಕೊಂಡುದವರಂ ನಮ್ಮ
ಪಕ್ಷಂ, ವಿಹಂಗಮಂ ಕಳೆದುಕೊಳ್ವಂತೆವೋಲ್
ಪಕ್ಷಂಗಳಂ. ಪಗಲ್ ನೆತ್ತಿಯೊಳಿರ್ಪುದಿನ್ನುಮ್;
ರಣವಿಶಾರದ, ಬೈಗು ಪಡುವಣ ಮಲೆಯ ತಲೆಗೆ
ಬೆಂಗದಿರನಂ ಮುಡಿಯ ಮಣಿ ಮಾಡುವನಿತರೊಳ್
ನೂಂಕವೇಳ್ಕುಂ, ಕೇಳ್, ಕಪಿಧ್ವಜಿನಿಯಂ ಈ
ತ್ರಿಕೂಟಾಚಲದ ಸಾನುವಿಂದಾ ಸುವೇಲಾದ್ರಿ
ಕಂದರದ ನರಕನಿಮ್ನತೆಗೆ!"

ರಣಪಂಡಿತಂ
ರಾಜಾಜ್ಞೆಗಾ ಪ್ರಹಸ್ತಂ, ಸರ್ವರಾಕ್ಷಸ
ಪ್ರಮುಖಸೇನಾನಿ ನಸು ಕುಗ್ಗಿದನ್, ಬಾಗಿದನ್,
ಕೈಮುಗಿದು ಬಿನ್ನಯ್ಸಿದನ್ ರಾಜರಾಜೇಶ
ಮಕುಟಂಗಳಡಿಸೋಂಕುವಾತಂಗೆ:

"ರಾಜೇಂದ್ರ,
ಕಲಿಗೆ ಸಂಗ್ರಾಮಮಿರ್ಪುದು ಕಲಾನಿಪುಣಂಗೆ
ಸಂಗೀತದಂತೆವೋಲವರೋಹಣಂ ಪ್ರಿಯಂ,
ಮೇಣಂತೆ ಮಧುರಮಾರೋಹಣಂ! ಕೇಳೊಂದೆರಳ್
ಕದನಮಂ ಗೆಲ್ದ ಮಾತ್ರದಿ ಪೂರ್ಣಯುದ್ಧಮಂ

ಗೆಲ್ವರೇನ್? ಸೈನಿಕವರೇಣ್ಯರಂ, ಪಟುಭಟ
ವರಿಷ್ಠರಂ, ಅತಿರಥ ಮಹಾರಥ ಶ್ರೇಷ್ಠರಂ
ವೆರಸಿ ನಾನೆಯೆ ರಣಾಧ್ವರದ ದೀಕ್ಷೆಯನಿಂದು
ಕೈಕೊಂಡಪೆನ್. ಸೂರ್ಯನಸ್ತಾಚಲಕೆ ನಡೆವ
ಮುನ್ನಮೆ ವನೇಚರ ಚಮೂ ಸಮಸ್ತಂಗಳಂ
ನಿನ್ನಾಜ್ಞೆಯಂತೆಳ್ಚುವೆನ್ ಸುವೇಲಾಚಲದ
ಕಂದಕಕೆ. ಕೇಳೆನ್ನ ಪೂಣ್ಕೆಯನ್: ಯುದ್ಧಮಂ
ಗೆಲ್ದು ಬಹೆನಲ್ಲದಿರೆ ಬೇಳ್ವೆಯಾದಪೆನಿಂದು
ರಣ ಹುತವಹಂಗೆ!''
ವೀರೋಚಿತಂ ಕೃಪೆಯಿಂ
ಕಟಾಕ್ಷಿಸುತೆ, ಮನ್ನಣೆಯ ಮಾಡುತುಡುಗೊರೆಗಳಂ
ನೀಡಿ, ಕಳುಹಿದನು ರಾವಣನಸುರಸೇನಾನಿಯಂ
ಮರಣನಟ ನಾಟಕ ರಣಕ್ರಿಯೆಗೆ. ಪ್ರಭುವಿಂದೆ
ಸನ್ಮಾನಮಂ ಪಡೆದ ಉತ್ತೇಜನಕೆ ಉಬ್ಬಿ,
ಪೊದೆಯ ಪುರ್ಬಿನ ಪುರಿಯ ಮೀಸೆಯ ರಣಾವೇಶಿ
ಆ ಪ್ರಹಸ್ತಂ ಬೆಸನನಟ್ಟಿದನು ದಳದಳಕೆ,
ಮೊನೆಯ ಕೆನೆಗೆಣೆಯ ಕಡುಗಲಿಗಳಂ ಕೂಡಿ
ನುಗ್ಗಲಂದಿನ ಸಗ್ಗಸಂಗರಕೆ. ನೆರೆದುದಾಳ್;
ನೆರೆದುದಶ್ವಂ; ನೆರೆದುದು ರಥಂ; ನೆರೆದುದಾನೆ;
ನೆರೆದುದು ತಿಗ್ಮ ನಾನಾಯುಧದ ಪಂಕ್ತಿ. ನೆರೆದುದೂರ್,
ನೋಟದೌತಣಕೆ. ಮೇಣ್, ಪಣ್ಣಿದುದು ಪೊಂದೇರ್,
ಮಹೋನ್ನತಂ, ಗಿರಿಚೂಡಭವ್ಯಂ, ವಸಂತವನ
ಚೂತತರು ಚಾರು. ಹರನ ಕೊರಳಿನ ಗರಳಮಂ
ಕರ್ದಿಂಗಳೊಂದು ಕರ್ಪಿಗೆ ಹೆಪ್ಪೆರೆದು ಕಡೆದು
ಪಡೆದವನೆ, ಪೊಳೆದುವಾ ತೇರ್‌ನೊಗಕೆ ಪೆಗಲಾಂತ
ಮಿಂಚುಗಪ್ಪಿನ ಮಹಾತೇಜಿಗಳ್. ಮಿಳಿರ್‌ದತ್ತು
ಮಧ್ಯಾಹ್ನ ಮಿಹಿರ ಛವಿಯಲಿ, ಮಹಿಯ ರವಿಯೆನೆ,
ಮಿಸುನಿ ಸೂತ್ರದಿ ನೆಯ್ದ ಧೋತ್ರದಹಿಕೇತನಂ
ಸ್ಯಂದನಾಗ್ರದಲಿ. ರಥಮಂ ಪ್ರದಕ್ಷಿಣಂಗೆಯ್ದು,
ಬಾನ್ಗೇರೆ ಪರಿಮಳದ ಧೂಮಗಳ್, ಭೋರ್ಗರೆಯೆ
ರಣಭೇರಿ ದುಂದುಭಿ ನಿನಾದಗಳ್, ಗೆಲ್ಲುಲಿಯೆ

ಜನತುಮುಲ ಜಯಘೋಷಗಳ್ ದೈತ್ಯಸೇನಾನಿ
ತೇರೇರಿದನು ಮಿಳ್ತುಕೂರೊಸಗೆ ದಿಬ್ಬಣದ
ರಣಕೆ. ರಾಹುರೋಷಂ ಶೋಣಿತಾಕ್ಷಾದಿಗಳ್;
ನರಾಂತಕ, ಸಮುನ್ನತ, ಮಹಾನಾದನಾ ಕುಂಭಹನು,
ಸುಪ್ತಘ್ನ, ಮಕರಾಕ್ಷ, ದುರ್ಮುಖ, ಮಹೋದರರ್;
ಸಾಲ್‌ನಡೆದರಿತರ ದಳನಾಯಕರವನ ಹಿಂದೆ,
ಯಮಭೀಕರಂ.
ದೆಸೆದೆಸೆಗೆ ದಳದೊಡೆಯರಂ ನಿಲಿಸಿ,
ಕಲಿಸಿ, ಸಮರವ್ಯೂಹಮಂ ಬಲಿಸಿ, ತಾಂ ಸ್ವಯಂ
ವಾನರರಖಿಲ ಮಹಾ ಸೇನಾನಿ, ಅಗ್ನಿಜಂ,
ನೀಲನಿರ್ದಾ ದುರ್ಗಮದ ವಜ್ರಧರ ದಿಶೆಗೆ
ದುರ್ಗಪೂರ್ವದ್ವಾರದಿಂ ಪಾಯ್ದನಾ ಪ್ರಹಸ್ತಂ,
ದಾನವ ಧನುರ್ಧರರ ದಿಗಿಭಧೀರಂ! ಏರ್ದು
ಕೋಂಟೆಯೆಳ್ತರದೊಂದು ಕೊತ್ತಳಕೆ, ನೆತ್ತಿಯಿಂ
ನೋಡುತಿರ್ದನು ಕಲಿ ಕುತೂಹಲಿ ದಶಾನನಂ
ಬಿತ್ತರದ ಲಂಕೆಯಂ ಬಳಸಿ ಭೋರಿಡುತಿರ್ದ
ವಾನರರ ರಾಕ್ಷಸರ ಸೇನೆಗಳ ಸಾಗರದ
ಸಂಘಟ್ಟಣೆಯ ಸಂಚಲನ ವಲನ ವೈಖರಿಯ
ವಿನ್ಯಾಸಮಂ. ಶುಕಂ ಸಾರಣಂವೆರಸಿ ಬಳಿಯೊಳ್
ನಿಂದು ಬಣ್ಣಿಸುತಿರಲ್ ಪರಿಚಯದ ರಿಪುದಳದ
ವೀರರ್ಕಳಂ, ಕಿವಿಗೆ ಬಂದುದು ಭಯಂಕರದ
ಕೋಲಾಹಲಂ; ಕಂಡುದೊಡನೆಯೆ, ತರಂಗಗಳ್
ಮಸೆದ ಕಡಲಿಗೆ ಮಗುಚುವೋಲ್, ಚಮೂಚಲನಗಳ್,
ತೆರೆಗೆ ತೆರೆ ಮಲೆತವ್ವಳಿಪ ಭೀಮಶೈಲಿಯ
ಬೃಹಚ್ಛಂದದಿಂ. ಸ್ಪರ್ಧಿಸಿದುವೊಡನೆ ಧೂಳ್ಮುಗಿಲ್
ಮೇಲ್ ನೆಗೆವ ನಾದಸಿಂಹಂಗಳಂ. ಮಹೋಗ್ರಮಾ
ತೊಡಗಿದುದು ಸಂಗ್ರಾಮ ಮಂದರ ಮಥನಕಾರ್ಯಂ!
ಕೆಲವೊಳ್ತನಂತರಂ ಕುದಿಬಗೆಯ ರಾವಣಂ
ಬೆಸಸಿದನು ಕರೆದು ಬಳಿಯಿರ್ದ ವೇಗಾಯ್ಲನಂ:
''ಓಡು, ಸಾರಣ, ನೋಡಿ ಬಂದೊರೆ ರಣಸ್ಥಿತಿಯ
ನಾಡಿಯಂ. ಮುಸುಗಿತು ರಜೋಮೇಘಮಿರ್ಬ್ಬನಿಯ

ಮಂಜಿನೋಲ್. ಕೋಲಾಹಲಂ ಕೇಳ್ವುದಾಹವಂ
ಕಾಣದಿನಿತುಂ." ಮೂಡಿದುವು ರೆಂಕೆ ಸಾರಣನ
ಭುಜಕೆ; ಕೊಡೆಗೆದರಿ ಹಾರುತ್ತಿಳಿದನಾ ಕದನ
ಮೇದಿನಿಗೆ. ತುಸುವೊಳ್ತನಂತರಂ, ಸಾರಣಂ
ಬಾರದಿಹ ಕಾರಣವನರಿಯಲ್ಕೆ ಕಾತರಿಸಿ
ದಶಶಿರಂ "ನಡೆ ನೀನ್, ಶುಕ, ತಳುವಿದನ್ ಸಾರಣಂ.
ತವಕದಿಂ ತಾ ಸಮರವಾರ್ತೆಯಂ." ಶುಕನತ್ತ
ಮರೆಯಾಗಲಿತ್ತಲಸುರೇಶ್ವರಂ ಕೊತ್ತಳದ
ನೆತ್ತಿಯಂ ಶತಪಥಂ ತುಳಿಯುತ್ತಲೀಕ್ಷಿಸಿರೆ
ಗಾಳಿವಟ್ಟೆಯ ತುಂಬಿ ಬಾನ್ ಮುಟ್ಟಲೇರಿರ್ದ
ರಣರಜೋವಿಸ್ತೀರ್ಣಮಂ ಮೇಣ್ ಕ್ಷಣಕ್ಷಣಕೆ
ಬಿತ್ತರಂಗೊಂಡು ವಾರ್ಧಿಯ ವೇಲೆ ಗಡಿಯಾಗೆ
ವರ್ಧಿಸುತ್ತಿರ್ದದರ ಮೇರೆಯಂ, ದೂತನೊರ್ವನ್
ಬಂದು, ಕಯ್ಮುಗಿದು, ರಾಣಿಯ ಕರೆಯನರುಹಿದನ್
ಶೃಂಗಾರ ವಿನಯಶಾಲಿಗೆ, ಮಯತನೂಜೆಯ
ಮನೋವಲ್ಲಭಂಗೆ. ಕರೆಗಿನಿತು ಮೊಗಗುಂದಿದನ್;
ನೋಡಿದನು ರಣಮಹಿಯ ಕಡೆಗೆ. ಕೊತ್ತಳವಿಳಿದು
ಕಿಂಕರರ್ ಬಳಸಿಬರೆ ನಡೆದನರಮನೆಗಾಗಿ,
ಹಸಿದುಮಿರ್ಕೆಗೆ ನಡೆವ ಹಸಿಗಾಯದೆಕ್ಕಲನವೋಲ್.
    ಹೊಮ್ಮಣೆಯ ಮೇಲೆ ಹೊಂದಳಿಗೆಯಲಿ ಕಮ್ಮನೆಯ
ರಾಜಭೋಜನಮಿರಲದಂ ಯಂತ್ರಕರ್ಮವೆನೆ
ಕೆಮ್ಮನೆಯೆ ಕಬಳಿಸುತ್ತಿರ್ದ ಚಿಂತಾ ಮಗ್ನನಂ
ಸೋದ್ವಿಗ್ನನಂ ಕಂಡು, ಪತಿಸೇವೆಗನುವಾಗಿ
ಚವರಿ ಬಿಜ್ಜಣವಿಡಿದು ಬಾಗಿರ್ದ ಮಯಕುವರಿ,
ಹೆದರುತಂಜುತೆ ಮೆಲ್ಲನೆಯೆ ಮಾತು ತೆಗೆದಳಾ
ದಿನದ ರಣವಾರ್ತೆಯಂ ಕೇಳ್ವ ನೆವದಿ. ಹೇಳ್ದನತಿ
ಸಂಗ್ರಹದಿ ತಿಳಿದನಿತುಮಂ. ಹೇಳುತಿರೆ ಹಣೆಗೆ
ಬೆವರು ಹನಿಮೂಡಿದುದ ನೋಡಿ ಮಂಡೋದರಿಗೆ
ಸುಯ್‌ವೆರಸಿ ಚಿಮ್ಮಿದುದು ಕಣ್ಣೀರ್. ದುಕೂಲದಿಂ
ವಿಧಿಯ ಲಿಖಿತವನೊರಸಲಾಶಿಸುವಳೆಂಬಂತೆ
ತೂಲ ಮೃದುವೆನಲುಜ್ಜಿದಳ್ ಪತಿ ಲಲಾಟಮಂ,

ತೊಡೆವವೋಲ್ ಪ್ರತಿಕೂಲಮಂ.
"ನನ್ನ ಹಣೆಯಿರಲಿ;
ನಿನ್ನ ಕಣ್ಣೊರಸಿಕೊಳ್, ಲಂಕೇಶ್ವರಿ. ರಣಭೀತಿ
ನಿನಗೇಕೆ? ಇಂದರಾತಿಯನೆಮ್ಮ ದುರ್ಗದಿಂ
ವೇಲಾದ್ರಿಕಂದರಕೆ ನೂಂಕಿ ಬರದಿರದೆಮ್ಮ
ಸೈನ್ಯಂ. ಪ್ರಹಸ್ತಂ ಸಮರ್ಥ ರಣಪಂಡಿತಂ.
ಸಮಸ್ತ ಶಸ್ತ್ರಾಸ್ತ್ರ ಸಂಗ್ರಾಮ ವಿಭುವಾತನಂ
ಕಳಕೆ ಕಳುಹಿದ ಬಳಿಕ, ರಮಣಿ, ನಗೆಗೇಡಲಾ
ರಿಪುಭಯಂ?"
"ಆ ಅಳ್ಕು ನನಗಿಹುದೆ, ನಿನ್ನ ಕಯ್
ಹಿಡಿದೆನಗೆ?"
"ಮತ್ತೇಕೆ ಸುಯ್ವೆ?"
"ಇಂದುದಯದೊಳ್
ನೀಂ ರಾಮನರ್ಧಾಂಗಿಯಂ ಕಂಡುದುಂಟೈಸೆ?"
"ಕಂಡುದುಂಟಾ ನಿರಶನ ಕೃಶಾಂಗಿಯಂ."
"ಪಿಂತೆ
ಅಂತೇಗಳುಂ ನೀಂ ಪೋದುದಿಲ್ಲೇಕಾಂತಮಂ
ಬೆಸಸಿ."
"ಅನಲೆಯಿರ್ದಳ್! ಸನಿಹಮಿರ್ದಳ್ ತ್ರಿಜಟೆ?
ಏಕಾಂತಮೇನಲ್ಲಿ? ಪೇಳ್ದೆನಾಕೆಗೆ ಪೋದ
ರಾತ್ರಿಯ ರಣದ ವಿಜಯವಾರ್ತೆಯಂ: ಕಪಿಸೇನೆ
ರಾಮಲಕ್ಷ್ಮಣಸಹಿತ ಮಗನ ಮಾಯೆಗೆ ಸಿಲ್ಕಿ
ಭೂಮಿಗತವಾದುದಂ. ಮರುಳುನಗೆ ನಕ್ಕಳಾ
ಹೊಟ್ಟೆಗಿಲ್ಲದೆ ಮಿದುಳ್ ಕದಡಿದಾ ಸಂಭ್ರಾಂತೆ!"
"ಪೇಳ್ದಳೆನಗನಲೆ ಬೇರೊಂದು ಕಥೆಯಂ." ಎಂದಾ
ಮಹೀಯಸಿಯ ಮುಖಭಾವಮಂ ನಿಡಿದು ನಿಟ್ಟಿಸುತೆ
ತೆರೆದನೊಯ್ಯನೆ ತನ್ನ ಹೃದಯಮಂ. ಕಲಂಕಿರ್ದ
ಕಾಸಾರಮಾದುದಸುರನ ಮುಖಂ:
"ಕಳೆದಿರುಳ್
ಕನಸಾದುದೊಂದೆನಗೆ, ರಾಣಿ. ಕಂಡೆನದರೊಳ್
ಮರಳಿ ಆ ಭೀಕರದ ದೃಶ್ಯಮಂ, ನಿರ್ಭಾಗ್ಯೆ

ವೇದವತಿ ಚಿತೆಯೇರ್ದುದಂ. ಕಣ್ಣ ಮುಂದುರಿದು
ಭಸ್ಮಧವಳಿಮರಾಶಿಯಾದುದಾ ಸುಂದರಿಯ
ತನುರೂಪರಾಶಿ. ನೋಡುತ್ತಿರಲ್ಕಾನದಂ
ತೀಡಿದತ್ತೊಂದು ಮೆಲ್ಲೆಲರೂದಿ ಬೂದಿಯಂ.
ತವಿದ ಮೃತಭಸ್ಮರಾಶಿಯಿನೊಯ್ಯನೊಯ್ಯನೆಯೆ
ಕವಿಕರ್ಮ ರಮಣೀಯಮಮೃತಮೂರ್ತಿಯದೊಂದು
ಭವಿಸಿದುದು. ಗುರುತಿಸಿದೆನಾ ಮೂರ್ತಿಯಲಿ ಈ
ಮಹಾ ತಪಸ್ವಿನಿ ಸೀತೆಯಂ. ಕಾರಣವನರಿಯೆ;
ನಡುಗಿ ಕಣ್ದೆರೆದೆದ್ದು, ಬೆಮರ್ದ ಮೆಯ್ಯಂ ಕಂಡು,
ನನ್ನೊಳಗೆ ನಾಂ ನಕ್ಕೆನಾ ಸ್ವಪ್ನಚೇಷ್ಟಿತಕೆ!
ಹುಸಿಯ ಕನಸಿನ ಶಂಕೆಯಂ ನಿವಾರಿಸಲೆಂದು
ಹೋಗಿ ಕಂಡೆನು ಜನಕಜಾತೆಯಂ. ಕಂಡಾ
ಕೃಶಾಂಗಿಯಂ ಶಂಕೆ ತೊಲಗಿದುದೆನಗೆ. ಇವಳೆಲ್ಲಿ?
ಅವಳೆಲ್ಲಿ? ಮತಿ ನಿದ್ದೆಗೆಯ್ದಂದು ಮಿದು ಮಿದುಳ್
ಕಡೆದೆಬ್ಬಿಸುವುದೀ ವಿಕಾರಂಗಳಂ!"
"ಪ್ರಭೂ,
ಮನದಾಳದಿಂದಾತ್ಮಧರ್ಮಮಿತ್ತೆಚ್ಚರಿಕೆ ತಾಂ
ಕನಸಿನಂದದಿ ಬಂದುದಲ್ತೆ? ನಿನ್ನಾತ್ಮಮಂ,
ನಿದ್ರೆಯ ಕೃಪೆಯೊಳಹಂಕಾರದಿಂ ಬಿಡುತೆಯಂ
ಪಡೆದ ನಿನ್ನಂತರಾತ್ಮನ ಶುದ್ಧಸಂದೇಶಮಂ,
ಧಿಕ್ಕರಿಸದಿರ್. ಕಪಿಸೈನ್ಯಕಲ್ತೆಮ್ಮ ಸೈನ್ಯಂ
ಕ್ಷಯಿಸುತಿರ್ಪುದು ಪತಿವ್ರತೆಯ ದೈನ್ಯಕೆ ಕಣಾ!"
ಎನುತೆ ರಾವಣನ ಕಣ್ ತನ್ನ ಕಣ್ಣಿಗೆ ನಡಲ್
ಮುಂಬರಿದಳಿಂತಾ ಮಹಾರಾಜ್ಞಿ: "ನನಗನಲೆ
ಪೇಳ್ವುದಂ ಪೇಳ್ದಪೆನ್, ನೀಂ ಕಂಡ ಕನಸಿಗಿಂ
ಮಿಗಿಲಪ್ಪುದಂ. ತ್ರಿಜಟೆ ತನ್ನ ಕೈಂಕರ್ಯಮಂ
ಮುಗಿಸಿ ಮಲಗಿದಳಂತೆ. ದೇವಿ ಕಣ್ಮುಚ್ಚದೆಯೆ
ಭೀಷ್ಮಮೌನವನಾಂತು ತನ್ನೊಳಗೆ ತಾಂ ಪೊಕ್ಕ
ಯೋಗಿನಿಯವೋಲಿರಲ್ ಕಂಡುದನಲೆಯ ಕಣ್ಗೆ
ಪರ್ಣಶಾಲೆಯ ತುಂಬಿದೊಂದನುಪಮಜ್ಯೋತಿ.
ರೋಮಾಂಚ ಕಂಚುಕಿತ ಗಾತ್ರೆ ನೋಡುತ್ತಿರಲ್,

ಬಾಹ್ಯಸಂಜ್ಞಾಶೂನ್ಯೆ ಆ ಸೀತೆ ತೊಡಗಿದಳಾರೊ
ನುಡಿಸಿದವೊಲಾಗಿ ಸಂವಾದಮಂ. ಆ ಪೂಜ್ಯೆ
ಅಲ್ಲಿರ್ದುಮೆಲ್ಲೆಲ್ಲಿಯುಂ ಚರಿಸುತಿರ್ದಂತೆ,
ಅಲ್ಲಿರ್ದುಮೆಲ್ಲಮಂ ಕಾಣುತಿರ್ದಂತೆ, ಮೇಣ್
ಅಲ್ಲಿ ತಾಟಸ್ಥ್ಯಮಂ ತಾಳ್ದಳೋಲಿರ್ದೊಡಂ
ದೂರಮಿರ್ದ್ದಿತರರ ಜಗತ್‌ಕ್ರಿಯಾಚಕ್ರಮಂ
ನಡೆಪವೋಲಾಚರಿಸುತಿರ್ದಳಂ ಕಂಡನಲೆ
ಮೆಯ್ಮರೆತಳಂತೆ ಭಯರಸವಶೆ! ಅನಂತರಂ
ಹದಿಬದೆಯ ಕಯ್ಯ ಸೋಂಕಿಗೆ ಅನಲೆ ಕಣ್ದೆರೆಯೆ,
ರಾಮಸತಿ 'ಅಭೀತೆಯಾಗೆಲೆ ವತ್ಸೆ, ನೀಂ ಕಂಡ
ದೈವಿಕಕೆ. ನಿನ್ನಯ್ಯನುಪಕೃತಿಗೆ ಬರ್ದುಕಿತೌ
ನನ್ನಯ್ದೆದಾಳಿ. ಕಂಟಕಮೊಂದು ಕಳೆದುದೌ
ಪ್ರಭು ರಾಮಚಂದ್ರಂಗೆ!' ಎನುತೆ ಸಂತೈಕೆಯಂ
ಪೇಳ್ದ ಪಾವನೆಯ ಪದತಲಕೆ ನಮಿಸಿದಳಂತೆ
ನಮ್ಮನಲೆ!''
ಸತಿಯ ಮಾತಿಗೆ ಸುಯ್ದು ದಶಶಿರಂ:
''ಅನಲೆ! ನಮಗನಲೆಯೆ ದಿಟಂ! ರಾಮ ಪಕ್ಷಕಾ
ತಂದೆ; ಸೀತೆಯ ಪಕ್ಷಕೀ ಮಗಳ್! ಇರ್ವರುಂ
ದ್ರೋಹಿಗಳ್! ಅಕ್ಕರೆಯೆ ನನಗಿಕ್ಕಿದುರಿಯಾಯ್ತು!
ಬೇಡವೆಂದೆನ್. ಬಿಡದೆ ಬೇಡಿದಳ್; ಕಾಡಿದಳ್.
ನೋಡಿಬರುವಾಸೆಗಾಣತಿಯಿತ್ತೆನೊಪ್ಪಿದೆನ್;
ಮಾಡಿದಳ್ ಮನೆಯನ್ ಅಶೋಕವನದೊಳ್! ಕಟ್ಟು
ಕತೆಗಳನ್ ಕಟ್ಟಿ, ಕಣ್ಣಾರೆ ಕಂಡುದೆನುತ್ತೆ,
ಮತಿಗೆಟ್ಟು ನಂಬುವಳ್; ನಂಬಿಸುವಳಿತರರಂ;
ಪೆಣ್ಗಳೊಳ್ ಪ್ರಕಟಿಸುವಳಪಧೈರ್ಯಮಂ! ಆ ಅಣುಗಿ
ಬೆಪ್ಪಾಡಿದುದನೆಲ್ಲಮಂ ನೀನುಮೊಪ್ಪಿದೆಯಲಾ,
ಅದೆ ಸೋಜಿಗಂ! ನಿನ್ನೆ ಬದುಕಿದನಲಾ ಶತ್ರು,
ಇಂದಿನ ರಣದಿ ಕಾಣ್ಬೆ ನಿನ್ನ ತಲೆಗೆಟ್ಟನಲೆಯಾ
ಕಟ್ಟಿರ್ಪ ಕತೆಯ ಪೊಳ್ಳಂ;''
ಬಂದನನಿತರೊಳ್
ಸಾರಣಂ. ರಣವಾರ್ತೆಯಂ ತಂದ ಚಾರನಂ

ತರವೇಳ್ದನುಣುಮನೆಗೆ: ''ಬೇಗನೊರೆ ವಾರ್ತೆಯಂ,
ವೇಗವಾಯ್ತು.'' ಎಂದ ದೈತ್ಯೇಂದ್ರಂಗೆ ಧೂಳಿಡಿದು
ಬೆಮರೆಳ್ದ ಬೇಹಿನಾಳ್, ವದನಮುತ್ಸಾಹಮಂ
ಸೂಸುತಿರೆ, ಕಯ್ಮುಗಿದು ಕಥನಗೈದನು ಕದನ
ವೃತ್ತಾಂತಮಂ: ''ಜೀಯ, ತೊತ್ತುವೋದಳು ನಮಗೆ
ಜಯವನಿತೆ! ಹಿಂದುಹಿಂದಕೆ ಸರಿದು ಓಡುತಿದೆ
ಸರ್ವತ್ರಮಾ ರಿಪುವ್ಯೂಹಂ, ಸರೋವರಂ
ಬೇಸಗೆಯ ಜಳಜಮಿತ್ರನ ಝಳಕೆ ದಡಮಂ
ವಿಸರ್ಜಿಸುವವೋಲ್. ಪೇಳ್ವೆನೇಂ ಪ್ರಹಸ್ತಾಸುರನ
ಶೌರ್ಯರವಿಯಾಟೋಪಮಂ! ಧನುರ್ಧರನಾಗಿ,
ಠಂಕಾರ ನಿರ್ಘೋಷದಿಂ ಭಯಂಕರನಾಗಿ,
ಬಾಣಾಗ್ನಿಯಿಂ ರಿಪುಪ್ರಾಣಕಾನನಕೆ ತಾಂ
ದಾವಾಗ್ನಿಯಾಗಿ ಪೊಕ್ಕನ್ ವಾನರರ ಮಹಾ
ಸೇನಾಧಿಪತಿ ನೀಲನಿರ್ದೆಡೆಗೆ. ಕೊಂದುದು
ನರಾಂತಕನನಾ ದ್ವಿವಿದವಾನರನಿಟ್ಟದೊಂದು ಪೆರ್
ಬಂಡೆಗಲ್. ತಾಗಿದನು ಕುಂಭಹನು ದ್ವಿವಿದನಂ;
ಕೆಡೆದನ್ ವನೇಚರಂ ರಾಕ್ಷಸ ಮುಸಲ ಹತಿಗೆ.
ಮೈಂದಂ ಸಮುನ್ನತ ಮಹಾನಾದರಿರ್ವರಂ
ತನ್ನುಪಚಮೂಪತಿಗಳಂ ಕಡಿದು ತನ್ನುರುವ
ಕಡಿತಲೆಗೆ ಬಲಿಗೊಟ್ಟುದಂ ಕಂಡು ನಮ್ಮ ಕಲಿ,
ನಿಮ್ಮಾನೆ, ತೇರ್ವಾಯ್ದನೈ ಪ್ರಹಸ್ತಂ, ಕೊಂದು
ಸಾಸಿರವನಾ ಮೈಂದಸಮ್ಮುಖಕೆ. ವೀರನಾ
ಕಪಿವರನವನ ತೇರ ತೇಜಿಗಳನುರುಳಿಸಲ್,
ರಥದಿಂ ಧುಮುಕುತೊಂದು ರಣವಾರಣವನೇರಿ
ಕೂಗಿದನು ಶಾರ್ದೂಲ ಗುಲ್ಮಾಧಿಪಗೆ ತನ್ನ
ಸಂಕೇತಮಂ. ಕೂಡೆ ಮಾಯಾಪ್ರವೀಣರಾ
ಶಾರ್ದೂಲನಾಳುಗಳ್ ಶೈಲಖಂಡೋಪಮದ
ಸಿಡಿಲೊಡಲ ಸಿಡಿಗುಂಡುಗಳ ರೂಪಮಂ ಧರಿಸಿ
ಗಿರಿಗಳೋಲುರುಳ ತೊಡಗಿದರರಿಯನರೆಯಟ್ಟಿ, ಮೇಣ್
ಮಲೆತವರನರೆದು! ಚೀತ್ಕಾರಮೆದ್ದುದು ಹಗೆಯ
ಥಟ್ಟಿನಲಿ. ಪಡೆವಳರ ಕರೆಗಿನಿತು ಕಿವಿಗೊಡದೆ

ಹಿಂಜರಿಯತೊಡಗಿದಾ ಕಪಿಸೇನೆಯಂ ನೀಲನುಂ
ತಡೆಯಲಾರದೆ, ಸರಿಯಲಾಣತಿಯನಿತ್ತನಯ್
ಆಯಕಟ್ಟಿನ ಬೇರೆ ತಾಣದೊಳ್ ವ್ಯೂಹಮಂ
ಬಲಿದು ಮಾರಾಂತು ನಿಲ್ವಾಸೆಯಿಂ!''
ಹಸನ್ಮುಖಿ
ದಶಾನನಂ, ಸನ್ನೆಯಿಂ ಸಾರಣನ ಸುಮ್ಮನಿಸಿ,
ನೋಡಿದನು ಮಂಡೋದರಿಯ ಮುಖವನಿಂಗಿತ
ಕಟಾಕ್ಷದಿಂ: ''ಕೇಳ್ದಿಯೇನ್, ದೇವಿ ಸಾರಣನೆಂದ
ರಣವರದಿಯಂ? ನಿಶ್ಶಂಕಿಯಾಗಿನ್ನಾದೊಡಂ?–
ನಡೆ ನೀನ್, ಚರಾಗ್ರಗಣಿ. ಕಾಯುತಿರ್ ನನಗಾಗಿ
ಕೊತ್ತಳದ ನೆತ್ತಿಯೊಳ್.'' ಅವಸರದೊಳೂಟಮಂ
ಪೂರೈಸಿದನ್. ತಂದ ವೀಳಯವನೊಲ್ಲದೆಯೆ
ಸತಿಗೆಂದನೌಪಚಾರಿಕಮೆನಲ್: ''ಸೀತೆಯಂ
ಸಾಯದವೊಲೆಂತಾದಡಂ ಪೊರೆಯವೇಳ್ಕುಮಾ
ಅನಲೆಗೆನ್ನಾಜ್ಞೆಯಂ ಪೇಳ್, ದೇವಿ. ಇನ್ನೆನಗೆ
ರಣದ ಮೋಹವೆ ಮೋಹಮಾ ಜಾನಕಿಯ ಮೇಲೆ
ಮುನ್ನಿರ್ದ ಮೋಹಮೆಲ್ಲಂ ತಿರುಗಿಹುದು ರಣದ
ಮಧುರತರ ಸಾಹಸಕೆ!''
ಹೋಹಾತನಂ, ತನ್ನ
ಜೀವ ಜೀವಾತುವಂ, ಪುರುಹೂತ ಜೇತನಂ,
ಪ್ರಾಣೇಶನಂ ನೋಡುತಾ ಮೇಘನಾದನ ಮಾತೆ
ಮದನಹರನಂ ಮತ್ತಮಾತನರ್ಧಾಂಗಿಯಂ
ಪ್ರಾರ್ಥಿಸಿದಳಿನಿಯನಾತ್ಮೋದ್ಧಾರಭಿಕ್ಷೆಯಂ
ಬೇಡಿ.

ಕೊತ್ತಳವೇರಿ ಕಣಕೆ ಕಣ್ ಕೀಲಿಸಿರೆ
ಲಂಕೇಶ್ವರಂ. ದಿನೇಶ್ವರನುಮಾ ಪಡುಮಲೆಯ
ತಲೆಯ ಕೋಡಂ ಮೆಟ್ಟಿ ನಿಂದಿರಲ್, ತಂದನು ಶುಕಂ
ಅದ್ಭುತ ವಿಜಯವಾರ್ತೆಯಂ, ಸುಗ್ರೀವಸೈನ್ಯಂ
ತ್ರಿಕೂಟಮಂ ತ್ಯಜಿಸಿ ವೇಲಾದ್ರಿಕಂದರಕೆ
ಪೆಡಂಮೆಟ್ಟಿ ನಿಂದಿರ್ದುದಂ. ಬಂದನಿನ್ನೊರ್ವನಾಳ್
ಶುಕನ ಬೆಂಬಳಿಯೆ; ಪೇಳ್ದನ್ ಪ್ರಹಸ್ತನಳಿವಂ,

ನೀಲ ಹಸ್ತ ಗದಾಭಿಘಾತ ಸಂಜಾತಮಂ.
ಪ್ರಥಮ ಸೇನಾಪತಿಯ ಮೃತ್ಯುವಾರ್ತೆಗೆ ಮನಂ
ತತ್ತರಿಸಿ ದೈತ್ಯೇಂದ್ರನುತ್ತರಿಪ ಮುನ್ನಮೆಯೆ
ತಂದನಿನ್ನೊರ್ವಂ ದುರಂತ ವೃತ್ತಾಂತಮಂ,
ಕೋದಂಡಪಾಣಿ ರಘುರಾಮ ದೋರ್ದಂಡದಿಂ
ಪೊಯ್ಯೊಡೆದ ರಕ್ಕಸರ ಪಡೆ ಕೆಟ್ಟು, ಕಂಗೆಟ್ಟು,
ರಣಧರಣಿಯೊಳ್ ಬಿಟ್ಟುಕಳೆದು ಲೆಕ್ಕಂಗೆಟ್ಟ
ಶವಂಗಳಂ, ಸೇನಾನಿಗಳ ಕಳೇವರಂಗಳಂ
ತುಳಿತುಳಿದಿರದೆ ಲಂಕೆಯ ಕಡೆಗೆ ಪೆಡಂಮೆಟ್ಟಿ
ದೌಡೋಡಿ ಬರುತಿರ್ಪುದಂ!

ನೇಸರನ್ನೆಗಂ

ಪಡುಮಂಚಕಿಳಿದೊರಗಿದನ್. ದಶಶಿರನ ಮತಿಗೆ
ಮಂಕು ಕವಿದಂತೆ ಕವಿದುದು ರಾತ್ರಿವರ್ಣಂ
ಧರಿತ್ರಿಯಂ. "ಕರೆ ಮಹಾಪಾರ್ಶ್ವನಂ. ಬರವೇಳ್
ಬಳಾರಿಜಿತುವಂ. ಬಳಿಯನಟ್ಟಾ ನಿಕುಂಭಂಗೆ.
ದುರ್ಗರಕ್ಷಣೆಗೆ ಪೇಳ್ ಕುಂಭನಂ. ತ್ರಿಶಿರಂಗೆ
ಬೆಸಸು ಪೆರ್ಬಾಗಿಲ್ಗಳಂ ಬಲಿಸಿ ನಿಲ್ವಂತೆ
ನುರಿತ ಮೀಸಲ್ಪಡೆಗಳಿಂ. ಪೇಳ್ ಸುಪಾರ್ಶ್ವಂಗೆ
ಪೊಸ ಪಡೆಗಳಂ ಕೂಡಿ ನಡೆದು ನೆರವಾಗಲಾ
ಸ್ಖಲಿತ ಹೃದಯದೊಳೋಡಿಬರುತಿಹ ನಮ್ಮ ಸೈನ್ಯಕ್ಕೆ!"
ಇಂತಿತ್ತು ತನ್ನಾಜ್ಞೆಯಂ, ಕೊತ್ತಳವನಿಳಿದು
ಉದ್ವಿಗ್ನ ಚಿತ್ತನಲ್ಲಿಂ ನಡೆದನಾಳೋಚನೆಗೆ
ಸಚಿವ ಮಂದಿರಕೆ. ಕಿಕ್ಕಿರಿದಿರ್ದುದಾ ಸಭೆ
ಮಹಾಮಾತ್ಯರಿಂ. ಚಿಂತೆ ಮುಸುಗಿರ್ದಾನನಗೆ
ಪೇಳ್ದರೊಮ್ಮತದಿಂ ದಶಾನನಂಗೀ ಹದನಃ
"ಮತದ ಭಿನ್ನತೆಗಿಲ್ಲಿ ತಾವಿಹುದೆ? ಕಟ್ಟು ಸೇನಾ
ಪಟ್ಟಮಂ ಶಕ್ತಿಸಾಧಕನತುಲ ವಿಕ್ರಮ
ಮಹಾಪಾರ್ಶ್ವ ದಳಪತಿಗೆ. ಅಂದು ಸಭೆಯಲಿ ಆ
ವಿಭೀಷಣನ ಪಕ್ಷದಿ ನಿಂದು ನುಡಿದುದನಿಂದು
ನೆನೆಯದಿರು. ಮನ್ನಣೆಯ ಮಾಡದಿರಲರ್ಹತೆಗೆ,
ತಾನೆ ತನ್ನದನೆ ಕೊಂದಂತೆ, ಹಗೆಗುಪಕೃತಿಯಲಾ!

ವಿಲಯವೇಗದಿ ನುಗ್ಗಿ ಬಹ ಕಪಿಧ್ವಜಿನಿಯಂ
ಇಂದಿನಿರುಳಲಿ ತಡೆವ ಬಲವಾ ಮಹಾಪಾರ್ಶ್ವ
ಸತ್ತ್ವಸಂಯಮಕಲ್ಲದನ್ಯರ್ಗೆ, ನೀನೊರ್ವನಾ
ಕುಂಭಕರ್ಣನದೊರ್ವನುಳಿಯೆ, ದಿಟಮಸದಳಂ.
ನಿದ್ರಾಸಮಾಧಿಯೊಳ್ ಮಗ್ನನ್ ಸಹೋದರಂ.
ನೀಂ ದೊರೆ. ಸಮರ್ಥರಿರೆ ಸೇವಕರ್, ಬೆಸಸುವುದೆ
ಕರ್ತವ್ಯಮಾಜ್ಞಾ ಸಮರ್ಥಂಗಾ ಪ್ರಭುಶಕ್ತಿ
ಯುಕ್ತಂಗೆ!''
ಸಮ್ಮತಿಸಿದನ್ ಸಚಿವರಾಡಿತಕೆ.
ಬಳಿಯಟ್ಟಿದನ್ ಮಹಾಪಾರ್ಶ್ವಂಗೆ. ಬಂದನಾ
ಶಕ್ತಿಪೂಜೆಯೊಳಿರ್ದ ಭಾಳನೇತ್ರಸಮಾನನಾ
ದೈತ್ಯಸೇನಾಧಿಪಂ. ನಮಸ್ಕರಿಸಿದಾತಂಗೆ
ನೀಡಿ ಸಮಪೀಠಮಂ ಮನ್ನಣೆಯ ಮಾಡಿದನ್;
ಹೇಳಿದನು ಸಚಿವರಿತ್ಯರ್ಥಮಂ, ಮತ್ತಮದೆ
ತನ್ನಾಜ್ಞೆಯಂ.
''ಜೀಯ, ಅಂದಾ ವಿಭೀಷಣಂ
ಪೇಳ್ದುದಂ ನೆನೆ. ಇಂದುಮಂದೆಂದುದನೆ ನಿನಗೆ
ಬಿನ್ನಯ್ಸುವೆನ್. ನಮ್ಮ ದೌರ್ಬಲ್ಯಮಿರ್ಪುದೀ
ನಮ್ಮ ಸೈನ್ಯದೊಳಲ್ತು, ರಾಜೇಂದ್ರ. ಆದೊಡಾ
ಮಾತೀಗಳಪ್ರಸಂಗಂ ನನಗೆ; ಮೇಣ್ ನನ್ನ
ಸ್ವಾಮಿನಿಷ್ಠೆಗೆ ತಕ್ಕುದಲ್ತು. ನಿನ್ನಾಜ್ಞೆಯಂ
ಸರ್ವ ಸೇನಾಧಿಪತ್ಯದ ಮಹಾ ಪಟ್ಟಮಂ
ಮುಡಿಯೊಳಾಂತೆನ್. ತಡೆಯುವೆನ್ ರಾಮಸಂಗ್ರಾಮ
ಶಕ್ತಿಯಂ ನಾಳೆ ಪೊಳ್ತರೆ ನೇಸರೇಳ್ವನ್ನೆಗಂ.
ಬಳಿಕಮಲ್ಲಿಂದೆ ಮೇಲ್ ಆಯು ತೀರ್ವನ್ನೆಗಂ
ದುಡಿದಪೆನ್. ಮಡಿವೆನಲ್ಲದೆ ನಿನ್ನ ತೇರ್‌ನೊಗಕೆ
ಪೆಗಲಾಂತು, ಮರಳಿ ಲಂಕೆಗೆ ಪುಗೆನ್. ತನ್ನ ಮಿತಿ
ತಾನರಿದನೆಂದುಂ ದೊರೆಗೆ ಪುಸಿಯ ಭರವಸೆಯ
ಬಲೆಯನೊಡ್ಡನ್.''
ಮಹಾಪಾರ್ಶ್ವ ಹೃದಯವನರಿತು,
ಕಲಿ ಕಲಿಗೆ ಕೊಡುವ ಕಣ್‌ಮೆಚ್ಚುಗೆಯ ಕಾಣ್ಕೆಯಂ

ಸಲಿಸಿ: ''ನೀನೆಂದುದದು ದಿಟಮಾದೊಡಂ, ನಮಗೆ
ಯುದ್ಧಮಲ್ಲದೆ ಬೇರೆ ಮೋಕ್ಷಕೆಲ್ಲಿದೆ ಬಟ್ಟೆ,
ಪೇಳ್, ಸಾಧಕವರೇಣ್ಯ? ನಡೆ ಪೋಗು; ಈ ಇರುಳ್
ತಡೆ ರಾಮಶಕ್ತಿಯ ಕಪಿಧ್ವಜಿನಿಯಂ. ನಾಳೆ
ಕುಂಭಕರ್ಣನನೆಬ್ಬಿಪೆನ್, ಕೇಳ್, ಅಕಾಲದೊಳ್
ಪ್ರಳಯರುದ್ರನನೆಬ್ಬಿಸುವವೋಲ್!'' ಎನ್ನುತ್ತಾ
ಪುಲಸ್ತ್ಯಜಂ ಬೀಳುಕೊಟ್ಟನು ಮಹಾಪಾರ್ಶ್ವನಂ
ರಣಮೇದಿನಿಯ ರುದ್ರವೇದಿಕೆಗೆ. ಧಳಧಳಧಳಂ
ಧರೆ ನಡುಗೆ ಕಿವಿಗೆ ಬಂದುದು ಧೀರಮಾ ನಿಶಾ
ನಿಶ್ಶಬ್ದ ಭೈರವಂ, ಕೇಳ್, ಸಮರಭೇರೀ ರೌರವಂ!

## ಸಂಚಿಕೆ ೧

# ಕುಂಭಕರ್ಣನನೆಬ್ಬಿಸಿಮ್

ಮನೋಮಯಂ ಪ್ರಾಣಮಯಮನ್ನಮಯದಾ ಪ್ರತಿಮೆಗಳ್
ಮಾನವತೆ ವಾನರತೆ ದೈತ್ಯತೆಗಳಂ ದಾಂಟುವೋಲ್
ಸಂಪುಟಮಯೋಧ್ಯೆಯಂ ಕಿಷ್ಕಿಂಧೆಯಂ ಲಂಕೆಯಂ
ದಾಂಟಿ, ವಿಜ್ಞಾನದೃಷ್ಟಿಯ ಪೂರ್ಣರಸಕೇರ್ವವೋಲ್
ತವ ಕೃಪಾ ಕರುಣೆಯಿಂ ಶ್ರೀ ಸಂಪುಟ ಬೃಹತ್ಕಲಾ
ವೈಭವದ ಮೇರು ಮಂದರ ಹಿಮಾಚಲೋನ್ನತ
ಭವ್ಯತಾ ಅನುಭವದ ಭೂಮಾನುಭೂತಿಯ
ಅತೀಂದ್ರಿಯದ ಪರ್ಯಟನಕಾತ್ಮದ ನಭೋನೌಕೆಯಂ
ತೇಲುತಿಹೆನೇರುತಿಹೆನಾಂ! ತಾಯಿ ಹಸುಳೆಯನೆರ್ದೆಗೆ
ಓತುಕೊಳ್ವಂದದಿಂದಾತು ಪೊರೆಯಯ್, ಗುರುವೆ,
ಮಂತ್ರದೀಕ್ಷೆಯ ನಿಮ್ಮಡಿಯ ಶಿಷ್ಯಸಾಮಾನ್ಯನಂ,
ಮಾನ್ಯ ಕುಪ್ಪಳಿ ವೇಂಕಟಾರ್ಯಂಗೆ ಮೇಣ್ ಪೂಜ್ಯೆ
ಸೀತಮ್ಮನೆಂಬಭಿಧಾನದಾ ಮಾತೃದೇವತೆಗೆ
ಸಂಭವಿಸಿದೀ ಪುಣ್ಯನಂ, ಧನ್ಯನಂ, ದೀನನಂ:
ಕೌಸಲೆಯ ನಂದನಂ ಮೇಣ್ ದೇವಕಿಯ ಕಂದನುಂ
ತಾವೊಂದೆ ಮೆಯ್ಯೊಳಿಂದವತಾರಮೆತ್ತಿದಾ
ಶ್ರೀರಾಮಕೃಷ್ಣ ಭಗವದ್‌ಗೋತ್ರಸಂಜಾತನಂ;
ತೇಜಸ್ವಿ ಚೈತ್ರ ಮೇಣಿಂದುಕಲೆ ತಾರಿಣಿಯರಂ
ಮಕ್ಕಳೆನುವಕ್ಕರೆಯ ಸಕ್ಕರೆಗೆ ಕಬ್ಬಾದಳೀ
ವಕ್ಷಮಂಚಕ್ಷೀರ ಬಿಂಬೇಕ್ಷುರಸ ಚಂದ್ರಿಕಾ
ಹೇಮಾ ಚಕೋರಚಂಚು ಪ್ರೇಮ ಗೋಸ್ರೋತನಂ;
ಭವತಾರಿಣೀ ತಾರಕಚರಣ ನಾಮರೂಪನಾ

ಶ್ರೀ ಶಿವಾನಂದ ಚಿತ್ಕಿರಣೋತ್ಥ ಹೃತ್ಕೇಂದ್ರನಂ!
ಅನ್ನಮಯವಾನಂದಮಯವನೊಳಕೊಳ್ವಂತೆ
ದಶಶಿರಂ ಸೆರೆಗೊಂಡ ದೇವಿ ಭೂಮಿಜೆಯೆಂತುಟಾ
ವಿಜ್ಞಾನರೂಪಿ ರಾಮನ ಚಿತ್‌ತಪಸ್ ಶಕ್ತಿಯಿಂ
ಮುಕ್ತೆಯುಂ ಸ್ವಾಮಿಸಂಯುಕ್ತೆಯುಂ ತಾನಪ್ಪಳಾ
ದಿವ್ಯದರ್ಶನವನೆನಗೊಲಿದು ತೋರ್ ನಿತ್ಯತ್ವಮಂ
ಮೇಣ್ ಪ್ರಜ್ಞಾಪ್ರಪೂರ್ಣತಾ ಲೀಲಾ ವಿಭೂತಿಯಂ,
ಪಾರ್ಥಂಗೆ ವಿಶ್ವರೂಪವನಂದು ಕೃಪೆದೋರ್ದವೊಲ್!
  ಮೀಯಿಸಿ ದಿವೋಧುನಿಯ ಪೀಯೂಷವಾಹದಲಿ
ತನ್ನ ರಥವಾಜಿರಾಜಿಯನಹಸ್ಪತಿಯ ಸೂತಂ
ಪ್ರಾಚ್ಯ ಪರ್ವತದುತ್ತಮಾಂಗವನಡರ್ದ್ದನಾ
ಹಬ್ಬಿದುದೊ ದಿವಸೇಶ್ವರಾಶ್ವ ಖುರಧೂಳಿಯೆನೆ
ಕೆಂಪೇರ್ದುದಾಖಂಡಲ ದಿಶಾ ಉಷಾ ವಿಯನ್
ಮಂಡಲಂ. ಅಂತೆವೋಲಿರುಳೆಲ್ಲಮರಿವಾಹಿನಿಯ
ಕೆನ್ನೀರಿನಲಿ ಮಿಂದು, ಕಪಿಸೇನೆಯನಸಂಖ್ಯೆಯಿಂ
ಕೊಂದು, ನೀಲನ ಶೌರ‍್ಯಕ್ಕೈರವಕೆ ರವಿಯಾಗಿ,
ಹನುಮಗರ್ವದ ಗಿರಿಗೆ ಪವಿಯಾಗಿ, ಲಕ್ಷ್ಮಣನ
ಕಡುಗಲಿತನದ ಖಡುಗಕೊರೆವುಗಿಸಿ, ಅಂಗದನ
ರಣಗೌರವಕೆ ರಾಹುವಿಡಿಸಿ, ತುದಿಗೆ ರಾಮನೆ
ಸೆಣಸೆ ಸರಿಸಮವೆನಿಸಿ ಕಾದಾಡುತೇರ್ವಡೆದು
ಮೆಯ್‌ಮರೆತ ಸೇನಾನಿಯಂ, ಮಹಾಪಾರ್ಶ್ವನಂ,
ಯುದ್ಧರಂಗಕೆ ದೂರಮಿರ್ದ್ದೊಂದು ಜನರಹಿತ
ವಿಪಿನಾಂತರದ ಗಿರಿಶಿರಸ್ಥಲಕೆ ತಂದನಯ್
ನಿಪುಣಸಾರಥಿ ವರೂಥಾಗ್ರದಲಿ. ಬೀಸಿದುದು
ಹೊತ್ತರೆಯ ತಂಬೆಲರ್ ಮೆಯ್ಗೆ; ಸೂಸಿದುವಲರ್
ಘ್ರಾಣಕ್ಕೆ ಮಧುಸಮಯ ಪರಿಮಳಪ್ರಾಣಮಂ;
ಸಾರಥಿಯ ಶಿಶಿರಸೇವೆಗೆ ತೆರೆದುವೊಯ್ಯನೆಯೆ
ಕಣ್; ನೋಡಿದನು ತಾನಿರ್ದ್ದದ್ರಿ ಚೂಡಮಂ
ಚುಂಬಿಸುತ್ತಾಗಳಾಗಳೆ ಮೂಡಿಬಂದಾ
ಮರೀಚಿಮಾಲಿಯ ಹಿರಣ್ಮಯಮೂರ್ತಿಯಂ. ಜಗತ್
ಚಕ್ಷುವಿಗೆ ಕಯ್ಮುಗಿದು ಸಾರಥಿಯ ಕಡೆ ನೋಡಿ:

“ಮಾಣ್, ಸೂತ, ಶುಶ್ರೂಷೆಯಂ. ಕೇಳುತಿಹುದೆನಗೆ
ಮಿಳ್ತುವಿನ ಕರೆಯ ಕೊಳಲಿಂಚರಂ. ಮರ್ತ್ಯಮಂ
ದಾಂಟಿರ್ಪುದಾಲಿಸಾ ಪಕ್ಷಿಕಂಠಸ್ವನಂ.
ವೀರರ್ಗೆ ರಣಧರೆ ಮರಣಶಯ್ಯೆ. ನೀನೇಕೆ
ನನ್ನನಲ್ಲಿಂದಿಲ್ಲಿಗೊಯ್ದೆ?” ಒಡೆಯನ ನುಡಿಗೆ
ತುಟಿ ನಡುಗಿ ಜಿಹ್ವೆ ತೊದಲಿರೆ, ಸಾಶ್ರುನೇತ್ರನಾ
ಸೂತನಿಂತೆಂದನ್:
“ಚಮೂಸ್ವಾಮಿ ನೀಂ ಬದುಕೆ
ಜಯವೆಮ್ಮದೆಂದು ದೂರಕೆ ತಂದೆನಸುಗಳ್ಕಿ
ಬಂದೆನಲ್ಲಯ್, ತಂದೆ.”
“ನನ್ನ ಬದುಕೆಂತಂತೆ
ನಮ್ಮ ಗೆಲ್ಲಂ! ಸೂತ, ಆ ಆಸೆಯಂ ಬಿಟ್ಟು ಕಳೆ.
ನನ್ನನೀ ಸ್ಯಂದನಾಗ್ರದಿನೊಯ್ಯನಿಳುಹುವೆಯ
ಆ ಶಾದ್ವಲಸ್ಥಿರೆಗೆ!”
ಮುಗಿಲ್ ಬಿಳಿಯ ಕುದುರೆಗಳ
ಕೊರಳುರ್ಚಿದನ್. ಚಂಚಲತೆಯಿಂ ಧ್ರುವಕ್ಕುಯ್ವವೋಲ್
ತೇರಿಂದೆ ತಿರೆಗಿಳಿಸಿದನು ತನ್ನೊಡೆಯನೊಡಲಂ.
ಆಲಿಸಿದನಾಲಿ ನಟ್ಬಾಣ್ಮನಂತಿಮ ಸಮಯದಾ
ಸಂದೇಶಮಂ:
“ಕೇಳ್, ಸೂತ ಆರ್ಗಮಿದನುಸುರದಿರ್,
ಲಂಕೇಶ್ವರಂ ವಿನಾ, ನನ್ನ ಮುಂಗಾಣ್ಕೆಯಂ.
ನೀನಿನ್ನುಮಿಳೆಯ ಆಳ್; ನಾನೊ ಅರೆಗಿಂ ಮಿಗಿಲ್
ಆಗಳೆ ಅಲೌಕಿಕನ್! ಕಣ್ಣೀರನೊರಸಿಕೊಳ್;
ಕಾಣೆನ್ನ ಮೊಗದೊಳ್ ಮುಗುಳ್ನಗೆಯ ಶಾಂತಿಯಂ;
ನೀನುಮಂತೆಯೆ ತಾಳ್ ಸಮಾಧಾನಮಂ.”
ಶ್ರದ್ಧೆ
ಕಣ್ದೆರೆದವೋಲ್, ಸಾರಥಿಗೆ ಸೇನಾಪತಿಯ
ಮಾತಿನಲಿ ಸಿದ್ಧಪುರುಷನ ವಾಣಿ ಮೈದೋರಿ,
ಕಿವಿಗೊಟ್ಟನಾ ಶಕ್ತಿಸಾಧಕಗೆ:
“ಪಾಪಮುಂ
ಪುಣ್ಯಮುಖಿ! ಐಹಿಕದ ವೈರಿ ಆಧ್ಯಾತ್ಮಿಕಕೆ

ಕೆಳೆಯಹನ್, ಗುರುವಹನ್. ಬಹುಪಥಂಗಳ್ ವಿಧಿಗೆ
ತನ್ನಯ ಕಾರ್ಯಸಾಧನೆಗೆ. ನನ್ನಿಷ್ಟದೇವತೆಯೆ
ಸೀತಾ ಸ್ವರೂಪದಿಂ ಮೋಹಿಸಿದಳೆಂಬಂತೆ
ತೋರುತಿದೆ ಲಂಕಾಧಿನಾಥನಂ. ಅಲ್ಲದಿರೆ
ಲಭಿಸುತಿರ್ದುದೆ ನನ್ನ ಸಾಧನೆಗಿನಿತು ಶೀಘ್ರದಿ
ಮರಣತೋರಣದಾಚೆ ಗೋಚರಿಪಮರ ಸಿದ್ಧಿ?''
ತೂಲ ವಸ್ತ್ರದೊಳೊರಸುತಿರೆ ಸೂತನರುಣಜಲ
ಧಾರೆಯಂ, ಪಣೆ ಸೋರುತಿರ್ದುದಂ ಗಮನಿಸದೆ
ಸೇನಾನಿ:
''ಚಿನ್ಮಯಂ ತಾನಾಗುತಿರ್ಪುದೀ
ಮೃಣ್ಮಯಂ ಪೃಥಿವಿ. ಭಗವಾನ್ ಸಹಸ್ರಾಂಶುವುಂ
ತ್ಯಜಿಸುತಿಂದ್ರಿಯರೂಪ ಮರ್ತ್ಯ ತತ್ತ್ವಂಗಳಂ
ಪಿಂತಿರುಗುತಿರ್ಪ್ಪನಾತ್ಮಜ್ಯೋತಿಯೋಲ್ ಬ್ರಾಹ್ಮ
ವಿಜ್ಞಾನ ತತ್ತ್ವಕ್ಕೆ.''
ತುಸು ಪೊಳ್ತು ಮೌನಮಿರ್ದನ್.
ಪೊಂಬಿಸಿಲೊಳಾ ಬನಂ ಸುಂದರ ವಸಂತಮಂ
ಸಾರುತಿರ್ದತ್ತು. ರಜನಿಯ ರಜೋಸಾಹಸದಿ
ದಣಿದ ತೇರ್‌ಗುದುರೆಗಳ್ ಮೇಯುತಿರ್ದುವು ಪಸುರ್
ಗರುಕೆವುಲ್ಲೆಳೆಯ ಸೊಂಪಂ. ಪೊಸತದೊಂದೇನೊ
ದರ್ಶನಕೆ ಬಂದಂತೆವೋಲ್ ಆ ಪೃತನಾಧಿಪಂ:
''ಇನ್ನಿಲ್ಲಿ ತಳುವದಿರ್, ಸೂತ; ನಡೆ ಬೇಗದಿಂ;
ಲಂಕೆಗೆನ್ನವಸಾನಮಂ ಪೇಳ್. ವರೂಥಮಂ
ಕೊಂಡು ನಡೆ. ಧವಳಧ್ವಜವನೆತ್ತು. ರಿಪುಗಳಿಂ,
ರಾಮನವರಿಂ, ಬರದು ನಿನಗಪಾಯಂ. ಕೆಣಕಿ
ರಾಮನಂ ಧನ್ಯಂ ದಶಾನನಂ! ಸನಿಹಮಿದೆ
ಆತನುದ್ಧಾರಮುಂ. ಕಾಣ್ಬನಾದರ್ಶಮಂ,
ತಾನಿನ್ನೆಗಂ ಪುಡುಕಿ ಪಡೆಯದೆ ತೊಳಲುತಿರ್ದುದಂ,
ಆ ರಾಮನರ್ಧಾಂಗಿಯೊಳ್. ಮಹಾಸಾಧಕಂ
ಕಣಾ ರಾವಣಂ! ಸೂತ, ಮರ್ತ್ಯರ್ಗಗೋಚರಂ
ನನಗೆ ಹೃದ್ಗೋಚರಂ. ನೀನಿಲ್ಲಿ ತಳುವದಿರ್.
ನಡೆಯಲಿರ್ಪುದು ನರರ್ ನೋಡಬಾರದುದಿಲ್ಲಿ

ನನ್ನಾತ್ಮಯಾತ್ರೆಯ ಸಮಾರಂಭ ಸಂಭ್ರಮಂ!
ನಡೆ, ಪೇಳ್, ಪುರಪ್ರಜೆಗೆ ಧೈರ್ಯಮಂ. ವಿಶ್ರಮಿಸಿ
ಕೊಳಲಿಂದು ನಮ್ಮ ಸೈನ್ಯಂ. ಬೇಂಟೆಗಾರರಿಂ
ಕಡುಗಾಯವಡೆದ ಪೆರ್ಬುಲಿಯೆಂತು ಪಳುವೊಳ್
ಜುಣುಂಗಿ, ನೆತ್ತರ್ ನೆಕ್ಕಿಕೊಳ್ಳುತಾಸರ್ಗಳೆಯೆ
ಮಗ್ಗುಲಿಕ್ಕುವುದೊ ತಾನಂತೆವೋಲ್ ಕಪಿಸೇನೆ,
ಕಳೆದ ರಾತ್ರಿಯೊಳೆನ್ನ ಕೈಯುಪಹತಿಗೆ ಸಿಲ್ಕಿ,
ಮಗ್ಗುಲಿಕ್ಕಿದೆ ಸರಿದು ಶಿಬಿರಕ್ಕೆ. ಮತ್ತೆ ರಿಪು
ಚೇತರಿಸಿ ಮೇಲ್ವಾಯ್ವ ಮುನ್ನಮೇಳ್ವನು ನಮ್ಮ
ಕಾಲರುದ್ರಂ ಬೃಹನ್ನಿದ್ರೆಯಿಂದಾ ಜಗದ್
ಭೀಕರಂ ಕುಂಭಕರ್ಣಂ!''
ಸಂಚರಿಸಿದುದು ಭಯಂ
ಸಾರಥಿಗಲೌಕಿಕಂ. ಹೆದರಿ ಕುದುರೆಗಳುಲಿದ
ಹೇಷಾಧ್ವನಿಗೆ ವಿಕಂಪಿಸಿತನಿಲಮಂಡಲಂ.
ತಾನದುವರೆಗೆ ಕೇಳ್ದುದಾವುದುಂ ಹೋಲಿಕೆಗೆ
ನಿಲುಕದ ನಿನಾದಮೊಂದೆದ್ದುದು ಜಗತ್‌ತ್ರಯಂ
ಧಿಗಿಲ್ಲೆನಲ್! ಸ್ವಾಮಿಗೆ ಮಣಿದು ಮೊಳ್ಗಿ, ಬೇಗದಿಂ
ತೇರ್‌ನೊಗಕೆ ಗದಗದಿಪ ಕುದುರೆಪೆಗಲಂ ಸಾರ್ಚಿ,
ತಿರುಗಿದನು ಪುರಕೆ ಸೂತಂ ಬರು ವರೂಥದಲಿ!
ಕೃಪೆಯೊಳನಿಶಂ ರಿಪು ವನೌಕಸರ ಧಾಳಿಯಿಂ
ಲಂಕೆಯಂ ಪೊರೆದು, ಸುಗ್ರೀವ ಬಲವಾರ್ಧಿಯಂ
ಬತ್ತುವೋಲ್ ಪಿಂದೊತ್ತುವೋಲ್ ಪೀರ್ದು, ಮೊಗಂದೋರೆ
ಮೂಡಣದ ದಿಗುತಟದಹರ್ಮುಖದ ಕೋಕನದ
ಕಿಂಜಲ್ಕ ರಕ್ತರಾಗಂ, ಜಯಧ್ವನಿಗಳಿಂ
ವಿಜಯಮಂ ಘೋಷಿಸುತೆ ಲಂಕೆಗೆ ಮರಳ್ದುದಯ್
ರಾಕ್ಷಸಧ್ವಜಿನಿ. ವೀರಪಾನದ ಗೋಷ್ಠಿಯೊಳ್
ಆ ವಿಜಯಕಾರಣಕೆ ಹೃದಯಕಾರಣನಾದ
ವೀರ ಸೇನಾನಿಯಂ, ಬಹುಮಾನ್ಯ ಯೋಗ್ಯರೊಳ್
ಪರಮಪ್ರಧಾನನಂ, ಕಾಣದತಿಖೇದದಿಂ
ವಿರಮಿಸುತ್ತಾಮೋದಸಭೆಯಂ, ಕಠೋರಮುಖಿ
ದೈತ್ಯೇಂದ್ರನಿತ್ತನಾಜ್ಞೆಯನವನನರಸಲ್ಕೆ.

ಹರಿದರಾಳುಗಳೆತ್ತಲುಂ. ಮಹಾಪಾರ್ಶ್ವನಂ
ಕಾಣ್ಬುದಂತಿರ್ಕೆ; ಸಾರಥಿಯಕ್ಕೆ ರಥಮಕ್ಕೆ
ಕಣ್ಬೊಲಕೆ ಪೊರಗಾಗೆ ಖಿನ್ನಾನನರ್ ಚರರ್
ಪಿಂತಿರುಗಿದರ್ ವ್ಯರ್ಥಪ್ರಯತ್ನದಿಂ. ಪಗೆಗೆ
ಸೆರೆವೋದನೋ? ಮಡಿದನೋ ಕಾಳಗದ ಕಳದಿ?
ಮೇಣ್ ಮನಂ ಮಾರುವೋಗುತೆ ವಿಭೀಷಣನಂತೆ
ಪರಿಪಂಥಿಯಾದನೋ? ಮೇಣೆನಗೆ ಪೇಸುತ್ತೆ,
ದೇಶಚ್ಯುತಿಯ ಬಹುಕ್ಲೇಶಕ್ಕೆ ತರಿಸಂದು,
ತೊರೆದನೋ ತಾಯ್‌ಭೂಮಿಯಂ? ಶಂಕೆವೆಂಕೆಯಲಿ
ಬೇಯುತಿರಲಂತು ಲಂಕೇಶ್ವರಂ, ಸ್ವಾಮಿಯಂ
ಕುತ್ಕೀಲಚೂಡದೊಳ್ ಬೀಳ್ಕೊಟ್ಟು ಬಂದಾ
ಮಹಾಪಾರ್ಶ್ವ ಸೂತನೊರೆಯುತೆ ಸಕಲವೃತ್ತಮಂ
ದನುಜೇಂದ್ರನಾತ್ಮದ ತಮಿಸ್ರಕ್ಕೆ ತಾನಾದನಯ್
ಸೂರ್ಯಸೂತಂ. ಕೇಳುತಾಶ್ಚರ್ಯದಿಂ ಮತ್ತೆ
ತೇರಟ್ಟಿದನು, ಮಹಾಸೇನಾನಿಯಂ ತರಲ್,
ಸೂತಂಗೆ ಸಮರ್ಥರಂ ಸಾಹಾಯ್ಯಮಂ ನೀಡಿ.
ಹೋಗಿ ಹಿಂತಿರುಗಿದರು ಬೇಗದಿಂ. ತಂದುದಂ
ಕೊಟ್ಟು, ಕಂಡುದನೊರೆದರವರಿಂತು:

"ಜೀಯ, ಕೇಳ್,
ಕಂಡೆವಿಲ್ಲಾಂ ಚಮೂಪತಿಯಂ. ಕಳೇಬರಕೆ
ಬದಲಿರ್ದುದಲ್ಲೀ ಅಲೌಕಿಕ ಕುಸುಮ ರಾಶಿ!"
ಭೂಮಿ ಬೆಸಲಾಗದಾ ಹೊಸ ಹೂಗಳಂ ನೋಡಿ,
ತುಸುವೊಳ್ತು ಜಾನಿಸುತ್ತೇನನೋ ನಿಚ್ಚಯ್ಸಿ,
ಮೆರವಣಿಗೆ ಕಳುಹಿದನು ಆ ಸುಮಸ್ತೋಮಮಂ
ತನ್ನ ಪೂಜೆಯ ಶಿವನಿಕೇತನಕೆ.

ಮತ್ತಮಿತ್ತಲ್
ಬೆಸಸಿದನು ರಣಮಂತ್ರಿಯಂ ಜಂಹ ತಂತ್ರಿಯಂ
ಕುರಿತು ಯೂಪಾಕ್ಷನಂ:

"ನಡೆಯಿ ನೀಂ ಬೇಗದಿಂ.
ತಡೆಯಲಿನ್ ಪೊಳ್ತಿರದು. ಮಹಾಪಾರ್ಶ್ವ ಘಾತದಿಂ
ಗಾಯಗೊಂಡರಿ ಮರಳಿ ಚೇತರಿಸಿ ಲಗ್ಗೆ ನುಗ್ಗಿ

ಮೇಲ್ವಾಯುವನಿತರೊಳೆ ನೀಮೆಬ್ಬಿಸಲ್ವೇಳ್ಕುಮಯ್
ಲಂಕಾಂತರಂಗ ನಿಕ್ಷಿಪ್ತ ಲಯಶಕ್ತಿಯಂ,
ಪ್ರಲಯಸ್ವರೂಪನಂ, ಶಾಪ ಸುಪ್ತಿ ಸ್ತೂಪನಂ,
ದೇವದಿಗ್ಗಜದ ದಂತವನಲುಗಿ ಕಿಳ್ತದನೆ
ಗದೆಗೆಯ್ದು ಸುರರಾಜನೆರ್ದೆಗಪ್ಪಳಿಸಿ ಬಡಿದು
ನೆಲಕುರುಳ್ಚಿದ ವಜ್ರಿವಜ್ರನಂ! ನಡೆಯಿ ನೀಂ;
ಸರ್ವಪ್ರಯತ್ನದಿಂದಾ ಭುವನ ಕಂಪ್ರನ ಕರಂ
ಜಗದ್ಭೀಕರಾಕಾರ ಧಾರಣ ಸಮರ್ಥನಂ
ಕುಂಭಕರ್ಣನನೆಬ್ಬಿಸಿಮ್!''
ಪರ್ಬಿದುದು ವಾರ್ತೆ;
ಪೆಳರ್ದುದು ಜನಂ. ಹೊಗೆದು, ಕಿಡಿಕಿಡಿಗೆದರಿ, ದಳ್ಳುರಿ
ನೆಗೆದು ಹೊತ್ತಿ, ಬೀದಿವರಿದುದು ಸುದ್ದಿ, ಬೆಬ್ಬಳಿಸೆ
ಲಂಕಾಮನಂ: ಕುಂಭಕರ್ಣನನೆಬ್ಬಿಸುವರೆ? ಹಾ!
ಪ್ರಳಯ ಫಣಿಯಂ ನಿದ್ದೆಗೆಡಿಪರೆ? ಅವೇಳೆಯೊಳ್
ಹಬ್ಬಗೆಯ್ವರೆ ಜಗವನಾ ಮಿಳ್ತುಪೆರ್ಬುಲಿಗೆ?
ಮುಂದೆ ಗತಿ ಏನೆಂತೊ ತಮಗೆಂದು, ಗುಜುಗುಜಿಸಿ
ನೆರೆದುದು ಜನಂ, ತಂಡತಂಡದಿ ಬೀದಿಬೀದಿಯಲಿ!
ಹೇಳಲರಿಯದ ಭಯಂ, ವೈರಿಭೀತಿಗೆ ಮಿಗಿಲ್,
ದಿಗಿಲುಗೊಳಿಸಿತು ದೈತ್ಯರಕ್ಷಿತ ದುರ್ಗಲಂಕಾ
ಸಮಸ್ತಮಂ!
ವಿಷಯೇಂದ್ರಿಯದ ತೃಪ್ತಿಸಾಧನೆಗೆ
ತನ್ನಾತ್ಮದತಿನಿಗೂಢದ ತಮಶ್ಶಕ್ತಿಯಂ
ಸಾಹಾಯ್ಯಕಾಹ್ವಾನಿಸುವ ಪತಿತಯೋಗಿಯ
ಕುಬುದ್ಧಿಯೋಲ್, ತ್ರಿದಶೇಂದ್ರ ವೈರಿ ಪ್ರಚೋದಿತನ್
ಯೂಪಾಕ್ಷರಾಕ್ಷಸಂ ಸರ್ವಸನ್ನಾಹದಿಂ
ಕುಂಭಕರ್ಣನ ಮಲಗುದಾಣಕೆ ಸಮೀಪಿಸಲ್
ಮುಂದೆಸೆದುದು ವಿರಿಂಚಿಶಾಪದ ವಿಚಿತ್ರ ಕೃತಿ,
ಮತಿಗೆ ಮೇಣ್ ವಿವರಣೆಗೆ ವರ್ಣನಾತೀತಮಹ
ಸರ್ಪರಜ್ಜು ಭ್ರಮೆಯ ಸದಸದಾತ್ಮಕ ಮಾಯೆಯೋಲ್:
ಸ್ಥಾವರವೊ ಜಂಗಮವೊ? ಬಂಡೆಗಳೊ ಮೋಡಗಳೊ?
ಗಿರಿಯೊ ಗಗನವೊ ಜಡವೊ ಚೇತನವೊ? ನಿದ್ರೆಯೋ

ಮೇಣದ್ರಿಯೋ? ಕಾಣೆನಸುರನನಲ್ಲಿ! ನೆನೆಯೆ,
ನೆನೆದಂತೆ, ನೆನೆದುದೆ ತೋರುತಿದೆ ನೆನೆದವರ್ಗೆ!
ಪಂತಿಗಟ್ಟಿದರಲ್ಲಿ ಮಿಗಗಳಂ. ಕಾಳ್ದಂದಿ
ಕಾಳ್ಕೋಣ ಕುರಿ ಕೋಳಿ ಗೂಳಿ ಮೊದಲಾಗವಂ
ಸುತ್ತುಂಬರಿಸಿ, ಹರಸಿ. ಚರಿಗೆ ಚರಿಗೆಯಲಿ ಚರು
ಬೆಟ್ಟವಿಳ್ದುದು ಬಣ್ಣಗೂಳ್. ಒರಲ್ ಕೂಗುಗಳ್
ಅರಚುಗಳ್ ಹೂಂಕಾರಗಳ್ ಕೇಕೆ ಕೊಕ್ಕೊಕೋಗಳ್,
ಮಾರಿಗುಂ ಕಿವಿಗೆ ಕರೆಕರೆ ಕರೆಯೆ, ನೆರೆದುವು
ನಿಶಾಚರನ ನಿದ್ರಬೂತಿಗೆ ಸಿದ್ಧ ಬಲಿಯಾಗಿ.
ಮೇಣ್, ತಮಶ್ಚರ ತಮೋಜಾಗ್ರತಿಗೆ ಪಾನಕಂ
ಹಂಡೆ ಹಂಡೆಯಲಿ ನೂರೆನೂರೆ ಹೆಂಡವಣೆಯಾಯ್ತು!
ಊದಿದುವು ಕಹಳೆವರೆ; ಎದ್ದುದು ಧೂಪ ಧೂಮಂ:
ಅಥರ್ವಣಾವನೋದಿದರ್ ದುರ್ಮಂತ್ರ ಕೋವಿದರ್:
ಪೂರ್ಯೆಸಿದುವು ಶಂಖಗಳ್; ಜೇಗಟೆಗಳೊಡನೆ
ಬೊಬ್ಬೆಯಿಟ್ಟುವು ಘಂಟೆ; ಕಿವಿ ನಿಮಿರೆ ದಿಗ್ಗಜಕೆ
ಜಗಭಯಂಕರವಾಯ್ತು ನಿರ್ಘೋಷ.
ಇರಲಿರಲ್,
ತೆರೆದೆಮೆಯನಿಕ್ಕದ ಕುತೂಹಲದೊಳೀಕ್ಷಿಸಿರೆ,
ದೈತ್ಯ ಭೀಮನ ಸುಪ್ತಿನೀಹಾರಿಕೆಯ ನಡುವೆ
ಮಬ್ಬುರ್ಮಬ್ಬಾರ್ವಿರ್ಭವಿಸಿತಿಬ್ಬನಿಯ ದಿನದ
ಪೊಳ್ತರೆಯೊಳೆಂತಂತೆ ವೃಕ್ಷರೂಕ್ಷಚ್ಛಾಯೆ!
ಚಾಚಿ ಹಬ್ಬಿರ್ದ ಹರೆಗಳನೊಯ್ಯನೊಯ್ಯನೆಯೆ
ಬಾಚಿ ಜೋಡಿಸಿ, ತಿರುಗಿತು ಸರೀಸೃಪಾಕೃತಿಗೆ!
ಜ್ವಲಿಸಿದುವು ಕಣ್; ಚುರುಚುರುಂಗುಟ್ಟಿದುವು ರಕ್ತ
ಪಾಟಲ ಕುಟಿಲ ಚಟುಲ ಸುವಿಭಕ್ತ ಜಟಿಲಗಳ್
ಜಿಹ್ವೆ! ತೊನೆದುದು ತೂಗಿ ಬಹು ಫಣಾ ಶೀರ್ಷಮಂ,
ಗದಾಭಯಂಕರಮೆನೆ, ಶಿರೋಧಿ! ವ್ಯಾಳೋಗ್ರಮಂ
ಮಿಳ್ಮಿಳನೆ ನೋಡುತಿರೆ, ತೂಪಿರಿದುದುಃಘಂದು
ಬಿಸಿಯುಸಿರ್ ವಿಷಗಾಳಿಯಂ: ಸೀಮುರುಳ್ದುದು
ಸಮೀಪದ ಜನಂ! ಚೀರುತೋಡಿದರ್ ಮಿಕ್ಕವರ್:
'ಪಿಂಗಾಕ್ಷಿವೆಸರ ಭೂತಿನಿ ಕಣಾ! ಕೊಲ್ಲಿಮಾ

ಕಾಳ್ಕೋಣನಂ ಬಲಿಗೆ! ತಡಮಾಡದಿರ್; ತಡೆಯೆ
ಬಲಿಗೊಳ್ವುದೆಮ್ಮಂ!' ಪುರೋಹಿತನ ರೋದನಕೆ
ಕಡಿತಲೆಯವಂ ಕಡಿದನಾ ಕೋಣಮಂ. ಪಿಡಿದು
ಪೆರ್ದೊನ್ನೆಗಳಲಿ ಶೋಣಿತವನರ್ಪಿಸಿದರಾ
ಮಂತ್ರವಾದಿಗಳಂತೆ ಚೆಲ್ಲಿದರು ಭಸ್ಮಮಂ
ಭೂತಮಂತರ್ಧಾನಮಪ್ಪಂತೆ!
ಪೋಗಲಾ
ಭೂತಂ, ವಿಕಾರಾಕೃತಿಯ ಶಿಂಶುಮಾರಗಳ್
ನಕ್ರಗಳ್ ಮಕರಗಳ್ ಮತ್ಸ್ಯಗಳ್ ಮೇಲೇಳೆ,
'ಇವು ಕಣಾ ಜಲಪಿಶಾಚೋತ್ಕರಂಗಳ್; ಕೊಡಿಮ್
ಬಲಿಯನ್' ಎನೆ, ಕಡಿಕಡಿದು ಚೆಲ್ಲಿದರು ನೆತ್ತರಂ
ನಾನಾಮೃಗಂಗಳಿಂ. ಮರೆಯಾದುವವುಃ ಮರಳಿ
ಮೂಡಿದುವು ಭೀಕರದ ಪಕ್ಷಿರೂಪಗಳಂತೆ
ಪ್ರಾಣಿಯಾಕಾರಗಳ್.–'ಇವು ಕಣಾ ಮೃತ್ತಿಕಾ
ದೇವತೆಗಳನುಚರರ್; ಬಲಿಗೊಡಿಮ್; ತಳುವಿದರೆ
ಬರಿದಪ್ಪುದೀ ಲಂಕೆ!'—ಕಡಿಕಡಿದು ಕೆಡಹಿದರ್
ಕುರಿಕೋಳಿ ಲಕ್ಕಮಂ. ಬಿಕ್ಕಿದರ್ ಬೂದಿಯಂ.
ಕೂಗಿದರ್ ತಡೆಮಂತ್ರಮಂ! ಮಾಯವಾದುದೆ
ತಡಂ, ಮತ್ತಮೊಂದೆದ್ದುದೈ, ಕಾಣ್, ಮಹಾದ್ಭುತಂ!
ಹೇಮಂತ ಸೂರ್ಯೋದಯಂ ತುಷಾರ ಪಟಮಂ
ಪೃಥುಲ ಪೃಥ್ವೀ ಮುಖದಿನೋಸರಿಸೆ, ವೃಕ್ಷಮಯ
ಸಸ್ಯಸುಂದರ ಸಹ್ಯಗಿರಿಶೃಂಗಮೊಯ್ಯನೆಯೆ
ಮೆಯ್ದೋರುವಂತೆ, ಮೂಡಿದುದು ಸೌಧೋನ್ನತಂ
ಸೌಧಗಾತ್ರದೊಳೊಂದು ವಿಗ್ರಹಂ ಪುಂಗವ
ಪ್ಲವಂಗದಾ. ಕಪಿರೂಪದುಗ್ರತೆಗೆ ಬಡಿದುದೊ
ಭಯಗ್ರಹಂ ನೆರೆದ ರಾಕ್ಷಸ ನಿವಹಮಳರಲ್ಕೆ.
ಗಿರ್ರನೆಯೆ ತಿರುಗಿಸುತೆ ಕಣ್ಣಾಲಿಯಂ, ಕಡಿದು
ದವಡೆಯನೊರಲ್ದತ್ತು, ನಡ ನಡ ನಡುಗಿ ಲಂಕೆ
ಗೃಹಗೃಹ ಗುಹಾಧ್ವನಿಗಳಿಂ ಪ್ರತಿಧ್ವಾನಮಂ
ಪುಯ್ಯಲ್ಚೆ! 'ಇದು ಕಣಾ ಕುಂಭಿಕಾಭೂತಂ!
ಸಮರ್ಥಂ ತ್ರಿಕೂಟಾಚಲವನೆತ್ತಿ ಬಿಸುಡಲ್ಕೆ!

ತಡೆ, ತಡೆಯೊ, ಏ ಕಡಿತಲೆಯ ಕುಂಬಾರ! ಕಡಿಯದಿರ್,
ಕಡಿಯದಿರ್! ಕೊಡಿಮಿಡಿಯ ಪೆರ್ಬ್ಬಂದಿಯಂ! ಕಡಿಯೆ
ಕೆರಳುತೆಂಜಲಿಗೆ ಕುಡಿವುದೊ ನಿನ್ನ ನೆತ್ತರಂ!'
ಇಡಿಯಿಡಿಯ ಕಾಳ್ಪಂದಿಗಳನೆತ್ತಿ ತುಯ್ದುಸೆಯೆ
ಬೀಳಗೊಡದೆಯೆ ಪಿಡಿದುದಾ ಮಹಾಮರ್ಕಟಂ;
ಪೀರ್ದುದು ಕೊರಳ್ಮುರಿದು ವನವರಾಹನ ರುಧಿರ
ಮದಿರೆಯಂ; ಹಿಂಡಿಕೊಂಡುದು ತನ್ನ ಬಾಯ್ಬಿಲಕೆ,
ತಿಲದಿಂದೆ ತೈಲಮಂ ಪಿಳಿವ ಗಾಣಿಗನಂತೆ,
ನೆಣಮಜ್ಜೆಯಂ! ಬಲಿಗೆ ತಣಿದಾ ಪಿಶಾಚಂ
ತಿರೋಹಿತಂ ತಾನಾಗುತಿರೆ, ಕಾರ್ಮುಗಿಲ್ ಕವಿದು
ಬೀಸಿದುದು ಕಾರ್ಗಾಳಿ; ಕೂರ್ಪಿನಿಂದೆರಗಿದುದು
ಮಿಂಚಿನಂಚಿನ ಸಿಡಿಲ್; ಕುಂಭದ್ರೋಣಮೆನೆ
ಕರೆದುದು ಮುಸಲಧಾರೆ. ಪೇಳ್ವುದೇನಾ ಸರಿಗೆ
ಕರಗಿದುದೊ ಶಾಪಸುಪ್ತಿಸ್ತೂಪವೆನೆ, ಪುತ್ತು
ಕರಗಲ್ ತಪಂಗೆಯ್ವ ಕಿತ್ತಡಿಯ ಮೆಯ್ವರಿಜು
ಕಣ್ಬೊಲಕೆ ಬೀಳ್ವಂತೆ, ಕಂಡುದು ಮಹಾಶಯ್ಯೆ ತಾಂ
ಪೊತ್ತ ಪೇರೆರ್ದೆಯ ಪೊದೆದಲೆಯ ದಾನವಭವ್ಯ
ಕುಂಭಕರ್ಣನ ಮಹದ್ ವಿಗ್ರಹಂ! ಘೋ ಎಂದು
ನಲಿದುದು ಜನಂ. ಸ್ತೋತ್ರಪ್ರಗಾಥಮಂ ಪಾಡಿ
ಕುಣಿದಾಡಿದರ್: "ಏಳೊ, ಲಂಕಾ ರಕ್ಷಕನೆ! ಏಳ್,
ಏಳೊ, ರಿಪುಯಮಶಿಕ್ಷಕನೆ! ಏಳ್, ಜಗದ್‌ಗರ್ವ
ಭಕ್ಷಕನೆ! ಭೀತಿ ಮುತ್ತಿದೆ ಲಂಕೆಯಂ. ಮಿತ್ತು
ತುತ್ತುಗೊಳ್ಳಲ್ ಸುತ್ತಿ ಕಾದಿದೆ! ಲಯಂ ಬೆದರೆ
ಏಳ್! ಏಳ್ ರಿಪುಪ್ರಾಣವಾರ್ಧಿಯಂ ಶೋಷಿಸಲ್,
ಪೋಷಿಸಲ್ ದೈತ್ಯಗೌರವರೂಪಿಯೀ ಲಂಕೆಯಂ!"
    ನಿದ್ದೆ ತಿಳಿದೆದ್ದನೊಯ್ಯನೆ ದೈತ್ಯಭಾಸ್ಕರಂ
ಮೆಯ್ಮುರಿದು, ಕಣ್ಣುಜ್ಜಿಕೊಂಡಾಕಳಿಸಿ, ನೀಡಿ
ನಿಡುದೋಳ್ಗಳಂ ಲಟಿಕೆ ಮುರಿದೆದ್ದು ಕುಳಿತನ್
ಭಯಂಕರಾಕಾರಿಃ ಸುಗ್ರೀವ ವಾಹಿನಿಗೇನೊ
ತಿಳಿಯದೊಂದೆಳ್ದು ಚಲಿಸಿತೊ ಭಯ ಪುಲಕ ವೀಚಿ!
ವಾನರ ಪ್ರಾಣಶಕುನಿಗಳಿರದೆ ಚೀರಿದುವೊ

ಹಾನಿಯ ಭವಿಷ್ಯಮಂ! ತನ್ನ ಶಾಪಕ್ಕಾದ
ಅಕಾಲ ಮುಕ್ತಿಗೆ ಖಿನ್ನನಾದನೊ ಚತುರ್ಮುಖಂ
ಎನೆ, ಬಹಿಃಪ್ರಜ್ಞೆಗಿಳಿದನ್ ದೈತ್ಯ ಭಯ ತಿಮಿರ
ಭಾನು! ಪೊನ್ನಿಂ ಪೆಣೆದ ಪೆಡಗೆ ಕುಕ್ಕೆಗಳಿಡಿಯೆ
ಮೃಗಪಕ್ಷಿ ಪಕ್ವ ಪರಿಮಳ ಪಲಾನ್ನಂಗಳಿಂ,
ತಂದಡಕಿದರು ರಾಕ್ಷಸರ್, ರಾಕ್ಷಸನ ಮುಂದೆ,
ಸಾಲುಸಾಲ್ ಮೆರೆಯೆ ಕಾಲ್ಮಣೆಯೋಳಿಯೋಳಿಗಳ್,
ದೈತ್ಯ ದೈತ್ಯಕ್ಷುಧಾ ಸಂತುಷ್ಟಿಯಂ; ಮೇಣ್ ತೃಷೆಗೆ
ನೆರೆದುವೈ ಭಾಂಡಗಳ್ ಡಿಂಡೀರಮಯ ಸುರೆಯಾ!
ಕ್ಷಾಮಂ ಸುಭಿಕ್ಷಮಂ ಸಂಧಿಸಿದವೋಲಾಯ್ತು:
ಕುಡಿದು ತಿಂದನ್; ತಿಂದು ಕುಡಿದನ್; ಕುಡಿ ಕುಡಿದು,
ತಿನ್‌ತಿನ್ದು ತೇಗಿದನ್; ನಡುನಡುವೆ ನಲ್ಮೆ ಮಿಗೆ
ಗಹಗಹಿಸಿ ಕೂಗಿದನ್, ತಲೆದೂಗಿದನ್! ಮಿಗತನವ
ಮೀರ್ದ್ದುಮದರಿಂ ಮೂಡಿಬಂದಾ ಮನುಷ್ಯತೆಯ
ಮನದ ತೃಷೆ ತಾಂ ತತ್ತ್ವವಿದ್ಯಾಕಲಾ ರಸದಿಂದೆ
ತೃಪ್ತಿಗೊಂಡಟ್ಟಹಾಸದಿ ಕೇಗಿ ಪುಕ್ಕಂಗೆದರಿ
ಕುಣಿವಂತೆವೋಲ್ ತಣಿದು ಕುಣಿದುದು ಕುಂಭಕರ್ಣ
ಮಯೂರಹೃದಯಂ!
ಸಮಯವದೆ ಸರಿಯೆಂದು ಬಗೆದು
ತನ್ನಿದಿರ್ ಬಂದು ಕೈಮುಗಿದ ಯೂಪಾಕ್ಷನಂ
ನೋಡಿ, ಗುರುತಿಸಿ, ಕೇಳ್ದನೆನ್ನನಿಂತವಧಿಯಂ
ಕಡೆಗಣ್ಚಿ ಏಕೆಳ್ಚಿಸಿದಿರೆಂದು. ಪ್ರಶ್ನಧ್ವನಿಗೆ
ಸೆಡೆತು, ಬಿನ್ನಯ್ಸೆ ನಡೆದನಿತುಮಂ; ಬಿಸುಸುಯ್ದು
ಕಣ್ಮುಚ್ಚಿ ಜಾನಿಸಿ: "ವಿಭೀಷಣಂ ಲಂಕೆಯಂ
ತೊರೆದನೇ? ಮಹಾತ್ಮಂ ಮಹಾಪಾರ್ಶ್ವನಳಿದನೇ?
ಮಲಗಿದಾನ್ ಅವಧಿ ತುಂಬುವ ಮುನ್ನಮೆದ್ದನೇ?
ಸಾಲ್ಗುಮೀ ಮೂರೆ ಕೇಡುಗಳೆಮ್ಮ ಲಂಕಾ
ವಿನಾಶನಕೆ!" ಎನುತೆ ತನ್ನೊಳಗೆ ತಾಂ ನೊಂದನೋಲ್
ನುಡಿದುಕೊಳ್ಳುತೆ, ಮತ್ತೆ ಯೂಪಾಕ್ಷನಂ ಕುರಿತು
ಬೆಸಸಿದನ್:
"ನಡೆ, ಪೇಳ್, ಪ್ರಭುಗೆ ನಾನೆಳ್ದುದನ್;

ಬಂದು ಕಾಣುವೆನಾತನಂ ತಡೆಯದೀಗಳೆಯೆ;
ಮೇಣ್, ಸಿದ್ಧಗೊಳಿಸೆನ್ನ ಯುದ್ಧಸನ್ನಾಹಮಂ!''
   ದಿಗ್ಗಜಗಳೆಂಟನೇನ್ ಅಳವಡಿಸಿದರೊ ಧರಾ
ಸ್ಯಂದನಕೆ? ಬಂದುದು ಬೃಹದ್ರಥಂ, ಪೊತ್ತೆಳೆವ
ಪೇರಾನೆಗಳ್ ಪೆಗಲೆಂಟರೊಳ್ ಕುಸಿವಂತೆವೋಲ್!
ಚೀತ್ಕರಿಸೆ ರಥಚಕ್ರಮಚಲಭಾರಕ್ಕೊರಲೆ
ಕೀಲುಗಳ್, ನಿಡುಸುಯ್ಯಲಿಭತತಿ ಕೊರಲ್‌ನೆಗ್ಗಿ,
ತೇರೇರಿದನು ದನುಜಮಲ್ಲಂ. ಬೃಹದ್ ರಥಂ,
ನಡುಗಲಿರ್ಕೆಲದಚಲಸೌಧಶ್ರೇಣಿ, ಗುಡುಗಿ
ನಡೆದುದೂರ್ಮಿಗಳಲೆಯೆ ರಾಜಪಥಮಂ. ತನ್ನ
ಧೈರ್ಯದ್ರುಮದ ಬೇರ್ಗೆ ಜೀವಾತು ಜೀವನವ
ತರುವ ತಮ್ಮನ ಬರುವ ಗೌರವಕೆ, ಸಂತಸಕೆ,
ನಗರಶೋಭೆಗೆ ದಶಶಿರಂ ಬೆಸನನೀಯದಿರೆ
ಹುಡಿಯೇಳದಿರುತಿರ್ದುದೇ ಪಥಂ? ಕಿಡಿಗೆದರಿ
ಸುಡದೆ ಬಿಡುತಿರ್ದುದೆ ರಥಂ ಗುಡಿಯ ತೋರಣದ
ವರ್ಣ ವಸ್ತ್ರಾಳಿಯಂ? ಜೀರ್ಕೋವಿ ಚಳೆಯದಿಂ
ತೊಯ್ದವನಿ ಧೂಳೆದ್ದುದಿಲ್ಲೆದ್ದುದು ಕೆಸರ್. ಜನಂ
ಕೊರಳೆತ್ತಿ ಕೂಗುತಿರೆ ಜಯಘೋಷಮಂ. ಮುಗಿಲ್
ಮುಟ್ಟಿದರಮನೆಗಳುಪ್ಪರಿಗೆಗಳನೇರಿರ್ದ
ಲಂಕಾಲತಾಂಗಿಯರ್ ಪೂವಳೆಯನೆರಚುತಿರೆ,
ತೇರ್ ಸೇರ್ದುದರಮನೆಗೆ. ದೈತ್ಯವಿಕ್ರಮನಿಳಿದು
ಪೊಕ್ಕನು ರಾಜಗೌರವಸಹಿತ ಚಕ್ರವರ್ತಿಯ
ನೆರಪಿದೋಲಗಕೆ. ಗಜರಿದುವು ಗೌರವಭೇರಿ,
ವಂದಿಮಾಗಧರುಲಿಯ ಸೇರಿ. ದಿಗ್ಗನೆ ನಿಂದು
ಪಣೆಗೈಯಾಗಿ ಮಣಿದುದು ಬಾಗಿ ಆಸ್ಥಾನ.
ಸಿಂಹ ಸಿಂಹಕೆ ಸುಖಾಗಮನಮಂ ಬಯಸುವೊಲ್
ಸಿಂಹಾಸನವನಿಳಿದು ಸಿಂಹಗಾಂಭೀರ್ಯದಿಂ
ಸ್ವಾಗತಿಸಿದನು ತನ್ನ ತಮ್ಮನಂ ಸುಸ್ಮಿತ
ದಶಾನನ ನಿಶಾಚರೇಂದ್ರಂ. ಮೆಯ್ಗೆ ಮೆಯ್ ಸೋಂಕಿ
ರತ್ನವಿಷ್ಟರದಿ ರಾವಣ ಕುಂಭಕರ್ಣರಿರೆ,
ಇಷ್ಟದರ್ಶನವಾದುದಿನ್ನೆನಗದೆತ್ತಣದೊ

ಕಷ್ಟಮೆಂಬುವ ಮತಿಯ ನಿಶ್ಚಿಂತೆಯೋಲಂತೆ,
ಕುಳಿತುದು ಸಭಾ ಸಮೂಹಂ.
ರಾಜಕೀಯಮಂ,
ಕುಂಭಕರ್ಣನ ನಿದ್ದೆತೊಟ್ಟು ನಡೆದನಿತುಮಂ,
ವರದಿಯೋದಿದನು ಸಚಿವೋತ್ತಮಂ. ತನ್ನಂ
ಮೊಗಂ ನೋಡಿದಣ್ಣನಿಂಗಿತವರಿತನೆದ್ದನು
ಮಹೋನ್ನತಂ. ನೆರವಿ ನಿಶ್ಶಬ್ದಾಬ್ಧಿಗದ್ದಿರಲ್
ಪೂಣ್ದನಭಯವನರಿಭಯಂಕರಂ ಇಂತುಟಾ
ಕುಂಭಕರ್ಣಂ:
"ಮೊದಲೆ ನೀಮೆನ್ನನೆಳ್ಚರಿಸೆ
ಇನಿತು ಕೇಡಡಸುತಿರ್ದುದೆ ನಿಮ್ಮ ಮಂಗಳಕೆ?
ವೈರಿಗಳ್ ನಿಮಗೆ ನೀಮಾದಿರಲ್ಲದೆ ಪೆರರ್
ವೈರಿಗಳೆ? ಗೀರ್ವಾಣರಳ್ಕುವೀ ರಾಕ್ಷಸ
ಮಹಾಬಲಕೆ ಪೇಳ್ ಕಪಿಧ್ವಜರಿದಿರೆ? ನಿಮ್ಮ ಸೋಲ್
ನಿಮ್ಮಿಂದಲಾಯ್ತು. ಧರ್ಮಾಧರ್ಮಮಂ ಕುರಿತು
ಪೇಳ್ವುದೆನಗಪ್ರಕೃತಮಿಲ್ಲಿ. ಧರ್ಮದೊಳೆನಗೆ
ಭೀತಿ ಬೇರಿರಬಹುದು. ನೀತಿ ರೀತಿಯೊಳೆನ್ನ
ಪ್ರೀತಿ ಬೇರಿರಬಹುದು. ಕಜ್ಜ ಮುಂಬರಿದಂದು
ಪ್ರಭುಚಿತ್ತಕನ್ಯಮಂ ಪೇಳ್ವುದು ನಿರರ್ಥಕಂ.
ಈಗಳೆನಗಗ್ರಜನ ಗುರಿಯೆ ಗುರಿ, ಗತಿಯೆ ಗತಿ,
ಮತಿಯೆನಿತು ಬೇರಿರ್ಪೊಡಂ. ವಿಭೀಷಣನಂದೆ
ತೊರೆದನ್; ಮಹಾಪಾರ್ಶ್ವನಿಂದು. ನಾನೆದ್ದನಿನ್
ಲಂಕೆಯಾತ್ಮಕೆ ಪರಮಕಲ್ಯಾಣಮಾಯ್ತೆಂದೆ
ಭಾವಿಸಿಮ್! ನರಕವಾಗುತ್ತಿಂದು ಪಗೆಗೆ ನಾಂ
ಸ್ವರ್ಗಮಂ ತೋರ್ದಪೆನ್; ಪಿಂತೆಂದುಮಿಂತುಟು
ಪೊಣರ್ದನಿಲ್ಲೆನೆ, ಯಕ್ಷ ಗಂಧರ್ವ ದೇವಾದಿ
ಭುವನತ್ರಯಂ ಭಯಗ್ರಸ್ತಮಪ್ಪಂತೆವೋಲ್
ಕಾದುವೆನ್. ಇಂದ್ರನ ಉರಃಸ್ಥಲ ಸರೋಜಲಂ
ಕದಡೇಳೆ ಮಿಂದೀಂಟಿ ನಾಂದೆನ್ನ ಮುದ್ಗರಕೆ,
ತರುದೀರ್ಘ ದಂಡದಿಂ ಗಿರಿಭಾರ ರುಂಡದಿಂ
ಜವನ ಬೆನ್ನೆಲ್ಬು ಸೋಂಕಿಗೆ ಕಬ್ಬುನದ ನವಿರ್

ನಿಮಿರ್ದವೋಲಿರ್ಪ ಈ ರುಧಿರಮುಖಿ ರುಧಿರನಖಿ
'ಮುಸಲ ಕೇಶಿನಿ'ವೆಸರ ನನ್ನತುಲ ಮುದ್ಗರ
ಮಹಾಯುಧಕೆ, ಕುಡಿಸುವೆನು ಖರನ ಕೊಂದವನೆದೆಯ
ಶೋಣಾಂಬುವಂ! ಕುಳುಂಪೆಯನಾನೆ ಕಲಂಕುವೋಲ್
ಕಪಿವಾಹಿನಿಗೆ ವಾರಿಯಾರಿ ಕೆಮ್ಮಣ್ಣೆಸರ್
ಮೂಡಿಪೆನ್! ವಿಕ್ರಿಯಾ ಬಲದಿಂದಗುರ್ಬ್ಬಿಪೆನ್,
ಬಾನ್‌ಪವಣ್ಗುರ್ಬಿ! ತ್ರೈಲೋಕ್ಯ ಭೀಕರಮೆನಲ್
ನುಚ್ಚುನುರಿಗೈವೆನರಿಶಿರೋಗಿರಿಗಳಂ! ಮೇಣ್
ರಣಮಾರಿಗರೆಯಾಗಿ ಓಕರಿಪ ಮಾಳ್ಕೆಯಿಂ
ಕಡಿದು ಬಡಿದು ಕುರಿದರಿಯೊಟ್ಟುವೆನು ಮಾರೀಚ
ಸೂದನಗೆ ಮೇದಿನೀಸುತೆಯ ನೆವದಿಂದೆಮ್ಮ
ಮೇದಿನಿಯ ಗೆಲ್ದೀಯಲೆಂದು ಬಂದವರೊಡಲ
ತೊರಳೆ ಮಾಂಸಂಗಳಂ! ಶ್ರೀಮಹಾಪಾರ್ಶ್ವನಿಂ
ಕಟ್ಟೇರ್ವಡೆದು ಹೊಕ್ಕಿಹುದು ತನ್ನ ಹಕ್ಕೆಯಂ
ಪಗೆ ಮಿಗಂ. ಸೊರ್ಕುಗುಂದಿಹುದದರ ಭಯವಿಂದು
ಬೇಡೆಮಗೆ. ನಾಳೆ ಪೊಳ್ತರೆಯ ರಣಕೀ ರಾತ್ರಿ
ಸಿದ್ಧನಾಗುವೆನೇಳಿ, ನೆಮ್ಮದಿಯ ಬಗೆಯಿಂದೆ
ನಡೆಯಿ ನೀಂ ಮನೆಗೆ. ಲಂಕೆಯ ಜಸಂ ಗೆಲ್ಗೆ, ಬಾಳ್ಗೆ!''
ಎದ್ದುವು ಜಯಧ್ವನಿಗಳೊಡನೆ ಕೈಪರೆ. ಸದ್ದು
ನಡುಗಿಸಿತು ಸಭಾಸೌಧಾಂತಮಂ. ಕುಂಭಕರ್ಣಂ
ಕುಳಿತುಕೊಳ್ವನಿತರೊಳೆ ದಿಗ್ಗನೆಳ್ದಪ್ಪಿದನು
ದನುಜೇಂದ್ರನವರಜನ ಗಿರಿಧೀರ ಗಾತ್ರಮಂ.
ತನ್ನ ಹೊರೆಯರಿತವಂ, ರಿಪುಬಲವನರಿತವಂ,
ತಮ್ಮನೊಂದದ್ಭುತ ಪರಾಕ್ರಮವನರಿತವಂ,
ದನುಜೇಂದ್ರನವರಜನ ಗಿರಿಧೀರ ಗಾತ್ರಮಂ
ದಿಗ್ಗನೆಳ್ದಪ್ಪಿದನು ಬಲ್ದೋಳ್ಗಳಿಂ ಬಿಗಿದು,
ಅಮೃತಲೋಭಿಗಳಸುರರಂದು, ಸುರರ ಲಾಭಕೆ,
ಭುಜಂಗೇಂದ್ರನಂ ಬೀಸಿ ಬಿಗಿದಂತೆ ಮಂದರದ
ಮೆಯ್ಗೆ. ಬಾಯ್ತುಂಬಮೆನೆ ಪೊಗಳಿದನು ತಮ್ಮನಂ;
ತೆಗಳ್ದನಿಂಗಿತದಿಂ ವಿಭೀಷಣ ಚರಿತ್ರೆಯಂ.
ತೊಡಿಸಿದನು ಕೇಯೂರಮಂ ತೋಳ್ಗೆ; ತೊಡಿಸಿದನು

ಭುಜಕಂಗದಾಭರಣಮಂ; ಮಹಾಹಾರಮಂ
ತೊಡಿಸಿದನು ಕಂಠಕೆ, ಸತೋಯ ನೀಲಾಂಬುದಕೆ
ಸುರಧನುಸ್ ಶೋಭೆಯಂ ನೀಳ್ಪ ರವಿಕರದಂತೆ,
ರತ್ನರಮಣೀಯ ವಜ್ರದ್ಯುತಿಯ ನಿಷ್ಕಮಂ;
ತೊಡಿಸಿದನು ಚಾಮೀಕರಾಂಕಿತ ಬೃಹತ್ ಕವಚಮಂ,
ವಿವಿಧ ಬಿರುದಿನ ತಾರೆಗಳ್, ಕ್ಷಾತ್ರ ತೇಜಕ್ಕೆ
ನಕ್ಷತ್ರ ಸಾಕ್ಷಿಗಳೆನಲ್, ತಳತಳಿಸಿ ಪೊಳೆಯೆ
ರಾಕ್ಷಸ ವಕ್ಷದಂತರಿಕ್ಷದಲಿ. ತಮ್ಮನಂ,
ಸಂಧ್ಯಾಭ್ರಸಂವೀತ ಶೈಲೇಂದ್ರನೋಲಂತೆ
ನಿಂದತುಲ ಬಲಸಿಂಹನಂ, ಪ್ರಶಂಸಿಸಿ ನೋಡಿ
ಹರಸಿದನು ರಾವಣಂ:
"ಪೋಗು, ನಡೆ; ಪಗೆಪಡೆಯ
ಕಡಲ ಕಡೆ! ಸೋಲ್‌ನಂಜನರಿಗುಣಿಸಿ ಬಾ; ತಾ
ಗೆಲ್‌ಸೊದೆಯನೆಮಗೆ! ವಾನರ ಭಯಂಕರನಾಗು;
ನರವರ ಭಯಂಕರಂ ನೀನಾಗು! ನಡೆ, ಪೋಗು,
ರಿಪುದಳಕ್ಕಿದಿರಾಗು, ತಾಗು; ಮಂಗಳವಾಗು
ಲಂಕೆಗೆ; ಜಯಶ್ರಿ ರಮಣನಾಗು! ಗೆಲಮಕ್ಕೆ,
ಶುಭಮಕ್ಕೆ, ನಿನಗೊಳ್ಳಿತಕ್ಕೆ; ವಂಶದ ಜಸಕೆ
ಪೊಂಗಳಸಮಕ್ಕೆ! ತಾಯ್‌ತಂದೆವಿರ ಸಂತಸದ
ಪದುಮಕ್ಕೆ ನೇಸರುದಯದ ಮುದಂ ತಾನಕ್ಕೆ!"
ಪರಿದತ್ತು ಪರಿಷದಂ. ಪರಿತೋಷದಿಂ ಮನೆಗೆ
ಪರಿದುದು ಜನಂ. ಹಬ್ಬಿದುದು ಸುದ್ದಿ, ಭಯ ಧೈರ್ಯ
ಸಂಮಿಶ್ರಿತಂ. ನಾಳೆ ಪೊಳ್ತರೆಗೆ ತನಗೇನೊ
ಗತಿಯೆಂದು ಮೈನಡುಗಿದಳು ಧರಣಿ; ಮುಳುಗಿದನ್,
ರವಿವಂಶದಾಗು ಹೋಗಿಗೆ ಹೆದರಿ, ಪಡುವಣ
ಗಿರೀಂದ್ರಮಂ ಮರೆವೊಕ್ಕ ತರಣಿ; ಪದಹತಿಗಳ್ಕಿ
ಕೂರ್ಮ ದಿಗ್ಗಜರೊರ್ವರೊರ್ವರ ಸಹಾಯಮಂ
ಬೇಡಿದರ್; ಭೋಗೀಂದ್ರನಾದೊಡಂ ಯೋಗಿಯೊಲ್
ಕೈಕೊಂಡನಾದಿಶೇಷಂ ಕುಂಭಕಾಭ್ಯಾಸಮಂ!

## ಸಂಚಿಕೆ ೨

# ರಸಮಲ್ತೆ ರುದ್ರದೃಷ್ಟಿಗೆ ರೌದ್ರಮುಂ!

“ಓವೊ ತಿಮಿರಾರಾತಿಗೇನ್ ಭಯಮೊ ಕೇಳ್? ಏಕೆ
ತಡೆಯುತಿಹನಾ ಅನೂರುವ ವರೂಥಾಶ್ವಖುರ
ವೇಗಮಂ, ಸಂಯಮಿಸಿ ಕರ ಖಲೀನಂಗಳಂ?
ಮೂಡಣದ ಮಲೆಯೇರಿ, ನಾಡೆಲ್ಲಮಂ ಬೆಳಗಿ
ತೋರಿ, ಖಗ ಕಂಠರುತಿಯಿಂದಿಳಾ ಶ್ರೇಯಮಂ
ಸಾರಿ, ಜವದಿಂ ಬರಲ್‌ಪೇಳ್! ಭಯಂ ಬೇಡಮಾಂ
ಸೀತಾ ರುಮೆಯರಯ್ದೆತನಕಿಂದು ಮುಡಿಪಿಡುವೆನ್
ಎನ್ನ ಕನ್ಯಾ ತಪಸ್ಸರ್ವ ಫಲಮಂ!” ಇಂತೆಂದು
ಬೆಸಸಿದಳು ಶಿವೆ ತನ್ನ ಕಿಂಕರಿಗೆ. ತಿರುಗಿದಳ್
ಶಂಕರನ ಕಡೆಗೆ. ಕೈಲಾಸಗಿರಿ ಶೃಂಗಕ್ಕೆ
ಕೋಡು ಮೂಡಿದ ತೆರದಿ ನಿಂದು ಭೂಲೋಕಮಂ
ಗಂಭೀರ ಮುಖಮುದ್ರೆಯಿಂದೆ ದಿಟ್ಟಿಸುತಿರ್ದ
ರುದ್ರದೇವಂ, ಕುರಿತು ತನ್ನುತ್ತಮಾರ್ಧಮೆನೆ
ಬಳಿ ನಿಂದ ಸತಿಗೆ ಪಾರ್ವತಿಗೆ ಕೈದೋರಿದನ್
ಲಂಕೆಯಿರ್ದೆಡೆಗೆ:
“ಕಾಣ್, ಗಿರಿಜೆ, ಕಾದಿಹುದಿಂದು
ನಿನಗೊಂದು ಕಣ್ಣೌತಣಂ. ಪಿಂತೆ ನೀನೆನಿತೆ
ರೌದ್ರಂಗಳಂ ಕಂಡೆಯಾದೊಡಂ ನೀನಿಂದು
ನೋಳ್ಪುದಕೆ ಹೊಯ್‌ಕಯ್ಗಳೊಳವೊ ಸಂದೆಯಮೆನಗೆ.
ತ್ರಿಪುರಹರನರ್ಧಾಂಗಿಯಾಗಿಯುಂ, ಸ್ಕಂದನಾ
ತಾರಕಧ್ವಂಸಿ ಕಂದನೆಯೆ ನಿನಗಾಗಿಯುಂ,

ನೀಂ ನೋಡವೇಳ್ಕುಮೀ ಕುಂಭಕರ್ಣ ಮಹೋಗ್ರ
ಸಂಗ್ರಾಮಮಮಂ. ಪ್ರಿಯಂ ಲಯಮೂರ್ತಿಗೆನಗಿವಂ
ಲಯಕರ್ಮಿ, ಮೇಣೆಂದೆ ತಾನುಂ ಲಯಾಭಿಮುಖಿ.
ನೋಡೆಮ್ಮ ಭೈರವನೆ ಪೊಕ್ಕಿರ್ಪನಾತನಂ
ದಾನವರ ವಾನರರ ದಳದೊಳ್ ಪ್ರಚೋದಿಸಲ್
ಪ್ರಾಣಪ್ರಲಯಮಂ!''
                              ಭವಾನಿ ಬೆದರಿದಳವನ
ನುಡಿಗೆ; ಎರಗಿದಳಡಿಗೆ: ''ಕರಗು, ಕರುಣಿಸು ನನಗೆ,
ವಿಷಧರೋರಗಧಾರಿ. ಕುವರಿ ಸೀತೆಯ ಹಣೆಯ
ಕುಂಕುಮಕೆ ಹಾನಿ ಬರದಿರಲಿ! ಮಗಳೂರ್ಮಿಳೆಗೆ,
ನೋಡಲ್ಲಿ ಸರಯೂ ನದಿಯ ತಟದಿ ನನ್ನನೆ
ನಿರಂತರಂ ಪೂಜಿಸಿ ತಪಂಗೆಯ್ವಳಿಗೆ, ಮುಡಿದ
ಹೂ ಬಾಡದಿರಲಿ! ಕಿಷ್ಕಿಂಧೆಯೊಳ್, ನೋಡಲ್ಲಿ,
ನೋಂತಿರುವ ರುಮೆಯ ತಾಳಿಗೆ ಭಂಗ ಬರದಿರಲಿ!''
ನಕ್ಕನಾ ಮುಕ್ಕಣ್ಣನಕ್ಕರೆಯನುಕ್ಕಿಸಲ್
ನುಡಿದಳ್ಗೆ ಜಗದಂಬೆಗಿಂತೆಂದು ತನ್ನಿಚ್ಛೆಯಂ:
''ನಿನ್ನಂಶಮಾ ಸೀತೆ. ನಿನ್ನ ಭಕ್ತರ್ ದೈತ್ಯ
ಸೋದರರ್. ನೀನೆ ಸಮ್ಮೋಹಿಸಿಹೆ ರಾವಣನ
ಮತಿಯನವನಿಷ್ಟಸಿದ್ಧಿಗೆ ಸಾಧನವನೊಡ್ಡಿ.
ನೀನೆಯೆ ಜಗನ್ಮಾತೆ, ಪುಟ್ಟಿಪಳ್, ಪೊರೆಯುವಳ್,
ಕೊಲ್ಲುವಳ್, ಕಾಯುವಳ್. ನೀನಿಲ್ಲದಾನೇನ್?
ನಿರಂಜನಂ, ನಿಷ್ಕರ್ಮಿ! ನೀಂ ವಾಣಿಯಾದಂದು
ನಾನಜಂ; ನೀಂ ಲಕ್ಷ್ಮಿಯಾದಂದು ವಿಷ್ಣುವಾಂ;
ರಜತಾದ್ರಿಯಿದೆ ಸತ್ಯಲೋಕಮಪ್ಪುದು, ಮತ್ತೆ
ವೈಕುಂಠಮುಂ ತಾನೆ ತೋರ್ಪುದಿಲ್ಲಿಯೆ, ಮಾಯೆ
ನೀನೊಲಿದವೋಲ್! ಪೇಳ್ವುದೆನ್ನಿಚ್ಛೆಯಾದೊಡಂ,
ಕೇಳ್, ಮಹಾಗೂಢಮದುಂ ನಿನ್ನ ವೃತ್ತಿಯೆ ದಿಟಂ!
ತನ್ನ ನಾಟಕದಿ ತಾಂ ಪಾತ್ರಧರನಾಗಿಯುಂ
ಪ್ರೇಕ್ಷಕನವೋಲ್ ನೋಳ್ಪ ಕವಿಸೂತ್ರಧಾರಿಯೋಲ್,
ಪ್ರಿಯೆ, ನೋಡು, ಕುಂಭಕರ್ಣನ ಲೋಕಭೀಕರ
ಮಹಾಭೀಳ ರಣಕಾವ್ಯಮಂ: ರುದ್ರದೃಷ್ಟಿಯಿರೆ

ರೌದ್ರಮುಂ ರಸಮಲ್ತೆ?''
                                   ಇಂತೆನುತ್ತಾ ಕಡೆಗೆ
ತಿರುಗಲಾ ಪರಮೇಷ್ಠಿ, ಹೊರಳಿತೊ ಜಗದ್‌ದೃಷ್ಟಿ
ಲಂಕೆಯತ್ತಣ್ಗೆ! ಶಿವೆ ಬಳಿಸಾರ್ದಳೀಶನಂ.
ಕಾಲಕೂಟಂ ಕುದಿಯೆ, ಪೆಡೆಯೆತ್ತಿದುವು ಸುಯ್ದು
ಕೊರಳ ಸುತ್ತಿದ ಗರಳ ಸರ್ಪಾಳಿ. ಕಾಳಗಕೆ
ಪೊರಮಟ್ಟ ಕುಂಭಕರ್ಣನ ರುಂದ್ರ ರೂಪಕೆ
ಜಗನ್ಮಾತೆಪಿತರಿಂತು ಕೈಲಾಸದೊಳ್ ನಿಂತು
ನೋಡಿದರೆನಲ್ಕಿನ್ ಮಿಗಿಲ್ ಪ್ರತಿಮೆ ತಾನಿಹುದೆ
ಪ್ರತಿಮಿಸಲ್ ಕವಿಹೃದಯ ಭೂಮಾನುಭೂತಿಯಂ?
ಮೇಣ್, ವಿಶ್ವ ಶಕ್ತಿಗಳ್ ಮನುಜ ದೃಷ್ಟಿಗೆ ದೇವ
ದೇವತೆಗಳೊಲ್ ತೋರಿ, ಸೃಷ್ಟಿಸಂಗ್ರಹಕಾಗಿ
ಚಣಚಣಮುಮವತರಿಸುತಿರ್ಪ ಕವಿದರ್ಶನದ
ಕಾವ್ಯಲೋಕದ ಸರ್ವಲೋಕ ಚಿರಸತ್ಯಮಂ?
    ಜಗದಂಬೆಯಟ್ಟಿದ ವಚೋಧೈರ್ಯಕೆ ಜಗಚ್ಚಕ್ಷು
ಮೂಡಿದನ್. ಪ್ರಥಮಕಿರಣಂ ತ್ರಿಕೂಟಾಗ್ರಮಂ
ಚುಂಬಿಸಿತು, ತಳತಳಿಸೆ ದಶಕಂಠನರಮನೆಯ
ಕುಂಭಾಕೃತಿಯ ಶಾತಕುಂಭ ಕಲಶಾಗ್ರಮಂ. ಮೇಣ್
ಶಕ್ತಿಯನುಸಂಧಾನದಲಿ ರಾತ್ರಿಯನಿತುಮಂ
ಕಳೆದು, ವಿಕ್ರಿಯೆಯಿಂ ಗಿರಿಸ್ಪರ್ಧಿಯೆನಲುಬ್ಬಿ
ಬಳೆದಗುರ್ಬಿಸಿ, ಯುದ್ಧ ಸನ್ನದ್ಧನಾಗಿರ್ದ
ಕುಂಭಕರ್ಣನ ಪೀನ ಕರ್ಣಕುಂಡಲ ರುಕ್ಮ
ಕುಂಭಮಂಡಲಗಳೊಳ್ ಪಗಲುಳ್ಕೆ ಪುಟ್ಟಲ್
ಪ್ರತಿಜ್ವಲಿಸಿತಾ ಪ್ರಭಾತಾತಪಂ! ಮತ್ತಮಾ
ಲಂಕೆಗಿದಿರೆಳ್ದೊಂದು ಶೃಂಗಸ್ಥಳದಿ ನಿಂದು,
ಸುಗ್ರೀವನಿಂ ರಿಪುವ್ಯೂಹಮಂ ಮೇಣದರ
ಚಲನವಿನ್ಯಾಸಮಂ ಕೇಳಿ ತಿಳಿಯುತ್ತಿರ್ದ
ರಾಮನ ನಿಷಂಗಾಗ್ರ ವಿಶಿಖ ಪುಂಖಂಗಳಂ
ಚುಂಬಿಸಿದುದಾ ಪೊಂಬಿಸಿಲ್. ಶಿತಾಯುಧ ಪಂಕ್ತಿ,
ಇರ್ಕೆಲದ ಪಡೆಗಳಿಂ, ಕಾರಿದುವು ಕಾಂತಿಯಂ,
ಕೋಟಿ ವಿದ್ಯುತ್‌ಕಿರಣರೋಚಿ ಓತಪ್ರೋತಮಂ

ನೆಯ್ದ ಜ್ಯೋತಿರ್ಜಾಲಮಂ.
                                        ಕಯ್‌ಪೊಯ್ವ ಸನ್ನೆಯಂ
ತೂರ್ಯಮೊಳ್ದುದೆ ತಡಂ, ಕಿವಿಬಿರಿಯಲಚಲಗಳ್
ಕಂಪಿಸಲ್, ದೆಸೆ ಮಸೆದುದ್ಘೆ ದನಿಯಾಃ ರಣಭೇರಿ
ಮೊಳಗಿದುವು; ಭೋರ್ಗರೆದುವು ಭಯಾನಕಾನಕಂ;
ಕೂಗಿದುವು ಕಹಳೆ; ಚೀರಿದುವು ನಿಸ್ಸಾಳತತಿ;
ಅಂಜೆ ಗಜಘಟೆ ಗಜರಿದುವು ರಂಜೆ; ಕುದುರೆಗಳ್
ಕುಣಿಕುಣಿದು ಪೊಣ್ಮಿದುದು ಹೇಷೆ; ಚೀತ್ಕೃತಿಯುಣ್ಮೆ
ಗರ್ಗರಿಸಿ ನುರ್ಗ್ಗಿದುವು ತೇರ್ಗಾಲಿ; ಘಂಟೆಗಳ
ಘೋರ ಘೋಷಂ ಬೆರಸಿ ಘೀಳಿಟ್ಟುವಾನೆಗಳ್;
ಕೋಟಿ ಕಂಠಂಗಳಿಂದಟ್ಟಹಾಸಂಗೆಯ್ದು
ಕೈದುವೆರಸಿದ ಕಯ್ಗಳಂ ನೆಗಹಿ ಕೂಗಿದರ್
ಕಾಲಾಳುಗಳ್ ಸಿಂಹನಾದಂಗಳಂ! ತನ್ನ
ಪೇರಾನೆದೇರೇರಿ ಕೋಂಟೆಪೆರ್ಬಾಗಿಲ್ ಬರಂ
ಬಿಜಯಗೈಯ್ದಾ ಕುಂಭಕರ್ಣಂ, ವಿಸರ್ಜಿಸುತೆ
ತನಗೆ ಗೌರವಮಾತ್ರದಂತಿರ್ದ ತೊಡಕನ್, ಆ
ರಥಮಂ ತಿರಸ್ಕರಿಸಿ ಭೂರಥಕ್ಕವತರಿಸಿದನ್.
ಸದ್ದಡಗಿದುದು ಕಪಿಸೇನೆಯಲಿ; ಮೂಗುವೆರಳಾಗಿ
ನೋಡುತಿರ್ದುದು ಕುಂಭಕರ್ಣನ ಮಹದ್‌ರುಂದ್ರ
ಗಾತ್ರಗಿರಿಯಂ ಮೂಗುವಟ್ಟಂತೆ! ನೋಡುತಿರೆ,
ಪಜ್ಜೆ ಪಜ್ಜೆಗೆ ತಿರೆಗೆ ಪುಟ್ಟಲ್ ಪ್ರಕಂಪನಂ,
ನೆಗೆತಮೊಂದಕೆ ದಾಂಟಿದನು ಬಲ್ಗೋಂಟೆಯಂ;
ನೆಗೆತಮೆರಡಕ್ಕೆ ದಾಂಟಿದನಗಳ್ತೆಯಂ ವಿಪುಲ
ವಿಸ್ತರದಾ. ದಾಂಟಿದನು ನೆಗೆತ ಮೂರಕೆ ತನ್ನ
ಮರ್ತ್ಯಾಯು ಮೇರೆಯಂ. ಕಾಲಾಂತಕನ ತೆರದಿ
ಕಾಲಿಕ್ಕಿದನು ಕಾಲವಶಿ ಕಾಲವಲಯಕೆ
ಅಕಾಲಮೃತ್ಯುವಿನಂತೆವೋಲ್! 'ಮುಸಲಕೇಶಿ'ನಿಗೆ,
ಗದೆಯುಂ ತ್ರಿಶೂಲಮುಂ ಮುಸಲಮುಂ ಖಡ್ಗಮುಂ
ಸರ್ವಾಯುಧಂಗಳುಂ ತನ್ನೊಳೊಂದಾಗಿರ್ದ
ದೈತ್ಯದೈತ್ಯನ ದೈತ್ಯಮುದ್ಗರಕೆ, ತಲೆ ತೊಯ್ದು
ಕೆನ್ನೀರ್‌ಬಸಿಯೆ, ಬಿರಿದು ಕೆಡೆಯೆ ಕಪಿರುಂಡಗಳ್,

ಬಡಿದಲ್ಲಿ ಬಯಲೇಳೆ, ಬಡಿತಬಡಿತಕೆ ನೆಲಂ
ಝುಗ್ಗನೆ ಕಣಿವೆ ಬೀಳೆ, ಬೀಸಿದನು, ಬಡಿದನ್,
ತಿರುಪ್ಪಿದನ್, ಜಪ್ಪಿದನ್, ಕೊಂದನರೆದನು ಕೋಟಿ
ಕಪಿಕುಲರಾ: ಇಂದಲ್ಲಿ ಐರೋಪ್ಯ ದೌಷ್ಟ್ಯಮ್
ಪ್ರಯೋಗಿಸುವ ದೈತ್ಯಯಂತ್ರಗಳೆಂತು ಮನೆಯೆನದೆ
ಮಠವೆನದೆ, ಚರವೆನದಚರವೆನದೆ, ಪೆಣ್ಣೆನದೆ
ಗಂಡೆನದೆ, ನಾಗರಿಕರೆನದೆ ಸೈನಿಕರೆನದೆ,
ಪಸು ಪಸುಳೆಯೆನ್ನದೆಯೆ, ತಗ್ಗುಬ್ಬುತಡೆಯೆನದೆ
ಮುಂದೆ ತಡೆಬಂದನಿತುಮಂ ಮೆಟ್ಟಿ ತುಳಿತುಳಿದು,
ಬರಿಗೈದು, ಬಟ್ಟ ಬಯಲಂಗೈಯ್ದು, ಮಿಳ್ತುವಿನ
ಮುನ್ನಡೆಗೆ ನೆತ್ತರೋಕುಳಿವೊಯ್ದು, ಕಂಬನಿಯ
ಕಾಲುವೆಗೆ ರಕ್ತವರ್ತ್ಮಗಳಾಗುತಿರ್ಪಂತೆವೋಲ್
ಮುಂಬರಿದನಾ ಕುಂಭಕರ್ಣಂ, ದಶಾನನ
ಮಹಾ ಸಮರ ಯಂತ್ರಸ್ವರೂಪಂ:
ಮೊದಲ್ ಮೊದಲ್,
ಬೆಚ್ಚಿದೊಡಮೆರ್ದೆಗಿಡದೆ ನಿಂದುದು ಕಪಿಧ್ವಜಿನಿ.
ತಡೆಯಲ್ ಕೆಲಂಬರುಂ, ಮೇಲ್ಬೀಳಲುಂ ಕೆಲರ್,
ಮುನ್ನುರ್ಗಲೆಳಸಿದರು ತರುಶೈಲ ಹಸ್ತರ್
ಭಟಾಗ್ರಗಣ್ಯರ್. ದೈತ್ಯನುರು ಮುದ್ಗರದ ಮೊದಲ
ಬೀಸಿಗೆ ನೆಲಕ್ಕೊರಗಿದುದು ನೂರ್. ಸಹಸ್ರಮಂ
ತಿರೆಗುರುಳ್ಚಿತು, ತಿಕ್ಕಿತೆರಡನೆಯ ಹತಿ. ಮತ್ತೆ
ಮೂರನೆಯ ಹತಿಗೆ ಕಾದವರೊಳರೆ, ಸದ್ಗತಿಗೆ?
ಅತಿಭಯಕೆ ಕಾಲ್ಕಿಟ್ಟರಲ್ಲದುಳಿದವರೆಲ್ಲಿ?
ಪೆಸರೆ ಬಿರುದಾದುದಾ ಕಾಲಾಳ್ಗಳಿಗೆ! ಪೊತ್ತ
ಮರ ಕಲ್ಲು ಕೈದುಗಳನಲ್ಲೆ ನಿಂತಲ್ಲೆಸೆದು
ಕಿತ್ತೋಡಿದರು; ಕಲಿಗಳೆಂಬುತ್ತಮರನರಸಿ
ಕಾಣೆ! ಬಹುಕಾಲಮದುಮಿಟ್ಟ ಸಹಜಕಾಮನೆ
ಜಟಿಲವಾಗುತೆ ಪಿಶಾಚ ಪಟುತ್ವದಿಂ ಕೊನೆಗೆ
ತನಗೆ ಸೆರೆಗಾವಲಾಗಿರ್ಪ ಸದ್‌ವಾಸನಾ
ಸಭ್ಯರ್ಕಳಂ ಬಿರಿದೊಡೆದು ಪೊರಮಡಲ್ಕೆಳಸಿ
ಪಾಯ್ವುದು. ಮೊದಲ್ಮೊದಲ್ ಪಡಿಮಲೆತಿದಿರ್ ನಿಂದು

ತಡೆದೊಡಂ, ಕಡೆಗದರ ರಾಕ್ಷಸತೆಗಳ್ಕುತವು
ಮುನ್ನ ತಮಗಿರ್ದ ಗೌರವಕೆಳ್ಳುನೀರ್ ಕೊಟ್ಟು
ದಿಕ್ಕುಗೆಟ್ಟೋಡುವುವು, ಬಾಳ್ಭೂಮಿ ಸರ್ವಮಂ
ವೈರಿಗೆ ತೆರಂಬಿಟ್ಟು. ಪೇಳ್ ಕರೆದೊಡೇನವರಂ
ಬರಿಯ ಬುದ್ಧಿ? ಅಂತರಾತ್ಮಪ್ರಚೋದನೆಯಿರದ
ಬುದ್ಧಿ ತಾನುಂ ಸೋಲದೇನಿಂದ್ರಿಯದ ಹಿತದ
ಲೌಕಿಕಕೆ?—ಅಂತೋಡುತಿರ್ದಿತರರಂ ಕೂಡಿ
ಹಿಂಜರಿಯುತಿರ್ದ ವಾಲಿಯ ಸುತನ ಭಂಗಮಂ
ನೋಡಿ, ಕೆರಳಿದು, ರಾಮಚಂದ್ರಂ ಸಹೋದರಗೆ
ಪೇಳ್ದನಂಗದನೆದೆಗೆ ಧೈರ್ಯದಮೃತವನೆರೆದು,
ಕಪಿವಾಹಿನಿಯ ತಡೆದು, ಕುಂಭಕರ್ಣನ ಮೇಲೆ
ತಿರುಹಲ್ಕೆ. ಲಕ್ಷ್ಮಣನ ಕರೆಗೇಳ್ದನಂಗದಂ.
ನಿಂದನ್ ಸ್ಮೃತಿ ಮರಳ್ದನೋಲ್. ನಾಣ್ಚಿದನ್ ತನ್ನ
ವಿಸ್ಮೃತಿಗೆ ತಾನಿನಿತು ಕನಲಿ. ತಂದೆಯ ನೆನೆದು
ಬಯ್ದುಕೊಂಡನು ತನ್ನ ಪೇಡಿತನಮಂ. ಕೂಡೆ
ಶಿಖರೋಪಮದ ಶಿರದ ವೃಕ್ಷಗದೆಯನ್ನೆತ್ತಿ
ಮುನ್ನುಗ್ಗಿದನು, ಕೂಗಿದನು, ಕರೆದನೋಡುವ
ವನೌಕಸ ಧ್ವಜನಿಯಾಃ
"ಬನ್ನಿ, ಕಲಿಗಳೆ, ಬನ್ನಿ!
ನುಗ್ಗಿ ಮುಂದಕೆ! ನಿಲ್ಲಿ, ನಿಲ್ಲಿ, ಓಡುವಿರೆಲ್ಲಿ!
ಇಲ್ಲಿ ನಿಮಗೆಲ್ಲಿ ಮನೆ? ನಿಮ್ಮೋಟಕಿಹುದೆ ಕೊನೆ?
ಈ ಧರ್ಮ ರಣಧರಣಿಗಿಂ ಮಿಗಿಲ್ ರಕ್ಷಣಾ
ಕ್ಷೇತ್ರಮಿಹುದೇ ಕ್ಷೇಮಚಿಂತನೆಗೆ? ರಾಮನಿರ್ಪೀ
ಕ್ಷೇಮ ಭೂಮಿಯನುಳಿಯೆ ಕುಂಭಕರ್ಣನ ಬಾಯ್ಗೆ
ಮಿಗಿಲಲಾ ನರಕಗತಿ ನಮಗೆ? ಭೂತಮಲ್ತಿದು;
ಲಂಕೆಯಟ್ಟಿದ ಬರಿ ಬಿಭೀಷಿಕೆ ಕಣಾ! ಬೆದರ್
ಗೊಂಬೆಯಂ ಕಂಡು ಹೆದರುವ ಮಕ್ಕಳೋಲಂತೆ,
ರಕ್ಕಸರ್ ಕಳನ ಕಳಮೆಯ ಪೊಲದ ರಕ್ಷಣೆಗೆ
ಮುಂದೊಡ್ಡಿಕೊಂಡು ನುಗ್ಗುತ್ತಿರ್ಪ ಈ ತೃಣದ
ಬೆಚ್ಚಲ್ಗಳುಕಿ ಪಲಾಯನ ಪಟುಗಳಾಗುವಿರ
ಮೂಢ ಮೃಗಪಕ್ಷಿಗಳವೋಲ್! ವಿಶ್ವಕರ್ಮನಿಂ

ದೊರೆತ ವರಬಲವ ಮರೆತಿರೇಂ? ಸೇತು ಬಂಧನಕೆ
ನೀವೆತ್ತಿ ಕಿತ್ತು ಪೊತ್ತದ್ರಿ ಧೈರ್ಯವನಿಂದು
ಮರೆತು ಹಗುರಾದಿರಲ್ಲದೆ, ನೆನೆದೂಡಾ ನೆನಹೆ
ಮನಕೆ ಗೌರವವಾಗಿ ನಿಮಗೀವುದಚಲತಾ
ಸ್ಥೈರ್ಯಮಂ. ನೆನೆಯಿಮಾ ದಿವ್ಯಶಿಲ್ಪಿಯ ವರದ
ಮಹಿಮೆಯಿಂ ನಿಮಗೆ ಲಭಿಸಿಹ ಭವ್ಯಗಾತ್ರಮಂ.
ನೆನೆಯಿರೈ ತಂಗಿಯೊರ್ವಳ ಕತದಿ ನಮಗೀ
ಸಂಗರದೊಳೊದಗಿಹ ಮಹತ್‌ಪಾತ್ರಮಂ! ಬನ್ನಿ;
ಬನ್ನಿ, ಕಲಿಗಳೆ! ನುಗ್ಗಿ; ನುಗ್ಗಿ ಮುಂದಕೆ! ಬಿರಿದು
ತೆರೆವುದಗಲಕೆ ಸಗ್ಗವಾಗಿಲ್, ನಮ್ಮ ಸಯ್ಪಿನ
ಮುಷ್ಟಿಮುದ್ಗರಕೆ!"
ಸಮರ್ಥನ ಸೂಚನಾಧ್ವನಿಯ
ಶಕ್ತಿಗೆ ಮನೋವಿಕೃತಿಸಂಭವ ಭಯಂ ತೊಲಗಿ
ಕೆಚ್ಚು ಮರುಕೊಳಿಪಂತೆ, ನಿಂದರ್, ನಿಚ್ಚಯ್ಸಿದರ್,
ಮೊಗದಿರುಹಿದರ್, ಕ್ರೋಧಮಂ ಬಗೆಗೆ ತಂದರ್;
ಕಯ್ಗೆ ಸಿಲ್ಕಿದ ಕಯ್ದುಗಳನೆತ್ತಿ, ರಣರೋಷ
ಘೋರ ಘೋಷಕೆ ಸೋರೆ ರಿಪುಹೃದಯಮೊಕ್ಕೊರಲ್
ಕೂಗಿ, ಮುನ್ನುಗ್ಗಿದರು ಕುಂಭಕರ್ಣನ ಮಹಾ
ಮೆಯ್ಯ ಮಂದರಕೊದೆಯೆ ನುಗ್ಗುವ ಕಡೆದ ಕಡಲ
ಹೆದ್ದೆರೆಗಳೋಲ್. ವಿಶ್ವಕಾರ್ಮಿಕ ಕಲಿಗಳಲಾ,
ವಿಶ್ವಕರ್ಮನ ವರ ಮಹಿಮೆಯಿಂದೆ! ಕಾರ್ಮುಕಂ
ಖಡ್ಗಮೀ ವಾನರಾಯುಧ ನಿಚಯವೇವುವಾ
ಬ್ರಹ್ಮ ವರಬಲ ಗರ್ವಪರ್ವತ ಮಹಾಸುರನ
ಮುಂದೆ? ತರುಷಂಡಮಯ ಶೈಲಖಂಡಂಗಳನೆ
ಕಿತ್ತೆತ್ತಿದರ್, ಕೈದುಗೆಯ್ದರ್; ಕವಣೆಯೆಸೆದರ್
ಕುಂಭಕರ್ಣನ ಪೆಸರ್‌ಪೊತ್ತಾ ಬೃಹತ್‌ಕೃತಿಗೆ!
ಋಷಭಂ, ಶರಭಂ, ಗವಾಕ್ಷಂ, ಸುಷೇಣಂ,
ಮೈಂದ ದ್ವಿವಿದ ನೀಲ ಕುಮುದರ್; ಪ್ರಭಂಜನ ಸುತಂ;
ಗವಯಂ, ಗಜಂ; ಪನಸ ತಾರರ್, ವಲೀಮುಖಂ!
ಜಸದಿಂದಮೊಂದೊಂದೆ ಪೆಸರೆ ಪಡೆಗೆಣೆಯಾದ
ಪಡೆವಳರ್ ನುರ್ಗಿಬರೆ, ಪಿರ್ಗಿದುದು ಪೌರುಷಂ;

ಪೌರುಷ ಪ್ರತಿಮವೆನಲುರ್ಬ್ಬಿ ಪರ್ಬತಮಾಯ್ತು
ಕರ್ಬುರನೊಡಲ್. ತಡಿತ್‌ಪ್ರಭೆಯ ಮುದ್ಗರದಿಂದೆ
ಬಡಿದನಂಗದನೆದೆಗೆ. ಕೆಡೆದನವನಿಗೆ ಕಾರಿ
ಕೆನ್ನೆತ್ತರಂ. ಓವೊ, ಯುವರಾಜನಂತುರುಳೆ
ಕೆರಳಿ ಕುದಿದುಕ್ಕಿದುದು ಕುಂಭಕರ್ಣನ ಮೇಲೆ
ಕಪಿಭಟೌಘಾಬ್ಧಿ: ಬೇಂಟೆಯ ನಾಯ್ಗಳೊಂಟಿಗನ
ತಡೆಯಲದು ಹೂಂಕರಿಸಿ, ಕೋರೆದಾಡೆಯ ಮಸೆದು
ಲಟಕಟಿಸಿ, ಮುನ್‌ಪಾಯಲೊರಲಿ ಬಿಳ್ದುದು ಮೊದಲ
ನಾಯ್, ಕರುಳ್ ತುಳ್ಕಿ. ಪಿನ್‌ಸರಿದು ಮತ್ತಂ ಕೆರಳಿ
ಮೇಲ್ ಬೀಳಲಿನ್ನುಳಿದ ನಾಯ್ಗಳಾ ಎಕ್ಕಲಂ
ಕಾಡೆ ನಡುಗಲ್ ಗುಡುಗುಡಿಸಿ ತಿವಿದು, ಹೊಡೆ ಹರಿದು
ಬೀಳೆ ಕೆಲವಂ, ಬರಿ ಬಿರಿದು ಬೀಳೆ ಕೆಲವಂ,
ಎರ್ದೆ ಸೀಳಿ ಬೀಳೆ ಕೆಲವಂ, ಕೊಲ್ವುದೊಡೆಯನೆಯೆ
ಐತಂದು ಗುರಿಯಿಟ್ಟು ಬಿಲ್ಲೆತ್ತಿ ಕುದುರೆಯನೆಳೆದು
ಕೋವಿಗುಂಡಿಡುವಲ್ಲಿ ಪರಿಯಂತಾ: ಬೆಟ್ಟಮಂ
ತಂದು ತನ್ನೆರ್ದೆಗಿಟ್ಟ ದಿಟ್ಟನಿಗೆ, ಪಕ್ಕೆಲ್ವು
ಮುರಿದುದಾ ದ್ವಿವಿದನಿಗೆ. ಶರಭನುರುಳಿದನವನ
ಮುಷ್ಟಿಘಾತಕೆ ಉಸಿರ್‌ಕಟ್ಟಿ. ಜಾನುವ ಹತಿಗೆ
ಸಮನಿಸಿತು ಮೂರ್ಛೆ ನೀಲಂಗೆ. ಋಷಭಗೆ ಹರಣ
ಹಿಂಡಿದುದವನ ಬಾಹು ಪೀಡನದಿ. ಕೆಡಹಿದನೊದ್ದು
ಗಂಧಮಾದನನದ್ರಿದೇಹಮಂ. ಗವಾಕ್ಷನಂ
ಗುದ್ದಿ ಶೋಣಿತಪಂಕದಲ್ಲದ್ದಿ ತೀಡಿದನ್;
ತಿಕ್ಕಿದನ್ ತಾರನಂ ಪನಸಂಗೆ: ಬೀಸಿದನ್
ಮಣ್ಮುಕ್ಕಲಿರ್ವರ ಮೊಗಂ! ಭಯಂಕರಮಿಂತು
ಗ್ರೀಷ್ಮ ಶುಷ್ಕಾರಣ್ಯಮಂ ದಹಿಪ ದವದಂತೆ
ರಕ್ಕಸನ ಸಂಗ್ರಾಮಮಳುರೆ ಪ್ರಭಂಜನ ಸುತಂ,
ತಾನುಂ ಭಯಂಕರಾಕೃತಿಗುರ್ಬ್ಬಿ, ಸಾನುಮಯ
ಶೃಂಗಮಂ ಕಿತ್ತೆತ್ತಿ, ನೀರ ಭಾರಕೆ ಜೋಲ್ವ
ಪೆರ್ಮೆಯ್ಯ ಕರ್‌ಮೋಡಮಂ ಪೊತ್ತು ತರ್ಪುರುವ
ಕಾರ್ಗಾಳಿಯೋಲದಂ ಕುಂಭಕರ್ಣನ ತಲೆಯ
ಮಲೆಗೆಸೆದನಿಟ್ಟನಾಕಾಶದಿಂ! ದೈತ್ಯಾದ್ಭುತನ

ಮಹಾ ಮಣಿಕಿರೀಟಂ ಕೆದರಿ ಕರೆದುದು ಕಿಡಿಕಿಡಿಯ
ರತುನ ವಯಿರಗಳುಳುಕೆವಳೆಯಾಲಿಕಲ್ಲಳಂ!
ಗಿರಿಕೂಟಮವನ ಮಂಡೆಗೆ ತಾಗಿದುದು ತಡಂ,
ಸದ್ದೆದ್ದು, ಬೆಸುಗೆಗಳಚಿದ ಬಂಡೆ ಬಿದ್ದುವು
ಕೆಲಕೆ ಸಿಡಿದು. ಕಲ್ ಮರಂಗಳ ಮಳೆಗೆ ಮಡಿದರಾಳ್;
ತೇರ್‌ಗುದುರೆಯುರುಳಿದುವು; ಘೀಳಿಟ್ಟುವಾನೆಗಳ್
ತಿರೆಗೆ ತಲೆಯೂರಿ. ಕೆನ್ನವಿರ್‌ಮುಡಿ ಕೆದರಿತಾ
ರಾಕ್ಷಸಗೆ, ದೆಸೆದೆಸೆಗೆ ಜಡೆಜಡೆಯ ಬಲ್ಲೂದಲಂ
ಕೊಡಹಿ. ರಕುತದ ಧಾರೆಯಂ ಲೆಕ್ಕಿಸದೆ, ಹತಿಗಿನಿತೆ
ಗತಚೇತನಂ ಮುಹೂರ್ತದಿ ಮತ್ತೆ ಮೆಯ್‌ತಿಳಿದು,
ನರಮತಿಗತೀತಮೆನೆ ಕುಪಿತನೆತ್ತಿದನಿಂದ್ರ
ಹೃದ್ರಕ್ತದೊಳ್ ಮಿಂದ ಮುದ್ಗರವನಿಟ್ಟನಯ್
ಹನುಮ ವಕ್ಷಕ್ಕೆ: ಕೈಲಾಸದೊಳ್ ನಿಂದಖಿಲ
ಲೋಕಕ್ಕೆ ಸಾಕ್ಷಿಯಾಗಿರ್ದುಮೆಯ ಕಯ್ ಬೆಮರಿ
ಬಿಗಿದುದಯ್ ಶಿವನ ಕಯ್ಯಂ! ನಿಶಾಚರನಿಟ್ಟ
ಸಿಡಿಲಹೊಡೆತಕೆ ಚೀರ್ದನನಿಲಾತ್ಮಜಂ. ನಡುಗೆ
ಕಪಿಸೇನೆ. ತಲ್ಲಣಿಸಿ, ತತ್ತರಿಸಿ, ತಲೆತಿರುಗಿ,
ಮೂಗು ನೆತ್ತರ್ ಕಕ್ಕಿ ಬಿದ್ದನವನಿಗೆ, ಉಫೇ
ಎಂದೊದರೆ ರಾಕ್ಷಸ ಕಂಠ ಕೋಟಿ!
ವಜ್ರ ವಪು
ಹನುಮನಂ ಕೆಡಹಿ, ಮುಂದಕೆ ನುಗ್ಗಿ ಬರುತಿರ್ದ
ರಿಪುವಜ್ರಗಿರಿಗೆ ತಾಗಿದನೂರ್ಮಿಳಾ ಸ್ವಾಮಿ.
ಬತ್ತಳಿಕೆ ಬರಿದಾಯ್ತು; ಮೇಣೆಯ್ಯಮಿಗಮಾಯ್ತು
ಶತ್ರುತನು; ಕಯ್ಯ ಧನುವೊಂದುಳಿದುದನಿತರೊಳ್
ತನ್ನ ಸರಳೇ ತರಿದ ಕುಂಭಕರ್ಣನ ಕರದ
ಮುದ್ಗರಂ ಬಿದ್ದ ಭಾರಕೆ ಬಸವಳಿದನೊರಗಿ
ಮೇದಿನಿಗೆ. ಪರಿದ ತೋಳ್ ಲೋಹಿತ ಸ್ರೋತಮಂ
ಸೋರುತಿರೆ, ಏರ್ವಡೆದ ಪುಲಿಯವೋಲಬ್ಬರಿಸಿ
ಕೆಂಗಣ್ಣಳಿಂ ನೋಡಿ, ಮುಖ್ಯವೈರಿಯನರಸಿ
ಕಂಡನು ಅದೂರದಲಿ ಸುಗ್ರೀವನಂಗರಕ್ಷೆಯ
ಕೋಸಲೇಶ್ವರನಾ. ಮಹಾತ್ರಿಶೂಲವನೆತ್ತಿ

ವಾಮಕರದಿಂ, ನುಗ್ಗಿದನು ರಾಮನಿರ್ದೆಡೆಗೆ,
ಕೋವಿಗಾರನ ಮೇಲೆ ಪಾಯ್ವ ಪೆರ್ಬುಲಿಯಂತೆ
ಗುಡುಗುಡಿಸಿ. ಕಂಡನು ಗಜಂ, ದಿಗ್ಗಜೋಪಮಂ;
ಈ ಬೂತನೆಂತಾದೊಡಂ ದಾಶರಥಿಯಿಂದೆ
ದೂರಮೊಯ್ದಪೆನೆಂದು ಜಾನಿಸುತುಪಾಯಮಂ
ಬಂದಿಡಿದನಾ ರಾಕ್ಷಸನ ಬೆನ್ಗೆ. ಜಗ್ಗನೆ ನಿಂದು,
ಸಿಗ್ಗುರಿದುರಿದು ತಿರುಗಿದನು ದಾನವಂ. ಕೆರಳಿ
ನೋಡಿದನು ಬಳಿನಿಂದು ನಗುತಿರ್ದ ವಾನರ
ಮಹಾಕುಬ್ಜನಂ, ಹಾಸ್ಯನೇತ್ರದ ವಿನೋದಾಸ್ಯನಂ.
ಪಿಡಿಯಲೆಡಗೈ ಚಾಚಿ, ಬಾಚಿದನು ಬರಿಗಾಳಿಯಂ.
ನೆಲಕೆ ಹತ್ತಿರೆ ಬಗ್ಗಿ, ಜುಣುಗಿ, ಲಂಘಿಸಿ, ಚಿಮ್ಮಿ,
ಸರ್ರನೆ ಪೆಡಂ ಮೆಟ್ಟಿ, ಗಿರ್ರನೆ ತಿರುಗಿ ಬಂದು,
ಮತ್ತೆ ಗುದ್ದಿದನವನ ಬೆನ್ಗೆ. ವಿಷಾದದೊಳದ್ದಿ
ಖಿನ್ನಚೇತಸವಾದ ವಾನರ ಧ್ವಜಿನಿಯಲಿ
ಗೊಳ್ಳೆಂದು ನಗೆಯೆದ್ದುದೇನೆಂಬೆನಚ್ಚರಿಯಾ!
ಕಿನಿಸಿ, ಕಂಗನೆ ಕನಲಿ, ಮತ್ತೆ ತಿರುಗಿದನತ್ತ
ಇಂದ್ರಾರಿ. ಅತ್ತ ತಿರುಗಿದೊಡಿತ್ತ ನೆಗೆದನ್;
ಇತ್ತ ತಿರುಗಿದೊಡತ್ತ ನೆಗೆದನ್. ತಿರುಗಿದನ್,
ಸುತ್ತಿದನ್; ಸುತ್ತಿದನ್, ತಿರುಗಿದನ್. ತಿರುತಿರುಗಿ
ತಲೆ ತಿರುಗತೊಡಗಿದುದು. ಕಣ್‌ಸುತ್ತಿ, ಕಾಲ್ತೊಡರಿ,
ತತ್ತರಿಸುತೆಂತಾದೊಡಂ ನಿಂತು, ಶೂಲಮಂ
ತಡವಿದನು ಮತ್ತೆ. ರಾಕ್ಷಸನಂತು ಶೂಲಮಂ
ಕೈಕೊಳೆ ಗಜಂ, ಕಪಿಧ್ವಜಂ, ಅಲ್ಲಿ ನಿಲ್ಲದೆ
ನಗುತ್ತೋಡಿದನು ದನುಜನೆದೆಯುರಿಯೆ. ''ಕಪಿಯಲಾ
ನೀಂ; ಕಪಿಧ್ವಜನಲ್ತು! ತಿಕ್ಕಿದಲ್ಲದೆ ನಿನ್ನ
ಬಿಟ್ಟಪೆನೆ?'' ಎನುತ ಬೆಂಬತ್ತಿದನು ಗಜನಂ
ದಶಾನನಾವರಜಂ ಮಹಾಭೀಳ ಶೂಲಪಾಣಿ.
ಪೀಡಿಸಿದ ತೋಳನಂ ಕಾಡಾನೆಯಟ್ಟುವೊಲ್
ಗಜನನಟ್ಟುತ್ತಿರ್ದ ಕುಂಭಕರ್ಣನ ಕಂಡು
ನಗೆಗಡಲೊಳದ್ದಿದುವುಭಯ ಸೇನೆ: ''ಕಾಣಿರೋ
ಕಪಿವೀರನಂ! ಪಲಾಯನ ಪಟು ಭಟನ ಚಟುಲ

ವೇಗಮಂ! ಧೀರನ್ಯೆಸಲೆ, ನೋಡಿ, ಸಗ್ಗಮಂ
ಕೊಳ್ವೊಡೆಯಲ್ಕೋಡುವದಟಿದ್ಯೆಸಲೆ ದಿಟಂ!
ಕಂಡು ಕಲಿಯಿರೊ, ಕಲಿಗಳಿರ, ಷಂಡನೀತನಿಂ
ಕಲಿತನದ ಕಲ್ಪಿಯಂ!'' ಇಂತು ತಮತಮಗಿವರ್
ಅಳ್ಳೆಯಳ್ಳಿರಿವಂತೆ ನಗುತಿರೆ ನಿಶಾಚರರ್,
ನಕ್ಕರ್ ಕಪಿಧ್ವಜರುಮಾ ತಮ್ಮ ಹಾಸ್ಯಪ್ರಿಯನ
ನೂತನಪ್ರಹಸನಪ್ರಸ್ತಾವನಾ ಚತುರ
ಸೂತ್ರಧಾರತೆಗೆ: ''ಕಾಣಿರೊ, ಕೋಣಪನ ಮತಿಗೆ
ಕಳ್ಳಂ ಕುಡಿಸಿ, ಗತಿಗೆ ಮೂಗುದಾಣವನಿಕ್ಕಿ,
ಪಡೆಪಡೆಯ ಬೇಸರವನಾರಿಸಲ್, ಕುಣಿಕುಣಿಸಿ
ಸೆಳೆದೊಯ್ಯುತಿಹನೆಮ್ಮ ಹಾಸ್ಯ ವಿದ್ಯಾಕುಶಲ
ಸೇನಾನಿ! ಬನ್ನಿ, ನೋಳ್ಪಂ! ನಿಮ್ಮುಲ್ಲಸಮೆ ತೆರಂ!
ಕಾಣ್ಬಮೀ ಕುಂಭಕರ್ಣನ ಕರಡಿಯಾಟಮಂ!''
    ಪಿಡಿದನಾ ಪಿಡಿದನೆನೆ ತನ್ನೆಡದ ತೋಳ್‌ಸೊಂಡಿಲಂ
ರಾಕ್ಷಸಂ ನೀಡೆ, ಚಕ್ಕನೆ ನಿಂತು, ಪಕ್ಕಕೆ ಚಿಮ್ಮಿ,
ದಿಕ್ಕನೆ ತೊರೆದು ಬೇರೆ ದಿಕ್ಕೋಡಿದನು ಗಜಂ.
ರಾಕ್ಷಸ ಸ್ಥೂಲಕಾಯಂ ತನ್ನ ರಭಸಕ್ಕೆ
ತಾನೆ ಮುಂದೋಡಿದುದು. ಹಿಂದಕೆಳೆದುದು ಮನಂ.
ಅತ್ತಲೆಳೆದುದು ದೇಹವೇಗಂ ಪದದ್ವಯವನ್,
ಇತ್ತಲೆಳೆದುದು ಚಿತ್ತವೇಗಂ ಬೃಹಚ್ಛಿರವನ್;
ಅತ್ತಲಿತ್ತಲ್ ತೂಗಿ ತೊನೆದನ್! ಅದನ್ ಕಂಡು
ನಗೆವೊನಲ್ ನೆರೆಯುಕ್ಕಿತಿರ್ಕೆಲದ ಬಲತಟಂ
ಗೊಳ್ಳನೆ ಕುಸಿದು ಬೀಳೆ. ಅವಮಾನಕುರೆ ಕನಲಿ,
ಕೋಪಶಿಖಿ ದಳ್ಳುರಿದು ಬೆಂಬತ್ತಿದನು ಮತ್ತೆ
ಕಿಲಕಿಲನೆ ನಗುತೋಡುತಿರ್ದ ಕಪಿವೀರನಂ.
ಕೊಂಕಿ ಡೊಂಕುತೆ, ನಿಂದು ಪರಿಯುತ್ತೆ, ಬೆನ್ದೆಸೆಗೆ
ಬಳುಕುತ್ತೆ, ಕಾಲ್‌ನಡುವೆ ಪೊಕ್ಕು ಜುಣುಗುತೆ, ಮತ್ತೆ
ರಕ್ಕಸಂ ಪುಗಲಾರದಿಕ್ಕಟ್ಟಿನೊಳ್ ನುಗ್ಗಿ
ಸಿಕ್ಕಿಸುತೆ, ಹೊಂಚಿ ಹೊಮ್ಮುತೆ ಚಿಮ್ಮಿ ವಂಚಿಸುತೆ,
ಮೂರು ಸೂಳ್ ಸುತ್ತಿಸಿದನಸುರೇಂದ್ರನಂ ಗಜಂ
ದುರ್ಗತ್ರಿಕೂಟಮಂ ಲಂಕೆಯಾ! ಪೇಳ್ವೆನೇಂ

ಕುಂಭಕರ್ಣ ಸ್ಥಿತಿಯ ಪರಿಹಾಸಮಂ? ಮುಡಿಗೆದರೊ,
ಮೈಬೆವರೊ, ಸುಯ್ಲುಗಳೊ, ಹೊಯ್ವುಳ್ಳೆಗಳೊ, ಸೋರ್ವ
ಶೋಣಿತವೊ,—ವಿಕಟ ಭೈರವವಾದುದಾ ರುಂದ್ರ
ಹಾಸ್ಯದೃಶ್ಯಂ.
"ಇನ್ ತಳ್ವುದನುಚಿತಂ, ನೃಪೇಂದ್ರ.
ಬಿನದಮೆ ಬಿಸದಮಪ್ಪುದಿನ್ ತಡೆಯೆ. ಮುನ್ನಮಾನ್
ಪೇಳ್ದೆನಲ್ಲವೆ ನಿನಗೆ ನನ್ನ ಈ ಅಗ್ರಜನ
ವರ ಬಲಾನ್ವಿತ ಮಹಾ ಮಹಿಮೆಯಂ? ಪೂಜ್ಯನ್,
ಪರದಾರ ಸೋದರನ್, ರುದ್ರ ಭಕ್ತನ್! ತನ್ನ
ಪಕ್ಷದ ಅಧರ್ಮದೌರ್ಬಲ್ಯಮೊಂದಿರದಿರಲ್
ತ್ರೈಜಗದೊಳಿರ್ದರಾರ್ ಈತನನ್ ತಡೆವವರ್?
ಈಗಳುಂ ಧರ್ಮಾಸ್ತ್ರಮಲ್ಲದೆಯೆ ನಾಮಲ್ತು
ಗೆಲ್ವುದಿವನಂ. ಕಾಣ್ ಮಹಾಕ್ರುದ್ಧನಂ, ಭ್ರುಕುಟಿ
ಬದ್ಧನಂ, ಲಯಕಾಲದಂತಕೋಪಮ ಯುದ್ಧ
ಸಿದ್ಧನಂ! ನಿನ್ನ ಬಿಲ್ಗೇರದಿರೆ ಹೆದೆ, ನಿನ್ನ
ಮಂತ್ರಾಸ್ತ್ರದೆಸುಗೆಯಿಂ ಜೇಗೆಯ್ಯದಿರೆ ನಾರಿ,
ಧ್ವಜಮಾತ್ರಮಪ್ಪುದೆ ದಿಟಂ ವಾನರಧ್ವಜಿನಿ!
ಶಿವ ಶಿವಾ ಸಹಿತ ಕೈಲಾಸ ಕಂಪನಕಾರಿ
ತನ್ನಖಿಲ ಲಯಶಕ್ತಿಯಂ, ಕೊನೆಯ ರಣಕಾಗಿ,
ಕರೆಯುತಿಹನದೊ ತನ್ನ ಪುರುಷಕಾರದ ಮಹತ್
ಪಾತಾಳದಿಂ!"
ವಿಭೀಷಣನೆನಲ್ ಪ್ರಜ್ಞಾನಿ
ರಾಮಚಂದ್ರಂ: "ದೈತ್ಯಪೂಜ್ಯ, ಕರ್ಮಂ ಸಮೆದು
ಪೊಳ್ತು ಬರೆ,—ಬಹುಜೀವರದು, ಅವನದೊರ್ವನದೆ
ಅಲ್ತು;—ನೋಡುತಿರು, ಅಪ್ಪುದಪ್ಪುದು ತಪ್ಪದೆಯೆ!
ನನ್ನ ದೆಸೆಗಿವನಳ್ಕನುಳಿ." ಎನುತ್ತುಗ್ರಧೀ,
ಜಡೆವೊತ್ತ ನವಿರಗುರ್ವಿನ ಮೊಗದ ದಾಶರಥಿ,
ನಿಂದನಚಲಂ ಧನುಷ್ಪಾಣಿ, ಬಾಣಧಿ ನಿಮಿರೆ
ಬೆನ್ನಿನಲಿ!
ಇತ್ತಲಿವರಿಂತು ಸಂವಾದಿಸಿರೆ
ಅತ್ತಲಾ ಕುಂಭಕರ್ಣನ ಮೀಸೆ ಹೊಗೆಯಾಯ್ತು.

ಅಗ್ನಿಯನುಗುಳ್ವ ಜೀರ್ಕೊವಿಯಾದುದು ಮೊಗಂ.
ದೈತ್ಯನಂಗಾಂಗದಿಂ ಜ್ವಾಲೋರ್ಮಿಗಳ್ ಪೊಣ್ಮಿ,
ವಿದ್ಯುದುರಗಂಗಳೊಲ್ ದೆಸೆದೆಸೆದೆಸೆಗೆ ಚಿಮ್ಮಿ,
ನಿಡುನೀಳ್ದ ನಾಲಗೆಗಳಿಂ ನೆಕ್ಕಿದುವು, ಸುತ್ತಿ
ನಿಂದ ವನನರ ದಳಂ ಧಗಧಗನುರಿದು ಸೀದು
ಕರ್ಮಸಿ ಸುರುಳ್ವವೋಲ್. ಉರಿಯ ಕಾರುವ ಗಿರಿಯ
ರೂಪಾನುಸಂಧಾನದಿಂ ಜಗದ್‌ಭೀಕರಂ
ತಾನಾಗಿ ಮುನ್ನುಗ್ಗಿದನು, ಬೀದಿವರಿದನ್,
ಲಯೌರ್ವಾನಳಂ ಪಾಯೆ ಕುದಿಕುದಿದು ಹಿಮ್ಮೆಟ್ಟಿ
ಬತ್ತುವಂಭೋಧಿಯಾಗಲ್ ವನಾಲಯ ಚಮೂ
ಸಮುದ್ರಂ. ರೋದಿಸಿದರೊಳರಿದರ್, ಪೆಳರಿದರ್,
ಕೆಟ್ಟೆವೋ ರಾಮನಂ ಕಟ್ಟಿಕೊಂಡೆಂದೊರಲಿ
ಪುಯ್ಯಲ್ಚುತೋಡತೊಡಗಿದರತ್ತಲಿತ್ತಲ್
ಮನಂಗೆಟ್ಟು. ತಡೆಯಲಾರದೆ ತನ್ನವರ ಗತಿಗೆ,
ರವಿ ರಕ್ಷಣೆಯ ಬೇಡಿ. ನಡೆದನಸುರಂಗಿದಿರ್
ರವಿತನೂಜಂ. ಮಗ್ನನಾದನೆ ಕಪೀಂದ್ರಂ
ಮಹಾಸುರ ಲಯಾಗ್ನಿಯೊಳ್? ವಿಘ್ನ ಬಂದುದೆ ಕುಲದ
ಕೀರ್ತಿಗೆ? ಪ್ರತಿಜ್ಞೆಗಾದುದೆ ಭಂಗಮೆಂದಾ ನಳಂ
ರಚಿಸಿದನು, ತನ್ನ ತಂದೆಯ ಶಿಲ್ಪ ಬಲದಿಂ,
ಕಡಲ್ಗಳನೆ ಮೊಗೆಮೊಗೆದು ತೊರೆಗರೆವ ಮಾನಸಿಕ
ಜಳಯಂತ್ರಮೇಘಂಗಳಂ, ಕುಂಭಕರ್ಣಂಗೆ
ಕುಂಭಾಭಿಷೇಕಮಾದುದೊ ಮೃತ್ಯುಹಸ್ತದಿಂ
ಪೇಳೆನಲ್! ಮೆಲ್ಲಮೆಲ್ಲನೆ ನಂದತೊಡಗಿತಯ್
ನಿಶಾಚರ ಪಿಶಾಚಾನಲಂ. ಭಯಂ ಬಡಿದುದೆನೆ
ಕಂಡರೆಲ್ಲರು ದಶಗ್ರೀವಾನುಜ ಮಹಾಭೀಳ
ಬಾಹುರಾಹುಗ್ರಸ್ತ ಸುಗ್ರೀವ ಸೂರ್ಯನಂ,
ತಾಪಮೂರ್ಛಿತ ವೀರ್ಯನಂ. ಸಿಕ್ಕಿದುದು ಶಿರಂ,
ಮಿಕ್ಕ ಮೆಯ್ಯೇವುದೆನ್ನುತೆ ರಕ್ಕಸಂ, ಜವಂ
ಕಪಿಕುಲಪ್ರಾಣಮನೆ ಪೊತ್ತುಯ್ವವೋಲ್, ಪೊತ್ತು
ನಡೆದನೊ ರುಮಾ ಭಾಳ ಬಿಂದು ಕುಂಕುಮಸಿಂಧು
ಪೂರ್ಣೇಂದುವಂ!

"ಸಿಕ್ಕಿದನೊ ದೊರೆ ರಕ್ಕಸನ
ಕಯ್ಗೆ. ರಕ್ಷಿಸೊ, ರಾಮ, ನಿನ್ನ ಹೃನ್ಮಿತ್ರನಂ!"
ಎನುತಮೊಕ್ಕೊರಲೊರಲುತಿರೆ ಕಪಿಕಟಕಮಾ
ಋಕ್ಷಧ್ವಜಂ ವೃದ್ಧನಿನ್ನೊಮ್ಮೆ ತ್ರಿವಿಕ್ರಮ
ಪ್ರದಕ್ಷಿಣೆಗೆ ಮುಂಬರಿವನೋಲ್ ಪರಿದು, ತಡೆದನಾ
ಅಮರೇಂದ್ರ ವೈರಿಯಂ. ಸಿಡಿಲ ಸಾಟಿಯೆ ಹಿಡಿದ
ತನ್ನೆಡದ ಕೈಯ ಶೂಲದಿನಿಡಲ್ ಜಾಂಬವಗೆ
ಕುಂಭಕರ್ಣಂ, ಪಿಡಿದನದನೇವೇಳ್ವೆನದ್ಭುತಕೆ!
ಪಿಡಿದು, ಮುದುಕಂ ಮುರಿದೆಸೆದನದನೊತ್ತಿ ತನ್ನ
ಮೊಳಕಾಲ್ಗಳಿಂ. ವಾಲಿಯವರಜನನಿತರೊಳ್
ಮೆಯ್ತಿಳಿದನರಿತನು ಅಪಾಯಮಂ. ನೆನೆದನು
ಉಪಾಯಮಂ. ಕಚ್ಚಿ ಕಿವಿಗಳನುಸಿರ್ ಕಟ್ಟೆ
ಬಾಯ್ತುಂಬಿ, ಚಕ್ಕಳಗುಳಿಯನಿಕ್ಕಿದನು, ಪಕ್ಕೆ
ಬಿರ್ಬಿರಿ ಬಿರಿಯುವಂತೆ. ನಕ್ಕನೋ? ಕೂಗಿದನೊ?
ಕುಣಿಕುಣಿದನಾನೆ ಮೆಯ್ ಕೊಡಹುವಂದದಿ; ಕೊಡಹಿ,
ಕಪಿರಾಜನಂ ಕೆಡಹಿ, ತುಳಿಯಲ್ಕೆ. ಬೆನ್ಗೇರ್ದ
ಚಿರತೆಯೊಲ್ ನಖಮೊತ್ತೆ ತಳ್ತು ಕುಳ್ತುರುಳದೆಯೆ
ಪಟ್ಟುವಿಡಿದಿರ್ದಾತನಂ, ತನ್ನ ಕರಿಕರೋಪಮ
ಹಸ್ತದಿಂ, ಕಿತ್ತೆತ್ತಿ ನೆಲಕ್ಕಿಕ್ಕಿದನು ಕುಕ್ಕಿ.
ಸುಗ್ರೀವ ಕಂಕಾಲ ಪಂಜರದ ಶಿಥಿಲತೆಗೆ
ಪಾರದಿರುತಿರ್ದುದೇ ಪ್ರಾಣಕೀರಂ? ಚಿಮ್ಮಿ
ಪೊಡೆಸೆಂಡವೊಲ್ ಪುಟಂನೆಗೆದು ಬರ್ದುಕಿದನಲಾ!
ಬೆನಕನಂ ಕರೆದಳ್; ಒರೆದಳ್ ಭವಾನಿ: "ನಡೆ,
ವಿನಾಯಕ, ಪ್ರಫುಲ್ಲಿಸು ರಘೂತ್ತಮ ಮನೋಂಬುಜದಿ
ಅಭವ ಸಂಜ್ಞಾನ ಮಹದಿಚ್ಛೆಯಂ." ಅತೀಂದ್ರಿಯ
ವಿಧಾನಕೆ ವಿಲಂಬಮೆತ್ತಣದೊ? ಸುಮೂಹೂರ್ತಮಂ
ತಿಳಿದನಪರೋಕ್ಷಮಾ ವಶಿಷ್ಠಪ್ರಬೋಧಿತಂ.
ಅವಶಮೆನೆ ತಪ್ತ ತಾಮ್ರಾಕ್ಷನಾದನ್. ಖಂಡ-
ಪರಶುವೆ ಪಿನಾಕಮಂ ತುಡುಕಿದನೆನಲ್ ಉಗ್ರ
ಕೋದಂಡಧರನಾಗಿ, ಉಪಮಾ ದರಿದ್ರತೆಗೆ
ಕವಿಕಪಾಲಕರೆ ಸರಸತಿಯೆ ಶಿವವೃತ್ತಿಯಂ

ಕೈಕೊಂಡು ಭಿಕ್ಷಾಟನೆಗೆ ಹೊರಮಡುವಳಿನಲ್,
ಕುಂಭಕರ್ಣಂಗೆರಡುಮಡಿ ಜಗದ್‌ಭೀಕರಂ
ಭಾವೋಗ್ರನಾಗಿ, ಸುಗ್ರೀವ ಜಾಂಬವರಸುರ
ಸಂಗ್ರಾಮ ಧರೆಗೆ ನಡೆದನು ರಾಮನತಿಭೀತಿ
ಸಂಚರಿಸಿ ಕಂಪಿಸೆ ಕನಕಲಂಕೆ! ಕಂಡನಾ
ದೈತ್ಯ ದೈತ್ಯಂ ತನ್ನನಂಡಲೆಯೆ ಬರುತಿರ್ದ
ಕೋದಂಡಪಾಣಿಯಂ. ಕಂಡುದೆ ತಡಂ ಹಿಗ್ಗಿ,
ಕೇಕೆ ಹಾಕಿದನಟ್ಟಹಾಸಕೆ ತ್ರಿಕೂಟಗಿರಿ
ಗಹ್ವರ ಗುಹಾ ಧ್ವನಿಗಳನುರಣಿಸೆ. ನುಸಿಗಳಿಗೆ
ಕೀಳ್‌ಗಣ್ಚೆ ಸುಗ್ರೀವ ಜಾಂಬವ ಪ್ರತಿಭಟನೆಯಂ,
ಜಾನು ತಾಡನದಿಂದವರ್ಗಳಂ ಕೆಲಕ್ಕೊತ್ತಿ
ಓಸರಿಸಿ ಬೀಸೆಸೆದು ಧಾವಿಸಿದನವನಿಜಾ
ಪ್ರಾಣಮೂರ್ತಿಯ ಸನ್ನಿಧಾನಕ್ಕೆ: "ಲಭಿಸಿದೆಯೆಲಾ
ಕೊನೆಗೆ ನೀನ್: ಎನ್ನ ಸಯ್ಪಿದು ದಿಟಂ! ದೊರೆಯುವೆಯ
ಬರಿದೆ ನಾವರಸಿದರೆ? ನಿನ್ನಡಗುದಾಣದಿಂ
ನೀಂ ಪೊರಮಡುವವೊಲ್ ಕೆರಳ್ಚಿದಲ್ಲದೆ ನಮಗೆ
ಬಹಿರಂಗವಾಗುವೆಯ? ಅನ್ಯರಿಗೆ ಕೈದುಗಳ್.
ನಿನ್ನನ್ನರಂ ತಾಗಲೆಮಗೆ ಕಯ್ದುಗಳೇಕೆ
ಕಲಿಗಳಿಗೆ?" ತನ್ನ ತಾನ್ ಮರೆತನೋಲ್, ಉನ್ಮತ್ತ
ರೋಷದಿಂ ಧಾವಿಸಿದನಾ ರಾಕ್ಷಸಾದ್ಭುತನ್,
ಗುಂಡುಗಾಯಂಗೊಂಡು ಕಡುನೊಂದ ಪಡುಮಲೆಯ
ಪಟ್ಟೆವುಲಿ ಕೋವಿಯಾಳಂ ಸೀಳಲಬ್ಬರಿಸಿ
ಕುಪ್ಪಳಿಸುವಂತೆವೋಲ್!

ಅಪ್ಪಳಿಸಿ ನೆಗೆಯೆ, ನೆಲಂ
ಜಗ್ಗಿದುದು. ಗುಡುಗಿತಂಬರಮಂಬರೌಕಸರ್
ಬೆದರಿ ರಾಮಕ್ಷೇಮ ಶಂಕೆಗವತರಿಸಿದರ್,
ನಿಂದರ್ ನೆಲಸಿ ರಾಮನಂಗಾಂಗಗಳಲವರ
ರಕ್ಷಣೆಯ ತಮ್ಮ ರಕ್ಷಣೆಗೆ. ಬಲಿಯಾದುದೆ
ಅಯೋಧ್ಯೆ ಲಂಕೆಯ ಮಾರಿಗೆನುತೆ ಕಿಷ್ಕಿಂಧೆಯರ್
ದಳದಳಮೆ ಪಾಯ್ದರು ನಿಶಾಚರನ ಸಮ್ಮುಖಕೆ.
"ತಡೆ, ತಡೆ, ಪಿಶಾಚೇಂದ್ರ; ತಿರುಗು ತಿರುಗಿತ್ತಣ್ಗೆ.

ನಾವಿರಲ್, ಗೆಲ್ಲದೆಮ್ಮಂ, ಸ್ವಾಮಿ ಸನ್ನಿಧಿಗೆ
ನೀನೆಂತು ಸೇರುವಯ್?'' ಎನುತಿಂದ್ರಿಯಂಗಳ್
ಮುಮುಕ್ಷುವಂ ಮುತ್ತುವೋಲ್ ಕುಂಭಕರ್ಣನಮೇಲೆ
ಮುಗ್ಗಿದರು ರಣಲಗ್ಗೆಯಂ. ರಾಗವೇಗದಿಂ,
ವಿದ್ವೇಷದಿಂ, ವೈರಭಾವ ಸಾಧಕನಂತೆ,
ತನ್ನ ಮೇಲೇರಿ ಬರುತಿರ್ದಂಗೆ ರಾಮನಿಸೆ
ವರ ಖರ ಶರಂಗಳನವಂ ತರಿದಿಕ್ಕಿ, 'ನಿನ್ನ ಹೃದ್
ರಕ್ತ ರಸದೊಳಗದ್ದಿದಲ್ಲದೆಯೆ ತಣಿಯದೀ
ನನ್ನ ಮುದ್ಗರ ಮುಷ್ಟಿ ತೃಷ್ಣೆ!' ಎನುತ್ತಾರ್ದು
ತುಡುಕಿದನು, ನಖಮಮರೆ, ಜನಕರಾಜನ ಮಗಳ
ಮಾಂಗಲ್ಯ ಸಂಸ್ಪರ್ಶ ರೋಮ ಹರ್ಷಂಕರನ
ವಕ್ಷ ವೈಕುಂಠಮಂ. ಶಕ್ತಿ ದೈವಿಕಮಲ್ತೆ
ದುಂದುಭಿ ಕಳೇವರವನಂದು ಬಿಲ್ದುದಿಯಿಂದೆ
ಚಿಮ್ಮಿದವನಂ ತಮ್ಮನೆಂಬೊಂಗೆ? ಲಜ್ಜೆಯಿಂ
ಪಿಂಜರಿಯುತೊಂದೆರಳ್ ಪಜ್ಜೆ, ನಿಂದನಚಲಂ,
ಕೈಲಾಸ ಭಾರಮಾಯ್ತೆನಲಾತ್ಮ ಗೌರವಂ. ಮೇಣ್
ಕೋದಂಡದಗ್ರದಿಂ ನೂಂಕಿ ಸಿಡಿದನ್: ಜಡಮೆ?
ಜಡಬುದ್ಧಿ ಮೇಯಮೆ ತಪಶ್ಚೇತನಂ? ಸಿಡಿದು
ಕೆಡೆದುದೊ ಬೃಹದ್ದೇಹಮೊಂದು ಬಿಲ್ಲಂತರಕೆ
ರಾಕ್ಷಸನಾ! ದನುಜ ವಾನರ ದಳಗಳೆರಡುಮುಂ
ಬಿಲ್ಲು ಬೆರಗಾಗಿ ನೋಡುತಿರೆ, ದಾನವ ಜಟ್ಟಿಗಂ
ಮೇಲೆಳ್ದು, ಮೈಕೊಡಹಿ, ಘೋರನಾದಂ ಕೂಗಿ,
ಮರಳಿ ಮೇಲ್ವಾಯೆ ರಾಘವನೆಚ್ಚನೈಂದ್ರಮಂ
ನಿಶಿತಾಸ್ತ್ರಮಂ. ತಡೆಯೆ ಚಾಚಿದೆಡಗೈಯನದು
ಕಡಿದು ತುಂಡರಿಸೆ, ಯಾತನೆಗೆ ಭೀಕರನಾಗಿ
ಹೋಯೆಂದೊರಲ್ದು ಪಾಯ್ದನು ಕಾಲಯಮನಂತೆ.
ಲಯಭೈರವಾಟೋಪದಿಂ ಬರ್ಪ ರಕ್ತಾರ್ದ್ರ
ರಣರೌದ್ರನಂ ಕಂಡು, ಸರ್ವಮಂಗಳೆಯಂ
ಭವಾನಿಯಂ ನೆನೆದು, ಶಕ್ತ್ಯಸ್ತ್ರಮಂ ಸೆಳೆದನಯ್
ತೂಣೀರದಿಂ, ಶಿವನೆ ಕಾತರಿಸೆ!

"ಕೇಳ್", ಗಿರಿಜೆ,

ಬ್ರಹ್ಮ ವರಬಲ ಬಲಿಷ್ಠಂ, ಶಕ್ತಿಗಳಿಯುವನೆ
ಮದ್‌ಭಕ್ತನೀ ಕುಂಭಕರ್ಣಂ? ಪರಾಭವಂ
ನಿನಗಾಗಲಾಂ ಸಹಿಸೆನಿದೊ; ಈ ತ್ರಿಶೂಲಮಂ
ಕಳುಹಿಪೆನ್; ನಿನ್ನ ಶಕ್ತ್ಯಾಯುಧಕೆ ನೆರಮಾಗಿ,
ದೈತ್ಯಭಕ್ತನ ಶಿರವನರಿದು, ನಮ್ಮೆಡೆಗವನ
ಕಳುಹಲ್ಕೆ!''
　　　　ಬೆಳ್ಪಿವೆಟ್ಟಂ ಬೀಸಿದನು ಶಿವಂ
ರುದ್ರತ್ರಿಶೂಲಮಂ. ಪೊಕ್ಕುದಾಕಾಶಮಂ
ಮರ್ತ್ಯ ಪೃಥ್ವೀ ತತ್ತ್ವದಾ. ವಿಕಂಪಿಸಿತು ಭೂ;
ಸ್ಪಂದಿಸಿತನಿಲ ಮಂಡಲಂ, ಭಯಪುಲಕಿತಮೆನಲ್;
ವಾನರರ್ ರಾಕ್ಷಸರ್ ಚಕಿತನೇತ್ರರ್ ನೋಡೆ,
ಮೈದೋರ್ದುದೊಂದು ಪಗಲರಿಲೆನಲ್, ಗೋಚರಿಸಿತಾ
ತ್ರಿಣೇತ್ರಾಯುಧಂ. ಉರಿದುರಿದುಳ್ಕೆ ಬೀಳ್ವಂತೆರಗಿ
ಸಹಗಮಿಸಿತಿನಕುಲನ್ ರಾವಣಾನುಜ ಶಿರಕೆ
ಗುರಿಯೆಚ್ಚ ಶಕ್ತಿಮಂತ್ರದ ಬಾಣಚೇತನಕೆ!
ಸುಸಜ್ಜಿತಾಯುಧಾಗಾರಮೆನೆ ವಜ್ರದ
ಶಿರತ್ರದಿಂದುರ್ಕಿನ ತನುತ್ರದಿಂದಶನಿವೊಲ್
ನುಗ್ಗಿ, ಕೆನ್ನೀರು ತೊರೆಬಸಿವೆರಡು ತೋಳ್ಗಳಂ
ಮುನ್ ಚಾಚಿ, ಬಡಿಯೆ ಪಾಯುತ್ತಿರ್ದ ರಕ್ಕಸದಟನ
ಮೆಯ್ಯೊಳವಿತಿರ್ದ ಭೈರವನೀಕ್ಷಿಸಲ್ ತನ್ನ
ಸ್ವಾಮಿಯ ತ್ರಿಶೂಲಮಂ, ಸಂಕೇತಮಂ ಗ್ರಹಿಸಿ,
ನೆಗೆದನಲ್ಲಿಂ ಪೊರಗೆ ಕೈಲಾಸದತ್ತಣ್ಗೆ.
ಬಂದು ತಾಗಿತು ತಲೆಗೆ ಶಿವಸಹಿತಶಕ್ತ್ಯಾಯುಧಂ.
ಕಂಡರೆಲ್ಲರು ದಶಗ್ರೀವ ಸೋದರ ಶಿರಂ
ಧರೆಗುರುಳ್ವಾಭೀಳ ದೃಶ್ಯಮಂ! ಪೇಳ್ವುದೇಂ,
ಪೆರತೊಂದು ಕುಂಭಕರ್ಣಂಗಾದುದನುಭವಂ
ಲೋಕಾತಿಗಂ:
　　　　ತಿರೆ ನುಗ್ಗಿತಾಗಸಕೆ. ತತ್ತರಿಸಿ
ರವಿಯ ಬಿಂಬಂ ತಾಗಿದುದು ಶಶಿಯ ಬಿಂಬಕ್ಕೆ.
ತುಂಬಿದುದು ವರ್ಣವರ್ಣ ವಿಚಿತ್ರಮೊರ್ ಜ್ಯೋತಿ
ಭುವನಾಂಡಮಂ. ನಾದಮಯ ವಾಯುಮಂಡಲಂ

ನಕ್ಷತ್ರ ವೃಷ್ಟಿಮಯಮಾದತ್ತು. ಹಬ್ಬಿದುವು
ಹೊಗೆ ಬೆಂಕೆಗಳ್, ನೀಲಿಗೆಂಪುಗಳ್. ಸೂರ್ಯ ಬಿಂಬಂ
ಬಡಿದ ರಭಸಕೆ ಮುರಿದ ಕೋಡಿನ ಕೋರೆದಿಂಗಳ್
ತಿವಿಯೆ, ಸೀಳಿದು, ಪೊಡವಿ ಪುಡಿವೋಯ್ತು. ಕಣ್ ಕೇಳ್ದು,
ಕಿವಿ ಕಂಡು, ಕರ್ಮ ಪಲ್ಲಟವಾದುದಿಂದ್ರಿಯಕೆ.
ಪೊರ್ದಿದುದು ಪಂಚತ್ವಮಂ, ಅಹಂಕೃತಿಲಯದಿ,
ಪಂಚೇಂದ್ರಿಯಪ್ರಪಂಚಂ. ಅತೀಂದ್ರಿಯದೊಂದು
ದರ್ಶನಾನಂದದೊಳ್ ಮುಳುಗಿತಾತ್ಮಪ್ರಜ್ಞೆ
ನಿರ್ವಿಕಲ್ಪಪ್ರಲಯ ಯೋಗಕ್ಕೆ!
                    ಇತ್ತಲಿದೊ
ಕಾಣ್: ಮೈಥಿಲೀ ಧವಂಗದೆತ್ತಣಾವೇಶಮೊ?
ಸಮಾಧಿಸ್ಥನಂತೆ ನಿಷ್ಪಂದ ತನು ನಿರ್ನಿಮೇಷಂ
ನಿಂದನಂತರ್ಮುಖಿ, ಅಲೋಕಸಾಮಾನ್ಯಮಂ
ಅನುಭವಿಸುತಂತಸ್ಥ ಸರ್ವತ್ವಮಂ. ವ್ಯಷ್ಟಿಯೊರ್
ಸತ್ತ್ವಸರ್ವಸ್ವಮಂ ಪಿಳಿದು ಪೀರ್ದುದೊ ವಿರಾಟ್
ಪೂರ್ಣತ್ವಮೆನೆ, ಶೂನ್ಯಸಂಸಾರನೊಯ್ಯನೆಯೆ
ಬಿಲ್ಲ ಮೇಲೊರಗಿ, ಕುಸಿದನು ತನ್ನ ರಕ್ತಮಯ
ನೀಲಿಮೆಯ ಶುಭಗಾತ್ರಮಂ. ಹೊದಿಸಿದುದು ಬೈಗು
ಲೋಹಿತಾಭದ ತಮಿಸ್ರಾಂಚಲದಿನವನಿಯಂ.
ಘೋಷಿಸಿದುವಿರ್ಕೆಲದ ತೂರ್ಯಗಳ್ ರಜನೀ
ವಿರಾಮಮಂ ಸಂಗ್ರಾಮದಾ. ವಿಶ್ರಮಿಸಿತಯ್
ರಣಕ್ಲಾಂತರಂತೆವೋಲ್, ಕ್ಷಣದಾ ಕ್ಷಣಿಕಶಾಂತಿ!

## ಸಂಚಿಕೆ ೩

# ದೂರಮಿರದಿನ್ ಸುಗತಿ!

“ಪೊಗೆ ಅದೇನ್ ಕಾಣ್, ತ್ರಿಜಟೆ? ಏಳುತಿದೆ ಮದಿಲವೊಲ್
ಮುಗಿಲನ್ನೆಗಂ! ಕೇಳಿಸದು ಕದನ ಕೋಲಾಹಲಂ.
ಕೇಳುತಿದೆ ರೋದನಾತ್ಮಕ ತುಮುಲ ನಾದಮ್.
ಮಾಣ್ದು ರಣಭೇರಿಗಳ್, ಪ್ರೇತವನ ವಾದ್ಯಗಳ್
ಗೋಳ್‌ಗರೆಯುತಿವೆ ಕೇಳ್! ನಿನ್ನೊಡೆಯನನುಜಂ
ರಣಾಂಗಣಕೆ ಕುಂಭಕರ್ಣಂ ನಿನ್ನೆ ಪೋದುದಂ
ಪೇಳ್ದೆ. ತಳುವಿಹಳನಲೆಯುಂ; ನಿಚ್ಚಮುಂ ಪೊಗಸು
ಸೊಗಯಿಸುವ ಮುನ್ನಮೇ ಬರುತಿರ್ದವಳ್, ದಿನದಿನದ
ರಣವಾರ್ತೆಯಂ ತರುತಿರ್ದವಳ್? ಸುಡುತಿದೆ ಶಂಕೆ.
ಆರ್ಗೇನಮಂಗಳಮೊ? ಏಕೆ, ರಾಕ್ಷಸ ಸಖೀ,
ಕೆಮ್ಮನಿಹೆ? ಮೊಗದೊಳೇನೋ ದುಗುಡವಾಡುತಿದೆ!
ಕಣ್ಣೀರಿದೇಕಕ್ಕ? ದುಕ್ಕಮೇನ್ ಪೇಳ್, ತಾಯಿ,
ನಿನ್ನ ಮಗಳೆದೆ ಸುಕ್ಕಿ ಸೀಯುವ ಮೊದಲ್! ನನ್ನ
ಮೈದುನಂ ಕ್ಷೇಮವೆ? ವನೇಚರ ಮಹಾತ್ಮರ್ಗೆ
ಹಾನಿಯಿಲ್ಲೈಸೆ ದೀರ್ಘಾಯುಗಳಿಗೆ?”
                                        ಭೂಮಿಸುತೆ
ಬೆದರುಗಣ್ಣಿಂ ನೋಡಿದಳು ಜಲನಿಧಿಯ ದೂರ
ತೀರದಿಂದೇಳುತಿರ್ದಾ ಧೂಮದುಶ್ಶಕುನ
ದೃಶ್ಯಮಂ: ಪೊಗೆ ತುಂಬಿದಾಗಸದೊಳಾಗಳೆಯೆ
ಮೂಡಿಬಂದಿನಬಿಂಬಮೆಸೆದುದು ಮಸುಳ್ದವೊಲ್.
ಪೊಗೆಯ ಮರ್ಬಿನ ಪೊಗರ್ ಕವಿದುದು ಅಶೋಕವನ
ಮಧು ಧಾಮಮಂ. ಮೂಗು ಮುರಿಯಲ್ ಬೀಸಿದುದು ಗಾಳಿ

ಕೌರುಗಂಪಂ. ಮೂಗುವಟ್ಟುವು ಪರಮೆ ಪಕ್ಕಿಗಳ್,
ಪೆಣವೊಗೆಗೆ ಪೇಸಿದೋಲಂತೆ. ಸೀತೆಗೆ ತ್ರಿಜಟೆ
ಕಣ್ಣೀರ್ಮಿಡಿದು ಸುಯ್ದೊರೆದಳಿಂತು ತನ್ನುಸಿರ
ಬಿಸುಸೇದೆಯಂ:
"ದೇವಿ, ಪೇಳ್ವೆನೇನಂ? ಮಹಾ
ಶೋಕಮಡಸಿದೆ ಲಂಕೆಯಂ. ನಿನ್ನೆ ಯುದ್ಧದೊಳ್,
ಸದೆಬಡಿದು ವಾನರರ ಪಡೆಗಳಂ, ಮಡಿದನಾ
ದೊರೆಯ ತಮ್ಮಂ. ಕುಂಭಕರ್ಣನೊಡವೆರಸಿದರ್
ಕಾದು ಮಡಿದರ್ ಚಮೂನಾಯಕರನೇಕರ್.
ಅನೀಕಿನಿಗಳುರುಳಿ, ಶವಗಳ್ ಬೆಟ್ಟವಿಳ್ದುವೆಂಬರ್
ಇರ್ಕೆಲದೊಳುಂ. ನಾರ್ವ ರಣಧರೆಯನಿನ್ನೊಮ್ಮೆ
ಘೋರತರ ಸಂಗ್ರಾಮಕಣೆಗೆಯ್ಯೆ, ಸಾರಿಹರ್,
ಇದೊಂದೆ ಪಗಲಂ, ವೈರ ವಿಶ್ರಾಂತಿಯಂ. ನಾಳೆ
ಮರಳಿ ಮೊದಲಪ್ಪುದು ಭಯಂಕರದ ಕಾಳೆಗಂ!
ನಮ್ಮವರ್ ನಿಮ್ಮವರ್ ಮಡಿದ ತಂತಮ್ಮರಂ
ಕಡಲ ದಂಡೆಗೆ ಪೊತ್ತು, ಪೆಣಬಣಬೆಗಳನೊಟ್ಟಿ,
ಸುಡುತಿಹರ್. ಅದೆ ನಿನಗೆ ಕಾಣ್ಬಾಗಸಕ್ಕೇರ್ವ
ಪೊಗೆಯ ಕೇರ್; ಪಿತೃಲೋಕಕಾತ್ಮಗಳನುಯ್ವ ತೇರ್!
ಅದೆ ಕೇಳ್ವ ರೋದನಂ! ಮೇಣ್ ಮಸಣದೋಲಗಂ!
ಲಂಕೆ ಅಳುತಿದೆ, ಮನೆಮನೆಯೊಳುಂ, ಇಂದು: ಮಗನ್
ಮಡಿದ ತಾಯ್; ಪತಿ ತೀರ್ದ ಪೆಣ್; ತಂದೆಯಳಿದಿರ್ಪ
ಕಂದನ್; ಅಣ್ಣಂಗಳುವ ತಂಗೆ! ಆ ಗೋಳನಾರ್
ಕೇಳ್ವರೌ?. . . ಅಲ್ಲದೆಯೆ, ಬೇರೆವೇರೆಯೆ ಪುಡುಕಿ
ತಂತಮ್ಮ ಬಂಧುಗಳಿಗಂತ್ಯಸಂಸ್ಕಾರಮಂ
ಬಿಡಿಬಿಡಿಯೆ ಮಾಳ್ಪುದಂ ನಿಷೇಧಿಸಿದೆ ರಾಜಾಜ್ಞೆ.
ಅಲ್ಲದಿರೆ ನಾನಿಲ್ಲಿ ಇರುತಿರ್ದನೇನವ್ವ
ನಿನ್ನ ಬಳಿ ಇಂದು?. . . ನೀಂ ನೋಳ್ಪ ಆ ಧೂಮದೊಳ್
ನನ್ನ ತಂದೆಯ ಮೆಯ್ಯ ಪೊಗೆಯುಂ ಇರಲ್‌ಬಹುದು,
ದೇವಿ!"
"ಏನದು, ತ್ರಿಜಟೆ?" ಸುಯ್ದು ಕೇಳ್ದಳ್ ಸೀತೆ.
ಗದ್ಗದಂ ಬೆರಸಿ ಪೇಳ್ದಳ್ ತ್ರಿಜಟೆ:

"ಪೋದಿರುಳ್
ನನ್ನಯ್ಯನಾಜಿರಂಗದಿ ಮರಳದಿರಲೆನ್ನ
ತಮ್ಮನರಸಲ್ಕೆವೋದನ್. ಕತ್ತಿ ತಲೆಸೀಳ್ದೊ
ಬಂಡೆ ಬಡಿದುದಕೆ ತಲೆಯೊಡೆದೊ ಮಡಿದಾತನಂ
ಕಂಡು, ತರ್ಪುಜ್ಜುಗದೊಳಿರೆ, ರಾಜಭಟರದಂ
ನೋಡಿ ತಡೆದರ್. ಕಳೇಬರವನವರ ವಶಮಾಡಿ,
ಕಾಲ್ ಮುರಿದು ಕೆಡೆದು ನರಳುತ್ತಿರ್ದ ಪಿರಿಯನಂ
ತನ್ನಣ್ಣನಂ ಪುಡುಕಿ, ಪಡೆದು, ಮನೆಗೆ ತಂದನ್,
ಪಡೆಗೆ ತಲೆಯಾಳೆನ್ನ ಗಂಡನ ಸಹಾಯದಿಂ.
ಅವನೊ ಅಸ್ವಾವಸ್ಥನಾಗಿಹನ್. ನಾಳೆ ಇನ್
ನನಗೇನೊ? ನಿನ್ನ ಸೇವೆಯೆ ಗತಿಯೊ? ಮುಂದೆನಗೆ
ಪತಿಯ ಸೇವೆಯ ಪುಣ್ಯಮೇನೊಳದೊ? ಏನ್ ತಾಯಿ,
ನಿನ್ನೊರ್ವಳಿಂದೆ ಏನೇನಪ್ಪುದಿರ್ಕುಮೋ
ಆರಾರ್ಗೆ?"

ಹೃದಯವರಿತಳ್. ತ್ರಿಜಟೆಯೆಂದುದಕೆ,
ಕೊರಳ ಸೆರೆ ಬಿಗಿಯೊತ್ತುತಿರೆ ತನಗೆ, ಬಗೆಮರುಗಿ
ಪೇಳ್ದಳ್ ಧರಣಿಜಾತೆ ಸಂತೈಕೆಯಂ:

"ತ್ರಿಜಟೆ,
ನೀನೆಂದವೊಲೆ ನನಗುಮೊಮ್ಮೊಮ್ಮೆ ತೋರ್ಪುದವ್
ಲೋಕ ಸಂಕಟಕೆಲ್ಲ, ನಿನತೊಂದಕೆಯೆ ಅಲ್ತು,
ನಾನೆ ಕಾರಣಮೆಂಬವೋಲ್. ಜನಕ ಭೂಮಿಪಂ
ಭೂಮಿಗರ್ಭದಿನೆನ್ನನಲ್ತು ಲೋಕದ ಸಕಲ
ಶೋಕಮಂ ಪಡೆದು ರಾಮಂಗಿತ್ತು, ಲಂಕೆಯಿಂ
ತೊಟ್ಟಯೋಧ್ಯೆಯ ವರೆಗೆ ದುಃಖಕುಯ್ಯಲೆಯಾಡೆ
ತೂಗುಮಂಚವನಿಕ್ಕಿದನ್! ನನ್ನ ದೆಸೆಗಾಗಿ
ಅದೆನಿತೊ ಲಂಕೆಯ ಪೆಣ್ಗಳೆನಿತೊ ಕಿಷ್ಕಿಂಧೆಯರ್
ತಮ್ಮ ಮಂಗಳಸೂತ್ರ ಭಂಗಮಂ ಕಾಣುವರೊ?
ಮೇಣ್, ಸಖೀ, ಇದು ಬರಿ ಅಹಂಕಾರ ಸಂಭವಮೊ
ನಿನಗುಮೆನಗುಂ? ನಿನ್ನ ಪಿತೃವಿಧಿಗೆ ನಾನೆನಿತು
ಕಾರಣಳೊ ನನ್ನ ವಿಧಿಗಾತನುಂ, ಕೇಳ್, ತಾನನಿತೆ
ಕಾರಣನ್? ವಿಧಿಯ ಸೂತ್ರದ ಜಗಜ್ಜಾಲದೊಳ್

ವ್ಯಕ್ತಿಗಳ್ ಗ್ರಂಥಿಮಾತ್ರಗಳಲ್ತೆ, ವಿಧಿಹಸ್ತ
ಕೌಶಲ ಪ್ರತಿಮೆಗಳ್? ನಂನಮ್ಮ ಕರ್ಮ ಫಲಮಂ
ನಾಮುಣಲೆವೇಳ್ಕುಮ್. ಆದೊಡಮಿದಂ ಕೇಳ್, ತ್ರಿಜಟೆ,
ನನ್ನ ಮಾಂಗಲ್ಯಮಂ ಪಣವಿಟ್ಟು ಪೇಳ್ವೆನೀ
ಪೂಣ್ಕೆಯಂ: ನಿನಗೆ ವೈಧವ್ಯಮಾದಂದೆನಗೆ
ವೈಧವ್ಯಮೆಂದು ತಿಳಿ! ಆ ಭೀತಿಯಂ ಬಿಡು, ಕೆಳದಿ.
ನಾಳೆ ರಣಮೆನಿತೆ ಭೀಕರಮಕ್ಕೆ, ವಾನರರ
ಬಲಮೆನಿತು ಘೋರತರಮಕ್ಕೆ, ಮೇಣ್ ಎನ್ನ ಪತಿ
ಬ್ರಹ್ಮಾಸ್ತ್ರಮನೆ ತುಡುಗೆ, ನಿನ್ನಯ್ದೆದಾಳಿ ತಾನ್
ಒಂದಿನಿತಲುಗದಿರ್ಕೆ!''
ಬರಿಯ ಹರಕೆಯದಲ್ತು,
ವರವೆಂದು ತಿಳಿದವಳ್ ಕೈಮುಗಿದಳಾ ತ್ರಿಜಟೆ;
ಬೇಡಿದಳ್ ಕ್ಷಮೆಯಂ:
''ಮನಂ ನೋಯಲಾಡಿದೆನ್;
ಮನ್ನಿಸೀ ಮುಕ್ಕೆಯನ್, ತಾಯಿ. ನನ್ನದು ನೋವೆ
ನಿನ್ನದರಿದಿರ್? ಮಹಿಮೆ ಮೈದೋರಲೋಸುಗಂ
ಮಡಿದರಾ ಸಾವೊಂದು ಸಾವೆ? ಬರ್ದುಕಿಗೆ ಮಿಗಿಲ್
ಅಮೃತಮಲ್ತೆ?''
ಬೆರಗಾಗಿ ನೋಡಿದಳ್ ತ್ರಿಜಟೆಯಂ
ಸೀತೆ:
''ವೇದಂಬೊಲೊರೆದೀ ಮಹಾ ವಾಕ್ಯಮಂ
ನೀನೆಲ್ಲಿ ಕಲಿತವ್, ಕೆಳದಿ?''
''ನೀನೆ ಗುರುವಲ್ತೆ?''
ತ್ರಿಜಟೆಯೆಂದಳ್ ಧನ್ಯಭಾವದಿಂ ''ನಿನ್ನೊಡನೆ
ಇನಿತು ದಿನಮಿರ್ದು ನಿನ್ನಂ ಸೇವೆಗೆಯ್ದುದೇನ್
ಬರಿಯ ದಾಸ್ಯಮೆ? ತಪಂ ತಾನಲ್ತೆ? ನುಡಿಗೇಳ್ದು,
ನಡೆನೋಳ್ಪು, ಸಾನ್ನಿಧ್ಯದೊಳೆ ಪಗಲಿರುಳುಮಳ್ದು,
ಪೂರ್ವ ಜನ್ಮದ ಪುಣ್ಯಫಲದಿ ನಿನ್ನನ್ನರಿವ
ಕೃಪೆಯೊದಗಿದೆನಗೆ, ಪೇಳ್, ಅಂತು ನುಡಿವನಿತದೇನ್
ಪಿರಿದೆ?''
''ಪಿರಿಯಳ್ ನೀಂ, ಸಖೀ, ಪೆರ್ಮೆನುಡಿಗಳನೆ

ಪೊಣ್ಮುತಿರ್ಪುದು ನಿನ್ನ ಜಿಹ್ವೆ!''
ಇತ್ತಿಂತಿವರ್.
ಅತ್ತಲ್ ವಿಭೀಷಣ ಕುಮಾರಿ, ಅನಲಾದೇವಿ,
ಕಾಳಗದ ಕಣಕಿಂ ಮಿಗಿಲ್ ಭಯಂಕರಮೆನಲ್
ಶೋಕಕುಲಮಾಗಿರ್ದ ದೊಡ್ಡಯ್ಯನರಮನೆಯ
ರೋದನದ ಸೀಮೆಯಂ ಪಿಂತಿಕ್ಕುತಲ್ಲಿಂದೆ
ಅಶೋಕವನ ಧಾಮ ನೇಮಿಯ ಪೊಕ್ಕಳರಸುತೆ
ಮನಶ್ಶಾಂತಿಯಂ. ನೇರಮವನಿಜಾತೆಯ ಹೊರೆಗೆ
ನಡೆದೆರಗಿದಳು ತಪಸ್ವಿನಿಯಡಿಗೆ. ಅಶ್ರುಮಯ
ಲೋಚನೆಯ, ಗದ್ಗದಧ್ವನಿಯ, ಶೋಕಾಕುಲೆಯ
ಸುಮಕೋಮಲಾಂಗಮಂ ಕನಿಕರದಿನೆತ್ತಿದಳ್;
ತಳ್ಕಯಿಸಿದಳು ಸೀತೆ, ತಾಯ್ ಮಗಳನೆಂತಂತೆವೋಲ್.
ಕಂಬನಿಯನೊರಸಿದಳು; ಮೊಗವ ಮುಂಡಾಡಿದಳು;
ಕುವರಿಯೊಡಲಂ ತನ್ನ ಮೆಯ್ಗೆ ತಳ್ತಪ್ಪುತ್ತೆ
ಕಣ್ಮುಚ್ಚಿ ಮೌನಿಯಾದಳ್. ತನ್ನ ಹೃದಯದ
ನಿಗೂಢತಮ ಶಾಂತಿಯಂ ಯೌಗಿಕ ವಿಧಾನದಿಂ
ಅನಲೆಯಾತ್ಮಕೆ ದಾನಗೈವಂದದಿಂದಿರ್ದು,
ನುಡಿಸಿದಳು ತುಸುವೊಳ್ತನಂತರಂ: ''ಎಂತು ನಾನ್
ಸಂತೈಪೆನೌ ನಿನ್ನನನಲೆ? ಬಾಯ್ ಬರದೆನಗೆ
ನಿನ್ನನಳವೇಡೆನಲ್, ತಾಯಿ.''
ಬೈತಲೆಯೆಳವಿ
ತನ್ನ ನುಣ್‌ಗೂದಲಂ ನೇವರಿಸುತಿರ್ದಳಂ
ಮೊಗವೆತ್ತಿ ನೋಡಿದಳು ಮುಗುದ ನೇತ್ರದ ತರಳೆ,
ಮೈಥಿಲಿಯನನಲೆ. ಸೀತೆಯ ಕಣ್ಗಳಿವೆಹನಿಗಳಂ
ತನ್ನಯ ತಳಿರ್‌ಬೆರಳ್ಗಳಿಂದೊರಸಿ:
''ನಿನ್ನಳಲನ್
ಅಳ್ತು ಮುಗಿಸಲ್ ನಿನಗೆ ಸಾಲದಾಗಿರೆ ನಿನ್ನ
ಕಣ್ಣೀರ್, ನನ್ನಳಲ್ಗೇಕೆ ತವಿಸುವೆ, ದೇವಿ,
ಬರಿದೆ ನಿನ್ನೀ ನೇತ್ರ ತೀರ್ಥಾಂಬುವಂ. ನಿನ್ನ
ನಯನದಿಂದುರುಳುವೊಂದೊಂದಶ್ರುಬಿಂದುವುಂ
ಪೆರ್ಚಿಪುದು ನಮ್ಮ ಲಂಕೆಯ ಶೋಕಜೀವನದ

ಸಿಂಧುವಂ. ನೀನಳ್ತೆ: ಆ ಹನಿಗಳೊಂದೊಂದುವುಂ
ಬಡಬಾಗ್ನಿ ಕಡಲಾಗಿ ಕುಡಿದುವವ್ ಲಂಕೆಯ
ಮಹಾಸುರ ಸಹಸ್ರಾಸು ವಾಹಿನಿಗಳಂ. ಸರ್ವ
ಲೋಕ ಭೀಕರನೆಂದು ಯುದ್ಧಭೈರವನೆಂದು
ಪೆಸರಾಂತ ಕಿರಿಯ ದೊಡ್ಡಯ್ಯನಂತಪ್ಪನಂ,
ನೇರ್‌ನಡೆಯ ಸವಿನುಡಿಯ ಪೆರ್ಮೆಬಾಳ್ ಬಾಳ್ದನಂ,
ನಿನ್ನೆ ನುಂಗಿದುದಮ್ಮ ನಿನ್ನ ಕಣ್‌ಪನಿಗಡಲ
ಬಡಬವಾಯ್! ಆ ಅಯ್ಯನೆಮ್ಮೊಡನೆ ಎನಿತೊ ಸೂಳ್
ಕುಳಿತು ಸರಸವನಾಡುತಿರ್ದನ್! ಹಾಸ್ಯಮಂ
ನುಡಿದಣಕಿಸುತ್ತೆಮ್ಮನೆಂತಳ್ಳೆ ಬಿರಿವಂತೆ
ನಗಿಸುತಿರ್ದನ್! ಕಳ್ಳರಾಟದಲಿ ನಾವಟ್ಟೆ,
ಅವನೋಡಿ, ನಾನ್ ಪಿಡಿಯಲಾರದಿರೆ, ಕೊನೆಕೊನೆಗೆ
ನಗೆ ತಡೆಯಲಾರದೆಯೆ ಸೋಲ್ತು ನಿಲುತಿರ್ದನಂ
ನಾನ್ ಮುಟ್ಟೆ, ನನ್ನನಂಬರಕೆತ್ತಿ ಮೇಲೆಸೆದು
ಪಿಡಿದು 'ನೀನೊಂದು ಪೂವಿನ ಚೆಂಡು' ಎನುತೆನ್ನ
ಮುದ್ದಾಡುತಿರ್ದನ್ 'ಚೆಂಡುವೂ! ಚೆಂಡುವೂ!'
ಎಂದಟ್ಟಹಾಸಂ ಮೊಳಗಲದ್ಭುತಂ ನಗುತೆ!—
ಅಯ್ಯೊ ಆ ಅಯ್ಯನನ್, ಇಂದು ಕಡಲೆಡೆ, ಮಳಲ
ತೀರದಲಿ, ಗಂಧಚಿತೆಯಲಿ ಬೇಳ್ದು, ಬೂದಿಯಂ
ತಂದನೂರಿಗೆ ನನ್ನ ಬದುಕಿರ್ಪ ದೊಡ್ಡಯ್ಯನ್,
ಅಸುರೇಶ್ವರಂ! ಅದನ್ ಇಟ್ಟ ರತ್ನಮಂಜೂಷೆಯಂ
ಬಿಗಿದಪ್ಪಿ ತಮ್ಮ ತಮ್ಮೆಂದೊರಲುತಿರ್ದನಂ
ನೆನೆಯಲಮ್ಮೆನ್, ದೇವಿ. ನಿನಗಹಿತನಾದಡೇನ್?
ನೀನುಮ್ ಮರುಗಿ ಕರಗುತಿರ್ದೆ ಆ ನೋಟಮನ್
ಕಂಡು!"
ಗದ್ಗದೆಯಾಗಿ, ಜಾನಕಿಯೆದೆಗೆ ಮೊಗಮೊತ್ತಿ,
ಮಗಳವೋಲಳುತಿರ್ದಳಂ ಅನಲೆಯಂ ನೋಡಿ,
ಆವಿರ್ಭವಿಸಿದುದೊ ತನಗೆ ನಿಜಸ್ವರೂಪಮೆನೆ,
ಬೇರೆತನಮಂ ತೊರೆದು ಸೀತೆ, ಲೋಕಕೆ ಮಾತೆ
ತಾನಾದಳೆಂಬವೋಲ್, ತನ್ನೆರಡು ತೋಳ್ಗಳಿಂ
ತಳ್ಕಯ್ಸುತನಲೆಯಂ, ತ್ರಿಜಟೆಗೆಂದಳ್:

"ಬಾಲೆ
ಉಪವಾಸಮಿರ್ಪಳ್, ತ್ರಿಜಟೆ; ಶೋಕಭಾರಮಂ
ತಡೆಯಲಾರಳ್; ತತ್ತರಿಸುವಳ್: ಇವಳ್ಗಮೀ
ಅಳಲೆ ಈ ಎಳಹರಯದೊಳ್? ಪೋಗು, ಪಣ್ಗಳಂ
ತಿಳಿನೀರ್ಗಳಂ ಬೇಗದಿಂ ತಾ."
ತ್ರಿಜಟೆ ಪೋಗಲ್,
ಅನಲೆಯ ತಲೆಗೆ ತನ್ನ ತೊಡೆಯ ತಲೆದಿಂಬೆಸಗಿ
ತನ್ನುಡೆಯ ಮಲಿನ ವಸ್ತ್ರಾಂಚಲದಿ ಕೃಶಗಾತ್ರೆ
ಬೀಸಿದಳ್ ತಂಗಾಳಿಯಂ: "ಏನ್ ಬೇಸಗೆಯೊ? ಬೇಗೆ
ಧಗಿಸುತಿದೆ ಲೋಕಮಂ!" ತನ್ನೊಳಗೆನುತೆ ಸುಯ್ದು
ನೋಡಿದಳು ಮುಂದೆ ಹಬ್ಬಿರ್ದ ಜಲಧಿಯ ನೀಲ
ವಿಸ್ತಾರಮಂ, ನೀಲಿಯಾಗಸದ ನಿಸ್ಸೀಮತಾ
ವಿಸ್ತಾರಮಂ, ಮುಗಿಲ್ ಮುಗಿಲಾಗಿ ಮೇಲೇರ್ದ
ಸತ್‌ಕ್ರಿಯಾನಲಧೂಮ ವಿಸ್ತಾರಮಂ. ಕಣ್ಗೆ
ಪನಿ ತುಳ್ಕಿ ಬಿಳ್ದುವನಲೆಯ ಮೆಯ್ಗೆ!
ಬೇಗದಿಂ
ಬಂದಾ ತ್ರಿಜಟೆ ತಂದ ಶೀತಾಂಬುವಿಂ ತೊಳೆದು
ಅನಲಾನನಾಬ್ಜಮಂ, ಮೆಯ್ ತಿಳಿದವಳ್ಗುಣಲ್
ಫಲಜಲಂಗಳನಿತ್ತು ಸಸಿನೆಗೆಯ್ದಿಂ ಬಳಿಕಲಾ
ದಶಶಿರಾನುಜ ತನುಜೆ ಮುಂ ಪೇಳ್ದಳಿಂತಾ
ಸ್ಥಿರಾತ್ಮಜೆಗೆ:
"ಆದುದಾದುದು, ದೇವಿ. ಆದುದಕೆ
ನೂರ್ಮಡಿಯ ಘೋರಮಿನ್ನಾಗಲಿರ್ಕುಮ್. ಅದನ್,
ನೀನಿಚ್ಚೈಸಲ್, ನಿಲಿಸಲಸದಳಮಲ್ತು. ಕೇಳ್, ತಾಯಿ,
ಮುನ್ನಡೆದುದಂ ಪೇಳ್ವೆನರಮನೆಯ ಕಥನಮಂ,
ತಮ್ಮನ ಕಳೇಬರಕೆ ಕೊನೆಯ ಸಂಸ್ಕಾರಮಂ
ಕಡಲ ತೀರದೊಳೆಸಗಿ, ಭಸ್ಮಾವಶೇಷಮಂ
ರತ್ನಪಾತ್ರೆಯೊಳಿಟ್ಟು ತಂದು ಗೋಳಿಡುತಿರ್ದ
ದೊಡ್ಡಯ್ಯನಂ ಕಂಡು ನನ್ನಣ್ಣನಿಂದ್ರಜಿತು,
ಮೇಘನಾದಂ, ಮಹಾ ರುದ್ರ ರೋಷವನಾಂತು
ಸಂತಯ್ಸಿದನು ತನ್ನ ತಂದೆಯಂ; ಪೂಣ್ದನ್

ಭಯಂಕರ ಪ್ರತಿಜ್ಞೆಯಂ:—'ತ್ಯಜಿಸು ಸಂತಾಪಮಂ,
ದೈತ್ಯ ಕುಲ ಚಕ್ರೇಶ; ಚಿಕ್ಕಯ್ಯನಸುವಿಂಗೆ
ನೂರ್ಮಡಿಯುಸಿರ್ಗಳಂ ಬಲಿಗೊಳ್ವೆನೆನ್ನೀ
ಪ್ರತಾಪ ಭೂತಕ್ಕೆ. ರಿಪುಬಲವನಂತಕನೂರ್ಗೆ
ಬಿರ್ದ್ದೆಸಗುವೆನ್; ತಪ್ಪೆನೆನ್ನಾಣೆ, ನಿನ್ನಾಣೆ,
ತೀರ್ದಯ್ಯನಾಣೆ, ಪೆತ್ತಬ್ಬೆ ಮೇಣ್ ಕುಲದೈವವಾ
ಶಿವನಾಣೆ! ಕೈಕೊಳ್ವೆನೀಗಳೆ ನಿಕುಂಭಿಲಾ
ಯಾಗಮಂ. ಮೃತ್ಯುಗರ್ಭಂ ತರತರನೆ ನಡುಗೆ
ಮಾರಣ ಮಹಾಶಕ್ತಿಗಳನೊಡನೆ ಸೃಜಿಸುವೆನ್.
ನರ ವಾನರರ ಸೇನೆ ನಿರ್ನಾಮಮಪ್ಪಂತೆ
ಗೆಯ್ದುವರ ನೆತ್ತರಿಂ ತಣಿಯೆರೆವೆನಾ ಪೂಜ್ಯ
ಕುಂಭಕರ್ಣಪ್ರೇತಮೆಮ್ಮ ಪಿತೃಲೋಕದೊಳ್
ಸಂಪ್ರೀತಮಪ್ಪವೋಲ್!' ಇಂತತಿ ಕಠೋರಮಂ
ಸೂರುಳಂ ತೊಟ್ಟು, ನಡೆದನ್ ನಿಕುಂಭಿಲೆವೆಸರ
ನ್ಯಗ್ರೋಧಮೂಲದಾ ಯಾಗಶಾಲೆಯ ಮಹಾ
ಮಂತ್ರಕರ್ಮದ ತಂತ್ರಮಂಟಪಕೆ. ಆ ನನ್ನ
ಅಣ್ಣಅನತಿ ಶಕ್ತನ್; ಇಂದ್ರನ ಗೆಲ್ದು, ಬ್ರಹ್ಮನಿಂ
ನಾನಾ ವರಂಗಳಂ ಪಡೆದು, ಮಾಯಾಬಲದಿ
ದೇವದಾನವ ಭಯಂಕರನಾಗಿಹನು, ದೇವಿ.
ನಿರ್ವಿಘ್ನಮಾ ಯಾಗಮಂ ಮುಗಿಸಿದಾತನಂ
ಸೋಲಿಸುವರೊಳರೆ ಭುವನತ್ರಯದ ವೀರರಲಿ?
ವಿಘ್ನಮಿಲ್ಲದೆ ಯಾಗಮದು ಸಿದ್ಧಿಯಾಗಲ್,
ಅಜೇಯನಾತನ್; ಅವಾರ್ಯವೀರ್ಯನ್; ಸುರಾಸುರರ್
ನೆರೆಯಲ್, ತೃಣೀಕರಿಸುವನ್! ಕಪಿಧ್ವಜರೊಂದು
ಪಾಡೆ? ಆ ಬಳಿಕಲಾಂ ನೆನೆಯಲಮ್ಮೆನ್, ತಾಯಿ,
ಇರ್ಕೆಲದೊಳಪ್ಪ ಹರಣದ ಹತ್ಯೆಯಂ.—ಪೇಣ್
ತಟಸ್ಥಮಿರಲೇಕೆ, ಗಂಡುಗಳಿಂತು ಮೆಯ್‌ಮರೆತು,
ಕ್ರೋಧಮೂರ್ಛಿತರಾಗಿ, ಸರ್ವನಾಶಕೆ ಮಲೆತು
ಪಣೆಪೆಣೆದು ನಿಲ್ಲಲ್? ಮಹೀಯಸೀ, ನೀನೊಪ್ಪೆ
ನೆರಮಪ್ಪೆನಾಂ ನಿನಗೆ. ನೆರಮಪ್ಪಳಾಂ ಬಲ್ಲೆನ್,
ದೊಡ್ಡಮ್ಮನಾ ಮಂಡೋದರೀ ದೇವಿ. ತಾರಾಕ್ಷಿ,

ಮೇಘನಾದನ ಪತ್ನಿ, ನನ್ನತ್ತಿಗೆಯುಮಂತೆ
ನೆರಮಪ್ಪಳೆಮಗೆ. ಕೇಳ್, ನಿನ್ನನಿಲ್ಲಿಗೆ ತರಲ್
ಸಂಚು ಹೂಡಿದ ಚಂದ್ರನಖಿಯುಮೀಗಳ್ ಬೇರೆ
ಬಗೆಯಾಗಿಹಳ್. ಮೇಣ್, ದಶಗ್ರೀವನಾತ್ಮಮುಂ,
ತನ್ನ ಕಸುಗಾಯ್ತನದೊಗರ್ ಕಳೆದು, ಪಣ್ತನಕೆ
ತಿರುಗುತಿರ್ಪೊಂದು ಸೂಚನೆ ತೋರುತಿಹುದೆನಗೆ.
ಆದೊಡೆ ಮಹಾಸತ್ತ್ವನಾತನತ್ಯಭಿಮಾನಿ;
ಪಿಂಜರಿವನಲ್ತು. ತಾನೆಯೆ ಮುಂಬರಿವನಯ್ತು
ತಡೆಯಲೀ ಕಾಳೆಗದ ಕೊಲೆಯಂ. ಅಮರ್ಷಿ ತಾಂ
ಕ್ಷಾತ್ರತೇಜಕೆ ಭಂಗ ಬರ್ಪಂದದಿಂದೆಂದುಂ
ನಡೆವನಲ್ತು."

"ಪುಟ್ಟ ಹೃದಯದೊಳೆಂತು, ಪೇಳನಲೆ,
ಇಂತಪ್ಪ ದಿಟ್ಟತನವಿರಿಸಿರ್ಪೆ? ಪದಿನಾರ್
ಬಸಂತಗಳ ಮುದ್ರೆಯಂ ತಳೆದಿರ್ಪ ನಿನ್ನ ಮೆಯ್
ಪಿರಿಯುಸಿರ್ ಬೀಡು, ಪೆರ್ಬಗೆಯ ಪೆರ್ಮೆಗೆ ತವರ್
ನಾಡು!. . .ನಾನಸ್ವತಂತ್ರಳ್, ಕುವರಿ. ನಿನ್ನವರ್
ಮೇಣ್ ನೀನ್ ಸ್ವತಂತ್ರರ್. ತಪೋದ್ಯೋಗಮೊಂದುಳಿಯೆ
ಮತ್ತಾವುದುಜ್ಜುಗಂ ತಗದೆನಗೆ. . .ಪರಸುವೆನ್
ನಿನ್ನನ್; ಅದೆ ನಾನೀವ, ನಿನ್ನುದ್ಯಮಕೆ ನೆರಂ.
ನಿನ್ನಾಸೆ ನಲ್ಲದು, ವಿಭೀಷಣ ಕುಮಾರಿ, ಅದು
ಸಲ್ಗೆ!"

ಆಶೀರ್ವದಿಸಿದವನಿಜೆಗೆ ಅನಲೆ: "ತೊರೆ
ನಿರಾಶೆಯಂ, ದೇವಿ. ವಾರ್ತೆಯನೆನ್ನ ತಂದೆಗೆ
ಹಿರಣ್ಯಕೇಶಿಯ ಕೈಲಿ ಕಳುಹಿದೆನ್. ಇಂದ್ರಜಿತು
ಕೈಕೊಳ್ವ ಕ್ರತು ಮುಗಿವ ಮುನ್ನಮೆಯೆ, ವಿಘ್ನಮಂ
ತಂದೊಡ್ಡುವರ್ ದಿಟಂ, ವಾನರ ಮಹಾ ಪ್ರಾಜ್ಞ
ಸೇನಾನಿಗಳ್." ಮುಗುಳ್ನಗೆವೆರಸಿ, ಆ ಧೈರ್ಯಮ್
ಎನಗಿರ್ಕುಮೆಂದ ಸೀತೆಗೆ, ಮತ್ತಮನಲೆ: "ನೀನ್,
ದೊಡ್ಡಯ್ಯನಿಂದಿಲ್ಲಿಗೈತರಲ್, ನಮ್ಮಿದಿರ್
ತಾಯಾಗಿ ತೋರ್ಪವೊಲ್ ತೋರಿ, ಕಂದಂಗೆಂತೊ
ಅಂತೆ, ಹಿತವನೊರೆ ಸದ್ಬುದ್ಧಿಯಂ. ನಿಚ್ಚಮುಂ

ನಿನ್ನನೆಯೆ ನೆನೆದಾತನಾತ್ಮಕ್ಕೆ ನಿನ್ನೊಂದು
ಪೊಳೆಯತೊಡಗಿದೆ ಮಹಿಮೆ. ಮರುಗುವಂದದಿ ಮನಂ
ಕರಗುವಂದದಿ ಹೃದಯವವನಂತರಾತ್ಮಮಂ
ಮಿಡಿದು ನುಡಿ, ದೇವಿ, ಬೀರದ ಪೆರ್ಮೆ ಕನಿಕರಕೆ
ಶರಣಪ್ಪವೋಲ್! ಬಲ್ಲೆನೆನ್ನ ದೊಡ್ಡಯ್ಯನಂ
ನಾನ್. ದರ್ಪಕಾರಣಕೆ ಕೂರ್ಪನೆ ತೋರ್ಪನಪ್ಪೊಡಂ
ಕೂರ್ಮೆಗೆ ಮಣಿವ ಮೃದುಲತೆಯಿರ್ಪುದವನೆರ್ದೆಯ
ಕರ್ಬುನಕೆ. ಇನ್ನೆಗಂ ನಿನ್ನರೊಲ್ ಪೇರುಸಿರ
ಪೆಣ್ಗಳಂ ಸಂಧಿಸಿದನಿಲ್ಲದುವೆ ಕಾರಣವಾಯ್ತು
ಲಂಕೇಶ್ವರನ ದುರ್ಗತಿಗೆ. ದೂರಮಿರದಿನ್ ದಿಟಂ
ಮಹಾತ್ಮಂಗೆ ಸುಗತಿ!''
ಉಕುತಿಯ ದನಿಯ ನನ್ನಿಯ
ದುರಂತಮಂ ಬಗೆಯದಾಡಿದ ಮುಗುದೆಯನಲೆಯ
ಮುಡಿಯ ನೇವರಿಸಿ, ಪೆಗಲಿಂ ಜಗುಳುತಿರ್ಕೆಲದಿ
ಷೋಡಶ ವಸಂತ ವಕ್ಷವ ಸಿಂಗರಿಸಿ ನೀಳ್ದ
ನುಣ್ಪಿನ ಕರ್ಜಡೆಗಳಂ ಕರಾಗ್ರದಿಂದೆಳವಿ,
ರಾವಣಂ ಬಂದಾಗಳೆಂತು ತನ್ನಾತ್ಮಂ
ಪ್ರಚೋದಿಪುದೊ ಅಂತೆ ನಡೆವಂತೆ ಭಾಷೆಯನಿತ್ತು
ಸಂತಯ್ಸಿದಳು ದೇವಿ, ದೈತ್ಯಕುಲ ಕನ್ಯೆಯಂ
ಪೆತ್ತಳೋಲೋವಿ. ದೂರ ವಾರಿಧಿ ವೇಲೆಯಿಂ
ಬಾನ್ಗೇರಿದುದು ಪೊಗೆ ಮರುನ್ಮಾರ್ಗಮಂ ತೀವಿ!

## ಸಂಚಿಕೆ ೪

# ಮಡಿದನಿಂದ್ರಜಿತು ಐಂದ್ರಾಸ್ತ್ರದಿಂ!

ಇರುಳ್ಮುತ್ತುಗದ ಮರಂ ಇದ್ದಕಿದ್ದಂದದಿಂ
ಕಿಕ್ಕಿರಿದು ಪೂತುದೆನೆ, ಅಗ್ನಿಚಿತ್ರಿತವಾಯ್ತು
ತೆಕ್ಕನೆ ತಮೋಮಯ ಚಿದಂಬರಂ ಲಂಕಾ
ನಿಶೀಥಿನಿಗೆ. ಪೊಂಜುಗಳ್ ದೊಂದಿಗಳ್ ಕೊಳ್ಳಿಗಳ್
ಸುತ್ತುವರಿದುವು; ಮುತ್ತಿ, ಲಗ್ಗೆನುಗ್ಗಿದುವಸುರ
ದುರ್ಗಕ್ಕೆ. ಪೊತ್ತಿದುವು ಸೌಧಗಳ್, ಧಗಿಸಿದುವು
ಪೊಗೆಯುಗುಳ್ವಾಪೆಣಶ್ರೇಣಿಗಳ್; ಮನೆಮನೆಯ
ನೆತ್ತಿಯಂ ಪತ್ತಿ, ಸಾಕಿದ ಬೆಕ್ಕುಗಳ್ ಕೂಗಿ
ಕರೆಯುತಿರ್ದುವು ರಕ್ಷೆಯಂ; ಬೀದಿಬೀದಿಯಲಿ
ಗೋಳ್ ಮೊರೆಯನೆಬ್ಬಿಸುತೆ ನುಗ್ಗಿ ಪರಿದುದು ಬೆಂಕೆ
ಪೊನಲವೋಲುರಿತೆರೆಗಳಲೆಯೆ.
ಅತಿಕಾಯನಂ,
ಧಾನ್ಯಮಾಲಿನಿಯುದರದಲಿ ತನಗೆ ಸಂಭವಿಸಿ
ಪತಿದೂರೆಯಾದಾ ಪತಿವ್ರತೆಯ ಸಂಕಟದ
ಜೀವಿತಕೆ ಜೀವಾತುವೋಲಿರ್ದ ತನ್ನದ್ಭುತ
ಕುಮಾರನಂ, ಬ್ರಹ್ಮ ವರಬಲ ಸಮರ ಶೂರನಂ,
ಗಿರಿಶಿರೋಪಮ ರುಂದ್ರನಂ ಕರೆದು ಬೆಸಸಿದನ್
ರಾಕ್ಷಸೇಂದ್ರಂ: ''ವಿಷಮ ಸಮಯಮಂ ನೆನೆದೀ
ನಿಶಾಯುದ್ಧಮಂ ಪೂಡಿದರ್ ಶತ್ರುಗಳ್, ವತ್ಸ.
ಕುಂಭಕರ್ಣಂ ಮಡಿದನಿಂದ್ರಜಿತು ತಾಂ ಪೂಣ್ದು
ಪೊಕ್ಕನ್ ನಿಕುಂಭಿಲಾ ಯಾಗ ಮಂಟಪಕೆ. ನೀಂ
ಪಗೆಗೆ ಕಾಳೆಗಗೊಡಲ್ ವೇಳ್ಕುಮೀ ಒಂದಿರುಳ್

ಲಂಕೆಯಂ ಬೆಂಕೆಯಿಂ ಪೊರೆದು. ಈ ಒಂದಿರುಳ್
ನಿರ್ವಿಘ್ನಮಾಗೆ, ಕೈಸಾರ್ವುದದ್ಭುತ ಸಿದ್ಧಿ
ಪೊಳ್ತರೆಗೆ, ಮೇಘನಾದನ ಯಾಗ ಯೋಗಕ್ಕೆ.
ಮೇಲೆ ನಿನ್ನಣ್ಣನೇಂ ಮುನಿದ ಮುಕ್ಕಣ್ಣನಂ
ಲೆಕ್ಕಿಪನೆ? ಕಪಿರಿಪುಗಳಂತಿರ್ಕೆ! ರಾಮನಂ
ರಣಕೆ ಹೋಮಂಗೊಳ್ವೆವದು ದಿಟಂ ನಾಳಿನ
ಮಹೋಗ್ರ ಸಂಗ್ರಾಮ ಯಜ್ಞದಲಿ! ನೀನನ್ನೆಗಂ
ರಕ್ಷೆಯಾಗಿರು ನಮ್ಮ ಭಾಗ್ಯಕ್ಕೆ, ದುರ್ಗಕ್ಕೆ,
ಮೇಣ್ ದೈತ್ಯ ಸ್ವರ್ಗಕ್ಕೆ! ನಡೆ, ಕಂದ, ತಡೆ ಹಗೆಯ
ಮುನ್ನಡೆಯನಾ ಕಾಣ್ಬ ಕೇಸುರಿವೋಟಮಂ.''
                                                ಬಾಗಿ
ತಂದೆಯಾಣತಿಯೆಸಗೆ ಪೋಗಲಿರ್ದಾ ತನ್ನ
ಕಿರಿವೆಂಡಿತಿಯ ಉಸಿರಿಗುಸಿರಾದ ಕುವರನಂ
ಮರಳಿ ಕರೆದನು ಸುರಾರಾತಿ. ಮಮತೆಯೊಳವನ
ಮೊಗ ನೋಡಿ ನುಡಿದನೆದೆಯೊಳಗೇನೊ ತನಗಾದ
ಭಯ ಚಲನಮಂ: ''ವೀರನಹುದಾದೊಡಂ, ನಿನಗೆ
ಸಾವೆಂಬುದೊಂದು ನಗೆವಿಷಯಮಾದೊಡಮೊಂದು
ಬಗೆಯ ಬಿನ್ನಪವೊರೆಯೆ ತವಕಿಸುತ್ತಿರ್ಪುದೆರ್ದೆ.
ರಾಜಾಜ್ಞೆಯಲ್ತು, ಪೆತ್ತವರೊಂದು ಬಿನ್ನಪಂ:
ನಿನ್ನ ತಾಯ್ ಧಾನ್ಯಮಾಲಿನಿಯುಸಿರ್ ನಿನ್ನಿಂದೆ,
ನಿನಗಾಗಿ, ತಡೆದಿರ್ಪುದಿಲ್ಲಿ. ಮರೆಯದಿರದನ್
ಸಮರ ಸಂಭ್ರಮದಿ.''
                              ಅತಿಕಾಯನಾಯತ ತನು
ಕುಸುಂಗಿದತ್ತಾ ನುಡಿಗಳಿಂಗಿತಕೆ: ತನ್ನ ತಾಯ್
ತನಗೆ ತಾಯಹ ಮುನ್ನಮಿನ್ನೊರ್ವನರಸಿಯುಂ
ಹದಿಬದೆಯುಮಾಗಿರ್ದುದಂ ದಾದಿಯರ ಮೊಗದೆ,
ಪರ್ಚುಸುಡಿಯಾಡುತಿರ್ದವರ ಕಣ್ ಮಿಸುಗಿನಿಂ,
ಗ್ರಹಿಸಿರ್ದನೆಳವರೆಯದೊಳ್. ತನ್ನ ತಾಯೇಗಳುಂ
ಅದಾವುದೊ ವಿಷಾದದಂತರ್‌ಜ್ವಾಲೆಯಿಂ ಬೆಂದು
ಕೃಶಳಾದೊಡಂ, ತನಗದಂ ತೋರಗೊಡದಂತೆ
ಮೇಲ್‌ನಗುತ್ತಿರ್ದುದನರಿತು, ಕೇಳ್ದನೊಗ್ ದಿನಂ

ತನ್ನಬ್ಬೆಯನೆ, ದಾದಿಯರ ಮಾತಿನಾ ಮರ್ಮಮಂ
ತನಗರುಹಬೇಕೆಂದು. ಒರೆಯದೇನೊಂದುಮಂ
ಮಗನ ಮುದ್ದಿನ ಮೊಗಕೆ ಮೊಗವಿಟ್ಟು, ಸುಯ್ಯಳ್ತು,
ಮಿಸಿಸಿರ್ದ್ದಳದನಶ್ರುತೀರ್ಥದಲಿ. ಪೆತ್ತಳಾ
ಮೂಗಳ್ಕೆ ಕೈಶೋರ ಮುಗ್ಧಹೃದಯಕೆ ವಾಗ್ಮಿ
ತಾನಾಯ್ತು, ನೂರುಪನ್ಯಾಸಂಗಳಿಂ ಮಿಗಿಲ್
ಧ್ವನಿಪೂರ್ಣಮೆಂಬಂತೆವೋಲ್. ಅಂದು ಮೊದಲಾಗಿ
ಅತಿಕಾಯನಂಬೆಯ ಅಳಲ್ಗೆ ಸಂತೈಕೆಯಂ
ತರಲೆಳಸಿದನು ತನ್ನ ಇರ್ಮ್ಮಡಿಸಿದಳ್ಕರೆಯ
ಅಮರ್ದು ಮರ್ದ್ದಿಂದೆ. ತಾಯ್ ಸುತಮೋಹದಿಂಪಿನಲಿ
ತನ್ನಾತ್ಮದುರಿಗೆ ಸಿಂಪಿಸಿ ತಂಪನೆಳಸಿದಳ್
ತನ್ನ ಮುನ್ನೊಲ್ಮೆಯಂ ಮುಳುಗಿಸಲ್ ವಿಸ್ಮೃತಿಯ
ವೈತರಣಿಯೊಳ್. ಪತಿವ್ರತೆಗದೇಂ ಸುಲಭಮೇನ್
ಮರೆಯಲಾ ಪ್ರಥಮಮಂ ಪ್ರೇಮಮಂ, ದಶಕಂಠ
ದುರ್ಮೋಹ ವಜ್ರಘಾತಕೆ ಕೆಡೆದ ಸಂಸಾರ
ಗೋಪುರ ಪವಿತ್ರಮಂ? ಮನವೊಪ್ಪದಿರ್ದುದಕೆ
ತನುವೊಪ್ಪಿದವಳ ಬಾಳ್ ನರಕಮಾದುದು. ಸುತನ
ಸುಸ್ಮಿತ ಸ್ವರ್ಗದಿಂದಾ ನರಕ ಕೂಪಮಂ
ಬಾಸಣಿಸಿ ಬದುಕುತಿರ್ದಳು ಧಾನ್ಯಮಾಲಿನಿ,
ದಶಗ್ರೀವನವನಿಜಾರೂಪಿ ಧರ್ಮಸ್ಮರಣ
ಪುಣ್ಯ ಪಶ್ಚಾತ್ತಾಪಮಂ ತಂದು ಸದ್ಗತಿಗೆ
ತನ್ನನೆಳ್ಚರಿಪನ್ನೆಗಂ. ಸೀತೆಯಂ ಕಂಡಂದು
ಧಾನ್ಯಮಾಲಿನಿಗೆ, ಸಿದ್ಧಿಯನಾಂತ ಯೋಗಿಯಂ
ಕಾಣ್ಬ ಯೋಗಭ್ರಷ್ಟನಂತಾಗೆ, ಪೂರ್ವಮಂ
ನೆನೆದು ಕೊರಗಿದಳೊದಗಿದಾತ್ಮ ಪತನಕೆ; ಮತ್ತೆ,
ಅನ್ಯರರಿಯದವೋಲೆ ತೊಡಗಿದಳ್ ತನ್ನೊಳೆ
ತಪಶ್ಚರ್ಯೆಯಂ! ಮಾಸಿದುದು ಮೊಗದ ಮೋದರುಚಿ;
ಮೂಡಿತು ವಿಷಾದಕಳೆ; ದನಿ ಕುಗ್ಗಿ, ನುಡಿ ತಗ್ಗಿ,
ಸುತ್ತಿ ಸುಳಿದುದು ನೀರವತೆ ಮಿಳ್ತು ನೆಳಲಂತೆ.
ರಾವಣಪ್ರಣಯವಂತಿರಲಿ, ಸುತ ವಾತ್ಸಲ್ಯ
ಮಧುವುಮಾಕೆಗೆ ಗರಳ ರೂಪಮಂ ತಳೆದುದೆನೆ,

ಧಾನ್ಯಮಾಲಿನಿ ಹೃದಯ ಸಂಕಟದ ಮರ್ಮಮಂ
ತಿಳಿವರಾರ್, ಹದಿಬದೆಯರಂತಸ್ಥಮಂ? ಸುತಂ
ವೀರನತಿಕಾಯನಮ್ಮನ ಮನೋವ್ಯಥೆಯಂ
ನಿವಾರಿಸಲುಪಾಯಮಂ ಕಾಣದೆಯೆ, ಪುಲಿದರಿಯ
ನಡುವೆ ನಿಂದಿರ್ದವಂಗಾ ತಂದೆಯಾಣತಿಯ
ಕಾಳಗದ ಕಣವೆ ಬಿಡುತೆಗೆ ಬಾಗಿಲಾಗಿರಲ್
ತೊರೆವನೇಸ್ ವೀರೋಚಿತದ ರಣದ ಮರಣದ
ಸುಯೋಗಮಂ?
"ನನ್ನಿಂದೆ, ನನಗಾಗಿ, ನನ್ನ ತಾಯ್
ಬರ್ದುಕಿ ಬೇಯುತ್ತಿಹಳ್? ನನ್ನ ಸಾವಿರ್ವರ್ಗೆ,
ತಾಯ್ಗೆನಗೆ, ಶಾಂತಿಯಂ ದಯೆಗೆಯ್ವೊಡಿಂದಿನ
ರಣಂ ತರಲ್ ವೇಳ್ಕುಮಾ ಶಾಂತಿಯಂ!"
ತನ್ನೊಳಗೆ
ಇಂತು ತರಿಸಂದು ಅತಿಕಾಯನಯ್ಯಂಗೆರಗಿ,
ಪರಕೆಯಂ ಪಡೆದು, ತೇರೇರಿದನು ರಾತ್ರಿಯ
ರಣಾಂಗಣದ ನಾಕಮುಖ ಸೋಪಾನಮಯ ರಜತ
ಪರ್ವತಾರೋಹಣೋದ್ಯಮಕೆ!—ಬೇಸಗೆವಗಲ್,
ಮಲೆಯ ನಾಡಿನ ಕಾಡಿನಂತರದಿ, ಬಿದಿರಮೆಳೆ
ಚೀರಿಡಲ್ ತೀಡುವ ಸಮೀರಣನ ಪೀಡನೆಗೆ,
ಪೆಣೆದ ಪಿಂಡಿಲ ನಡುವೆ ಕಿಡಿ ಚಿಮ್ಮಿ ಪೊಗೆಯುಣ್ಮೆ
ಹೆಡೆ ಬಿಚ್ಚಿ ಸುಯ್ವುದು ಸುಷುಪ್ತ ದಾವಾಗ್ನಿ ಫಣಿ
ಸುರುಳಿ ಬಿಚ್ಚುತೆ ಹೊರಳಿ ಕೆರಳಿ; ಮೆಳೆಯಿಂ ಮೆಳೆಗೆ
ಭೀಕರದುರಿಯ ನಾಲಗೆಯ ನಿಮಿರಿ, ನೆಗೆ ನೆಗೆದು
ತಬ್ಬಿ, ಭೋರಿಡುತುಬ್ಬಿ, ಹಬ್ಬುವುದಡವಿ ತಪಿಸಿ
ಚಕಿತ ಮೃಗ ಪಕ್ಷಿ ರಾವದ ರೂಪದಿಂದೊರಲಿ
ಚೀತ್ಕರಿಸೆ. ಕರಿಕುವರಿಸುತ್ತಟವಿಯಂ, ಕೃಷ್ಣಮಂ
ವರ್ತ್ಮಮಂ ನಿರ್ಮಿಸುತೆ, ದಾಳಿಡುವುದಾ ಕಿರ್ಚು
ಮಲೆನೆತ್ತಿಯಿಂ ಕಣಿವೆಗೊಕ್ಕಲಿಗರಿರ್ಪೊಂದು
ಪಳ್ಳಿವೀಡೆಡೆಗೆ. ಹಾಹಾಕಾರವೇಳುವುದು;
ಕಾಕು ಕೂಗುಗಳೇಳ್ವುವೋರೊರ್ವರಂ ಕರೆವ
ದನಿ ಮರುದನಿಗಳಿಂ. ದವಾಗ್ನಿಗಿದಿರಗ್ನಿಯಂ

ಪಡಿವೊತ್ತಿಸಲ್ ಮನಂದಂದು ನಡೆವುದು ಪಳ್ಳಿ
ಕೈಗೊಳ್ಳಿಗಳನಾಂತು ಕರಡವುಲ್ ಬೆಳೆದೊಣಗಿ
ನಿಂದ ತುರುಮೇವು ಮೀಸಲ ಸಿರಿಯ ತಪ್ಪಲಿಗೆ.
ಗೋಧನಕ್ಕಾಹಾರಮಾಗಿರ್ದೊಡೇಂ? ಪೊತ್ತಿಪರ್
ಪ್ರತ್ಯಗ್ನಿಯಂ ಪಳ್ಳಿಯಂ ಪೊರೆವ ಸಾಧನೆಗೆ!
ಪೇಳಾದೊಡೇನಾಂಕೆಗೊಳ್ವುದೆ ಗ್ರಾಮ್ಯಮೀ ಬೆಂಕೆ
ಪ್ರಕೃತಿಭೀಮಮಂ ಆ ದವಾನಲೋದ್ದಾಮಮಂ?
ನುಗ್ಗುವುದು, ಕಾಡಿನಿಂದೇಳ್ವ ಗಾಳಿಯ ಬಲದಿ,
ಗದ್ದೆ ತೋಟಗಳೆಡೆಯೆ ಹುಲ್ಲು ಸೋಗೆಯ ಹೊದೆದು
ಹದುಗಿದ ಸುಲಭದೂರದೂರೆಡೆಗೆ. ಕೆಟ್ಟೆವೋ!
ಕಂಗೆಟ್ಟೆವೋ! ಮನೆಗೆಟ್ಟೆವೋ! ಬಾಳ್‌ಗೆಟ್ಟೆವೋ!
ಎನುತೆ ಬಾಯ್ಬಿಡುತೆ, ತಮ್ಮಳುವ ಮಕ್ಕಳನಿರುಕಿ
ಕೌಂಕುಳಲಿ, ಮೊರ ಮಡಕೆ ಅರುವೆ ಅಕ್ಕಿಯನುರಿಯ
ಅಣಲಿನಿಂದುಳಿಸಿಕೊಳ್ಳುವ ಯತ್ನಶೀಲೆಯರ್
ಗ್ರಾಮೀಣಬಾಲೆಯರ್ ಗ್ರಾಮದೇವರ್ಕಳಂ
ಪೆಸರಿಟ್ಟು ಕೂಗುವರ್; ಕೂಗಿ ಪರಿದಾಡುವರ್;
ಪರಿದಾಡಿ ಬೇಡುವರ್; ಮುಡಿಪು ಕಟ್ಟುವರವಕೆ
ತೆಂಗುಗಾಯ್ ಬಾಳೆಗಾಯ್ ಕೋಳಿಮರಿ ಕುರಿಯಮರಿ
ಮೇಣಿಷ್ಟ ನೈವೇದ್ಯನಿವಹಂಗಳಂ. ಇಂತುಟಾ
ಪೆಣ್ಣಿಂತು ಗಂಡಂತು, ಕಾಡುಗಿಚ್ಚಂ ತಡೆವ
ಸಾಹಸದೊಳಿರೆ, ತೆಕ್ಕನೆ ದಿಗಂತದತ್ತಣಿಂ,
ದೇವರ್ಕಳಾ ರೂಪಮಂ ತಳೆದು ಕೃಪೆದೋರೆ
ಬರ್ಪರದೊ ನೋಡೆಲಾ ಎಂದೆಲ್ಲರುಲಿವಂತೆ,
ಕಾರ್ಗಾಳಿ ಕರ್ಮುಗಿಲ್‌ಗಳಂ ಪೊತ್ತು ಬೀಸಿತ್ತು
ಬಾನ್ನೆತ್ತಿ ಕತ್ತಲಿಸೆ, ಮುಂಗಾರ್ ಮಹಾಕಾಳಿ
ಹುಬ್ಬುಗಂಟಿಕ್ಕಿದೋಲ್! ಮುಚ್ಚಿ ತೆರೆವನಿತರೊಳ್
ಕಣ್, ಸಿಡಿಲ್ ಗುಡುಗು ಮಿಂಚುಗಳೊಡನೆ ಸುರಿವಾಲಿ
ಕಲ್ಲುಗಳ ಸರಿಯೊಡನೆ-ಸೋರ್ವುದು ಮಹಾವೃಷ್ಟಿ;
ಕರೆವುದು ಮುಸಲಧಾರೆ, ನಂದುವುದು ಕಾಳ್ಗಿಚ್ಚು
ನಿಶ್ಶೇಷಮಾಗಿ, ಕೆರೆಗಿಕ್ಕಿದೋಲ್ ಕೆಂಗೆಂಡಮಂ!
ಅಂತೆವೋಲ್, ಮುಂಗಾರ್ ಗಾಳಿಮುಗಿಲಂತೆವೋಲ್,

ಕುಂಭ ಮಕರಾಕ್ಷರ್ ನಿಕುಂಭಾದಿಗಳ್ ವೆರಸಿ
ರುಂದ್ರತನುವತಿಕಾಯನುರಿಯಿಕ್ಕುವರಿದಳಕೆ
ನಡೆದನಿದಿರಾಗಿ, ಜಳಯಂತ್ರವರ್ಷಸ್ರೋತ
ವೇಗಕಾ ವೈರಿವಾಹಿನಿ ಕೆಚ್ಚು ಗೆಟ್ಟವೋಲ್
ಕಿಚ್ಚುಗಿಡುವಂತೆ. ಮೈಂದದ್ವಿವಿದರಂ ಕೂಡಿ
ವಾಲಿಯ ತನೂಭವಂ ತನ್ನಾಯ್ದ ಪಡೆವೆರಸಿ
ತಡೆದನತಿಕಾಯನ ಪತಾಕಿನಿಯ ಮುನ್ನಡೆಯ
ಮದಗಜದ ಮಾರ್ಗಕೆ ಅಗಳ್ತೆಯನಗೆಯುವಂತೆ.
ತೊಡಗಿದುದು ತುಮುಲ ಯುದ್ಧಂ! ರಾತ್ರಿ ನಿಡುದಾರಿ
ನಡೆದು ಕಡೆಜಾವಮಂ ಸೇರುತಿರೆ, ಕಪಿಸೇನೆ
ಧಾನ್ಯಮಾಲಿನಿಯಾತ್ಮಜಪ್ರಲಯ ಪೌರುಷಕೆ
ಸರಿಸರಿದು ಹಿಂಜರಿದು ತೊರೆದುದು ದಶಗ್ರೀವ
ದುರ್ಗವನ್, ಅಪ್ಪುವೊಲ್ ವೀರಸ್ವರ್ಗಮಂ. ಕೆಲರ್,
ಪಡೆಯಳಿದು ತಾಮುಳಿದ ವರ ಬಲಿಷ್ಠರ್ ಕೆಲರ್
ಪಿರಿಯ ಸೇನಾನಿಗಳ್, ದುರ್ವಾರ್ತೆಯಂ ಪೊತ್ತು
ಬಾಗಿ, ಬಿಡಿಬಿಡಿಯೆ ನಡೆದರು ತಮ್ಮ ಶಿಬಿರಕ್ಕೆ.
ಸೊಡರ ಕುಡಿಯಂ ನಂದಿಸಲ್ ನುಗ್ಗುವ ಪತಂಗಂ
ದೀಪದುರಿಯಂ ಮಳ್ಗಿಸುತೆ ತಾನುಮಾ ಶಿಖಿಗೆ
ಸುಟ್ಟು ಸೀಕರಿವೋಗಿ ಬೇಳ್ವೆಯಪ್ಪಂದದಿಂ,
ವಾನರಾಗ್ನಿಯನಾರಿಸಿದ ಧಾನ್ಯಮಾಲಿನಿಯ
ಕಂದನತಿಕಾಯನುಳಿದನ್ ಸ್ಥೂಲಕಾಯಮಂ
ರಣಮೇದಿನಿಯ ಮಧ್ಯೆ: ಮೆರೆದನ್ ಯಶೋದಿವದಿ
ಕೀರ್ತಿಯಕ್ಷಯ ಸೂಕ್ಷ್ಮಕಾಯದಲಿ.

ಇತ್ತಲ್,

ಇರುಳ್ಮುತ್ತಿಗೆಯನೊಡ್ಡಿ, ಲಂಕೆಯ ಮನವನೆಳೆದು,
ರಾಕ್ಷಸಬಲವನೆಳೆತಟಂ ಮಾಡಿ, ಅಂಗದನ
ಸೇನೆ ಅತಿಕಾಯಬಲದೊಡನೆ ಹೋರಾಡುತಿರೆ;
ಅತ್ತಲ್, ವಿಭೀಷಣನ ಹಿತಮಂತ್ರಣಂಗೇಳ್ದು,
ಶ್ರೀರಾಮನಾಜ್ಞೆಯಾಶೀರ್ವಾದರಕ್ಷೆಯಂ
ತಾಳ್ದು, ಜಾಂಬವ ಹನುಮ ನೀಲ ನಳರಂ ಕೂಡಿ
ಸುಮಿತ ಪರಿವಾರ ಪರಿವೇಷ್ಟಿತ ಸುಮಿತ್ರಾತ್ಮಜಂ

ಅನಲೆಯಯ್ಯನ ಸನ್ನೆಯಲಿ ನಡೆದನಿಂದ್ರಜಿತು
ಮೇಘನಾದಂ ನಿಕುಂಭಿಲೆಯ ಯಾಗದೊಳಿರ್ದ
ನ್ಯಗ್ರೋಧ ಮೂಲದ ಗುಹಾರಹಸ್ಯವನರಸಿ,
ರಜನಿ ಮುಗಿಯುವ ಮುನ್ನಮಾ ಕ್ರತುಪ್ರಯತ್ನಮಂ
ಕಿಡಿಸಿ, ಭಂಗಿಸೆ ಕೂಟಯೋಧಿಯಂ.
                                        ತ್ರಿಕೂಟಗಿರಿ
ಗಹ್ವರ ಗಹನ ನಿಭೃತ ಕಂದರದೊಳಿರ್ದೊಂದು
ನ್ಯಗ್ರೋಧ ಮೂಲದ ಸುವಿಸ್ತೃತ ಗುಹೋದರದಿ
ರಚಿಸಿದನು ಮಂತ್ರಮಂಟಪಮಂ ಮಹೇಂದ್ರಾರಿ,
ದೇವ ದಾನವ ದೃಗುಭಯಂಕರಮೆನಲ್. ದೂರ,
ಹೊರವಳಯದಲಿ, ಕಾಪಿರಿಸಿದನು ನಚ್ಚಿನ ತನ್ನ
ಸುಭಟಶ್ರೇಷ್ಠರಂ, ಕೇಳ್ ಜಡಪ್ರಾಪಂಚಿಕದ
ಪಂಚ ಭೌತಾನ್ನಮಯದಲ್ಲಿ; ಮೇಣ್ ಸೂಕ್ಷ್ಮದಲಿ
ಕಾಪುವಿರವೇಳ್ದನು ಪಿಶಾಚರಿಗೆ; ಪ್ರಾಣಮಯ
ಚಕ್ರದೊಳ್ ನಿಲಿಸಿದನು ಭೂತಂಗಳಂ, ಮೇಣ್
ಪರೇತಂಗಳಂ. ಮೇಣ್ ಮಹಚ್ಛಕ್ತಿ ಯಂತ್ರಂಗಳಂ.
ಪ್ರಾಣಮಯದಾಚೆಯ ಮನೋಮಯದ ಲೋಕದಲಿ
ತನ್ನಯ ತಪಶ್ಶಕ್ತಿಯಿಂದಗ್ನಿ ಶರಧಿಯಂ
ನಿರ್ಮಿಸುತ್ತದರ ಪರಿಧಿಯ ಮಧ್ಯೆ, ಪದ್ಮದೊಲ್
ದಲಸಹಸ್ರದಿ ಮೆರೆವ ವಜ್ರಮಯ ವೇದಿಯಂ
ಕಲ್ಪಿಸಿದನಾತ್ಮ ಸಂಕಲ್ಪದಿಂ. ತನ್ಮಧ್ಯೆ, ಕೇಳ್,
ಕುಳ್ತನಾ ದೈತ್ಯ ದುರ್ಮಂತ್ರ ತಾಂತ್ರಿಕ ವರೇಣ್ಯಂ
ದುರ್ವಿಜ್ಞಾನ ಶಕ್ತಿಯಾಹ್ವಾನ ದೀಕ್ಷಿತನಾಗಿ,
ಕಳವಳಿಸೆ ಕಾತರಿಸೆ ಭುವನತ್ರಯಂ! ರೇಚಕಂ
ಪೂರಕಂ ಕುಂಭಕ ವಿಧಾನದಿಂ ಪ್ರಾಣಂಗಳಂ
ಸ್ತಂಭಿಸುತೆ, ಜಡಭೌತ ನಿಯಮಾನ್ನಮಯ ಜಗನ್
ನಿಯತಿಗಳನತಿಗಳೆದು ಸೇರ್ದನು ಅವಿದ್ಯಾಮಾಯೆ
ತನ್ನ ವಿದ್ಯಾಬಲವನಾದ್ಯಶಕ್ತಿಯ ಸೇವೆಯೊಳ್
ಲೀಲಾರ್ಥಮೆನೆ ಸಾರ್ಥಕಂಗೆಯ್ದಿರ್ದ ಸರ್ವಾರ್ಥ
ಸಿದ್ಧಿಲೋಕಕ್ಕೆ. ಚಿತ್‌ಕುಂಡದೊಳ್ ಪ್ರಜ್ವಲಿಸಿ
ಇಚ್ಛಾಗ್ನಿಯಂ, ಬಲಿದು ದೃಢಚಿತ್ತ ಯೂಪಮಂ,

ಬಿಗಿದನಿಂದ್ರಿಯ ಪಶುಗಳಂ ಕಡಿದು ಬೇಳಲ್ಕೆ.
ಸರ್ವೇಂದ್ರಿಯಂಗಳುಂ ತಮ್ಮ ಸರ್ವಸ್ವಮಂ
ಪ್ರತಿಮಿಸಿದುವೆನಲೊಂದು ಬಂದು ನಿಂದುದು ಮುಂದೆ
ದಿಕ್ಕರಿಗಳೆಂಟುಮೊಂದಾದ ಗಾತ್ರದ ಮಹಾ
ಬೃಹನ್‌ಮೇಷಿ! ಮಿಂಚುತಿರೆ ಪೊನ್ನುಣ್ಣೆ ಸುತ್ತಣದಗ್ನಿ
ಬಣ್ಣಂಗೆಡಲ್, ಯೋಜನದೀರ್ಘ ಕಾಲಾಯಸದ
ಖಡುಗದಿನದಂ ತುಂಡರಿಸಿದನು ಮಹೇಂದ್ರಜಿತು,
ಕೆನ್ನೀರ್ವೊನಲ್ ಕೋಡಿವರಿದು ಮಖಶಿಖಿಯುರಿಯೆ
ಜಗದ ಕಡೆಗಿರ್ಚವೋಲ್! ಕವಿಯ ವರ್ಣನೆಗಳವೆ
ಚಿತ್ರಸಲತೀಂದ್ರಿಯವ್ಯಾಪಾರಮಂ ಮನುಜ
ಕಲ್ಪಿತ ಮರ್ತ್ಯಭಾಷೆಯ ಪಂಗುಲಿಪಿಯಲ್ಲಿ?
ಕೇಳಾದೊಡಂ ಪೇಳ್ವೆನೆನ್ನ ಕಣ್ ಮುಚ್ಚಲಾಂ
ಕಾಣ್ಬಂಗಳಂ: ರಾವಣಿ ಅಥರ್ವ ವೇದೋಕ್ತ
ತಾಂತ್ರಿಕ ವಿಧಾನದಿಂದಾಮಂತ್ರಿಸಲ್ ಮಹಾ
ಶಕ್ತಿಮಾತೃಕೆಯರಂ, ಕುದಿಯ ತೊಡಗಿದುದೊಡನೆ
ಪರಿಧಿಯಾಗಿರ್ದಗ್ನಿಶರಧಿ! ಗಂಧಕ ಗಂಧಮಯ
ಧೂಮ ಮೇಘಂಗಳೆದ್ದುವು ವಿಕಾರಾಕೃತಿಯ
ವಿನ್ಯಾಸದಿಂ ಚಿದಾಕಾಶಮಂ ತೀವಿ! ಮೇಣ್,
ಕಲಿಯುಗಾಭೀಳ ಯುದ್ಧೋದ್ಯಮಕೆ ಪಾಶ್ಚಾತ್ಯ
ಭೌತವೈಜ್ಞಾನಿಕ ಯಮಾಸಕ್ತಿ ನಿರ್ಮಿಸುವ
ಯಂತ್ರಕರ್ಮಾಗಾರ ಭೂತಚೀತ್ಕಾರಮಂ
ಕೀಳ್ಗೈವ ನಾರಕ ಬೃಹಚ್ಛಬ್ದಕೋಟಿಗಳ್
ಪೊಣ್ಮಿದುವು, ತಲ್ಲಣಂಗೊಳ್ಳಲಸು ಆ ಅಸುರ
ವೈಜ್ಞಾನಿಗುಂ! ಅಗ್ನಿಮಯ ಅಗ್ನಿವಾರ್ಧಿಯ
ತರಂಗಾಗ್ನಿ ಅಗ್ನಿ ಕುಕ್ಕಿಲಂಗಳೋಲುರ್ಬ್ಬಿ
ಪಾಯ್ದುವಂಬರದೇಶಮಂ ತಿವಿದು! ಪೇಳ್ವುದೇಂ?
ಬೆಂಕಿಯ ಬಸಿರ್ ಬೆಸಲೆಯಾದುದೆನೆ, ಮಾನಸ
ಮಹಾಕಾಶದೊಳ್ ಮೂಡಿದುವು ಮಹಾಮಂತ್ರಗಳ್,
ಅನ್ನಮಯ ಯಂತ್ರಮೂಲದ ಸೂಕ್ಷ್ಮತಂತ್ರಗಳ್
ಪಶ್ಯಂತಿಗಳ್. ಅತೀಂದ್ರಿಯಮೊಯ್ಯನೊಯ್ಯನೆ
ಮನೋಮಯಕ್ಕವತರಿಸಲಿಂದ್ರಜಿತುವಿನ ಮನದಿ

ಮಧ್ಯಮಾ ರೂಪದಿಂ ಬುದ್ಧಿಗೋಚರವಾಗಿ,
ಮೇಘನಾದನ ಜಿಹ್ವೆಗಿಳಿದುವಯ್ ಶ್ರುತಿಸಾಧ್ಯ
ವೈಖರಿಯ ವಾಙ್ಮಯತೆಯಿಂ!
                    ಶಕ್ತಿಸಾಧಕನಿಂತು
ರೌದ್ರ ವಿದ್ಯಾಶಕ್ತಿಯಂ ಸಾಧಿಪ ಪ್ರಯೋಗದೊಳ್
ಯೋಗಿಯಾಗಿರಲತ್ತಲಾ ತಪಸ್ವಿನೀಧವಂ,
ಊರ್ಮಿಳೇಶಂ, ಕಳ್ತಲೆಯ ಮರೆಯೊಳೈತಂದನಯ್
ನ್ಯಗ್ರೋಧ ಕಂದರಕೆ. ಮೇಘನಾದಾಜ್ಞೆಯಿಂ
ಯಾಗ ರಕ್ಷಣೆಗಡಗಿ ನಿಂತಿರ್ದ ಕಾಪಿನ ಭಟರ್
ಮೇಲ್ವಾಯಲವರನಶ್ರಮದಿಂದೆ ನಿಗ್ರಹಿಸಿ,
ನೀಲ ನೇತೃತ್ವದಲಿ ತಂದ ಪರಿವಾರಮಂ
ಕಾಪಿರಲ್ ವೇಳ್ದು, ಮುನ್ನೆಡೆದನಾ ಲಕ್ಷ್ಮಣಂ
ಹನುಮ ಜಾಂಬವ ನಳ ವಿಭೀಷಣ ಸುಷೇಣರಂ
ಕೂಡಿ. ಕೊಂಡದೊಂದುರಿವಗ್ನಿಯಲ್ಲದೇನುಂ
ಕಂಡುದಿಲ್ಲಲ್ಲಿ: ''ಅಸುರೇಂದ್ರ, ನೀಂ ಪೇಳ್ದಾ
ನಿಕುಂಭಿಲಾ ಯಾಗಶಾಲೆಯದೆಲ್ಲಿ? ಕಣ್ಗಿಲ್ಲಿ
ಗೋಚರಿಸದಾ ಬೆಂಕೆಯಲ್ಲದೇನೊಂದುಮುಂ!''
ಕೇಳ್ದ ರಾಮಾನುಜಗೆ ರಾವಣಾನುಜನಿಂತು
ಕುರಿತೊರೆದನಿಂದ್ರಜಿತುವೈಂದ್ರಜಾಲದ ತಂತ್ರ
ವಿಸ್ಮಯ ವಿಧಾನಮಂ: ''ದಶರಥಕುಮಾರ, ಕೇಳ್,
ದಶಶಿರಾತ್ಮಜನತಿಪ್ರವೀಣಂ ಕಣಾ, ಕೂಟ
ವಿದ್ಯಾ ಕುಶಲ ಕಲೆಯಲ್ಲಿ. ನಿಕುಂಭಿಲಾ ಯಾಗಮಂ
ರಚಿಸಿಹನತೀಂದ್ರಿಯ ಪಥದೊಳನ್ನತತ್ತ್ವಕೆ
ಅತೀತಮಿರ್ಪುನ್ನತಾಮರ್ತದೀಪ್ತಿಯ ಭುವರ್
ಲೋಕದಲಿ: ಈ ಅಗ್ನಿ ಅದಕೆ ಬಾಗಿಲ್ ದಿಟಂ!
ಯೋಗನಿಪುಣಂ ಮರುತ್‌ಸೂನು; ತಾನರಿವಂ
ಪುಗಲ್ಕೀ ಕೃಶಾನುಮುಖಮಾರ್ಗದಿಂದಿಂದ್ರಜಿತು ತಾಂ
ಕ್ರತುಗೈವ ಮಂತ್ರ ಮಂಟಪಕೆ. ರಾಮಾಜ್ಞೆಯಂ
ನೆತ್ತಿಯೊಳ್ ಪೊತ್ತ ಸತ್ತ್ವದ ಬಲದಿ ಸೌಮಿತ್ರಿ,
ಸಾಹಸದಿನೆಳಸಲ್, ಸಮರ್ಥನಪ್ಪನ್. ಮೇಣ್
ಅಗ್ನಿಶಕ್ತಿಯನಾತ್ಮ ಚಿಚ್ಛಕ್ತಿಯಿಂ ಗೆಲಲ್

ನನಗಲ್ತುಸದಳಂ, ಅಮಂಗಳಮದಲ್ಲದಿರೆ
ಲಂಕಾಭ್ಯುದಯಕೆ. ರಾವಣಿಯ ವಧೆ ಲಕ್ಷ್ಮಣಗೆ
ಮೀಸಲಾದುದರಿಂದೆ ಮೊದಲೀ ಸುಮಿತ್ರಾತ್ಮಜಂ
ಪುಗಲಿ; ತದನಂತರಂ ಆಂಜನೇಯಂ; ಮೇಲೆ
ನಮ್ಮೊಳಾರಳವೊ ನೋಳ್ಪಂ.''

ವಿಭೀಷಣ ಮತಂ

ನಡೆವ ಪಥಮಾಗೆ ಲಕ್ಷ್ಮಣ ಚಿತ್ತಮೇರ್ದುದು
ಮನೋರಥಕೆ. ಚಿತ್ತಪಸ್ತೇಜಕೆ ಭಯಂಗೊಂಡು
ವಾರಿನಿಧಿ ಹಿಂಜರಿದು ಕೈಮುಗಿದ ರಾಮನ
ಋತಪ್ರಭುತ್ವದ ಪಾದಪದ್ಮಂಗಳಂ ಸ್ಮರಿಸಿ
ನಡೆದು ಕಾಲಿಟ್ಟನಾ ಅಗ್ನಿಚಕ್ರಕ್ಕಹಾ
ಬ್ರಹ್ಮಾಂಡಮೊಡೆದುದೊ ಸಿಡಿಲ್ಗೆನಲ್ ಸದ್ದೆದ್ದು
ಲಕ್ಷ್ಮಣ ಕಳೇಬರಂ ಸಿಡಿದು ಕೆಡೆದುದು ಸೀದ
ಶವದಂತೆ! ನಡುಗಿತು ವಿಭೀಷಣನೊಡಲ್; ನಳಂ
ಮೂರ್ಛೆಗಿಳಿದನ್; ಜಾಂಬವಗೆ ತನಗೆ ತಾನಾಯ್ತು
ಕುಂಭಕಂ; ಕವಿದುದಯ್ ದಿಗ್‌ಭ್ರಮೆ ಸುಷೇಣಂಗೆ;
ವಿಸ್ಮಯಮಮರ್ದ್ದುದು ಸಮುದ್ರಸಾಹಸದದ್ರಿ
ಚೇತಸದಂಜನಾ ಸುತಗೆ. ತೀವಿದುದು ಪೊಗೆಮುಗಿಲ್
ಪ್ರಾಣ ಪೀಡಾಕರಮೆನಲ್ ಘ್ರಾಣಸಹನಾತೀತ
ದುರ್ಗಂಧಮಂ ಸ್ರವಿಸಿ ಪೂತ್ಕರಿಸಿ. ಸೈಪಲಾ
ಬರ್ದುಕಿದುದಿವರ್! ದೈವೀ ಸಹಾಯದೋಲಂತೆ
ತೀಡಿದುದೆಲರ್. ವಿಷವನೋಸರಿಸುತಮೃತಮಂ
ತಂದು ಬೀಸಿದ ಗಂಧವಹನಿಂದೈವರುಂ
ಸಪ್ರಾಣಿಸುತ್ತಲ್ಕೆತಂದು ಸೌಮಿತ್ರಿಯಂ
ಕಂಡರಪಮೃತ್ಯುವಿಗೆ ತುತ್ತಾದನಂ: ಪೇಳ್ವುದೇಂ?
ಗುರುತಿಸಲ್ಕಸದಳಮೆನಲ್ಕೆ ರವಿವಂಶಜನ
ಮೆಯ್ಗಡರ್ದತ್ತು ಕಾಜಾಣವಕ್ಕಿಯ ಗರಿಯ
ಕಾಡಿಗೆಯ ಕರ್ಪುಬಣ್ಣಂ. ಪಿಸುಳ್ದಂತೆವೋಲ್
ಕಣ್‌ಬರಳ್ ಪೊರಪೊಣ್ಮೆ ವಿಕೃತಮಾದುದು ವದನ
ಮಂಡಲಂ. ಬೆಳ್ಪೆಸೆಯುತಲ್ಲಲ್ಲಿ ಸುಲಿದ ಮೆಯ್
ಪೇಸಿದೊಲ್ ಸೋರ್ದತ್ತು ಗಾಯಂಗಳಿಂದೊಸರಿ

ದುರ್ನಿರ್ೀಗಳಂ. ನೋಡಬಾರದಾ ನೋಟಮಂ
ನೋಡಲಾರದೆ ನೋಡಿ ಹಮ್ಮಯ್ಸಿ, ಕಣ್ಮುಚ್ಚಿ
ತುಳ್ಕಿದರ್ ಕಣ್ಣೀರ್ಗಳಂ, ನೆನೆದು ತಂತಮ್ಮ
ದೈವಂಗಳಂ. ಕಡೆಗೆ ಮಾಂತ್ರಿಕ ಮಹಾ ಭಿಷಗ್
ಗುರು ಸುಷೇಣಂ ಪರೀಕ್ಷಿಸಿದನಂತರಮಿಂತು
ಪೇಳ್ದನಯ್ ತನ್ನ ದೀರ್ಘಧ್ಯಾನಫಲಿತಮಂ:
‘‘ಇದಭೌತಶಕ್ತಿಯಾಘಾತಮ್, ಇದಕಿನ್ನಿಲ್ಲಿ
ಭೌತ ಭೇಷಜಮಿಲ್ಲಮಾವುದುಂ. ಮಂತ್ರಮಂ
ಬಲ್ಲೆನಾದೊಡಮದಕೆ ಓಷಧೀಯಂತ್ರದ
ಸಹಾಯ ಸೇವಾ ಸ್ಫೂರ್ತಿಯಿರವೇಳ್ಕುಮದರಿಂದೆ
ತಳ್ವದೆಯದಂ ತರ್ಪೊಡೀ ರಾಘವಾನುಜಂ
ಬರ್ದುಕುವನ್. ಪೊಳ್ತು ಮೀರ್ವೊಡೆ ಹಿಂಚಲರಿಯದು
ಹರಣಮ್. ಒಡಲ್ ತನ್ನ ಜೀವ ಸಾಮರ್ಥ್ಯದಿಂ
ವಿಮುಖವಾಗುವ ಮುನ್ನವೀತನಸುವಂ ನಾಂ
ಬಹಿಃಪ್ರಜ್ಞೆಗೆಳೆಯದಿರೆ, ಮಸುಳ್ವಂ ಕಪಿಧ್ವಜ
ಯಶಃಸೂರ್ಯಂ; ಕೆಡುಗುಮಾ ರಾಮಕಾರ್ಯಂ! ಪೋಪರಾರ್?
ತರ್ಪರಾರ್? ಬಹುಯೋಜನಂಗಳಂ ದಾಂಟುತಾ
ಹಿಮವಂತನಂ ಮೀರಿ, ಕೈಲಾಸ ಋಷಭಾದ್ರಿಗಳ
ನಡುವೆ, ನಿರುಪಮ ಕಾಂತಿಯಿಂ ಜ್ವಲಿಸುವೋಷಧೀ
ಪರ್ವತವ ಸೇರಿ ಮೃತಸಂಜೀವಿನೀ ಲತೆಯ
ಬೇರ್ಗಳಂ ತರುವರಾರ್? ಬೇಗದಿಂ ಬರುವರಾರ್?
ಪೇಳಮೃತವೆರೆವರಾರ್?’’
ಆಲಿಸಿ ಸುಷೇಣನಂ
ಸಮುದ್ರದೋಲುಬ್ಬಿದನ್; ಗಿರಿಯವೋಲ್ ಕೊಬ್ಬಿದನ್;
ಗಗನದೋಲ್ ಪರ್ಬ್ಬಿದನ್, ಕೇಳ್, ಸಮೀರಾತ್ಮಜಂ!
‘‘ಪೋಪೆನಾಂ, ತರ್ಪೆನಾಂ!’’ ಎನುತೆ ಉದ್ಘೋಷಿಸುತೆ
ಅಣಿಯಾಗುತಿರ್ದಾಂಜನೇಯಂಗೆ ಸುಷೇಣಂ;
‘‘ಸಂಚರಿಸೆ ನೀನನ್ನಮಯ ಕಾಲದೇಶದ
ಜಗನ್ಮಾರ್ಗದಿಂ, ನಿನಗೆ ಬೇಹುದು ದಿನಂ, ಪೋಗಿ
ಬರ್ಪುದಕೆ. ಚರಿಸೆ ನೀಂ ಪ್ರಾಣಮಯ ಮಾರ್ಗದಿಂ,
ಬೇಹುದು ಮುಹೂರ್ತಕಾಲಂ. ಸಮೀರಕುಮಾರ,

ನಿನಗಿದು ಅಸಾಧ್ಯಮಲ್ತದರಿಂದೆ ಪೇಳ್ವೆನೀ
ಕಷ್ಟಸಾಧ್ಯವನಾವುದೆಂಬೆಯೊ? ಮನೋಮಯದಿ
ಚರಿಸೆ ನೀನತಿಶೀಘ್ರದಿಂದೆ ಕೃತಕೃತ್ಯನಹೆ:
ಬದುಕಿದೀ ಸೌಮಿತ್ರಿ ತಾನಾಗುವಂ ದಿಟಂ
ಮೇಘನಾದಧ್ವಂಸಿ! ತರಿಸಲ್ ಶುಭಾಧ್ವಮಂ!''
ತರಿಸಂದನಾ ಯೋಗಿ ಚರಿಸಲ್ ಮನೋಮಯದ
ಪಥದಿಂ. ಸುಷೇಣಾದಿಗಳ್ ನೋಡೆನೋಡೆ, ಕಣ್
ತಮಗೆ ಮಂಜಾದವೊಲ್, ಮಸುಗಾದುದಂಜನಾ
ಸುತಶರೀರಂ. ಮತ್ತೆ ಕಣ್ಮಾಯೆ ಕವಿದವೊಲ್,
ಕಾಣಿಸದವೋಲಾದನಾಂಜನೇಯಂ!
ತ್ಯಜಿಸಿ
ಮೃಣ್ಮಯವನದಕೆ ಬೆಂಬಲಮಾಗಿ ಪಿಂದಿರ್ಪ
ಸೂಕ್ಷ್ಮಾನ್ನಮಯಕೋಶದೇಶಕೆ ದಾಂಟಿದುದೆ ತಡಂ
ಕಂಡುದದ್ಭುತಮೆನಲ್ಕೀ ಪ್ರಕೃತಿ ಲೋಕಕೆ
ವಿರಿಂಚಿ ಸಮೆದಾದರ್ಶ ಮೂಲಕೃತಿಯೆನಿಸುವಾ
ತತ್ತ್ವತನು ಪೃಥಿವಿ. ಜಡತಾ ನಿಯತಿ ಭಾರದಿಂ
ಬಿಡುತೆಗೊಂಡಣುವಂ ಲಘುತರಪ್ರಪಂಚದೊಳ್
ಮಿಂಚಿನೊಲ್ ಸಂಚರಿಸಿ ಮಿಂಚೆನಲ್ ತಳತಳಿಸಿ
ಪೊಕ್ಕಂ ಪರೇತಪ್ರಪಂಚಮಂ. ಸುತ್ತಲಿಂ
ಮುತ್ತುತೈತರೆ ದುರಭಿಸಂಧಿಯ ಪಿಶಾಚಗಳ್
ತನ್ನ ತೇಜದಿನವುಗಳಂ ಭಯಂಗೊಳಿಸುತ್ತೆ
ಬರಬರಲ್. ಕೇಳ್ದುದಿರ್ಕೆಲದಲ್ಲಿ ಜಯರವಂ,
ತನ್ನುಜ್ಜುಗಕೆ ಬಯಸಿ ಗೆಲ್ಲಮಂ, ಸ್ವಸ್ತಿಯಂ
ವಾಚಿಸುವ ಸತ್‌ಪ್ರೇತ ಕಂಠಂಗಳಿಂ. ತನ್ನ
ಹರ್ಷಮಂ ವರ್ಣವೈಖರಿಯಿಂ ಪ್ರದರ್ಶಿಸುತೆ,
ಪ್ರಾಣದೇವನ ಕುಮಾರಂ ಪ್ರವೇಶಿಸಿದನಯ್
ಪ್ರಾಣಶಕ್ತಿಗಳಿಂ ಮಹದ್ ಭವ್ಯಮಾದಾ
ಅತೀಂದ್ರಿಯ ಪ್ರಾಣಮಯದಾಕಾಶಮಂ. ಕಾಣುತೆ
ದಿಗಂತಗಳ್ ಧ್ಯಾನಮುದ್ರೆಯೊಳಿರ್ಪವೋಲಿರ್ದ
ಪ್ರಾಣದೇವರ್ಕಳಾ ಪರ್ವತೋಪಮ ಬೃಹತ್
ಪ್ರಾಣರೂಪಂಗಳಂ, ಕೈಮುಗಿದು, ಪರಕೆಯಂ

ಪಡೆದು, ಮುಂದುತ್ತರಿಸುತಿರ್ದಾ ಕಪಿಧ್ವಜಂ
ಧುಮುಕಲ್ ಮನೋಮಯಕೆ, ನಿಂದುದು ಬೃಹಚ್ಛಾಯೆ
ತಡೆಗಟ್ಟಿ ತನ್ನ ನಡೆಯಂ! ಮರಕತಾಗ್ನಿಯಂ
ನಗುವ ಕಾಂತಿಯ ದೇವನಾ ಆಕಾರವಲ್ಲದಾ
ರೂಪಮಂ ಕಂಡಿದೇನೆಂದು ಬೆರಗಾಗಿರಲ್:
''ನಿನಗೆ ಕೇಡಂಬಗೆದು ತಡೆಯಿಕ್ಕಿದವನಲ್ತು
ನಾಂ, ಕೇಳ್, ಮರುತ್‌ಸೂನು. ಮಾರೀಚವೆಸರಿಂದೆ
ಬರ್ದುಕಿರ್ದ್ದನೆಂ. ತಪಃಪುಣ್ಯದಿಂದುತ್ತಮದ
ಲೋಕಂಗಳಂ ಪಡೆವೆನೆಂದಿರ್ದೆನಾಂ. ಪೇಳ್ವೆನೇಂ?
ಭ್ರಾಂತಿಯೊಂದೆನ್ನನೀ ಪ್ರಾಣಮಯದೊಳ್ ಪಿಡಿದು
ಬಂಧಿಸಿದೆ. ಮರ್ತ್ಯರಾಲಿಸಬಾರದಾದೊಡಂ,–
ಮರ್ತ್ಯವಲ್ಲದ ವಿಧಾನಂ ಮರ್ತ್ಯಕರ್ಥಮೇಂ?''
ಎನುತಾಂಜನೇಯಂಗೆ ಮಾರೀಚನಸುಛಾಯೆ
ವಚನೀಯವಲ್ಲದ ಅಚಿಂತ್ಯರೀತಿಯಿನೇನೊ
ತನ್ನಾಸೆಯಂ ಪೇಳ್ದು, ಆ ಪ್ರಾಣಮಯ ಜಗನ್
ನಿಯತಿ ಪ್ರಕಾರದಿಂದಾತನಿಂ ತಣಿವಡೆದು,
ಬಟ್ಟೆಗೊಟ್ಟುದು ಮನೋಮಯ ಲೋಕ ಮಾರ್ಗಿತಕೆ.

ಮಾರೀಚನಾತ್ಮದಾ ಪ್ರಾಣಮಯ ರೂಪಮಂ
ಬೀಳ್ಕೊಂಡು, ಹಳೆ ಪೊರೆಯನಹಿ ಕಳಚಿ ತೊರೆವಂತೆ
ಪ್ರಾಣಮಯ ಕೋಶಮಂ ಸುಲಿದಿಕ್ಕುತಾ ಯೋಗಿ
ಪ್ರಾಣತತ್ತ್ವದ ರಜೋಮಯ ನಭೋವಲಯದಿಂ
ಪೊಕ್ಕನು ಮನೋಮಯದ ಸಾತ್ತ್ವಿಕಾಕಾಶಕೆ
ಚಿದಾಕಾರಮಂ ಧರಿಸಿ! ಕಾಣಲರಿವುದದಾವ
ಕಲ್ಪನೆಯ ಕಣ್? ಕಂಡುದಂ ಬಣ್ಣಿಸುವನಾವ
ಕಬ್ಬಿಗಂ? ಚಿದ್‌ರೂಪಿಯಾಂಜನೇಯಂಗಾಯ್ತು
ಚಿತ್‌ಸಮುದ್ರವನಲೆವ ಚಿದ್‌ವೀಚಿಯನುಭವಂ,
ತನ್ನ ಭಿನ್ನತೆಯುಳಿದುಮಳಿದಂತೆ! ಅನ್ನಮಯ
ಪ್ರಾಣಮಯ ಭೂಮಿಕೆಗಳಂ ತುಂಬಿ, ಆವರಿಸಿ,
ಕಣಕಣದೊಳಿರ್ದುಮಂತರ್ಯಾಮಿಯಾಗಿಯುಂ
ಅತೀತಮೆನಲಿರ್ಪಾ ಮನೋಮಯದ ದರ್ಶನಕೆ
ರಸವಶನಾದನಾಂಜನೇಯಂ. ಶುದ್ಧತತ್ತ್ವದೊಳ್

ಚಿತ್ತವೃತ್ತಿಗಳೆಂದುಮರಿಯದಿಹ ಶಾಂತಿಯಂ
ತಳೆದು ಚಲಿಸಿದುವಲ್ಲಿ ಸ್ವಾತಂತ್ರ್ಯಮಂ ಸವಿವ
ವಿಶ್ವತಂತ್ರದಲಿ. ತಾನೆಲ್ಲವಾದಂತೆ ಮೇಣ್
ತನ್ನೊಳಾದಂತೆಲ್ಲಮುಂ ವಿರಾಣ್‌ಮನನಾಗಿ
ತನ್ನ ಸಿದ್ಧಿಗೆ ತಾನೆ ಬೆರಗಾದನಂಜನಾ
ಪ್ರಿಯ ಕುಮಾರಂ. ಚಿದಾಕಾರದಾಗರವೊ? ಮೇಣ್
ಚಿಜ್ಜ್ಯೋತಿ ಸಾಗರವೊ? ನಾಮರೂಪದ ನಿಧಿಯೊ?
ಸರ್ವಸೃಷ್ಟಿಯ ವಿಧಿಯೊ? ಇದ್ದುವು ಸಮಾಧಿಯಲಿ
ಯೋಗಸಿದ್ಧಿಗಳಲ್ಲಿ. ಮನುಜ ಬುದ್ಧಿಯೊಳೆಸೆವ
ಭವ್ಯಮಪ್ಪಾಲೋಚನೆಗಳಾತ್ಮಗಳ್ ತಮ್ಮ
ಮೂಲರೂಪಂಗಳಿಂದುಜ್ವಲಿಸಿರ್ದುವಲ್ಲಿ.
ಪ್ರತಿಭೆಗಳ್, ಧ್ಯಾನಗಳ್ ಭಾವಗಳ್ ತಂತ್ರಗಳ್
ಮಂತ್ರಗಳ್ ಯಂತ್ರಗಳ್, ಅನ್ನಮಯದೊಳ್ ಪಿಂತೆ
ಪರಿಣಾಮಗೊಂಡು ಪೃಥ್ವಿಯೊಳೊಗೆದ ತತ್ತ್ವಂಗಳುಂ,
ಮೇಣೆನ್ನುಮಲ್ಲಿ ಮೈದೋರದೆಯೆ ಪರಿಣಾಮದೊಳ್
ಮುಂದೆ ಮರ್ತ್ಯಕ್ಕಿಳಿವ ದಿವ್ಯ ತತ್ತ್ವಂಗಳುಂ
ಚಿತ್‌ತಪಸ್ ಶಕ್ತಿಯ ತುರೀಯ ವಿನ್ಯಾಸದಿಂ
ಸ್ವಸ್ವರೂಪದೊಳೆಸೆದುವಲ್ಲಲ್ಲಿ!
ಚಿದ್ರೂಪಿ ಆ
ಅನಿಲಜಂ ದಿವ್ಯಾನುಭವಕೆ ರಸವಶಿಯಾಗಿ
ತನ್ನಹಂಕಾರಲಯವಾಗುತಿರ್ದುದನರಿತು
ಬೆಚ್ಚಿದನ್: "ಇದೆ ಸುಷೇಣಂ ಪೇಳ್ದಪಾಯಂ ಕಣಾ
ಸ್ವಾರ್ಥಸಾಧನೆಗೀ ಮನೋಮಯದಿ ಸಂಚರಿಪ
ಸಾಹಸಿಗೆ!" ಎನುತೆ ನಿಶ್ಚಯಿಸಿದನು ರಕ್ಷಿಸಲ್
ತನ್ನ ಪ್ರತ್ಯೇಕತಾ ವ್ಯಕ್ತಿತ್ವಮಂ: ಮೊದಲ್
ತನ್ನತನವನ್ಯತನವಾಗದೊಲ್ ಜಪಿಸಿದನ್
ತನ್ನಹಂಕಾರಮಂ ಬಲಿವ ಕೀರ್ತಿಯ ತನ್ನ
ನಾಮಂಗಳಂ ತಾನೆ! ಮತ್ತೆ, ತನ್ನ ಭಿನ್ನತೆ
ವಿರಾಡಭಿನ್ನತೆಗಿಳಿದು ಅದ್ವಯಪ್ರಲಯಕೆ
ನಿಮಗ್ನವಾಗದ ತೆರದಿ ರಾವಣದ್ವೇಷಮಂ
ಬಲಿದನಂತಃಕರಣ ಕಟುತೆಯೊಳಹಂಬುದ್ಧಿ

ಪಟುವಪ್ಪಂತವೋಲ್! ಆ ಎರಡರಿಂ ಮಿಗಿಲ್,
ವಾಯುಜಂಗಾದುದೊಂದತಿ ಭಯಂಕರಮೆನಲ್
ತನ್ನ ಕಜ್ಜದ ಕೊರಳ್ಗುರುಳಿಕ್ಕುವನುಪಮದ
ವಿದ್ಯಾನುಭೂತಿ: ರಾಮಾಯಣದ ಮಹಿಮೆಯೆ
ಮಸುಳ್ವಂತೆ ತಮ್ಮ ನಿರುಪಮ ದಿವ್ಯದೀಪ್ತಿಯಿಂ
ರಾರಾಜಿಸಿದುವಲ್ಲಿ ಜೀವನೋದ್ದೇಶಗಳ್,
ಜೀವನ ಚರಿತ್ರಗಳ್, ಸಾಹಸಗಳಾತ್ಮಗಳ್,
ಮೇಣ್ ಸಿದ್ಧಿಸಾಧನೋದ್ಭಾಸಗಳ್! ಅವರೆದುರ್
ತಾನುಮಂತೆಯೆ ತನ್ನ ಸಾಹಸೋದ್ಯೋಗಮುಂ
ಕಿರಿದಾಗಿ ಕೀಳಾಗಿ ತೋರಲನಿಲಜ ಮನಂ
ವೈರಾಗಿಯಾದುದು ಜಿಹಾಸೆಯಿಂ: "ಭೂಮವಿರೆ
ಅಲ್ಪ ಸಾಹಸಕಾತ್ಮಮಂ ನಿವೇದಿಸುವೆನ್ನ ಈ
ಮೂರ್ಖತೆಗೆ ಧಿಕ್ಕಾರ! ತೊರೆವೆನಾ ಅಲ್ಪಮಂ;
ಕೈಕೊಳ್ವೆನೊಂದನೀ ಭೂಮಸಾಧನೆಗಳಲಿ
ಮೇಲಾದುದಂ!" ಸ್ವಾತ್ಮಸಿದ್ಧಿಯ ಲೋಭವಿಂತೀ
ಪ್ರಲೋಭನಕೆ ಮನಸೆಳೆಯುತಿರಲಾತ್ಮ ಬುದ್ಧಿಯ
ವಿವೇಕಮೆಳ್ಚರಿಸಿದುದು ಜನ್ಮಧರ್ಮದ ಕರ್ಮ
ಕರ್ತವ್ಯಮಂ: "ಲೋಕಲೀಲೆಗೊಪ್ಪಿಗೆಯಿತ್ತು
ಆ ಲೋಕಕ್ಕೈತರಲ್, ಲೀಲೆ ಕೊನೆಗೊಳ್ಳುವಾ
ಮುನ್ನಮಲ್ಲಿಂದನ್ಯಲೋಕಕಾಶಿಸುವವನೆ
ನಿತ್ಯ ಬದ್ಧಂ! ಲೋಕಮಾವುದಾದೊಡಮೇನ್?
ಪೆರ್ಚ್ಚುರ್ ಕಡಮೆಗಳೊಳವೆ ಸಚ್ಚಿದಾನಂದದೀ
ಲೀಲಾ ವಿನೋದದೊಳ್?" ಎಂಬಾತ್ಮವಾಣಿಯಿಂ
ಬೋಧೆವೆತ್ತಾ ರಾಮದೂತಂ ಪ್ರಜ್ಞೆಚೇತರಿಸಿ
ಮುಂದೊತ್ತಿದನು ಪೊತ್ತ ಕಜ್ಜಕೆ ಮನಂದಂದು,
ಲಜ್ಜಿಸಿ ತನ್ನ ಮುನ್ನಿನಜ್ಞತೆಗೆ.

ಅನೇಕತಾ

ಮೋಹಮಯ ಚಂಚಲತೆಯಂ ಜಯಿಸುತೇಕಾಗ್ರ
ಮತಿಯಿಂದಚಂಚಲಮನಂ ಹಾರಿದನು ಗುರಿಗೆ,
ಗರಿಮೂಡಿದೋಲ್. ಹಿಮಾಚಲವನುತ್ತರಿಸಿದನ್;
ತಾರಾಗಮಂ ದಾಂಟಿ, ಋಷಭಾದ್ರಿಯಂ ನೋಡಿ,

ಗುರುತಿಸಿದನಿಳಿದನೋಷಧಿಗಿರಿಯ ಮೇಘಾಚ್ಛನ್ನ
ಜ್ಯೋತಿಃಶೃಂಗ ರಂಗದಲಿ. ತರತರದ ಬಣ್ಣಗಳ
ಬೆಳಕುಗಳ ಕಂಪುಗಳ ಕಾಂತಿಗಳ ಜೀವದಲಿ
ತಾನುಮದೆಯದೆಯಾಗಿ ಚರಿಸುತೆ ಮನೋಮಯ
ಶರೀರಿ, ಯೌಗಿಕವಿಧಾನದೊಳರಸಿ, ಕಂಡನಾ
ಸಂಜೀವಿನೀಲತೆಯ ತಾತ್ತ್ವಿಕ ಮಹತ್ತ್ವದ
ಲಸದ್ರೂಪಮಂ. ಕಂಡರಿಸಿದಿಂದ್ರಚಾಪವೆನೆ
ವರ್ಣಮಯ ಚಾರುದೀಪ್ತಸ್ವರ್ಣ ಪರ್ಣಗಳ್
ಮಿರುಮಿರುಗಿದುವು ಜೀವಸತ್ತ್ವಂಗಳೋಲ್. ಮರ್ತ್ಯ
ಜೀವರಾಘ್ರಾಣ ಸಾಮರ್ಥ್ಯಕಳವಡದೊಂದು
ಸ್ಪರ್ಧಿಸಿರ್ದುದು ದಿವ್ಯ ಪರಿಮಳಮಾಂಜನೇಯಂ
ಸುಖೋನ್ಮಾದಿಯಪ್ಪಂತೆ. ಸಸ್ಯತನುವೆತ್ತೊಡಂ,
ಋತಚಿದ್ ರಹಸ್ಯಶಕ್ತಿಯನಂತರಂಗದಲಿ
ಮಂತ್ರರೂಪದಿನಾಂತು, ಸಚ್ಚಿದಾನಂದಮಯ
ಪರಶಿವನ ಶಕ್ತಿಯಿಚ್ಛಾವ್ಯಕ್ತಿಯಾಗಿರ್ದ
ಸಂಜೀವಿನೀ ಲತಾದೇವತೆಗೆ ಕೈಮುಗಿದು
ಬಿನ್ನಯ್ಸಿದನು ಕೃಪಾಕಾಂಕ್ಷಿ:
"ಕರುಣಿಸು, ದೇವಿ!
ಕೃಪೆದೋರೆನಗೆ, ತಾಯಿ! ದಯೆಗೆಯ್, ಜಗಜ್ಜನನಿ!
ಸರ್ವಮಂಗಳೆ ನೀನು; ರಕ್ಷಿಸೌ, ಕಲ್ಯಾಣಿ,
ಊರ್ಮಿಳಾ ಮಾಂಗಲ್ಯಮಂ. ನಿನ್ನ ಸನ್ನಿಧಿಯ
ಅಮೃತಮಿರೆ, ಮರ್ತ್ಯಮಾದೊಡಮದಂ ಜೀವಮಂ
ಸೋಂಕಲರಿವುದೆ ಮೃತ್ಯು? ನಿಯತಿಯ ನಿಯಾಮಕನ
ಹೃದಯೇಶ್ವರಿಯೆ, ನಿನ್ನ ಶಕ್ತಿಗೆಲ್ಲಿಹುದೆಲ್ಲೆ?
ನೀನಾದ್ಯಶಕ್ತಿ; ನಿನ್ನಿಚ್ಛಾ ಪ್ರಕಾರಗಳೆ
ನಿಯಮಗಳ್ ಪ್ರಕೃತಿಗೆ, ಗುಣಂಗಳ್ ನಿಸರ್ಗಕೆ,
ವಿವೇಕನಿಷ್ಠೆಗಳೆಮ್ಮ ಬುದ್ಧಿಗೆ, ವಿಚಾರಜಂ
ಮತಿಮಿತಿಯ ತತ್ತ್ವಸಿದ್ಧಾಂತಂಗಳಂ ಮೀರ್ವ
ಯೋಗಸಿದ್ಧಿಗಳಾತ್ಮ ಸಾಧಕಗೆ! ಮೃತ್ಯು ನೀಂ;
ನೀನಮೃತೆ! ನಿಯಮಮಯಿಯಾದೊಡಂ ಸ್ವಚ್ಛಂದೆ,
ಸರ್ವನಿಯಮಾತೀತೆ! ದೇವಿ, ಕರುಣಿಸು; ತಾಯೆ,

ಕೃಪೆಗೆಯ್! ಜಗನ್ಮಾತೆ, ನಿರ್ವಿಘ್ನಮಪ್ಪಂತೆ
ರಾಮಕಾರ್ಯಂ, ಸುಮಿತ್ರಾತ್ಮಜಪ್ರಾಣಮಂ
ಚೇತನಂಗೊಳಿಪ ಮೃತಸಂಜೀವಿನಿಯ ನಿನ್ನ
ಔಷಧಾಶೀರ್ವಾದಗಳನೆನಗೆ ಕೃಪೆಮಾಡಿ
ನೀಡಮ್ಮ: ಮಣಿವನಿದೊ ಮರುತಾತ್ಮಜಂ!''
ಕೊಂಬೆ
ಕೈಯಾಯ್ತು; ಪಸುರೆಲೆಗಳುಡೆಯ ಗಿಡವಾಯ್ತು ಮೆಯ್;
ಪಾದರೂಪವನಾಂತುದದರ ಮೂಲಂ; ತುದಿಯೆ
ತಳೆದುದು ಮುಖಾಕೃತಿಯ. ಹಣೆಮಣಿದು ವಿನಯದಲಿ
ನಸು ಬಾಗಿದಾಂಜನೇಯನ ಕರಪುಟಾಂಜಲಿಗೆ
ಜಗುಳಿದುದು ಸಂಜೀವಿನಿಯ ಸುಧಾನುಗ್ರಹಂ,
ಸ್ಮಿತರೋಚಿಯೋಲುಜ್ವಲಿಸೆ ಓಷಧೀಗಿರಿಯ
ದಿವೌಕಸಜ್ಯೋತಿ!
ಕ್ಷಣಮಾದೊಡಂ ಅಸಹಿಷ್ಣು
ತಾನಲ್ತೆ ಉತ್ಕಟ ನಿರೀಕ್ಷೆ? ತುದಿಗಾಲಿನೊಳ್
ನಿಂದು ಕುದಿಕುದಿಯುತಿರ್ದಾ ಸುಷೇಣಾದಿಗಳ್
ಪರಮ ಪರಿತೋಷ ಪುಲಕಿತ ಗಾತ್ರರಪ್ಪಂತೆ,
ಜಯ ಕಪಿಧ್ವಜಕೆ ಜಯವೆಂಬುಲಿಯೆ ಘನಿಸಿತೆನೆ,
ಮೈದೋರ್ದನಾಂಜನೇಯಂ ಸಿದ್ಧಹಸ್ತದಲಿ.
ದಿವ್ಯ ಮಂತ್ರಗಳಿಂ ದಿವ್ಯೌಷಧಿಯ ಬಲದಿ
ಲಕ್ಷ್ಮಣನ ಮೆಯ್ಗೆ ಮೊದಲಿನ ವರ್ಣಮೊಯ್ಯನೆಯೆ
ಮೂಡಿತು ಸುಷೇಣಪ್ರಯೋಗದಿಂ. ನೋಡುತಿರೆ
ಜೀವಕಳೆ ಮಲರಿದುದು ಮೊಗಕೆ. ಉಸಿರಾಡಿದುದು.
ಹರಣಂ ಮರಳ್ದುದು ಕಳೇಬರಕೆ. ಚೇತರಿಸಿ
ಸಪ್ರಜ್ಞನೆದ್ದನಕ್ಷತನೆನಲ್, ''ಊರ್ಮಿಳಾ!
ಊರ್ಮಿಳಾ!'' ಎನುತೆ ಪೆಂಡಿತಿಯ ಪೆಸರಂ ಕರೆದು,
ಕಾಣಲೆಳಸುವನಂತೆ ಕಣ್ ಸುಳಿಸಿ ಸುತ್ತಣ್ಗೆ
ನೋಡಿ. ಜಾಂಬವನ ನುಡಿಗಳಿನರಿತು ನಡೆದುದಂ,
ಪೇಳ್ದನೊಂದಾಶ್ಚರ್ಯಮಂ: ''ಕಂಡೆನಾಂ, ದಿಟಂ,
ವಲ್ಕಲವನುಟ್ಟಿರ್ದಳಂ ನನ್ನ ಸತಿಯಂ,
ತಪಶ್ಚರ್ಯೆಯಿಂ ಪೂಜ್ಯೆಯಾಗಿರ್ದಳಂ! ತನ್ನ

ದಿವ್ಯ ಶಕ್ತಿಯೊಳೆನ್ನ ಹೃದಯಕಮೃತವನೆರೆದು,
ಮೇಘನಾದಾಭಿಚಾರಿಕ ಯಾಗಕೆನ್ನಾಯು
ತವಿಯದಂದದಿ ತೊಡಿಸಿದಳ್ ತಪಃಕವಚಮಂ.
ಪೂಜ್ಯೆಯಂ ಪ್ರಾಣವಲ್ಲಭೆಯಾಗಿ ಪಡೆದ ನಾಂ
ಧನ್ಯನೈಸಲೆ ಧನ್ಯರೊಳ್! ಭಂಗಮಿನ್ನುಂಟೆ
ನಮ್ಮ ಸಂಗ್ರಾಮ ಸಿದ್ಧಿಗೆ? ನಡೆವಮೀ ಅಗ್ನಿ
ತಡೆಯನಿನ್!''
ಶತ್ರು ಸಂಹಾರ ದೀಕ್ಷಿತನಾ
ಸುಮಿತ್ರಾತ್ಮಜಂ ಪೊಣ್ದು ಪೊಕ್ಕನಾ ಪಾವಕನ
ಚಕ್ರಕೆ. ವಿಭೀಷಣಾದಿಗಳವನ ಬೆಂಬಿಡಿದು
ನಡೆದು ದಾಂಟಿದರನ್ನಮಯಮಂ. ನಿಶಾಚರಂ
ಕಾವಲಿಟ್ಟಾ ಪಿಶಾಚಗಳಲ್ಲಿ ಮುತ್ತಿಬರೆ,
ಪರಿಹರಿಸಿ, ಪೊಕ್ಕರಯ್ ಪ್ರಾಣಮಯ ದುರ್ಗಮಂ,
ಪ್ರೇತ ಭೂತಂಗಳಿಂ ಶಕ್ತಿಯಂತ್ರಂಗಳಿಂ
ದುರ್ಭೇದ್ಯಮಂ: ಚಿತ್ತವೈಕಲ್ಯಮುಣ್ಮೆದು
ಮದೋನ್ಮತ್ತನಾದಂ ನಳಂ. ಕಾಮತೃಷೆಯುಕ್ಕಿ
ರತಿಭಾವದಾವೇಗದಿಂ ವೃದ್ಧಜಾಂಬವಂ
ತೊರೆದನುದ್ಯೋಗಮಂ. ಕೀರ್ತಿಯಾಕಾಂಕ್ಷೆಯ
ಅಹಂಕಾರ ಭೂತ ಹೂಂಕಾರದ ವಿಕಾರಕೆ
ಅವಶಿಯಾದನಯ್ ಸುಷೇಣಂ. ಸ್ಥಿರಪ್ರಜ್ಞನಾ
ಸಾತ್ತ್ವಿಕ ಮಹಾಮತಿ ವಿಭೀಷಣಂಗಾದುದು,
ಅನ್ಯೆಚ್ಛಿಕಮೆನಲ್, ದೈತ್ಯ ಸಿಂಹಾಸನವನೇರ್ವ
ಲಂಕಾ ಕಿರೀಟ ಮೋಹಂ: ಬಯ್ಯ ತೊಡಗಿದನು
ಸುಗ್ರೀವನಂ ನಳಂ! ಪ್ರಣಯಾಭಿನಯಗಳಿಂ
ನರ್ತಿಸಿದನಾ ನರೆತ ಜಾಂಬವಂ! ಹನುಮನಂ
ಕರೆದು ಕರುಬಿಂ ಮೂದಲಿಸಿದನು ಸುಷೇಣಂ,
ತಿರಸ್ಕರಿಸುತಾತನ ಯಶೋವಿಭವ ಕಾರಣದ
ಸಾಸಂಗಳಂ! ಬ್ರಹ್ಮಚರ್ಯದ ಬಲಂ ಕಣಾ,
ವಜ್ರಾತ್ಮರಾಗಿರ್ದರಾಂಜನೇಯನುಮಂತೆ
ಸೌಮಿತ್ರಿಯುಂ! ಸಮಯವದು ವಿಷಮವಲ್ಲದಿರೆ
ನಗುತಿರ್ದರಳ್ಳೆಬಿರಿಯಲ್, ನಾಟ್ಯರಂಗದಲಿ

ಭಾವಾನುಭಾವಂಗಳಿಂ ವಿಭಾವಂಗಳಿಂ
ರಸವನಾಸ್ವಾದಿಸುವ ರಸಿಕ ಕೋವಿದರಂತೆ,
ಹಾಸ್ಯಾಭಿನಯಕಾ ನಳ ಸುಷೇಣ ಜಾಂಬವ
ವಿಭೀಷಣರ ವಿಪರೀತ ವರ್ತನೆಗೆ! ಬೆರಗಾಗಿ
ನೋಡುತಿರೆ ರಾಮಾನುಜಂ, ಶಾಸ್ತ್ರವೇತ್ತನಾ
ಯೋಗಸಿದ್ಧಂ ಪೇಳ್ದನಾತಂಗಾಂಜನೇಯಂ
ಬ್ರಹ್ಮವಿಜ್ಞಾನಿಃ "ಚಿತ್ತದ ಅಧೋಲೋಕಮಂ
ಆತ್ಮಾವಲೋಕನ ವಿಚಾರಪಥದಿಂ ಪೊಕ್ಕು,
ಬೀಡುಗೊಂಡಿಹ ಜಟಿಲತಾ ಕುಟಿಲತಾ ತಮೋ
ವಿಕೃತಿಗಳನಧ್ಯಾತ್ಮದಾಲೋಕದಿಂ ತವಿಸದೀ
ಪ್ರಾಣದೂರ್ಧ್ವಕೆ ಪುಗುವರಂ ಪೀಡಿಸುವುವೀ
ದುರಾಶಾ ಪಿಶಾಚಗಳ್. ಜಯಿಸದಿವುಗಳನಿವರ್
ಬರಲರಿಯರೆಮ್ಮೊಡನೆ. ಸುಲಭಮಲ್ತಾ ಜಯಂ.
ಇಂದ್ರಜಿತು ಬಲ್ಲನೀ ಹದನನದರಿಂದಿದಂ
ತಂದೊಡ್ಡಿಹಂ. ತಳುವಿದರೆ ಬೆಳಗಪ್ಪುದಿರುಳ್;
ರಾಮಕಾರ್ಯಕೆ ಹಾನಿ; ಮತ್ತೆ, ಧರ್ಮಗ್ಲಾನಿ.
ಕರ್ಮ ಸವೆವಂತಿಲ್ಲಿ ಹೋರಾಡುತಿರಲಿವರ್.
ಪಿಂತಿರುಗಿ ಬರ್ಪಾಗಳಿವರಿಗೆ ವಿವೇಕಮಂ
ಬೋಧಿಸಿದೊಡೆಳ್ಚರ್ತು ಶುದ್ಧಬುದ್ಧಿಗಳಾಗಿ
ಕ್ಷೇಮ ಕರ್ಮಿಗಳಪ್ಪರಲ್ಲದಿರೆ ಮುಂದೆಮ್ಮ
ಕಜ್ಜಕಿವರಿಂದೆಡರ್ ತಪ್ಪದು ದಿಟಂ!"
ಮುಂದೆ
ಬೀಳ್ಕೊಳುತ್ತಿವರನಾ ಸೌಮಿತ್ರಿ ಮರುತಜರ್,
ಕಲ್ಪನೆಯ ಜಿಹ್ವೆ ತೊದಲುವ ಮಹಾದ್ಭುತಂಗಳಂ
ಧೃತಿಯಿನುಲ್ಲಂಘಿಸಿ, ಮನೋಮಯಪ್ರಾಕಾರ
ಭೀಕರ ಮಹಾಗ್ನಿಯಬುಧಿಯ ಕಂಡರಿಂದ್ರಜಿತು
ಕೃತಿಸಿರ್ದುದಂ. ಕರಗಿ ನೀರಾದ ಕರ್ಬುನದ
ಕಾಂತಿಯಂ ಕೀಳ್‌ಗೆಯ್ದುದದರ ಕಣ್ಣೆರಿದುರಿವ
ದೀಪ್ತಿ. ರವಿಮಂಡಲದ ಹೃದಯ ಪಿಂಡದೊಳಲೆವ
ವಿಲಯದೂಷ್ಮೆಯ ಭಯಂಕರಕೆ ತಾಂ ತಾಯೆನಲ್
ಝಾಡಿಸಿತು ಕಡುಝಳಂ. ಅದ್ರಿಯುನ್ನತಗಳನೆ

ಉಕ್ಕಿ ಚಲಿಸಿದುವಗ್ನಿಯೂರ್ಮಿಗಳ್. ಧೂಮಗಳ್
ಘ್ರಾಣಕಟು ವಾಸನೆಗಳಿಂ ಸೂಸಿ ಚಲಿಸಿದುವು
ವಿವಿಧ ವರ್ಣಚ್ಛಾಯೆಗಳನುಗುವ ಭೀಕರ
ಮನೋಹರಾಭೀಳ ವಿನ್ಯಾಸದಿಂ. ನಿಂದರಾ
ಯೋಜನೋನ್ನತ ಮನೋಮಯ ಶರೀರಿಗಳಲ್ಲಿ
ಮಲೆಯನಾಡಿನ ಮಲೆಯ ನೆತ್ತಿಗಳ್ ಮುಗಿಲಣೆದು
ನಿಲ್ವಂದದಿಂದಾ ಶಿಖಿಸಮುದ್ರನೇಮಿಯಲಿ. ಮೇಣ್
ವೀಕ್ಷಿಸಿದರಲ್ಲಿಂದಮಾ ಸಮುದ್ರದ ಮಧ್ಯೆ
ಮೇಘನಾದನ ಗಿರಿಬೃಹದ್ ಭೀಮಮೂರ್ತಿಯಂ
ದ್ವೀಪೋಪಮದ ವೇದಿಕಾಗ್ರದಲಿ. "ಅಲಂಘ್ಯಮೀ
ಅನಲಾಬ್ಧಿ. ಕಾಣ್, ಅಸುರವಿದ್ಯಾಪ್ರವೀಣನದೊ
ಸೃಷ್ಟಿಸುತ್ತಿರ್ಪನು ಲಯೋಗ್ರ ಯಂತ್ರಂಗಳಂ
ತಾಂತ್ರಿಕ ಕರಾಳ ಮಂತ್ರಂಗಳಿಂ! ಮೂಡುತಿವೆ
ನೋಡದೊ ಹುತವಹಾಬ್ಧಿಯಿಂ. ಮೂಡುವುದೆ ತಡಂ
ಚಿತ್ತ ತತ್ತ್ವಾಧೀನಮಹ ಸೂಕ್ಷ್ಮರೂಪಂಬೆತ್ತು
ದೈತ್ಯವಿಜ್ಞಾನಿಯ ಮಹನ್ ಮನಃಕೋಶಮಂ
ಪುಗುತಲಿವೆ ಮರಳಿ. ಮಂತ್ರವನುಸುರಿ, ತಂತ್ರತನು
ನಾರಾಚಮಂ ಪೂಡಿ ಬಿಡಲೀ ಮನೋಜವದ
ಚಿಚ್ಛಕ್ತಿಯಂತ್ರಂಗಳುಣ್ಮಿ, ಬೆಂಕಿಯ ಮಳೆಯ
ಕಾರಿ, ಸಿಡಿಲಂ ಬಡಿದು, ಕಾಳಕೂಟವ ಚೆಲ್ಲಿ
ಕೊಲ್ವುವು ಕೋಟಿಕೋಟಿಯಂ. ಸಿದ್ಧಿಯಶ್ವಮಂ
ಬೆನ್ನೇರುವಾ ಮುನ್ನಮೀ ಕಲಿ ನಿಶಾಚರಂ,
ಮುನಿ ದತ್ತ ಮಂತ್ರಾಸ್ತ್ರತತಿಗಳಂ ತುಡು; ನಿನ್ನ
ಸರ್ವ ಸಿದ್ಧಿಯನಿವನ ಮೋಕ್ಷಕ್ಕೆ ಬೇಳದಿರೆ
ನೀನದಂ ಪಡೆದುದೆ ನಿರರ್ಥಕಂ!"
ಲಕ್ಷ್ಮಣಗೆ
ಇಂತೆಂದ ಮರುತಜನ ಮಾತು ಹಿಂಚುವ ಮೊದಲ್
ಗೋಚರಿಸಿದುವು ಮೇಘನಾದನ ಮನಃಶಕ್ತಿ
ಜಾತಂಗಳಗ್ನಿಭೂತಂಗಳಿವರಂ ಪಾಯ್ವ
ಮೃಡದೃಢಪ್ರಲಯ ಜವಂಜವದಿ. ಹೊಗೆವೆಂಕೆಯಂ
ಓಕರಿಸಿದುವು, ಮಿಳ್ತುವೋಕುಳಿಯುಗುಳ್ವವೋಲ್,

ಜೀರ್ಕೋವಿಗಳವೋಲ್ ಸುದೀರ್ಘ ದೂರಕೆ ನೀಳ್ದ
ನಾಸಾ ಪುಟಂಗಳಿಂ. ತೇರು ಗಾಲಿಯ ತೆರನ
ಚಕ್ರ ಶತ ಶತಪಂಕ್ತಿ ಉರುಳ್ದುವಡಿಯಿಡುವಂತೆ
ಜವರವ ಭಯಾನಕಂ. ಸಿಡಿಗುಂಡು ಮಳೆಗಳಂ
ಕಾರಿದುವು; ಸಿಡಿದುವು ಸಿಡಿಲ್‌ಮಿಂಚನಾಲಿಸುವ
ಕಣ್‌ಕೊಡಂಕೆಗಳುಡುಗುವಂತೆ. ‘‘ತಲ್ಲಣಿಸದಿರ್;
ಬಲ್ಲೆನಿದಕಾಂ ಪ್ರತೀಕಾರಮಂ. ಬಿಡುವೆನೀ
ಕರ್ಬುರ ಕುಲಕುಠಾರ ಜಿಂಹವಿದ್ಯಾಬಲದ
ಬೆನ್ನೆ ಬಡಿಗೆಗಳಪ್ಪ ದಿವ್ಯ ಬಲಗಳನೆನ್ನ
ಸಿದ್ಧಿ ಸಂಜಾತಂಗಳಂ. ತಳುವದೆಯೆ ನೀಂ
ಸರಳ್ಗಳಂ ತೊಡು; ಕೊರಳ್ಗಿಡು; ದಶಶಿರಾತ್ಮಜ
ಪ್ರಾಣಪ್ರದೀಪ ನಿರ್ವಾಣ ಸಿದ್ಧಿಯನಾಂತು
ಸಾರ್ಥಕಂಗೊಳಿಸು ಜನ್ಮಾರ್ಥಮಂ!’’ ಇಂತಾರ್ದು
ತೊಡಗಿದನು ಪಡಿಮಾಯೆಯಿಂ ಕೂಟರಣಮಂ
ಸಮೀರಜಂ. ತೊಟ್ಟನಸ್ತ್ರಂಗಳಂ ಸೌಮಿತ್ರಿ; ಮೇಣ್
ಬಿಟ್ಟನಿಂದ್ರನ ವೈರಿಗಾದೊಡೇನ್? ಅದ್ರಿಯೋಲ್
ತಾನಿರ್ದನಸ್ಖಲಿತ ಧೈರ್ಯದ್ರುಮಂಬೋಲ್
ಮಹೇಂದ್ರಾರಿ. ಗತಿಗೆಡುತ್ತಿರ್ದಸ್ತ್ರ ತತಿಗಳಂ
ಕಂಡು ಧೃತಿಗೆಡುತಿರ್ಪ ಲಕ್ಷ್ಮಣಂಗಾಕಾಶವಾಕ್
ನುಡಿದುದಿಂದ್ರ ಪ್ರೇರಿತಂ: ‘‘ಊರ್ಮಿಳಾ ರಮಣ, ಕೇಳ್,
ವ್ಯರ್ಥ ಪ್ರಯತ್ನದಿಂ ಕಾಲ ಹರಣಂ ಗೆಯ್ದು
ಕಿಡಿಸದಿರಮರ ಕಾರ್ಯಮಂ. ರಜನಿ ತೀರ್ದುದೆನೆ
ತೀರ್ದುದೆಂದರಿ ಭುವನದಾಯು! ಯಾಮದ್ವಯಂ
ತೀರ್ದುವಾಗಳೆ! ದೇವ ದೇವರ್ಕಳೀ ನಿನ್ನ
ಸಾಹಸವನುತ್ಕಂಠರಾಗಿ ನೋಡುತ್ತಿಹರು, ಕಾಣ್,
ತಮ್ಮಳಿವುಳಿವು ನಿನ್ನ ಸಿಂಜಿನೀ ಸ್ಪಂದನದಿ
ಕಂಪಿಸುತಿಹುದನರಿತು! ಇಂದ್ರಜಿತುವೀತನಂ
ಕೊಲುವುವೇನನ್ಯಾಸ್ತ್ರತತಿ? ದೇವಶಕ್ತಿಗಳ್
ತಮ್ಮಾತ್ಮಸರ್ವಬಲಮಂ ನಿವೇದಿಸಲೆಂದು
ಕಾದಿಹರೊ ನಿನಗೆ: ಆ ನೆರವಿನಾಸೆಯಿರೆ, ತೆಗೆ
ಹೂಡು ಐಂದ್ರಾಸ್ತ್ರಮಂ! ಸರ್ವ ದೇವರ್ಕಳುಂ

ಪುಗುವರಾ ಬಾಣಮಂ; ತೆಗೆವರೀ ರಾಕ್ಷಸನ
ಲೋಕ ಸಂಕಟಕರಂ ಪ್ರಾಣಮಂ!'' ಕೈಮುಗಿದು
ಗಗನದೇವತೆಗೆ, ಕೈಕೊಂಡನ್ಯಬಾಣಮಂ
ಬತ್ತಳಿಕೆಗಿಡಿದು, ಸೆಳೆದನೈಂದ್ರಾಸ್ತ್ರಮಂ, ಕೇಳ್,
ಬೆಳಗೆ ಭುವನಗಳಾಸ್ಯಮೆಳೆನಗೆ ತುಳುಂಕಿದೋಲ್!
  ತೊಟ್ಟಿಲಿಗೆ ಕೈಗೆಯ್ದು ಹೊಂಗಗ್ಗರದ ಸರಂ
ಘಲಿರೆನಲ್ ಬೆಚ್ಚುತೆಳ್ಚರ್ತಳುತ್ತಿರ್ದನಂ,
ಕಂದನಂ, ವಜ್ರಾರಿಯಂ ವಕ್ಷಕವುಂಚಿದಳ್
ಲಂಕೇಶ್ವರನ ಸೊಸೆ! ವಿಕಂಪಿಸಿತ್ತವಳ ತನು
ಮಾಗಿಯ ಕುಳಿರ್ಗಾಳಿ ಸೋಂಕಿಗೆ ಮಿಳಿರ್ವೆಳೆಯ
ಪೂವಳ್ಳಿಯೋಲ್. ಕದಡಿತಂತಃಕರಣಮಂ
ಅನಿರ್ದೇಶ್ಯಮೊರ್ ಭಯಂ. ನೆನೆದಳ್ ನಿಜೇಶನಂ,
ತಡೆತಡೆದಮಂಗಳಾಶಂಕೆಯಂ. ನಡುನಡುಗಿ
ತನ್ನೆರ್ದೆಯೊಳಿರ್ದ್ದೈದೆದಾಳಿಯಸ್ಥಿರತೆಯಂ
ತಡೆಯುವಂತೊತ್ತಿದಳ್ ಕಂದನೊಡಲಂ ತನ್ನ
ವಕ್ಷಕೆ ಸಹಸ್ರಾಕ್ಷಜೇತನರ್ಧಾಂಗಿಯಾ
ತರಳೆ ತಾರಾಕ್ಷಿ! ಕಂಬನಿ ನೇತ್ರಪಾತ್ರಮಂ
ತುಂಬಿ ತುಳುಕುತೆ ತೊಯ್ಯುತಿರೆ ಕಪೋಲಾಂಬುಜದ
ಶೈವಲ ದುಕೂಲಮಂ, ಚುಂಬಿಸಿದಳರ್ಭಕನ
ಮುಖಮಂ ಮಹುರ್ಮುಹುರ್ ಮೂಕ ಶೋಕ ಭಯಾಗ್ನಿ
ಸಂತಪ್ತೆ!
        ಸ್ವಪ್ನ ವಿದ್ಯುತ್ ಕಶಾಘಾತಕೆನೆ
ಮಂಚದಿಂದುರುಳಿ ಬೀಳ್ವನಿತರೊಳಗೆಚ್ಚತ್ತುರ್ತ
ಕುಳ್ತ ಮಂಡೋದರಿಗೆ ಮನೆ ನಡುಗಿದಂತಾಯ್ತು, ಕೇಳ್,
ಅಣುಘೋರಮಸ್ತ್ರಂ ಸಿಡಿಯಲಾ ಮಹಾಸ್ಫೋಟಕೆ
ಸುದೂರ ಪುಟಭೇದನಂ ಭಿತ್ತಿಭೂಕಂಪಿಪೋಲ್!
ಹೃದಯಗಿರಿ ನಡುಗಿತ್ತು; ಬುಡ ಸಡಿಲ್ದುರುಳ್ದುದು
ದಶಗ್ರೀವ ಧೈರ್ಯಾದ್ರಿ ಶಿಖರದ್ರುಮಂ! ನಡುಗಿತು
ಕನಕಲಂಕೆ; ಗೃಹಶಿರಗಳದಿರಿದುವು; ಉದುರಿದುವು
ದೈತ್ಯಧ್ವಜಾಳಿ! ಗಹ್ವರಕಂಠ ಘೋಷದಿಂ
ಕಂಪನಕೊರಲ್ದುವಯ್ ಲಂಬತ್ರಿಕೂಟಗಿರಿ

ಭೂವಿಪಿನಗಳ್, ವಿಪತ್‌ಸೂಚಕಮೆನಲ್! ಕಡಲ್
ಕುದಿಗೊಂಡವೋಲುಕ್ಕಿ, ಕಡೆಗೊಂಡವೋಲ್ ಮೊರೆದು,
ನೊರೆತೆರೆಯನವ್ವಳಿಸಿದುದು ವೇಲೆ ಹಮ್ಮೈಸೆ!
ಬಂದುದತಿಕಾಯನಳಿವಿನ ವಾರ್ತೆಯಂ ಬಿಡದೆ
ಬೆಂಬತ್ತಿ ಮೇಘನಾದನ ಮಂತ್ರಮಂಟಪ
ಮಹಾಸ್ಫೋಟ ರಾವ ಭೀಕರ ವಾರ್ತೆಯುಂ, ಲಂಕೆ
ಮಿಳ್ಮಿಳನೆ ಬೆಬ್ಬಳಿಸೆ, ಭಯಕೆ ನೆತ್ತರ್ ತಣ್ಣವೋಲ್!

## ಸಂಚಿಕೆ ೫

# ನೀಂ ಮಹಚ್ಛಿಲ್ಪಿ ದಿಟಂ!

"ಮಡಿದನೈಂದ್ರಾಸ್ತ್ರದಿಂ ಮಂಡೋದರಿಯ ಮಗಂ!"
ಚಕಿತ ಚಾರಣರುಲಿಯ ಕೋಗಿಲೆಗಳಲೆದುವಯ್
ಹೃದಯ ಮಧು ಮಧುರ ಮಂದಸ್ಮೇರ ಪುಷ್ಪಮಯ
ದಿವಿಜ ಕರ್ಣೋದ್ಯಾನ ತರುಗಳಲಿ. ಕೋಸಲದಿ,
ಸರಯೂ ನದೀ ತಟ ಕುಟೀರದ ತಪಸ್ವಿನಿಗೆ
ದೇವಿ ಊರ್ಮಿಳೆಗೇನೊ ಹೃದಯ ಭಾರಂ ಜಗುಳಿ
ಹಗುರವಾದುದು ಜೀವತಾವರೆಯ ಹೂ. ಕುಲಗುರು
ವಸಿಷ್ಠನ ಮುಖಮ್ಲಾನದೀನತೆ ಮಾಣ್ದುದಂ ಕಂಡು
ನಂದಿಗ್ರಾಮ ಪರ್ಣಶಾಲಾ ತಪಶ್ಚರ್ಯೆಯಾ
ಭರತಂ ವಿಚಾರಿಸಲ್, ನಸುನಗೆಯ ಸುಖಮುಖದಿ
ಋಷಿ ನುಡಿದನೊಂದತಿ ಮಹಾ ಕ್ಲೇಶದಿಂದಿಂದು
ರವಿಕುಲಂ ಪಾರಾದುದೆಂದು. ಲಂಕಾಪುರದ
ಹೊರವಳಯದಲಿ ಶಿಬಿರವಿಕ್ಕಿರ್ದ ವಾನರರ
ಕಂಠಕೋಟಿಗಳೊಂದೆ ಕೊರಲಿಂದುಲಿದುವಯ್
ಮಹೇಂದ್ರಜಿತುವಂ ಜಯಸಿದಾತನ ಜಯಸ್ತುತಿಯ
ಪ್ರೋದ್ದಾಮ ಗೀತಮಂ, ಮೈಂದಪ್ರಣೀತಮಂ,
ದಿವ್ಯಮಂತ್ರಪ್ರಗಾಥಮಂ. ತಳತ್ತಳತಳಿಸಿ
ಮೂಡಿದನು, ಚಂದ್ರ ಕುಂಕುಮ ಕನಕ ತೀರ್ಥದಲಿ
ಮಿಂದನೋಲಿಂದ್ರನ ದಿಗಂತದಿಂ, ಕಮನೀಯ
ಫಾಲ್ಗುಣ ಪ್ರಾಭಾತ ಸೂರ್ಯಂ, ಜಗನ್ಮನಕೆ
ಸಿಂಚಿಸುತ ಸಂತೋಷಮಂ!
ಅದೆತ್ತಲೋಡಿದುದೊ

ಕತ್ತಲರಸಿಂ! ದಶಾನನ ಚಿತ್ತಗುಹೆಯನೇಂ
ಕೆತ್ತಿಹುದೊ? ರಾಜಗೃಹಮಂ ಮೇಣ್ ಕುಟುಂಬಮಂ
ಮುತ್ತಿಹುದೊ? ರಕ್ಕಸರೆರ್ದೆಯ ಸಿರಿಯ ಬೊಕ್ಕಸಕೆ
ಪೊಕ್ಕುದೊ ಅಲಕ್ಷ್ಮಿಯೋಲ್? ತನ್ನೊರ್ವನೆಯೆ ಮಗನ
ದುರವಸಾನದ ಸಿಡಿಲ ಬಿರುಬಿಂಗಾನಲಾರದೆ
ಜಜ್ಜರಿತ ಜೀವಿಯಾದಾ ಮಯನ ನಂದನೆಯ
ಮೋಹದೊಡಲಂ ಬಾಚಿ ತಬ್ಬಿ ತನ್ನೆದೆಗೊತ್ತಿ
ಸಂತೈಸುತಿರ್ದ ಲಂಕೇಶ್ವರನ ಕೆಂಗಣ್ಗಳಿಂ
ತೋರ ಬಿಂದುಗಳುದುರುತಿರ್ದುವು, ಕೃಶಾನು ತಾಂ
ದಹಿಸುವ ನವೇಂಧನಂ ತುದಿಗೆ ತನ್ನಂತ್ಯದಿಂ
ಹೃದಯದಲಿ ಹುದುಗಿರ್ದ ಕುದಿವ ಕಟುವಾರಿಯಂ
ಪ್ರಕಟಂ ಸ್ರವಿಸುವಂತೆ!
"ರಾಜ್ಞಿ, ತಡೆ ಶೋಕಮಂ.
ನನ್ನನೀಕ್ಷಿಸು. ಮನವ ಕಲ್ಮಾಡು. ನನಗಾಗಿ
ಮರೆ, ಮಗನ ಹಂಬಲಂ. ಈ ಅಳಲ್‌ಗಿಚ್ಚಿಂದೆ
ಸುಡದಿರೆನ್ನೆರ್ದೆಯ ಕೆಚ್ಚಿನ ಮರದ ಬೇರ್ಗಳಂ.
ಐರಾವತವನೇರ್ದವನ ಸೋಲಿಸಿದ ಮಗಂ,
ರಾಮವಾನರ ಸೇನೆಯಂ ತನ್ನ ಮಾಯೆಯಿಂ
ಕಂಗೆಡಿಸಿ ಕೊಂದಾ ಮಗಂ, ರಾಕ್ಷಸರ ಕುಲದ
ಗೌರವಕೆ ಕಲಶನಾಗಿರ್ದಾ ಮಗಂ, ನನ್ನ
ಬಲಮೇರುಗಿರಿ ಬಲಕೆ ಮೇರುದಂಡದೊಲಿರ್ದ
ಗಂಡುಗಲಿ ಮೇಘನಾದಂ ದಿಂಡುಗೆಡೆದೊಡೇಂ
ಪಗೆಯ ಕೈತವಕೆ ಸಿಲ್ಕಿ? ಜಾನಿಸುತ್ತಿರ್ದನಂ
ಕೊಂದು ಕಲಿಯಪ್ಪನೇಂ ಪೇಡಿ ರಾಮಾನುಜಂ?
ಕೇಳ್ ಪೂಣ್ಕೆಯಂ, ರಾಣಿ: ಇಂದ್ರಜಿತುವಂ ಕೊಂದ
ಕಿತವನ ಕಳೇಬರಂ ಕೊಳೆವುದೆಮ್ಮೀ ನೆಲದ
ಹುಳುಗಳುಣಿಸಾಗಿ, ಮೇಣೆನ್ನೊಡಲ್ ತವಿವುದಾ
ಮಾಳ್ಕೆಯಿಂ! ನಿನ್ನ ಕಂಬನಿಗೆರಡುಮಡಿ ಕಣ್ಬೊನಲ್
ಪರಿವಂತುಟೆಸೆಗುವೆನ್: ತುಂಡರಿಪೆನೀ ನಮ್ಮ
ಸಂಕಟದ ಕಾರಣವನಾ ಹೃದಯಶೂನ್ಯೆಯಂ,
ನನ್ನ ಜೀವನ ಶೂಲರೂಪಿಣಿಯನಾ ಸ್ಥಿರಾ

ಕನ್ಯೆಯಂ!......''
ಸುಯ್ಯೊತ್ತಿ ಸೊಲ್ಲುಡುಗಿದುದು, ಮುಂದೆ,
ಕೊರಳ ಸೆರೆ ಬಿಗಿದು. ಕಣ್ಮೊಗಂಗಳನೊರಸಿದನ್
ಸೆರಗಿನಂಚಿಂದೆ. ಕಲ್ಲಾದನೊಲ್ ಕುಳ್ತನಾ
ಲಂಕೇಶ್ವರಂ, ದಿಟ್ಟಿ ನಟ್ಟು ಹೃದಯೇಶ್ವರಿಯ
ಮಂಡೋದರಿಯ ವದನಮಂಡಲದಿ:
''ಏನಿದೇನ್?
ಆವ ಭಯಕೀ ಮುಖವಿಕಾರಂ ನಿನಗೆ ಪೇಳ್?
ಬೆದರದಿರ್, ಮಹಿಷಿ. ಏಕೆನಗೆ ಕೈ ಮುಗಿಯುತಿಹೆ?
ನೋಡಲಾರೆನ್ ನಿನ್ನ ವದನವೈರೂಪ್ಯಮಂ!
ತಪ್ಪಾಯ್ತು, ಕೊಲ್ಲೆನವಳಂ; ಕ್ಷಮಿಸು!''
ಇಂತಾರ್ದ
ಪತಿಗತಿ ಕೃತಜ್ಞತೆಯನರ್ಪಿಸುವ ತೆರದಿಂದೆ
ಮಯನ ಮಗಳವನ ಕಾಲ್ವಿಡಿದದರ ಧೂಳಿಯಂ
ತಳಿದುಕೊಂಡಳೊ ತನ್ನ ಮುಡಿಗೆ! ಅನಿತರೊಳೊರ್ವ
ದಾಸಿಯ್ಯೆತಂದಳೆಂದಳು ಗದ್ಗದಿಸುತಿಂತು:
''ಧಾನ್ಯಮಾಲಿನಿ ದೇವಿಗಸ್ತಮಿಸುತಿರ್ಪುದಸು!
ಅತಿಕಾಯನೊಡಲುಳಿದುದಂ ಕೇಳಿದುದೆ ತಡಂ,
ಒಡೆಯ, ಮೂರ್ಛೆಗೆ ಸಂದಳಿನ್ನುಮುಪಚರಿಸಿಹರ್
ದಾದಿಯರ್!'' ಏರ ಮೇಲೇರ್ದ್ಗೊಂಡ ಸಿಂಗದೊಲ್
ಬಾರಿಬಾರಿಗೆ ಸುಯ್ಯುತಸುರೆಂದ್ರನೊಯ್ಯನೆಯೆ
ಮಂಡೋದರಿಯ ಮೆಯ್ಯನಿಳುಹಿದನು ಸಿತಹಂಸ
ತೂಲಿಕೆಯ ಮೃದು ತಲ್ಪಕೆ. ಆರೈಕೆಗಾಕೆಯಂ
ದಾದಿಯರಿಗೊಪ್ಪಿಸಿ ದಶಾನನಂ, ಮ್ಲಾನಮುಖಿ,
ನಡೆದನೈ ಧಾನ್ಯಮಾಲಿನಿ ದೇವಿಯರಮನೆಗೆ.
ಜಳಯಂತ್ರ ವಾರಿ ಲೀಲಾ ವಿನೋದಮಯಮಂ,
ಪಕ್ಷಿಕೂಜನ ವಿವಿಧ ಕಲಕಲ ಮಧುರಮಂ, ಮೇಣ್
ಗಂಧಮಯ ಕುಸುಮಕುಲ ರಮಣೀಯಮಂ ದಾಂಟಿ
ಪೂದೋಂಟಮಂ, ಪೊಕ್ಕನಸುರ ಚಕ್ರೇಶ್ವರಂ
ನೀರವತೆಯಿಂ ಶಾಂತಿಸಂಭ್ರಾಂತಿಕರಮಾಗಿ
ಪೊಂಬಿಸಿಲೊಳೆಸೆದಿರ್ದಸುರ ಹರ್ಮ್ಯಮಂ. ಕಂಡು

ಅಸುರೇಂದ್ರನೈತರವನರುಗಾದರೊಯ್ಯನೆಯೆ
ತಲೆಮುಸುಗ ದಾದಿಯರ್. ಧಾನ್ಯಮಾಲಿನಿ ಮಲಗಿ
ನಿದ್ರಿಪೋಲಿರ್ದ ಸಿರಿ ಮಂಚದೆಡೆ ನಿಂದನ್: ‘‘ಬಾಳ್!
ಕಳ್ಳನೊರೆದೊಂದು ಸುಳ್ಳಿನ ಸಂತೆ! ಬರಿ ಬೊಂತೆ!
ಕಡೆಗೆ, ಬೆಂಕಿಯ ಹೊರೆದು, ಬೂದಿರಾಸಿಯನುಳಿವ
ಅರ್ಥವಿಲ್ಲದ ಬಣಗು ಕಂಥೆ! ಇದಕೇಕಿನಿತು
ಚಿಂತೆ?’’ ತನ್ನೊಳಗೆ ತಾನಿಂತು ಗೊಣಗಿಕೊಳ್ಳುತೆ
ತಲೆಯ ಮೇಲ್ ಚಿಂತಾಚಲವನಾಂತನೋಲಂತೆ
ಕುಸಿದನಾ ಧಾನ್ಯಮಾಲಿನಿಯೆಡೆಯೆ ಪೀಠದಲಿ.
ತುಸುವೊಳ್ತು ಕೆಮ್ಮನಿರ್ದಿಂ ಬಳಿಂ, ಮೆಲ್ಲನೆಯೆ,
ಕರತಳವ ಸೋಂಕಿಸಿದನತಿಕಾಯನಂಬಿಕೆಯ
ಸುಡು ಹಣೆಯ ಕುರುಳೋಳಿಗಳನೆಳವಿ. ಬೆಚ್ಚಿದಳ್;
ಸುಯ್ದಳ್; ಕಣ್ದೆರೆದಳ್; ಆರನುಂ ಗುರುತಿಸದ
ನೋಟದಿಂ ನೋಡಿದಳ್; ತನ್ನೊಳಗೆ ತಾನಿಂತು
ಇನ್ನಾರೊ ಅಶರೀರಿಯೊಡನೆ ಮಾತಾಡಿದಳ್,
ದನುಜೇಂದ್ರನನಿಮೇಷನಾಗಿ ಕೇಳ್ವಂತೆವೋಲ್:
‘‘ಮುನಿಯದಿರ್, ಸ್ವಾಮಿ. ಮೆಯ್ ಸೋಲ್ತುದು ದಿಟಂ; ಮನಂ
ಸುಡುತಿರ್ದುದದನೇಗಳುಂ. ಮೆಯ್ಯನಲ್ಲದೇಂ
ಮನವನಿತ್ತನೆ ರಾಕ್ಷಸಂಗೆ? ಕೈಬಿಡದಿರೀ
ದಾಸಿಯಂ. ಮನವನಲ್ಲದೆ ತನುವ ನೋಡುವನೆ
ಜಗದೀಶ್ವರಂ? ನನಗೆ ನೀನೆ ಸರ್ವೇಶ್ವರಂ.
ಸೀತೆಯಂ, ಪೂಜ್ಯೆಯಂ, ಆ ಲೋಕಮಾತೆಯಂ
ಪಶುರಾಕ್ಷಸಂ ಮುಟ್ಟಿ ಪೊತ್ತುತಂದಾ ಕತದಿನ್
ಅಪವಿತ್ರಳಾದಳೇನಾ ಪತಿವ್ರತೆ? ಸ್ವಾಮಿ,
ನನ್ನ ಮುಡಿಯಂ ನೋಡು. ನಿಚ್ಚಮುಂ ತ್ರಿಜಟೆಯಿಂ
ನಾಂ ಪಡೆದು ಮುಡಿದ ರಘುರಾಮನ ಮಡದಿಯಡಿಯ
ಪಾಪನಾಶಕ ಧೂಳಿ! ಏನೊ ದುಃಸ್ವಪ್ನದೊಳ್
ಪ್ರಾರಬ್ಧ ಕರ್ಮಪರಿಪಾಕದಿಂದಗಲಿದೆವು
ನೀನುಮಾನ್. ಆ ಸ್ವಪ್ನಮೊಡೆದುದಿನ್! ಅದಕಾಗಿ
ಆ ದೇವಿ ರಾಮಸತಿಗಿದೊ ಶತ ನಮಸ್ಕಾರಗಳ್!’’
ಮತ್ತೆ ಕಣ್ಮುಚ್ಚಿದಳ್ ಧಾನ್ಯಮಾಲಿನಿ. ಮುಖಂ

ಸುರ್ಕಳಿದು, ನಿಸ್ತರಂಗಿತ ಸರೋವರದಂತೆ,
ಶಾಂತವಾದುದು. ತನ್ನ ಕಾಮಾತಿಶಯದಿಂದೆ
ಶವದ ಸಹವಾಸದೊಳ್ ಭೋಗಿಯಾಗಿರ್ದವಂ
ಬೋಧೆ ತಿಳಿದೇಳುತೆ ಜುಗುಪ್ಸೆಯಿಂದತಿ ನಾಣ್ಚಿ
ಯಾತನಾ ಪಂಕದೊಳಸಹ್ಯದೊಳುರುಳ್ವವೋಲ್,
ಪಿಂತೆಂದುಮಾವ ಕಾರಣಕನುಭವಿಸದೊಂದು
ಮರ್ಮಘಾತದ ವೇಧೆಯಿಂ ನರಳ್ದನಾಳದಿಂ
ಮಂಡೋದರೀ ಪ್ರಿಯಂ. ಧಾನ್ಯಮಾಲಿನಿಯಾತ್ಮಮಂ
ಕ್ಷಮೆ ಬೇಡುವಂದದಿಂ ಮುಡಿಮಣಿದನವಳಡಿಗೆ
ದೇವದಾನವ ಭಯಂಕರನಾತ್ಮ ಸಂತಾಪ
ದೀನ ಮನನಾಗಿಃ ಪುಲಕಿಸಿತು ಪರಶಿವನ ಮೆಯ್;
ಮುಗುಳುನಗೆ ಮಲರಿದತ್ತಾದಿಶಕ್ತಿಯ ಮೊಗಕೆ;
ಮಾಯಾಂಗನೆಯ ಕಯ್ಯ ಮೋಹಪಾಶಂ ನಡುಗೆ,
ಕರುಬಿದಳು ಕಂಡು ಮುಕ್ತ್ಯಂಗನೆಯ ಹಸಿತ ಸಿತ
ವದನಾಬ್ಜಮಂ!
ಬಂದಳನ್ನೆಗಮೊರ್ವಳನಲೆ
ಕಳುಹಿರ್ದವಳ್. ತನ್ನಿದಿರ್ ಕೈಮುಗಿದು ನಿಂದಳಂ,
ನಡುಗಿರ್ದಳಂ, ನೋಡಿ ದುರ್ವಾರ್ತೆಯಾಶಂಕಿಃ
''ಮತ್ತಿದೇನಂ ತಂದೆ ಪೇಳ್ ಅಮಂಗಳಮಂ,
ಅಕಲ್ಯಾಣಮುಖಿ? ಅಶುಭಮಲ್ಲದೆನಗಿಲ್ಲವೇನ್
ಇನ್ನನ್ಯ ಕರ್ಣಾಮೃತಂ? ನಡುಗುತಿಹೆ ಏಕೆ?
ನಿನಗೆ ನಾಲಗೆಯುಡುಗಿದುದೆ? ಕೆಮ್ಮನಿಹುದೇಕೆ?
ನುಡಿ ಬೇಗದಿಂದಲ್ಲದಿರೆ ತೊಲಗು! ಕಣ್ಣಿದಿರ್
ನಿಂದು ಕಾಡದಿರೆನ್ನ ಕದಡು ಬಗೆಯಂ!'' ಗುಡುಗಿ
ನುಡಿದ ಕಾರ್ಮುಗಿಲೊಡಲ ಕರ್ಬುರಾದ್ಭುತಗಿಂತು
ಗದ್ಗದಿಸಿದಳ್ ದಾಸಿಃ ''ನನ್ನನನಲಾ ಲಲನೆ
ಬಳಿಯಟ್ಟಿದಳ್, ಪ್ರಭೂ. ತಾರಾಕ್ಷಿ ದೇವಿಯರ್
ಮೇಘನಾದ ಸ್ವಾಮಿಯೊಡನಗ್ನಿಯಂ ಪುಗಲ್
ನಿಚ್ಚಯ್ಸಿಹರ್. ತಡೆದದಂ ತಮ್ಮ ಬರ್ಪುದನೆ
ಪಾರ್ದಿದಿರ್ ನೋಡುತ್ತುಮಿರ್ದೆನ್ನನಟ್ಟಿದರ್
ನಿಮ್ಮಿರ್ದ್ದೆಡೆಗದಂ ನಿವೇದಿಸಲ್ ತಮ್ಮಡಿಗೆ!''

ಕೇಳ್ದುದೆ ತಡಂ ತೆಕ್ಕನೆದ್ದನು ದಶಾನನಂ,
ಸೊಸೆಯಳಲಿದಿರ್ ತನ್ನಳಲ್ ಬರಿ ನೆಳಲ್ ದಿಟಂ
ಎಂಬ ಧೀರೋದಾತ್ತ ಭಾವೋಜ್ವಲಾನನಂ:
''ನಡೆ, ತೆರಳ್; ಪೇಳನಲೆಗೀಗಳೆಯೆ ಬಂದೆನಾಂ.
ತಳುವದೆಯೆ ನಡೆ, ಓಡು!'' ಆಳನಟ್ಟಿದನೊಡನೆ
ತೊಳೆವವೋಲಳಲಂ ಮೊಗಂದೊಳೆದನುಟ್ಟುದಂ
ತೊಟ್ಟುದಂ ನೇವರಿಸಿದನ್. ದುಃಖಛಾಯೆಯುಂ
ಹೊರಸುಳಿಯದಂದದೊರ್ ಧೀರವೈಖರಿಯಾಂತೆ
ನಡೆದನಾ ದೈತ್ಯೇಶ್ವರಂ, ದಿವಂಗತ ಸುತನ
ಸತಿಯ ಶೋಕಾಗ್ನಿಯಂ ತವಿಪ ಪೆರ್ಮಳೆಗಳಂ
ಕರೆಯುವ ಮನೋನಿಶ್ಚಯದ ತೋಯದಂಗಳಂ
ಪೊತ್ತುಯ್ವ ಕಾರ್ಗಾಳಿಯೋಲ್!
ದಿಗಿಲ್ಗೊಂಡೆರ್ದೆಗೆ
ಧೃತಿ ತಾಂ ಪ್ರವೇಶಿಸುವ ಮಾಳ್ಕೆಯಿಂ ರಾವಣಂ
ಪೊಕ್ಕನ್ ಪುರಂದರಾರಿಯ ಮೇಘಚುಂಬಿತ
ಮಹಾ ವೇಶ್ಮಮಂ. ಪಿಂತೆ ತಾಂ ಬರಲಿದಿರ್ಗೊಂಬ
ಸುತನ ಸಾನ್ನಿಧ್ಯಶೂನ್ಯತೆಗಸುರ ಸಂಕಟಂ
ಸುಯ್ದಿರಲದಂ ಕಷ್ಟದಿಂ ಸಂಯಮಿಸಿಕೊಳುತೆ:
ದ್ವಾರದ್ವಾರಂಗಳೆಡೆ ತನ್ನ ಬರ್ಪುದ ಕಂಡು,
ಕುಗ್ಗುತೆ, ಮೊಗಂ ತಗ್ಗಿ, ಗೆಂಟರ್ಮೆರೆಗೆ ಸರಿದು
ಕೈಮುಗಿಯುತಿರ್ದ ಕಿಂಕರವರ್ಗಮಂ ದಾಂಟಿ
ಬಂದನನಲಾ ಕನ್ಯೆ ತನ್ನಪ್ಪುಗೆಯೊಳಾಂತು
ಮಗನ ಮನದನ್ನೆಯಂ ತರುಣಿ ತಾರಾಕ್ಷಿಯಂ
ಸಂತೈಸುತಿರ್ದಂತವುರಕೆ. ಆ ಗೋಳನಾರ್
ಸಹಿಸಲಾಪರ್? ಮಡಿದ ಜವ್ವನಿಗ ಗಂಡನಂ
ನೆನೆದಳುವ ಜವ್ವನೆಯ ಗೋಳನಾಕರ್ಣಿಸುತೆ
ಮರವಟ್ಟನೊಲ್ ನಿಂದನಿಂದ್ರಜಿತುವಿನ ತಂದೆ
ಹಂದದಲ್ಲಿಂದೆ: ರಾಮಾಸ್ತ್ರತತಿಯಿಂ ಮುಂದೆ
ಜಜ್ಜರಿತನಾದನೆಂಬುದು ಬರಿಯ ಕಥೆಯಲ್ತೆ?
ಪಿರಿಯಯ್ಯನೆಯ್ತಂದುದಂ ಕಂಡನಲೆ: ''ಸಖೀ,
ಮಾವನದೊ! ಸುತನ ಸಾವಿನ ಸಿಡಿಲ್ ಬಡಿದುಸಿರ್

ಕಟ್ಟಿದೋಲುಸಿಕನಿರ್ಪನ್, ನಿನ್ನ ನೋವ್‌ಗರಂ
ತನಗೆರಗಿದಂತೆ!'' ಕೆಳದಿಯನಾಲಿಸಿರ್ಜಡೆಯ
ಬೈತಲೆಯ ಸಿರಿಯುಡೆಯ ಬೆಡಗಿನ ನಡೆಯ ತರಳೆ
ತಾರಾಕ್ಷಿ, ತತ್ತರಿಸುತೆದ್ದು, ರೋದಿಸುತೆಯ್ದಿ,
ಮುಡಿ ಬಾಗುತಡಿಗೆರಗಲುರುಳಿದಳು; ಹೊರಳಿದಳ್
ಗಂಡನಯ್ಯನ ಪಾದತಲದಲಿ, ದಶಾನನನ
ಗುಂಡಿಗೆಯ ಮೇಲೆ ಗರಗಸವೆಳೆವವೋಲ್. ಬಾಗಿ,
ಬಾಲೆಯಂ ಮೇಲೆತ್ತವೋಗಿ, ಕುಸಿದನು ತಾನೆ
ನೆಲಕೆ, ಕೈಲಾಸಮಂ ನೆಗಹಲಲುಗಾಡಿಸಿದ
ಬಾಹು ಭೀಮಂ. ಮುಕ್ತ ಮುಕ್ತಾಫಲಾಶ್ರುಗಳ್
ಸ್ಖಲಿತಾಕ್ಷರಂಗಳಂ ಕೆಳೆಗೊಂಡುವೆನೆ ಸೊಸೆಯ
ಸಂತೈಸಿದನು ಮಾವನಿಂತೆಂದು: ''ತಡೆ, ಮಗಳೆ,
ಕಡಲುಕ್ಕುವೀ ಕಣ್ಣೊಡಲ ಬಡಬನಂ: ಲಂಕೆ
ಕಂತುವುದು ಕಣ್ಣೀರೊಳಳ್ದು; ಸುಟ್ಟುರಿವನೀ
ಲಂಕಾಧಿಪಂ, ನಿನ್ನ ದುಃಖ ದಾರುಣ ದವದ
ದಳ್ಳುರಿಗೆ! ನಿನ್ನಿಂದೆ ಮುಂದೆ ರಾಕ್ಷಸ ಕುಲಂ!
ನೀನೆಯಿನ್ ಲಂಕಾಧಿದೇವಿ, ಲಂಕಾ ಲಕ್ಷ್ಮಿ;
ನೀಂ ಬರ್ದುಕಲುಳಿವುದೆಮ್ಮೀ ವಂಶಮಿಲ್ಲದಿರೆ,
ನೀನೆ ಕಾರಣಮಾಗೆ, ಕುಲಕೆ ಕೊನೆ! ತಾಳ್, ಮಗಳೆ;
ತಾಳಿ ಬಾಳ್; ಬಾಳಿ ಬಾಳಿಸು ನಮ್ಮ ಬಳಿಯಂ:
ಮಹಾರಾಣಿ ಮೇಘನಾದಂಗೆ ನೀನವನಿಂದೆ
ವೀರ ಸತ್ತ್ವಪ್ರತಿಮೆಯೆನೆ ಪಡೆದೆಯೊರ್ವನಂ,
ಮನೆಯ ಪೆರ್ಮೆಯ ಕುಡಿಯನಣುಗನಂ ವಜ್ರಾರಿಯಂ.
ತಣಿವಹುದು ನಿನ್ನಿನಿಯನಾತ್ಮಕ್ಕೆ ನೀನವನ
ಮೊಳಕೆಯಂ ಪೆರ್ಮರತನಕೆ ಪೊರೆಯೆ. ಬಹಳಮಿನ್
ಪೇಳಲಿಂದೆನಗೆ ತೆರಪಿಲ್ಲ: ಕೇಳ್, ಮಗಳೆ, ಪಗೆ
ಕೋಂಟೆಯಂ ಮುತ್ತಿ ನಿಂದಿಹ ಪೊಳ್ತು. ಪೋದಿರುಳ್
ವೀರನತಿಕಾಯನಿಂ ಗಾಯಗೊಂಡೊಳಸೋರ್ದು
ಕಟ್ಬೋಡಿತಾದೊಡಂ, ತಲ್ಲಣಿಸಿಹುದು ಲಂಕೆ,
ಬೆಂಕೆಯಾಟೋಪದಿಂ. ಇಂದೆನಗೆ ಕಟ್ಟುವೆನ್
ನಾನೆ ಸೇನಾಧಿಪನ ಪಟ್ಟಮನ್!'' ತುಸುವೊಳ್ತು

ಮೌನಮಿರ್ದನ್, ಮತ್ತೆ: ''ಬಾಳ್, ಮಗಳೆ, ಬಾಳ್! ಏಳು;
ಮೊಮ್ಮಗನದೆಲ್ಲಿ ? ತೋರೆನಗೆ!''
ಎನುತೆದ್ದವಗೆ
ಅನಲೆ ''ತಾಯ್ ಕರೆದುಕೊಂಡಿಹಳೀಗಳೆಯೆ ತಹೆನ್.''
ಎಂದಗಂ ನಡೆದು, ಸರಮೆಯ ಕಯ್ಯೊಳಿರ್ದನಂ
ವಜ್ರಾರಿಯಂ ತಂದು ಲಂಕೇಶ್ವರನ ಕಯ್ಗೆ
ನೀಡಿದಳು, ರಾಕ್ಷಸ ಮುಖಂ ಮುಗ್ಧ ಶಿಶುವಾಗೆ!
ಪೊಸ ಮುಗುಳ್ ಪಸುಳೆಯಂ ಮೊಮ್ಮಗನನೆತ್ತಿ, ಕಣ್
ತೊಯ್ವಿನಂ ಮುಂಡಾಡಿ, ಸೊಸೆಯ ಸನಿಹಕೆ ನಡೆದು,
''ಮಗಳೆ, ನೋಡಿಲ್ಲಿಹುದು ಬರ್ದುಕಿಗರ್ಥಂ, ಮತ್ತೆ
ಬಾಳ್ಗೆ ಗುರಿ ನಿನಗೆ. ನಿನ್ನ ಸಾವಿನ ಸುಖವನೀ
ಮೇಘನಾದನ ತೇಜದೇಳ್ಗೆಗೋಸುಗಮಾಗಿ
ಬೇಳ್. ನಿನ್ನ ದುಃಖಮಂ ಮರೆ ಈತನೆಳನಗೆಯ
ಸುಖಕೆ. ತೊರೆ ನಿನ್ನ ಸರ್ವಸ್ವಮಂ ಈ ನಿನ್ನ
ಮೇಣೆಮ್ಮ ಸರ್ವಸ್ವಕಾಗಿ. ಕೊಳ್ಳೀತನಂ,
ಪುರುಹೂತ ಜೀತ ಸಂಜಾತನಂ! ಏಳ್, ಮಗಳೆ,
ಏಳ್! ಬಾಳ್ ಇದೆಕೊ ತೋಳ್ ಚಾಚುತಾಹ್ವಾನಿಸಿದೆ
ನಿನ್ನಳ್ಕರೆಯ ಪಸುಳೆವೋಲ್. ಕೇಳ್, ತೊದಲ್ವದರ
ಕರೆಯಿಂಚರಂ!'' ಇಟ್ಟನಿಂದ್ರಜಿತುವಿನ ಸತಿಯ
ತೊಡೆಯ ತೊಟ್ಟಿಲೊಳವನ ಕಾಂತಿ ಕರುವಿಟ್ಟಂತೆ
ಕಂಗೊಳಿಸುತಿರ್ದ ಶಿಶುಗಾತ್ರಮಂ. ತೊಟ್ಟನೆಯೆ
ಪೊರಮಟ್ಟನಲ್ಲಿಂದೆ, ತರಿಸಂದು ತನ್ನ ತಾಂ
ಬೇರ್ಪರಿಯೆ ಕಿಳ್ತುಕೊಳ್ವಂತೆ.
ಪುರಾಧ್ಯಕ್ಷನಂ
ಕೂಡಿ ನಗರದ ದಗ್ಧ ದುಃಸ್ಥಿತಿಗಳಂ ನೋಡಿ,
ಜನ ಭಯ ನಿವಾರಣೋಪಾಯಂಗಳಂ ಪೇಳ್ದು,
ಕೋಂಟೆವಾಗಿಲ್ ವಾಗಿಲೆಡೆ ದುರ್ಗರಕ್ಷೆಗೆ
ಬಲಾಧ್ಯಕ್ಷನಿಗೆ ಸಮಯಸೂಚನೋಚಿತಗಳಂ
ಬೆಸಸಿ, ತನ್ನಯ ಮೂಲಬಲ ಸರ್ವಮಂ ರಣಕೆ
ಸಜ್ಜಿತಂ ಮಾಡಿ ಸನ್ನಾಹಗೆಯ್ವಾಜ್ಞೆಯಂ
ದಂಡನಾಯಕಗಿತ್ತು, ಕೋಲಾಹಲಂ ವೆರಸಿ

ರಣವಾದ್ಯಗಳ್ ಮೊಳಗುತಿರೆ ಪಿಂದಿರುಗಿದನ್
ದಶಗ್ರೀವನಾತ್ಮದುಃಖ ಕ್ರೋಧ ತಪ್ತಂ,
ಮರಳ್ವವೋಲ್ ಪೋದ ಧೈರ್ಯಂ ದೈತ್ಯಪತ್ತನಕೆ.
   ಕಳಕೆ ತೆರಳುವ ಮುನ್ನಮಿನಿತು ವಿಶ್ರಾಂತಿಯಂ
ಬಯಸಿ, ಮಂಚದೊಳೊರಗಿ, ಘೋರ ಸಮರಕೆ ತನ್ನ
ಧೃತಿಯ ಧನುವಿಗೆ ಮೌರ್ವಿಯನ್ನೇರಿಸಲ್ಕದಂ
ಚಿತ್ತಮಂ ಬಾಗಿಸುವ ದೈತ್ಯ ದುರ್ಧರ ಧೂರ್ತ
ಮರಣಮಯ ಕರ್ಮದೊಳ್ ತೊಡಗಿರಲ್ ರಾವಣಂ,
ಬಾಗಿಲೊಯ್ಯನೆ ತೆರೆದುದೊಳಗೆ ಬಂದಳು ತಂಗೆ
ಚಂದ್ರನಖಿ!
            ಕಣ್ಣೆತ್ತಿ ನೋಡಿ "ಏನ್ ಬಂದುದೌ,
ತಂಗೆ?" ಎಂದಸ್ಥಿರಧ್ವನಿಯ ಪಿರಿಯಣ್ಣನಂ
ಬಳಿಸಾರ್ದು, ಕಾಲ್ವಿಡಿದು, ಪದಕೆ ಪಣೆಯೊತ್ತಿದಳ್:
ಗದ್ಗದಿಸುತಳ್ತಳಸುರ ಕೃಶಾಂಗಿ. ಪಿಂತೆಂದುಂ
ಕಾಣದಿರ್ದವಳ ದುಃಸ್ಥಿತಿಗೆ ಬೆಕ್ಕಸಗೊಂಡು
ರಕ್ಕಸಂ:
        "ಏನಿದೀ ಮಲಿನ ವಸನಂ ನಿನಗೆ?
ಅದೇಕಿಂತು ಸೊರಗಿರುವೆ?"
                              "ಪಾಪಿ; ಪಶ್ಚಾತ್ತಾಪಿ;
ಬಂದೆನಾಂ ಬಯಸಿ ಪ್ರಾಯಶ್ಚಿತ್ತಮಂ!"
                                        "ಪಾಪಮೇನ್?
ಆರ್ಗೆ ಪಶ್ಚಾತ್ತಾಪಮಾರ್ಗೆ ಪ್ರಾಯಶ್ಚಿತ್ತಮ್?"
"ಪಾಪಿ ನಾನ್. ನನಗೆ ಪ್ರಾಯಶ್ಚಿತ್ತಮಿನ್ನಾರ್ಗೆ?"
ವ್ಯಂಗಮೆನೆ ನಕ್ಕನಸುರಂ.
                         "ನಗುವೆ ಏಕಣ್ಣಯ್ಯ?
ಮುನ್ನನ್ನಳಲ್ತು ನಾನಿನ್ ... ನನ್ನ ದೆಸೆಯಿಂದೆ
ಕಳ್ದುಯ್ದು ಹದಿಬದೆಯನೆಳೆತಂದೆ. ಲಂಕೆಯಂ
ನಾನೆ ಈ ದುರ್ಗತಿಗೆ ತಂದೆ; ಲೆಕ್ಕಕೆ ಮಿಗಿಲ್
ಬೀರಾಳ್ಗಳಂ ತಿಂದೆ; ಸೇನಾನಿಗಳನೆನಿತೊ
ಕೊಂದೆ; ಕುಂಭಕರ್ಣನ ಕೊಂದೆನತಿಕಾಯನಂ
ಮೇಣಿಂದ್ರಜಿತು ಮೇಘನಾದಾದಿ ಮಕ್ಕಳಂ

ಬೇಳ್ದೆನೆನ್ನಯ ದುರಭಿಮಾನದ ದವಾಗ್ನಿಯಂ
ಪೋಷಿಸಲ್. ಕಾಲ್ವಿಡಿದು ಬೇಡುವೆನ್ ನಿನ್ನನೀ
ರಣಮೇಧಮಂ ನಿಲಿಸು. ನನ್ನನಾ ಲಕ್ಷ್ಮಣಂ
'ಶೂರ್ಪನಖಿ' ಎಂದು ಕೋಪಕೆ ಬಯ್ದನಂದದಂ
ನನ್ನಿಗೆಯ್ಯದಿರಿಂದು ನೀನ್. ಬಂದೆನಿಲ್ಲಿಗಾನ್
ನಿನ್ನಡಿಯೊಳೊಂದು ಭಿಕ್ಷೆಯ ಬೇಡಲದನೆನಗೆ
ನೀಡವೇಳ್ಕುಂ!''
''ಭಿಕ್ಷೆ? ನಿನ್ನನ್ನಳಿಗೆ ಭಿಕ್ಷೆ?
ಇಂದಿನೀ ವೇಷದಿಂ ನೀಂ ಭಿಕ್ಷುಣಿಯೆ ದಿಟಂ!''
''ನಾನ್ ಪೊತ್ತಿಸಿದ ಕಿಚ್ಚನಾನ್, ನಂದಿಸಲ್ಕೆನಗೆ
ನೀಡು ನಿನ್ನನುಮತಿಯ ಭಿಕ್ಷೆಯಂ.''
''ಚಂದ್ರನಖಿ,
ನಿನ್ನ ಕೈ ಪೊತ್ತಿಸಿತ್ತಾದೊಡಂ, ನಿನ್ನಳವನಾ
ಕಾಳ್ಗಿಚ್ಚು ಮೀರಿರ್ಪುದಿಂದು. ನೀನಾರಿಸಲ್
ಪೋದಡದು ಕೇಳ್ ನಿನ್ನನೊಳಕೊಳ್ಳುವುದೆ ದಿಟಂ!''
''ನನಗದೇ ಪಥ್ಯಂ!''
''ಅದೇನ್ ನಿನ್ನ ಬಗೆ? ಪೇಳ್.''
''ಪೇಳಲೆನಗಾಸೆ; ಪೇಳಲ್ಕಂಜುತಿಹುದೆನ್ನ
ಜಿಹ್ವೆ.''
''ನೀನೊಡವುಟ್ಟಿದಳ್.''
''ಜನಕಕನ್ಯೆಯಂ
ದಾಶರಥಿಗೊಪ್ಪಿಸುವುದೆನ್ನಾ ಮನೋರಥಂ!''
''ಸತ್ಪಥಮೆ ದಲ್, ತಂಗೆ! ಸತ್ಪಥಮೆ ಅದು ದಿಟಂ,
ಹೆಂಬೇಡಿಗಳಿಗೆ, ಮೇಣ್ ಜೀವಗಳ್ಳರಿಗೆ!'' ಆರ್ದು
ಕೂಗಿ ಕುಳಿತನು ದಶಾನನನವನ ಮಂಚಮಂ
ನೆಮ್ಮಿ!
ಅವನ ಸೋದರಿಯಲ್ತೆ ಆ ಚಂದ್ರನಖಿ?
ಅಪ್ರತಿಭಳಪ್ಪಳೇನ್ ಅಸುರೇಂದ್ರನೊಳಹೊರಗು
ಮೇಲ್‌ಕೆಳಗುಗಳನರಿತವಳ್? ಸುಯ್ದು ಕುಳ್ತಿರ್ದ
ದೈತ್ಯೇಂದ್ರ ಸಮ್ಮುಖದಿ ತನ್ನುದ್ದಮನಿತುಮಂ
ನೀಳ್ದು ನಿಂದಳು ನೀಳೊಡಲ ಲಂಕಾಲತಾಂಗಿ,

ಮಾರುತ್ತರಂಗುಡಲ್ ಮಾರಾಂತಳೋಲ್:
"ಅಂಜಿ
ನೆಗಳ್ವುದದು ಪೇಡಿತನವರಿತು ಮಾಳ್ಪುದಕೇಕೆ
ಆ ಪೆಸರ್? ಪೇಡಿ ತಾನೆಂಬರೆಂಬುದಕಳ್ಕಿ
ನೆಗಳ್ವನುಮಪಥ್ಯಮಂ, ಪೇಡಿಯಿರ್ಮಡಿ ದಿಟಂ!
ನಿನ್ನಾತ್ಮಮೇನಾಡುತಿದೆ ಪೇಳ್; ಪೇಳೆನಗೆ
ನಿನ್ನಂತರಾತ್ಮಮಂ! ಏನದಾ ಅತ್ತಿಗೆಗೆ
ನೀನೊರೆದ ಕನಸಿನರ್ಥಂ? ಸೀತೆಯೊಳ್ ನಿನಗೆ
ಇನ್ನುಮಿರ್ಪುದೆ ಅಂದಿನಾ ಕಾಮರುಚಿ? ಪೇಳ್
ಅಶೋಕವನವಾಸಿ ಈ ಸೀತೆ, ಆ ಪಂಚವಟಿ
ವಾಸಿನಿ ಸುವಾಸಿನಿಯವೋಲ್, ನಿನಗೆ ಮೋಹಮಂ
ಕೆರಳಿಪಳೆ? ಈ ನಿರಶನವ್ರತೆಯುಮೀ ಮಲಿನ
ವಸನೆಯುಂ, ಈ ತಪಸ್ವಿನಿಯುಮೀ ನಿಶ್ಚಲ
ಪತಿವ್ರತಾ ಪೂಜ್ಯೆಯುಂ" ಕಡೆಕಡೆಯುತಕ್ಷರವ
ತಡೆ ತಡೆಯುತಾಡಿದಳ್ "ನಿನಗೆ ಭೋಜ್ಯಳೆ, ಪೇಳ್?
ತಪಸ್ಯೆಯಿಂ ವಾಣೀಪತಿಯನೊಲಿಸಿ ವರಂಗಳಂ
ಪಡೆದ ಕೃತಬುದ್ಧಿ ನೀನ್! ತೇಜಂ ಕಿಡುವುದೆಂದು,
ಕ್ಷಾತ್ರಂ ಮಸುಳ್ವುದೆಂದಿಂತು ನೀನಂಜುವೊಡೆ
ಬೆಸಸು ಕಾರ್ಯವನೆನಗೆ, ಅನ್ಯರಿಗೆ..."
"ನಿಲ್ ಸಾಲ್ಗುಮೀ
ನಿನ್ನುಪನ್ಯಾಸಂ, ಸಹೋದರೀ! ಜಾಣೆ ನೀನ್,
ಬಲ್ಲೆನಾನ್. ಇಲ್ಲದುದನಹುದೆಂದುಮಿರ್ಪುದಂ
ಇಲ್ಲಮೆಂದುಂ ಬಗೆಯೊಪ್ಪುವೊಲ್ ತೋರ್ಪ ಜಾಣ್ಮೆ
ನಿನಗೆವೊಡಹುಟ್ಟು. ನಿನಗಿಂ ಮೊದಲ್ ಪುಟ್ಟಿದೆನ್
ನಾನ್. ದಿಟಂ ನೀಂ ಪೇಳ್ದುದನಿತುಂ. ದಿಟಂ, ನನಗೆ
ಸತ್ತುದಾ ಸೀತೆಯೊಳ್ ಕಾಮರುಚಿ. ನೀನಿತ್ತ
ಕಾರಣಂಗಳಿಗಲ್ತು; ಅವಕಿಂ ಮಿಗಿಲ್ ಪಿರಿಯ
ಕಾರಣಂಗಳಿಗಾಗಿ! ದಿಟಮಿಂದಿನೀ ಸೀತೆ
ನನಗಂದಿನಾ ಸೀತೆಯಲ್ತು; ಆಕೆಗೆ ಮಿಗಿಲ್
ಪುಟ್ಟಿರ್ಪುದೀಕೆಯೊಳ್ ನನಗೊಂದತೀವತರ
ಗಾಢಮೋಹಂ. ತೊರೆದೆನಾಕೆಯನ್; ಆದೊಡಂ

ಎಂದೆಂದಿಗಂ ಬಿಡೆನ್ ಈಕೆಯನ್! ಚಂದ್ರನಖಿ,
ಪೇಳ್ವೆನಾಲಿಸು ಪಿಂತೆ ನಡೆದುದಂ: ಕಂಡೆನಾ
ಮಾರೀಚನಂ. ಪ್ರೇರಿಸಿದೆನಾತನಂ, ಕನಕ
ಮೃಗರೂಪದಿಂ ವಂಚಿಸಲ್. ಬಲ್ಲೆ ನೀನದಂ
ಕಥನಮಂ. ಮಾವನಾಡಿದನಂದು ಹದಿಬದೆಯ
ಮಹಿಮೆಯಂ ಕುರಿತು. ರಾವಣಶಯ್ಯೆಗೊಲಿಯದಿಹ
ನಾರಿಯಿಲ್ಲೆಂದಾಡಿದೆನ್, ಮೂಲೋಕದೊಳ್! ಮತ್ತೆ,
(ನಿನ್ನೆ ನಾನಾಡಿದಂತಿರ್ಪುವಾ ಮಾತುಗಳ್)
ಪೂಣ್ದೆನವನಿಗೆ 'ಇಲ್ಲ, ಮಾರೀಚ, ಎಲ್ಲಿಯೂ
ಇಲ್ಲ ಆ ನನ್ನ ತಾಯ್! ಪುಸಿಯ ಪೊಗಳಲ್, ಅಯ್ಯೊ,
ಪೇಸಿದಪುದೆನ್ನ ಬಾಯ್. ಸಲ್ಲದಯ್ ಪುಸಿಗೆನ್ನ
ಪೂಜೆ: ಪಾವನೆಯೆನಗೆ ತೋರ್ದಂದು ಧನ್ಯನಾಂ;
ಧನ್ಯೆ ತಾಂ!' ಚಂದ್ರನಖಿ, ಧನ್ಯನಪ್ಪಾ ಪೊಳ್ತು
ತೋರುತಿರ್ಪುದು ಸಾರೆ ಬರ್ಪಂತೆ. ಬರ್ದುಕಿರಲ್
ಮೇಣ್ ಪುಣ್ಯಯೋಗಮಿರೆ ನಿನಗೆ ನೋಡಲ್ ಬರ್ಕುಮಾ
ದಿವ್ಯದೃಶ್ಯಂ!..."
ನಿರ್ನಿಮೇಷನಾ ದೃಶ್ಯಮಂ
ಮನಶ್ಚಕ್ಷುವಿಂ ನೋಳ್ಪವೋಲ್ ದಾನವೇಶ್ವರಂ
ದೂರಗತ ದೃಷ್ಟಿಯಾದನ್. ಮುಗುಳ್‌ನಗೆಯೊಂದು
ಬೆದರಿದಂದದಿ ಸುಳಿದುದಾನನ ನಿಕುಂಜದೊಳ್.
ಮತ್ತೆ ತೆಕ್ಕನೆ ಕುರಿತು ತಂಗೆಯಂ:
"ಅಃ! ನಿನಗೆ
ಕಾಣದಾ ದೃಶ್ಯಮದೊ! ಏನ್ ದಿವ್ಯಮಾ ದೃಶ್ಯಂ:
ಮೂಲೋಕಮಿನ್ನೆಗಂ ಮತ್ತಮಿನ್ನಾದೊಡಂ
ಕಂಡರಿಯದಾ ಕಾಣಲಾರದಾ ಕೊಳುಗುಳದಿ
ರಘುಕುಲ ಲಲಾಮನಂ, ಜಗದೇಕವೀರನಂ,
ಗೆಲ್ದು, ಸೆರೆಯಾಳ್ ಮಾಡಿ ತಂದು, ಲಂಕೇಶ್ವರನ
ಸರ್ವ ಗರ್ವವನಿರದೆ ಸೋಲಿಸಿದ ಮೈಥಿಲಿಗೆ
ಕಪ್ಪಮೆನೆ ಕಾಣಿಕೆಯನೊಪ್ಪಿಸುವ ಭವ್ಯತಾ
ದಿವ್ಯದೃಶ್ಯಂ!"
ಕೇಳ್ದದಂ ನಿಮಿರ್ದುದು ನವಿರ್

ಮೆಯ್ಗೆ; ತತ್ತರಿಸಿದಳ್ ಚಂದ್ರನಖಿ; ಕಣ್ಣೀರ್
ತುಳುಂಕುತಿರೆ, ಮತ್ತೆ ಮೊಳಕಾಲೂರಿ ನಮಿಸಿದಳ್;
ನುಡಿದಳ್:
"ದಿಟಂ. ನೀನ್ ಮಹಾಕವಿ ದಿಟಂ! ಜಗದ್
ರಂಗದೊಳ್, ಬರಿ ಕಲ್ಪನೆಯೊಳಲ್ತು, ಕೃತಿಗಳಂ
ಕೊರೆಯುವ ಮಹಚ್ಛಿಲ್ಪಿ ನೀಂ ದಿಟಂ!"
"ತಾಳ್! ತಾಳ್!
ಕವಿಪ್ರತಿಭೆಯಲ್ತಾ ಖತಪ್ರತಿಭೆ. ದಶಮುಖಂ,
ಶತಮುಖಂ. ಬಹು ಮುಖಮನಂತಮುಖಮದಕೆ! ಕೇಳ್,
ಜಾನಕಿಗೆ ಸೋಲನೊಪ್ಪಿದೆನಿಲ್ಲಮಿನ್ನುಮಾಂ,
ತಂಗೆ. ಆ ಸೋಲೊಳಿಹುದೆನ್ನ ಗೆಲ್. ಇಂದೆನ್ನ
ಮೂಲಬಲಗಳನೆಲ್ಲ ಕೊನೆರಣಕೆ ಕರೆಯುವೆನ್.
ಪಿಂತೆಂದುಮಾ ವಾನರ ಬಲಂ ಕಾಣದೊಂದತಿ
ಪರಾಕ್ರಮವನವರಿಗಿಂದಾಂ ತೋರುವೆನ್. ನನಗೆ
ಬ್ರಹ್ಮನಿಂ ಬಂದುದೊಂದಿರ್ಪುದು ವರ ವರಿಷ್ಠಂ.
ಆ ವರ ಬಲದಿ ನನ್ನ ಮೂಲಬಲದೊಳ್ ನಾನೆ
ಓರೊರ್ವನುಂ, ಸರ್ವರುಂ, ಮತ್ತೆ ಸರ್ವಮುಂ
ಆಗಿ, ದಶಮುಖನೆಂಬ ಬಿರುದು ಶತಶತಮಾಗೆ,
ಕಾದಾಡುವೆನ್. . .ಮತ್ತಮೀ ಸೀತೆಯಂ ಬೇಡಿ
ಪಡೆವೆನಿಷ್ಟಾರ್ಥಮಂ. ಅತಿಕಾಯನಿಂದ್ರಜಿತುಗಳ್
ಮಡಿದರೇನ್? ಮೆಯ್ ಬಿಟ್ಟರಲ್ತೆ? ನೀನಳುಕದಿರ್,
ಅಳದಿರ್! ಅಂಜದಿರ್! ಸಿಡಿಲಾಳ್ ಸಹೋದರನ್,
ಎಂದರಿ, ಸಹೋದರಿ!. . . ಏಳ್, ತಂಗೆ, ನನಗೇಕೊ
ಬಾಯಾರುತಿದೆ, ಪಾನಮಂ ತಾ. .ಮೊಳಗುತಿದೆ ಕೇಳ್
ಭೇರೀ ರವಂ!..."
ತೊಯ್ದ ಕಣ್ನೊರಸಿಕೊಳ್ಳುತ್ತೆ
ಚಂದ್ರನಖಿ ತಂದು ಕೊಟ್ಟಳು ಶೀತಲೋದಕದಿ
ಮುಳುಗಿಟ್ಟ ಸೋಮರಸಮಂ. ಈಂಟುತ್ತದಂ
ಮಂಡೋದರೀ ಪ್ರಿಯಂ:
"ನಿನ್ನತ್ತಿಗೆಯನಿನಿತು
ನೋಡಿಕೊಳ್, ನಡೆ, ತಂಗೆ. ಜರ್ಜರಿತಳಾಗಿಹಳ್"

ನಿಡಿದು ಸುಯ್ದೆಂದನ್ "ಒಬ್ಬನೆ ಮಗನ ಸಾವ್‌ಗೇಳ್ದು!"
ಒಂದಿನಿತನಂತರಂ "ನಮ್ಮ ಸಂವಾದಮಂ
ನೀನವಳ್ಗೊರೆಯದಿರ್," ಎಂದಿನಿತನಂತರಂ
ಚಿಂತಿಸಾಳೋಚಿಸುತೆ ಮತ್ತೆ "ನೀನೊರೆದೊಡಂ
ಚಿಂತೆಯೇನ್? ಪೇಳದಿರೆನಲ್ ಪೇಳದಿರ್ಪೆಯಾ
ನೀನ್! ನೀಮೆ ಗೆಲ್ವಿರ್ ತುದಿಗೆ! ನಿಮ್ಮದೊಳಸಂಚು!
ತನ್ನವರ್ ಗೆಲ್ಲುವೊಡೆ ತನಗೆ ಸೋಲ್ವುದೆ ಜಯಂ!"

## ಸಂಚಿಕೆ ೬

# ಶ್ರೀರಾಮ ರಾವಣ ಚಿತ್‌ತಪಸ್‌ಶ್ರೀ

ದಂಡು ನೆರೆದುದು, ಲಂಕೆಯಾಡುಂಬೊಲದ ಬಯಲ
ಪಿರಿಯ ಬಿತ್ತರದೊಡಲ್ ಮೇರೆಯರಿಯದೆ ತುಂಬಿ
ಸಿಡಿವುದೆನೆ, ಹೇರಡವಿಯಂತೆ, ಸಾಗರದಂತೆ,
ಕಿಕ್ಕಿರಿದು, ಭೋರ್ಗರೆದು, ಮಿಂಚಿ, ರಾವಣ ಮೂಲ
ಬಲದಾಃ ಮಹೋದರಂ! ಸುಪ್ತಘ್ನಂ! ಮಕರಾಕ್ಷಂ!
ರಾಹುರೋಷಂ! ಸೂರ್ಯಶತ್ರು! ಶೋಣಿತಾಕ್ಷಂ!
ಬ್ರಹ್ಮಾಕ್ಷ ಮೇಣಗ್ನಿಕೇತು! ಪೆಸರಾಂತವರ್,
ಪೆಸರುಳಿಸಿಕೊಂಡವರ್, ದಶಶಿರ ಮಹಾ ಚಮೂ
ಸ್ವಾಮಿಗಳ್, ತಂತಮ್ಮ ದಳಸಮಸ್ತಂ ಬೆರಸಿ,
ಸಾವು ಬದುಕಿನ ಕೊನೆಯ ರಣಘೋರಕಣೆಯಾಗಿ
ತಳಿಸಿರ್ದರಗ್ರ ಪಂಕ್ತಿಯೊಳಲ್ಲಿ, ಅಲ್ಲಲ್ಲಿ,
ದಶಗ್ರೀವ ರಾಕ್ಷಸ ನರೇಂದ್ರನಾಗಮನದ
ವಿಲಂಬನಕೆ ಖುರಪುಟಧ್ವಾನ ಚಟುಲ ರಥಾಶ್ವ
ಹೇಷಾ ರವ ವ್ಯಗ್ರಮನರಾಗಿ.
ಅತ್ತಲಾ
ಪುಲಸ್ತ್ಯಜಂ, ಪುತ್ರವ್ಯಸನ ಕರ್ಶಿತಂ, ತನ್ನ
ಹೃದಯರಂಗದ ರಣದ ತುಮುಲಮಂ ರಣವಸ್ತ್ರ
ಭೂಷಣಗಳಿಂ ಮರೆಸಿದನ್; ಕಣ್ಮನಂಗೊಳಿಪವೊಲ್
ತೊಟ್ಟನುಟ್ಟನ್ ಜ್ವಲಿಸುವಗ್ನಿವರ್ಣಂಗಳಂ;
ನೂಂಕಿ ನೈರಾಶ್ಯ ಮೇಘಂಗಳಂ, ಧೈರ್ಯ ರವಿ
ರಶ್ಮಿ ಕೋಟಿಯ ಕರೆವ ಸೂರ್ಯಪ್ರತೀಕಾಶ
ಭೀಮದರ್ಶನ ವಿಗ್ರಹಂ, ವಾದ್ಯಘೋಷಗಳ್

ಬಳಸಿ ಸುತ್ತುಂ ಮೊಳಗುತೈತರಲ್, ಪೊರಮಟ್ಟು
ಬಂದು ಕಂಡನು ತನ್ನ ಮೂಲ ಬಲ ಸಾಗರದ
ಪಾರ ರಾಹಿತ್ಯಮಂ. ಭ್ರಾಂತಿಯೋ? ಮಾಯೆಯೋ?
ಏನೆರ್ದೆಯ ಕಿರ್ಚಂ ಕೆರಳ್ಚುವಾ ಬಲಮೊ ಪೇಳ್
ಬಹುಸಂಖ್ಯೆಯೊಳ್!—ಬೇರವೇರೆ ಓರೊರ್ವರನೆ
ಶಿಕ್ಷಿಸೆ ಭಯಂಗೊಳಿಪನಲ್ಲದಿರೆ ನರಕಂ
ಜವಂಗುಳಿವುದೇನಲ್ಲಿ ನರರಂ ನೆರೆಯಲೀಯೆ?—
ಬಗೆಯಿಂ ಜಗುಳ್ದುದು ಮನೋವ್ಯಥೆ; ಅಪೂರ್ವಮೆನೆ
ವೀರ ಸಹಜಾವೇಶಮೊಳ್ಕಿದುದು; ದಳ್ಳುರಿದುದು
ರಜೋ ಕ್ಷಾತ್ರತೇಜಂ ನಿಶಾಚರೇಶ್ವರಗೆ. ಮೇಣ್
ಮಸಗಿದುದು ಪಡೆಗಡಲುಮಂತೆ ನೃಪಚಂದ್ರನಂ
ಕಂಡು ತನ್ನೊಡೆಯನಂ. ಚೀರಿದುವು ನಿಸ್ಸಾಳ;
ಮೊಳಗಿದುವು ಭೇರಿ; ಬಹುಕೋಟಿಕಂಠ ನಿನಾದ
ಘೋರ ಘೋಷಣಭೀಷ್ಮವಾಯ್ತು ಲಂಕಾಧರಣಿ:
ಮೇರುಸಮ ಹೇಮವೇದಿಯ ತುಂಗ ಶಿಖರಕ್ಕೆ
ಕೋಡು ಮೂಡುವ ತೆರದೊಳದನೇರಿ ನಿಂದನ್ನೆ
ದಾನವೇಂದ್ರಂ. ನೋಡಿದನು ಕಣ್ಗೆ ಡೊಳ್ಳುಬ್ಬೆ;
ನೋಡಿದನು ಬಗೆ ಮೇರೆಮೀರೆ; ನೋಡಿದನುಸಿರ್
ದಿಗ್ದಿಗಂತಸ್ಥಾಯಿಯಾಗೆ: ಗಜರಾಜಿಗಳ್;
ವಾಜಿಗಳ್; ರಥಗಳ್; ಖರೋಷ್ಟ್ರಗಳ್; ಪತ್ತಿಗಳ್;
ಪ್ರಾಸ ಪಟ್ಟಿಸ ಪರಿಘ ಶರ ಖಡ್ಗ ಪರಶುಗಳ್;
ತೋಮರಂಗಳ್; ನಿಮಿರ್ದ್ದ ಗದೆಗಳ್; ಶೂಲಗಳ್;
ಭಿಂಡಿಪಾಲ ಶತಘ್ನಿಗಳ್; ಯಷ್ಟಿಗಳ್; ಚಕ್ರಗಳ್;
ವೈರಿ ಧೈರ್ಯಸ್ಖಲನ ಭೀಕರಂ ತಾನಾಗಿ
ಜೃಂಭಿಸಿದುದಾ ಮಹಾ ರಾಕ್ಷಸ ಚಮೂ ಸಮುದ್ರಂ.
ದಿಟ್ಟಿ ಹೋಹನ್ನೆಗಂ ಮತ್ತೆ ಸೋಲ್ವನ್ನೆಗಂ
ನೋಡಿ, ಪರಿತೋಷ ಮಿಗೆ, ಸಂಬೋಧಿಸಿದನಿಂತು
ತನ್ನನೀಕಾಂಭೋಧಿಯಂ:

"ಭಾರಮಿದೆ ಕಾರ್ಯಗುರು!
ದೀರ್ಘ ಭಾಷಣಕಿಂದು ತೆರಪಿಲ್ಲ, ಮನಮಿಲ್ಲ,
ನಿಮಗೆ ಮೇಣೆನಗೆ. ನಾಂ ಪೇಳ್ವುದೊಂದಿರ್ಪುದೀ

ನಿಮ್ಮ ಕೈಕೊಳ್ವಾಜಿ ಸಂಬಂಧಿ. ಕೇಳಿಮಾ
ವಜ್ರ ಕವಚೋಪಮ ಸುವಾರ್ತೆಯಂ. ಇಂದೆಮ್ಮ
ಲಂಕೆಯಿದೆ ಗಾಯಗೊಂಡೆಕ್ಕಲನವೋಲ್. ಇಲ್ಲಿ
ನೆರೆದಿರ್ಪುದೆಮ್ಮಾಯ್ದ ಮೂಲಬಲ ಸರ್ವಮುಂ.
ವಾನರಧ್ವಜನಿಗಿನ್ನಾವ ಗತಿ ಕಾಯ್ದಿಹುದೊ,
ಪುದುಗಿಸಿದೆ ಕಾಲಗರ್ಭಂ. ವರುಷ ಸಾಸಿರದ
ಘೋರ ತಪದಿಂ ಮೆಚ್ಚಿಸಿದೆನಾಂ ಸ್ವಯಂಭುವಂ.
ದಿವ್ಯ ವರಗಳನೆನಿತೊ ಪಡೆದಿಹೆನ್. ಶರಣೆನಗೆ
ಮಂತ್ರಶಕ್ತಿಗಳೆನಿತೊ. ದೇವದಾನವ ಗರುಡ
ಗಂಧರ್ವ ಯಕ್ಷ ಕಿನ್ನರ ಸುರಾಸುರರೆನಗೆ
ಮರಣ ಕಾರಣಮಾಗಲರಿಯರ್. ಕಪಿಧ್ವಜರ್
ವಾನರರೆನಗೆ ನರರ್ ಮಿಳ್ತುವಂ ತಂದಪರೆ?
ಅದಂತಿರ್ಕೆ. ಬೊಮ್ಮನಿತ್ತಾ ವರಂಗಳೊಳ್ ವರಂ
ನನಗಿರ್ಪುದೊಂದದ್ಭುತಂ ವರಂ. ಆ ವರದ
ಮಹಿಮೆಯಿಂದಾಂ ನಿಮ್ಮೊಳೋರೊರ್ವರೊಳುಮಿರ್ದು,
ಶತ್ರುವಿಗಸಂಖ್ಯ ರಾವಣರೆ ದಳಂಗೊಂಡವೋಲ್
ತೋರ್ದು, ತೋಳೊಂದೆ ನೂರಾಗೆ, ಸಾಸಿರಮಾಗೆ,
ನಿಮ್ಮ ದುರ್ದಮ ಬಲಕೆ ವರ ಮಹಚ್ಛಕ್ತಿಯಂ
ಬೆಂಬಲಗುಡುವೆನಿಂದು. ನಿಮ್ಮೊಳೋರೊರ್ವನುಂ,
ಕುದುರೆಯಾಳಕ್ಕೆ, ತೇರಾಳಕ್ಕೆ, ಕಾಲಾಳಕ್ಕೆ
ಮೇಣಾನೆಯಾಳಕ್ಕೆ, ನಿಮ್ಮೊಳೋರೊರ್ವನುಂ
ಕಾಳೆಗಂಗುಡುವನೀ ಲಂಕಾಧಿಪತಿಯಂತೆ
ಪೊಂಕಂಗಿಡದ ಬಿಂಕದಿಂ. ಗಂಧಮಾದನನೊ,
ಆಂಜನೇಯನೊ, ನಳನೊ, ಜಾಂಬವನೊ, ವಾಲಿಯ
ತನೂಭವನೊ, ಆರಾದರಕ್ಕೆ ತೃಣಕೆಣೆ ನಮ್ಮ
ಯಃಕಶ್ಚಿತರ್ಗಿಂದು! ಇಂದ್ರಜಿತು ಸಂದೊಡೇಂ?
ಅತಿಕಾಯನಳಿದೊಡೇಂ? ಕಲಿ ಕುಂಭಕರ್ಣನ
ಕಳೇಬರಂ ಕಳದಲಿ ಕಳಲ್ದೊಡೇಂ? ಧೂಮ್ರಾಕ್ಷ
ವಜ್ರದಂಷ್ಟ್ರರ್ ಬಿಳ್ದೊಡೇಂ? ಮಹಾಪಾರ್ಶ್ವಂ,
ಪ್ರಹಸ್ತಂ, ಚಮೂಪತಿಗಳಸು ತೆತ್ತೊಡೇಂ? ಲಂಕೆ
ತಾನಕ್ಷಯ ನಿಕೇತನಂ ಯುದ್ಧ ಸಿದ್ಧರಿಗೆ!

ರಾವಣರ್ ನೀವಿಂದು! ಇಂದು ಈ ಸೇನೆಯಲಿ
ಬಿಂದುವುಂ ಸಿಂಧು! ನಡೆಯಿಂ ರಣಕೆ! ನಡೆಯಿಂ
ದಶಗ್ರೀವ ವಿಜಯಲಕ್ಷ್ಮಿಯ ತೋಳ್ಗಳುಯ್ಯಲೆಗೆ!''
  ಏನೆಂಬೆನಾಕಾಶಕೇರ್ದ ಜಯಘೋಷಮಂ!
ಕರತಾಡನೋದ್ದಾಮ ರಾವಮಂ! ತರತರದ
ರಣವಾದ್ಯ ರುದ್ರ ಮಾಧುರ್ಯಮಂ! ಘೂರ್ಮಿಸಿತೊ
ರುಂದ್ರ ನಾದಾಬ್ಧಿ! ಘೀಂಕರಿಸಿದುವು ಹೇರಾನೆ;
ಕೆನೆದುವಶ್ವತತಿ; ಚೀತ್ಕರಿಸಿದುವು ರಥ ಚಕ್ರ
ಪಂಕ್ತಿ; ಧರೆ ಕಂಪಿಸಲ್, ಕೋಂಟೆವಾಗಿಲ್ಗಳಿಂ
ಪೊರಮಟ್ಟುದೈ ರಾವಣನ ಮೂಲಬಲವಾರ್ಧಿ,
ವಾನರೌರ್ವಾನಲನ ನಂದಿಸುವ ನಿಶ್ಚಯದ
ದೃಢಧೀರ ಕಟು ಪಟು ಗಮನದಿಂದೆ!
                    ಅತ್ತಲಾ
ತೆರೆ ತೆರೆ ತೆರಳ್ದುದದ್ಭುತ ಪೃತನೆ. ಪಿಂತಣ
ಪತಾಕಿನಿಯ ಪಂಕ್ತಿಪಂಕ್ತಿಯ ವೈಜಯಂತಿಗಳ್
ಮರೆಯಾದುವೆದ್ದ ಧೂಳಿಯ ಸಾಂದ್ರ ಯವನಿಕೆಯ
ಹಿಂದೆ. ಭಾವಿಸುತದಂ, ತನ್ನ ಬಹುರೂಪಗಳೆ
ಕಜ್ಜಮೊಂದಕೆ ಸಜ್ಜುಗೊಂಡಾ ವರೂಥಿನಿಯ
ವಿಭವಮಂ, ವೀರ್ಯಮಂ, ಶಕ್ತಿ ಬಲ ಧೈರ್ಯಮಂ,
ಮೂಡಿದುದು ಮುಖಕೆ ಮಂದಸ್ಮಿತಂ ದಶಮುಖಗೆ.
ಕಿಡುವ ಮುನ್ನಂ ಸೊಡರ್ಕುಡಿಯುಜ್ವಲಿಸುವಂತೆ
ತೆಕ್ಕನುಕ್ಕಿದುದೆರ್ದೆಗೆ ಮೈಥಿಲಿಯ ಮೆಯ್ಯಾಸೆ,
ಮರೆಸಿ ಮುನ್ನಿನ ಮನೋರಥದ ಪಥಪಥ್ಯಮಂ.
''ಮತ್ತೊಮ್ಮೆ ನೋಳ್ಪೆನಾಕೆಯ ಹೃದಯದಾಳಮಂ;
ಮತ್ತಂ ಪರೀಕ್ಷಿಸುವೆನಾಕೆಯ ಪತಿವ್ರತಾ
ಸತ್ವಮಂ.'' ಎಂಬ ನೆವಮಂ ಕಾರಣಂಗೆತ್ತು,
ಮಾಯೆಯಿಕ್ಕಿದ ಮೂಗುದಾರದ ನಿಶಾಚರಂ
ಸ್ವಾತಂತ್ರ್ಯ ವಿಭ್ರಮೆಯ ವಿಧಿತಂತ್ರ ಪಶುವಿನೊಲ್
ತಿರುಗಿದನಶೋಕವನಿಕಾ ಯಾಗಮಂಟಪದ
ಭೋಗಯೂಪದ ಬಳಿಯ ಶಾದ್ವಲ ಸದೃಶ ಸತೀ
ರೂಪ ದರ್ಶನಕೆ. ಪೋದುದೆ ತಡಂ ಸೀತಾ

ಕುಟೀರಮಿರ್ದ್ದೆಳ್ತರದ ತಾಣಕೆ, ಅದೇನಾಯ್ತೊ?
ತುಂಬಿದುದು ಶಮೆ ರಾಕ್ಷಸಾತ್ಮಮಂ. ಯುದ್ಧಮಂ
ಮರೆತ ಚೇತನಕೊದಗಿದುದು ಶುದ್ಧ ಬುದ್ಧಿಯ
ಮನಶ್ಶಾಂತಿ. ಕೇಳಿದುದು ಕಿವಿಗೆ, ಬಹುಕಾಲದಿಂ
ತಾನಾಲಿಸದ ಪಕ್ಷಿಯಿಂಚರಂ! ಕಂಡುದು
ಕಡಲ್‌ನೀಲಿ! ತನ್ನ ತಿಳಿಯಾಳದಿಂ, ಕದಡು ಬಗೆ
ತಿಳಿವಂತೆ, ಬಾನ್ ತೊಳೆದುದಾತ್ಮಮಂ! ಸಾಹಸಕೆ
ಬೇರೆ ದಾರಿಗಳಿರುವುದನು ತೋರುವೋಲಂತೆ
ಮೆರೆದುದು ದಿಗಂತ ವಿಶ್ರಾಂತ, ಗಿರಿ ಕಂದರ
ತರಂಗಿತ, ವನಶ್ರೇಣಿ! ನಿಡು ಪೊಳ್ತನಿಮಿಷಾರಿ
ತನ್ನ ಸಿರಿಯಂ ನಗುವ ಲೋಕ ಸೌಂದರ್ಯಮಂ
ನೋಡಿದನು ನಿರ್ನಿಮೇಷಂ. ಮತ್ತಮೆಳ್ಚರ್ತು,
ಸುಯ್ದು, ತನ್ನಂ ತಾನೆ ಪರಿಹಾಸಗೈವಂತೆ:
"ನಿಚ್ಚಮುಂ ಕಣ್ಗೆ ಸಮುದ್ರ ಸಾನ್ನಿಧ್ಯಮಿರೆ;
ನಿತ್ಯಂ ನಭೋ ಶುಭಾಶೀರ್ವಾದ ಹಸ್ತಮಿರೆ
ನೆತ್ತಿಯೊಳ್; ಸುತ್ತುಂ ವನಾದ್ರಿಗಳ್ ಸ್ನೇಹಮಂ
ಧೈರ್ಯಮಂ ನೀಡುತಿರೆ, ಧೃತಿಗಮೃತದೀಕ್ಷೆಯೋಲ್:
ರಾಮಸತಿ ತಾನಿರ್ಕೆ, ಸಾಮಾನ್ಯೆಯಾದೊಡಂ
ಪತಿತೆಯಪ್ಪಳೆ ಪೇಳ್ ಪತಿವ್ರತಾನಿಷ್ಠೆಯಿಂ,
ಜಾಣ್ಮರುಳೆ ಓ ಕೋಣಪ ಕಿರೀಟಿ?"

ಇಂತೆಂದು

ತನ್ನ ತಾನಣಕಿಸುವವೋಲಾಡಿ, ನಡೆದನಯ್
ಮಂಡೋದರೀ ಪ್ರಿಯಂ ಭೂಮಿಜಾತೆಯ ಭವ್ಯ
ಸನ್ನಿಧಿಗೆ. ದೇವಿಯಂ ಸೆರೆಯಿಟ್ಟ ಕೋಡುಗಲ್
ಗೆಂಟರಿರೆ ನಿಂದನಸುರಂ; ಬೆಚ್ಚಿದನ್; ನಟ್ಟ
ದಿಟ್ಟಿಯಿಂದಾ ಕಡೆಯೆ ನೋಡಿ, ಸನಿಹದೊಳಿರ್ದ
ಕಂಚುಕಿಗೆ ಕೈದೋರಿದನ್: "ಓಡು, ನಡೆ! ನೋಡಲ್ಲಿ!
ಅದೇನಗ್ನಿ? ಪರ್ಣಕುಟಿಗೇಂ ಪೊತ್ತಿಹುದೆ ಬೆಂಕೆ?
ಬೂದಿಯಾದಳೆ ಮೇದಿನಿಯ ಮಗಳ್? ಕೆಟ್ಟುದೆ
ಮಹತ್ಕಾರ್ಯಮೆನಗೆ? ಇವಳಿನ್ನೊರ್ವ ವೇದವತಿ
ತಾನಾದಳೇನ್, ತುತ್ತತುದಿಗೆ? ರಾವಣನಾಶೆ

ಮಣ್ಣಾಯ್ತೆ? ಇಂದುವರೆಗೆನ್ನ ಕೈಕೊಂಡೆಲ್ಲ
ಸಾಧನೆಗೆ ಶೂನ್ಯಮಾದುದೆ ಫಲಂ?—ನೋಳ್ಪೆಯೇನ್?
ಕಣ್ ಕುರುಡೆ ನಿನಗೆ? ಕಾಣದೆ ಆ ಮಹಾಜ್ವಾಲೆ?''
ಬೆಳ್ಪನೊಲ್ ನೋಡಿ ಸುತ್ತುಂ, ಕಾಣದೇನುಮಂ
ಕೈಮುಗಿದನಾಳ್: ''ಪ್ರಭೂ, ಪರ್ಣಕುಟಿಯಲ್ಲದೆಯೆ
ಕಾಣದೇನುಂ!'' ಮರಳಿ ಕಣ್‌ಕೀಲಿಸಾ ಕಡೆಗೆ
ಕೇಳ್ದನಸುರಂ: ''ಕಾಣಿಸದೆ ಬೆಂಕೆ?'' ಕಣ್ಬೆಸೆದು
ನೋಡಿ ಕಂಚುಕಿ ಪೇಳ್ದನಿನ್ನೊಮ್ಮೆ: ''ಕಾಣೆನಾಂ!''
ಸುಯ್ದನೆವೆಯಿಕ್ಕದೆಯೆ ನಿಂದು ಕಂಡನದೊಂದು
ತನಗೆ ಮಾತ್ರಮೆ ದಿಟದ ಕಣ್ಮಾಯೆಯಂ: ಬೆಮರ್
ಪನಿಕುಳ್ತುದಾನನದಿ. ಒಂದೊಂದನೊತ್ತರಿಸಿ
ಮೈದೋರಿದುವು ಸುಯ್ಲುಗಳ್. ಸುರ್ಕುಗೊಂಡುದು
ಮೊಗಂ ಬುದ್ಧಿಯೆ ವಿಕಾರಂಗೊಂಡವೊಲ್ ತೋರ್ದನಾ
ಕಂಚುಕಿಗೆ ಲಂಕಾನೃಪಂ. ''ಕಾಣಿಸದೆ ನಿನಗೆ?''
ಮತ್ತೊಮ್ಮೆ ಶಂಕೆಯಿಂ ಕೇಳ್ದ ಲಂಕೆಯ ದೊರೆಗೆ
ಕಿಂಕರನೊರೆದನಂಜಿ: ''ಕಾಣದೇನುಂ, ಪ್ರಭೂ,
ಶಾಂತಿಯಿಂದಿರ್ಪಾ ಕುಟೀರಂ ವಿನಾ. ಕ್ಷಮಿಸೆನ್ನ
ದೃಷ್ಟಿ ದೌರ್ಬಲ್ಯಮಂ.'' ನಕ್ಕನಾ ರಕ್ಕಸನ್.
ತನಗೆ ತಾನಾಡಿದನ್: ''ಆ ನಿನ್ನ ದುರ್ಬಲತೆ
ನನ್ನ ಕರುಬಿಗೆ ಕಾರಣಂ!''
ಪರ್ಣಶಾಲೆಯಂ
ಪೊತ್ತಿರ್ದುದೊಂದದ್ಭುತ ಚಿತಾಗ್ನಿ. ಕಂಡನಾ
ಕೆಂಡದುರಿ ನಡುವೆ ಕುಣಿದಿರ್ದ ರಣಚಂಡಿಯಂ!
ಮಡಿದ ಲಂಕಾ ವೀರ ಶತ ರುಂಡಮಾಲೆಯಂ
ತೊಟ್ಟಿರ್ದ್ದಳುಟ್ಟಿರ್ದ್ದಳಾ ಮುಂಡಂಗಳಂ ನೆಯ್ದು
ಕೈಗಯ್ದ ಕಟಿವಸ್ತ್ರಮಂ! ನೋಡುತಿರೆ ನೃಪಂ.
ಗುರುತಿಸಿದನವುಗಳಂ: ಕುಂಭಕರ್ಣನ ಶಿರದ
ಪಕ್ಕದೊಳೆ ಕಂಡು ರಕ್ತಾರ್ದ್ರ ಭೀಕರಮಾದ
ತನ್ನ ಪಂದಲೆಯಂ ದಶಾನನಂ ಹಮ್ಮೈಸಿ
ಕಣ್ಮುಚ್ಚಿದನ್!. . ತಂದೆನೇ ಸುಂದರಿಯ ರೂಪದೀ
ಸೀತಾ ಶ್ಮಶಾನಕಾಳಿಯನೆಂದು ತನ್ನೊಳಗೆ

ತಾಂ ನೊಂದು, ಮುರಿದು ತಿರುಗಿದನಸುರನರಮನೆಗೆ!
ತ್ರಿಜಟೆ ಕಂಡಳ್ ದೈತ್ಯನೈತಂದುದಂ, ಮೇಣ್ ಬಳಿಗೆ
ಬಾರದೆಯೆ ದೂರದಿಂದೆಯೆ ಪೆಡಂಬೋದುದಂ.
ಪೇಳ್ದಳವನಿಜೆಗೆ. ಗಂಭೀರ ಮುಖದರ್ಪದಿಂ
ಧ್ಯಾನಸ್ಥೆ ಸೀತೆ: "ಫಲಿಸಿತನಲಾ ಪ್ರಾರ್ಥನಂ.
ಬಾರನಿನ್ ಬಳಿಗವನ್ ಈ ಜನ್ಮದೊಳ್! ತ್ರಿಜಟೆ,
ಕಡಿದುದಾತನ ಸೂತ್ರಮಾಯೆ. ಪಟವಾಡಿಪಳ್
ಜೀವಗಳನಂಬೆ, ಆದ್ಯಾಶಕ್ತಿ. ಕಾಲವಶಿಯಿನ್
ರಾಕ್ಷಸನ ಬಾಳ್‌ಪಟಂ. ಮುಕ್ತಿ ಮಾಯೆಯೊಲ್
ಪೀಡಿಸಿ ಮುಮುಕ್ಷುಗಳನೆಳೆಯುವುದು ತನ್ನೆಡೆಗೆ,
ರಾಕ್ಷಸೋತ್ತಮ ಸಖೀ, ಸುಲಭಪಥದಿಂ ಮತ್ತೆ
ಶೀಘ್ರದಿಂ!" ಧ್ವನಿಶಕ್ತಿಗಚ್ಚರಿವಡುತೆ ತ್ರಿಜಟೆ
ಕೇಳಿದಳ್: "ನೀನಾರ್, ಮಹಾತಾಯಿ? ಹೆದರುತಿದೆ
ಬಗೆ, ನಿನ್ನ ಸಾನ್ನಿಧ್ಯ ಭೀಷ್ಮಪ್ರಭಾವದಿಂ!
ನೀನೆ ನೀಂ ಪೇಳ್ದ ಆದ್ಯಾಶಕ್ತಿ! ನಾಂ ಮೂರ್ಖೆ,
ಮಾತಾಯಿ. ನಿನಗಿದೊ ನಮಸ್ಕಾರ! ಸಾಸಿರ
ನಮಸ್ಕಾರ!"
ಅಡಿಗೆರಗಿದಾ ತ್ರಿಜಟೆಯಂ, ಮುಡಿಯ
ನೇವರಿಸಿ, ಹರಸಿದಳ್ ತಾಯಿ, ಸೀತಾದೇವಿ,
ಸಾಂತ್ವನ ವಚನ ಸುಧಾವೃಷ್ಟಿಯಂ ಸೂಸಿ:
"ಪೇಳ್,
ಅಸುರಸಖಿ, ನಿನಗೇತಕೀ ಭಾವ ಗದ್ಗದಂ?
ನಾಂ ಜನಕಸುತೆ; ಧರಣಿಜಾತೆ; ರಘುರಾಮ ಸತಿ!
ನನ್ನವಳ್ ನೀಂ. ನಿನಗೆ ತಲ್ಲಣಂ ತಗದಣಂ,
ಕೆಳದಿ. ನಿನಗೊಂದನೊರೆದಪೆನೆನಗೊದಗಿದೊಂದು
ನವ್ಯ ಸಾಕ್ಷಾತ್ಕಾರಮಂ. ಆವುದಾಗಲಿ ನೆಪಂ
ಫಲದಾಯಕಂ ತಪಂ. ನನಗೆ, ರಘುನಾಥಂಗೆ,
ಮೇಣ್ ರಾಕ್ಷಸೇಂದ್ರಂಗೆ ಮೂವರ್ಗಮವರವರ
ಕರ್ಮಾನುಸಾರಿ ಜನ್ಮೋದ್ದೇಶ ಸಾಧನೆಗೆ
ಮೇಣಾತ್ಮ ವಿಕಸನದ ಪರಿಣಾಮ ಸಿದ್ಧಿಗೆ
ಸಹಾಯಮಾದುದು ಮಂಥರೆಯ ಮೂಲದೀ ಬೃಹದ್

ದುರ್ಘಟನೆ. ಇನ್ನೆನಿತು ಜೀವರಿಗೆ ತಂತಮ್ಮ
ಕರ್ಮಕ್ಷಯಕೆ ಮತ್ತೆ ಧರ್ಮಾಭ್ಯುದಯಕಿದು
ನಿಮಿತ್ತಮಾದುದೊ ಪೇಳ್ವರಾರ್!''
''ನಾನುಮೊರ್ವಳಾ
ಜೀವರ್ಕಳೊಳ್: ನಾಂ ಕೃತಜ್ಞೆ ಲಂಕೇಶ್ವರಗೆ!
ನಿನ್ನ ಸೇವಾ ಭಾಗ್ಯಮೆನಗಾದುದಾತನಿಂ.
ನಾನೆಲ್ಲಿ ? ನೀನೆಲ್ಲಿ ? ಲಂಕಾ ಅಯೋಧ್ಯಾಂತರಂ!
ಲಭಿಸುತಿರ್ದುದೆ ನನಗೆ ನಿನ್ನ ದರ್ಶನಮಾ
ದಶಗ್ರೀವ ಸಾಹಸ ವಿನಾ?''
''ತಿಳಿವುದಂತ್ಯದೊಳ್,
ತ್ರಿಜಟೆ, ಆ ಪರಮ ಸತ್ಯಂ. ನನಗುಮಂದದು
ಅಗೋಚರಂ; ಇಂದಾತ್ಮಗೋಚರಂ. ನಾನಿಂದು
ಅಂದಿನವಳಲ್ಲ. ರಾಮಧ್ಯಾನ ಮಹಿಮೆಯ
ನಿರಂತರ ತಪಸ್ಯೆಯಿಂ ನನಗಲೌಕಿಕ ಸಿದ್ಧಿ
ತನಗೆ ತಾನಾಯ್ತು. ರಾಮನನರಿತೆನಾತ್ಮದಿಂ.
ತನ್ನ ನಿತ್ಯವಿಭೂತಿಯಿಂ ಪರಬ್ರಹ್ಮನೆಯೆ
ತಾನ್; ಸರ್ವಸೃಷ್ಟಿ ಮೇಣ್ ಲೀಲಾ ವಿಭೂತಿಯುಂ
ತಾನ್. ರಾಮಮಯಮೀ ಸಮಸ್ತ ಲೋಕಂ. ಸಖೀ,
ನಿನ್ನಂತೆ ನಾನುಮಾ ಮಯನ ಮಗಳಾಣ್ಮಂಗೆ
ಕೃತಜ್ಞೆ ದಲ್! ರಾವಣಂಗೊಳ್ಳಿತಕ್ಕುಂ, ಋತದ
ರೀತಿಯಿಂ!...''
ತೆಕ್ಕನಂತರ್ಮುಖತೆವೆತ್ತಳಾ
ದೇವಿ. ಮಾಣ್ದುದು ಮಾತು. ಬೆದರುಗಣ್ಣಾಗುತ್ತೆ
ನಿಟ್ಟಿಸಿದಳೇನನೊ ಸುದೂರವನಗಂಗೊಳ್ವವೋಲ್.
ಸೋದ್ವಿಗ್ನೆಯಾಗಿ ಪೇಳ್ದಳ್: ''ತ್ರಿಜಟೆ, ತಾ ಬೇಗ
ಪುಷ್ಪತೀರ್ಥಂಗಳಂ! ಪೂಜಿಸಲ್ ವೇಳ್ಕುಮೀ
ರಾಮಾಂಗುಳೀಯಮಮಂ. ಸ್ವಾಮಿ ಕೈಕೊಂಡಿಹನ್
ದುರ್ಧರ ಮಹತ್ಕಾರ್ಯಮಂ. ಸಿಲ್ಕಿದೆ ಕಪಿಧ್ವಜಿನಿ
ಕೀನಾಶ ದಂಷ್ಟ್ರೋಪಮದ ವಿಪದ್ ವಿಪಿನಾಗ್ನಿ
ಮಧ್ಯೆ. ಪ್ಲವಗಪತಿಗಳ್ ಪತಂಗೋಪಮಂ ಆ
ರಾವಣಾಗ್ನಿಗೆ ನುಗ್ಗಿ ಬೇಳುತಿರ್ಪರು ಸಮರ

ದೇವತೆಗೆ ತಮ್ಮಸುಗಳಂ. ಪೂಜೆ ತಾಂ ಶಕ್ತಿ.
ನಾಥಂಗೆ ನೆರೆಮಪ್ಪೆನಾತನಂ ಪೂಜಿಸಿ
ನಿವೇದಿಸುವೆನಾತ್ಮ ಬಲಮಂ!'' ತ್ರಿಜಟೆಗೇನೊಂದು
ತಾತ್ಪರ್ಯಮಾಗದಿರ್ದೊಡಮವಳ್ ಬೆಸಸಿದೊಲ್
ಪೂಜೆಗಣಿಮಾಡಿದಳ್ ಪೂ ನೀರ್ಗಳಂ:

ಓಡಿ

ಬೇಡಿದನಬುಜಭವನಂ ಶಚೀ ಜೀವಿತೇಶ್ವರಂ:
''ಓಂ ನಮೋ ಪ್ರಲಯ ಸರ್ಗ ಸ್ಥಿತಿಯ ಕಾರಣನೆ!
ಓಂ ನಮೋ ವ್ಯಕ್ತ ಜಗದವ್ಯಕ್ತ ಮೂರ್ತಿಯೆ,
ಜಗದ್ಗುರುವೆ, ಸರ್ವಲೋಕಪ್ರಭುವೆ, ವಿಭುವೆ, ಮೇಣ್
ಹರಿಹರಾತ್ಮಕನೆ! ನಿನಗರಿಯದಿರ್ದುದುಮುಂಟೆ?
ಕೇಳಾದೊಡಂ ಪೇಳ್ವೆನೆಮ್ಮ ಲೋಕವ್ಯಥೆಯ
ಕಥೆಯನೊಂದಂ. ಗುರುವೆ, ನೀನಿತ್ತ ವರದಿಂದೆ
ಕಪಿಸೇನೆ ಬಯಲಾಯ್ತು! ವಿಘ್ನಮೊದಗಿದೆ ರಾಮ
ಲೀಲಾವತಾರ ಕಾರ್ಯಕೆ. ರಾವಣಂ ತನ್ನ
ಮೂಲ ಬಲದೊಳ್ ನಿನ್ನ ಕೊಟ್ಟ ಬಹುರೂಪಿಣೀ
ವಿದ್ಯೆಯಿಂ ವ್ಯಾಪಿಸಿ, ಕುಳುಂಪೆಯಂ ಕಾಡಾನೆ
ಕೆಸರೇಳೆ ಕದಡುವಂದದಿ, ರುಧಿರ ಪಂಕದೊಳ್
ನರ್ತಿಸಿರ್ಪಂ ಮೃತ್ಯು ನಾಟ್ಯಮಂ. ಸಾಮಾನ್ಯ
ಕಪಿಯೋಧರಿರ್ಕೆ, ವಾನರ ಮಹಾನಾಯಕರೆ
ಕೆಡೆದರವನಿಗೆ. ಗತಿಸಿದನು ಗಂಧಮಾದನಂ.
ಕಲಿ ಗವಯನುರುಳಿದನ್. ದಿಗ್ಗಜೋಪಮ ಗಜಂ
ಮರಣದಿಂ ಸರಿದನಯ್ ತುಡುಕಿ ಕೈಯಲಿ ತನ್ನ
ಹರಣಮಂ. ಬಳಲಿ ಬಿಳ್ದನು ನಳಂ. ಮಿಡುಕುತಿದೆ
ಕೊರಲೊಳಸು ಜಾಂಬವಗೆ. ಗದಗದಿಸುತಂಗದಂ
ಹೆದರಲೊಲ್ಲದೆ ಹೆದರುತೋಡಿದನ್. ಅವರಿವರ
ಮಾತೇಕೆ? ಒಂದನಾಡಿದರೆಲ್ಲವೊರೆದಂತೆ:
ಪರಮೇಷ್ಠಿ, ಕೇಳ್, ಹಿಂಜರಿದನ್ನೆಸೆ, ರಾಮಂಗೆ
ಮೊರೆಯಿಡಲ್, ಅಂಜರಿಯದಾಂಜನೇಯಂ, ಆ
ಪ್ರಭಂಜನ ಭವಂ, ಮೇಣ್ ಚಿರಂಜೀವಿ!''

ಇಂತಾ

ದಿವೌಕಸರ ದೇವಂ ಹಿರಣ್ಯಗರ್ಭಂಗೊರೆಯೆ,
ಕೇಳ್ದಾ ಪಿತಾಮಹಂ ಶರಧಿ ಗಂಭೀರಮೆನೆ
ನುಡಿದನಂಬುದ ವಾಣಿಯಿಂ. ತಗುಳ್ದಪುದೆ ಪೇಳ್
ನಾಟಕದ ಪಾತ್ರದುದ್ವೇಗಮಾ ರಸಮಾತ್ರಮಂ
ಆಸ್ವಾದಿಸುವ ಸೂತ್ರಧರ ಕವಿಗೆ?
"ಸುರಮುಖ್ಯ,"
ತನ್ನಿಚ್ಛೆಯಂ ನಿರೂಪಿಸಿದನಾ ಋತಚಿತ್
ಸ್ವರೂಪಿ "ನಡೆವುದನಿತುಂ ನಡೆಯಬೇಕಾದುದೆ
ವಲಂ. ತಿಳಿಯದೆಯೆ ಕೊಟ್ಟುದಲ್ತಾ ವರಂ; ತಪ್ಪಿ
ಕೊಟ್ಟುದುಂ ತಾನಲ್ತು. ಪರಮ ಪ್ರಯೋಜನಂ
ಪೂರ್ಣಚಿದ್ಗೋಚರಂ. ನನ್ನಿಚ್ಛೆಯೊಪ್ಪದೆ
ತೃಣಂ ಚಲಿಸದಾಂ ತಂತ್ರಮಖಿಲ ಲೋಕಕೆ, ತಂತ್ರಿ,
ಮೇಣ್ ಸರ್ವತಂತ್ರಸ್ವತಂತ್ರಿ. ಪರಮೇಚ್ಛೆ ನಾಂ;
ಮೇಣಖಿಳ ಜೀವರಾಶಿಗಳಿಚ್ಛೆಗಾನಿಚ್ಛೆ,
ರಾವಣೇಚ್ಛೆಗಮಂತೆ ರಾಮೇಚ್ಛೆಗುಂ! ತಿಳಿ,
ಸಹಸ್ರಾಕ್ಷ, ಲೀಲಾ ರಹಸ್ಯಮಂ: ರಾವಣಗೆ
ರಾವಣತ್ವಂ ತವಿಯದೆಯೆ ಸಮನಿಪುದದೆಂತು
ರಾಮತತ್ತ್ವಂ? ತನ್ನ ಲೀಲಾವತಾರಮಂ
ಅವಿದ್ಯೆಯಿಂದೆಳ್ಚರಿಸಲೋಸುಗಂ, ಕೇಳ್ ಜಿಷ್ಣು,
ತನ್ನ ವಿದ್ಯಾಶಕ್ತಿ ಯೋಗಮಾಯೆಗೆ ಬೆಸಸಿ
ರಾಮನೆಡೆಗಾಗಳೆ ಕಳುಹಿದನ್ ಮಹಾವಿಷ್ಣು.
ನಡೆ, ನೋಡು ಮುಂದಪ್ಪುದಂ; ತಳ್ವಲೀಯೆಡೆಯೆ
ಚ್ಯುತನಪ್ಪೆ ನೀನಾ ಅಚ್ಯುತ ಮಹದ್‌ದೃಶ್ಯದಿಂ!"
ಚಂಡಕರ ಕಿರಣಮಂ ಪ್ರತಿಬಿಂಬಿಸುವ ತನ್ನ
ರುಂದ್ರ ಕೋದಂಡಮಂ ನೆಮ್ಮಿ, ದೋರ್ದಂಡ ಕಲಿ,
ಅಪ್ರಾಕೃತಮೆನಲ್ಕಪೂರ್ವ ಗಾತ್ರಂಬೆತ್ತ
ನೀಲ ಭೀಮೋನ್ನತಂ, ಕುಟಿಲ ಕೃಷ್ಣಶ್ಮಶ್ರು
ಕಠಿನಾನನಂ ಮಲೆಯ ಹೆಗಲೇರ್ದನಂದದಿಂ
ನಿಂದನೊಂದೆಳ್ತರದಿ ರಾಮಚಂದ್ರಂ, ಲಂಕೆ
ಕಿಷ್ಕಿಂಧೆಗಳ ವಿಪುಲ ಸೇನಾ ಮಹಾದ್ರಿಗಳ್
ಸಾಗರ ಭಯಂಕರಂ ತಾಗುವದ್ಭುತ ಕಲಾ

ರಣರಸದ ಸಂಗ್ರಾಮ ಸಂವೀಕ್ಷಣಾಸಕ್ತಿ
ತಾಂ ದಿವ್ಯಭವ್ಯ ವಿಗ್ರಹವಾದವೋಲಂತೆ!
ಭಗ್ನ ಗದೆವೆರಸಿ, ಛಿದ್ರಿತ ತನುತ್ರಂ ವೆರಸಿ
ವಜ್ರ ತನುವುಂ ಜಜ್ಜರಿತವಾಗಲುದ್ವಿಗ್ನ
ಚಿತ್ತದಿಂ ಯುದ್ಧಧರೆಯಂ ತ್ಯಜಿಸಿ ಬಂದಾ
ಮರುತ್ಸುತಂ, ಪುಡುಕಿ ಕಾಣದೆಯೆ ಸುಗ್ರೀವನಂ,
ಪುಡುಕಿ ಕಾಣದೆ ರಾಜನಂಗರಕ್ಷಕ ದಳಮುಮಂ
ಪುಡುಕಿ ಕಂಡನು ರಾಮಭದ್ರನಂ, ದೂರದೊಳ್
ನಿಂದುಂ, ತಟಸ್ಥನೊಲ್ ತೋರ್ದುಂ, ರಣಪ್ರಳಯ
ಕರ್ಮದೊಳ್ ಪೂರ್ಣದೀಕ್ಷೆಯನಾಂತನೋಲಿರ್ದ
ರಣರುದ್ರನಂ. ನಿರ್ನಿಮಿಷ ಪಕ್ಷ್ಮನೇತ್ರನಂ,
ಸು ಮಹತ್ ಕ್ರಿಯಾವೇಗ ನಿಷ್ಪಂದ ಗಾತ್ರನಂ,
ಚಿತ್‌ತಪಸ್ ಸೂಕ್ಷ್ಮಕರ್ಮದ ಯೋಗ ಲಕ್ಷ್ಮದ
ವಿರಾಡ್ ವರ್ಷ್ಮನಂ ಕಂಡನಾ ಜಗತ್ ಪ್ರಾಣಜಂ
ಸ್ವಯಂ ಯೋಗಿ! ತನ್ನಸ್ಥಿರತೆಗೆ ತಾಂ ನಾಣ್ಚಿದನ್,
ಸ್ಥಿರಾತ್ಮಜಾ ವಲ್ಲಭ ಸ್ಥೈರ್ಯಮಂ ಕಂಡು.
ಸಾನಿಧ್ಯ ಮಾತ್ರದಿಂ ಪರಿದುದುಬ್ಬೆಗಮೆರ್ದೆಗೆ
ಮೂಡಿದುದು ಧೀರಪ್ರಶಾಂತಿ. ಪಿಂತೇಗಳುಂ
ತಾನರಿಯದಿರ್ದೊಂದು ಭಕ್ತಿಭಾವಂ ತುಳುಕಿ,
ತನ್ನಿಚ್ಛೆಗಿಂ ಶತಾಧಿಕ ಬಲದ ವಿರಾಟ್‌ಕ್ರತು
ಬಲಾತ್ಕರಿಸಿತೆನೆ ತನ್ನೊಳಾಶೆಯೋಲುದ್ಭವಿಸಿ,
ದಿಂಡುರುಳಿದನು ರಾಮ ಪದತಲಕೆ! ಅನ್ಯರಾರ್
ಕಾಣ್ಬರಾ ಆಂಜನೇಯಂ ಕಂಡುದಂ? ಕಂಡಾ
ತುರೀಯಮಂ ಪೇಳಲಾತನುಮೇಂ ಸಮರ್ಥನೆ
ಮನೋತೀತಮಂ? ಅನುಭವಾದ್ಭುತಕೆ ಗದ್ಗದಿಸಿ:
"ಇದೇನಿದೇನ್, ದಾಶರಥಿ? ನೀನೆನ್ನನಿನ್ನೆಗಂ
ವಂಚಿಸಿದೆಯೇಕೆ? ನೀನಾರೆಂಬ ನನ್ನಿಯಂ
ಮರೆಮಾಡಿ, ನರನವೋಲತ್ತು, ಗೋಳಾಡಿ ಮೇಣ್
ಬೇಡಿ, ನಾಟಕವಾಡಿದಯ್. ಸರ್ವ ಶಕ್ತನುಂ
ಸಕಲ ವೇತ್ತನುಮಾಗಿ ನಮ್ಮಭ್ಯುದಯಕೆಮ್ಮ
ಬಲದ ಭಿಕ್ಷೆಯ ಬೇಡಿದಯ್! ವೀತ ವಿಘ್ನಂ

ಮಹಾವಿಘ್ನಗಳನೊಡ್ಡಿಕೊಂಡಯ್, ಪ್ರಚೋದಿಸಲ್
ಬದ್ಧಾತ್ಮರೊಳ್ ಭಗ್ನಾವರಣಚಿದ್ಯೋಗಮಂ!''
    ಜ್ಞೇಯಮಲ್ಲದ ನಿತ್ಯದಿಂ ಲೀಲೆಗಿಳಿವಂತೆ
ದುರ್‌ಜ್ಞೇಯನೊಯ್ಯನಂತರ್ಮುಖತೆಯಿಂ ಬಹಿರ್
ಮುಖಿಯಾಗಿ, ತನಗೆರಗಿದಂಜನೆಯ ಕಂದಂಗೆ:
''ಏಳ್, ಮಹಾವೀರ, ನೀನಲ್ಲದನ್ಯರ್ಗಿದು
ಅಗೋಚರಂ. ನಿನಗೊರ್ವನಿಗೆ ಮಾತ್ರಮಲ್ಲಯ್,
ಪ್ರಸುಪ್ತಮಾಗಿರ್ದುದಿನ್ನೆಗಮೆನಗುಮೀ ನನ್ನ
ದಿವ್ಯ ಗುಹ್ಯ ಸ್ವರೂಪಂ! ನಿನ್ನವೋಲಾನುಂ
ಸುವಿಸ್ಮಿತನೆ ದಲ್! ಸಿದ್ಧಿ ಕಾಲಾನುವಶಿ ಕಣಾ
ಲೀಲಾ ಜಗದೊಳದಾರ್ಗಾದೊಡಂ. ನನಗಿದೆ
ತಪಸ್ಯೆಯಾದುದು. ಮಂಥರೆಯೊ? ರಾವಣನೊ? ಬರಿ
ನಿಮಿತ್ತಮಾತ್ರರ್! ನನಗವರ್ ಮೇಣವರ್ಗೆ ನಾಂ!
ಈ ಆಗುತಿಹ ಸೋಲ್ಗೆ ಗದಗದಿಸದಿರ್; ಕೊಲೆಗೆ
ಕರಗದಿರ್. ನಾಣ್ಚದಿರ್ ನಿನಗಾದ ಭಂಗಕ್ಕೆ,
ಮಾನನಿಧಿ. ಇಂದು ನಿನಗೀ ಭಂಗವಾಗದಿರೆ,
ಅತ್ಯಂತ ಅಂತರಾತ್ಮನ ಅಹಂ ಮುರಿಯದಿರೆ,
ನಿನಗಾಗುತಿರ್ದುದೇನೀ ಮಹದ್ದರ್ಶನಂ?
ನೆನೆ ಇದನ್, ಮರೆ ಅದನ್! ಅಧಿಕಾರಿ ನೀನದಕೆ
ವಿಧಿ ತಂದುದಾ ನೆವದೊಳೀಯೆಡೆಗೆ ನಿನ್ನೊರ್ವನಂ.
ನರಚೇತನಕ್ಕೆ ಮೇಣ್ ನಾರಾಯಣತ್ವಕ್ಕೆ, ಕೇಳ್,
ಚಿತ್‌ಸೇತುವುಂ ಪ್ರಾಣಪ್ರಣಾಲಮುಂ ನೀನಲ್ತೆ
ಪಾರಿಣಾಮಕ ನಾಮರೂಪನಿಸರ್ಗ ಸಹಯೋಗಿ?
ಮತ್ತಮಾ ನಿಮಿತ್ತಮೆ ವಿರಾಟ್‌ಚಿರ ಚಿರಂಜೀವಿ!—
ಆರಿಲ್ಲಮೀ ಎಡೆಯೊಳನಿಬರುಂ ಪೋದರಾ
ಸಂಗರಕೆ! ಅನಧಿಕಾರಿಗೆ ಇದಂ ಪೇಳದಿರ್.
ಪೇಳ್ದೊಡಮವಂಗುದಿಸದಯ್ ಶ್ರದ್ಧೆ. ನೀನೆನ್ನ
ಅಂತರಂಗದ ಸಖಂ. ನೋಡುತಿರು ಲೀಲೆಯಂ
ವಿಜ್ಞಾತಮವಿಜಾನತಾಮೆಂಬುವುಪನಿಷದ್
ವಿಜ್ಞಾನಿಯೋಲ್!
            ''ರಾವಣನಿಂದು ತನಗಿರ್ದೊಂದು

ಬ್ರಹ್ಮವರ ವೀರ್ಯದಿಂ ಮೂಲ ಬಲಮಂ ನೆರಪಿ
ಕಳುಹಿದನ್. ತಾನೆ, ಬಹುರೂಪಿ, ಸರ್ವರೊಳಿರ್ದು
ಕರ್ಮವಶವಾದೆಮ್ಮ ವಾನರ ಧ್ವಜಿನಿಯಂ
ತೊತ್ತಳದುಳಿಯುತಿರ್ಪನಂತಕನವೋಲ್. ಅದನ್
ತಡೆಯಲನ್ಯರ್ಗರಿದು, ಪವಮಾನ ತನಯ, ಕೇಳ್,
ನಿನಗಾದೊಡಂ! ಇದು ರಹಸ್ಯಮಾಲಿಸುಃ ನಾನೆ
ಆ ರಾವಣನ ಮೂಲಬಲ ಶಕ್ತಿ! ನನ್ನಾಅಸತ್
ಶಕ್ತಿಯಂ ಗೆಲಲರಿದು ನನಗಲ್ಲದಿತರರಿಗೆ.
ಕಾಣು, ಬಾ, ಚಿತ್ತಪಸ್ ಶಕ್ತಿಯ ಅಲೌಕಿಕ
ವಿಧಾನಮಂ. ನಿನಗುಮನುಭವಮಿರ್ಪುದದರಿಂದೆ
ಆ ಉದ್ಯಮದೊಳೆನಗೆ ಸಹೋದ್ಯೋಗಿಯಾಗು, ಬಾ!
ನಾನೆ ಅವನಲ್ಲದಿರೆ ಆ ದಶಗ್ರೀವಂಗದೇನ್
ಸೀತೆಯನ್ನೊಲಿವುದುಂ ಮೇಣವಳನುಯ್ವುದುಂ,
ಪೇಳ್, ಮೊರ್ಗ್ಗೆ?''
ಇಂತೆನುತ್ತೊಂದೆರಳ್ ಪಜ್ಜೆಯಂ
ಮುಂತಿಟ್ಟು ಬೆಸಸಿದನು ಜಳಧರಧ್ವಾನದಿಂ
ಪ್ರಕೃತಿಗಾ ಪುರುಷೋತ್ತಮಂ. ಯೋಗಮಾಯೆಗೇಂ
ಪ್ರತಿಭಾನ ದಾರಿದ್ರ್ಯಮೇನಾಜ್ಞೆಯೊಂದಾಗಲ್
ಋತಪ್ರಭುವಿನಾಃ ಕಂಡನಾಂಜನೇಯಂ ಸಕಲ
ಸಂಗ್ರಾಮಮಂ, ಏಕವೀಕ್ಷಣದಿ! ಕಂಡುದೊರ್ಮ್ಮೊದಲೆ
ರಣಸಮಷ್ಟಿಯುಮಂತೆಸೂಕ್ಷ್ಮವಿವರವ್ಯಷ್ಟಿಯುಂ.
ತಾಂ ಬೇರೆಯಾಗಿರ್ದುಮೋರೊರ್ವರೊಳ್ ಸೇರ್ದು
ದೃಷ್ಟಿಸಿದನಖಿಲಮಂ, ವ್ಯಕ್ತಿತ್ವಮಂ ಮೀರ್ದು,
ಸಾರ್ದು ಸರ್ವತ್ವಮಂ.
ಪ್ಲವಗ ಲಾಂಛನ ವೀರ
ದಧಿಮುಖನ ಧೀರ ದಳದಲಿ ರಾವಣನ ಮೂಲ
ಬಲಕಿದಿರ್ ಕಾಳೆಗಂಗೊಟ್ಟು ಕೆಡೆದುದು ಮಂದಿ
ಕಡಿದಡವಿಯೋಲ್. ಮಿತ್ರರಾ ವಹ್ನಿರಂಹರುಂ
ಸಾಮಾನ್ಯ ಸೈನಿಕರಸಾಮಾನ್ಯ ತೇಜದಿಂ
ಕಾದಿದರ್ಃ ನುಗ್ಗಿ ಬಂದಶ್ವಮಂ ಹೊಡೆ ಬಿರಿಯೆ
ಬಡಿದು ಕೊಂದರು. ಹಸ್ತಿ ಮೇಲ್ವಾಯೆ ಗುಂಡಿಟ್ಟು

ಜರ್ಜಿದರದರ ಮಂಡೆಯಂ. ರಥಂ ಮುಂಬರಿಯೆ
ಮುರಿದರು ರಥಾಂಗಮಂ ಬಲ್ಗದಾ ಮುಷ್ಟಿಯಿಂ.
ಬಿಲ್ಗೆ ಬಿಲ್ ಕೋಯೆ, ಖಡ್ಗಕೆ ಖಡ್ಗಮಿರಿಯೆ, ಮೇಣ್
ಪಗೆಯ ನೆತ್ತರ್ ತೊರೆಗಳವರ ನೆತ್ತರ್‌ವೊಳಗೆ
ಸಂಗಮಿಸಲುಪನದಿಗಳೋಲ್, ನೆಲದಿ ಮೇಣ್ ನಭದಿ.
ವಿವಿಧಾಸ್ತ್ರ ಶಸ್ತ್ರ ವಿದ್ಯಾ ಕದನ ಕೋವಿದರ್
ತೊರೆದು ಹರಣದ ಹಂಗನೆಂದಿಗಿಂ ಮಿಗಿಲೆನಲ್
ಇಂದು ಹೋರಿದರಾದರೇನೇಕಿಂತು ತಮ್ಮವರ
ಕಯ್ ಸೋಲುತಿದೆ? ವಹ್ನಿ ಕೇಳಿದನು ತನ್ನೆಡೆಯೆ,
ಸೆಣಸಿದಾಳಂ ಕರುಳ್ ಚೆಲ್ಲೆ ಕತ್ತಿಯಿನೊತ್ತಿ
ಕೊಂದು, ನಿಂದಿರ್ದ ಕುಳ್ಳೊಡಲನಂ ರಂಹನಂ.
'ಸೋಲೊಮ್ಮೆ ಗೆಲುವೊಮ್ಮೆ, ಗೆಲ್ವೆಣ್ಣೆಗದೆ ಹೆಮ್ಮೆ!'
ರಂಹನೆನುತಿರೆ, ಮತ್ತಮಿಮ್ಮಡಿಯ ರೋಷದಿಂ
ಬಾನ್‌ಬಿರಿವ ಘೋಷದಿಂ ನುಗ್ಗಿದುದಸುರ ಸೇನೆ.
ಶಸ್ತ್ರಾಸ್ತ್ರ ಮೃತ್ಯು ನರ್ತನವನೇನೆಂಬೆನಾ
ವಹ್ನಿ ರಂಹರ್ಗೆ ಕಣ್ ಕಳ್ತಲಿಸಿದುದು; ಬಲಂ
ಬತ್ತಿದುದು; ಬತ್ತಳಿಕೆ ಬರಿದಾಯ್ತು; ಮುರಿದುದೈ
ಕತ್ತಿ; ಚಿತ್ತದ ದೃಢತೆ ಹಿಂಗಿತು; ವಿಕಂಪಿಸಿತು
ಜಂಘೆ; ತಡೆ ತಡೆದೊಡಂ, ತಡೆಗಡಿದು ತಡೆಗಳಂ,
ತಡೆಯದೆಯೆ ತಳ್ಳಿದುದು, ನೂಂಕಿದುದು, ಮೇಲ್ವಾಯ್ದು
ಮುಂದೊತ್ತಿದುದು ದೈತ್ಯ ಸೇನಾಬ್ಧಿ. ಕಂಡನು ವಹ್ನಿ
ಸರಿಸರಿದು ಬೊಬ್ಬೆಯಬ್ಬರಿಸೋಡುತಿಹ ಮಿತ್ರ
ದಳದಳಗಳಂ! ನಿಲ್ಲಲೆಳಸಿ, ನಿಲಲಾರದೆಯೆ,
ಹಿಂದು ಹಿಂದಕೆ ಸರಿದು ಕೂಗಿದನು ರಂಹನಂ
ಪ್ರಾಣಮಿತ್ರಕ್ಷೇಮ ಕಾತರಂ. ಜಗುಳ್ವಚಲಮಂ
ಹಿನ್ನೂಂಕಲೆಳಸುವ ವನವರಾಹನೋಲಂತೆ
ಇಟ್ಟ ಹಜ್ಜೆಯ ಕಿತ್ತು ಹಿಮ್ಮೆಟ್ಟಲೊಲ್ಲದೆಯೆ
ಸಿಂಹಹೃದಯಂ ರಂಹನಿರೆ, ದನುಜದಾವಾಗ್ನಿ
ಸುತ್ತಿ ಮುತ್ತಿದುದವಂ ಕೆಡೆದನವನಿಗೆ ವಹ್ನಿ
ನೋಡುತಿರೆ. ಏರ್ವಡೆದುರುಳ್ದ ಕೆಳೆಯನನೆತ್ತಿ
ರಕ್ಷಿಸುವೆನೆಂದು ಮುನ್ನುಗ್ಗಿದನ್. ಕುಬ್ಜನಂ

ಮೇಲೆತ್ತಿದನ್ ದೀರ್ಘದೇಹಿ. ಕೌಂಕುಳಲಿರುಕಿ
ಪಿಂತಿರುಗುತೋಡುತಿರ್ದಾತನಂ ಬೆಂಬತ್ತಿ
ಬರುತಿರ್ದರಾ ಭೀಮ ದಾನವರೆತ್ತಿ ತೋಳ್ಗಳಂ,
ಮೊಲವನಟ್ಟುವ ಸೀಳುನಾಯಿಗಳವೋಲ್.
ತನ್ನ
ಗೆಳೆಯನ ದೆಸೆಗೆ ಹೆದರಿ ಹಿಂಜರಿಯುತಿರ್ದನಂ,
ಕೆದರಿ ಕೆಟ್ಟೋಡುತಿರ್ದಿತರರಂ ಸೇರ್ದನಂ,
ವಹ್ನಿಯಂ ಗುರಿಗೆಯ್ದುದಾಂಜನೇಯನ ಕಣ್;
ಮನಂ ಮನವನರಿತುದುಃ ರಘೂದ್ವಹಂ ಬೆಸಸಿದುದೆ
ನೆವಮಾಯ್ತೆನಲ್: "ವಹ್ನಿ, ಬಿಸುಡೆನ್ನ ದೇಹಮಂ.
ಇಂದೊ ನಾಳೆಯೊ ಸಾವೆನಾಂ. ಓಡಿ ಬರ್ದುಕುವುದೆ?
ಸುಡಲಿ ಆ ಬಾಳ್ಕೆಯಂ. ಬಿಸುಡು, ಬಿಸುಡೆನ್ನೊಡಲ
ಭಾರಮಂ. ತಾರದಿರ್ ಸ್ವಾಮಿ ಕಾರ್ಯಕೆ ವಿಘ್ನಮಂ.
ಕೊಳೆತೊಡೇಂ ನನ್ನೊಡಲ್? ರಾಮ ಕಾರ್ಯಂ ಗೆಲ್ಗೆ!
ಅಂದು ನಾಮಿರ್ವರುಂ ಕಡಲ ತೀರದೊಳವನ
ಕಂಡು ಸಂಭಾಷಿಸಿದೆವದೆ ನಮಗೆ ಸಾರ್ಥಕಂ
ಈ ಜನ್ಮ ಸಫಲತೆಗೆ! ತೊರೆ ಈ ಕಳೇಬರದ
ಭಾರಮಂ. ಕೈದುಗೊಳ್! ತಿರುಗು! ತಿವಿ! ಕೂಗಿ ಕರೆ
ಓಡುವವರಂ ... ವಹ್ನಿ, ಇದೊ ನನ್ನದುಂಗುರಂ.
ನೀಂ ಬರ್ದುಕಿ ಪಿಂತಿರುಗಿದರೆ. ."
ತೆಕ್ಕನೆಯೆ ವಹ್ನಿ
ಮಿತ್ರನಂ ಬಿಗಿದಪ್ಪಿದನ್; ನೆಲಕ್ಕೊಯ್ಯನೆಯೆ
ಇಳುಹಿದನ್; ಕೊನೆಯ ನೋಟದ ಕಾಣ್ಕೆಯಂ ಸಲಿಸಿ,
ಕೈದುಗೊಂಡನ್; ತಿರುಗಿದನ್; ಕರೆದನಾರ್ದನ್
ರಣಧ್ವನಿಗಳಂ! ಮತ್ತೆ ಕಂಡನಿಲ್ಲನಿಲಜಂ
ವಹ್ನಿಯಂಃ ವಹ್ನಿಗೆ ಬದಲ್ ಗೋಪುರೋನ್ನತಂ
ನಿಂದುದು ವಿಯದ್‌ವಿಗ್ರಹಂ ರಾಮಚಂದ್ರಮನಾ!
ಕಂಡನಾ ಪಾಂಗೆಯೆ ಕಪಿಧ್ವಜಿನಿಯನಿತುಮಂ,
ವಾನರ ವಪುತ್ವಮಂ ತೊರೆದು ರಾಮಾಕೃತಿಗೆ
ನೆಗೆದುದಂ! ನೆಗೆದುದಂತೆಯೆ ರಾವಣಾಕೃತಿಗೆ
ರಾಕ್ಷಸ ಚಮೂ! ಕೋಟಿ ಕೋಟಿ ರಾವಣರಿದಿರ್

ಕೋಟಿ ಕೋಟಿಯೆ ರಾಮರಿದಿರಾದುದಂ ನೋಡಿ
ಧುಮುಕಿದುದು ಹನುಮ ತನುವಿನ ಧಮನಿಧಮನಿಯಲಿ
ರೋಮ ರೋಮ ರಸಾಸ್ವಾದನಾ ವಿದ್ಯುತ್ತಪೋ
ನಿರ್ಝರಿಣಿ!
            ಹಿಂಜರಿಯುತಿರ್ದ ಪಡೆ ಬಾನ್‌ಬಿರಿಯೆ,
ಗಿರಿ ಜರಿಯೆ, ಸುರಗಣಂ ದೂರದೂರಕೆ ಹಿಂಜಿ
ಹರಿಯೆ, ಬೊಬ್ಬಿರಿದಾರ್ದು ಮುನ್ನುಗ್ಗಿದುದು ಶತ್ರು
ತತ್ತರಿಸೆ: ಅನುರಣನಕಟವಿ ಕಂಪಿಸುವಂತೆ
ಘೀಂಕರಿಸಿ, ಪಣೆ ಪೆಣೆದು, ಕೋಡುಗಳುಡಿದು, ಸೆಣಸಿ
ಕಾದುವ ವನೇಭಂಗಳೋಲ್—ಒಮ್ಮೆ ರಾವಣ
ಚಮೂಹಸ್ತಿ ಮತ್ತೊಮ್ಮೆ ರಾಘವ ಚಮೂದಂತಿ
ಒಂದನೊಂದೊತ್ತಿದುವು: ತಿಣುಕದಿರ್ಪನೆ ಪೇಳ್?
ದಿಟಂ ತಿಣುಕಿದನೊ ಫಣಿರಾಯನಾ ರಾಮಾಯಣದ
ಭಾರಕೆಂಬಂತೆ! ಪ್ರತಿಕೃತಿಸಿ ವರ್ಣಿಸಲಳವೆ
ಅಪ್ರಾಕೃತಾಪ್ರತಿಮ ಜಟಿಲ ಮೇಣ್ ಭೂಮಮಂ?
ಪ್ರತಿಮಾ ವಿಧಾನದಿಂ ಪ್ರಯತ್ನಿಸಿ ಕವಿಪ್ರತಿಭೆ
ಸೋಲ್ತು ಬಗೆಕದಡಿದುದಕಿದೊ ಮುಂದೆ ಹರಡಿವೆ
ವಿಚಿತ್ರಗಳ್ ಬಿಡಿಚಿತ್ರಗಳ್, ಗಡಿಬಿಡಿಗೆ ತಾಮೆ
ಪಡಿಮೆಗಳೆನಲ್: ಸಂಚರಿಸಿದುವು ಮಿಂಚುಫಣೆಗಳ್!
ಗುಡುಗಿದುದು ಮೇರುಗರ್ಭಂ! ತೆರೆಮಸಗಿದಬ್ಧಿ
ತೊಳೆದುದಹಿಭೂಷಣನ ಭಾಳಾಕ್ಷಿಯಂ! ತೂಗಿ
ತುಹಿನಾದ್ರಿ, ತೊನೆದುವು ಶಿಖರ ಪಂಕ್ತಿ! ಲಯ ಸಮಯ
ತಾಂಡವ ಪ್ರಳಯ ನಾಟ್ಯಾಶಂಕಿಗಳ್ ಕುದಿದು
ಘೀಂಕರಿಸಿ ಗದಗದಿಸಿದುವು ಚಕಿತ ದಿಗುದಂತಿ!

ಸಂಚಿಕೆ ೭

# ದಶಾನನ ಸ್ವಪ್ನಸಿದ್ಧಿ

ನಕ್ಷತ್ರ ಖಚಿತ ಮೇಖಳೆಯಾದುದಯ್ ವೇಳೆ
ಕೃಷ್ಣಾಂಬರಾ ನಿಶಿ ಚತುರ್ದಶಿಗೆ. ನಡು ರಾತ್ರಿ,
ಶ್ರೀರಾಮ ಚಿತ್ತಪಸ್ ತೇಜಮುರಿಪಿದ ತನ್ನ
ಮೂಲಬಲ ಸಂಹೃತಿಗೆ ಧೃತಿ ಕಲಂಕಿದ ರೋಷ
ರಕ್ತಾಕ್ಷ ರಾತ್ರಿಂಚರೇಶ್ವರಂ, ಪೇಳ್ ತಾಯೆ
ಓ ವಾಗಧಿಷ್ಠಾತ್ರಿ. ತೊಡಗಿಹನದೇನಂ
ಮಹತ್ ಪೂಜೆಯಂ ಶರ್ವಮಂದಿರದೊಳೇಕಾಂಗಿ?
ಜ್ಞಾನಾಧಿದೇವಿ ನೀಂ, ಮೇಣ್ ವಿಜ್ಞಾನ ನೇತ್ರಿ:
ಹೊರ ನನ್ನಿಯೊಂದಲ್ಲದಂತಶ್ಚಕ್ಷು ತಾಂ ಕಾಣ್ಬ
ಲೌಕಿಕಾತೀತಮಹ ನಿತ್ಯಸತ್ಯಂಗಳಂ
ತೋರೆನಗೆ. ದೇವಿ, ವಿಶ್ವಾಂತರಾತ್ಮೆ! ಸ್ಥೂಲಮಂ
ಸೂಕ್ಷ್ಮಮಂ. ಕೋಶಕೋಶಗಳಿತರ ಕಾಲಮಂ
ದೇಶಮಂ. ಕಾರಣವನಂತೆ ಕಾರಣದಾಚೆ
ಲೀಲಾ ಮಹೋದ್ದೇಶಮಂ ಬಲ್ಲೆ ನೀಂ: ಕವಿಗೆ
ಕೃಪೆಗೆಯ್, ಅವಿದ್ಯೆ, ಹೇ ವಿದ್ಯೆ, ವಿದ್ಯಾತೀತೆ!
ಬಹಿರ್‌ಘಟನೆಯಂ ಪ್ರತಿಕೃತಿಸುವಾ ಲೌಕಿಕ
ಚರಿತ್ರೆಯಲ್ತಿದು; ಅಲೌಕಿಕ ನಿತ್ಯಸತ್ಯಂಗಳಂ
ಪ್ರತಿಮಿಸುವ ಸತ್ಯಸ್ಯ ಸತ್ಯ ಕಥನಂ ಕಣಾ
ಶ್ರಿ ಕುವೆಂಪುವ ರಚಿಸಿದೀ ಮಹಾಛಂದಸಿನ
ಕೃತಿಮೇರು, ಕೇಳ್, ಜಗದ್ಭವ್ಯ ರಾಮಾಯಣಂ!

ರತ್ನಪ್ರದೀಪಮಯ ಹೇಮಮಂದಿರದಲ್ಲಿ

ಸಂಕಲ್ಪ ಸಿದ್ಧಿಗೆ ಮಹಾದುರ್ಗೆಯಂ ತಣಿಸಿ
ವೈರಿವಿಧ್ವಂಸನ ವರಂಗಳಂ ಪಡೆಯಲ್
ಮನಂದಂದು ದೃಢಮತಿ ತಪಃಕೃತಿಯೊಳಿರ್ದ್ದಂ
ದಶಾನನಂ. ಧವಳ ಶಿವ ವಕ್ಷ ವೇದಿಯನೇರಿ,
ಜೋಲ್ವ ಜಿಹ್ವೆಯ ಶೋಣಿತಸ್ರೋತಮಂ ಕಾರಿ,
ರುಂಡ ಮಾಲಾಭೀಳ ಕಂಠಾವತಂಸದಿಂ
ನರಕರ ಸ್ತೋಮ ವಿರಚಿತ ಕಟಿಯ ವಸ್ತ್ರದಿಂ
ಬಹು ಬಾಹು ಭೀಕರಾಯುಧಪಾಣಿ, ದಿಗ್ವ್ಯಸ್ತ
ಕಾಳೋಗ್ರ ವೇಣಿ, ತ್ರಿನೇತ್ರೆ, ತ್ರಿಜಗನ್ಮಾತೆ,
ಮಾಯೆ ಮೇಣ್ ಪ್ರಕೃತಿ ಮೇಣ್ ಶಕ್ತಿ ಮೇಣ್ ಲೀಲೆ,
ಸೃಷ್ಟಿಸ್ಥಿತಪ್ರಲಯ ಶೀಲೆ ತಾನೆಸೆದಳಯ್
ದೈತ್ಯ ಪೂಜಾ ಮೂರ್ತಿ, ಕಾಲಾತ್ಮಕೆ, ಕರಾಳಿ,
ನಾಟ್ಯ ಭಂಗಿಯ ಜಗನ್ನಟರಾಜ್ಞಿ! ಸುತ್ತುಂ
ಜಪಾ ಕುಸುಮ ಕುಂಕುಮ ಬಲಿಗಳೆಸೆದುವಯ್ ಕಣ್
ಪೆಳರ್ವವೋಲ್. ವರಲೋಭಿ ಲೋಹಿತಾಂಬರ ಶೋಭಿ
ರಾವಣಂ ಹೋಮ ಧೂಮಾವರಣ ನೀಲಾಭ
ಕಾಳಿಕಾ ಮೂರ್ತಿಯಂ ದಿಟ್ಟಿ ನಟ್ಟೀಕ್ಷಿಸುತೆ
ಕಾಯುತಿರ್ದನು ತನ್ನಭೀಷ್ಟಕೆ ಮುಹೂರ್ತಮಂ
ತನ್ನಿಷ್ಟ ದೇವತಾವಿಷ್ಕಾರದಾ. ಸೃಷ್ಟಿಯುಂ
ನಿಂದುದುತ್ಕಂಠ ಭೀತಿಯಿನಸುರ ದೃಷ್ಟಿಗ್ರಹಂ
ಬಡಿದವೋಲ್. ದೈತ್ಯಭಕ್ತನ ಭೀಷ್ಮಭಕ್ತಿಗೆ
ಜಗಜ್ಜನನಿ ತನ್ನಲಚಿತ್ ತಾಟಸ್ಥ್ಯಮಂ ತೊರೆದು
ಗೋಚರಿಸಲೆಳಸುತಿರೆ ಚಿದ್ರೂಪದಿಂ: "ತಾಳ್,
ಮಹಾ ತಾಯಿ, ತಾಳ್!" ದೇವಗಣಮೊದರಿದುದು ಗಗನ
ಗಂಗಾಮೃತಾರ್ಘ್ಯಪಾದ್ಯಂಗಳಿಂ ತಾಯ್ಗೆರಗಿ,
"ನೀನಿಂದು ಮೈದೋರಲೀ ಭುವನಭೀಕರಗೆ
ಕೇಳ್ವನು ವರಂಗಳಂ ಧರ್ಮಕ್ಷಯಕೆ ದಿಟಂ
ಸಾಧನಗಳಂ!" ಹೊಸ್ತಿಲೊಳ್ ನಿಂದಳೋಲಂತೆ
ಚಿತ್ತಚಿತ್ತುಗಳೆಡೆಯೊಳಿರ್ಬಗೆಯೊಳಾ ದುರ್ಗೆ
ಅತ್ತಲಿತ್ತಲ್ ತೂಗಿದಳ್ ಲೀಲಾ ವಿನೋದೆ!
ಕಾಲ್ವಿಡಿದ ದೇವರ್ಕಳಿಗೆ ಸಮಾಧಾನಮಂ

ಮುಗುಳುನಗೆಯಿಂ ಮನೋಗೋಚರಮೆನಲ್ ದೇವಿ
ಸೂಚಿಸುತಿರಲ್, ತಾಯಿ ತಡೆದುದಕೆ ಕಡುಮುಳಿದು
ತುಡುಕಿದನು ಕಡುಗಮಂ ದೈತ್ಯರೊಡೆಯಂ:
"ಏಕೆ
ತಡೆಯುತಿಹೆ, ತಾಯಿ? ಭಕ್ತನ ಧೃತಿ ಪರೀಕ್ಷೆಗೇಂ?
ಪೂ ಪಣ್ಣು ಬಲಿ ನಿನಗೆ ಸಾಲದಿರೆ, ಇದೊ ನೋಡು,
ಒಂದುರುಳಲಾಯೆಡೆಯೆ ಮತ್ತೊಂದು ಮೂಡುವಾ
ಹತ್ತು ತಲೆಗಳ ವರೆಗೆ ಕತ್ತರಿಸಿ ಕೊಡಲೆನಗೆ
ಇರ್ಪುದಾಯುಶ್ರಿ! ನಿವೇದಿಸುವೆನಿದೆ ಕೊಳ್!"
ವಿಕಂಪಿಸೆ ಶಿಲಾಶರೀರಂ, ವಿಕಂಪಿಸಿತು ಕೇಳ್
ಶಿವಮಂದಿರಂ! ತಟಿದ್‌ರೋಚಿಮಯ ವೀಚಿಮಯ
ಸಾಗರಂ ಮೇರೆಯಿಲ್ಲದ ಮಹಾದೂರದಿಂ
ಮೇಲ್ವಾಯ್ದುದಾ ರುಂದ್ರ ದರ್ಶನಕೆ ಚೇತನಂ-
ಗೆಟ್ಟನೋಲುರುಳಿದನು ದೈತ್ಯೇಂದ್ರನದ್ಭುತ
ಸಮಾಧಿಗಾ ಸ್ವಾಪ್ನಿಕ ಮನೋಮಯಕೆ:
"ಅದಾರಲ್ಲಿ?
ಧಾನ್ಯಮಾಲಿನಿ! ಅದೇಕಿಲ್ಲಿ ನೀನೀ ಪಾಳು
ದೇಗುಲದಿ? ಏನ್ ಗೆಯ್ವೆಯೀ ಗೂಬೆಗತ್ತಲೊಳ್
ನೀನೊರ್ವಳೆಯೆ, ಪ್ರಿಯೆ? ಹುಬ್ಬು ಗಂಟಿಕ್ಕದಿರ್!
ನೀನೇಂ ಪಿಶಾಚಿಯೆ? ಪ್ರಿಯೆ ಎಂಬುದಪ್ರಿಯಮೆ?
ಏನ್ ಭ್ರಾಂತಿ ನನಗೆ? ನಿನ್ನ ಚಿತೆಯೊಳುರಿಪಿದೊಲ್
ಕನಸಾದುದೀ ಜಾಗ್ರತಕೆ ಬರ್ಪ ಮುನ್ನಮಾ
ನಿಷ್ಠುರಸ್ವಪ್ನಪ್ರಪಂಚದೊಳ್! ಇದಾವುದೀ
ಸೀಮೆ? ಲಂಕೆಯೆ? ಅಲ್ತು! ಕನಕ ಲಂಕೆಯೊಳೆಲ್ಲಿ
ಪಾಳ್ಗುಡಿಯ ಗೂಬೆಗತ್ತಲ್ ಮಸಣದೀ ಶಿಥಿಲ
ಶೀತಲ ನಿಶೀಥಿನಿಯ ಸುಪ್ತಿಮಯ ನಿಶ್ಶಬ್ದ
ನಿರ್ಜನತ್ವಂ? ಅದೇಕುಸಿಕನಿಹೆ? ಮೂಗಿಯೇಂ
ಮೇಣೆನ್ನ ಮೇಲ್ ಮುಳಿಸೊ?"
"ಗುರುತು ಸಿಕ್ಕದೆ ನಿನಗೆ?
ನಾನೆ ಲಂಕಾಲಕ್ಷ್ಮಿ! ಈ ಪಾಳೆ ಆ ಲಂಕೆ!"
"ಪುಸಿಯದಿರ್; ಕನಕಮಯಮಾ ನನ್ನತುಳ ಲಂಕೆ!

ತ್ರೈಭುವನ ಲಕ್ಷ್ಮಿ ಆ ನನ್ನ ಲಂಕಾಲಕ್ಷ್ಮಿ!''
''ಸುಕೃತಿಗಳ್ಗಾಂ ಶ್ರೀ; ಅಲಕ್ಷ್ಮಿ ತಿಳಿ ನಾಂ ಸ್ವಯಂ
ಪಾಪರುಚಿಗಳ್ಗೆ! ನೀಂ ಬಣ್ಣಿಪಾ ಲಂಕೆ, ಮೇಣ್
ನೀಂ ಪೊಗಳ್ವಾ ಲಕ್ಷ್ಮಿ, ಕಳೆದ ಕನಸುಗಳಲ್ತೆ!
ಕಾಣೆದೊ ಮುರಿದ ಕಿರೀಟಂ, ಮಣಿಗಣಗಳುದುರಿ
ದಾರಿದ್ರ್ಯ ಸಾಕ್ಷಿ! ಮಲಿನಂ ಛಿನ್ನ ಚೀನಾಂಬರಂ!
ಬಳೆಯೊಡೆದ ಬೋಳುಗೈ! ತೈಲಮಿಲ್ಲದ ವೇಣಿ
ಪೊದರಾಗಿಹುದು ಪಿಣಿಲ್ಗೊಂಡು! ಶಸ್ತ್ರಕ್ಷತಂ
ಶತವಿಕ್ಷತಂ ಗೆಯ್ದು, ನೋಡು, ಜಜ್ಜರಿತಮೀ
ಮೆಯ್! ಸೋರ್ದು ನೆತ್ತರ್‌ವೊನಲ್ ತತ್ತರಿಸುತಿಹೆನ್
ಪತನಾಭಿಮುಖಿ! ಪೊರೆವರಾರ್? ಮೊರೆಗೇಳ್ವರಾರ್?''
ಕಂಗೆಟ್ಟ ಲಂಕಿಣಿ ನಿರಾಭರಣಹಸ್ತದಿಂ
ನಿರ್ವೀರ್ಯ ವದನಮಂ ಮುಚ್ಚುತಳತೊಡಗಿದಳ್.
ಲಂಕಾಧಿನಾಥನಾ ಕಂಕಾಲ ಮಯಿಯಂ
ಅನಾಥೆಯೋಲಾಕ್ರಂದಿಸುತ್ತಿರ್ದಳಂ ನೋಡಿ
ಬಿಂಕಂ ಜಗುಳ್ದು:
''ನಾಂ ಬರ್ದುಕಿರ್ದು ಸತ್ತನೆಂ!
ನಿನ್ನನಾರ್ ಈ ಗತಿಗೆ ತಂದವರ್ ಪೇಳ್, ತಾಯಿ.
ದೇವತೆಗಳಾಳ್ಗಳಮರಾವತಿಯೆ ತೊಳ್ತು; ಪೇಳ್.
ನಿನಗೇತಕೀ ಪಾಡು?''
''ನಿನ್ನಿಂದಲೆಯೆ ನನಗೆ
ಬಂದುದೀ ಗೋಳ್! ವಾನರಧ್ವಜಿನಿಯಿಂ, ಅಯ್ಯೊ,
ಮಕ್ಕಳೆಲ್ಲರ್ ಮಡಿದರೆನಗುಮೀ ಗತಿಯಾಯ್ತು!''
''ಓಹೊ ಮರೆತಿರ್ದೆನದನಾಂ. ಏಕೊ? ಸೋಜಿಗಂ!
ಏನ್ ವಿಚಿತ್ರಮೊ ಇಲ್ಲಿ! ಏನೇನೊ ಮೂಡುತಿದೆ
ಮನಕೆ; ಬೇಕಾದುದೆಯೆ ಮರೆಯುತಿದೆ! ಬಂದೆನಾಂ
ಇಲ್ಲಿಗದೆ ಉದ್ಯೋಗಮಾಗಿ. ಯುದ್ಧಂ ನಾಳೆ
ಸಿದ್ಧಿಪುದೆನಗೆ ಕಪಿಧ್ವಜಿನಿಯೊಳ್. ರಾಮನಂ
ಗೆಲ್ವ ಸಿದ್ಧಿಗೆ ಶಿವಾಣಿಯ ಕೃಪೆಯನೆರೆಯಲ್ಕೆ
ಪೋದಪೆನ್. ಅಧೀರೆಯಾಗದಿರೆಲೆಗೆ ಲಂಕೆ. ನೀನ್
ನಾಳೆಯೆ ಮರಳಿ ಕಿರೀಟನಿ ದಿಟಂ ಮುನ್ನಿನೋಲ್.

ಮೇಣ್ ಮೊದಲ್ಗಿಂ ಮಿಗಿಲ್!''
"ಕಟುದಿಟಂ, ದನುಜೇಂದ್ರ,
ನಿನ್ನ ವಾಕ್‌ಸಿದ್ಧಿ!''
"ಮತ್ತೇಕೆ ಕಂಬನಿಗೆರೆವೆ?
ಸುಯ್ವೆ?''
"ಸಿದ್ಧಿ ತಾನಪ್ಪೊಡಂ. ನನ್ನ ಮಕ್ಕಳ್
ಲೆಕ್ಕಂಗಿಡಲ್ ಮಡಿವರೆಂದಳ್ಕು! ಬರಿದಾಗೆ
ಲಂಕೆ, ಸಿಂಹಾಸನವನೇರ್ದೊಡೇಂ? ಮಸಣಕೆನ್ನಂ
ರಾಣಿಯಾಗಿಪ್ಪೆಯೇಂ? ಕೊಲೆ ಸಾಲ್ಗುಮೀ ಛಲಂ
ಮಾಣ್!''
"ಮತ್ತೆ? ನಿನ್ನಾಸೆಯೇನ್?''
"ನನ್ನಾಸೆಯೇನೆ?
ನಿನ್ನಂತರಾತ್ಮದೊಳ್ ಸಂಚರಿಸುತಿರ್ಪುದಯ್,
ಪುಡುಕಿ ಕಾಣ್?''
"ರಾಮನಂ ಗೆಲ್ದು ಮೈಥಿಲಿಗಾತನಂ
ಕಪ್ಪಂಗುಡುವುದೆಂಬೆಯೇನ್?''
"ಅಹಂಕಾರಕ್ಕೆ
ಬಲಿಗೊಡುವೆಯೇನ್ ಲಂಕಾಪ್ರಜಾಸಂಖ್ಯೆಯಂ?
ಸಾಲದೇನಾದ ಬಲಿ? ತಾಯ್ ಸಂಕಟವನೇಕೆ
ಪೆರ್ಚಿಪೀ ಪೇಡಿತನಮಯ್? ನಿನ್ನ ಬಿಂಕಕ್ಕೆ
ಬೆಳೆಯ ವೇಳ್ಕುಮೆ ವಿಧವೆಯರ ಸಂಖ್ಯೆ? ಮಕ್ಕಳಂ
ಕಳೆದುಕೊಳ್ವಬ್ಬೆಯರ ಸಂಖ್ಯೆ? ಕೂಳ್‌ಕೊಡುವರಂ
ಬಲಿಗೊಡವನಾಥ ಶಿಶು ಸಂಖ್ಯೆ?''
"ಬಯ್ಯದಿರಲೆಗೆ
ಲಂಕೆ. ನಾಳೆಯೆ ಸಮರಕಾನೊರ್ವನೆಯೆ ಮಲೆವೆನ್.
ನಿನ್ನ ಕಂದರೊಳೊರ್ವನಾದೊಡಂ ಮಡಿಯನಿನ್!
ಇನ್ನುಳಿದುದೆನ್ನ ಕಾರ್ಯಂ. ನಿನ್ನವರನಾನ್ ದಿಟಂ
ಕೊಲಿಸೆನಿನ್. ಇತ್ತೆನಿದೊ ಭಾಷೆಯನ್; ಕೊಳ್, ಕೃಪಣೆ!
ಬೀಳ್ಕೊಡೆನ್ನಂ; ಪೋಪೆನೌದಾರ್ಯಮಿರ್ಪೆಡೆಗೆ,
ಜಗದಂಬೆ ಶಿವೆಯ ಸಂದರ್ಶನಕೆ!''
"ನಾನೆ ಶಿವೆ!

ಕಾಣದೇನಯ್?''
"ಅದೆಂತು?''
"ಕಣ್ಣಿಂತೆ ಕಾಣ್ಕೆಯಯ್!''
ನೋಡಿದನು ಬೆರಗಾಗಿ ದಾನವೇಂದ್ರಂ. ಜ್ಯೋತಿ
ತಾಂ ಘನೀಭೂತಮಾಯ್ತೆನೆ ಮೆರೆದುದಂಬಿಕಾ
ಶ್ರೀಮೂರ್ತಿ. ಪಾಳ್ಗುಡಿಗೆ ಬದಲೊಂದು ಪರ್ಬಿದುದು
ಹೇಮ ನೀಹಾರಿಕೆ. ವಿಯತ್ತಳವನಾಕ್ರಮಿಸಿ;
ಗೂಬೆಗತ್ತಲ್ ಪರಿದುದಿಂದ್ರಕಾರ್ಮುಕ ಕಾಂತಿ
ತುಂಬಿದತ್ತಾಕಾಶ ಪದವಿಯಂ. ಕಾಣುತೆ
ಅತೀಂದ್ರಿಯ ನಿರಾಕಾರದತಿಮನೋತತ್ತ್ವಯಂ
ವರ್ಣನಾತೀತ ವರವರ್ಣಿನಿಯನಂಬೆಯಂ
ಭಾವಾಶ್ರುಮಯ ನೇತ್ರನೆರಗಿದನು ರಾವಣಂ
ಗದ್ಗದಿಸುತರ್ಭಕನವೋಲ್:
"ದುಃಖಮೇನ್, ಕಂದ,
ನಿನಗೆ, ಲಂಕೇಶ್ವರಗೆ, ತ್ರಿಜಗದ್ ಭಯಂಕರಗೆ,
ಬಹು ತಪೋನಿಷ್ಠಂಗೆ, ಬಹು ವರ ಬಲಿಷ್ಠಂಗೆ,
ಕಲಿ ವರಿಷ್ಠಂಗೆ?''
"ಮೂದಲಿಸದಿರ್ ಆಜ್ಞೆಯೋಲ್,
ಸರ್ವಜ್ಞೆ. ನಿನ್ನ ಲೀಲೆಯನರಿಯೆನೆಂದಲ್ತು.
ನೀನಾಡಿಸಿದವೊಲೆ ಜಗನ್ನಾಟಕಂ. ನಿನ್ನ
ಇಚ್ಛಾ ಸೂತ್ರಮಿತ್ತಲೆಳೆದರೆ ರಾವಣೋತ್ಕರ್ಷ,
ಅತ್ತಲೆಳೆದರೆ ವೈರಿಯುತ್ಕರ್ಷ! ಪಾತ್ರಮನ್
ಸೋಲು ಗೆಲು ಸುಖದುಃಖ ಸೂತ್ರಂಗಳಿಂ ಪಿಡಿದು
ಆಡಿಪುದೆ ನಿನಗೆ ಹರ್ಷಂ! ಗಾಳಿಪಟಗಳಂ
ಆಡಿಸುವವೋಲ್! ನನ್ನ ಈ ದುಃಖಮುಂ ನಿನ್ನ
ಇಚ್ಛೆಯೆ ದಿಟಂ! ಅಲ್ಲದಿರೆ ತಿಳಿದುತಿಳಿದುಮೀ
ಶೋಕಮೆನ್ನಂ ದಹಿಸುತಿರ್ದುದೆ? ಅದಾತ್ಮಕ್ಕೆ
ಸಂಸ್ಕಾರಮಲ್ತೆ? ಜೀವಂಗಳಂ ಮಸೆಯಲ್ಕೆ,
ನಿಶಿತಗೊಳಿಸಲ್ಕೆ, ಬೆಳಗಲ್ಕೆ ದುಃಖಭೋಗಂ
ತಾಂ ಸಾಣೆಯಲ್ತೆ?''
"ಈ ಬುದ್ಧಿ ಸಿದ್ಧಿಯ ನೆಲೆಗೆ

ನಿಲ್ವಿನಂ ನಿನಗೆ ತಪ್ಪದು ನಾಟಕವನಲೆವ
ಪಾತ್ರಕರ್ಮಂ.''
''ಹಿಂಜರಿಯೆನದಕೆ. ನೀಡೆನಗೆ
ಬಲ್ಮೆಯಂ; ನಾಟಕದೊಳಭಿನಯಕೆ ತಗುವಂತೆ
ಚಾತುರ್ಯಮಂ.''
''ಬೇಡಿದುದನಾಂ ನೀಡುವೆನ್.
ನೀಡದುದುಮುಂಟೆ ಭಕ್ತಂಗೆ?''
''ದಶರಥ ಸುತಂ
ರಣದಿ ಸೋಲ್ವಂತೆನಗೆ ಮಾಡು ಕೃಪೆಯನ್!''
''ತಥಾಸ್ತು!''
''ಸೀತೆ ವಶವಪ್ಪಂತೆ!''
''ತಥಾಸ್ತು!''
''ನೀಂ ತಾಯ್ ದಿಟಂ!
ನೀಂ ಕೃಪಾಬ್ಧಿಯೆ ದಿಟಂ! ರಾಮ ಜಯಕಿಂ ಮಿಗಿಲ್
ಸೀತೆ ಸೋಲ್ವುದೆ ಸೋಜಿಗಂ!''
''ಸೋಜಿಗಮದೇಕೆ?
ಒಲಿದ ಕಂದಗೆ ತಾಯಿ ಸೋಲ್ವುದೇನಚ್ಚರಿಯೆ?
ಸಹಜಂ!''
''ಅದೇನ್ ಮತ್ತೆ ವಕ್ರೋಕ್ತಿ!''
''ವಕ್ರಮೇನ್!
ನಿನ್ನೆರ್ದೆಯ ಗೂಢವೃತ್ತಿಗೆ ನನ್ನದುಕ್ತಿಯಯ್!''
''ಸೀತೆ ಸೋಲ್ವಳೆ? ರಾಮನಂ ಗೆಲ್ವನಿದು ದಿಟಮೆ?''
''ಸೀತೆಯಾಲಿಂಗಿಪಳ್, ಚುಂಬಿಸೆರ್ದೆಗೊತ್ತುವಳ್;
ರಣದಿ ರಾಮನ ಸೋಲಿಪಯ್, ಪುನರ್ಜನ್ಮದೊಳ್!
ಕಾಣ್ ತೋರ್ಪುದಂ:''
ತಿರೋಹಿತಮಾದುದಾ ದರ್ಶನಂ.
ಮಿಳ್ಮಿಳನೆ ನೋಡುತಿರ್ದಸುರದೃಷ್ಟಿಗೆ ಮುಂದೆ
ಮೆರೆದತ್ತದೊಂದು ದೇವಾಲಯಂ. ಪೀಠಾಗ್ರದೊಳ್,
ದೇವವಿಗ್ರಹಮಲ್ತು, ನಿಂದುದೊಂದಶ್ವಂ
ಮಹದ್ ಭೀಮತನು, ತನ್ನ ಪಿಂಗಾಲ್ಗಳನ್ನೂರಿ,
ಮುಂಗಾಲ್ಗಳಂ ನೆಗಹಿ. ಮೇಣ್, ನಿಗುರ್ದಂಗದಿಂ

ನರ್ತಿಸುತೆ, ನೆಲವನೊದೆದುದು ಖುರಪುಟಧ್ವನಿಗೆ
ಕೆನೆವ ಹೇಷೆಗೆ ದಶಗ್ರೀವಾಸು ಗದ್‌ಗದಿಸೆ!
ಇದೇನಿದೇನೆನುತಿರಲ್, ದೀರ್ಘಖಡ್ಗಂ ಬಿಡಿದು
ಮೂಡಿದುದು ನಭದೊಳ್ ಬೃಹನ್ಮುಷ್ಟಿ. ಇಳಿದುದದು
ಕುದುರೆಯ ಕೊರಳ್ಗೆ. ಕತ್ತರಿಸುರುಳ್ದುದು ಮಂಡೆ
ಮಣ್ಗೆ. ಖಂಡೆಯಮಿರದೆ ಕಾರಿದುದು, ನೆತ್ತರ್
ಪೊನಲ್ವರಿಯೆ. ಓಡಿ ದಶಶಿರನೇರಿದನು ಬಳಿಯೆ
ಹೊಳೆದಡದೊಳಿರ್ದೊಂದು ದೋಣಿಯಂ. ರುಂಡದಿಂ
ಬೇರ್ವರಿದು ದಿಂಡುರುಳ್ದಶ್ವಮುಂಡಂ ನೆಗೆದು,
ಕುಪ್ಪಳಿಸಿ, ಬಿದ್ದೆದದ್ದು ಕುಣಿಕುಣಿದು, ಹಾರಾಡಿ,
ದೊಪ್ಪನಪ್ಪಳಿಸಿಳೆಗೆ ಚಿಮ್ಮಿ ಮುಂಬರಿದುದಾ
ಮಂಡೋದರಿಯ ಗಂಡನಿರ್ದೆಡೆಗೆ. ಬಿರುಬಿರನೆ
ತೇಲ್ದುದಸುರನ ನೌಕೆ. ನೆಗೆನೆಗೆದು ಮುಂದುರುಳಿ
ಧುಮ್ಮಿಕ್ಕಿದುದು ದುಢುಮ್ಮನೆ ಕುದುರೆಮುಂಡಂ
ನದೀ ಜೀವನಂ ನೆತ್ತರೋಕುಳಿಯಾಗಿ ಕೆರಳೆ.
ತೆರೆ ಮಸಗಿದುದು. ದೋಣಿ ಮಗುಚಿತು. ದಶಾನನಂ
ರಕ್ತಮಯ ಜೀವನ ತರಂಗಿಣಿಯ ವಾಹದೊಳ್
ಸಿಲ್ಕಿದನ್; ತೇಲ್ದನೀಜಿದನಯ್ಯೊ ಕಂತಿದನ್;
ಮುಳುಗಿದನ್, ಮುಳುಗಿದನ್, ಕೆಳಕೆಳಗೆ ಮುಳುಗಿದನ್.
ತೆಕ್ಕನೆಯೆ, ಕುಂಭಕರ್ಣನ ಕಂಡು, ಕೂಗಿದನ್
ತಮ್ಮನಂ. ಬರ್ದುಕುವಾಸೆಗೆ ಸಹೋದರರಿರ್ವರುಂ
ಹೊಳೆಯೊಡನೆ ಹೋರಾಡಿ ದಡಕೇರ್ದರೇನಿದೇನ್
ಶಿಶುಗಳೋಲ್! ಸುತ್ತಲೆಸೆದಿರ್ದುದೊಂದಾಶ್ರಮಂ.
ಚಿತ್ರಕಾದುದು ತಪಶ್ಶಾಂತಿ. ಮರೆತುದು ಮನಂ
ತನ್ನ ಪಿಂತಣ ಪೂರ್ವಮಂ. ನೆನೆಯಲೆಳಸಿದನ್.
ಯತ್ನಮನಿತುಂ ವ್ಯರ್ಥಮಾದತ್ತು. ವಿಸ್ಮೃತಿಯ
ವೈತರಣಿಗಳ್ದುದಾತ್ಮಂ. ಶಿಶು ಶರೀರದಿಂ
ಸಹಓದರರಂ ಕುಂಭಕರ್ಣಂ ಪಸುಳೆಯೋಲಂತೆ
ರೋದಿಸುತಿರ್ದುದಂ ಕಂಡಾ ಶಿಶುಶರೀರಿ
ತಾನುಮಳತೊಡಗಿದನು ದೈತ್ಯೇಂದ್ರನಾಗಳೆಯೆ
ಪುಟ್ಟಿದರ್ಭಕನಂತೆವೋಲ್. ಬಂದಳಲ್ಲಿಗದೊ

ಸೀತೆ! ಮಕ್ಕಳನೆತ್ತಿ ಮುದ್ದಾಡಿದಳ್! ಪಾಡಿ
ಮೊಲೆಯೂಡಿದಳ್! ತೊಡೆಯನೇರಿಸಿದಳೆರ್ದೆಗಪ್ಪಿ
ಲಲ್ಲಯ್ಸಿದಳು ತನ್ನವಳಿಮಕ್ಕಳಂ, ತಮ್ಮನಂ
ಕುಂಭಕರ್ಣನನಂತೆ ತನ್ನನುಂ!
ತಾನಂತು
ತನ್ನ ತಮ್ಮಂವೆರಸು ಶಿಶುವಾಗುತಾಶ್ರಮದಿ
ಜಾನಕಿಯ ತೊಡೆಯ ಮೇಲಾಡುತಿರ್ದದ್ಭುತಕೆ
ಬೆಬ್ಬಳಿಸುತೆಳ್ಚರ್ತು, ತನ್ನತನಮಂ ಮತ್ತೆ
ವಿಸ್ಮರಣ ಮರಣದಿಂದೆತ್ತಿ ಸುಸ್ಮೃತಿಗೆಳೆದು
ಸಂಸ್ಥಾಪಿಸುವನಂತೆವೋಲ್, ಕರೆದು ಕರೆದೊರಲಿ
ಕೂಗಿದನ್: "ಮಂಡೋದರೀ! ಮಯಾತ್ಮಜೇ! ಪ್ರಿಯೇ!
ರಕ್ಷಿಸೆನ್ನನ್!"
ಪಸುಳೆಯಳುಗೇಳ್ದು ಪೂಜಾ
ನಿಕೇತನಂಬೊಕ್ಕ ವಿಸ್ಮಿತೆ, ಮಯನ ನಂದನೆ,
ದಶಾಸ್ಯನಾ ದುಃಸ್ವಪ್ನಚೇಷ್ಟಿತಕೆ ತಳಮಳಿಸಿ,
ಮೀಸೆವೊತ್ತಂ ಮಹಾ ದೈತ್ಯ ಚಕ್ರೇಶ್ವರಂ
ಪೊಸತೆ ಪುಟ್ಟಿದ ಪಸುಳೆಯಂದದಿಂದಳುವಾ
ವಿಕಾರಕುರೆ ಬೆದರಿ, ತನ್ನಂಕತೂಲದಿನವನ
ತಲೆಗೆ ದಿಂಬೆಸಗಿ, ತೊಡಗಿದಳು ಪಣೆಬೆಮರೊರಸಿ
ಬೀಸಿ ಬಿಜ್ಜಣವಿಕ್ಕಿ ಶಿಶಿರೋಪಚಾರಮಂ.
ನುಡಿಸಿದಳ್ ನಾಥನಂ, ಪುರುಹೂತ ಜೇತನಂ,
ಪಸುಳೆವೋಲ್ ಭೀತನಂ! ಬಿಗಿದಪ್ಪಿ ಚುಂಬಿಸುತೆ
ಕರೆಕರೆದು ಮೈದಡವಿ ಮತ್ತೆ ಜಾಗ್ರಜ್ಜಗಕೆ
ಸ್ವಪ್ನದಿಂದಾತನಂ ತುಯ್ದೊಯ್ದು ತೆಗೆದೆತ್ತಿ
ತಂದಳ್ ಪತಿಪ್ರಾಣೆ. ಮೇಣ್ ತನ್ನಂ ಪೆಸರ್ವಿಡಿದು
ಕರೆಯುತೆಳ್ಚರ್ತಂಗೆ: "ಬಳಿಯೊಳಿಹೆನಾಂ, ಸ್ವಾಮಿ;
ಬೆದರದಿರ್ ಪಾಳ್ಗನಸದರ್ಕೆ!"
"ಕನಸಲ್ತು ನಾಂ
ಕಂಡುದದು! ನಾನೀಗಳೆಲ್ಲಿಹೆನ್ ಪೇಳ್, ಪ್ರಿಯೆ?"
"ಲಂಕೆಯೊಳ್. ನಮ್ಮರಮನೆಯ ಶೈವಮಂದಿರದಿ!"
"ನನ್ನ ಮೆಯ್ಯೆಲ್ಲಿ? ಮೊಗಮೆಲ್ಲಿ?"

"ಇಲ್ಲಿಹವಿಲ್ಲಿ!"
"ನಾನಾರ್?"
"ದಶಗ್ರೀವನಸುರೇಶ್ವರಂ! ಮತ್ತೆ
ಮಂಡೋದರೀ ಜೀವಿತೇಶ್ವರಂ!"
"ಅಹುದಹುದೆ!
ಪ್ರಿಯೆ. ಬರಿಯ ಮರೆವಲ್ತು. ಪ್ರಜ್ಞಾಪ್ರಲಯದಿಂ
ಜಗುಳ್ದವೋಲಾದುದೆನ್ನಾತ್ಮಂ ಪುನರ್ಭವಕೆ,
ತನ್ನಹಂಕಾರದೀ ಪುರುಷಕಾರವನೆಲ್ಲಮಂ
ತೃಣಕೆಣೆ ವಿಸರ್ಜಿಸುತ್ತಗ್ನಿವೈತರಣಿಗೆ!
ಮಹಾ ಪ್ರಯತ್ನದಿನಲ್ತೆ ಪಿಂತಿರುಗಿದೆನ್!" ನಕ್ಕು
ನುಡಿದನ್: "ವಿನೋದಮಂ ಕೇಳ್, ನಲ್ಲೆ: ಆವುದೋ
ಋಷ್ಯಾಶ್ರಮದೊಳಾಂ ದಿವಂಗತ ಸಹೋದರಂ
ವೆರಸಿ ವೈದೇವಿಗಾತ್ಮಜರಾಗಿ ತೊಡೆಯೇರ್ದು
ರೋದಿಸುತ್ತಿರ್ದವೋಲ್... "
ಮುನ್ನೊರೆಯಲಮ್ಮದೆಯೆ
ಕೆಮ್ಮನಿರ್ದಾಣ್ಮಂಗೆ ಮಯನ ಸುತೆ "ಕನಸಾಯ್ತೆ?"
ಎನೆ, ದೇವದಾನವ ಭಯಂಕರಂ ತಲೆಯೊಲೆದು
ಸುಯ್ದು "ಅಲ್ತಲ್ತು! ಅದು ಕನಸ ಪಾಂಗಲ್ತು!"
"ಮೇಣ್?"
"ಅನುಭವ ವಿಶೇಷಮಂ ಪೇಳ್ವೆನೆಂತಾಂ, ಮಡದಿ?
ಪೋಲ್ವೆಗಮಸದಳಂ, ಅಸಾಮಾನ್ಯಮಾ ನಿರುಪಮಂ,
ನನಗುಮದು ಇದೆ ಮೊದಲ್! ಎಂತುಮದು ಕನಸಲ್ತು!"
"ಸೀತೆಯೊಳ್ ನಿನಗೀಗಳಿರ್ಪೊಂದು ಸಾತ್ತ್ವಿಕದ
ಭಾವಶುದ್ಧಿಯೆ ದಿಟಂ ಪ್ರತಿಮೆಯಂ ಪಡೆದುದಾ
ಸ್ವಪ್ನದೊಳ್."
"ತಂಗೆಯುಪದೇಶಮಾದುದೊ ನಿನಗೆ?
"ಪೇಳ್ದಳತ್ತಿಗೆ ನಿನ್ನ ವೀರಧರ್ಮಂ ನೆನೆದ ಆ
ಭವ್ಯ ಪಥಮಂ!"
"ಸಮ್ಮತಮೊ ನಿನಗೆ? ಪೇಳ್, ದೇವಿ!
ಪಾಪಿಯಂ ಕೈಬಿಡದೆ ಪುಣ್ಯಕೊಯ್ಯುವ ದೇವಿ
ನನಗೆ ನೀನೊರ್ವಳೆಯೆ ದಲ್!" ಪ್ರಶಂಸೆಗೆ ಬಾಗಿ

ತನ್ನ ಕಾಲ್ವಿಡಿದವಳ ಕಣ್ಣೀರ್‌ವೊರಸಿ: "ದಿಟಂ,
ದೇವಿ ನೀನೊರ್ವಳೆಯೆ ರಾವಣಗೆ! ಮೇಣ್ ಸೀತೆ!"
ಮನದಿ ಮೂಡಿದ ಮೈಥಿಲಿಯ ಚಿತ್ರಕಸುರಂ
ನಮಸ್ಕರಿಸಿ, ಮಂಡೋದರಿಯ ಮೆಯ್ಗೆ ಮುಳ್ಳೇಳೆ
ಪೇಳ್ದನಂತಸ್ಥಮಂ: "ನಿನಗಿಂ ಮಿಗಿಲ್ ಸೀತೆ
ನನಗೆ ದೇವತೆ, ಮಾತೆ! ಶ್ರದ್ಧೆಗೆಟ್ಟಿರ್ದೆನಗೆ
ಶ್ರದ್ಧೆಯಂ ಮರುಕೊಳಿಸುತಾತ್ಮದುದ್ಧಾರಮಂ
ತಂದ ದೇವತೆ, ಪುಣ್ಯಮಾತೆ!"
"ನಾಂ ಧನ್ಯೆ ದಲ್!
ಬಾಳ್ ಸಾರ್ಥಕಂ! ಸಾವೊ ಬದುಕೊ? ಇನ್ನೆನಗಿರದು
ವ್ಯಥೆ: ತಿಳಿದೊಡೀ ನಿನ್ನ ಹೃದಯಂ, ತ್ರಿಮೂರ್ತಿಗಳ್
ಬಂದು ಮೀಯರೆ ಅಲ್ಲಿ?"
"ನೀನೊರ್ವಳಲ್ಲದೆಯೆ
ಮತ್ತೆ ನಂಬುವರಾರದಂ?" "ಪಣಮಿಟ್ಟು ನಂಬಿಪೆಂ
ನನ್ನ ಮಾಂಗಲ್ಯಮಂ!"
"ಬಿಡು, ಮಹಾರಾಣಿ ನೀಂ;
ಆರ ನಂಬಿಸಿ ನಿನಗೆ ಆಗ ಬೇಕಾದುದೇನ್,
ಲಂಕೇಶ್ವರಿಗೆ?"
"ಸ್ವಾರ್ಥ ಸಾಧನೆಗೆ! ರಕ್ಷಿಸಲ್
ನನ್ನ ಮಾಂಗಲ್ಯಮಂ!"
"ಕೈಲಾಸ ಸುಸ್ಥಿರಂ
ಮಾಂಗಲ್ಯಮೇಗಳುಂ ನಿನಗೆ!"
"ಕೈಲಾಸಮುಂ
ನಿನ್ನ ಕೈಯಿಂದಲುಗಿತಲ್ತೆ?"
"ಅಲುಗಿತು ವಲಂ!"
"ರಾಮನರ್ಧಾಂಗಿಯಂ ನಾನೆ ಕಪ್ಪಂಗೊಟ್ಟು
ತಪ್ಪೊಪ್ಪಿಕೊಳ್ವೆನ್ ಕ್ಷಮಾ ಭಿಕ್ಷೆಯಂ ಬೇಡಿ!"
"ಬೇಡ ನಿನಗಾ ಶ್ರಮಮಂ. ನನಗಿರಲಿ ಆ ಶಿಕ್ಷೆ!"
"ಶಿಕ್ಷೆಯೆಂದರಿಯದಿರ್."
"ಶಿಕ್ಷೆಯಲ್ತು, ತಿತಿಕ್ಷೆ.
ಮೇಣ್ ವೀರದೀಕ್ಷೆ!"

"ದೇವಿಯನುಯ್ವೊಡಾನೊಡನೆ
ಬಂದಪೆನ್!"
"ಸೀತೆ ನನ್ನಂ ಗೆಲ್ದಳದರಿಂದೆ
ರಾಮನಂ ತಂದು ಕಪ್ಪಂಗುಡುವೆನಾತನಂ
ಕದನಮುಖದೊಳ್ ಗೆಲ್ದು!"
"ರಾಮನಪ್ರಾಕೃತಂ.
ಮಾರ್ಕೊಳಲ್, ಮುಕ್ತಿಯಲ್ಲದೆ ಬೇರೆ ಜಯಮುಂಟೆ?"
"ಕಾಳೆಗದೊಳಾತನಂ ಸೋಲಿಸದೆನಗೆ ಮುಕ್ತಿ
ತಾನಿಹುದೆ? ನನಗೆ ವರವಿತ್ತ ಮಾಹೇಶ್ವರಿಯ
ಜಿಹ್ವೆ ನನ್ನಿಯ ತವರ್, ತೊದಲಾಗದೇಗಳುಂ!"
"ತೊದಲಾಗದಾದೊಡಮನಂತ ಮುಖಿ ಅದು ಕಣಾ!
ನಾವೊಂದು ಮೊಗದೊಳಾಶಿಸಿದರದು ಬೇರೊಂದು
ನಮ್ಮೂಹೆಗಳವಲ್ಲದಿಹ ಮೊಗದಿ ಕೈಗೂಡಿ
ನಡಸುವುದು ತನ್ನಿಚ್ಛೆಯಂ!"
"ನೀಂ ಪತಿವ್ರತೆ.
ಅಮಂಗಳ ಮನೋರಥವನುಳಿದ ಶುಭಬುದ್ಧಿಯಿಂ
ಶುದ್ಧನಾನುಂ. ಜಗನ್ಮಾತೆ ವರವಿತ್ತಿಹಳ್.
ಚಿಂತೆಯೇಕಿನ್? ನೋಡು, ಮೂಡುದೆಸೆಯೊಳ್ ಕೆಂಪು
ಕಣ್ದೆರೆಯುತಿಹುದಾಶೆಯೋಲ್. ಇಂದು ಏಕಾಂಗಿ
ನಡೆವೆನಾಂ ಕಾಳಗಕೆ. ಕೊಲ್ವುದಲ್ತೆನಗೆ ಗುರಿ.
ಸೀತಾ ಶುಭೋದಯಕೆ ಗೆಲ್ವುದಲ್ಲದೆ ನನಗೆ
ಗುರಿ ಕೊಲ್ವುದಲ್ತು."
"ವೈರಿಗೆ ತಿಳಿಯದೀ ಹೃದಯ
ಪರಿವರ್ತನಂ!" "ತಿಳಿಯಬಾರದದೆ ವೀರತೆಗೆ
ದೀಕ್ಷೆ! ಪೇಳ್ದೊಡಮದಂ ನಂಬರಾರುಂ! ಪೇಳೆ
ಪೇಡಿತನಮಲ್ಲದನ್ಯಪ್ರಯೋಜನಮೆನಗೆ
ತೋರದು, ಮಹಾರಾಜ್ಞಿ. ಯಾಚಿಸುವೆನೊಂದನಾಂ
ನಿನ್ನನೀ ನನ್ನ ಪೂಣ್ಕೆಯನಾರ್ಗಮೊರೆಯದಿರು:
ಹೃದಯ ಗಹ್ವರದಲ್ಲಿ ಭವ್ಯಕೃತಿಯಾಗಿರಲಿ
ನನ್ನ ನಿನ್ನೀ ದಿವ್ಯಗುಹ್ಯಂ. ಜಗತ್ರಯಂ
ತಿಳಿವುದೀ ಪೂಣ್ಕೆ ಕೈಗೂಡಲಲ್ಲದಿರೆ, ಪೋ,

ಪೇಳ್ದ ನೀನೆಯೆ ನಗೆಗೆ ಪಕ್ಕಾಗುವಣಕಮಂ
ಸಹಿಸದೆನ್ನಾತ್ಮಂ! ತೆರಳ್, ಪೋಗು. ಸೀತೆಯಂ
ಸೇವಿಸುತ್ತಿರು, ರಾಮನಂ ಗೆಲ್ದು ಸೆರೆವಿಡಿದು
ತರ್ಪನ್ನೆಗಂ!''
ಮುಡಿಯನಡಿಗಿಟ್ಟು ನಮಿಸಿದಳ್.
ಶಿರದೊಳಾಂತಳು ಪತಿಚರಣಧೂಳಿಯಂ. ''ಗೆಲ್ಗೆ
ನಿನ್ನೀ ಪವಿತ್ರತಮ ವಿಜಯಯಾತ್ರಾ ರಣಂ!''
ಎಂಬ ಹೃದಯಧ್ವನಿಗೆ ಬಾಷ್ಪಂಗಳುರುಳುತಿರೆ
ಬೀಳ್ಕೊಂಡಳಿಯನಂ ಲಂಕಾ ಮಹಾರಾಜ್ಞಿ!
ನೇಸರನ್ನೆಗಮುದಯ ದಿಗುರೇಖೆಯಂ ಬರೆದು
ಕೆತ್ತಿ ಬಿಡಿಸಿದನಿರುಳಿನಂಬರದಂಚಲದಿ, ಕಾಣ್,
ಉಷಾಗಮನಕೆತ್ತಿದೊಸಗೆಯ ತೋರಣಂಬೋಲ್.
ತ್ರಿಕೂಟಾದ್ರಿ ಶಿಖರಮಂದಿರದೆಳ್ತರದೊಳಿರ್ದ
ದಶಕಂಠನಾ ದಿವ್ಯದೃಶ್ಯಾವತರಣಮಂ
ನಿಡುವೊಳ್ತು ನೋಡಿದನ್. ತನಗೆ ತಾನೆಂದನ್:
''ಇದೇನಿಂದು ಪಿಂತೇಗಳೆನಗೆ ಪೊಳ್ತರೆಯಿಂತು
ಸೊಗಸಿತಿಲ್ಲೆನೆ ಸೊಬಗು ನನ್ನಂತರಾತ್ಮಮಂ
ಬೆಳಗುತಿದೆ? ಜೇನ್ಮಳೆಯೆ ಕರೆಯುತಿದೆ! ಪಾಲ್ಪೊನಲ್
ನಾಳನಾಳದಿ ಪರಿಸುತಿರ್ಪುದಮೃತತ್ವಮಂ,
ಶಾಂತಿಯಂ, ವೀರ್ಯಮಂ, ಶಕ್ತಿಯಂ, ತೇಜಮಂ,
ನಿಧನ ನಿಧುವನ ಪದದ ಮಧುರ ಚೈತನ್ಯಮಂ!''

## ಸಂಚಿಕೆ ೮

# ಅರಾವಣಂ ವಾ ಅರಾಮಂ ದಿಟಂ!

ಪೊಂಗದಿರ್ಗಯ್ಗಳಿಂದಿಳೆಯನಾಶೀರ್ವದಿಸಿ
ಪೂರ್ವಾಚಲವನೇರಿ ಬಂದನು ದಿಗಂತರವಿ,
ಕೃಷ್ಣಪಕ್ಷದ ಪಂಚದಶಿಯ ದಿವಸೇಶ್ವರಂ,
ಶೋಕಕಾನಂದಮಂ ಸಿಂಚಿಸಿ ನವೀನಮಂ.
ದೈತೇಂದ್ರನಾಜ್ಞೆಯಿಂ ನೆರೆದುದು ಸಮರಸಮಿತಿ.
ಏರಿದನು ಕನಕ ಶೂಲೋನ್ನತಾಗ್ರಾಸನಕೆ
ಕರ್ಬುರ ಕುಲೇಶ್ವರಂ. ಆತ್ಮದೊಳತೋಟಿಯಂ
ಒಂದಿನಿತುಮಿಂಗಿತದೊಳಾದೊಡಂ ತೋರದಾ
ಧೀರಮುದ್ರೆಯ ದಾನವೇಂದ್ರಂ ಸಚಿವ ಸಭೆಗೆ
ಆಜ್ಞಾಪಿಸಿದನಿಂತು ತನ್ನ ತರಿಸಲ್ಕೆಯಂ:
“ಸೇನಾನಿಗಳಿರ, ರಣದಕ್ಷರಿರ, ಕಲಿಗಳಿರ,
ಶಸ್ತ್ರಾಸ್ತ್ರ ಸಮರ ಪ್ರವೀಣರಿರ, ರಾಕ್ಷಸ
ಕುಲಾಭ್ಯುದಯ ಸಾಗರ ಸುಧಾಕರೋದಯರಿರಾ,
ಋಣಿ ಲಂಕೆ ನಿಮ್ಮ ಶಕ್ತಿಗೆ; ಸ್ವಾಮಿಭಕ್ತಿಗಾಂ
ಋಣಿ. ನನಗೆ ಮೇಣ್ ಲಂಕೆಗೆನಿತೆನಿತೊ ಹರಣಗಳ್
ಕೂಳುಗುಳದಿ ಬಲಿವೋದುವಿನ್ನೆಗಂ. ಪೋಗವಿನ್.
ಲಂಕಾಧಿದೇವಿಯಿಂದಾಜ್ಞೆಯಾಗಿಹುದೆನಗೆ
ಕಳೆದಿರುಳ್. ಇನ್ನುಳಿದುದೆನ್ನೊರ್ವನದೆ ಹರಿಬಂ.
ತೀರ್ಚಿದಪೆನದನೊರ್ವನೆಯೆ ಇಂದು. ಏಕಾಂಗಿ,
ವೈರಿಯನಿದಿರ್ಚಿದಪೆನಾಂ, ಶೂರನಸಹಾಯಿ.
ಲೋಕದ ಚರಾಚರರ್ ಶಕ್ತಿಗಳ್ ಆತ್ಮಗಳ್

ಮೂಗುವೆರಳಾಗಿ ಮೂಗರ ತೆರದಿ ನಿಲ್ವಂತೆವೋಲ್
ಕಾದುವೆನರಿ ಚಮೂ ಜಗತ್‌ಪ್ರಲಯಹರನಾಗಿ.
ನೀಮಿರಿಮ್ ಪ್ರೇಕ್ಷಕರವೋಲ್. ನೋಡುತಿರಿಮೀ
ದಶಗ್ರೀವ ಕಾಲರುದ್ರನ ಯುಗಕ್ಷಯ ರೌದ್ರ
ರಣನಾಟ್ಯಮಂ. ಬರಿಯ ಬಿನದಮೆಂದರಿಯದಿರಿ;
ನಾನೊರೆದುದೆಲ್ಲಮುಂ ರಾಜಾಜ್ಞೆ! ಇಂದೆನ್ನ
ರಣಕೆ ನನ್ನೊಡನೆ ಪರಿವಾರಮಲ್ಲದೆ ಬೇರೆ
ಬರಲಾಗದಾರುಮಾಳ್ಗಳ್ ಕೈದುವಿಡಿದವರ್.
ಪ್ರೇಕ್ಷಕಸ್ಥಾನದೊಳ್ ನಿಂದು, ರಸದೊಳ್ ಮಿಂದು,
ನೋಡುವುದಿಂದು ಲೋಕತ್ರಯಂ ರಾಮರಾವಣ
ಮಹೋಗ್ರ ಸಂಗ್ರಾಮಮಂ. ನೀವುಮೀಕ್ಷಿಸಿಮಕ್ಷಿ
ಕೈವಲ್ಯಮಂ, ಸಾಕ್ಷಿಗಳವೋಲ್. ಇದಿಂದೆ ಮೊದಲ್,
ಇಂದೆ ಕಡೆ. ಪಿಂತಿಲ್ಲ, ಮುಂತಿರದು! ಇಂತಪ್ಪುದಂ
ನಿಂತೆ ನೋಡುವುದುಚಿತಮಲ್ಲದಿರೆ ವಂಚಿತರ್, ಮೇಣ್
ಬರ್ದುಕಿಯುಂ ಸತ್ತವರ್, ನೀಂ ಚಿರಂ ವಂಚಿತರ್
ದಿಟಂ!''
          ಕೇಳ್ದು ರಾಕ್ಷಸ ರಾಜ ರಾಜೇಂದ್ರನಾ
ವೀರ ವಾಗ್‌ವಿನ್ಯಾಸಮಂ ಮೂಕ ವಿಸ್ಮಯ
ಮೌನ ವಾರಿಧಿಗರ್ದ್ದವೋಲಿರ್ದ್ದುದಾ ಸಭಾ
ಸಂಜ್ಞೆ. ಮಾರ್ನುಡಿಯಲೆರ್ದೆಯುಂಟೆ ಮನಮಿರ್ದೊಡಂ?
ಸಮಿತಿ ಹೃದಯವನರಿತನಸುರೇಂದ್ರನುತ್ತರಂ
ಗುಡುವ ಮುನ್ನೆತ್ತಿದನು ತಾನೆ ಆ ಪ್ರಶ್ನೆಯಂ:
''ನಿಮ್ಮೆರ್ದೆಯೊಳೇಳ್ವ ಚಿಂತಾವೀಚಿಗಳಿಗೆನ್ನ
ಚಿತ್ತಮನುಕಂಪಿಸಿಹುದಾದೊಡಂ, ಇಂದೆನಗೆ
ನಿಮಗೆ, ನಾನೊರೆದುದಲ್ಲದೆ ಬೇರೆ ಬಟ್ಟೆಯಂ
ಕಾಣೆನಾಂ. ಲಂಕೆಯೊಳ್ ವಿಕ್ರಮಿಗಳಿಲ್ಲೆಂದು,
ಮರಣಕಂಜುವಿರೆಂದು, ರಣಕೆ ಮನಮಿಲ್ಲೆಂದು,
ಮೇಣ್ ಕ್ಷಾತ್ರತೇಜಸ್ ತರಂಗಿಣೀ ಜೀವನಂ
ರಿಪುವೀರ್ಯ ವೈಶಾಖದಾಹಕಾರಿದುದೆಂದು,
ನಿಮ್ಮ ಕೀರ್ತಿಯ ಕಾಮಧೇನುವಿನಮೃತಮಂ
ನಾನೊರ್ವನೆಯೆ ಕುಡಿವ ಲೋಭ ಬುದ್ಧಿಯೊಳಿದಂ

ಪೇಳ್ದೆನಿಲ್ಲಾನೀ ಕದನ ಹದನಮಂ. ದಿಟಂ
ಗುಹ್ಯಮೊಂದಿರ್ಪುದೀ ಮನ್ಮನೋನಿಶ್ಚಯದಿ;
ನಿಮಗರಿಯಲಾರದುದು, ನನಗುಸಿರಬಾರದುದು!
ನಾನುಸಿರದಿರ್ದೊಡಂ ನೀಮರಿಯಬಹುದದಂ
ನಾಳೆ, ವಿಜಯಧ್ವಜಂ ನಗರ ಗೋಪುರವೇರಿ,
ಲೋಕಕದ್ಭುತ ವಾರ್ತೆಯಂ ಸಾರಿ, ಬಾನೆಡೆಗೆ
ಶಿರವೆತ್ತಿ ತಲೆಯೊಲೆದು ದೈತ್ಯರೌನ್ನತ್ಯಮಂ
ತೋರಿ. ಹಾರಾಡುವಾ ವೇಳೆ...
                    "ಚಿಂತಿಸದಿರಿಮ್
ನನ್ನುಸಿರ್ಗೋಸುಗಂ. ವಿಧಿಹಸ್ತ ವಜ್ರದೊಳ್
ವರ ವರಶಲಾಕಾ ರಚಿತ ಪಂಜರದ ಪಕ್ಷಿ
ತಾನೇಗಳುಂ ದಲ್ ಸುರಕ್ಷಿತಂ, ಸಂಕ್ಷೇಮಿ.
ಕೃಪೆಯಿಂ ಪಿತಾಮಹ ಚತುರ್ಮುಖಂ, ಪರಮೇಷ್ಠಿ
ನನಗೆ ಮೆಚ್ಚುತೆ ತಪಕೆ, ವರಬಲದೊಳೆನ್ನಂ
ಅಜೇಯನಂ ಮಾಡಿದನ್. ದಿವ್ಯ ರಥ ದಿವ್ಯಾಶ್ವ
ದಿವ್ಯಧನು ದಿವ್ಯಾಸಿ ದಿವ್ಯ ಕವಚಂಗಳಿಂ.
ದಿವ್ಯ ಚರ್ಮಂ ದಿವ್ಯ ತೂಣೀರಮಕ್ಷಯಂ
ಮಂತ್ರಾಸ್ತ್ರ ಶಸ್ತ್ರಂಗಳಿಂ ನಾನಜೇಯನಾರ್ಗಂ,
ಧೂರ್ಜಟಿಯೆ ತೋಳ್‌ತಟ್ಟಿ ಬಂದೊಡಂ! ಮತ್ತಮ್
ಒಂದುರುಳಲಿನ್ನೊಂದು ಪತ್ತು ಸೂಳ್‌ವರಮೆನಗೆ
ಶಿರಗಳಿರ್ಪುವು ಸಮರಕಾಳಿಗೆ ಸಮರ್ಪಿಸಲ್.
ಸಂಖ್ಯೆಗಾನೊರ್ವನೆಯೆ ಪೋದೊಡಂ, ಕಳಕೆ ನಾಂ
ಶಕ್ತಿಯಿಂ ದಿಟಮಸಂಖ್ಯನ್!
                    "ನಡೆವಮೀಗಳಾ
ಬ್ರಹ್ಮದತ್ತಂಗಳಂ ತೇರ್, ಕುದುರೆ, ಬಿಲ್, ಕತ್ತಿ,
ಮೆಯ್‌ಜೋಡು, ಪಲಗೆ, ತವಿಯದ ಬತ್ತಳಿಕೆ ಮೇಣ್
ಸರಳ್ಗಳಂ ಪೂಜಿಸಣಿಮಾಡುವಂ. ತರುವಾಯ
ನೋಡುತಿರಿಮೆತ್ತರದ ಕೊತ್ತಳಗಳಂ ಪತ್ತಿ:
ಮಿಳ್ತುವಿಗೊಸಗೆ ಮಾಡುವೆನ್; ಮತ್ತೆ ನೋಳ್ಪರ್ಗೆ
ಕಣ್ಗದ್ಭುತದ ಹಬ್ಬದೌತಣವನೂಡುವೆನ್!"
    ಚರು ರಕ್ತಬಲಿಗಳಿಂದಾಯುಧಾಗಾರದೊಳ್

ವಿರಚಿಸಿದರಾಯುಧರೂಪಿ ದುರ್ಗೆಗರ್ಚನೆಯನಾ
ರಾಕ್ಷಸ ಪುರೋಹಿತರ್. ಆರತಿಗಳೆತ್ತಿದುವು;
ವಾದ್ಯಗಳ್ ಮೊಳಗಿದುವು; ಘಂಟೆ ಜೇಗಟೆಯುಲಿಗೆ
ಬೆರಗಾಗಿ ಕಿವಿಯೆತ್ತಿದುವು ದಿಗುತಟದ ದಂತಿ.
ಪಾಡಿತೊಕ್ಕೊರಲಿಂದಮಿಂತಾ ಪುರೋಹಿತರ
ಪಂತಿ: "ಏಳ್, ಸರ್ವಶಕ್ತಿಸ್ವರೂಪಿಣಿಯೆ, ಏಳ್!
ಏಳ್ ಶತ್ರುಹೃದ್ರಕ್ತ ಪಾನ ಗೈಯಲ್ಕೆ ಏಳ್!
ಏಳ್, ಲಂಕೆ ಬಾಳಲ್ಕೆ! ಏಳ್, ವೈರಿನಾಶಕ್ಕೆ!–
ಏಳ್ ದೈತ್ಯ ನೃಪಚಂದ್ರ ರಾವಣಶ್ರೇಯಕ್ಕೆ!
ಏಳ್ ನರಾಧಮ ಕಪಿಪ್ರಾಣಾಪಹಾರಕ್ಕೆ!
ನೀನೆ ಹೃದಯದಿ ಧೈರ್ಯ! ನೀನೆ ಚಿತ್ತಸ್ಥೈರ್ಯ!
ನೀನೆ ತೇಜಂ ಬಾಳ್ಗೆ! ನೀನೆ ವೀರ್ಯಂ ತೋಳ್ಗೆ!
ನೀನೆ ಪ್ರಾಣದೊಳೊಲ್ಮೆ! ನೀನೆ ಬಾಣದಿ ಬಲ್ಮೆ!
ಚಾಪದೊಳ್ ಶಕ್ತಿ ನೀಂ! ಕಲಿಯಚಲ ಭಕ್ತಿ ನೀಂ!
ರಣದೊಳಾಸಕ್ತಿ ನೀಂ! ತೇರ್ ಕುದುರೆ ಶಕ್ತಿ ನೀಂ!
ಏಳ್, ಕಾಳಿ! ಏಳ್, ಚಂಡಿ! ಏಳ್, ದುರ್ಗೆ, ಚಾಮುಂಡಿ!
ಏಳು, ರಣಚಂಡಿ, ಏಳ್! ಏಳ್! ಏಳ್! ಏಳ್!"–
ವಾದ್ಯಗಳ್ ಘೋಷಿಸಿರೆ, ಹೋಮಾಗ್ನಿಗಳ್ ಜ್ವಲಿಸೆ
ಧೂಪಧೂಮಗಳೆದ್ದುವಂಬರಕೆ. ಕಾರಿದುವು
ಖಡ್ಗಗಳ್ ಕಾಂತಿಯಂ. ಮರ್ಮದೀಪ್ತಿಯನುಗುಳಿ
ಶೋಭಿಸಿತು ಕಾರ್ಮುಕಂ. ಪ್ರಾಣಮಂ ಪಡೆದಂತೆ
ಬಾಣಾಳಿ ತಳಿಸಿದುವು ತೂಣೀರದೊಳ್. ರಥಂ
ರಂಜಿಸಿತು ತನಗಿಳಿದುದೆನೆ ದಿವ್ಯ ಚೇತನಂ.
ಸ್ಯಂದನಾಗ್ರದ ತೇಜಿಯೋಜೆಯನದೇನೆಂಬೆ?
ಭಯರಸಕೆ ಪುಲಕಿಸಿತು ತನು ವಿಯನ್ನಿಲಯರ್ಗೆ
ಹೇಷಾಧ್ವನಿ ತರಂಗ ತಾಡಿತಕೆ!

ತಪ್ತಮೆನೆ

ಸಪ್ತ ಸಾಗರ ಚೇತನಂ ಕೂಗಿ ಕರೆದುದಯ್
ಕುಲಾದ್ರಿಕುಲಸುಪ್ತಿಯಂ: "ಬೇಗಮೇಳ್, ಪೋಗುವಂ.
ಬರ್ದಿಲರಂ ಬಾಯ್ಕೇಳಿಸಿದ ಜಗದ್‌ಭೀಕರಂ
ಪೃಥಿವಿಗೆರ್ದೆ ತಲ್ಲಣಿಸೆ ತೇರೇರುತಿಹನದೊ

ದಶಾನನಂ, ಲೋಕತ್ರಯಾದ್ಭುತಕೆ ರಿಪುಮಥನ
ರಣದೀಕ್ಷಿತಂ! ದಶರಥಾತ್ಮಜನ ತೋಳ್ಗಳಿಗೆ
ನೀಂ ಸ್ಥೈರ್ಯಮಾಗು; ನಾಂ ಧೈರ್ಯಮಾದಪೆನೆರ್ದೆಗೆ!''
ಮೂಡಿದಾದಿತ್ಯನ ಗಭಸ್ತಿಯಂ ಪ್ರತಿಫಲಿಸಿ
ಶಾತಕೌಂಭೋಜ್ವಲ ಬೃಹದ್ ವರೂಥಮೆಸೆದುದು
ಕಾಂಚನಾಚಲ ಶಿಖರ ಸನ್ನಿಭಂ. ರೌಪ್ಯಗಿರಿ
ಖಂಡ ಶೈಲಂಗಳೆನೆ ಪಂಕ್ತಿಧವಳಾಶ್ವತತಿ ತಾಂ
ರಾಜಿಸಿದುವಾ ತೇರ್ನೊಗಂಗಳಂ ಸಿಂಗರಿಸಿ.
ಸಮರೋಪಕರಣಗಳನಾಂತು ಸಾಲ್ಗೊಂಡಿತರ
ತೇರುಗಳ್ ಶ್ರೇಣಿಗೊಂಡುವು ಬಳಸಿ, ಸಲಗಮಂ
ಸುತ್ತಿ ಬರ್ಪಾನೆಗಳವೋಲ್. ಮಿಳಿರ್ದುದು ಮುಗಿಲ್
ಮುಟ್ಟಿ ನರ ರುಂಡ ಮಾಲಾ ಚಂಡಿಕಾ ಧ್ವಜಂ,
ನೆತ್ತರೋಕುಳಿ ವರ್ಣಗಳನೆರಚಿ, ದಿಗುಮೊಗಂ
ಕೆಂಪೇರ್ವವೋಲ್. ಧನುರ್ಬಾಣ ಮಂತ್ರಾಸ್ತ್ರಗಳ್,
ಶಸ್ತ್ರಗಳ್, ಶಕ್ತಿ ತೋಮರ ಪರಿಘ ಪರಶುಗಳ್,
ಪಟ್ಟಿಸಾದಿಗಳಿತರ ನಾನಾಯುಧಸ್ತೋಮ
ಭೀಮ ರಾಶಿಸ್ತೂಪಗಳ್, ನೋಳ್ಪ ಕಣ್ಣಂಜಿ
ಸೆಡೆತು ಗರಿಮುದುರಿ ನೀಡದೊಳಡಗುವಂದದಿಂ,
ಕಡು ಭಯಂಕರಮಾದುವೊಂದೊಂದು ತೇರೊಂದೊಂದೆ
ಕುಲದಾಯುಧಕೆ ಕುಲಂ ತಾನಾದುದೆಂಬಂತೆವೋಲ್!

ಪ್ರಸ್ಥಾನ ತೂರ್ಯ ಮಂಗಳ ಮಧುರ ಗೇಯಮಾ
ಸಂಗ್ರಾಮ ನಾಟಕಪ್ರಸ್ತಾವನೆಗೆ ನಾಂದಿ
ತಾನಾಗೆ, ಮಂದಾರ ಕುಸುಮ ಹಾರ ಸುಶೋಭಿ ಆ
ರಣವಸನಭೂಷಣಾಭೀಳ ಭವ್ಯಗಾತ್ರಂ,
ಸುಂದರಿಯರೆತ್ತಿದಾರತಿಯ ಪೊಳಪಿಗೆ ಪಣೆಯ
ಕುಂಕುಮದ ಬಿಂದು ಪಣೆಗಣ್ಣಾಗುತಿರೆ, ಮತ್ತೆ
ರುಕ್ಮಕರ್ಮದ್ಯುತಿಯ ವಸ್ತ್ರಶಸ್ತ್ರಗಳುರಿಯೆ ತಾಂ
ವೈರಿಗೊಡ್ಡಿದ ಚಿತೆಯವೋಲೆಸೆಯೆ, ರಾಕ್ಷಸ
ರಣಕಲಾ ವರೇಣ್ಯಂ, ಮಹಾತಿರಥನರಿಮಥನ
ಮಂದರಂ ರಥವೇರಿದನು ಶುಭಮುಹೂರ್ತದಲಿ
ವೈರಿ ಭೈರವ ಯುದ್ಧರುದ್ರಂ! ಪ್ರಚೋದಿಸಲ್

ಸೂತನಾ ಹಯತತಿ ಕೆನೆದು ಕುಪ್ಪಳಿಸೆ, ರಥಂ,
ನಡುಗೆ ಲಂಕಾ ಧಾತ್ರಿವಕ್ಷಂ ಮೇಣಯೋಧ್ಯೆಯೊಳ್
ಸರಯೂ ನದೀ ಜಲಂ ಕಳವಳಿಸುತಪ್ಪಳಿಸೆ
ತೀರಪ್ರದೇಶಮಂ, ದಾಂಟಿ ಪೆರ್ಬಾಗಿಲಂ
ಬಡಗಣಕೆ ನಡೆದುದ್ಯೆ ರಣಕೆ!
ಬೆರಗಿನೊಳಿರ್ದು
ಕಂಡುದು ಕಪಿಧ್ವಜಿನಿ, ಪರಿವಾರಮಾತ್ರಮೆನೆ
ತೇರ್ಗಳಾ ಬೆಂಬಲಂ ಬಡೆದು ಧಾವಿಸುತಿರ್ದ
ದೈತ್ಯನ ವರೂಥಮಂ. "ಕಾಣ್ ಚಂಡಿಕಾ ಧ್ವಜಂ.
ಇದೆ ಕಣಾ ದೈತ್ಯೇಂದ್ರ ರಾವಣ ವರೂಥಂ!
ವಿಭೀಷಣಂ ಪೇಳ್ದುದೆ ದಿಟಂ. ನಿನ್ನೆ ಬಹುರೂಪಿ
ಕಾಳಗಂಗೊಟ್ಟನಿಂದೇಕಾಂಗಿಯೆನೆ ತೋರ್ದು
ಬರುತಿರ್ಪನೈಸೆ ನೀಚಂ! ಮತ್ತಿದೇನವನ
ವಂಚನೆಯೊ? ನುಗ್ಗಿ ತಳ್ವದೆ ತಡೆಯಿಮಸುರನಂ!"
ವಾನರ ಮಹಾಚಮೂ ವ್ಯೂಹಮುಖದೊಳಗಿರ್ದ
ದಳಪತಿ ದರೀಮುಖಂ ತನ್ನ ಪಡೆಗಾಜ್ಞೆಯಂ
ಕೈಬೀಸಿ ಬೆಸಸಿ ನುಗ್ಗಿದನು ತಾನೆಯೆ ಮುಂದೆ
ರಾವಣೋಲ್ಕೆಯ ಮರಣಮಯ ಪಥಕೆ, ಗದೆಯೆತ್ತಿ
ರಥಕೆ. ಪಿಂತಣ ಕದನದಂದಮೇನಿಂದಿನ
ಮಹಾಹವಂ? ಬಡಿಗೆ ಬಡಿದಳಿವಂದಮಲ್ತಿಂದು
ಬರಸಿಡಿಲ್ ತಾಂಗಿದೊಡನೆಯೆ ಹರಣಮಂ ಪೀರ್ವ
ಪಾಂಗದು ಕಣಾ! ದಶಮುಖ ಧನುಶ್ಚ್ಯುತಂ, ಕೇಳ್,
ಶಿಲೀಮುಖಂ ಸೀಳ್ದುದು ದರೀಮುಖನ ಗದೆಯಂ;
ಕತ್ತಿದತ್ತೆತ್ತಿದಾತನ ತೋಳನೊಯ್ಕನೆಯೆ
ತೋಡುತಕ್ಷಿಯನಿರದೆ ಪೊಕ್ಕುದು ಕಪಾಲಮಂ;
ಓಡೊಡೆದು, ನೆತ್ತರ್‌ವೆರಸಿ ಮಿದುಳ್ ದಿಗುದೆಸೆಗೆ
ಸಿಡಿಯೆ, ದೊಪ್ಪನೆ ಕೆಡೆದು, ಕೈಗೆದರಿ ಕಾಲೊದರಿ
ಶವವಾದನಾ ಭೀಷ್ಮ ಕಲಿ ವಾನರಂ! ಸ್ವಾಮಿ
ಸತ್ತುದೆ ತಡಂ ರೋಷವಿರ್ಮಡಿಸಿ ಮೇಲ್ವಾಯ್ದು,
ಕೂಡಿಟ್ಟ ತುಪ್ಪಕ್ಕೆ ಕೊಳ್ಳೆಬಪ್ಪಾತನಂ
ಜೇನ್ಪುಳು ಮುಸುರ್ವವೊಲ್, ದೈತ್ಯನ ವಿರೂಥಮಂ

ಮುತ್ತಿದುದವನ ಸೇನೆ. ತಾಮಸಾಸ್ತ್ರವನೆಚ್ಚು
ಕಿರ್ಚ್ಚಿಗಾಹುತಿಗೊಂಡನಾ ದರೀಮುಖ ದಳ
ಸಮಸ್ತಮಂ. ಕೊಂದು ಕೊಂದಂತಕ ಭಯಂಕರಂ
ಮುಂದೆ ನುಗ್ಗಲ್, ದೈತ್ಯ ಶಾರ್ದೂಲ ನಖ ಭಯಕೆ
ಹಿಂಜರಿದು ಸರಿದೋಡತೊಡಗಿದರು ವಾನರರ್
ಪಶುವಿಂಡೆನಲ್: ಕವಿದುದಾಕಾಶಮಂ ಘೋರ
ಪದಧೂಳಿ!
ಕಂಡರಂಗದನಾಂಜನೇಯಾದಿ
ಪ್ಲವಗೋತ್ತಮರ್ ಪಲಾಯನ ಪಟು ಕಪಿಧ್ವಜ
ರಜೋಪಟದ ವಿಸ್ತರಣವೇಗಮಂ; ರಾವಣ
ಮಹದ್‌ಧನುರ್ ಮೌರ್ವೀ ಸ್ಫುರಿತ ವಿಷ್ಣುಚರಣಮಂ;
ರಣಧರೆಯೊಳೆಲ್ಲಿಯುಂ ಬಾಣರೂಪದೊಳೆರಗಿ
ವಾನರಪ್ರಾಣಂಗಳಂ ಪೀರ್ದು ರಿಂಗಣಗುಣಿವ
ದುರ್ಮರಣಮಂ. ನೀಲ ನಳ ಜಾಂಬವರ ಕೂಡಿ,
ಕೆಟ್ಟುಕೆದರೋಡುತಿರ್ದಾಳ್ಗಳಂ ಕರೆಕರೆದು
ತಡೆತಡೆದು ಧೈರ್ಯಮಂ ನೀಡಿ ಹುರಿದುಂಬಿಸುವ
ಯತ್ನಮಂ ಮಾಡಿ, ಲಂಕೇಶ್ವರನ ತೇರ್ಗಿದಿರ್
ಮೇಲ್ವಾಯುತಿರ್ದುದಂ ನೋಡಿ ದನುಜಾರಾತಿ
ಬೆಸಸಿದನು ಕರೆದು ಸುಗ್ರೀವನಂ:
"ನಿಲಲ್‌ವೇಳ್,
ಕಪಿನೃಪೋತ್ತಮ, ಆ ಅಸೀಮ ಸಾಹಸಿಗಳಂ!
ನಳ ನೀಲ ಜಾಂಬವಾಂಗದ ಹನುಮ ಮೈಂದಾದಿ
ಕಲಿಗಳಿಂದೀ ಮಹಾ ದೈತ್ಯ ರಣರುದ್ರನಂ
ಕೆಣಕಿ ಬಾಳ್ವೆರಸಿ ಪಿಂತಿರುಗಲರಿಯರ್ ಕಣಾ!
ಮತ್ತೇತಕಿತರರಂ ನೂಂಕುತಿರ್ಪರು ಬರಿದೆ
ಕುರಿಗೊಲೆಗೆ? ಇಂದಿನಾಹವಮೆನಗೆ ಮುಡಿಪಲ್ತೆ?
ಪುಡುಕುತಿಹನಸುರೇಂದ್ರನೆನ್ನನೆಯೆ ಕಾಣ್, ಕಡಲ್
ಬಳಿಸಾರೆ ಪೊಳೆ ಪುಡುಕುವಂತೆ. ಇಂದವನ ಈ
ತೇಜಮಂ ತಡೆವರೊಳರೇ ಭುವನ ಮೂರರಲಿ?
ತನ್ನಂ ಸಮೀಪಿಸಿದ ನದಿಯನೇಂ ತಡೆಯಲಾ
ಶರಧಿಯುಂ ಪೇಳ್ ಸಮರ್ಥಮಪ್ಪುದೆ? ಮತ್ತಮಿನ್

ತಡೆಯಲೆಳಸುವ ಮಲೆಯ ಪಾಡೇನ್? ಪೊನಲ್‌ಬಿರುಬು
ನುಚ್ಚುನೂರ್ ಕೊಚ್ಚುವುದು!–ಕರೆ ಬೇಗಮನಿಲಜನ
ಕೂಗು ನಳನಂ! ಸರಿಯವೇಳ್ ವಾಲಿಪುತ್ರಂಗೆ!
ತೊಲಗಿಸಾ ಮುದಿ ಜಾಂಬವನನಸುರ ದೃಷ್ಟಿಯಿಂ!
ಸರಿಯಲಿ ಕಪಿಧ್ವಜಿನಿ ಪಿಂದೆಸೆಗೆ! ಬಟ್ಟೆಗೊಡು,
ಬಟ್ಟೆದೋರೆನ್ನೆಡೆಗೆ ರಾಕ್ಷಸಗೆ! ಬೆಂಕೆಯಂ
ಬೆಂಕೆಯ್ಯೆಸಲೆ ನಂದಿಪುದು? ಬಡಬನಂ ಕುಡಿಯೆ,
ಕಡಲಲ್ತು, ಬೇಳ್ಕಾ ತ್ರಿಣೇತ್ರ ವೈಶ್ವಾನರಂ!"
ಸುಗ್ರೀವನಾಜ್ಞೆಯಿಂ ಸರಿದುದು ಬಲಾಂಭೋಧಿ
ರಘುವೀರನಾಶ್ರಯಂಬುಗುವಂತೆವೋಲವನ
ಬೆನ್‌ಬಲಕೆ. ಬತ್ತಲಂಬುಧಿ ತೋರ್ಪವೋಲೊಡನೆ
ಔರ್ವಂ, ಧನುರ್‌ಮಧ್ಯಮಂ ಪಿಡಿದ ಮುಷ್ಟಿಯಿಂ
ದನುಜರಥ ಸಂಲಗ್ನ ಕಾಳೋಗ್ರದೃಷ್ಟಿಯಿಂ
ಬಾನ್‌ಬುವಿಯನಳೆವವೋಲೆಸೆದನ್ನೆ ರಾಮನೊರ್ವಂ,
ಕೆರಳೆ ರಾವಣ ರಾಹುಗರ್ವಂ: "ಇವನಲಾ ದಿಟಂ
ಜನಕತನುಜಾ ಪ್ರಾಣ ಕನಕಮಂದಿರ ಮೂರ್ತಿ!
ಇವನಲಾ ಸೀತಾ ಹೃದಯ ಧೈರ್ಯಸಾಗರಂ!
ಇವನಲಾ ಸೀತಾ ಮನಸ್ಥೈರ್ಯ ಮಂದರಂ!
ಆ ಪೂಜ್ಯೆ ಪೂಜೆ ಸಲ್ಲಿಸುವನಿತು ಅರ್ಹನೆ
ಇವನ್? ನನ್ನಹಂಕಾರಮಂ ತನ್ನ ಪದತಲದಿ,
ಹಸ್ತಿ ತಾಂ ಖರ್ಪರಕೀಟಮಂ ನುರ್ಚ್ಚುಗೈವಂತೆ,
ತೀಡಿತಿಕ್ಕಿದ ದೇವಿಯಾರಾಧಿಸುವಳಿವನ
ಕಾಲಡಿಯ ಪುಡಿಗರ್ಪಿಸುತ್ತೆ ತನುಮನಸಹಿತ
ತನ್ನಾತ್ಮ ಸರ್ವಸ್ವಮಂ. ಧನ್ಯೆಯೊಲಿದಿವಂ
ಧನ್ಯನೆ ವಲಂ! ಬರಿಯ ಕಲ್ಪನಾದೇವತೆಯೊ?
ನಿಜದೊಳೀತಂ ಪತಿವ್ರತೆಯ ಆರಾಧನೆಗೆ
ಯೋಗ್ಯಪಾತ್ರನೊ? ನೋಳ್ಪೆನೆನ್ನ ತೋಳೊರೆಗಲ್ಗೆ
ತೀಡುತೀತನ ತಪಸ್‌ಸತ್‌ತ್ವಮಂ. ಪುಸಿಗೆನ್ನ
ಪೂಜೆ ಸಲ್ಲದು, ಸೀತೆಗಾದೊಡಮವಳೊಲಿದ ಈ
ನರನಾಥಗಾದೊಡಂ. ಅಂದಾ ಸ್ವಯಂವರದಿ
ನಾನಿರದ ಪೊಳ್ತು ಹರಧನುವನೆತ್ತಿದುದಿರ್ಕೆ.

ಮಿಥಿಳೇಂದ್ರನಂ ಮೆಚ್ಚಿಸಿದ ಸುಲಭ ಕಲಿತನಂ
ನಡೆಯದಿಲ್ಲಿಗೆ. ಮಾವನಿಂದು ಲಂಕೇಶ್ವರಂ.
ಮೆಚ್ಚಿಸೆನ್ನಂ ಪಡೆಯವೇಳ್ಕುಮಾಂ ಪುಟವಿಟ್ಟು
ಮೊದಲಿಗಿಂ ನೂರ್ಮಡಿಯೆ ತಳತಳಿಸಿ ಪೊಳೆವಂತೆ
ಮಾಡಿ ಕೊಡಲಿರ್ಪೆನ್ನ ಪೊಡವಿಮಗಳಂ!''
ಇಂತು
ತರತರದ ಚಿಂತೆಯ ತಟಿಲ್ಲತೆಗಳಿಂ ಮನದ
ಕಾರ್ಮುಗಿಲ್ ಮಿಂಚುತಿರೆ, ತಿರುವನೇರಿಸಿ ಬಿಲ್ಗೆ
ಹೆದೆಯ ದನಿಗಾಲಿಪರ್ಗೆದೆ ನಡುಗೆ ಜೇಗೈದು,
ತೇರ್ಗಾಲಿ ಗರಗಸಕೆ ತಿರೆ ಘರ್ಘರಿಸುವಂತೆ
ಮುಂಬರಿದು ಕರ್ರನೆರಗಿದನವನಿಜಾತೆಯ
ಮನೋಹರನ ಹರಕೋಪಭೀಷಣಗಿರಿಯ ಗ್ರೀಷ್ಮ
ಸಮ್ಮುಖಕೆ. ತನ್ನ ವಕ್ಷವನರಸಿ ಬರ್ಪಾ
ನದೀಯುದಕವಾಹಕ್ಕೆ ಸುಸ್ವಾಗತವನಿತ್ತು,
ಜೀವನವನಾಸ್ವಾದಿಸುತ್ತಿರ್ಪಂಟೆ, ವಾಹಿನೀ
ಪ್ರಾಣಮಂ ಪೀರ್ವೊಂದು ಬಿರುವುರಿಯ ಬಿತ್ತರದ
ಮರುಭೂಮಿಯೆನೆ, ರುಂದ್ರ ಸತ್ತ್ವಂ ರಘೂದ್ವಹಂ
ದೃಷ್ಟಿ ಭೈರವನಾಗಿ ಖತಿಗೊಂಡ ಫಣಿಯಂತೆ
ಸುಯ್ ಸುಯ್ದು ನಿಂದಿರ್ದನಾಕಾಶದಲಿ ನೆರೆದ
ದೇವತಾತ್ಮಗಳುಸಿರ್ ಕೊರಳೊಳಗೆ ಕುಂಭಕಂ
ಪಡೆಯೆ. ದೃಷ್ಟಿಯಿನೊರ್ವನೊರ್ವನಂ ತೂಗುವೋಲ್
ಅಳೆವವೋಲನಿಮೇಷ ಬದ್ಧಭ್ರುಕುಟಿಗಳ್
ಸಮೀಕ್ಷಿಸಿದರರಿಬಲಕೆ ಒರೆಹಚ್ಚುವೋಲ್, ತನ್ನ
ಶಕ್ತಿ ಪೊರೆಯುರ್ಚುವೋಲ್, ಮೇಣ್ ವೈರಮೊರೆಗಳಚುವೋಲ್.
ರಾಮರಾವಣರಾ ಮಹದ್‌ದೃಷ್ಟಿಯುದ್ಧದೊಳ್
ಭಾಗಿಯಾದುದು ಸೃಷ್ಟಿ. ವಿಶ್ವದ ಚರಾಚರ
ಸಮಸ್ತ ಶಕ್ತಿದ್ವಂದ್ವ ತತ್ತ್ವಗಳುಮಿರ್ಕಡೆಗೆ
ಸರಿದುವು ಹಿತಾಹಿತದ ಪಕ್ಷಮಂ ಸಹಜಮೆನೆ
ತಮತಮಗೆ ನಿಶ್ಚಯಿಸಿ ವಹಿಸಿ: ಗರುಡನಿತ್ತಲ್
ಸರಿಯೆ, ಸರಿದುದು ಸರ್ಪಮತ್ತಲ್. ಇತ್ತಲ್ ಸಿಂಗಮ್
ಅತ್ತಲ್ ಗಜಂ; ಇತ್ತ ಪಗಲತ್ತಿರುಳ್; ಇತ್ತ ರವಿ,

ರಾಘುವತ್ತಲ್. ಕಾಂತಿಯೀ ಕಡೆಗೆ, ಕಳ್ತಲಾ
ಕಡೆಗೆ; ಸುಖವಿತ್ತಣ್ಗೆ ದುಃಖಮತ್ತಣ್ಗೆ; ಸತ್ಯಂ
ಈ ದೆಸೆಗೆ, ಮಿಥ್ಯೆ ಆ ದೆಸೆಗೆ; ಇತ್ತಲ್ ಮುಕ್ತಿ,
ಅತ್ತಲ್ ಮಾಯೆ; ವೃತ್ರನತ್ತಲ್, ಇಂದ್ರನಿತ್ತಣ್ಗೆ!
ನಿಂದುದು ಜೀವ ರಾಮನ ದೆಸೆಗೆ; ನಿಂದುದು ಜಡಂ
ರಾವಣನ ದೆಸೆಗೆ. ಬಂದನು ಶಿವಂ ದಶರಥ
ಕುಮಾರನಾತ್ಮಕ್ಕೆ; ಬಂದಳು ಶಕ್ತಿ ದಶಶಿರ
ಹೃದಯಮಂದಿರಕೆ. ದಿವಾಕರ ಕುಲ ಲಲಾಮನಂ
ಒಲಿದು ನೆರೆದುದು ಪರಮ ಚಿಚ್ಛಕ್ತಿ; ದೈತ್ಯಕುಲ
ಸಾಗರ ಸುಧಾಕರನ ಹೃದಯಕವತರಿಸಿದುದು
ಆದ್ಯಾ ಅಚಿಚ್ಛಕ್ತಿ!
ಅತ್ತಾ ಅಯೋಧ್ಯೆಯಲಿ
ಸರಯೂ ನದಿಯ ನಕ್ರಕುದ್ಭವಿಸಿ ವೈರಾಗ್ನಿ
ಕೆರಳಿ ಕರೆದುದು ಕಾಳಗಕೆ ಮಹಾಮಕರಮಂ
ಕೆಣಕಿ. ಮೇಣಾ ಶೃಂಗಿಬೇರಪುರದಡವಿಯಲಿ
ಕಾಲ್‌ಕೆರೆದು ಕಾಳ್ಬೆಕ್ಕು ಮಲೆತುದು ತರಕ್ಷುವಂ.
ಮತ್ತಾ ಭರದ್ವಾಜನಾಶ್ರಮದಿ ಕೋಳ್ಮಿಗಕೆ
ತೆಕ್ಕನಚ್ಚರಿಯೆನಲ್ ಮೂಡಿ ಹಿಂಸಾಬುದ್ಧಿ
ತೃಷ್ಣೆಯಿಂ ನೋಡಿದುದು ಬೆಳ್ಮಿಗದೊಡಲ ಪುಷ್ಪ
ಮಾಂಸತ್ವಮಂ. ಚಿತ್ರಕೂಟದಲಿ ಹೊಡೆತುಂಬೆ
ತಿಂದು ಮಲಗಿರ್ದೊಂದು ಹೆಬ್ಬುಲಿಗೆ ಕನಸಾಯ್ತು,
ಕಾಳ್ಕೋಣವೊಂದು ತನ್ನಂ ತಿವಿಯೆ ತಲೆಮಲೆತು,
ಕೋಡಣೆದು, ಗುಟುರಿಕ್ಕಿ ಧಾವಿಸುವವೋಲ್. ಕಾಡು
ನಡುಗುವಂತಾರ್ಭಟಿಸಿ ನೆಗೆದೆದ್ದ ಪೆರ್ಬುಲಿಗೆ
ಕಾಣದಿರೆ ಕಾಡುಕೋಣಂ, ಪುಡುಕತೊಡಗಿದುದು
ಕಿರ್ಚೆದ್ದ ಪಗೆತನದ ಭೀಷಣೋತ್ಸಾಹದಿಂ.
ಪಂಚವಟಿಯಲ್ಲಿ, ಗೋದಾವರಿಯ ತಟಿಯಲ್ಲಿ,
ಪಾಳ್‌ಕೆಡೆದ ಕುಟಿಯಲ್ಲಿ ಬೀಡುಗೊಂಡಿರ್ದೊಂದು
ಕೃಷ್ಣಸರ್ಪನ ಕೆಣಕೆ ಮುಂಗುಸಿಗದೇನುರ್ಕೊ
ಕುದಿದುರ್ಕಿದುದೊ! ಮಲೆತು ಪಾಯಲಾ ಫಣಿಯೋಡಿ
ಪುತ್ತೊಂದನಾಶ್ರಯಿಸಿ ರೋಷದಿಂ ಪಡಿಮಲೆತು

ಹೆಡೆಯೆತ್ತಿದತ್ತು!
ಇಂತಿಂತಯೋಧ್ಯೆಯೆ ಮೊದಲ್
ಲಂಕೆ ತುದಿಯಾಗಿ ರಾವಣರಾಮದೃಷ್ಟಿಗಳ್
ಮಿಂಚೆನಲ್ ಸಂಚರಿಸುತಿರೆ ಚರಾಚರದುಸಿರ
ಸಂಚಾಗಿ, ಕೋಪಶಾಪಕೆ ತಾಮಸಾಸ್ತ್ರಮಂ
ಪೂಡಿದನು ರಾತ್ರಿಂಚರೇಶ್ವರಂ; ಸಿಂಜಿನಿ ಸಿಡಿಲ್
ಬಡಿಯಲೆಚ್ಚನ್ ಸ್ವಯಂ ಬ್ರಹ್ಮನಿರ್ಮಿತಮದಂ,
ದುರ್ಗ ಪತ್ತನದೆತ್ತರದ ಕೊತ್ತಳಂಗಳಲಿ
ನೆರೆದು ನಿಟ್ಟಿಸುತಿರ್ದ ಲಂಕಾಪ್ರಜಾಹೃದಯ
ಸಂತೋಷ ಘೋಷಮಂಬರದೊಳಲೆಯಲೆಯೆ.
ಬರಿ ನಿಮಿತ್ತಮಲಾ ಶರಂ, ಮತ್ತಮಾ ದೈತ್ಯ
ಮಂತ್ರಾಕ್ಷರೋಚ್ಚಾರಣಂ; ಪ್ರಾಣಬಲಮೈಸೆ
ತನಗಾ ಹಿರಣ್ಯಗರ್ಭನ ವರಂ! ಜ್ವಾಲೆಗಳ್
ಧೂಮ ಪೂತ್ಕಾರಕಾಸ್ಫೋಟನಾಭೀಳಗಳ್
ಭೀಳತೊಡಗಿದುವುಳ್ಕೆಗಳವೋಲ್. ಒರಲ್ದುದು
ಕಪಿಧ್ವಜಿನಿ. ಸುಟ್ಟುರಿದು ಬಿದ್ದರು ಕೆಲರ್; ಕೆಲರ್
ಬೂದಿಯಾದರ್; ಕೆಲರ್ ಮತ್ತಮತಿಗಳವೋಲ್
ಅಸಂಬದ್ಧಮಾಳಾಪಿಸುತ್ತೋಡಿದರು ಪದಂ
ಪೊತ್ತೋಡಿದತ್ತಣ್ಗೆ. ನೀಲ ಮಾರುತಿ ನಳಂ
ಸುಗ್ರೀವ ಜಾಂಬವಾಂಗದ ಸುಮಿತ್ರಾತ್ಮಜರ್
ತಂತಮ್ಮ ಸಮರಸಾಧನಗಳಂ ತುಡುಕಿ ಮುನ್
ಪಾಯಲೆಳಸುತಿರಲಸುರೇಂದ್ರ ಸಮ್ಮುಖಕೆ, ಕಣ್
ಸನ್ನೆಯಿಂದವರನಿರವೇಳ್ದು ಕೋದಂಡಮಂ
ಕೋದು ನಾದಂಗೆಯ್ದನವನಿಜಾವಲ್ಲಭಂ
ಮೇದಿನಿ ಬಿರಿದುದೆಂಬಿನಂ. ನೋಡುವನಿತರೊಳೆ
ಪೊಣ್ಮಿದಾದಿತ್ಯ ಸಾಯಕಮಸುರ ಬಾಣಮಂ
ತಣ್ಗೊಳಿಸಿ, ಕಾರಿದುದು ಪಂಚಶೀರ್ಷಾಗ್ನಿಮಯ
ನಾರಾಚವರ್ಷಮಂ. ಎಲ್ಲಿ ಕಣ್ಣಿಡಲಲ್ಲಿ
ಕಿಡಿಕಿಡಿದು ಸಿಡಿದು ಬಿದ್ದುವು; ಪೊಗೆದು ಪೊತ್ತಿದುವು;
ಚಿಮ್ಮಿ ತೇರಾಳ್ಗಳಂ ತಾಗಿದುವು; ಕೇಸುರಿಗೆ
ಕಣ್‌ಬೆದರಿ ಗಾಯಗೊಂಡಶ್ವಗಳ್ ಸ್ಯಂದನಂ

ವೆರಸಿ ದೆಸೆಗೆಟ್ಟೋಡಿದುವು; ಚೀರಿದತ್ತಸುರ
ಪರಿವಾರ!
ಪೇಳ್ವುದೇನಾ ಬಳಿಕಮಾದುದಂ,
ರಾಮ ರಾವಣ ಬೃಹದ್ ದ್ವಂದ್ವರಣರುಂದ್ರಮಂ!
ಶಸ್ತ್ರಪಂಡಿತರಿರ್ವರಸ್ತ್ರವಿದರಿರ್ವರುಂ;
ಇರ್ವರುಮಮರ್ತ್ಯ ಗಾತ್ರರ್; ಮತ್ತಮಿರ್ವರುಂ
ತಪೋಬಲದೊಳಪ್ರಾಕೃತರಮರ್ತ್ಯ ಪಾತ್ರರ್;
ಅಸೀಮ ಸಾಹಸರನಾಸಾಧ್ಯ ವಿಕ್ರಮರತುಲ
ವಿಜಿಗೀಷುಗಳ್. ಅಭ್ರಸಮನಿವನ್, ಅಂಭೋಧಿ
ಸಮನವನ್; ಅದ್ರಿಸಮನವನ್, ಅಗ್ನಿಸಮನಿವನ್!
ನಂದನದ್ರುಮ ಕುಸುಮ ವರಣ ಮಾಲಾಹಸ್ತೆ,
ರಾಮ ರಾವಣ ಜಯಾಪಜಯ ಶಂಕಾಗ್ರಸ್ತೆ,
ಮೇಘ ಮಂಚದೊಳಿರ್ದು ಅತ್ತೊಮ್ಮೆ ಇತ್ತೊಮ್ಮೆ
ತನ್ನ ಮನದುಯ್ಯಲೆಯೊಳೋಲಾಡಿದಳ್ ಭ್ರಾಂತೆ,
ಸಂಭ್ರಾಂತೆ, ಭಯಚಕಿತೆ, ಜಯವನಿತೆ!
"ಪಾಣ್ಬೆ ನೀನ್,
ಕಾಣ್ಬೆಯೆಂತುಟು ದಿಟದ ಸತ್ತ್ವಮಂ? ದಶಮುಖಗೆ
ಮಾರಾಂತು ಬರ್ದುಕಿ ಪೋಪನೆ ದಶರಥಾತ್ಮಜಂ?
ಮುನಿಯ ಮೋಹಕ್ಕೆ ಪೆಣ್ಗೊಲೆಗೆ ಕೈಯಿಕ್ಕಿದಾ
ಅರಗುಲಿಗೆ ದೊರೆವುದೆ ಜಯಂ? ಬರಿದೆ ತೂಗುತಿಹೆ
ಏಕೆ ಅತ್ತಿತ್ತಲಾ ದಿವಿಜ ಸುಮ ಹಾರಮಂ,
ತಕ್ಕಡಿವಿಡಿದ ಜಿಪುಣನೋಲ್? ಲೋಕದೇಕೈಕ
ವೀರನಾ ದೈತ್ಯಕುಲ ರಾಜರಾಜೇಶ್ವರನ
ಕೊರಳಿಗರ್ಪಿಸುತದಂ ಧನ್ಯಗೆಯ್! ನೀನುಂ,
ವಿಜಯಲಕ್ಷ್ಮಿ, ಧನ್ಯೆಯಾದಪೆ ಪತಿವ್ರತೆಯೆಂಬ
ಚಿರಕೀರ್ತಿಯಿಂ!"
ಗಜರುತಿರಲಿಂತು ತಾಟಕಾ
ಪ್ರೇತಕಂಠಂ, ಖಂಡತೋಯದಾಕಾರದಿಂ
ಮೆಯ್ಗರೆಯುತಭ್ರಮಂಡಲದೊಳಿರ್ದಮರಕಲಿ
ದಿವ್ಯಜೀವಂ ನುಡಿದನು ಜಟಾಯುದೇವಂ
ಜಯಾಂಗನೆಗೆ:

"ಖಿನ್ನಳಾಗದಿರಾ ಪಿಶಾಚಳ
ನುಡಿಗೆ, ದೇವಿ. ಪುಣ್ಯಗಂಧವನರಿಯ ಬಲ್ಲುದೆ
ದುರಿತನಾಸಿಕಂ? ತನ್ನ ಕೊಲೆಯನಲ್ಲದೆ ಬೇರೆ
ಬೆಲೆಗಳಂ ತಿಳಿಯದೀ ಮಾರೀಚನವ್ವೆಯ
ಪರೇತಂ. ಪಿಶಾಚತ್ವಮಂ ತೊರೆಯಲೆನಿತೆನಿತೊ
ವೇಳ್ಕುಮೀಕೆಗೆ ಜನ್ಮಗಳ್! ತೊದಲಿವಳದಿರ್ಕೆ.
ಕಾಣಲ್ಲಿ ನಡೆವ ದಿವಿಜಾನುಸಂಧಾನಮಂ.
ಸನ್ನಾಹಗೆಯ್ವುರವತರಿಸುತಾ ವಾನರರ
ಹೃದಯಗಳಿಗಾಕ್ರಮಿಸಲವರ ತಾಟಸ್ಥ್ಯಮಂ,
ತಾಮುಮಸುರೇಂದ್ರನಂ ಸಂಹರಿಪ ಕರ್ಮದಲಿ
ಪಸುಗೆಗೊಳಲೆಳಸಿ. ಕಾಣ್ ಅಗ್ರಜಂ ಸಂಪಾತಿ
ತನ್ನ ತಮ್ಮನ ಕೊಂದವನ ತಲೆಗೆ ಸಂಚಾಗಿ
ಹೊಂಚುತಿಹನದೊ ರಾಮನ ನಿಷಂಗ ಪೇಟಿಕಾ
ವಿಷಧರವ್ಯಾಳೋಗ್ರ ಬಾಣಾಂಗಿಯಾಗಿ! ಬಿಡು,
ದೇವಿ, ಸಂದೇಹಮಂ: ಮೀಸಲಿಡು ಮಾಲೆಯಂ
ಕೋಸಲೇಶನ ಕೊರಲ ಕಾಣಿಕೆಗೆ!"

ದೈವೀ
ಪ್ರಭಾವಗಳ್ ಜ್ಯೋತಿಃಪ್ರವಾಹವೀಚಿಗಳಂತೆ
ವಾನರಧ್ವಜಿನಿಯ ಮನೋಮಯಕ್ಕಿಳಿವುದಂ
ಕಂಡುದೆ ತಡಂ ಸ್ಪರ್ಧಿಪಾಸುರೀ ಶಕ್ತಿಗಳ್
ತಾಮುಮವತರಿಸಿದುವು ತಿಮಿರಛಾಯೆಗಳಂತೆ
ಕನಕ ಲಂಕಾ ರಾಕ್ಷಸಪ್ರಜಾಪ್ರೇಕ್ಷಕರ
ರಣಮನೋರಥಕೆ. ದೈತ್ಯೇಶ್ವರಗೆ ಘೇ ಉಘೇ
ಎಂದಿತ್ತಲುಲಿದುದು ಲಂಕೆ; ರಘುಕುಲೇಶ್ವರಗೆ
ಘೇ ಉಘೇ ಎಂದತ್ತ ಕಿಷ್ಕಿಂಧೆ! ದಶಶಿರಗೆ
ಘೇ ಎಂದು ರಾಕ್ಷಸಧ್ವಜಿನಿ; ದಶರಥಸುತಗೆ
ಘೇ ಎಂದು ವಾನರಧ್ವಜಿನಿ! ಇಂತಿರ್ಕಡೆಯ
ವಾನರರ ರಾಕ್ಷಸರ ಸೇನಾ ಗಳಧ್ವಾನ
ಘಟ್ಟಣೆಗೆ ನಡುನಡುಗಿ ಮಾರ್ದನಿಯನೊರಲಿದುವು
ಲಂಬತ್ರಿಕೂಟವೇಲಾದ್ರಿಗಳ್; ಕುದಿವವೊಲ್
ಗದಗದಿಸಿ ವಾರ್ಧಿವೀಚಿಗಳೆದ್ದುವಲೆಯಲೆದು

ಗದೆಯುವ್ವಳಿಸಿದುವು ಮಹೇಂದ್ರಮೇಖಲೆಯಾದ
ಪರಪಾರಮಂ!
ಇಂತು ನೇತ್ರಭಾಗಿಗಳಾಗಿ
ರಾಮ ರಾವಣ ಸಮರಮಂ ನೋಡುತಿರ್ದರೊಳ್
ಮೂಡಿದತ್ತಿರ್ದ್ದಕಿರ್ದಂತೆ ತಮಗಾಜಿಯೊಳ್
ಕೂಡುವಾಸಕ್ತಿ. ಸೃಷ್ಟಿಯ ಚರಾಚರವೆಲ್ಲ
ಸಂಗಿಯಾಗಿರೆ ರಾಮರಾವಣ ಮಹಾ ಜಗತ್
ಸಂಗ್ರಾಮದಲಿ, ಮುಕ್ತಸಂಗಮೆಂತಪ್ಪುದಯ್
ನಿಂದು ನಿಟ್ಟಿಸುತಿರ್ದ್ದ ಲಂಕೆ ಕಿಷ್ಕಿಂಧೆಗಳ
ಸಮರ ಸಾಮೂಹಿಕ ಚಮೂಚೇತನಂ? ತನ್ನ
ಕೈಯ ಕೈದುವನೆತ್ತಿ ಕೂಗಿದನದೊರ್ವನ್
ಜಯಧ್ವನಿಯನುತ್ಸಾಹದಿಂ. ಕಾಣುತಿತ್ತಕಡೆ
ಕೈಯ ಕೈದುವನೆತ್ತಿ ಕೊರಳೆತ್ತಿದಾತನಂ,
ತಾನತ್ತಕಡೆಯೊರ್ವನುದ್ಯದಾಯುಧನಾಗಿ
ಕೂಗಿದನ್ ದ್ವಿಗುಣಮೆನೆ ಪ್ರತಿಪಕ್ಷದವನುಲಿಯ
ಗೆಲ್ವಂತೆವೋಲ್. ಮತ್ತಮಿತ್ತಕಡೆಯೊರ್ವನಾ
ಶತ್ರುವಿಂಗುತ್ತರವನೆಸೆವಂತೆ ಕೊರಳೆತ್ತಿ
ತೋಳೆತ್ತಿ ಬೀಸಿದನ್ ಕೈದುವನ್. ಕಂಡದಂ
ಅತ್ತಣಿಂದೆಸೆದನೊರ್ವಂ ತನ್ನ ಕೈಲಿರ್ದ
ಕೊಂತಮಂ. ಮತ್ತಿತ್ತಣಿಂದೆರಡು ಕೊಂತಗಳ್
ನೆಗೆದುವತ್ತಣ್ಗೆ! ಉತ್ತರವಾದುವತ್ತಣಿಂ
ಕಲ್ಗುಂಡು ಮರಮುಂಡು ಬುಡ ಬೇರು ಕೊಂಬೆಗಳ್
ಪೇಳ್ವುದೇನಾ ಬಳಿಂ? ನುಗ್ಗಿದತ್ತಿತ್ತಣಿಂ
ಕೈದುವೆತ್ತಿದ ಭಟರ್ ಜಯಘೋಷಗಳನೊದರಿ!
ಮೇಲ್ವಾಯ್ದರತ್ತಣಿಂ ರೋಷಕಾಕುಗಳುಲಿಯ
ಕದನಕಲಿಗಳ್! ತುಮುಲಮೆತ್ತೆತ್ತಲುಂ ತೊಡಗಿ
ತುಂಬಿದುದು ರಣಧರಣಿ, ತೊರೆದು ತಾಟಸ್ಥ್ಯಮಂ!
ಕಂಡನಸುರಕುಲೇಂದ್ರನಾಜಿರಂಗಕೆ ಧುಮುಕಿ
ಧಾವಿಸುತ್ತಿರ್ದ ವಾನರ ದಳ ಸಮುದ್ರಮಂ
ಶೋಷಿಸುವ ರೋಷದಿಂದುಗಿದನಾಸುರವೆಸರ
ಶರಘೋರಮಂ. ಸೂಕ್ಷ್ಮ ರೂಪದಿಂದಿಳಿತಂದು

ರಾಕ್ಷಸ ಸುಭಟರಂತರಂಗಮಮಂ ಪೊಕ್ಕಿರ್ದ
ಆಸುರೀ ಶಕ್ತಿಗಳ್ ಸುಪ್ರಕಟರೂಪದಿಂ
ದೈವೀ ಬಲಂಗಳೊಳ್ ಸೆಣಸಲಸುರನ ಕೈಯ
ಆಸುರಾಸ್ತ್ರದ ನೆವವನಾಶ್ರಯಿಸಿ ನಿಂದುವಯ್
ತವಕಿಸುತ್ತಾ ಇಷುಪ್ರಸ್ಥಾನದಾಶೀವಿಷ
ವಿಷ ಮುಹೂರ್ತಮಂ. ವೈರಿ ಹೃದಯಗಳನೊಡೆಯುತಿರೆ
ಜ್ಯಾರವಂ, ದನುಜ ಧನುವಿಂ ಚಿಮ್ಮಿದುದು ಶರಂ
ಕರ್ಬೊಗೆಯನುಗುಳುವಕ್ಷಯ ಗರ್ಭದಿಂ ಜಗುಳೆ
ನಾನಾಕೃತಿಯ ವಿಕೃತಿ ಶಕ್ತಿಯ ವಿರೂಪಗಳ್
ವಿಪ್ಲವಿಸಲಾ ಪ್ಲವಂಗಮ ಚಮೂಚಕ್ರಮಂ.
ತೊಟ್ಟನಾಗ್ನೇಯಮಂ ತನ್ನಿಷುಧಿಯಿಂದುಗಿದು
ಹೆದೆಗಿಟ್ಟನೆಚ್ಚನು ದಿವಾಕರ ಕುಲಂ, ಸೌರ
ಮಂತ್ರೋಕ್ತಿಯಿಂ. ದೇವಶಕ್ತಿಗಳದಂ ಪೊಕ್ಕು,
ದೇದೀಪ್ಯಮಾನ ನಾನಾ ಸ್ಫೂರ್ತಿಗಳನಾಂತು,
ಸೂರ್ಯನೋಲ್ ಚಂದ್ರನೋಲ್ ತಾರೆಯೋಲುಲ್ಕೆಯೋಲ್
ಧೂಮಕೇತುಗಳವೋಲ್ ಗ್ರಹಗಳೋಲ್ ವಜ್ರದೋಲ್
ವಿದ್ಯುದಹಿ ಜಿಹ್ವೆಗಳವೋಲ್ ದೈತ್ಯಪೃತನೆಯಂ
ದಹಿಸತೊಡಗಿದುವಸುರನೆಚ್ಚಾಸುರಾಸ್ತ್ರಮಂ
ನಿಸ್ತೇಜನಂಗೊಳಿಸಿ. ಇಂತಾಸುರಾಸ್ತ್ರಂ ಕಿಡಲ್,
ರಾಕ್ಷಸಾಧಿಪನುರಿವ ಕೋಪದಿಂ ಪೂಡಿದನು
ಚಾಪಕ್ಕೆ ಮಯರಚಿತ ರೌದ್ರಾಸ್ತ್ರಮಂ. ಮುಸಲ
ಗದೆ ಶೂಲ ಕೂಟ ಮುದ್ಗರ ಪರಂಪರೆಗಳಂ
ಶತಮುಖಗಳಿಂದೋಕರಿಸಿ ಬಂದು ದಳಗಳನೆ
ಬಡಿಬಡಿದು ಕೆಡಹಿತಾ ಯಮಸಾಯಕಂ. ಕೂಡೆ
ಗಾಂಧರ್ವ ಬಾಣದಿಂ ಶಮನಗೊಳಿಸಲ್ಕದಂ
ರಾಮಚಂದ್ರಂ, ಕೊಂಡನಸುರೇಂದ್ರನದ್ಭುತದ
ಶಕ್ತಿಯಂ ಕೈಗೆ. ಕಂಡು ವಿಭೀಷಣಂಗುಸಿರ್
ಕಟ್ಟಿದಂತಾಯ್ತು! ಹತ್ತಿರೆ ನಿಂದ ಲಕ್ಷ್ಮಣಗೆ
ತನ್ನೆರ್ದೆಯ ಭೀತಿಯನೊದರಿದನ್:
"ಇದು ಕಣಾ
ಶಕ್ತಿ! ತಾನಪ್ರತಿಹತಂ! ಅಮೋಘಂ ದಿಟಂ!

ಕಾಲ ಭೈರವ ವೀರ್ಯ ಸರ್ವಸ್ವಕಿದು ಕಣಾ
ನಿಕ್ಷೇಪಂ! ರಾವಣನಿದಂ ತೊಡುವ ಮುನ್ನಮೆಯೆ
ಕೆಡಿಸವೇಳ್ಕಲ್ಲದಿರೆ, ದಿಟಂ ಬಿರಿವುದರಿಯೆದೆಯ!''
ಎನುತೊದರಿ ತನ್ನ ತಾಟಸ್ಥ್ಯಮಂ ತೊರೆದೆಸೆದು
ಗದೆಗೊಂಡು ಮೇಲ್ವಾಯ್ದನಣ್ಣನ ರಥಾಶ್ವಗಳ
ಕಾಲ್ಗಳಂ ಗಮನಂಗೆಡಲ್ ಮುರಿಯೆ. ಸೌಮಿತ್ರಿಯುಂ
ಬಿಲ್ಗೊಂಡನೆಚ್ಚನಾ ರಥದ ಸಾರಥಿ ಮಡಿಯೆ,
ನರ ಶೀರ್ಷ ಚಂಡಿಕಾ ರಾವಣ ರಥಧ್ವಜಂ
ಪುಡಿಪುಡಿಯುಡಿದು ಕೆಡೆಯೆ. ಗದೆಯೆತ್ತಿ ತೇರೆಡೆಗೆ
ನುಗ್ಗಿ ಬರುತಿರ್ದಾ ವಿಭೀಷಣನ ಮೋರೆಯಂ
ಕಂಡು ಸಿಗ್ಗುರಿದು, ಮೊದಲೀ ದ್ರೋಹಿಯಂ ತೀರ್ಚಿ
ಮತ್ತಿತರರಂ ನೋಡಿಕೊಳ್ವೆನೆಂಬನಿತರೊಳ್
ಬಡಿದುರುಳ್ಚಲಾ ರಥವಾಜಿಗಳನಸುರೇಶ್ವರಂ
ನೆಗೆದು ತೇರಿಂ ತಿರೆಗೆ, ಶಕ್ತ್ಯಾಯುಧವನೆತ್ತಿ
ಹಾಯ್ದನು ವಿಭೀಷಣನ ಸಮ್ಮುಖಕೆ. ಹಾ ಎಂದು
ರೋದಿಸಿತು ಕಪಿಸೇನೆ! ''ಓ ಸಮೀರ ಕುಮಾರ,
ಓ ವಾಲಿಯ ತನೂಜ, ಓ ವಿಶ್ವಕರ್ಮಸುತ,
ಓ ಸೂರ್ಯಸೂನು, ಓ ಅಗ್ನಿಜಾ, ರಕ್ಷಿಸಿಮ್,
ರಕ್ಷಿಸಿಮ್ ರಾಕ್ಷಸ ಮಹಾತ್ಮನಂ!'' ಇಂತೊರಲಿ
ಬಾಯ್ವಿಡುತ್ತಿರೆ ವಾನರರ ಕರುಣೆ ಭಯ ಶೋಕಗಳ್,
ಲಕ್ಷ್ಮಣಂ ರಾವಣ ವಿಭೀಷಣರ ನಡುವಾಯ್ದು
ಖಂಡಿಸಿದನಾ ಶಕ್ತಿಯಂ ತುಂಡು ಮೂರುಡಿಯೆ!
ಕೊಂಡನಿನ್ನೊಂದಷ್ಟಘಂಟಾ ಭಯಂಕರ
ಮಹಾಶಕ್ತಿಯಂ. ರೌದ್ರನಾದಕೆ ಜಗತ್‌ತ್ರಯಂ
ಗದಗದಿಸುತಿರೆ, ತೆಗೆದು ಬೀಸಿ ಗುರಿಯೆಚ್ಚನಾ
ಊರ್ಮಿಳಾ ಪ್ರಾಣಪ್ರಿಯನ ವಜ್ರವಕ್ಷಮಂ.
ಜಂಘೆ ಕಂಪಿಸಿ, ರಾಮನಸು ತಮ್ಮನಾಯುವಿಗೆ
ಹಮ್ಮೈಸಿದುದು. ತನ್ನ ಪುಣ್ಯಬಲಮಂ, ತಪದ
ತೇಜಮಂ ಮುಡುಪಿಟ್ಟು ಶಪಿಸಿದನು ಬರ್ಪಾ
ಮಹಾಶಕ್ತಿಯಂ: ''ಚಿರಮಕ್ಕೆ ಮಾಂಗಲ್ಯಮೂರ್ಮಿಳೆಗೆ!
ಮೋಘಮಕ್ಕೀ ನಿನ್ನ ಹನನೋದ್ಯಮಂ! ಸ್ವಸ್ತಿ

ಸ್ವಸ್ತ್ಯಸ್ತು!'' ಕೊಲಲಿಲ್ಲ; ನಟ್ಟುದೆದೆಯಲ್ಲಿ; ಕಾರಿ
ಕೆನ್ನೀರನುರುಳಿಬಿದ್ದನು ನೆಲಕೆ ರಾಮಾನುಜಂ!
    ತೆಕ್ಕನೆಯೆ ಪರಿದು ಬಿಗಿದಪ್ಪಿದನು ಸೋದರ
ಶರೀರಮಂ, ಮುಳುಗುವದ್ರಿಯನಪ್ಪುವಬುಧಿಯೋಲ್.
''ಗಾಜುಮಣಿಯಂ ಪಡೆಯಲದು ಬಿದ್ದ ತಾಣಮಂ
ತೋರುವುತ್ಸಾಹದಲಿ ಕಯ್ಯಲಿಹ ರನ್ನಮಂ
ಕೆರೆಗೆಸೆವ ಗಾಂಪನಂತಾದೆನೆ ಸುಮಿತ್ರಾತ್ಮ
ಜಾತ ಜೀವವನಿತ್ತು ಜಾನಕಿಯ ಜಂಜಡಕೆ!''
ಸೋದರನ ದುಃಸ್ಥಿತಿಯ ಶೋಕಾತಿಶಯಕಿಂತು
ರೋದಿಸುತ್ತಾತನೆರ್ದೆಯಂ ಪೊಕ್ಕ ಶಕ್ತಿಯಂ
ಕಿತ್ತು ತುಂಡರಿಸಿದನು ನೆಲಕ್ಕಿಕ್ಕಿ. ''ನನಗಿದು,
ಕಪೀಂದ್ರ, ವಿಷಾದಕೆ ಸಮಯಮಲ್ತು. ನೀನಂಜನಾ
ಸುತನೊಡನೆ ನೇಮಿಗೊಂಡೀತನಂ ರಕ್ಷಿಸು
ಸುಷೇಣ ಮಂತ್ರೌಷಧ ಸಹಾಯದಿಂ. ಬಹುದಿನದ
ಬಯಕೆ ಕೈಗೂಡುವೊಳ್ಪೊಳ್ತು ಬಳಿ ಸಾರಿಹುದು
ನನಗಿಂದು. ಪೂರ್ಣ್ದನೀ ನೇಸರ್ ಪಡುವ ಮುನ್ನಂ
ಜಗತ್ತಿಂದಕ್ಕುಂ, ಓ ಕಪಿಧ್ವಜರೆ ಕೇಳಿಂ,
ಅರಾವಣಂ ವಾ ಅರಾಮಂ ದಿಟಂ!—ಕರೆಯಿಮಾ
ಸೇನಾನಿ ನೀಲನಂ; ಕರೆಯಿಮಾ ವಾಲಿಯ
ತನೂಜನಂ. ತಡೆವುದಿನ್ ಬೇಡಮಾ ದೈತ್ಯನಂ,
ವರ ಬಲಾಭೀಳ ರಿಪುರುದ್ರನಂ. ತಡೆವೆನಾಂ.
ನೀಂ ನೋಡುತಿರಿಮದ್ರಿ ಶೃಂಗಂಗಳಿಂ, ಜಗದ್
ಭವ್ಯಸಂಗ್ರಾಮಮಂ,'' ತಲೆಯೆತ್ತಿ ಮೇಲ್ನೋಡಿ
ಮತ್ತೆ ''ಓ ಅಲ್ಲಿ ನೆರೆದಿರ್ಪಮರ ಗಂಧರ್ವ
ಯಕ್ಷಾದಿ ಸರ್ವದೇವರ್ಕಳೋಲ್, ರಾಮನೀ
ರಾವಣಾರಾತಿ ರಾಮತ್ವಮಂ!'' ಸುಯ್ದೆದ್ದು
ಕಣ್ಣೀರನೊರಸಿದನ್. ದೋರ್ದಂಡ ಭೀಮ ಕಲಿ
ಕಲ್ಪಾಂತ ಚಂಡಕಿರಣೋಗ್ರ ಕೋಪವನಾಂತು
ಕೊಂಡನು ಜಗನ್ಮಂಡಲಂ ಪ್ರಕಂಪಿಸುವೋಲ್
ಹರಿಹರಬ್ರಹ್ಮಬಲಮಂ ತನ್ನ ಕೋದಂಡಮಂ!

## ಸಂಚಿಕೆ ೯

# ಸೆರೆ ಸಿಲ್ಕಿದನೊ ವೈರಿ!

ದೇವತರುಮಯ ಮೇರುಗಿರಿ ಸಾನು ಶಿಶಿರಮಯ
ಛಾಯೆಯಲಿ ಮೂರ್ಛಿತೆಯನಿಳುಹಿದನು ತೋಳ್ಗಳಿಂ
ತನ್ನಯ ತಳೋದರಿಯನೊರ್ವ ಯಕ್ಷಂ. ಪ್ರಿಯನ
ಪ್ರೇಮ ಶುಶ್ರೂಷೆಗೊಯ್ಯನೆ ಸಂಜ್ಞೆ ಮರಳಲಾ
ಯಕ್ಷಿ ಬೆಚ್ಚಿತ್ತೊಡನೆ ಮುಚ್ಚಿದಳು ತನ್ನಕ್ಷಿ
ಪಕ್ಷ್ಮದ ಕವಾಟಮಂ:
"ಬಿಡು ಕಣ್ಣನೆಲೆ ಹೆಣ್ಣೆ!
ಬಿಡುಗಣ್ಣರೆಂಬೆಮ್ಮ ಬಿರುದಿಗೇತಕೆ ಬರಿದೆ
ಭಂಗಮಂ ಮಾಳ್ಪೆ? ನಾವೀಗ ಲಂಕೆಯ ಗಗನ
ಸೀಮೆಗತಿದೂರ ಬಂದಿಹೆವು, ಸತಿ, ಕನಕಗಿರಿ
ಸಾನು ಶಾಂತಿಯ ಕ್ಷೇಮವಕ್ಷಕ್ಕೆ!"
"ಮೂರ್ಛೆಯಿಂ
ನನ್ನನೆಳ್ಚರಿಸಿ ಮರಣಕೆ ನೂಂಕುತಿಹೆ, ಇನಿಯ!
ನೀಡೆನಗೆ ಮತ್ತೆ ವಿಸ್ಮೃತಿಯೀವ ಮೂಲಕೆಯ
ಪಾನೀಯಮಂ. ರಾಮ ರಾವಣ ಮಹಾ ರಣಂ
ಪ್ರತ್ಯಕ್ಷಮಿರದೊಡೇಂ? ಸ್ಮರಣಮುಂ ತಾಂ ಕಣಾ
ಭಯ ಮರಣ ಕಾರಣಂ! ಬೇಡವೇಡೆಂದೊರೆದೆ
ನಾಂ. ಬಾರ ಬಾರೆಂದು ನೀಂ ಕಾಡಿಸಿಯೆ ಕರೆದೆ!
ಅಯ್ಯೊ ನೋಡಿಯೆ ಸತ್ತೆನ್ನೆ, ಲೋಕಭೀಕರ
ರಾಮ ರಾವಣ ಯುದ್ಧ ನಾಮಕ ಜಗತ್‌ಪ್ರಲಯ
ಪೀಠಿಕಾ ದೃಶ್ಯಮಂ! ಸಾಕು ಸಾಕಿನ್ನೆನಗೆ

ಕರುಣೆಯಿಂ ನೀಡು ವಿಸ್ಮರಣ ರಸಮಂ, ಕುಡಿದು
ಮರೆವೆನಾ ಘೋರಮಂ! ಇಲ್ಲ, ನಾ ನಿನ್ನೊಡನೆ
ಬರಲೊಲ್ಲೆನಿನ್ನಲ್ಲಿಗುಂ! ನಿನಗೆ ರುಚಿಸುವೊಡೆ
ನೀನೆ ನಡೆ ಲಂಕಾ ನಭೋಂಗಣಕೆ; ನಾನೊಲ್ಲೆ!''
ನಲ್ಲೆಯಿಂತೆನಲವಳ ಕೈಂಕರ್ಯಕಾಳ್ಗಳಂ
ನೇಮಿಸಲ್ಲಿಂ ನೆಗೆದನಂಬರಚರಂ ರಾಮ
ರಾವಣರ ಸಂಗ್ರಾಮಮೇದಿನಿಗೆ ಬೆಳ್ಗೊಡೆಯ
ತೋರ್ಪೆ ತೋಯದ ಪಥದ ವೇದಿಕೆಗೆ!

ಸಂಗಮಂ

ತ್ಯಜಿಸಿ ಬಂದಾ ಕತದಿ ಮೊದಲಿಂದೆಯುಂ ನಿಂದು
ರಸವನಾಸ್ವಾದಿಸುತ್ತಿರ್ದೊರ್ವ ಕೆಳೆಯನಂ
ಕೇಳ್ದನಾಶ್ಚರ್ಯದಿಂ ಖೇಚರಂ: ''ರಥವೇರಿ
ಕಾಳೆಗಂಗೊಡುತಿರ್ಪನೈಸೆ ದಶರಥ ಸುತಂ!
ರಥವೆತ್ತಣಿಂ ಬಂದುದಾತಂಗೆ?''

''ಅದು ಕಣಾ
ನಿಜದೊಳಿಂದ್ರನ ರಥಂ; ತೋರಿಕೆಗೆ ನಳಕೃತಂ;
ಮಾತಲಿಯೆ ತೇರೆಸಗುತಿಹನಲ್ಲಿ ವಾಘೆಯಂ
ಧರಿಸಿ. ಸಾರಥಿಯಾಗಿ ಕುಳಿತ ವಾನರಂ
ಬರಿ ನಿಮಿತ್ತಂ. ಮಾತನುಳಿ! ನೋಡು, ನೋಡಲ್ಲಿ!
ಶರಧಿಯಿಂದೆಳೆದನಂಬಿನ ರೂಪವಾಂತಿರ್ಪ
ಸಂಪಾತಿಯಂ, ಜಟಾಯುವ ಕೊಲೆಗೆ ರಾವಣನ
ತಲೆಯರಿವ ಸೂರುಳಂ ತೊಟ್ಟುಗ್ರನಂ!''

ಶರಧಿ

ಕುಕ್ಷಿಗೆ ಕರವನಿಕ್ಕಿ ಬಡಬನಂ ಪೊರಗೆಳೆವ
ಮಾಳ್ಕೆಯಿಂ, ಬೆನ್ನ ಶರಧಿಯಿನೆಳೆಯಲೀಚೆಗೆ
ಜಟಾಯುವಗ್ರಜ ಬಾಣತನುವಂ, ಛಟಚ್ಛಟಿಸಿ
ಪ್ರಕಟವಾದನು ತಟಿದ್‌ಗರಿಗಳಿಂ ಗೃಧ್ರ ಮುಖ
ವಜ್ರತುಂಡಂ: ''ಧನ್ಯವಾದುದೀ ನನ್ನ ಬಾಳ್,
ದೇವ! ದೇವಿಯ ಪೊರೆಯೆ ತನ್ನ ಹರಣವನಿತ್ತ
ನಿನ್ನ ಮಿತ್ರ ಜಟಾಯುವಗ್ರಜಂ ನಾಂ! ನೋಂಪಿ
ನನಗಿರ್ಪುದೀ ರಕ್ಕಸನ ಮಂಡೆಯಂ ಜಕ್ಕೆ

ತರಿಯಲ್ಕೆ. ತೊಡು ಜವದಿ, ಬಿಡು ಬೇಗದಿಂದಿವನ
ತಲೆಗಡಿದು, ತಮ್ಮಂಗೆ ನೆತ್ತರ್ ತಣಿಯನೆರೆವೆ!''
ಗೆಲ್ಗೆ ನಿನ್ನೀ ಪೂಣ್ಕೆಯೆನುತಾರ್ದು ದಾಶರಥಿ
ಪೂಡಿ ಬಾಣವನೆಚ್ಚನಸುರ ಶಿರಗಿರಿಗೆ. ಆ
ಮಿಂಚೊಡಲ ಮಿಂಚಿನ ಗರಿಯ ಮಿಂಚುವಾಶುಗ
ವಿಹಂಗಮವ ತುಂಡರಿಸಲೆಂದೈಲಬಿಲಸೋದರಂ
ಕರೆದ ವಿಶಿಖಗಳನಿತುಮಂ ಲೆಕ್ಕಿಸದೆ ಬಂದು, 'ಹಾ
ಹಾ' ರವಂ ಕೋಟಿ ದಾನವರೇಕೆ ಕಂಠದಿಂ
ಪೊಣ್ಮೆ, ಕತ್ತರಿಸಿದುದು ಕುತ್ತಿಗೆಯನಸುರೇಂದ್ರನಾ!
ಮತ್ತಿದೇನುರುಳಲದು ಮತ್ತೊಂದು ಮೂಡಿದುದು
ಮಸ್ತಕಂ, ಮೊದಲ ಮಸ್ತಕಮಿರ್ದು ತಾಣದಲಿ!
''ತಲೆಯೊಂದುರುಳ್ದೊಡೇನೀರೈದು ತಲೆಯವಂ
ತಾನಲಾ!'' ಎಂದಾರ್ದ್ದು ಗಂಡುಗಲಿ ಖಂಡೆಯವ
ತುಡುಕಿ, ಖಗರೂಪಮಂ ತಳೆದು ತನ್ನಯ ತರಿದ
ರುಂಡಮಂ ತುಂಡಮಂಡನಗೈಯುತಾಕಾಶ
ಮಂಡಲಕೆ ಚಿಮ್ಮುತಿರ್ದ ಜಟಾಯುವಣ್ಣನಂ
ತಡೆದನಂಬರ ಗಮನ ವಿದ್ಯಾ ವಿಶಾರದಂ
ಲಂಕೇಶ್ವರಂ!
''ಜಟಾಯು ಸಹೋದರಂ ಕಣಾ
ರಾಮಪ್ರಚೋದಿತಂ ನಾಂ! ನನ್ನೊಡನೆ ಸೆಣಸೆ
ನಿನ್ನೆನಿತು ತಲೆ ನಿನ್ನನುಳುಹ ಬಲ್ಲುವೊ, ಹೇಡಿ,
ಸ್ವಾಮಿಯಿಲ್ಲದ ವೇಳೆ ಮೋಸದಿಂ ದೇವಿಯಂ
ಕಳ್ದುಯ್ದ ನಾಣ್ಗೇಡಿ?''
''ನಿನ್ನ ತಮ್ಮಂಗಂದು
ಏನಾದುದದೆ ಇಂದು ನಿನಗುಮಪ್ಪುದೆ ದಿಟಂ!''
''ಅಂದು ನಿನಗಿರ್ದುದಯ್ ಪೊತ್ತ ಸೀತೆಯ ರಕ್ಷೆ.
ದೇವಿಯಂ ಪಿಡಿದೆ ನೀಂ ಬರ್ದುಕಿದೆ ಜಟಾಯುವಿಂ!
ಇಂದವಳನುಳಿದ ನಿನಗಾಯು ತೀರ್ದುದೆ ದಿಟಂ!''
ಇಂತೆನುತ್ತಾ ಶ್ಯೇನಿ ಕುಲ ವೀರನಸುರನಂ
ತಾಗಿದನು, ಮೇಘ ಸಂಕುಲ ಪರಿಯಲಾತನ
ಗರಿಯ ಗಾಳಿಯ ಭೀಮ ವೀರ್ಯಕೆ ಬೆದರ್ದ್ದವೋಲ್.

“ತಡೆ ತಡೆ, ವಿಹಗ ವೀರ, ಕೆಡಿಸದಿರು ಕಾರ್ಯಮಂ.
ದೈತ್ಯನಿಂದಾರ್ಗಂ ಅಜೇಯಂ ಕಣಾ, ವಿನಾ
ರಾಮಚಂದ್ರಂ! ನಿನ್ನ ಪೂಣ್ಕೆ ಸಂದುದು; ತೆರಳು,
ರಾವಣನ ಮೊದಲ ಮಂಡೆಯ ತರಿದ ಕೀರ್ತಿಯ
ಕಿರೀಟಮಂ ಧರಿಸಿ!” ಇಂತಗ್ರಜನನೆಳ್ಚರಿಸಿ
ನುಡಿಯಲ್ ಜಟಾಯುವಾತ್ಮಂ ಗಗನ ದನಿಯಾಗಿ,
ಸಂಪಾತಿ ರಾವಣಗೆ: “ನನ್ನ ಕೊಕ್ಕಿಗೆ ಕಾಲ್ಗೆ
ಸಿಕ್ಕಿ ಸಾಯದಿರೆಲವೊ ರಕ್ಕಸ! ನಿರೀಕ್ಷಿಸಿದೆ
ನಿನ್ನಾಯು ರಾಮನಂಬಿಗೆ ತನ್ನನರ್ಪಿಸುವ
ಪುಣ್ಯದ ಮುಹೂರ್ತಮಂ. ರಾಮಬಾಣಕೆ ನಿನ್ನ
ಪ್ರಾಣ ನೈವೇದ್ಯಮನ್ನೀವ ಸ್ವೈಪಂ ತ್ಯಜಿಸಿ
ಗೃಧ್ರಪದ ನಖಕದಂ ಬಲಿಗೊಡುವ ದುರಿತಕ್ಕೆ
ಧಾವಿಸುತ್ತಿಹೆಯೇಕೆ? ನೋಡು ನಿನ್ನಂ ಪುಡುಕಿ
ಬರುತಿರ್ಪ ರಾಮಬಾಣಂಗಳಂ. ನಡೆ, ನಡೆ,
ಇದಿರ್ಗೊಳಾ ನಿಶಿತ ಸುಕೃತಂಗಳಂ!” ಎಂದೆನುತೆ
ಹಾರಿದನು ಗರುಡಲೋಕಕೆ ದೈತ್ಯ ಶಿರಸಹಿತ.
    ಮತ್ತೆ ತಿರುಗಿದನಿತ್ತ ತೇರಿಗೆ ನಿಶಾಚರಂ.
ಬತ್ತಳಿಕೆ ಬತ್ತಿತನೆ ಕತ್ತರಿಸಿದನು ಹಗೆಯ
ಕೂರ್ಗೋಲ್ಗಳಂ. ರಾಮನಂ ಸೆರೆಗೊಳುವ ಮನದಿ
ಹತ್ತಿರಕೆ ಹತ್ತಿರಕೆ ತೇರನೊತ್ತಿದನೊತ್ತಿ
ಮುಗ್ಗುವರಿಸೇನೆಯಂ ಕೆಲಬಲಕೆ. “ಏತಕಿನ್
ತಳ್ವೆ ನೀನ್, ಲೀಲಾವತಾರಿ? ತರಿ ತಲೆಗಳಂ
ರಾಕ್ಷಸೇಶ್ವರನ!” ಮಾತಲಿಯಿಂತು ಬೇಡಲಾ
ಮೈಥಿಲೀಶ್ವರನಿನಿತು ಚಿಂತೆಯಿಂ: “ನಿನಗದಂ
ಪೇಳ್ವೆನೆಂತುಟೊ, ಇಂದ್ರಸಾರಥಿ? ಪತಿವ್ರತಾ
ಸತಿಯಿರ್ಪಳೀತಂಗೆ! ವ್ಯರ್ಥಮಪ್ಪುವೆ ನನ್ನ
ಮಂತ್ರಾಸ್ತ್ರಗಳ್ ಕೆಮ್ಮನಿಂತು? ನಾನೀತನಂ
ಕೊಲ್ಲಲೊಂದಪ್ರಾಕೃತೋಪಾಯಮಂ ಪೂಡಿ
ಸೋಲವೇಳ್ಕಲ್ಲದಿರೆ ಗೆಲ್ಲಲರಿಯೆಂ!”
                                    ಇಂತು
ಹೇಳಿದು ಮಹಾಸ್ತ್ರಗಳನುಗಿದನು ನಿಷಂಗದಿಂ.

ಒಂದೆ ವೀಣೆಯನೇಕ ತಂತ್ರಿಗಳಿನಿಂಚರಂ
ಸಂಚರಿಸುವಂದದಿಂದೊಂದೆ ಬಿಲ್‌ದಂಡದಿಂ
ಬಹು ಶಿಂಜಿನಿಗಳಿಂದೆ ನೆಗೆದು ನಾರಾಚಗಳ್
ತರಿಯ ತೊಡಗಿದುವಸುರ ಶಿರಗಳಂ. ಪೇಳ್ವುದೇನ್
ಆ ರಕ್ತ ರೌದ್ರಮಂ! ಕೆಂಪೇರ್ದುದಾಗಸಂ,
ಬೈಗಾದವೋಲ್. ಪರಿಪರಿದುರುಳ್ವ ಘಂದಲೆಗಳಂ
ಕಡೆಗಣಿಸಿ, ಮುಂದು ಮುಂದಕೆ ಪರಿದನೆತ್ತಿದನ್
ರುದ್ರತ್ರಿಶೂಲೋಪಮದ ಮಹಾಶೂಲಮಂ;
ಗುರಿಯಿಟ್ಟನೆರ್ದೆಗೆ ರಾಘವಗೆ. ಅಗ್ನಿಯ ಬುಗ್ಗೆ
ರೋಷ ಭೀಷಣ ಯಮನ ನಾಲಗೆಯವೋಲಂತೆ
ನಿಮಿರಿದುದು ದಿಕ್ಕುದಿಕ್ಕಂ ನೆಕ್ಕಿ ನೋಣೆವಂತೆ.
ತಿರೆ ಬಾನೊಳಿರ್ದ ರಾಕ್ಷಸ ಜಯಾಕಾಂಕ್ಷಿಗಳ್
ಹಿಗ್ಗಿದರದರ ರೌದ್ರತೆಗೆ. ಸುರರ್ ಕುಗ್ಗಿದರ್;
ವಾನರರ್ ತಲೆ ತಗ್ಗಿದರ್. ತರಂಗಿಸಿತೊಡನೆ
ಭಯರಸಂ ಜಗದಂತರಂಗದಲಿ. ರಜತಗಿರಿ ತಾಂ
ರಘುವರ ಕ್ಷೇಮ ಕಾತರವಾಗಿ ಬೇಡುವೋಲ್
ಬಲ್ವಿಡಿದುದಯ್ ಪರಮ ಶಿವ ಪಾದಮಂ! ಅದೇಂ
ಪ್ರಾರ್ಥನೆಯ ಬಲಮೊ? ಅವರಿವರಿರಲಿ; ರಾವಣನೆ
ತಾಂ ಸ್ವಯಂ ಪ್ರಾರ್ಥಿಸಿದನಾ ಮಹಾಶೂಲಮಂ
ರಾಮನಸುಮಂಗಲಾರ್ಥಂ:
"ಆಯುಧ ವರೇಣ್ಯ,
ಹೇ ಸರ್ವಶೂಲ ಗುರುದೇವ, ದುರ್ಗಾ ಹಸ್ತ
ಸಂಸರ್ಗ ಮಹಿಮಾಮೋಘ ವೀರ್ಯಪ್ರಾಣ,
ಬಿನ್ನಪವನಾಲಿಸೆನ್ನೀ ಹೃದಯಗುಹ್ಯಮಂ.
ನಿನ್ನನೇಗಳುಮಿಂತುಟಾಂ ಪ್ರಾರ್ಥಿಸಿದೆನಿಲ್ಲ.
ನಿನ್ನ ನೋಂಪಿಯ ಬಲ್ಲೆನಾಂ. ತೊಟ್ಟ ಮೇಲ್ ನಿನ್ನ
ಬಲಿಗೆ ಪಶುನೈವೇದ್ಯವಿಟ್ಟಂತೆಯೆ ದಿಟಂ
ಅರಾತಿಯಸು. ಆದೊಡಾ ವ್ರತಮಿಂದು ನನಗಾಗಿ
ಭಂಗಮಂ ಸಹಿಸವೇಳ್ಕುಂ. ಶತ್ರುಜೀವಮಂ
ಬಲಿಗೊಳ್ಳದಾತನಂ ಸೆರೆವಿಡಿಯಲೆನಗೆ ನೀಂ
ನೆರವಾಗು! ಮೈಮರೆವನಿತೆ ತಾಗು! ನಡೆ, ಪೋಗು!"

ಇಂತು ಬಿನ್ನಯ್ಸಿ ಶೂಲವನೆಸೆದನಂಬರಕೆ. ಮೇಣ್
ಸಾರಥಿಗೆ ದಿಗಿಲಾಗೆ, ನೋಳ್ಪರ್ ಬೆರಗುವೋಗೆ,
ಧುಮುಕಿದನು ತೇರಿಂದೆ ತಿರೆಗೆ. ರಾಮನ ರಥದ
ರುಕ್ಮವೇಣುಧ್ವಜವನೀಕ್ಷಿಸುತ್ತಾ ದಿಶೆಗೆ
ಧರೆಯದುರೆ, ವಾನರದಳಂ ಬೆದರಿ ಬಾಯೊದರಿ
ದೆಸೆದೆಸೆಗೆ ಕೆದರೆ, ಅಮರರ ಮುಖಕೆ ವಿಸ್ಮಯದ
ಭಯಮಮರೆ, ಧಾವಿಸಿದನಾ ದೃಢ ಮನೋರಥಂ
ದೈತ್ಯನೆತ್ತಿದ ಖಡ್ಗ ಹಸ್ತದಲಿ!–'ಗೆಲ್ ಗೆಲ್
ದಶಾನನಾ!' ಕಂಡು ಕೇಗಿದರಸುರರಭ್ರದಲಿ!
ವೈರಿ ವಕ್ಷದ ಲಕ್ಷ್ಯಕಭಿಮಂತ್ರಣಂ ಗೆಯ್ದು
ರಾಕ್ಷಸೇಶ್ವರನೆಸೆದ ಶೂಲಮಂಬರಕೇರ್ವ
ತಪ್ತ ಕಾಂಚನ ದೀಪ್ತ ಪಥವನವಲೋಕಿಸುತೆ
ಗದಗದಿಸಿದುವು ದೇವರಾಜನ ರಥದ ಕುದುರೆ.
ಜ್ವಾಲಾ ಸಮಾಕುಲಮದಂ, ದೂಮಕೇತುವೆನೆ
ರಾಮ ಹೃದ್‌ರಕ್ತ ಪಾನಾಸಕ್ತ ವೇಗದಿಂ
ಹಠಮನದ ದೃಢಗಮನದಿಂ ಬಳಿಗೆ ಬಳಿಬಳಿಗೆ
ಬಳಿಸಾರುತಿರ್ದುದಂ, ರೌದ್ರತ್ರಿಶೂಲಮಂ
ಕಂಡು ಮಾತಲಿಗಿನಿತು ಚಂಚಲಿಸಿದುದು ದೃಷ್ಟಿ;
ಪುಲಕಿಸುವ ಪಾಂಗಿಂ ಪ್ರಕಂಪಿಸಿತು ವಾಘೆಯ
ಹಿಡಿದ ಮುಷ್ಟಿ:
"ತೊಡು, ತೊಡು ಮಹಾಸ್ತ್ರಮಂ, ಹೇ ಪ್ರಭೂ!
ಪ್ರಾಕೃತ ವಿಧಾನಮಿಲ್ಲಿಗಪ್ರಕೃತಮಿದು ಕಣಾ
ದಿಗುಪಾಲರೆದೆನೆತ್ತರಂ ಕುಡಿದು ಕೊಬ್ಬಿರುವ
ದೈತ್ಯ ಶೂಲಂ: ಇಂದುವರೆಗೀ ತ್ರಿಶೂಲಮಂ
ವ್ಯರ್ಥಂಗೈದ ಸಮರ್ಥರಂ ಕಂಡರಿಯೆನಾಂ
ಜಗತ್ರಯದ ಶೂರರಲಿ! ಗೆಲ್ದುದು ಕುಬೇರನಂ;
ಯಮನನೋಡಿಸಿತಮರ ರಾಜನಂ ರೋಡಿಸಿತು
ಬರ್ದಿಲ ನಾಡಿನ ಪಸಲೆಯಲಿ ಮೂರು ಸೂಳಟ್ಟಿ.
ಕೊನೆತಲೆಯ ರಾವಣಗೆ ಕೊನೆಯಸ್ತ್ರವಿದು; ದಿಟಂ
ನಿರ್ಣಯಿಪುದಿದು ದನುಜನುದ್ಧಾರ ಭಾಸ್ಕರನ
ಉದಯಮಮಂ ವಾ ಅಸ್ತಮಂ. ತೊಡು, ತೊಡಮೃತಮೀ

ಪುಣ್ಯ ವೇಳಾ ಯೋಗಮಂ ತೊರೆದು ಕಳೆಯದಿರ್.
ಪಡುನೇಸರೆಸೆವ ಆ ಪಡುವೆಟ್ಟದಂಚಿನಲಿ
ಕಾಣಲ್ಲಿ ಶೋಭಿಸಿದೆ ಶುಭಚಿಹ್ನೆ, ಅಪರ ಸಂಧ್ಯಾ
ನಭೋಮೇಘ ಫಣಿ ಭೋಗದಲಿ!''
ಮಾತಲಿಯೊರೆಯೆ,
ನೋಡಿ, ಮಾತಿಲಿಯಾದನಾ ಮೈಥಿಲೀಸ್ವಾಮಿ:
ರಾವಣನ ಪಿನ್ದುಸೆಗೆ, ಬಹುದೂರದೆಳ್ತರದಿ,
ತೋರ್ದುದುದ್ಯದ್ ಫಣಾ ವಿನ್ಯಾಸದಿಂದೊಂದು
ಆಶೀರ್ವಾದ ಮುದ್ರೆಯ ಬೃಹನ್ನೀರದಾಕಾರ!
''ವಿಶ್ವದಾಶೀರ್ವಾದ ನಿನಗದು, ರಘೂತ್ತಮ;
ದಶಾನನಂಗಾಶೀವಿಷೋಷಮಂ! ಅದೆ ಕಣಾ
ಸಂಕೇತಮಾಕಾಶ ದೇವಲಿಪಿ ಕೆತ್ತಿರ್ಪುದಯ್
ನಿನಗೆ ಮೇಣಸುರೇಶ್ವರಂಗೆ! ತೊಡು ಬೇಗದಿಂ
ಬ್ರಹ್ಮಾಸ್ತ್ರಮಂ. ತಡೆಯೆ ಕೇಡು. ಅದೊ ನೋಡೆಂತು
ನಿನ್ನೆಡೆಗೆ ನುಗ್ಗುತಿದೆ ಶೂಲರೂಪದ ಮೃತ್ಯು!
ಆಲಸ್ಯದಿಂದಮೃತಮಕ್ಕುಂ ವಿಷಂ!''
''ತಾಳ್ಮೆ,
ತಾಳ್ಮೆ, ತಾಳ್ಮೆ, ಮಹೇಂದ್ರ ಸಾರಥಿ! ಅಗಸ್ತ್ಯಮುನಿ
ಆದಿತ್ಯಹೃದಯ ಮಂತ್ರವನೆನಗೆ ಕೊಟ್ಟನಾ
ಮಂತ್ರಮಂ ಜಪಿಸುತಿರ್ದೆನ್ ತಪಸ್‌ತೇಜಮಂ
ಜಾಗ್ರತಂಗೊಳಿಸೆ. . . ಪಿಡಿ ತುರಗರಶ್ಮಿಯನಿನಿತು
ದೃಢಮುಷ್ಟಿಯಿಂ! ಸಿದ್ಧನಾಗೀಗಳಪ್ಪೊಂದು
ರುದ್ರ ಘಟನೆಗೆ, ದೇವ ಸೂತ!''
ಇಂತೆನುತೆದ್ದು
ನಿಂದನಾ ರಥಪೀಠದೊಳ್ ಯುದ್ಧ ರುದ್ರನಾ
ಕೋದಂಡ ರಾಮಚಂದ್ರಂ. ಪ್ರಾಣಧಿಗೆನಲ್ ಬೆನ್ನ
ಬಾಣಧಿಗೆ ಕೈಯಿಕ್ಕಿದನ್. ವಜ್ರಪುಂಖೋಜ್ವಲಂ,
ಬಡಬ ಭೀಷ್ಮಂ, ಪ್ರಲಯ ವೈಶ್ವಾನರೋದರಂ
ಬ್ರಹ್ಮಾಸ್ತ್ರಮುಣ್ಮಿದುದು ಬಹು ಸೂರ್ಯ ಜಿಹ್ವೆಯಿಂ
ತಳತಳಿಪ ವಿದ್ಯುತ್ ಫಣೇಂದ್ರನೋಲ್. ಸ್ಥಿತಿಯ
ದುರ್ಗತಿಗೆ ಹಮ್ಮೈಯ್ಸಿದುದು ಸೃಷ್ಟಿ. ಸುಯ್ದುದು ಲಯಂ.

ನಡುಗೆ ಗಿರಿಸಂಕುಲಂ, ಕದಡಿದುವು ಕಡಲುಗಳ್.
ಬೆಂಕೆವೆಟ್ಟುಗಳೋಕರಿಸಿದುವು ಭಯಂಕರ
ಯುಗಾಂತಕದ್ರಾವಾಗ್ನಿಯಂ. ಸುರಾಸುರರೋಡಿ
ಕೈಲಾಸ ಮೇರು ಮಂದರ ಗಿರಿಗಳಂ ಬೇಡಿ
ಹದುಗಿ ನಿಂದರು ಮರೆಗೆ! ಪುಂಖದೊಳಜನ ತೇಜಂ;
ಮಧ್ಯೆ ವೈಷ್ಣವ ಚಿತ್‌ತಪಶ್ಶಕ್ತಿ; ಮೊನೆಯೊಳಗೆ
ಮನೆ ತನಗೆ ವಿಲಯ ರುದ್ರಂಗಿಂತು ತನ್ನೊಳಗೆ
ಹರಿ ಹರ ಬ್ರಹ್ಮ ಚೈತನ್ಯಗಳನೊಳಕೊಂಡ
ದಿವ್ಯಾಸ್ತ್ರಕಾ ತನ್ನ ರಾಮತ್ವ ಸತ್‌ತ್ವಮಂ
ಪೊಯ್ದು ತಾನುಂ ಪ್ರವೇಶಿಸಿದನದರಾತ್ಮಮಂ
ಶ್ರೀರಾಮನಸ್ತ್ರವಿದಗಸ್ತ್ಯ ಶಿಷ್ಯ. ಸಿಂಜಿನಿಯ
ಟಂಕಾರಕಾ ಹರಿಧ್ವಜಿನಿ ಹರಿನಾದದಿಂ
ಬೊಬ್ಬಿರಿಯೆ; 'ಗೆಲ್ ಗೆಲ್, ರಘೂತ್ತಮಾ! ಘೇ ಉಘೇ!'
ಎಂದಭ್ರಮಂಟಪದಿ ಸಂಭ್ರಮದ ಸುರಗೋಷ್ಠಿ
ಹರಕೆಗಳನುಲಿಯೆ; ಗುರಿನೋಡಿ, ಕಿವಿವರೆಗೆಳೆದು,
ಬಿಟ್ಟನಾ ಬ್ರಹ್ಮಾಸ್ತ್ರಮಂ! ಶೈಲಹೃದ್‌ಭಿತ್ತಿ
ಸೀಳ್ವಶನಿ ರಾವದಿಂ ತಾಗಿದುದು, ತನ್ನೆಡೆಗೆ
ಯಮ ರಯದಿ ನುರ್ಗ್ಗಿಬರುತಿರ್ದ ಕರ್ಬುರ ಕರ
ವಿಮುಕ್ತಮಂ, ಆ ಲಯೋಲ್ಕೋಗ್ರ ಶೂಲಾಗ್ರಮಂ:
ಹಾ ಹಾ ಎನುತ್ತೊದರಿದುವು ಪಡೆಗಳಿರ್‌ಕಡೆಗೆ;
ನರಳಿತು ಸುರಾಸುರಶ್ರೇಣಿಗಳ್; ತಪಿಸಿತಯ್
ಚರಾಚರಂ! ಕೆದರಿತು ಕಿಡಿಯ ಗಡಣ. ತೊಳಲಿದುವು
ದಳ್ಪುರಿಯ ದೀಪ್ತಗಣ. ಪ್ರೋಜ್ವಲಿಸಿತೈ ಅರುಣ
ಸಂಧ್ಯಾ ಗಗನದಂಗಣದ ರಣ!
ತುಂಡುಡಿದು
ಕೆಡೆದುದೈ ದೈತ್ಯಾಯುಧಂ. ಮತ್ತಿದೇನಯ್ಯೊ!
ಹಾ ಎಂಬುವನಿತರೊಳೆ ಮುರಿದದರ ಮುಮ್ಮೊನೆಯ
ಚೂರೊಂದು ಬಂದು ಪೊಕ್ಕುದು ಲಕ್ಷ್ಮಣಾಗ್ರಜ
ಮಹಾ ವಕ್ಷ ವೈಕುಂಠಮಂ! ರಾವಣಾತ್ಮಕೆ
ಪವಿತ್ರತಮ ರಕ್ಷೆ, ಸೀತಾಪ್ರಿಯ ಮಹೋದಾರ
ವಕ್ಷಮಲ್ಲದೆ, ಬೇರೆ ತಾಣಂಗಳಿನ್ನೊಳವೆ ಪೇಳ್

ಬ್ರಹ್ಮಾಂಡ ಮಂಡಲದಿ?
ಶೂಲ ಘಾತಕೆ ತನುವ
ಮರೆದು ತೇರ್ಮಣೆಗೊರಗಿದರಿವೀರನಂ ಕಂಡು,
ಹಿಗ್ಗಿ, ಹೊರೆಯೇರಿ, ಮುನ್ನುಗ್ಗಿದನು ದಾನವಂ
ತುಡುಕಿಯವನಂ ಪಿಡಿದು ತನ್ನ ತೇರಿಂಗುಯ್ವ
ತವಕದಲಿ. ತಡೆವ ಕಪಿವೀರರಂ ಖಡ್ಗದಿ
ಕಡಿದುರುಳ್ಚಿ, ಕಾಳ್ಗಿಚ್ಚು ತನ್ನಂ ತಡೆವ ತೃಣಕೆ
ಮಾಳ್ಪ ಮನ್ನಣೆಯನನ್ಯರ್ಗೆಸಗಿ, ರಾಮನನೆ
ಕಣ್ಮಾಡಿ ಧಾವಿಸುತ್ತಿರೆ, ತನ್ನ ಮೇಲ್ವಾಯ್ವ
ಪೈತಾಮಹಾಸ್ತ್ರಮಂ ಕಂಡನಸುರಂ. ಮುಳಿದು,
ಪಿಡಿದದಂ ನೆಲಕೆಸೆವೆನೆಂಬ ದೃಢಹಠದಿಂದೆ
ತುಡುಕಿದನು ಹಾ ಆ ಮಹಾ ಬ್ರಹ್ಮ ಬಾಣಮಂ,
ಮೇಣ್ ಜಾನಕೀಪ್ರಿಯಪ್ರಾಣಮಂ! ತುಡುಕಿದುದೆ
ತಡಮಾ ಶರಂ, ದೈತ್ಯನಾ ದೈತ್ಯ ಬಲಮುಮಂ
ಕಡೆಗಣ್ಚಿ, ಮೀರ್ದುಪೊಕ್ಕುದುಃ ದಶಾನನ ಹೃದಯ
ಗಹ್ವರದ ಘೂಕಾಂಧಕಾರಮಸ್ತ್ರದ್ಯುತಿಗೆ
ಪೊರಪೊಣ್ಮೆ ತುಂಬಿದುದೊ ಲೋಕತ್ರಯವನೆನೆ
ಅಮಾವಾಸ್ಯೆಯ ತಮಿಸ್ರಮಾಕ್ರಮಿಸಿತೊಡನೆಯೆ
ಧರಿತ್ರಿಯಂ! ತನ್ನೆರ್ದೆಯನೊಡೆದು ಬೆನ್ನಿಂ ಪೊಣ್ಮೆ
ಜಗುಳದೊಲದಂ ಭದ್ರಮುಷ್ಟಿಯಿಂ ಪಿಡಿದಿರ್ದ
ಬದ್ಧ ಭ್ರುಕುಟಿ ರಾವಣಗೆ ಮೆರೆದುದದರೊಳ್
ರಘೂದ್ವಹನ ವಿಗ್ರಹಂ! 'ಸಿಕ್ಕಿದನಲಾ ಶತ್ರು!'
ಎನುತಾರ್ದು ಪಿಂತಿರುಗಿ ನೆಗೆದನುನ್ಮತ್ತನೋಲ್
ತನ್ನ ತೇರಿಗೆ, ಕೂಗುತಾಜ್ಞೆಯಂ ಸಾರಥಿಗೆ:
''ಸೆರೆ ಸಿಲ್ಕಿದನೊ ವೈರಿ! ತಿರುಗಿಸು ವರೂಥಮಂ
ಪುರಕೆ!'' ವಕ್ಷಂಬೊಕ್ಕ ಬಾಣಾರ್ಧಮಂ ಪಿಡಿದು
ರಕ್ತಮಯನಾದ ಮಯನಂದನಾಪ್ರಿಯನ ಮತಿ
ವಿಕಲವಾಯ್ತೆಂದು ಸೂತಂ ಸ್ಯಂದನವನಿರದೆ
ತಿರುಗಿಸಿದನ್ನೆ ನಗರದತ್ತಣ್ಗೆ!
ಇತ್ತಲ್
ದಶಗ್ರೀವನೇರ್ವಡೆದು ಕೋಂಟೆಗೋಡಿದನೆಂಬ

ವಾರ್ತೆಯಂ ಭೋರ್ಗರೆದುದು ಕಪೀಂದ್ರಸೇನಾಬ್ಧಿ.
ಅತ್ತ ರಾಕ್ಷಸ ಸೇನೆಯೊಳ್ ತೊಳಲಿದುದು ಸುದ್ದಿ:
ನರ ಸಹೋದರರರಿರ್ವರಂ ಸಾಯೆ ಸದೆಬಡಿದು,
ಬ್ರಹ್ಮಾಸ್ತ್ರಮಂ ವಿಫಲಗೆಯ್ದು, ತಾನುಂ ನೊಂದು,
ಲಂಕೇಶ್ವರಂ ಶ್ರಮನಿವಾರಣಾರ್ಥಂ ಪುರಕೆ
ಬಿಜಯಿಸಿದನೆಂದು! ಕರ್ಗ್ಗತ್ತಲೆತ್ತೆತ್ತಲುಂ
ತೀವಿ ಮಸಿಬಳಿದವೋಲಳಿಸಿದುದು ಪೃಥಿವಿಯಂ.
ಬಾಂದಳದಿ ಮಿರುಗಿದುವು ಕಿಕ್ಕಿರಿದ ಚುಕ್ಕಿಗಳ್
ಶಂಕಿಪ ಸಹಸ್ರಾಕ್ಷನಾಸ್ಥಾನದಕ್ಷಿಗಳವೋಲ್.

## ಸಂಚಿಕೆ ೧೦

# ದೈತ್ಯನೇರ್ದನ್ ಚೈತ್ಯಮಂಚಮಂ

ಪುಣ್ಯ ಹೃದಯದ ಸುಧಾ ಸಂಗಾನುರಕ್ತಿಯಿಂ
ಬ್ರಹ್ಮಾಸ್ತ್ರಮಾ ಪುಲಸ್ತ್ಯಜನ ವಕ್ಷದೊಳಾಳ್ದು
ಪೀರ್ದುದಯ್ ಪ್ರಾಣಪೀಯೂಷಮಂ. ಹಯಬಲಕೆ
ಜಿಹ್ವೆ ಜೋಲ್ವನಿತು ಜವದಿಂದೆ, ರುಧಿರಸ್ರಾವ
ಘೋರನಂ, ಬಾಣಪುಂಖಂ ಬಿಡಿದ ವಾಮಕರ
ಧೀರನಂ, ಭ್ರಾಂತಿಗದ್ದಿದ ಮತಿವಿಕಾರದಾ
ದೈತ್ಯೇಂದ್ರನಂ ತಂದನರಮನೆಗೆ, ತವಕದಲಿ
ತೇರೆಸಗಿ, ಸೂತನೇಕಾಂಗಿ, ಮಹಾತಿ ಖೇದದಲಿ.
ಹಬ್ಬಿದುದು ಕಳವಳಂ. ತಬ್ಬಿತು ಭೀತಿ ಪರಿಜನಕೆ.
ಬೆಬ್ಬಳಿಸಿದರು ಬೆಜ್ಜರುಬ್ಬೆಗದೊಳಸ್ತ್ರಮಂ
ತೆಗೆವ ಪರಿಯರಿಯದತಿ ಚಿಂತೆಯಿಂ. ತೇರಿಂದೆ
ಪಲ್ಲಕ್ಕಿಗಿಳಿಸಿ ಮೂರ್ಛಿತ ಮಹಾರಾಜನಂ
ಮಲಗುಮಂಚಕೆ ಮೆಲ್ಲನೊಯ್ದರು ಮಹಾರಾಣಿ
ಮಂಡೋದರಿಯ ಧೃತಿಗೆ ಸನ್ನಿಧಿಗೆ.
                                        ಕಾಣುತಾ
ಪ್ರಿಯನ ನೆತ್ತರ್ ಸೋರ್ವ ಗಾತ್ರದಾ ರಣರುದ್ರ
ಭಂಗಿಯಂ, ಬ್ರಹ್ಮ ಶರ ಸಂಗಿಯಂ, ''ಹಾ ಸ್ವಾಮಿ,
ಪೂಣ್ಕೆ ಸಂದುದೆ? ತೋರು ತೋರೆನಗೆ ಸೆರೆವಿಡಿದ
ಮೈಥಿಲೀ ನಾಥನಂ!'' ಎಂದು ಸುಯ್‌ಸುಯ್ದುಳುತೆ
ದಶಕಂಠನರ್ಧಾಂಗಿ ಶೈತ್ಯೋಪಚಾರಮಂ
ತಾನೆಸಗಿ, ಬೆಸಸಿದಳು ಮಂತ್ರ ಶುಶ್ರೂಷೆಯಂ

ಶಸ್ತ್ರ ಶಾಸ್ತ್ರ ಚಿಕಿತ್ಸೆಯಾ. ಮರಳಿದತ್ತೊಯ್ಯನೆ
ಮಹೀ ಪ್ರಜ್ಞೆ. ಕೆಲಕೆ ಹೊರಳಿದನನಿತು ನರಳಿದನ್
ನೋವಿಂಗೆ. ಕಣ್ದೆರೆದು ನೋಡಿದನ್; ಕೊಡಹಿದನ್
ವಿಸ್ಮರಣೆಯಂ. ತಿರುಗಿದನ್ ಸ್ಮೃತಿಯ ಜಾಗ್ರತಕೆ.
ವದನಕೊಲಿದುದು ಶಾಂತಿ. ಸಂತೋಷ ಚಿತ್ತಮಂ
ಕನ್ನಡಿಸಿದುದು ನಯನ ಕಾಂತಿ. ಹೆಮ್ಮೆಯ ನಗೆಯ
ಮುಗುಳಂ ಮಲರ್ದುದಧರಂ. ಪ್ರಿಯೆಯ ಮೊಗನೋಡಿ
''ಸಿಂಗರಿಸವೇಳೆಮ್ಮ ಪುರವನಿತೆಯಂ ರಾಜ್ಞಿ,
ಪೊಸ ತಳಿರು ತೋರಣಗಳಿಂ! ಶುಭದ ವಾರ್ತೆಯಂ
ಘೋಷಿಸಲಿ ಮಂಗಳದ ವಾದ್ಯಗಳ್! ಲಂಕಾ
ಲತಾಂಗಿಯರ್ ಸಂಗೀತದಿಂದುಲಿಯಲೀ ಮಹಾ
ರಾವಣವಿಜಯ ಕಥಾ ಕಾವ್ಯಮಂ! ಗೆಲ್ದೆನಾ
ರಾಮನಂ! ಸೆರೆವಿಡಿದೆ ತಂದಿಹೆನ್!'' ಎಂದಿನಿತು
ಶಂಕೆಯಿಂ ತನ್ನ ಸುತ್ತುಂ ದಿಟ್ಟಿಸುತೆ, ಮತ್ತೆ,
ತಮ್ಮ ಕಟ್ಟೇಕಾಂತಮಂ ಮನದಿ ನಿಚ್ಚಯಿಸಿ,
''ನೋಡಿಲ್ಲಿ! ಭದ್ರ ಮುಷ್ಟಿಯೊಳೆಂತು ಪಿಡಿದಿಹೆನ್
ಭುವನೈಕ ವೀರನಂ! ಸೀತೆಗೆ 'ನಿನಗೆ ಸೋಲ್ತವಂ,
ನಿನಗೆ ತಾನೆಯೆ ಸೋಲ್ತು, ನೀಂ ಸೋಲ್ತಾತನಂ
ಗೆಲ್ದೊಪ್ಪಿಸಿಹನದಕೆ ತಪ್ಪಂ ಕ್ಷಮಿಪು'ದೆಂದು!''
''ನೀಂ ಪಿಡಿದುದಿದು ಬಾಣಪುಂಖಂ, ಮಹಾಮತಿ;
ರಘೂತ್ತಮನ ಗಾತ್ರಮೆಂಬೀ ಭ್ರಾಂತಿಯಿಂ ಬರಿದೆ
ಕಿಳ್ತೆಸೆಯಲರ್ಹವಾದುದನಿಂತು ಬಿಗಿದಪ್ಪಿ
ತಪ್ಪುತಿರ್ಪಯ್.''
ರೋದಿಸುತ್ತೊರೆದ ಮಯಸುತೆಗೆ
ಪುರ್ಬುಗಂಟಿಕ್ಕಿ ನುಡಿದನು ಕರ್ಬುರೇಶ್ವರಂ:
''ಭ್ರಾಂತಿಯಾರ್ಗೆಲೆಗೆ? ನಿನಗೆಯೊ ನನಗೊ? ರಾಮನಂ
ಪ್ರಾಣರೂಪದಿನಿಲ್ಲಿ ಪಡೆದಿಹೆನ್ ಪೂರ್ಣಮಂ!
ಅಲ್ಲಿ ಗೋಳಿಡುತಿಹರ್ ವಾನರರ್, ರಾಮನ
ಕಳೇಬರಕೆ ವೈದ್ಯನೈವೇದ್ಯಂಗಳನೊಡರ್ಚಿ.
ನೀಂ ಪತಿವ್ರತೆಯಪ್ಪೊಡೆನ್ನೆಂದುದಂ ಮಾಡು!
ನನ್ನ ವಕ್ಷದಿನೆಳೆದು ತೆಗೆಯಿದಂ. ಸೀತೆ ಮೇಣ್

ನೀನಲ್ಲದನ್ಯರಿಂದಾಗದೀ ರಾಮನ ಮಹಾನ್
ಶರಶರೀರಮಮಂ ಸ್ಪರ್ಶಿಸಲ್ಕೆ!''
ಪತಿಯಾಣತಿಗೆ
ಪ್ರತಿ ನುಡಿಯಲಾರದೆ ಪತಿವ್ರತೆ ಮಹಾಸ್ತ್ರದಿಂ
ಸಡಿಲಿಸಿನಿಯನ ಮುಷ್ಟಿಯಂ, ಪಿಡಿಪನೋಸರಿಸಿ,
ತಾನೆ ಬಲ್ವಿಡಿವಿಡಿದು, ಕಿತ್ತೆಳೆದಳೆತ್ತಿದಳ್
ಹಮ್ಮೈಸಿ ನಡುಗಿ: ಹಾ ಹಾ ಅಯ್ಯೊ ಕೆಟ್ಟೆನಯ್
ಕೊಂದೆನೆಂದೊರಲಿದಳು ಕಂಡು ನೆತ್ತರ್ವೊನಲ್
ಚಿಮ್ಮಿದೋಕುಳಿಬುಗ್ಗೆಯಂ! ರಾವಣನ ಮುಷ್ಟಿ
ತೊರೆದುದೆ ತಡಂ, ವಕ್ಷಮೋಕರಿಸಿದುದೆ ತಡಂ
ತನ್ನನಾ ಬ್ರಹ್ಮಬಾಣಂ ರಾವಣಪ್ರಾಣಮಂ
ಪೀರ್ದು ಪಡೆದುದು ಮೋಕ್ಷಮಂ ರಾಮನಾತ್ಮದಲಿ!
ಕೂಡೆ, ಕಪಿಸಮಿತಿ ಘೇಘೇ ಎನುತೆ ಕುಣಿದಾಡೆ,
ಮೈದೋರ್ದುದತ್ತಲಾ ರಘುಕುಲೋತ್ತಮ ಚಿತ್ತ
ಪರ್ವತದ ಚೂಡಮಂ ಮುತ್ತಿರ್ದ ಕತ್ತಲೆಯ
ಕಡಲಿನಂಚಿನಲಿ ಚೈತನ್ಯ ಚಂದ್ರೋದಯಂ!
ತಲ್ಲಣಿಸಿತಾದಿಜಲಮದಿರಿತವನೀ ತಲಂ.
ಭಾರ ಪರಿಹಾರಕೆನೆ ದಿಗಿಭತತಿ ಬೆನ್‌ಗೊಡಹೆ,
ತೊನೆದುವು ನಗಂಗಳಸ್ಥಿರತೆಯಿಂ. ಮಿಂಚೆನಲ್
ಸಂಚರಿಸಿತಾಹ್ಲಾದ ಲಹರಿ, ಲೋಕತ್ರಯದ
ತನು, ಕಂಟಕ ವಿಮೋಚನಾನಂದದಿಂ, ಪುಲಕ
ಕಂಟಕಿತಮಪ್ಪಂತೆವೋಲ್. ಭವ್ಯಪೌರುಷವೊಂದು
ಜನ್ಮಾಂತರಂ ಬಡೆಯೆ ಕಣ್ಮರೆಯಾದ ಸಂಕಟಕೆ
ಸೃಷ್ಟಿ ಖಿನ್ನತೆಯಾಂತ ತೆರದಿ ಘೋರಾಂಧತಾ
ತಿಮಿರಮಾಕ್ರಮಿಸಿತು ಅಮಾವಾಸ್ಯೋದರದ
ರೋದೋಂತಮಂ. ಅಸುರರಶ್ರುಗಳೊ ಮೇಣ್ ಸುರರ
ಬಾಷ್ಪಗಳೊ? ತಾರೆಗಳ್ ವೆರಸಿ ಕರೆದುದು ಕುಸುಮ
ವೃಷ್ಟಿ. ನಂದಿಗ್ರಾಮ ಪರ್ಣಕುಟಿಯಲ್ಲಿರುಳ್
ನಿದ್ರಿಸಿರ್ದಾ ಭರತದೇವಂಗೆ ಸೋದರಂ
ಪಿಂ ಮರಳ್ದಂತೆ ಕನಸಾಗಲಲ್ಲಿಂದೆಳ್ದು
ಪೂಜಾಗೃಹಂಬೊಕ್ಕು ಪ್ರಾರ್ಥಿಸಲ್ ತೊಡಗಿದನ್

. ಶಿವ ಮಹಚ್ಛಕ್ತಿಯಂ. ಕ್ಷುದ್ರಶೋಕಾತೀತ
ಭೂಮ ಘಟನೆಯದಲ್ತೆ? ಮಂಡೋದರೀ ದೇವಿ
ಸ್ವಾಮಿಯ ಕಳೇಬರದ ಚರಣದೆಡೆ ಕೆಡೆದಳಯ್
ನಿಷ್ಪಂದ ನೀರವ ಶಿಲಾಪ್ರತಿಮೆಯೋಲಂತೆ.
ಲೋಕಮೆಲ್ಲಂ ಹರ್ಷ ಶೋಕಮಯವಾಯ್ತು, ಕೇಳ್,
ಶ್ರೀರಾಮನುದ್ಬೋಧನದ ಮತ್ತೆ ರಾವಣನ
ನಿಧನ ಯೋಗದ ಶ್ರೀಮುಹೂರ್ತದಲಿ!
ಮೂರ್ಛೆಯೊ?
ಸಮಾಧಿಯೊ? ಧರಾತ್ಮಜಾನಾಥನೆಚ್ಚರ್ತೊಡನೆ
ಲೋಕ ಲೋಕಾಂತರದ ಚಿದಾಕಾಶ ತನುಗಳಂ
ತೊರೆದು ಮರ್ತ್ಯಕ್ಕಿಳಿದುಮಲ್ಲಿ ತನ್ನನ್ನಮಯ
ಕೋಶಮಂ ಪುಡುಕುವಂದದಿ ಸುತ್ತಲುಂ ನೋಡಿ
''ಎಲ್ಲಿ ನನ್ನೊಡಲೆಲ್ಲಿ, ಪೇಳ್, ತಾಯಿ ಕೌಸಲ್ಯಾ
ತನೂಜತನು?'' ಎಂದರಸುತಿರಲಂಜನಾ ಸೂನು
ತಿಳಿದು ''ಇಲ್ಲಿಹುದಿಲ್ಲಿ, ದೇವ. ಅವತರಿಸಿದಕೆ
ಈ ನೀಲವಿಗ್ರಹಕೆ!'' ಎನೆ ಕೇಳ್ದ ವನಚರರ್
ಬೆರಗುವೋಗಿರೆ, ಸುಯ್ದು, ಮುಂದಿರ್ದರಂ ಗ್ರಹಿಸಿ,
ಮರುತಾತ್ಮಜನನಿಂಗಿತದಿ ನೋಡಿ ನಸುನಗುತೆ,
ಮತ್ತೆ ಮರ್ತ್ಯತ್ವದೊಳ್ ಸುಷ್ಠು ಸಂಸ್ಥಿತನಾಗಿ,
ಕೇಳ್ದನ್ ಕಪೀಂದ್ರನಂ: ''ಎಲ್ಲಿ ಲಕ್ಷ್ಮಣನೆಲ್ಲಿ
ಪೇಳ್? ಸುಖಿಯೆ?'' ''ದೇವ, ಮಂತ್ರೌಷಧೀಮಹಿಮೆಯಿಂ
ಸುಕ್ಷೇಮಿ ತಾಂ ವಿಶ್ರಮಿಸುತಿಪ್ಪನೋಷಧೀ
ಮಂಚದೊಳ್.'' ''ಅದೇನದೇನಾಲಿಸಿಂ!'' ''ಲಂಕೆಯಿಂ
ಮೊಳಗುತಿವೆ!'' ರಣಭೇರಿಯಲ್ತದು!'' ''ಮರಣಭೇರಿ!''
ಕಿವಿಗೊಟ್ಟರನಿಬರುಂ. ಬೆದರಿ ಫಾಲ್ಗುಣ ನಿಶಾ
ಪ್ರಾಚೀದಿಶಾಮುಖಂ ಬೆಳ್ಪೇರ್ವವೋಲ್ ಧಳಂ
ಧಳಧಳಂ ಮೊಳಗಿದುದು ದುಃಖಭೇರೀಧ್ವಾನ
ರುಂದ್ರಘೋಷಂ, ಶೋಕ ವಾದ್ಯಂಗಳಿಂ ಕೂಗಿ
ಸಾರುವಂದದಿ ಲಂಕೆ, ಲೋಕ ಲೋಕಾಂತರಕೆ
ರಾವಣ ಮರಣ ವಾರ್ತೆಯಂ!
ತೋರ್ದುದನಿತರೊಳ್

ಮೂಡುವೆಟ್ಟಿನ ಮುಡಿಯ ಮಂಚಿಕೆಯ ಮೇಲ್ಮೂಡಿ
ಚೈತ್ರ ಪ್ರಥಮ ದಿನದ ಚಾಮೀಕರೋಜ್ವಲ
ದಿವಾಕರನ ಮಂಡಲಂ, ನವ ಜೀವನೋದಯದ
ಮಧುಮಾಸದುದಯಮಂ ಭೂಮಂಡಲಕೆ ಸಾರಿ.
ಪ್ರಭುಸಹೋದರ ವಿಭೀಷಣನೆಡೆಗೆ ಬಂದುದು
ಪುರಪ್ರಮುಖ ಗೋಷ್ಠಿ. ಕಂಬನಿವೆರಸಿ ಶಿರಂಬಾಗಿ
ಕೈಮುಗಿದು ನಿಂದವರ್ಗಾತನೆಂದನ್: "ಮೊದಲ್
ಕೈಮುಗಿಯಿಮಾ ಪ್ರಭುಗೆ. ರಾಮನಾಜ್ಞೆಯೆ ನಮಗೆ
ಶಿಷ್ಟಪಥ್ಯಂ." "ನಿನ್ನ ಪೇಳ್ವುದಿನ್ನೆಮಗಾಜ್ಞೆ.
ಸ್ವಾಮಿ ನೀನ್." ಎನುತವರ್ ರಾವಣಾನುಜಮತದಿ
ತನಗೆ ವಂದಿಸೆ, ದಾಶರಥಿ: "ರಾಕ್ಷಸೋತ್ತಮ,
ಸ್ವತಂತ್ರನಯ್ ನೀನ್. ಮನ್ನಿಸೀ ಸ್ವಾಮಿನಿಷ್ಠರಂ.
ನಿಷ್ಠುರಾಚರಣೆಗಿದು ವೇಳೆಯಲ್ತೆಮಗೆ. ಕೇಳ್
ಕಷ್ಟಮೇನೆಂದು." ಕಿವಿಗೊಟ್ಟಂಗೆ ಪೇಳ್ದುದು
ವಿಭೀಷಣಂಗಾ ಸಮಿತಿ:
"ರಾಕ್ಷಸ ಮಹಾನೃಪಂ,
ಬಾಣದಿಂದೆರ್ದೆಯೊಳೇರ್ವಡೆದು ಪಿಂತಿರುಗಿದನ್
ರಣರಂಗದಿಂ ನಿನ್ನೆ ಬೈಗಿನಲಿ. ಪೋದಿರುಳ್
ತಾನಾದನಸ್ತಂಗತಾಸಂ. ಮಾರಾಣಿಯುಂ
ಪತಿಪಾದ ಮೂಲದೊಳ್ ಪಟ್ಟು ಪೊಂದಿದಳಿರುಳೆ
ಇಚ್ಛೆಸಾವಂ!"
"ಧನ್ಯೆ! ಪುಣ್ಯಾತ್ಮೆ! ಮಾತಾಯಿ!
ಹದಿಬದೆಯರರಸಿ ದಲ್!" ನೆರೆದ ವಾನರರಿಂತು
ತಮ ತಮಗೆ ಮಂಡೋದರಿಯ ಪೊಗಳುತಿರೆ, ಮತ್ತೆ
ಮುಂಬರಿದುದಾ ಗೋಷ್ಠಿ:
"ಲಂಕೆಯದ್ದಿಹುದಳಲ
ಕಡಲಿನೊಳ್, ಮನೆ ಮನೆಯುಮಳುತಿಹುದು ಸಾವ್‌ಸಿಡಿಲ್
ಬಡಿದು. ನಿನ್ನನೆ ನೆನೆಯುತಿಹುದೊಮ್ಮನದಿ ಲಂಕೆ,
ಹೇ ವಿಭೀಷಣ ಮಹಾತ್ಮಾ! ಈ ಮಹಾ ವಿಪತ್
ಸಮಯದೊಳ್ ಕಾಣೆವನ್ಯರನಾರನುಂ ಪೊರೆವ
ಸತ್ತ್ವದ ಸಮರ್ಥರಂ. ಬಂದು ಕೈಹಿಡಿದೆತ್ತು ನೀಂ

ಮುಳುಗುವಾ ನಿನ್ನ ಭೂಮಾತೃವಂ. ಕಾಯುತಿದೆ
ನಿನ್ನಗ್ರಜ ಕಳೇಬರಂ ನಿನ್ನ ಬರುವುದನೆ
ತನ್ನ ಸತ್‌ಕ್ರಿಯೆಗೆ. ದೊಡ್ಡಯ್ಯನೆಡೆ ಕುಳ್ತನಲೆ
ನಿನ್ನ ಮಗಳಳುತಿಹಳ್. ಮೇಘನಾದನ ಮಡದಿ
ತಾರಾಕ್ಷಿ ದೇವಿಯರ್ ನಿನ್ನಾಗಮನಕಾಗಿ
ನೋಂತಿಹರ್ ಪಸಿದು, ಶಿಶು ವಜ್ರಾರಿಗೆರ್ದೆಗೊಡದೆ!
ನಿನ್ನರಸಿ ಸರಮಾ ಮಹಾದೇವಿಯರ ಕೈಯೊಳಾ
ಕಂದನಾಕ್ರಂದಿಸುತ್ತಿಹನಯ್ ಅನಾಥನೋಲ್!''
   ಕಲ್ಲಾದೊಡೇನ್ನೆಕಿಲ್? ಅದು ನೀರ್ ಘನಿತುದಲ್ತೆ?
ಕರಗಿದನ್; ಮರುಗಿದನ್; ಪ್ರವಿಕಂಪಿಸಿದುದಯ್
ವಿಭೀಷಣನ ಭೀಷಣಸ್ಥಿರತೆಯುಂ. ಮುಕ್ತಾಶ್ರು
ಬಿಂದುವೊಂದೆರಡೊಸರಿದುವು ದಮನಯತ್ನಮಂ
ನಿಷ್‌ಫಲಂಗೊಳಿಸಿ. ಕಂಡದನೆಂದನಿಕ್ಷ್ವಾಕು
ವಂಶಜಂ: ''ದಮನಗೆಯ್ ದುಃಖಮಂ, ದನುಜವರ;
ಸಂತವಿಡು ನಡೆ ಲಂಕೆಯಂ, ತವಿಸು ಬೆಂಕೆಯಂ
ಬಂಧು ಜನ ಮನದಿ. ಪಿರಿಯಣ್ಣಂಗೆ ತೀರ್ಚಂತೆ
ಲೌಕಿಕದ ಕೊನೆಯ ಕರ್ತವ್ಯಮಂ.'' ಶಂಕೆಯಿಂ-
ದಾಂದೋಲಿತಾಂತಃಕರಣನಾಗಿ ರಾಕ್ಷಸಂ
ಬೆಸಗೊಳಲ್: ''ದಾಕ್ಷಿಣ್ಯಮಿರ್ಕೆ; ನಿನಗದು ಪ್ರಿಯಮೆ?
ಲೋಕಕಂಠಕನಾಗಿ ನಿನ್ನನಿಂತಳಲಿಸಿದ
ನಿನ್ನ ವೈರಿಗೆ ನಾಂ ನೃಪೇಂದ್ರಂಗುಚಿತಮಪ್ಪ ಮೇಣ್
ಪ್ರಭುಯೋಗ್ಯ ಮೇಣ್ ವೀರಾರ್ಹ ಮರ್ಯಾದೆಗಳ್ ವೆರಸಿ
ಅಗ್ನಿಕಾರ್ಯಂಗೈವುದದು ನಿನಗೆ, ಪೇಳ್, ಪ್ರಿಯಮೆ?''
ಸಕರುಣಂ ದರಹಸಿತ ಮುಖದಿಂದೆ ರಾಘವಂ:
''ಮುಂದೆ, ಮುಂ ಭವದಿ, ಮಗನಾಗಿ ಸಂಭವಿಪಂಗೆ
ತಂದೆಯಾಗುವನಿಂದೆ ಸಂಸ್ಕಾರವೆಸಗುವೊಲ್,
ನೀನಿಂದು ರಾವಣಂಗೆಸಪ ಸತ್ ಕ್ರಿಯೆಯೊಳಾಂ
ಸುಪ್ರೀತನೆಂ! ವೈರಿಯಾದೊಡಮೆನಗೆ ಸಮಂ
ಆ ದಿವಂಗತ ದೈತ್ಯನತುಳ ವೀರ್ಯದೊಳಾತ್ಮ
ಸತ್ತ್ವದೊಳ್ ನಿರ್ಭೀತಿಯೊಳ್ ತೇಜದೊಳ್, ಮತ್ತೆ
ಚಿತ್ತ ಶುದ್ಧಿಯೊಳಂತೆ ಚಿತ್‌ತಪಸ್ ಶಕ್ತಿಯಲಿ!

ಯುದ್ಧದೊಳ್ ಗೆಲ್‌ಸೋಲ್ಗಳೇನ್? ಪರಾಕ್ರಮಮಲ್ತೆ
ಪುರುಷಾರ್ಥಮಾ ದೃಷ್ಟಿಯಿಂದಸುರರಾಜನಂ
ಮೀರ್ದ ಕಲಿಗಳನಿನ್ನೆಗರಿಯದೀ ಸೃಷ್ಟಿ ಮೇಣ್
ವಿಧಿ ಕಲ್ಪನಾ ದೃಷ್ಟಿ! ತೊರೆ ಶಂಕೆಯಂ, ಅಸುರೋತ್ತಮ,
ಲಂಕೆಗೀಗಳ್ ತೆರಳ್. ನಿನ್ನಿಷ್ಟಮೆನ್ನಾಜ್ಞೆಯಂ
ಮೇಣ್ ಲೋಕಮರ್ಯಾದೆಯಂ ನಡಸು ಸೋದರಗೆ
ರಾಜಗೌರವ ಸಹಿತಮಪರಸಂಸ್ಕಾರಮಂ.''
ರಾಮನಾಜ್ಞೆಗೆ ಬಾಗಿ ನಡೆದನು ವಿಭೀಷಣಂ
ಶೋಕ ಸಂತಪ್ತ ಪಾಪಿಯ ಚೇತನಂಬುಗುವ
ದಿವ್ಯಕೃಪೆಯಂತೆ. ಚುಂಬಿಸುವ ಪೊಂಬಿಸಿಲಳುರಿ
ರುಕ್ಮತೋಯವೆನೆ ತೊಳೆದುದು ಭುವನ ಮಂಡಲವ!
ಇಳಿದೇರಿ ಮರ ಪೊದೆಯ ಚೆಲ್ವಿನ ನತೋನ್ನತ
ವನಾದ್ರಿ ಸೀಮೆಯನಾ ವಿಭೀಷಣಂ ಮರೆಯಾಗೆ,
ರಾಮಚಂದ್ರಂ ದುಃಖ ಗುರುಭಾರ ವಾಣಿಯಿಂ
ಪ್ಲವಗ ಲಾಂಛನ ರಾಜ ಚಂದ್ರಂಗೆ:
''ಕಪಿರಾಜ,
ಶಿಬಿರದೊಳಿದಂ ಸಾರವೇಳ್. ರಣದಿ ಮಡಿದರಿಗೆ,
ತಮತಮಂಗುಚಿತಮಪ್ಪವರವರ ಯೋಗ್ಯತೆಗೆ
ತಗುವ ಗೌರವದೊಡನೆ, ಕೊನೆಯ ಕರ್ಮಂಗಳಂ
ಮಾಳ್ಪಾಜ್ಞೆಯಂ. ಲಂಕೆಯಿನ್ನೆಮಗೆ ಹಗೆಯಲ್ಲ:
ಲಂಕಾನಿವಾಸಿಗಳ್ ತಂತಮ್ಮ ನಂಟರ
ಕಳೇಬರಂಗಳನರಸಿ ರಣಭೂಮಿಗೈತರಲ್
ವೈರವನುಳಿಯವೇಳ್ಕುಮೆಂದು. ನಾನುಂ ಮಿಂದು
ಜಲಧಿ ಜಲದಿಂ ತಿಲೋದಕವೀವೆನೆನಗಾಗಿ
ರಣಯಜ್ಞ ಕುಂಡದೊಳ್ ಬೇಳ್ವೆವಟ್ಟಾತ್ಮರಿಗೆ,
ಲೌಕಿಕ ಕೃತಜ್ಞತಾ ಸಂಕೇತಮಾಗಿ; ಮೇಣ್
ಪ್ರಾರ್ಥಿಸುವೆನವರಾತ್ಮ ಮಂಗಲಾರ್ಥಂ, ಪ್ರಾಣಮಯ
ಮೇಣ್ ಮನೋಮಯದ ನೈವೇದ್ಯಂಗಳಂ ನೀಡಿ.''
ಅಂತ್ಯೇಷ್ಟಿಗಿಂತಾಣತಿಯನಿತ್ತು, ಇನಕುಲನ್,
ಚಿಂತಾಬ್ಧಿಗದ್ದವೋಲಂತರ್ಮುಖತೆವೆತ್ತು,
ಮೌನಿ, ನೋಸುತೆ ವಿವಿಕ್ತತೆಗೆ, ಕಡಲಂ ಕುರಿತು

ನಡೆದನಯ್, 'ಶಂಕೆ ಬೇಡೆಮಗೆ ನಿರಪಾಯಮೀ
ಲಂಕೆಯಿನ್, ಎನುತೆ ಮೆಯ್ಗಾವಲಾಳ್ಗಳುಮಂ
ವಿಸರ್ಜಿಸಿ, ಸಮುದ್ರಾಭಿಮುಖಿಯಾದ ಬೇರೊಂದು
ಸುಗಭೀರ ಸಾಕಾರ ಮನುಷ್ಯತಾ ಪಯೋಧಿಯೋಲ್!
   ಬೈಗುವರಮಂದಾರುಮಾ ಚಂಡ ಕಿರಣ ಕುಲ
ಮಂಡನನ ಮೂರ್ತಿಯಂ ಕಂಡರಿಲ್ಲರಸಿಯುಂ.
ಕಡಲ ದಂಡೆಯೊಳಿರ್ದನೆಂದರ್ ಕೆಲರ್. ಸುಡುವ
ಸೂಡಿನೆಡೆ ಕಂಡೆವೆಂದರ್ ಕೆಲರ್. ಚಿತೆಗೇರ್ದ
ಕೆಳೆಯನ ಪೆಣಂ ಪೊತ್ತುತಿರ್ದುದಂ ಕಂಡದಕೆ
ನಾನಳುತ್ತಿರ್ದೆನಾ ಪೊತ್ತೊಳಾಪದ್‌ಬಂಧು
ಬಂದು, ಸೋಂಕಿಗೆ ಸೊಗಯಿಪಂತೆ ಬೆನ್ನಂ ತಟ್ಟಿ,
ಸಂತಯ್ಸಿದನು ತನ್ನನೆಂದನೊರ್ವಂ! ತನ್ನ
ಮಿತ್ರನೊರ್ವಂ ಸತ್ತವೋಲಿರ್ದ ತನ್ನಾ
ಕಳೇಬರವನೆತ್ತಿ ಸಿದಿಗೆಯೊಳಿಟ್ಟು, ಬೆಂಕೆಯಂ
ತೋರುತಿರೆ, 'ಏಳಣ್ಣ! ಮಲಗಿರ್ಪೆಯೇಕಿಂತು?
ಬೇಗಮೇಳ್! ಅದೊ ಪೊತ್ತುತಿಹುದಗ್ನಿ!' ಎನುತ್ತೆನುತೆ
ಕರೆದೆಳ್ಚರಿಸೆ, ಕಣ್ ತೆರೆಯುತೆದ್ದು ನೋಡಿದೆನ್
ರಘುರಾಮ ಮೂರ್ತಿಯಂ! ಮಣಿದೆನ್–ದಯಾಸಿಂಧು,
ಬರ್ದುಕಿಸಿದೆ ನೀನೆಂದು;–ಎಂದನಿನ್ನೊರ್ವನಾ
ಪ್ಲವಗವೀರಂ! ಕಂಡರೆಂದರ್ ಕೆಲರ್ ಕೇಳ್ದವರ್,
ಮಂಡೋದರೀ ದೇವಿಯಂ ತನ್ನ ಗಂಡನೆಡೆ
ಸೂಡೊಂದರೊಳೆ ಸುಡುತಿರ್ದಾ ವಿಭೀಷಣನ
ಸನಿಹದಲಿ! ಅಲ್ಲಲ್ಲಿ ಎಲ್ಲೆಲ್ಲಿಯುಂ 'ಕಂಡೆನ್
ಆನಿಲ್ಲಿ, ಕಂಡೆನಾನಲ್ಲಿ' ಎಂದವರಿವರ್
ರಾಮನಂತರ್ಯಾಮಿ ರಾಮನಖಿಲವ್ಯಾಪಿ
ರಾಮಮಯಮೀ ವಿಶ್ವಮೆಂಬ ತತ್ತ್ವವನಿಂತು
ತಂತಮ್ಮ ಪ್ರತಿಮೆಯಿಂ ಪ್ರತಿಭಾನುರೂಪಮಂ
ಸಾರುತಿರಲಪ್ರತಿಮ ಪುರುಷೋತ್ತಮ ಜಗದ್
ವಿಭೂತಿಯಂ, ಕಂಡನೈ ವಾನರ ಭಟಂ ವಹ್ನಿ,
ರಂಹನಪರಕ್ರಿಯೆಯನೆಸಗಿ ಕಡಲೊಳ್ ಮಿಂದು
ಶಿಬಿರಕೈತರುತಿರ್ದವಂ, ಬೈಗುಗಪ್ಪಿನೊಳ್

ತಾನೊರ್ವನೆಯೆ ಜಲಧಿಯಿಂ ಪಿಂತಿರುಗುತಿರ್ದ
ರಾವಣಾರಾತಿ ಸೀತಾನಾಥನಂ! ಕೈಮುಗಿದ
ಕಪಿವೀರನಂ ನೋಡಿ:
‘‘ನಿನ್ನನೆಲ್ಲಿಯೊ ಕಂಡ
ಕುರುಪಿರ್ಪುದೈ!’’ ಎಂದುಮೊಡನೆ ‘‘ಓಹೋ ವಹ್ನಿ
ನೀನಲ್ತೆ? ನಿನ್ನ ಕೆಳೆಯಂ ರಂಹನೆಲ್ಲಿದನ್?’’
‘‘ಬೂದಿಗೆಯ್ದಿದೆತಾನೆ ಮಿಂದು ಬಂದೆನ್, ಪ್ರಭೂ,
ರಂಹನಂ.’’
‘‘ಕಾಯಮಂ?’’
‘‘ಅಪ್ಪುದಪ್ಪುದು, ಒಡೆಯ.
ಬಲ್ಲೆನಾತ್ಮವನಮೃತಮೆಂದು. ಬಾಯ್ ತಪ್ಪಿದೆನ್.’’
‘‘ಲೋಕರೂಢಿಯನೊರೆದೆಯೈ, ತಪ್ಪದರೊಳೇನ್?
ಅಲ್ಲದಾತ್ಮವನಮೃತಮೆಂದು ಕೇಳ್ದವರೆನಿತೊ,
ಕಂಡರಲ್ಪಂ.’’
‘‘ಅನಿತೆ; ನನ್ನರಿವುಮದಕಿಂ ಮಿಗಿಲ್
ಮುಂಬರಿದುದಿಲ್ಲ. ನಂಬಿದೆನೆನ್ನ ಗುರುವೊರೆದುದಂ,
ತಾಂ ಕಂಡ ನನ್ನಿಯಂ.’’
‘‘ಆ ಶ್ರದ್ಧೆ ದಲ್ ವಿದ್ಯೆ!
ಸಾಲ್ಗುಮದೆ ದಾಂಟಲ್ಕವಿದ್ಯೆಯಂ. ಆದೊಡಂ,
ಕೇಳ್ ವಹ್ನಿ. ಕಾಣಲ್ಕುಮಪ್ಪುದಮೃತತ್ವಮಂ.’’
‘‘ನನ್ನೊಡೆಯ, ನೀನ್ ಮುಂದೆ ನಿಂತಿರಲ್, ನನಗದಕೆ
ಬೇರೆವೇಳ್ಕುಮೆ ಪವಣ್?’’
‘‘ನಿನ್ನಂತೆ ನಾನ್ ಕಣಾ
ನನಗದೇಂ ಕೋಡೊಳವೆ? ನಾನುಂ ಮನುಷ್ಯನೆಯೆ.
ಉಸಿರೆಳೆವೆನುಣುವೆನಾಶಿಸುವೆನೊಲಿವೆನ್ ಮುನಿವೆನ್
ಮೋಹಿಪೆನ್ ನಿನ್ನವೊಲೆ!’’
‘‘ನನಗದೇ ಸೋಜಿಗಂ,
ದೇವ! ನಮ್ಮಂತಿರ್ಪ ನೀನದೆಂತಬ್ಧಿಯಂ
ಪಿನ್ನೊಂಕಿದಯ್ ಸೇತುಬಂಧನದೊಳಂದು ಪೇಳ್?
ಮೇಣಬ್ಧಿಯಂ ನೂಂಕಬಲ್ಲವನದೇಕೆ ಪೇಳ್
ನಮ್ಮನ್ನರಲ್ಪರ ನೆರಂ ಬೇಡಿದನ್?’’

“ಕುಶಲಿ
ನೀಂ, ಬರಿಯ ಕಲಿಯಲ್ತು.” ನಕ್ಕು ದೈತ್ಯಧ್ವಂಸಿ
ಮೆಚ್ಚಿದನು ಸಾಮಾನ್ಯ ಸೈನಿಕನ ಕೆಚ್ಚದಂ.
ವೀರೋಚಿತಂ ವಿಷಾದವಿಹೀನಮೆನೆ ವಹ್ನಿ
ಗೆಳೆಯನಳಿವಿನ ನೋವನೆರ್ದೆಯೊಳಾರ್ಪಿಂದೊತ್ತಿ
ನುಡಿಯುತಿರ್ದುದನರಿತು: “ಕಲಿಗಳೊಳ್ ಕಲಿಯೈಸೆ
ನಿನ್ನ ಮಿತ್ರಂ, ವಹ್ನಿ?”
“ಪೆರ್ಮೆಸಾವ್ ಸತ್ತನ್
ಮಹಾಪ್ರಭೂ!” ಸ್ಮರಣ ಸಾಧ್ಯವನನಿತುಮಂ, ಮೊನ್ನೆ
ರಾಮನೆಡೆ ನಿಂದನಿಲಜಂ ರಾಮನಾಜ್ಞೆಯಿಂ
ರಾಮಮಯವಾದ ಕಪಿಸೇನೆ ರಾವಣರೂಪಿ
ರಾಕ್ಷಸಧ್ವಜಿನಿಯಾ ಮೂಲಬಲವಂ ಕಡಿದು
ನಿರ್ಮೂಲನಂಗೆಯ್ದ ದಿನದಂದು ಕಂಡುದಂ,
ರಂಹನಂತಿಮ ಸಾಹಸದ ಕಥೆಯನೆಲ್ಲಮಂ
ಬಿತ್ತರಿಸಿದನು ವಹ್ನಿ. ಚಿತ್ತವಿಟ್ಟಾಲಿಸಿ
ದಶಾನನ ನಿಷೂದನಂ:
“ಕಲಿಗಳೊಳ್ ಕಲಿ ದಿಟಂ
ನಿನ್ನ ಕೆಳೆಯಂ, ವಹ್ನಿ. ಸಾರ್ಥಕಮವನ ಬಾಳ್!
ಸಾರ್ಥಕಮವನ ಸಾವದಕೆ ಮಿಗಿಲ್!”
“ಧನ್ಯರ್ ದಿಟಂ,
ಪ್ರಭೂ, ಈ ಮಹಾ ಸಮರಯಜ್ಞಕಸು ತೆತ್ತವರ್.”
“ಬರ್ದುಕಿರ್ಪರುಂ, ವಹ್ನಿ!”
“ದಿಟಮೊಡೆಯ. ನಿನ್ನೊಡನೆ,
ನಿನ್ನಿದಿರ್ ನಿಂದು, ಸಂವಾದಿಸುವ ಸಯ್ಪುದೇಂ
ಸಾಮಾನ್ಯಮಲ್ತು: ಬಹು ಜನ್ಮಗಳ್ ದುಡಿದೊಂದು
ಪುಣ್ಯಫಲಮೈಸೆ!”
“ಅವರವರಿಗವರವದೊಳ್ಪು.
ನಿನಗೆ ನಿನ್ನದು; ರಂಹಗಾತನದು... ದುಃಖಮೆ, ವಹ್ನಿ,
ಮಿತ್ರಮರಣಂ ನಿನಗೆ?”
“ಬದುರ್ಕಿರ್ದೊಡಾತನುಂ
ಸುಖಮಿರ್ಮಡಿಸುತಿರ್ದುದೆಂಬೆನ್, ಮಹಾಪ್ರಭೂ.”

"ಪೇಳ್ ಅವಂ ಬರ್ದುಕಿ ಬರ್ಪುದು ನಿನಗೆ ಸಮ್ಮತಮೆ?"
"ಬರ್ದುಕಿ ಬರ್ಪುದು? ಸತ್ತವನ್! ನಾನೆ ಸುಟ್ಟವನ್!
ಸತ್ತವರ್ ಬರ್ದುಕಿ ಬರ್ಪುದದೆಂತು, ನನ್ನೊಡೆಯ?"
"ನಿನಗೇಕದೆಲ್ಲ? ನಿನಗೊಪ್ಪಿಗೆಯೆ ಪೇಳ್? ನೀನೆ
ಕಾಣ್ಬಂತೆ ಕರೆವೆನವನಂ!"
ಬೆಚ್ಚಿದನು ಕಪಿಭಟಂ!
ಆರ ಭಯಕಬುಧಿ ತನ್ನಾದಿಯಧಿಕಾರದಾ
ಸ್ಥಾಣುಮರ್ಯಾದೆಯಂ ತ್ಯಜಿಸಿ, ಕಂಪಿಸಿ, ಕುದಿದು
ಸುಗಿದು ಸೆಡೆತುದೊ ಆ ಮಹಚಿತ್ತಪೋಬಲಮೆ
ತಾಂ ತನ್ನ ಮುಂದಿರ್ಪುದಂ ಗ್ರಹಿಸಿ, ಕೈಮುಗಿದು
ಬಿನ್ನಯ್ಸಿದನು ವಾನರೋತ್ತಮಂ ವಹ್ನಿ:
"ಮಾಣ್,
ಮಾಣ್, ಮಹಾಪುರುಷ, ಮಾಣ್! ನೀನ್ ಕರೆಯೆ ಬರದಿರನ್!
ತನ್ನ ನಿಯಮೋಲ್ಲಂಘನೆಗೆ ಮಿಗಿಲ್ ಬೆದರುವಳ್
ಮಾಯೆ ನಿನ್ನಾಜ್ಞೆಯುಲ್ಲಂಘನೆಗೆ! ಮನಮೇಕೊ
ಕಳವಳಂಗೊಳುತಿರ್ಪುದಾಶೆಯಂ ಚಿಃಗೈದು!
ಕಾಳ್ಮರಗಳಡಿ ಬಯಸುವೋಲ್ ಕಲ್ಪವೃಕ್ಷದಡಿ
ಬಯಸುವೊಡೆ, ಬಯಕೆಗೆಳ್ಚರಿಕೆವೇಳ್ಕುಂ! ಮತ್ತೆ
ತಪ್ಪಿದೆನ್. ಏನ್ ಬಯಕೆ ಬಯಸಿದೆನ್! ಭೀಕರಂ!"
ತನಗೆ ನೆಳಲಿರ್ಪುದಂ ಪರಿಕಿಸುತ್ತಿರ್ದನಂ,
ಪ್ರಕೃತಿ ಸಂಭವಮಹುದೊ ವಿಕೃತಿ ತಾನಿರಬಹುದೊ
ಎಂಬ ಶಂಕೆಯ ಛಾಯೆ ಸುಳಿಯುತಿರ್ದಾತ್ಮನಂ,
ವಹ್ನಿಯಂ, ನಸುನಗುತ್ತೀಕ್ಷಿಸಿ, ನರೋತ್ತಮಂ
ತಾಳ್ಮೆಯಿಂ ಬಳಿಸಾರ್ದು, ಸಂಶಯವನಟ್ಟುವೋಲ್
ತೋಳ್ತಟ್ಟಿ:
"ಪ್ರಾಜ್ಞನೈ ನೀಂ ಪ್ಲವಂಗೋತ್ತಮ.
ಅನನ್ವಯಕ್ಕಳ್ಕುತಿದೆ ನಿನ್ನ ಮರ್ತ್ಯಪ್ರಜ್ಞೆ.
ನಿನಗವಂ ಮಗನಾಗಿ ಪುಟ್ಟುವೊಡೆ ಬೆದರ್ವೆಯೇಂ?"
"ಬೆದರಿಕೆಯೆ? ಅದೆ ತಾಂ ಮಹೋತ್ಸವಕೆ ಕಾರಣಂ,
ಭುವನ ಗುರು!"
"ದೈವೇಚ್ಛೆ ಎಂತಿಪ್ಪುದಂತಕ್ಕೆ,

ವಹ್ನಿ.'' ರವಿ ಮುಳುಗಿ, ಮೂಡಣ ದೆಸೆಗೆ ಪಡುಗೆಂಪು
ಪಸರಿಸುತ್ತಿರೆ, ನೋಡಿ ರಾಘವಂ: ''ಅದೇಕಿನಿತು
ಪೊಳ್ತಾದುದಯ್ ನಿನಗೆ ಮಿತ್ರನಗ್ನಿಕ್ರಿಯೆಗೆ?''
''ಸೇನಾನಿ ದಧಿಮುಖಂಗನಲಸಂಸ್ಕಾರದೊಳ್
ಸೇವೆಯಂ ಸಲಿಸಿ, ಪುಡುಕಿದೆನೆನ್ನ ಕೆಳೆಯನಂ
ವಾನರಾಸುರರ ಶವಗಳ ಜಟಿಲರಾಶಿಯೊಳ್.
ಬಳ್ಳಗಿದು ಪುಳು ಕೊರೆದುಮೂದಿದ ಪೆಣಂಗಳಂ
ತೆಗೆತೆಗೆದರಸಿ ಕಂಡೆನಾ ರಂಹನಾಗಿರ್ದ
ಕುಣಪಮಂ, ಕ್ಷತಗಳಿಂ ವ್ರಣಗಳಿಂ ತುಳಿತದಿಂ
ಗುರುತಾಗದನಿತು ವಿಕೃತಿಯನಾಂತುದಂ! ಪೊಳ್ತು
ತನ್ನ ಪಾದಾಗ್ರಮಂ ಪಡುಮಲೆಯ ನೆತ್ತಿಯೊಳ್
ಮಡಗಿ ದಿನಮಣಿಯಾಗುತಿರ್ದತ್ತು.''
''ಬಿಡು, ವಹ್ನಿ''
ಕಾರ್ಯದ ವಿಲಂಬನಕೆ ನೀನೊರೆವ ಕಾರಣಂ
ತಾನದನೆ ಮೀರ್ವನಿತು ಬೀಭತ್ಸಮಯ್... ಬಳು
ಕೇಳೂಳುತಿವೆ! ಕರ್ಪೇರುತಿದೆ ಕಾಳರಾತ್ರಿ!
ಬಾ, ಪೋಗುವಂ ಶಿಬಿರದತ್ತಣ್ಗೆ.''
ಕಳ್ತಲೊಳ್
ದಾಶರಥಿಯೆಡೆಯೆ ನಡೆಯುತೆ ವಹ್ನಿ, ಶಿಬಿರದೆಡೆ
ಕೈವಿಡಿದು ನಲ್ ನುಡಿದ ರಘುಜನಂ ಬೀಳ್ಕೊಟ್ಟು,
ತನ್ನ ಪಾಳೆಯಕೆಯ್ದಿ, ತಡವಾದುದೇಕೆಂದು
ಬೆಸಗೊಂಡ ಸೈನಿಕ ಸಹೋದ್ಯೋಗಿಗಳ ಮುಂದೆ,
ಸ್ವಾಮಿಯಂ ಕಂಡ ಸೈಪಂ ಮತ್ತೆ ನಡೆದುದಂ
ನುಡಿದುದಂ ಪೆರ್ಮೆಯಿಂದೊರೆಯುತಿರೆ, ನಂಬದೆಯೆ
ನಗುಮೊಗದಿ ಪೇಳ್ದರಾತಂಗೆ:
''ನಿನ್ನಂತೆವೋಲ್
ಇಂದಾತನಂ ಕಂಡೆವೆಂದವರೆನಿತೊ ಮಂದಿ!
ನಿಂದು ಸಂಜೆಯೊಳವಂ ಕಪಿಮುಖ್ಯರೊಡಗೂಡಿ
ಮಂತ್ರಿಸುತ್ತಿರ್ದನೈಸಲೆ ಮುಂದೆ ಮಾಳ್ಪದಂ!''
ಗಹಗಹಿಸಿ ನಕ್ಕು ರಂಹನ ಸಖಂ: ''ನಿಮ್ಮೊಡನೆ
ನಾನಿಲ್ಲಿ ನಿಮ್ಮೆಲ್ಲರಂ ನೋಡುತ್ತಿರ್ಪುದುಂ

ಪುಸಿಯಲ್ತೆ! ನೀಮೆನಗೆ ಪೇಳ್ದುದುಂ ಕೇಳ್ದದುಂ
ಪುಸಿಯಲ್ತೆ! ಪುಸಿಯಪ್ಪೊಡಿವು, ರಾಮಭದ್ರನಂ
ನಾಂ ಕಂಡುದುಂ, ಕೇಳ್ದುದುಂ, ನುಡಿದುದುಂ ಮತ್ತೆ
ಮೈ ಮುಟ್ಟಿದುದುಮೆಲ್ಲಮುಂ ವಿಕೃತಿ ಜನ್ಯಗಳ್,
ಭ್ರಾಂತಿಗಳ್, ಮಿಥ್ಯೆಯೆ ದಿಟಂ!''
ಇತ್ತಲಿಂತಿಂತೆ
ಶಿಬಿರ ಶಿಬಿರದಿ ಬೀಡುಬೀಡಿನೊಳ್ ದ್ರುಮಯೋಧಿ
ಸೈನಿಕರ್ ತಂತಮ್ಮ ಸತ್ಯದ ಸಮರ್ಥನೆಗೆ
ವಾದಿಸುತ್ತಿರಲತ್ತಲಾ ಕೋಸಲೇಶ್ವರಂ
ಕಪಿಮುಖ್ಯರೊಡನೆ ಮುಂದಣ ನೀತಿಯಂ ನೆನೆದು,
ತನ್ನಂತರಂಗದೊಳ್ ನಿಚ್ಚಯಿಪುದಂ ತಾನೆ
ತರಿಸಂದು, ಕಾಯುತಿರ್ದನು ರಾಕ್ಷಸೋತ್ತಮ
ವಿಭೀಷಣಾಗಮನಮಂ.
ಅತ್ತಲ್ ಪ್ರಭಾತದೊಳ್
ನಗರಿಯಂ ಪೊಕ್ಕು ರಾವಣನನುಗದಮ್ಮಂ
ಹಿತೋಚಿತದ ನುಡಿಯಮರ್ದ್ದಿಂ ಸಂಕಟವನಿನಿತೆ
ತವಿಸಿ, ದೈತ್ಯೇಂದ್ರನಪರಕ್ರಿಯೆಗೆ ಸುವಿಶಾಲ
ಸಾಗರದ ವಿಪುಲ ನೀಲಿಮೆಗಂಚಿನಂತೆಸೆವ
ವಿಸ್ತರದ ವೇಲಾ ಬೃಹಚ್ಚಕತ ವೇದಿಯೊಳ್
ವಿರಚಿಸಲ್ಕಾಣತಿಯನಿತ್ತನ್ ಚಿತಾಮಂಚಮಂ,
ಚಂದನೇಂಧನ ರುಚಿರಮಂ, ರಾಂಕವಾಸ್ತರಣ
ಮೇಣ್ ಪದ್ಮಕೋಶೀರ ರಮಣೀಯಮಂ. ರಾಜ
ರಾಜ್ಞಿಯರ ಪೂಜಿತ ಕಳೇಬರಂಗಳೇರ್ದುವಯ್
ಮಸಣದೇರಂ. ರಾಜ ಗೌರವಕೆ ಮೊಳಗುತಿರೆ
ವಾದ್ಯಗಳ್, ರಾಜಭಕ್ತಿಗೆ ಸೇನೆಯಿರ್ಕೆಲದಿ
ತಲೆಬಾಗಿ ಸಾಗಿ ಬರೆ, ರಾಜನೊಲ್ಮೆಗೆ ಪ್ರಜಾ
ಕೋಟಿ ತಿರೆ ತೊಯ್ಪುವೋಲಳುತೆ ತೆರೆತೆರೆಯಾಗಿ
ಶೋಕಮಯ ಮೆರವಣಿಗೆ ನಡೆದುದು ಮಹಾಂಭೋಧಿ
ತಟಕೆ. ಸೌರಭ ಪುಷ್ಪಯವನಿಕಾವೃತಮಾಗಿ
ಶ್ರೀ ರಾವಣನ ಮೇಣ್ ಸತೀ ಮಂಡೋದರಿಯ
ಕಳೇಬರಗಳಾರೂಢಮಾದುವು ಚಿತೆಯ ಗಂಧ

ಬಂಧುರ ಮನೋಜ್ಞ ಲಾವಂಚಮಯ ಮಂಚಮಂ.
ಅಸುರ ಋತ್ವಿಕ್ಕುಗಳ ಚರಮ ಋಙ್ಮಂತ್ರಗಳ
ಗೇಯದೊಡನೊಡನೆ ಅನಲೆಯ ತಂದೆ ಕಿರ್ಚಿಡಲ್
ಪೆರ್ಚಿದತ್ತಾಕಾಶ ಚುಂಬಿ ಗೋಪುರದಂತೆ
ಸಗ್ಗಕ್ಕೆ ತೋರ್ಬೆರಳೆನಲ್ ಚೈತ್ಯ ಸಪ್ತಾರ್ಚಿ.
ನೋಡುತಿರೆಯಿರೆ ಜಗತ್‌ತ್ರಯ ಭಯಂಕರ ದೈತ್ಯ
ರಾಜ ರಾಜೇಂದ್ರ ಲಂಕೇಶ್ವರನ ದಶಶಿರನ
ರಾವಣನ ದೇಹಮಾ ರಾಜರಾಜೇಶ್ವರಿಯ
ಮಂಡೋದರಿಯ ಕಾಯದೊಡನೆ ರಾಶೀಕೃತಂ
ಶ್ವೇತಭಸ್ಮಾವಶೇಷಂ ಮಾತ್ರ ತಾನಾಗಿ
ಪರಿಣಾಮಗೊಂಡುದು, ಜಗನ್ಮಿಥ್ಯೆಯಂ ಸಾರ್ವ
ಸಂಕೇತ ಸಾಕ್ಷಿಯೋಲ್. ಜಲಧಿ ಜಲಮಂ ಮಿಂದು,
ತೊಯ್ದುರುವೆಯಿಂ ಬಂದು, ದೂರ್ವಾಭಿಮಿಶ್ರಿತಂ
ತಿಲ ತೀರ್ಥಮಂ ದಾನವಿತ್ತು ವಿಧಿಪೂರ್ವಕಂ,
ಪಿರಿಯಣ್ಣನೊಂದು ನೆನಹಿನ ಪುಣ್ಯಕಭಿನಮಿಸಿ,
ದುಃಖಾಗ್ನಿ ದಗ್ಧಹೃದಯರ್ಗೆ ಸಾಂತ್ವನ ದುಗ್ಧ
ಸುಸ್ನಿಗ್ಧ ವಾಗಮೃತವೆರೆದೊರೆದು ಸಂತೈಸಿ,
ಪುರಮಂ ಪುಗಿಸಿ, ರಾಕ್ಷಸ ಮಹಾನುಭಾವಂ
ವಿಭೀಷಣಂ ಬಂದನಾ ರಾತ್ರಿಯೆ, ತನ್ನ ಪಥಮಂ
ಕಾಯ್ದು ತವಕಿಸುತಿರ್ದ ರಾಮನ ದಿವ್ಯ ಸನ್ನಿಧಿಗೆ.

## ಸಂಚಿಕೆ ೧೧

# ರಯ್‌ಗೆ ಕರೆದೊಯ್, ಓ ಅಗ್ನಿ!

ಕ್ರಾಂತದರ್ಶಿನಿ, ಓ ಜಗತ್‌ಕಾಂತಿಕರೆ, ಶಾಂತೆ,
ಭ್ರಾಂತಿಹರೆ, ಸುಚಿರೆ, ಸುಸ್ಥಿರೆ, ಪರಾತ್ಪರೆ, ವಾಣಿ,
ಓ ಪರಾತ್ಪರವಾಣಿ, ಮಿಡಿ ನಿನ್ನ ಬೀಣೆಯಂ;
ನುಡಿ ಮುಂದೆ ನಡೆದುದಂ, ನಿನಗೆ ಕಾಣ್ಬಂದದಿಂ,
ಲೋಕಮೋಹಕ ಶೋಕದಾರುಣ ಕರುಣ ಕಥೆಯಂ,
ಧರಾತ್ಮಜೆಗೆ ರಾಘವೇಂದ್ರಗೆ ಮತ್ತೆ ಸುಗ್ರೀವ
ಕಪಿಕಟಕಕೊದಗಿದ ಮಹತ್ ಸಂಕಟದ ಮತ್ತೆ
ನೂರ್ಮಡಿಯೆನಲ್ ಮುಹುರ್‌ಭವಿಸಿದನುಪಮ ಸುಖದ
ಸಂಕಥನಮಂ. ತನ್ನ ಮುಡಿಗೆ ರಘುವರನಿಡಲ್
ಬಯಸಲೊಲ್ಲದೆಯೆ ಲಂಕಾ ಕಿರೀಟವನದಂ
ಇಂದ್ರಜಿತುವಿನ ಕಂದಗಾ ಪಸುಳೆ ಮೊಮ್ಮಗನ
ಮುಡಿಗೆ ತಾನೆಯೆ ತೊಡಿಸುವನಲಾ ವಿಭೀಷಣಂ!
ಬಾ ನೋಳ್ಪಮಾ ತ್ಯಾಗ ವಿಭವಮಂ! ಮತ್ತಮಾ
ಮೇಘನಾದಧ್ವಂಸಿ ತಾಂ ತಾರಾಕ್ಷಿಯರ್ಭಕಗೆ
ವಜ್ರಾರಿಗೆ ಕಿರೀಟಧಾರಣೆಯನೆಸಗುವ
ಮಹೋತ್ಸವವನೀಕ್ಷಿಸುವಮೆಂದು ಉಷೆ, ಕರೆಕರೆದು
ರವಿದೇವನಂ, ಏರಿದಳು ಬೇಗಮೈಂದ್ರಾದ್ರಿಯಂ!
ಪಕ್ಷಿಸ್ವನಸ್ವಾಗತಕ್ಕಾನಂದಿಸುತೆ ಮೂಡಿ,
ಕೇಳ್ದನು ದಿನೇಶನುಷೆಯಂ: "ಎಲ್ಲಿ ನೀನೊರೆದಾ
ಮಹೋತ್ಸವಂ?" "ಕಾಲಿಲ್ಲದವನೆ ಸಾರಥಿಯಲಾ!
ಆ ಹೆಳವನೊಡನೆ ನೀಂ ತೆವಳಿ ಬರ್ಪನ್ನೆಗಂ

ಮುಗಿದುದದು!''
"ಏನವಸರಮೊ ಆ ವಿಭೀಷಣಗೆ?''
"ನಿನ್ನ ಪೀಳಿಗೆಯರಸರೇಳ್ಗೆ ತಾನವಸರಂ!
ನೋಡದೊ; ಜಗಚ್ಚಕ್ಷು ನೀನಲ್ತೆ? ಅಯೋಧ್ಯೆಯೊಳ್
ತಪಿಸುತಿರ್ಪಂ ಭರತನೂರ್ಮಿಳಾ ದೇವಿಯೆರ್ದೆ
ತಳಮಳಿಸುತಿರ್ಪುದಾಶಂಕೆಯಿಂ; ತಾಯ್ವಿರಾ
ಕೌಸಲ್ಯೆಯುಂ ಮೇಣ್ ಸುಮಿತ್ರೆಯುಂ ಮತ್ತಮಾ
ಕೈಕೆಯುಂ ಬೆಂದು ಬೇಗುದಿಗೊಳ್ಳುತಿಹರೆಂತು
ತಂತಮ್ಮ ಕಣ್ಣೀರ್ಗಗಳುರಿವೆಂಕೆಯಿಂ! ಸ್ವಾಮಿ
ರಾಮಚಂದ್ರಂ ಕಾತರಿಸುತಿರ್ಪನವರೆಡೆಗೆ
ಪಿಂತಿರುಗಲತಿಶೀಘ್ರದಿಂ, ದೇವಿ ಸೀತೆಯಂ
ಪಡೆದು.''
"ರಾವಣನಳಿದನಿನ್ನಾರ ತಡೆ ಪೂಜ್ಯೆಯಂ
ಪರಿಶುದ್ಧೆಯಂ ಪಡೆಯೆ?''
"ಸಾರ್ಥಕಮಪ್ಪುದೈ ಚಕ್ಷು;
ಕಾಣುವಯ್ ನೀನಾ ಜಗದ್‌ಭವ್ಯ ದೃಶ್ಯಮಂ;
ನೋಡುತಿರು. ರಾಮಾಜ್ಞೆಯಿಂ ವಿಭೀಷಣನೊಡನೆ,
ಕಾಣದೊ, ಅಶೋಕವನಮಂ ಪುಗುತ್ತಿರ್ಪಂ
ಮರುತ್ಸೂನು, ಜಾನಕಿಗೆ ವಿಜಯವಾರ್ತೆಯನೊರೆದು,
ದೇವಿಯಭಿಲಾಷೆಯಂ ತಿಳಿದು, ತದನಂತರಂ
ತರಿಸಲಲ್ ಮುಂಬಟ್ಟೆಯಂ.''
ರವಿಕಿರಣಮೊಂದು
ಪರ್ಣಶಾಲೆಯ ಪತ್ರವಿರಳತೆಯನರಸಿ ತಾಂ
ಪೊಕ್ಕುದು ಕುಟೀರಮಂ. ದಶಕಂಠನಂತ್ಯಮಂ
ಕೇಳ್ದಾ ಮೊದಲ್ಗೊಂಡುಮೀಗಳಾಗಳೊ, ತಾನೊ
ಲಕ್ಷ್ಮಣನೊ, ದೂತನೊ ವಿಭೀಷಣನೊ ಮೇಣಾರೊ
ಮತ್ತೆಂತೊ, ಬಂದಪ್ಪರಾಣ್ಮನಾದೇಶಮಂ
ತಂದಪ್ಪರೆಂದು ಪಗಲಿರುಳುಗಳನೆಳ್ಚರೊಳೆ
ನೂಂಕುತಿರ್ದುತ್ಕಂಠೆ ಮೆಲ್ಲನೊಳಪೊಕ್ಕತಿಥಿ
ಕಿರಣಪ್ರಥಮದೂತನಂ ಕಾಣುತಾದರದಿ
ಕೈಮುಗಿದಳುಪಚರಿಸಿದಳು ಸೀತೆ. ನುಡಿದಳ್

ತ್ರಿಜಟೆಗಿಂತು:
“ರವಿದೂತನೈತಂದನೌ, ಕೆಳದಿ.
ರವಿಕುಲೇಶ್ವರ ದೂತನೇಕಿನ್ನುಮೈತರನೊ?
ಕಜ್ಜಮೊ? ಮುನಿಸೊ? ಕಾರಣವನರಿಯದೆನ್ನುಸಿರ್
ಲಜ್ಜಿಸುತ್ತಿಹುದೊಡಲ ಗೂಡಿನೊಳೆರಂಕೆಯಂ
ಬಿಚ್ಚಿ, ಪಾರ್ವೆನೊ ನಿಲ್ವೆನೆಂಬ ಬಗೆಯುಯ್ಯಲೆಯ
ಲತೆಯಂ ತೊನೆದು ತೂಗಿ.”
“ತವರುಮನೆ ಬಳಿಸಾರೆ
ನಡೆವ ದಾರಿಯ ಹಾವುಮೆಯ್ ನಿಡುನಿಮಿರ್ದಂತೆ
ತೋರುವುದು, ತಾಯಿ. ನಿನಗಾಗಿ ಬಂದವನಲ್ತೆ
ನಿನ್ನ ಜೀವೇಶ್ವರಂ? ಶೋಷಿಸಿ ಸಮುದ್ರಮಂ
ರಾಜರತ್ನವನುಳಿವನೇಂ ರಾಜರಾಜೇಶ್ವರಂ?”
“ಪೊರಗಿಣಿಕಿ ನೋಡು ಸಖಿ! ಅಶೋಕವನಿಕಾ ವೀಥಿ
ಧನ್ಯಮಾದುದೆ ದಿವ್ಯ ಚರಣ ಧೂಳಿಯೊಳಿಂದು?”
ತನು ವಿಕಂಪಿಸೆ ಗದ್ಗದಿಸುತೆಂದ ಮೈಥಿಲಿಗೆ
ನೋಡಿ ನುಡಿದಳ್ ತ್ರಿಜಟೆ:
“ಕಾಣರಾರುಂ, ದೇವಿ.”
“ಏನನೋ ನೀಂ ಗಮನಿಸಿದೆಯಲ್ತೆ?”
“ಏನಿಲ್ಲ,
ತಾಯಿ, ನವಿಲೆರಡು ಮೇವರಸಿ ಚರಿಸಿಹವಲ್ಲಿ.”
“ಇನ್ನೊಮ್ಮೆ ನೋಡಮ್ಮ. ನಿನಗೆ ಪರಿಚಯವಿರದು
ನರರ ನಡೆಯುಡುಗೆಗಳ್ ಮೇಣ್ ತೊಡುಗೆಗಳ್, ತ್ರಿಜಟೆ.
ನೋಡಮ್ಮ: ನವಿಲೊ? ಮೇಣ್ ದಿವ್ಯಾಂಬರವನುಟ್ಟ
ನೀಲಾಂಬರೋಪಮ ಸುನೀಲವಪು ಮಾನವನೊ?”
ಸುಯ್ದು, ಕಣ್‌ತೊಯ್ದು, ಮತ್ತೊಮ್ಮೆ ತನ್ನಂ ಕೇಳ್ದ
ದೇವಿಯ ಮನಸ್‌ತೃಪ್ತಿಗಾ ರಾಕ್ಷಸೋತ್ತಮೆ ತ್ರಿಜಟೆ
ಮರಳ್ಚಿದಳ್ ಕಣ್ಣನಾ ಕಡೆಗೆ. ಮರಳಿಸದಿರಲ್
ಮತ್ತಮಾ ಕಣ್ಣನಿತ್ತಣ್ಗೆ, ಕಾತರೆ ಸೀತೆ ತಾಂ
ಕುದಿಕುದಿದು, ಕೂಗಲಾರದೆ ಕೂಗಿದಳ್:
“ತ್ರಿಜಟೆ!
ತ್ರಿಜಟೆ! ಪೇಳ್! ಕಂಡೆಯೇನನ್? ಕಂಡುದಾರನ್?”

ಬೆರಗುವಟ್ಟತ್ತಣ್ಗೆ ನಟ್ಟಾಲಿಗಳನಿತ್ತಣ್ಗೆ
ಹೊರಳಿಸದೆ, ಏದುವೆರ್ದೆಯಿಂ ತೊದಲಿದಳ್ ತ್ರಿಜಟೆ:
“ಬರುತಲಿರ್ಪಂ ಮಹಾ ದಾನವೇಂದ್ರಂ, ದೇವಿ!”
ಬೆಬ್ಬಳಿಸಿದಳ್ ಸೀತೆ ಬೆಳ್ಪಮರ್ದರೋಲ್:
“ಅಯ್ಯೊ!
ಮತ್ತೆ ಆ ರಾವಣನೆ? ಸತ್ತನೆಂದೇಕೆನಗೆ ನೀಂ
ಬರಿದೆ ಪುಸಿಯಾಡಿದೌ, ತ್ರಿಜಟೆ?”
“ರಾವಣನಲ್ತು.
ಆ ದನುಜನನುಜೋತ್ತಮಂ!”
ಸುಯ್ದು, ಹರ್ಷದಿಂ,
ದುಗುಡದಿಂದೊಯ್ಯನೆಯೆ ಸುಖಕೆ ಧುಮುಕಿದ ಭಾವ
ಜಲಪಾತಘಾತಕೆನೆ ಚೇತನಂ ತತ್ತರಿಸೆ,
ಸೋಲ್ತುಳೋಲಾಯಸದೊಳುಸುರಿದಳವನಿಜಾತೆ:
“ಏನೆಂದೆ, ಕೆಳದಿ? ಅನಲೆಯ ತಂದೆ ಬರುತಿಹನೆ?”
“ಬಳಿಯಿರ್ಪಳನಲೆಯುಂ, ದೇವಿ!”
“ದೀರ್ಘಾಯುಗಳ್
ತಾಮಿರ್ವರುಂ ದಿಟಂ! ಮತ್ತಾರುಮಿರರೆ ಪೇಳ್
ಅವರೊಡನೆ?”
“ಇರ್ಪನೊರ್ವಂ! ನಾನರಿಯದವಂ!
ತೇಜೋನ್ವಿತಂ! ಕಾಣೆನಿನ್ನೆವರಮನ್ನನಂ!”
“ರಾಕ್ಷಸನೆ?”
“ನಮ್ಮವರ ಪಾಂಗಲ್ತು, ಅವನುಡುಗೆ.”
“ನೀಲದೇಹಿಯೆ?”
“ನೀಲಿಯಲ್ತು. ಹೊನ್ನಿನ ಹೊಳಹು!”
“ಬಣ್ಣಿಸೆನಗಾತನಂ. ಪುಣ್ಯನೇತ್ರೆಯೆ ದಿಟಂ
ನೀಂ, ತ್ರಿಜಟೆ! ನನ್ನ ಮೈದುನನ ಮೆಯ್ವಣ್ಣಮುಂ
ಕಾಂಚನಾಭಂ ಕುಸುಮ ಸುಂದರಂ.”
“ವನಲತಾ
ಶೋಭಿತ ಶಿರಸ್ತ್ರದಿಂ ರಂಜಿಪನ್. ಪುಲಿದೊವಲ
ಪೊನ್ನವಿರ್ ಕಯ್ಗಯ್ದು ಕಪಿಚರ್ಮ ಕವಚಮಂ
ತೊಟ್ಟಿಹನ್. ಕೊಂಕುಮೂಗಿನ ಬಿಂಕದಾನನಂ.

ವಜ್ರತನು...''
"ತ್ರಿಜಟೆ, ಬರ್ಪವನಾರೊ ವಾನರಂ!
ಪಿಂತೆ ಬಂದಾಂಜನೇಯನೆ ಇಂತು ತನ್ನೊಂದು
ನಿಜರೂಪದಿಂ ಬಂದಪನೊ? ತೋರ್ದನಂದೆನಗೆ
ಧ್ವಜರೂಪದಿಂ. ಸ್ವಾಮಿ ಕಳುಹೆ ತಂದಪನೆನಗೆ
ಸಂದೇಶಮಂ. ಧನ್ಯೆ ನಾನಿನ್, ಸಖೀ!''
"ತಾಯಿ,
ಬಂದಳಿದೊ ಅನಲೆ, ತಂದೆಯನಲ್ಲಿ ದೂರದೊಳೆ
ನಿಲಿಸಿ!''
ದುಃಖವನೆಲ್ಲ ಮರೆತಣುಗಿ, ಸುಖವುಕ್ಕಿ,
ಬಾಷ್ಪಲೋಚನೆ, ಓಡಿ ಬಿಗಿದಪ್ಪಿ ಸೀತೆಯಂ
ತೊದಲಿದಳ್, ತ್ರಿಜಟೆ ಪುಲಕಿಸಿ ಮೆಯ್ಮರೆಯುವಂತೆ:
"ಶ್ರೀರಾಮ ಸಂದೇಶಮಂ ಪೊತ್ತಾಂಜನೇಯನಂ
ನಿನ್ನ ಸನ್ನಿಧಿಗೆ ಕರೆತಂದು ನನ್ನಯ್ಯನದೊ
ಅಲ್ಲೆ ನಿಂತಿಹನಮ್ಮ. ನಿನ್ನ ಸಮಯವನರಿತು
ಬಾ ಎಂದೆನೆಗೆ ಬೆಸಸಿದನ್.''
"ಮಗಳೆ, ಮಂಗಳದ
ವಾರ್ತೆಯಂ ತಂದೆ. ಚಿರಸುಖಿಯಾಗು. ನೀನೊಲಿದ
ವರನೆ ದೊರೆಯಲಿ ನಿನಗೆ! ನಿನ್ನ ಕೈವಿಡಿದವಂ
ಕೈಬಿಡದೆ ನಡೆಯಲೆಂದುಂ! ಪತಿಯ ವಚನಮಂ
ಕೇಳ್ವಾತುರೆಗೆ ಸತಿಗೆ ನನಗಾವುದಸಮಯಂ?
ಪೋಗು ನಡೆ; ಬೇಗದಿಂ ಕರೆದು ತಾರಮ್ಮಯ್ಯ
ವಂದನೀಯರನಿರ್ವರಂ!''
ಪೂಜ್ಯೆಯೊರೆದುದಂ
ಪೇಳಿದು ವಿಭೀಷಣ ಕುಮಾರಿ ಕರೆತರಲವರ್
ನಡೆತಂದರೆಲೆವನೆಗೆ, ಗುಡಿವುಗುವ ಭಕ್ತರೋಲ್
ಬಾಗಿಲೆಡೆ ಬಾಗಿ, ಗೌರವಭಾರಕೆಂಬಂತೆ.
ಕೈಮುಗಿದರಿರ್ವರುಂ. ಕೈಮುಗಿಯುವಂಬಿಕೆಯ
ತಡೆವಂತೆ ನುಡಿದರೀ ನಂಬಿಕೆಯ ನೈವೇದ್ಯಮಂ:
"ಹರಸೆಮ್ಮನಮ್ಮ! ರಾಮನ ನುಡಿಯ ತಂದೆವು
ನಿವೇದಿಸಲ್ ನಿನ್ನಡಿಯ ಗುಡಿಗೆ!''

"ಬಾಯ್ ತಪ್ಪಿದಿರಿ,
ಮಾನ್ಯರಿರ! ಮುಡಿಗಿಡಲ್ ಪಡೆದುದಂ ಕೊಡಿಮೆನಗೆ!"
ನುಡಿಜಾಣನಾಂಜನೇಯಂ ವಿಭೀಷಣಂಗೊರೆವ
ಮಾಳ್ಕೆಯಿಂ: "ನಮಗೆರಡುಮೊಂದಲ್ತೆ, ದನುಜೇಂದ್ರ?
ಕ್ಷಮಿಸುವಳ್ ತಾಯ್ ಕ್ಷಮಾಪುತ್ರಿ!" ಎನ್ನುತ್ತೆನುತೆ
ವಿನಯದಿಂದೊರೆದನಾ ರಘುಜ ಸಂದೇಶಮಂ
ಕಿವಿಗೊಟ್ಟ ರಾಘವನ ಸತಿಗೆ:
"ಕಪಿರೂಪದಿಂ
ಪಿಂತೆ ನಿಮ್ಮಡಿ ಕಂಡನೆಂ, ರಾಮದೂತನೆಂ;
ವಾಯುದೇವಂಗಂಜನಾ ದೇವಿಯರ್ಗಣುಗನೆಂ,
ಕೇಳ್ ತಾಯಿ, ವೈದೇಹಿ. ನಿನ್ನ ತಪದಿಂದೆಮ್ಮ
ಸೈಪಿಂದೆ, ಮತ್ತೆ ವಿರಹಜ ತಪೋಪ್ರಕಟಿತಂ
ತನ್ನಾತ್ಮ ನಿಜ ಸಹಜ ಭಗವದ್ ವಿಭೂತಿಯಿಂ
ಶ್ರೀರಾಮನಿಂ ಮುಕ್ತಶತ್ರುವಾಯ್ತೀ ಲಂಕೆ,
ಮಹನೀಯನೀ ವಿಭೀಷಣ ಮೈತ್ರಿಯಿಂ. ಕುಶಲಿ
ಹತಶತ್ರುವಿನಕುಲೇಶ್ವರನಿಂದು ಲಕ್ಷ್ಮಣಂ
ವೆರಸಿ. ಬಿಡು ಭೀತಿಯಂ; ಸ್ವಸ್ಥೆಯಾಗಂಬಿಕೆ;
ಅರಿಂದಮಂ ರಘುನಂದನಂ! ಗತವ್ಯಥೆಯಾಗು;
ರಾವಣಾರಾತಿ ತಾನಿಂದು ರಾವಣಧ್ವಂಸಿ!"
ಕೇಳುತಾಲಿಸುತೇಳಲೆಳಸಿದಳ್. ಮಿನುಗಿದುದು
ಏಕವೇಣೀಧರೆಯ ಮಲಿನಾಂಬರೆಯ ಮೊಗದಿ
ನಗೆದಿಂಗಳೆಳೆಯ ಹೊಂಗಾಂತಿ. ಸ್ಮೃತಿಶಿಥಿಲೆಯೋಲ್
ಪ್ರತಿಜಲ್ಪಮಿಲ್ಲದೆ ಶಿಲಾಪ್ರತಿಮೆಯಂತಿರ್ದ
ಮಿಥಿಲಾಂಗನೆಗೆ ಹರಿಶ್ರೇಷ್ಠಂ:
"ಇದೇಂ, ದೇವಿ,
ಮಾರ್ನುಡಿಯದೆನಗೆ, ಚಿಂತಿಸುತಿರ್ಪೆ ಮಡುಮುಳುಗಿ?"
ಹರ್ಷಗದ್ಗದೆ ರಾಮಪತ್ನಿ:
"ಪತಿವಿಜಯಮಂ
ಸವಿದುದು ಸುವಾರ್ತೆಯಂ ಶ್ರುತಿ. ತಡಕುತಿದೆ ಮತಿ
ಸರಸ್ವತಿಯ ಭಂಡಾರಮಂ ಪಡಿನುಡಿಯನರಸಿ.
ನುಡಿಯೊಡತಿಗಿಂದದಸಿದೊಂದು ಕಡು ಬಡತನಕೆ

ಕಿನಿಸಿ ನಾಂ ನಿರ್ವಾಕ್ಯೆಯಾದ! ವಾಕ್ಕೋವಿದಂ
ನೀಂ, ಪ್ಲವಂಗೋತ್ತಮ; ಅವಾಙ್ಮಾನದರ್ಥಮಂ
ಗ್ರಹಿಸಲ್ ಸಮರ್ಥನಾ ಕತದಿನವ್ಯರ್ಥಮೀ
ನನ್ನ ವಾಗ್‌ದಾರಿದ್ರ್ಯಮುಂ.''
''ಶ್ರೀಪೂರ್ಣಮಾ
ನಿನ್ನ ರಿಕ್ತತೆ ದಿಟಂ! ವಾಗ್ದೇವಿಯೊಡೆಯಂಗೆ
ತಾನೊಡೆಯನಾದಾತನಿಗೆ ಲಕ್ಷ್ಮಿ ನೀನಲ್ತೆ?
ನಿನಗವಳ ಭಂಡಾರಮುಂ ಬಡತನಮೆ ವಲಂ!
ಧನ್ಯನೆಂ, ದೇವಿ; ಪ್ರತ್ಯಭಿನಂದಿತಂ ನಾಂ
ಅವಾಙ್ಮಾನ ದಿವ್ಯವರದಿಂ! ದೇವರಾಜನೇಂ?
ಧನದನೇಂ? ನನಗುಮಿನ್ನವರ್ ದರಿದ್ರರೆ ದಿಟಂ!
ಜಾನಕಿಗೆ ರಾಮವಿಜಯವನುಲಿದ ಕಿಂಕರಗೆ,
ನನಗೆ, ಹೊಯ್‌ಕೈಯಾರ್ ಜಗತ್ರಯದ ಧನ್ಯರಲಿ?''
''ಕಂಡೆನಿಂದಿದುವರೆಗೆ ಕೇಳ್ದುದಂ, ಪವನಸುತ,
ನಿನ್ನತುಲ ಮಹಿಮೆಯಂ. ಬಲದಲ್ಲಿ, ಶೌರ್ಯದಲಿ,
ಸತ್ತ್ವವಿಕ್ರಮಗಳಲಿ, ದಾಕ್ಷ್ಯದೊಳ್ ತೇಜದೊಳ್
ಕ್ಷಮೆಯಲ್ಲಿ, ಧೃತಿ ಧೈರ್ಯ ವಿನಯಂಗಳೊಳ್, ಕೇಳ್
ದಿಟಂ, ನಿನಗೆ ಹೊಯ್‌ಕಯ್ಯಗ್ಗಳಿರರಯ್ ಜಗತ್ರಯದಿ!''
''ಔದಾರ್ಯ ಸುರಭೂಜನರ್ಧಾಂಗಿಗರ್ಹಮಂ
ಕೃಪೆಗೆಯ್ದೆ ನೀನೀ ಶುಭಾಶೀರ್ವಚನವೇದಮಂ,
ನನ್ನ ಮುನ್ನಡೆಗೆ ಪಾಥೇಯಮಂ. ನೀನಂದು,
ಪೂಜ್ಯೆ, ಚೂಡಾಮಣಿಯನಿತ್ತಂದದಿಂದೆನಗೆ
ಇಂದನುಗ್ರಹಿಸು ಪ್ರತಿಸಂದೇಶಮಂ ಪತಿಯ
ಸನ್ನಿಧಿಗೆ''
''ಪುರುಷೋತ್ತಮಪ್ರಿಯತಮನ ಪುಣ್ಯ
ದರ್ಶನಮೆ ಪರಮ ಪುರುಷಾರ್ಥಕಿಂ ಮಿಗಿಲೆನಗೆ
ಪ್ರಿಯತಮಂ, ವತ್ಸ! ಬೇರಿನ್ನುಂಟೆ, ಧರ್ಮಜ್ಞ
ನೀಂ ಪವನಸುತ, ಪೇಳ್, ಪತಿವ್ರತಾ ಸತಿಗನ್ಯ
ಜೀವಿತಾರ್ಥಂ? ದಯಿತೆಗಿನಿಯನಂ ನೋಳ್ಪಾಸೆ
ಸಂದೇಶಮಪ್ಪೊಡದನುಯ್ವುದೈ. ಅಜ್ಞತೆಗಳುಕೆ
ನಿನ್ನವೊಲ್ ವಿಜ್ಞನಿರೆ ಸಂದೇಶವಾಹಕಂ?''

“ವಿಜ್ಞಾಪಿಸುವೆನಾಜ್ಞೆಯಂ ಮೈಥಿಲೀಪ್ರಿಯಗೆ
ರಾಮಾಭಿರಾಮೆಯಭಿಲಾಷೆಯಂ! ದನುಜೇಂದ್ರ,”
ಮೇಘಸಂಕಾಶಂ ಮಹದ್ರೂಪದಿಂ ಬಳಿಯೆ
ನಿಂದು, ಸೀತಾಂಜನೇಯರ ಜಗನ್ಮೋಹಕರ
ಸಂವಾದ ಕಾವ್ಯರಸತೀರ್ಥದೊಳ್ ಮುಳುಗಿರ್ದ
ರಾಕ್ಷಸೋತ್ತಮಗೆಂದನಾ ಪ್ಲವಂಗೋತ್ತಮಂ:
“ನೀಂ ಪ್ರಭುವಿನಾಜ್ಞೆಯಂತೀ ಲೋಕಮಾನ್ಯೆಗೆ
ಶಿರಸ್ನಾನಮಂ ಗೆಯ್ಸಿ, ಶೀಘ್ರದಿಂ ಕರೆದು ತಾ,
ದಿವ್ಯಾಂಗರಾಗದಿಂದವತಂಸಯೋಗದಿಂ
ಭೋಗೀಂದ್ರಶಾಯಿಯರ್ಧಾಂಗಿಗೊಪ್ಪುವ ತೆರದಿ
ಸಿಂಗರಿಸಿ ಸುಮಗಂಧದಿಂ.” ಮತ್ತೆ ಮೈಥಿಲಿಗೆ
ಪಣೆಮಣಿದು ಕೈಮುಗಿದು ಬೀಳ್ಕೊಟ್ಟನಂಜನಾ
ನಂದನಂ ಪ್ರತಿವಂದನಂಗೆಯ್ದಳಂ, ಪೂಜ್ಯೆ
ರಘುನಂದನಾನಂದೆಯುಂ.
ಬಳಿಯೆ ನಿಂದನಿತುಮಂ
ಬಂಡುಣುವವೋಲೀಂಟುತಿರ್ದ ಮಗಳಂ ಕುರಿತು
ಸೀತೆಯಾಲಿಸುವಂತೆ ರಾಕ್ಷಸೇಂದ್ರಂ: “ಅನಲೆ,
ಬೆರಗು ಬಡಿದಿಂತೇಕೆ ನಿಂತಿರುವೆ? ತಡೆಯದೆಯೆ
ಯಾನವೇರಿಸು ನಮ್ಮ ಭಾಗ್ಯದೀ ದೇವಿಯಂ.
ತ್ರಿಜಟೆಯ ಸಹಾಯದಿಂ, ನಿನ್ನ ತಾಯೊಡಗೂಡಿ,
ಪರಿಮಳ ದ್ರವ್ಯಮಯ ನವ್ಯ ತೈಲಂಗಳಂ
ಪೂಸಿ, ಮೀಯಿಸು ಸುಖೋಷ್ಣೋದಕ ಧಾರೆಯಿಂ,
ಪೊಂಗಿಂಡಿಗಳೊಳೆರೆದು ಪೊಯ್‌ನೀರ್ಗಳಂ. ಮತ್ತೆ,
ಜನಕ ರಾಜನ ಮಗಳಿಗೀ ದಶರಥನ ಸೊಸೆಗೆ,
ರಾಮಪತ್ನಿಗೆ, ಪಳಿಲಜ್ಜೆಯಂ ತೊರೆದು ಬಿಂಕದಿಂ
ಕನಕ ಲಂಕಾ ಲಕ್ಷ್ಮಿ ತಲೆಯೆತ್ತಿ ನಿಲ್ಪಂತೆವೋಲ್,
ತೊಡಿಸುಡಿಸು ಮುಡಿಸು ದಿವ್ಯಾಂಬರಾಭರಣಮಂ
ಪುಣ್ಯಪ್ರಸೂನಂಗಳಂ. ಮಿಥಿಲೆಯಿಂದಂದು
ಕೋಸಲಕೆ ದಿಬ್ಬಣಂಬೋದವೋಲಿಂದೆಮ್ಮ
ಲಂಕೆಯಿಂದೀಕೆ, ನವವಧುವೆನಲ್, ಪ್ರಭುವೆಡೆಗೆ
ಬೇಗದಿಂ ಪೋಗವೇಳ್ಕುಂ!”

ಕೇಳ್ದದಂ ವೈದೇಹಿ
ಸನ್ನೆಗರೆದನಲೆಗಾಡಿದಳವಳ್ ತನ್ನಯ್ಯನಂ
ಕುರಿತು: "ಅಸ್ನಾತೆಯಾಗಿಯೆ ಪೂಜ್ಯೆ ತೆರಳಲ್ಕೆ
ಬಯಸುವಳ್, ತಂದೆ, ಪತಿಪಾದದರ್ಶನಕೆ."
"ಆ
ಪ್ರಭುವಾಜ್ಞೆ, ದೇವಿ; ನನ್ನಿಚ್ಛೆಯೆಂದರಿಯದಿರ್."
ಎಂದು ತನಗೆಯೆ ಪೇಳ್ದ ದನುಜೇಂದ್ರಗಾ ಸಾಧ್ವಿ
"ಮನ್ನಿಸು, ಮಹಾಪ್ರಾಜ್ಞ, ಭರ್ತೃವಾಜ್ಞೆಯೆ ಸತಿಗೆ
ಪಥ್ಯಮಯ್. ನಿನ್ನಾಡಿತಕೆ ಇದಿರ್ ನುಡಿಯೆನಿನ್.
ತಂದೆ ನೀನೆನಗಿಲ್ಲಿ. ನೀನೆಂದವೋಲಕ್ಕೆ,
ತಂದೆ!" ಎನುತ್ತನಲೆಯಂ ಪಿಡಿದೆದ್ದಳೊಯ್ಯನೆಯೆ,
ದಂಡಿಗೆಗೆ ನಡೆಯೆ. ದುಃಖಮ್ಲಾನಸುಖಮಾಯ್ತು
ತನಗೊದಗುವಾ ಶೂನ್ಯಮಂ ಸ್ಮರಿಸಿದೆಲೆವನೆಗೆ!
ಇತ್ತಲನಿಲಾತ್ಮಜಂ ಜವದಿಂದಯೋನಿಜೆಯ
ಹೃದ್‌ಭಾರಮಂ ಪೊತ್ತು ತಂದಾ ರಘೂತ್ತಮನ
ಪದಕಿಳುಹಿದನ್. ಕೇಳ್ದು, ಬೆಚ್ಚನೆಯೆ ನೀಡುಸುಯ್ದು,
ತೆಕ್ಕನೆಯೆ ಧ್ಯಾನಸ್ಥನಾದನ್. ಅಂಬುಜ ಚಾರು
ಲೋಚನಗಳಿನಿತೆ ತೊಯ್ದುವು. ಪಣೆಗೆ ಸುರ್ಕೆಳ್ದು
ಗಂಟಿಕ್ಕಿದುವು ಪುರ್ಬ್ಬು. ಕರ್ಚ್ಚಿದತ್ತಧರಮಂ
ನಿಷ್ಠುರೋಷ್ಠಂ. ಅನಿರ್ವಚನೀಯ ಸಂಕಟಂ
ಲಿಪಿಕೆತ್ತಿದುದು ಮುಖಮುದ್ರೆಯೊಳ್ ದೃಢನಿಶ್ಚಯದ
ವಿನ್ಯಾಸಮಂ. ಕರೆದು ಕಪಿರಾಜನಂ: "ಪ್ಲವಗೇಂದ್ರ,
ಮಿಥಿಳೇಂದ್ರ ತನುಜೆಯಾಗಮಿಸುವಳ್. ರಾಜ್ಞೀ
ತಪಸ್ವಿನಿಗೆ ತಗುವ ಮರ್ಯಾದೆಯಿಂದವಳನಾಂ
ಸ್ವೀಕರಿಸವೇಳ್ಕುಂ. ಕಪಿಧ್ವಜಿನಿಗಾ ಶುಭದ
ವಾರ್ತೆಯಂ ಸಾರ್. ತನಗೆ ಬಾಳ್‌ಬೇಳ್ದ ಮಹಿಮರಂ
ನೋಡಿ ಸುಖಿಸುವಳಾ ಕೃತಜ್ಞೆ!"
"ಪುಣ್ಯರೆ ವಲಂ
ವಾನರರ್! ರಘುಕುಲೇಶ್ವರಿಯ ಸಂದರ್ಶನಕೆ
ಕಾತರಿಸುತಿಹರಲ್ತೆ! ದೇವಿಯ ಕೃತಜ್ಞತೆಯೆ?
ದೇವ, ಆ ನೆಪದಿ ನೀನೆಮಗನುಗ್ರಹಿಪೊಂದು

ಕೃಪೆಯಲ್ತೆ ಈ ಆಜ್ಞೆ? ಡಂಗುರಂಬೊಯ್ಸುವೆನ್
ಶಿಬಿರ ಶಿಬಿರದೊಳೀಗಳೆಯೆ ಈ ಸುವಾರ್ತೆಯಂ.
ಕಪಿಕುಲ ಕಲಾಭಿರುಚಿ ಧನ್ಯಮಪ್ಪಂದದಿಂ
ಪೂ ತಳಿರ್ ತೋರಣದಿ ಕೈಗೆಯ್ವೆನೀ ವನ್ಯ
ರಂಗಮಂ, ಮಧುವುದಯಮಿದೆ ತಾನೆ ಸಮೆದೊಂದು
ಮದುವೆಗಣಿಗೆಯ್ದ ಮಧುಮಂಟಪಂಬೋಲ್. ದೇವ,
ಆ ಕಾರಣಕೆ ಖಿನ್ನನಪ್ಪನಿತು ನಿನಗೇಕೆ ಪೇಳ್
ಚಿಂತೆ? ರಾಜ್ಞಿಗೆ ತಗುವವೋಲ್ ಸ್ವಾಗತಿಪುದೆಮ್ಮ
ಕೀರ್ತಿಭಾರಂ!''
ತನ್ನ ಅಂತರ್ಮುಖತೆಗಂತು
ತಾತ್ಪರ್ಯಮಂ ಗೆತ್ತು, ಸಂತೈಕೆಯಂ ಮತ್ತೆ
ಧೈರ್ಯಮಂ ಪೇಳ್ದತ್ತಲಾ ಪೋಗುತಿರ್ದಾತನಂ
ನೋಡಿ ಸುಗ್ರೀವನಂ, ನಗೆಯ ಸುಳಿಯೊಂದಿರದೆ
ಸುಳಿಸುಳಿದಡಗಿದುದು ಸಮುದ್ರದೊಳ್ ದಶಮುಖ
ಧ್ವಂಸಿ ರಾಮನ ಮುಖದ ಗಾಂಭೀರ್ಯದಾ.

ಡಂಗುರಕೆ,
ರಘುರಾಮ ಭಾರ್ಯೆ ಬಂದಪಳೆಂಬ ಘೋಷಣಕೆ,
ಸಂಭ್ರಮಿಸಿದರ್ ಪ್ಲವಗಲಾಂಛನರ್. ಸಂತೋಷ
ಘೋಷಗಳ್ ಭೂವ್ಯೋಮ ಸಂಚಾರಿಗಳ್, ಕೂಗಿ
ಕೈವಾರಿಗಳವೋಲ್, ಅಲೋಕ ಸತ್ತ್ವಂಗಳಂ
ರಾಮ ಸೀತಾ ಮುಹುರ್ಮಿಲನ ಸಂದರ್ಶನಕೆ
ಕರೆದುವೆಳ್ಚರಿಸಿ. ಹೆಬ್ಬಳ್ಳಿಗಳನೆಳೆದೆಳೆದು,
ಮರಮರಕೆ ಹರೆಯಿಂದ ಹರೆಗೆ ತೋರಣವೆಸೆದು,
ವಾಸಂತ ಕಾಂತಾರ ಸಂತೋಷ ಮೂರ್ತಿಗಳೆನಲ್
ಮೂಡಿರ್ದ ಬಣ್ಣಬಣ್ಣದ ಪೂ ತಳಿರ್ದೊಂಗಲಂ
ನಿಬಿಡಮೆನೆ ಚಿತ್ರಚಿತ್ರಂ ನೇಲ್ದು, ರಚಿಸಿದರ್
ಗಿರಿಭುಜಪ್ರತ್ಯಂತದೊಳ್ ವಿರಾಣ್ ಮಂಡಪ
ವಿತಾನಾಶ್ರಯದಿ ಮಹದ್ ವೇದಿಯಂ, ದಶರಥನ
ಸೊಸೆಗೆ ಸುಸ್ವಾಗತಂ ಬಯಸಲ್ಕೆ. ಆ ಪಸುರ್
ಚಪ್ಪರದ ಮಾಂದಳಿರನಾಸ್ವಾದಿಸಲ್ ನೆರೆದ

ಕೋಗಿಲೆಗಳಿಂಚರಂ, ಜೋಲ್ದ ಪಣ್ಗಳನುಣಲ್
ಹಿಂಡು ಹಿಂಡೈತಂದ ಗಿಳಿಗಳುಲಿಹಂ, ಎಳಲ್ದ
ಕಂಪಿನ ಮಲರ್ಗೊಂಚಲುಗಳೆರ್ದೆಯ ಸಾರಮಂ
ಪೀರ್ವ ಜಾತ್ರೆಯ ತೇರ್ಗೆ ತಿಂತಿಣಿಯೊಳೆಯ್ತಂದ
ಮಧುಪ ಕೋಟಿಯ ಕೊರಳ ಝೇಂಕಾರಮೊರ್ಚಣಂ
ರಾಮನ ಮನಕೆ ತಂದುದೀ ಲಂಕೆಯೊಳುಮಾ
ಸ್ವಯಂವರ ಸಮಯ ಮಿಥಿಳೆಯಂ! ಕಪಿಧ್ವಜರಿಂತು
ಮಧು ಮಂಟಪೋಪಮಂ ವನದೊಳುದ್ಯಾನಮಂ
ರಚಿಸಿ, ತಂತಮ್ಮ ಕುಲಗೌರಕೆ ಬಲಕೆ ಮೇಣ್
ಸ್ಥಾನಕ್ಕೆ ಮಾನಕ್ಕೆ ಕೀರ್ತಿಗೊಪ್ಪುವ ತೆರದಿ
ವಸ್ತ್ರಭೂಷಣಗಳಿಂ, ಯೋಧಲಾಂಛನಗಳಿಂ,
ರಣಯಶೋವಿಭವಮಂ ಮೆರೆವವೊಲ್ ತಳತಳಿಪ
ದಳದಳ ಪತಾಕೆಗಳಿನಿರದೆ ಸಿಂಗರಗೊಂಡು,
ಕಾಂತಿಮಯ ಪಂಕ್ತಿಪಂಕ್ತಿಯ ಫಣಿನ್ಯಾಸದೊಳ್
ನಿಂದು ನಿರುಕಿಸಿರೆ,—
ಬಂದುದು ಕಿವಿಗೆ ಸುಸ್ವನಂ,
ಲಂಕಾ ಲತಾಂಗಿಯರ ಗೇಯದಿಂಚರದೊಡನೆ,
ಮಧುರ ನಾನಾ ರಾಗ ಸಂಮಿಲಿತ ಸುಖರಸದ
ನಾಗಸ್ವರಂ. ಕಣ್ಣರಳ್ದುದು; ಕೊರಲ್ ನಿಮಿರ್ದುದು;
ವಕ್ಷಮುಚ್ಛ್ವಾಸ ವಿಸ್ಫಾರಿತಂ ತಾನಾಯ್ತು ಕೇಳ್
ಸಕಲರಿಗೆ, ಅನೂರುಸೂತಾನ್ವಯೋತ್ತಮಂ ವಿನಾ!
ನೋಡುತಿರೆ, ಶಶಿಯಂತೆ ಮೂಡಿದುದು ಕಣ್ಬೊಲಕೆ
ನವರತ್ನಮಯ ಕನಕ ಸೂತ್ರಾಂಬರಾವೃತಂ
ಶಶಿರುಚಿರ ದಿವ್ಯದ್ಯುತಿಯ ಶಿಬಿಕೆ. ಪೊಸಮಲರ್
ಮಾಲೆಗಳನಾಂತು ಪೊಂಗಳಸವಿಡಿದಂಗನಾ
ಮಣಿಯರೆಸೆದರು ಬಳಸಿ ಪಲ್ಲಕ್ಕಿಯಂ. ಬಿಚ್ಚು
ಕತ್ತಿಗಳನೆತ್ತಿ ರಾಕ್ಷಸ ಭಟರ್ ಸುತ್ತಣಿಂ
ಕಾಪಿರ್ದರದಕೆ. ರಾಮಂಗರ್ಪಿಸಲ್ ಕಾಣ್ಕೆಯಂ
ಪೊತ್ತಿರ್ದ ನಾಗರಿಕರೊಡನಾ ವಿಭೀಷಣಂ
ಕಾಣಿಸಿದನಾ ಸರ್ಪಂಬರ್ಪ ಮೆರವಣಿಗೆಯ
ಫಣಾಮಣಿಯವೋಲ್.

ರಾಮಭ್ರುಕುಟಿ ಸಂಜ್ಞೆಯಿಂ
ಸಂಕ್ಷುಬ್ಧ ವಾನರೋಲ್ಲಾಸ ಸಾಗರಮೊಡಂ
ಸ್ತಬ್ಧಮಾದತ್ತು! ಮಧುಕರ ಪಕ್ಷಿಗಳ ರವಂ
ಹೆದರಿ ಹದುಗಿತು ಹೃದಯಕೋಟರದಿ! ಬಂದತಿಥಿ
ಮಧುನೃಪಗೆ ಬಾಡಿತು ಮೊಗಂ! ಸೊರಗಿದುವು ತಳಿರ್;
ಜೋಲ್ದುವು ಮಲರ್; ಸೆಡೆತನು ವಸಂತಮಾರುತಂ:
ಚೀರಿದುದೊ ನಿಶ್ಶಬ್ದಮಂಬರಾವನಿ, ಭಯಕೆ
ಕೊರಳಾಗಿ! ರಾಮನ ಮುಖದ ರೌದ್ರಮುದ್ರೆಯಂ
ಕಂಡು ಬೆರಗಿನೊಳಳ್ದುದಿರ್ತಂಡ!
ತಾನೇನೊ?
ಮೇಣಿವನವನೊ? ರಾಮಕೋಪಕಾರ್ ಕಾರಣರೊ?
ಎಂದು ಕಪಿ ರಾಕ್ಷಸರ್, ಮುಖ್ಯರುಮಮುಖ್ಯರುಂ,
ತಮತಮಗೆ ಶಂಕೆಯಿಂ ಕಳವಳಿಸಿ ಕುದಿದಿರೆ,
ವಿಭೀಷಣಂ ಧ್ಯಾನಸ್ತಿಮಿತ ರಘುಕುಲೋದ್ವಹನ
ಬಳಿಗೆಯ್ದಿ ಕೈ ಮುಗಿದು ಬಿನ್ನಯ್ಸಿದನ್: ''ದೇವಿ
ಸೀತೆಯಂ ಕರೆತಂದೆನಿದೊ ಶಿರಃಸ್ನಾತೆಯಂ!''
ಕೇಳ್ದೊಡನೆ ಹರ್ಷವರ್ಷದಿ ಮಿಂದ ಮಾಳ್ಕೆಯಿಂ,
ದೈನ್ಯ ಧೂಳಿಯೊಳುರುಳಿದಂದದಿಂ, ರೋಷಾಗ್ನಿಯಂ
ಪೊಕ್ಕಂತೆವೋಲಿರ್ದನಿಕ್ಷ್ವಾಕು ಕುಲವರ್ಧನಂ,
ಸ್ಥಾಯಿ ತಾನಾದೊಡಂ ರಸನಿಮಿತ್ತಂ ಪೊರ್ದಿದೊಲ್
ಭಾವಸಂಚಾರಿತ್ವಮಂ. ಬಿಮ್ಮನೆಯೆ ನಿಂದು
ತುಸುವೊಳ್ತು, ಮುಂಬಟ್ಟೆಯಂ ತನಗೆ ನಿಟ್ಟೆಯಂ
ನಿಶ್ಚಯ್ಸಿ ನರಲೋಕ ನಿಷ್ಠ ಕರ್ತವ್ಯಮಂ,
ದೈತ್ಯೇಂದ್ರಗೆಂದನು ದಶಗ್ರೀವಸೂದನಂ:
''ಮದ್‌ವಿಜಯ ರತನೇಗಳುಂ ನೀಂ, ಸುಹೃದ್‌ವರ;
ಧರಾತ್ಮಜೆಯನೊರ್ವಳನೆ ಬಿಜಯಗೆಯ್ಸೆನ್ನೆಡೆಗೆ.''
ಮಲೆವೆಗಲ್‌ದವಗದಿಂದಿನಿತೆ ಗೆಂಟರ್ಗಿರ್ದ
ಶಿಬಿಕೆಯೆಡೆಗೆಯ್ದಿ, ಕುವರಿಗೆ ರಾಮನಿಚ್ಛೆಯಂ
ನುಡಿಯೆ, ನೋಡಿದಳನಲೆ ತನ್ನಯ್ಯನಾಸ್ಯಮಂ; ಮೇಣ್
ನಸುನಗುತೆ ಪರಿಹಾಸ್ಯದಿಂ: ''ನಾನುಮಾರ್ಯೆಯಂ
ಕೆಳೆಗೂಡಿ ಬಂದೊಡೇನಾರ್ಯಂಗೆ ತೊಂದರೆಯೆ?''

ಲಘುವಿನೋದದೊಳೊರೆದ ಮಗಳಿಗಿಂಗಿತದಿಂ
ಗುರುಸ್ಥಿತಿಯನರಿವಂತೆ ಮಾಡೆ, ಸುರ್ಕ್ಕಿದ ಮೊಗದಿ
ತೆರಳಿ ಶಿಬಿಕೆಗೆ ತರಳೆಯೊರೆದಳು ಪತಿವ್ರತೆಗೆ.
ಧರಣಿ ಪುಲಕಿಸಲಿಳಿದಳೊಯ್ಯನೆ ಜನಕಜಾತೆ
ಕನಕಮಯ ಯಾನದಿಂ. ಲಜ್ಜಾಪಟಂ ಬಿಡಿದು
ರಾಜಮಹಿಷಿಗೆ ದೀನದೃಷ್ಟಿ ಬೀಳದ ತೆರದಿ
ಕೈಂಕರ್ಯವೆಸಗುತಿರೆ ಕಂಚುಕೀ ಜನರಿತ್ತಲ್,
ಅತ್ತಲಾ ದರ್ಶನಾತುರ ಚಿತ್ತ ವಾನರರ್
ಮರೆತರು ಗಣನ್ಯಾಸಮಂ. ನುಗ್ಗಿದರೊ ಮುಂದೆ
ಬಿಡಿಬಿಡಿಯೆ, ಗಡಿಬಿಡಿಯೊಳೊದರೆ ಕೋಲಾಹಲಂ!
ಕಂಚುಕೋಷ್ಣೀಷಮಂ ತೊಟ್ಟ ಜರ್ಜರ ವೇತ್ರ
ಪಾಣಿಗಳ್ಗಾಣತಿಯನಿತ್ತನು ವಿಭೀಷಣಂ,
ಪಿಂತಳ್ಬಲಾ ದಳಂಗೆಟ್ಟು ಮುಗ್ಗುತ್ತಿರ್ದ
ಕಪಿ ಕುಲೋತ್ಪನ್ನರಂ. ಗಾಳಿ ಮಸೆವಂಬುಧಿಯ
ಸದ್ದೆದ್ದುದೈ ಗುದ್ದುಮಳಿ ಗದ್ದಲಂ. ಮುಖಂ
ರೋಷ ಕರ್ಕಶಮಾಯ್ತು ರಾಮಂಗದಂ ನೋಡಿ,
ಕರೆದನಿಂತೊರೆದನು ವಿಭೀಷಣಗೆ ಭೀಷಣ
ಧ್ವನಿಯಿಂದೆ: ''ನೋಯಿಸುವೆ ಏಕಿಂತುಟೀ ನನ್ನ
ಜನರಂ? ಸ್ವಜನರಲ್ಲದೆನಗನ್ಯರಲ್ತಿವರ್?
ಮಾಣಿಸಾ ವೇತ್ರಹಸ್ತರ ನಿಷ್ಠುರೋದ್ಯೋಗ
ವೈಫಲ್ಯಮಂ, ನನಗೆ ಹೃಚ್ಛಲ್ಯಸದೃಶಮಂ!
ಲಜ್ಜಾಪಟಂ ಅದೇನಗ್ನಿನಿಕಷಮೆ ಪೇಳ್
ಪರೀಕ್ಷಿಸಲ್ ಸ್ತ್ರೀಮಾನ ಕನಕ ಸಂಶುದ್ಧಿಯಂ?
ವಿಷಮ ಸಂಕಟನಿಕಟೆಯಾಕೆಯಂ ನಿಟ್ಟಿಸಿದೊಡೇಂ
ತನಗಾಗಿ ಕಾಳೆಗದಿ ಸತ್ತುಳಿದ ಪುತ್ರಸಮರೀ
ವಾನರರ್ ಗ್ರಹಿಸದೆನ್ನಂತಸ್ಥಮಂ ಬರಿದೆ ನೀಂ
ನಿಗ್ರಹಿಸಲೇವುದೀ ಮಾನಧನರಂ? ಗೃಹಂ
ಪ್ರಾಕಾರ ವಸ್ತ್ರಾದಿಗಳ್ ಮಾನಿನಿಯ ಮಾನಮಂ
ರಕ್ಷಿಪ್ಪವೇಂ? ತನ್ನ ಶೀಲ ಶುಭ್ರಾಂಬರಮೆ,
ಬರಿಯುರುವೆಮರೆಯಲ್ತು, ಮಾನಯವನಿಕೆಯಲ್ತೆ

ಮಾನಿನಿಗೆ? ಮೇಣ್, ವ್ಯಸನದೊಳ್ ಕಷ್ಟದೊಳ್ ಮತ್ತೆ
ಸಂಗ್ರಾಮದೊಳ್ ಸ್ವಯಂವರ ಸಮಯದೊಳ್ ಸ್ತ್ರೀಗೆ
ನಿರ್ದೋಷಮಯ್ ದೃಷ್ಟಿ, ಮತ್ತಮಾನಿರಲಿಲ್ಲಿ,
ನನ್ನೆಡೆಗೆ, ನನ್ನಾಜ್ಞೆಯಂತೆ ಬರಲವನಿಜೆಗೆ
ಕಾಣೆನವಮಾನಕಾರಣವನಾಂ, ತಾನಿರಲ್
ಸಜ್ಜನ ಸುಹೃಜ್ಜನ ಜಗನ್ಮಾನ್ಯಗೋಷ್ಠಿಯೊಳ್!''
            ಅನ್ಯರಾಗಿರಲನ್ಯ ಸಮಯಮಾಗಿರಲದಂ
ಅಧಿಕಪ್ರಸಂಗಮೆಂದಿರದಾಡುತಿರ್ದಾ
ವಿಭೀಷಣಂ ತಾಂ ಮಹಾಪುರುಷನಸ್ಥಿರತೆಯಂ
ಕಂಡು ಸೋಜಿಗವಡುತೆ, ಸಹಿತಾರ್ಥಮೆಂದರಿತು,
ಮಾರ್ನುಡಿಯದಲ್ಲಿಂ ನಡೆದನಿಂಗಿತಜ್ಞಂ:
ನಮಸ್ಕರಿಸಿ ವಿನಯದಿಂ ಕರೆತಂದನೊಯ್ಯನೆಯೆ
ಮಾನವರ ಮಾನಿನಿಯರಸಮಾನ ಮಾನನಿಧಿ
ವೈದೇಹಿಯಂ ರಾಮಸನ್ನಿಧಿಗೆ. ಕಣ್ ತುಂಬಿ
ಮನವಾರೆ, ಹೃತ್ ಸುಖಂ ಜನ್ಮಸಾರ್ಥಕ್ಯಮಂ
ಬಾಯ್ಬಿಟ್ಟು ಸಾರೆ, ಸೆರೆ ಹಿಗ್ಗಿ ಕಣ್ ಸೊಗದೊರತೆ
ಸೋರೆ, ನುಡಿ ಸೋಲ್ತ ವಾಙ್ಮಯ ಮೂಕಮೌನದಿಂ
ಧನ್ಯಭಾವದಿ ನೋಡಿದುದು ವಾನರಧ್ವಜಿನಿ ಆ
ಸೀತೆಯಂ, ಲೋಕವಿಖ್ಯಾತೆಯಂ, ಮಿಥಿಳೇಂದ್ರ
ಜಾತೆಯಂ, ಧರಣಿಸಂಭೂತೆಯಂ, ಪ್ಲವಗಕುಲ
ಕೀರ್ತಿಕಾರಣ ಜಗನ್ಮಾತೆಯಂ, ರಘುರಾಮ
ಸಂಪ್ರೀತೆಯಂ, ದೈತ್ಯ ಕಂದರ್ಪ ದರ್ಪಹರ
ಹರ ತಪೋನೇತ್ರಾಗ್ನಿ ತೇಜೋಭಿಜಾತೆಯಂ!
ಸಾಲಂಕೃತಂ ಮಹನ್‌ನೌಕೆ ತಾನಂಭೋಧಿ
ವೇಲೆಯಂ ಸಂಶ್ರಯಿಸಿ ಮುಂಬಯಣಕನುವಾಗಿ
ನಿಲ್ವವೊಲ್ ಸ್ವಾಮಿ ಸಾನ್ನಿಧ್ಯ ಸಾಗರ ರುಂದ್ರ
ಸಮ್ಮುಖದಿ ನಿಂದು, ಸಂಚಲಿತೆಯಾದಳ್ ದೇವಿ,
ಪ್ರಿಯಹೃದಯ ಭಾವೋರ್ಮಿಮಾಲಾ ಪ್ರಚೋದಿತಂ
ತಾನೆಂಬವೋಲ್.
                ಕಡೆಗಣ್ಣುಪೇಕ್ಷೆಯಿಂ ದಾಶರಥಿ
ನೋಡಿದನು ಮಡದಿಯಂ, ಮಿಂದುಟ್ಟು ತೊಟ್ಟಿರ್ದಳಂ.

ಮೂಡಿದುದೊಳಗೆ ತೃಪ್ತಿ: ಮಲಿನೆಯಂ ಕೃಶೆಯಂ
ಪತಿವ್ರತೆಯನೆಂತು ನಿಷ್ಠುರವಾಡಿ ನೋಯಿಸಿ
ನಿರಾಕರಿಪುದಾತಂಗೆ ಸಾಧ್ಯಮಾ ದೆಸೆಗಲ್ತೆ
'ಸೀತೆಯಂ ತಾ, ಶಿರಃಸ್ನಾತೆಯಂ ಸಿಂಗರಿಸಿ!'
ಎಂದು ಬೆಸನಿತ್ತುದು ದಶಗ್ರೀವನವರಜಗೆ?
ತನ್ನೊಳಗೆ ತಾಂ ಪುಗುವೆನೆಂಬಂದದಿಂ ಹದುಗಿ,
ಬಳಿಯೆ ನಿಂದಿರ್ದ ಲಜ್ಜಾಶೀಲೆಯಂ ನುಡಿಸದೆಯೆ
ಬಿನ್ನನಿರ್ದಂಬುಜ ಸಖಾನ್ವಯನ ಭಂಗಿಯಂ
ಗೆತ್ತಪೇತಾನುರಾಗಕೆ ಭೀತರಾದರು
ಪರಿಸ್ಥಿತಿಗೆ ಹನುಮ ಜಾಂಬವ ಲಕ್ಷ್ಮಣಾದಿಗಳ್
ಕುಲಸತಿಯ ಗತಿಗೆ. ಅನತೆ ಅನತನಿದಿರಿನೊಳ್
ಕೋಟಿ ಕಣ್ಣುಗಳೊಡ್ಡಿದೊಂದು ಕುದುರಿಗೆ ಕೆಡೆದು
ಸೆಡೆತಳ್ ತಿರಸ್ಕೃತಿಗೆ. ವಸ್ತ್ರ ಸಂರುದ್ಧಮುಖಿ
ಮುಂತನರಿಯದೆ, ತಾನೆ, ಪಿಂತೆ ಕರೆದಂದದಿಂ,
ಮೊದಲೆ ತೊದಲಿದಳಾರ್ಯಪುತ್ರ! ಎಂದೊಡನೊಡನೆ
ಕಣ್ಣೀರ್ ಕಡಲ್ವರಿಯಲಳತೊಡಗಿ, ನೋಡಿದಳ್
ಪತಿದೇವತಾ ಮುಖವನುಕ್ಕುವಾನಂದದಿಂ,
ಮಿಕ್ಕು ಮೀರ್ವನುರಾಗದಿಂ. ವಿಸ್ಮಯಂ ಬಡಿದು
ಮರವಟ್ಟು ನಿಂದಳ್ ವಿಮೂಢೆಯೋಲ್: ಸೌಮ್ಯನಂ
ಭರ್ತೃವಂ ಕಂಡಳಿಲ್ಲಾ ಸೌಮ್ಯತರ ವದನೆ.
ರಾಜೀವಲೋಚನನ ವದನಾರವಿಂದಮಂ
ಬೈತಿಡುವವೊಲ್ ಬೆಳೆದ ಮುಖರೋಮ ರಾಜಿ ತಾಂ
ಪ್ರಕಟಿಸುತ್ತಿರ್ದುದು ದಶಾನನಪ್ರಧ್ವಂಸಿಯಂ!
        ಪಾರ್ಶ್ವಸ್ಥಿತೆಯನಂತು ಧಿಕ್ಕರಿಸೆ, ಅಃ! ಇಸ್ಸಿ!
ಏನ್ ನಡತೆಯಿದು ರಘುಕುಲೋತ್ತಮಂಗೆಂಬೊಲಾ
ಜನ ಸಂಘ ನೀರವತೆ ತನ್ನನೆ ತಿರಸ್ಕರಿಸಿ
ಮೂದಲಿಸೆ, ನಿಶ್ಶಬ್ದತಾ ಭರ್ತ್ಸನೆಗೆ ಪೇಸಿ
ದಾಶರಥಿ ನಿರ್ಭಾವ ಗದ್ಯಧ್ವನಿಯೊಳಿಂತು
ಪೇಳ್ದನಿತಿವೃತ್ತಮಂ: ''ರಣದಿ ಜಯಿಸಿದೆನೆನ್ನ
ಶತ್ರುವಂ, ಭದ್ರೆ. ಪಗೆ ಪಳಿಗಳೆರಡಂ ತೀರ್ಚಿ
ಬಳಿಜಸವನೆನ್ನ ಪೌರುಷ ತೇಜಮಂ ಬಿಡದೆ

ಸಾಧಿಸಿರ್ಪೆನ್. ಸಫಲಮಾ ಶ್ರಮಂ. ರಾಕ್ಷಸನ
ಚಪಲ ಚಿತ್ತದಿ ಮತ್ತೆ ನಿನ್ನ ದೆಸೆಗಾಗೆನಗೆ
ವಿಧಿ ತಂದ ಕಿಲ್ಬಿಷವನಳಿಸಿದೆನ್. ಕಲ್ಯಾಣಿ,
ಕಡಲಂ ನೆಗೆದು ನಿನ್ನ ವಾರ್ತೆಯಂ ತಂದೀ
ಮರುತ್ಸೂನುವಿಂ, ರುಂದ್ರ ಸೇನಾರ್ಣವಂ ನೆರಪಿ
ಸ್ನೇಹಕಾರ್ಯವನೆಸಗಿದೀ ವಾನರೇಂದ್ರನಿಂ,
ನಿರ್ಗುಣಭ್ರಾತೃವಂ ತ್ಯಜಿಸಿ ನನ್ನಾಸೆಯಂ
ತನ್ನಾಸೆ ಏನೊಂದುಮಿಲ್ಲದೆಯೆ ಸಲಿಸಿದೀ
ಶುಭಮತಿ ವಿಭೀಷಣೌದಾರ್ಯದಿಂ, ಕ್ಷಾತ್ರದಿಂ,
ನಾನಿಂದು ತೀರ್ಣಪ್ರತಿಜ್ಞನೆಂ, ಇಲ್ಲಿ ನೆರೆದೀ
ಪ್ಲವಗಪ್ರವೀರರಿಂ, ಮೇಣ್ ಬಹುಜನಪ್ರಾಣ
ರಣಯಜ್ಞದಿಂ. . . '' ಬಿಗಿದ ಪಲ್ಗಳಿಂದಿನಿತಿನಿತೆ
ತಡೆತಡೆದು ನುಡಿಕಡುಗಮಂ ಮೋಹಿ ಝಳಪಿಸುತೆ,
ನಿಡಿದಾಗಿ ಸುಯ್ದು; ಹೂ ಮುಡಿದು ಬೆಲೆಯುಡೆಯುಟ್ಟು
ಪರಿಮಳಗಳಂ ಪೂಸಿ, ಸೂಸಿ, ನಿಂದಾಕೆಯಂ
ದುರುದುರನೆ ನಿಟ್ಟಿಸಿ ''ಶಿರಃಸ್ನಾತೆ! ಭೂಜಾತೆ!
ರಾಕ್ಷಸಶ್ರಿಯುತೆ! ಅಲಂಕೃತೆ!'' ಎನುತ್ತೆನುತೆ,
ವಕ್ರೋಕ್ತಿನಖದಿಂ ನೃಸಿಂಹಾವತಾರಮಂ
ಪುನರಭಿನಯಿಸುವಂತೆ, ಕೋಮಲೆಯ ಹೃದಯಮಂ
ಜಾಳಂದ್ರಗೆಯ್ಯೆ ಖರದೂಷಣ ನಿಷೂದನಂ;
ಮೆಯ್ವಳ್ಳಿ ನಡುಗೆ, ಮೊಗಮಂ ಮುಚ್ಚಿ ಕೆಯ್ಗಳಿಂ,
ಕೇಳ್ದ ಲಂಕಿಗರುರಿಗೆ ಕಿಷ್ಕಿಂಧೆ ಕರಗಿತೆನೆ,
ಬಿಕ್ಕಿಬಿಕ್ಕಳ್ತಳು ಅಶೋಕವನಿಕಾ ಮುಕ್ತೆ,
ಪತಿದೇವ ನಿತ್ಯಾನುರುಕ್ತೆ. ಕಾಣುತ್ತದಂ, ಕೇಳ್,
ಪುರ್ಬು ಗಂಟಿಕ್ಕಿದುವು ಹರಧನುವ ಮರಿದಂಗೆ.
ವದನ ವಲ್ಮೀಕಮಂ ಬಿರಿದೇಳ್ವ ನಾಲಗೆಯ
ಫಟಸರ್ಪಮೋಕರಿಪ ಗರಳಧಾರೆಗಳೆನಲ್
ಕೆರಳಿದುವು ಕೂರಂಬುನುಡಿಗಳೇನೆಂಬೆನಾ
ಮಲಗುಮನೆ ತನಗೆ ಪಾಲ್ಗಡಲಾದೊಡೇನಹಿಯೆ
ಮಂಚವಾಗಿರೆ ಸಂಗದೋಷದಿಂದೀ ವೀತ
ಸಂಗನಿಂತಾದನೆನುತಂಬರದೊಳಾಡಿಕೊಳೆ

ಗೀರ್ವಾಣ ಗೋಷ್ಠಿ: ''ಮಾಣ್ ಕಿತವ ನಟನವನಿಲ್ಲಿ,
ಚತುರೆ! ಸಂದುದು ಪೂಣ್ಕೆ ನನಗೆ. ಕುಲತೇಜಮಂ
ಮತ್ತೆನ್ನ ಪುರುಷಕಾರವನುಳಿಸೆ ಜಯಿಸಿದೆನ್,
ಕೊಂದೆನ್ ದಶಗ್ರೀವನಂ; ನಿನ್ನಂ ಪಡೆಯಲಲ್ತು...
ನೀಂ ಸ್ಫುರದ್ರೂಪಿಣಿಯೆ ದಲ್!. ದಶಾನನನ್ ಅವಶಿ;
ದಶರಥಾತ್ಮಜನಲ್ತು! ತಿಳಿಯುವೊಡೆ ತಿಳಿ, ಸುಜ್ಞೆ,
ಪೇಳ್ದ ವಾಕ್ಯಾರ್ಥಮಂ. ಇಲ್ಲದಿರೆ ತೊಲಗು ನಡೆ,
ಮೂರ್ಖೆ, ನೀನೆಲ್ಲಿಗಾದೊಡಮೆನ್ನ ಕಣ್ಮುಂದೆ
ನಿಲ್ಲದಿರ್. ಕಣ್ಬೇನೆಯಿರ್ಪವನಿದಿರ್ ಸೊಡರ್
ಕುಡಿವಿಡಿಯದಿರ್!''
ಭರ್ತೃವಾಕ್‌ಶಲ್ಯ ರೂಕ್ಷತೆಗೆ
ಬಾಗಿದಳ್ ವ್ರೀಡೆಯಿಂ, ಬಡಿಗೆ ಪೊಯ್ದಂತೆವೋಲ್
ಬೆನ್ಗೆ. ಕೆಮ್ಮನೆ ನಿಂದು ನಿಶ್ಚಯ್ಸಿದಳ್ ತನ್ನ
ಮುಂಬಟ್ಟೆಯುಂ. ಸುಯ್ದು, ತಲೆಯೆತ್ತಿದಳ್ ಮತ್ತೆ
ರಾಜರ್ಷಿ ಜನಕಸುತೆ. ಗದ್ಗದವಿನಿತೆ ಪೊಣ್ಮೆ,
ನೇರಮೀಕ್ಷಿಸುತೆ ಪ್ರಿಯ ನಯನಮಂ, ಕೆಯ್ಮುಗಿದು
ಪಡಿನುಡಿದಳಿಂತಾ ಮೃಗಾಕ್ಷಿ: ''ತರವಲ್ಲದೀ
ಕಿವಿಯಿರಿವ ಸೊಲ್ಗಳಂ ಬರಿದೆ ವಿತರ್ಕಾಡಿದ್ಯೆ,
ಪ್ರಾಕೃತರ್ ಪ್ರಾಕೃತೆಯರಂ ಬಯ್ವ ಪಾಂಗಿಂದೆ, ನೀಂ
ಇಕ್ಷ್ವಾಕು ರಘುದಿಲೀಪಾದಿ ರಾಜೇಂದ್ರರಂ
ಮಕ್ಕಳೆಂಬುವ ಮಹಾ ರವಿಕುಲದೊಳುತ್ತಮಂ
ತಾನಾಗಿಯುಂ?. .ರಾಕ್ಷಸಂ ಮುಟ್ಟಿದನೆ? ನಾನಲ್ತು,
ದೈವಮಪರಾಧಿ. ಮೆಯ್ಯನಲ್ಲದೆ ಮನವನೇಂ
ಮುಟ್ಟಿದನೆ? ಮುಟ್ಟಲಾರದೆ ಸುಟ್ಟು ಸೀದನಯ್,
ನಿನ್ನಲಗಿನೇರ್ಗಂತುಟಂತೆ!.. . . ಬಾಲ್ಯದೊಳೆನ್ನ
ಕೈವಿಡಿದೆ. ಅಂದಿನಿಂದಗಲದೆಯೆ ಒಡವೆರೆದು
ಬಳೆದೆವಿರ್ವರುಮೊಂದೆ ಬಾಳ್ವಸೆದು. ಆ ಬಾಳ್ವೆ
ನನ್ನ ಚಾರಿತ್ರಮಂ, ಭಕ್ತಿಯಂ ಪ್ರೇಮಮಂ
ನಿಷ್ಠೆಯಂ ಶೀಲಮಂ, ನಿನಗಿಂದು ತೋರದಿರೆ
ಕೆಟ್ಟೆನಾನೆಂದೆಂದಿಗುಂ. ವಾದಮೇವುದೀ
ಸಂಶಯ ನಿರಾಸಕೆ?'' ಎನುತ್ತೆ ನೋಡಿದಳತ್ತ

ದುಮ್ಮಾನದಿಂ ಧ್ಯಾನಪರನಾಗಿ ನಿಂದಿರ್ದ
ಮೈದುನನ ಕಡೆಗೆ: ''ಚಿತೆಯಂ ರಚಿಸು, ಸೌಮಿತ್ರಿ!
ಮಿಥ್ಯಾಪವಾದ ಘಾತಕೆ ಸಿಲ್ಕಿದೆನಗೆ ಬಾಳ್
ಮರಗೂಳನೊಂದು ಕೆಂಗೂಳ್. ಸಭಾಮಧ್ಯದೊಳ್
ಪ್ರಭುವಿಂ ತಿರಸ್ಕೃತಳ್. ಸದ್ಗತಿಗೆ ಶರಣೆನಗೆ
ಹವ್ಯವಾಹನನಲ್ಲದನ್ಯರಂ ಕಾಣೆ!'' ಕಣ್
ತಿರುಗಿಸಿದನೊಯ್ಯನಣ್ಣನ ಕಡೆಗೆ ಲಕ್ಷ್ಮಣಂ.
ಭ್ರಾತೃಭಂಗಿಯಿನರಿತನಿಂಗಿತವನತಿದುಃಖಿ.
''ಏನುಗ್ರನಗ್ರಜನೊ!'' ಎನುತೆ ತನ್ನೊಳಗೆ ತಾನ್,
ವಾನರ ಸಹಾಯದಿಂ ಕೃತಿಗೆಯ್ದನೊಂದಂ
ಬೃಹಚ್ಚಿತೆಯನಾ ಮಂಟಪದ ಮಧ್ಯೆ!
ಸರ್ವರಂ
ಸರ್ವಮಂ ನಿಷ್ಕಾಮದೃಷ್ಟಿಯಿಂ ವೀಕ್ಷಿಸುತೆ
ವಿಗ್ರಹಂಬೋಲುನ್ನತಾನತಂ ನಿಂದಿರ್ದ
ಮನದನ್ನನೆಡೆಗೆಯ್ದಿ, ಬಲಗೊಂಡು, ದಂಡದೊಲ್
ದಿಂಡುರುಳಿದಳ್ ಪದಕೆ ಪಣೆಯೊತ್ತಿ. ತೊಳೆದಳಾ
ಪಾದಂಗಳಂ, ಗೌತಮ ಸತಿಯ ಶಾಪ ಕಿಲ್ಬಿಷ
ವಿಮೋಚನಾ ಪೂಜ್ಯಂಗಳಂ. ಮೂಡಿದುದು ಶಾಂತಿ
ಚಿಂತನಾತೀತಮತ್ಯನಿರ್ವಚನೀಯಮೆನೆ
ಮನಕೆ. ನಿಸ್ಸಂಗಾಂತರಾತ್ಮೆ, ರಾಜರ್ಷಿಸುತೆ,
ಸೀತೆ, ಕಂಡವರೆಲ್ಲ ಬೆರಗಾಗೆ ನಸುನಗುತೆ,
ಪತಿದೈವ ಪೂಜೆಯಂಗೆಯ್ದಗ್ನಿಸನ್ನಿಧಿಗೆ
ಚಿತೆಯೆಡೆಗೆ ನಡೆದಳು ಮಹಾಭಾಗೆ:
''ಓ ಅಗ್ನಿ,
ನೀಂ ಲೋಕಸಾಕ್ಷಿ. ನಡೆನುಡಿಗಳಲಿ ಬಗೆಯಲ್ಲಿ
ರಾಘವೇಂದ್ರನನುಳಿದು ಚರಿಸಿರ್ದೊಡೆನ್ನುಸಿರ್
ನನ್ನನಾಹುತಿಗೊಳ್. ಆದಿತ್ಯನುಂ ಚಂದ್ರನುಂ
ಸಂಧ್ಯೆಯುಂ ರಾತ್ರಿಯುಂ ಪೃಥಿವಿಯುಂ ಸಾಕ್ಷಿಯಿರೆ,
ಪುರುಷಪುಂಗವನೆನ್ನ ಪತಿಪಾದಪದ್ಮದೊಳ್
ನಿಚ್ಚಮುಂ ನೆನಸಿರ್ಪೆನಾದೊಡಾಂ ಕಾಯ್ದುಕೊಳ್,
ಕಾಯ್ದುಕೊಳ್, ಕಾಯ್ದುಕೊಳ್, ಓ ಅನಿಲಸಖ, ನಿನ್ನ

ಈ ಮಗಳನವಳ ಪತಿ ಚರಣ ಸೇವಾರ್ಥಮೆನ್ನಂ!''
ಮುಗಿದ ಕೈ ಮುಗಿದಂತೆ, ತಪ್ತ ನವ ಹೇಮಾಭೆ
ಪೊಕ್ಕಳ್ ಧಗದ್ಧಗಿಸುವುಜ್ಜ್ವಲ ಚಿತಾಗ್ನಿಯಂ,
ಮಂಗಳಾಜ್ಯಾಹುತಿಯವೋಲ್, ಪೂಜ್ಯೆ! ಓಓಓ
ಹೋಯೆಂದು ಹರಿದು ಹಬ್ಬಿದುದಹಾ ರೋದನಂ
ರೋದೋಂತಮಂ!
ನಿಷ್ಠುರಂ ಶಿಲಾಮೂರ್ತಿಯೆನೆ
ನಿಷ್ಪಂದನಾಗಿ ನಿಂದನಿತುಮಂ ಸಾಕ್ಷಿಯೊಲ್
ನಿಟ್ಟಿಸುತ್ತಿರ್ದ ರಾಮಾನನಂ ತಾನಾಯ್ತು
ದೀಪ್ಯಮಾನಂ. ಚಲಿಸಿದನು ಚಿತೆಗೆ, ನೋಳ್ಪರಾ
ವಿಸ್ಮಯಂ ಚಿಂತೆಗೆ ತಿರುಗುವಂತೆ. ಓವೊವೋ
ಎಂಬನಿತರೊಳೆ ತಾಂ ಪ್ರವೇಶಿಸುತ್ತುಜ್ಜ್ವಲಿಪ
ಗೋಪುರೋಪಮದಗ್ನಿ ಮಧ್ಯೆ ಮರೆಯಾದನೈ
ಜಮದಗ್ನಿಜಾತನಂ ಜಯಿಸಿದಾತಂ!
ಪೇಳ್ವೆನೇಂ
ಮುನ್ನಡೆದುದಂ? ಸೇಂದ್ರಿಯಕತೀಂದ್ರಿಯಂ ತನ್ನ
ಪೆರ್ಬಾಗಿಲಂ ತೆರೆದುದೆನೆ ಕೇಳ್ದುದನಿಬರಿಗೆ,
ಅಸಂಖ್ಯೇಯ ಗೀರ್ವಾಣ ಕಂಠಸ್ವನಂವೆರಸಿ
ಅಂಬರವೆ ತುಂಬಿಯಾದಶರೀರ ವೀಣಾ
ಸಹಸ್ರತಂತ್ರೀ ನಿಕ್ವಣಂ! ಮೂಗುವಟ್ಟಂತೆ
ಮೌನದಿಂದಾಲಿಸಿತು ಕಪಿ ರಾಕ್ಷಸರ ನೆರವಿ.
ದಿನದಿನದ ಪರಿಚಿತದ ಲೌಕಿಕಸ್ವರಗಳಂ
ಕರ್ಣೇಂದ್ರಿಯಂ ತೊರೆದವೋಲೆ ನಯನೇಂದ್ರಿಯಂ
ತಾಂ ಕಂಡುದನ್ನೆಗಂ ಕಾಣದಿರ್ದಚ್ಚರಿಯ
ವರ್ಣಂಗಳಂ: ಮಣ್ ತನ್ನ ಜಾಡ್ಯವನುಳಿದು
ಕಾಂತಿಮಯವಾಯ್ತು. ವಿವಿಧಜ್ಯೋತಿಗಳನುಣ್ಮೆ
ಮಿರುಗು ತೊಡಗಿದುವು ಕಲ್. ಮರ್ತ್ಯತೆಯನುಳಿದುವೆನೆ
ವರ್ಣಶಿಲ್ಪಿಯ ರುಚಿರ ಸೌಂದರ್ಯಗಳನಾಂತು.
ತರುಗಳುಂ ಸೂಸಿದುವು ಚಿನ್ಮಯ ಸುಗಂಧಮಂ.
ಲೌಕಿಕದ ನಿತ್ಯಸಾಧಾರಣತೆಯಂ ತ್ಯಜಿಸಿ,
ತೊಟ್ಟಳು ವಸುಂಧರೆ ಅಲೋಕ ಸಾಮಾನ್ಯಮಂ

ಸ್ವರ್ಗೀಯ ಕಾಂತಿಕೌಶೇಯಮಂ. ವ್ಯೋಮಮಂ
ತೀವಿರ್ದ ಪೊನ್ನಂಜೊಳೇನೇನೊ ಕಾಂಚನದ
ಕಾಂತಿಗಳ್ ಮಿಂಚಿದುವು, ಸಂಚರಿಪ ಚಂಚಲ
ವಿಯಚ್ಚೇತನಾಕಾರಗಳವೋಲ್. ಶ್ರಿವಾಣಿಗಳ್
ಪಾಡಿದುವು ಮರ್ತ್ಯಮಲ್ಲದ ದಿವ್ಯಭಾಷೆಯೊಳ್
ಸ್ತೋತ್ರಂಗಳಂ, ಮಹಚ್ಛಂದೋ ವಿಧಾನದಿಂ:
"ಓಂ ನಮೋ ಸಚ್ಚಿದಾನಂದನೆ ನಮೋ ನಮೋ!
ಓಂ ನಮೋ ಸರ್ವಸ್ವತಂತ್ರನೆ ನಮೋ ನಮೋ!
ಆದಿಯಾದಿಯೆ ನಮೋ, ಅಂತ್ಯದಂತ್ಯವೆ ನಮೋ,
ಆದ್ಯಂತದಾಚೆಗಿರುವಾತನೆ ನಮೋ ನಮೋ!
ಅಜ ನಮೋ, ಹರಿ ನಮೋ, ಶಿವ ನಮೋ, ನಮೋ ನಮಃ!
ಕವಿ ನಮೋ, ಋಷಿ ನಮೋ, ಗುರು ನಮೋ, ನಮೋ ನಮಃ!
ನೀನೆ ಚಿದ್ರೂಪಿ ನಮೋ; ನೀನ್ ಅಚಿದ್ರೂಪಿ ನಮೋ;
ಚಿದಚಿದಾತೀತ ಪರಬ್ರಹ್ಮವೆ ನಮೋ ನಮಃ!
ಪುರುಷ ರೂಪಿಯೆ ನಮೋ; ಪ್ರಕೃತಿರೂಪಿಯೆ ನಮೋ;
ಪುರುಷೋತ್ತಮನೆ ನಮೋ, ಪುನರ್ನಮೋ ಮುಹುರ್ನಮೋ!
ಓಂ ಸ್ವಯಂಪ್ರಭು ನಮೋ! ಓಂ ಋತಪ್ರಭು ನಮೋ!
ಓಂ ನಮೋ ಸರ್ವಲೋಕಸ್ವಾಮಿ ನಮೋ ನಮಃ!
ಹೃದಯಂ ಚತುರ್ಮುಖಂ; ಜಿಹ್ವೆಯೆ ಸರಸ್ವತೀ;
ಸ್ಥೈರ್ಯಮೀ ವಸುಧಾತಲಂ; ಜಗಮೆ ತಾಂ ಶರೀರಂ;
ನಿನ್ನಿಚ್ಛೆ ವಿಧಿ; ಕೋಪಮಗ್ನಿ; ಲಕ್ಷ್ಮಿಯೆ ಸೀತೆ!
ರಾವಣ ವಧಾರ್ಥಮೀ ನರತನುವನಾಶ್ರಯಿಸಿ
ಬಂದ ಲೀಲಾವತಾರಿಯೆ, ದಶರಥಾತ್ಮಜನೆ,
ಪುರುಷೋತ್ತಮನೆ, ನಮೋ! ಪುರುಷಸಿಂಹನೆ, ನಮೋ!
ಪ್ರಭು, ನಮೋ! ವಿಭು, ನಮೋ! ಜಗದ್ಗುರು, ನಮೋನಮಃ!
ನಮೋ ನಮೋ, ನಮೋ ನಮೋ, ನಮೋ ನಮೋ ನಮೋ!"
ಇಂತತೀಂದ್ರಿಯವಿಂದ್ರಿಯಕೆ, ರಾಗರಾಗಿಣಿಯರೊಲ್
ಭಾವೋತ್ತರೀಯದಿಂದರ್ಥಾಂತರೀಯದಿಂ
ಕಂಗೊಳಿಸಿ, ಕೀರ್ತಿಸಿರೆ ಭಗವದ್‌ವಿಭೂತಿಯಂ
ಭಕ್ತಿರಸ ನಟನಟೀ ಲಾಸ್ಯ ವಿನ್ಯಾಸದಿಂ,
ನವರತ್ನರಾಗಗಳನಾಂತುದು ಚಿತಾಗ್ನಿಯುರಿ!

ವೈಶ್ವಾನರಂ ಬೀಸುವಗ್ನಿ ಚಾಮರದಂತೆವೋಲ್
ರಂಜಿಸಿದುವತ್ತಲಿತ್ತಲ್ ಬೃಹಜ್‌ಜ್ವಾಲೆಗಳ್
ತೊನೆದು, ವೇಷಾಂತರನಾಂತಾದಿಶೇಷನೆಯೆ
ಓಲೈಸಲೈತಂದವೋಲ್! ಹವ್ಯವಾಹನ
ಪವಿತ್ರತನುವಿಂ ಪೊಣ್ಮಿದನು ದಶರಥಾತ್ಮಜಂ
ಜಾನಕೀ ಪಾಣಿಗ್ರಹಣ ಕೃಪಾಲು! ಸೀತೆಯಂ
ಪಾವನಾಗ್ನಿಸ್ನಾತೆಯಂ, ಕಿರ್ಚ್ಚಿನುರಿಯಿಂದೆ
ಕಾಯ್ವು ತೆರದಿಂದೆ, ಕರೆತಂದನೊಯ್ಯನೆ ಪೊರಗೆ
ದುರಿತವಿರಹಿತ ಶಾನ್ತ ಹರಿತಶಾದ್ವಲ ಚಾರು ಆ
ಗಿರಿಯ ವೇದಿಕೆಗೆ. ಶ್ರೀಮದ್ ದಿವ್ಯ ದೇಹದಿಂ
ದಿವ್ಯ ಮಾಲ್ಯಾಂಬರಗಳಿಂ ದಿವ್ಯತೇಜದಿಂ
ಶೋಭಿಸುತ್ತಿರ್ದ ಆ ಸೀತಾಸಹಿತ ರಾಮನಂ
ಕಂಡು ಹರ್ಷೋನ್ಮಾದಕದ್ದುದು ಕಪಿಧ್ವಜಿನಿ,
ಘೇ ಘೇ ಜಯಧ್ವನಿಗೈವ ರಾಕ್ಷಸಧ್ವಜಿನಿಯಂ
ಕೂಡಿ, ಪಯೋಧಿಯಪ್ಪುವೊರ್ ಪಾಥೋಧಿಯೋಲ್!
...ಓಡಿ

ಬಂದನಲೆ ದಿಂಡುಗೆಡೆದಳು ರಾಮಪದತಲದಿ
ಸಂತೋಷಮೂರ್ಛಿತೆಯವೋಲ್: "ಮನ್ನಿಸೈ, ಸ್ವಾಮಿ;
ದೇವಿಯಂ ನಿಂದಿಸಿದ ನಿನ್ನನೆನಿತೆನಿತೊ ನಾಂ
ಬಯ್ದೆನಯ್. 'ಹದಿಬದೆಯನಗ್ನಿವುಗಿಸುವುದಿರಲಿ,
ತನ್ನಂ ಪರೀಕ್ಷಿಸುವರಾರೊ? ತಾನೇಂ ಪೊರತೊ
ದುರಿತ ದೋಷಕೆ?' ಎನುತೆ ಶಂಕಿಸಿದೆನಾ ನಿಂದೆ
ಭಸ್ಮವಾಯಿತು, ತಂದೆ, ನೀನೊಡ್ಡಿದೀ ಚಿತೆಯ
ಲೋಕಪಾವಕ ಪವನಸಖನಿಂದೆ: ಪೂಜ್ಯೆಯಂ
ಪಾಲಿಸುವ ನೆವದಿ ನೀನುಂ ಪರೀಕ್ಷಿತನಲಾ!
ಲೋಕತೃಪ್ತಿಗೆ ಲೋಕಮರ್ಯಾದೆಗೊಳಗಾದೆ;
ಸರ್ವಲೋಕಪ್ರಭುವೆ, ಲೋಕಗುರು ನೀಂ ದಿಟಂ!"
ಆ ವಿಭೀಷಣ ಕುಮಾರಿಯ ನುಡಿಯೆ ತಮತಮಗೆ
ಹೃದಯದಂತರ್ ಬೋಧೆಯಾಗೆ ಜನಸಾಗರಂ
ಭೋರ್ಗರೆದು, ತೆರೆತೆರೆಯೆ ಮೇಲ್ವಾಯ್ದು, ರಸಭರದಿ
ಬಂದೆರಗಿದತ್ತು ಸೀತಾರಾಮರಡಿತಡಿಗೆ:

“ಓಂ ನಮೋ ಸಚ್ಚಿದಾನಂದನೆ ನಮೋ ನಮಃ!
ಓಂ ನಮೋ ಸರ್ವಸ್ವತಂತ್ರನೆ ನಮೋ ನಮಃ!
ಪುಟ್ಟಿತ್ತಯೋಧ್ಯೆಯೊಳ್, ಪಣ್ತುದೀ ಲಂಕೆಯೊಳ್,
ಶ್ರೀರಾಮ ಲೀಲಾವತಾರ ತರು, ನಮೋ ನಮಃ!
ರಾವಣ ವಧಾರ್ಥಂ ಮನುಷ್ಯತನುವಾಶ್ರಯಿಸಿ
ಬಂದ ಲೀಲಾವತಾರಿಯೆ, ನಮೋ, ನಮೋ ನಮಃ!
ಆದಿಯಾದಿಯೆ ನಮೋ, ಅಂತ್ಯದಂತ್ಯವೆ ನಮೋ,
ಆದ್ಯಂತದಾಚೆಗಿರುವಾತನೆ ನಮೋ ನಮಃ!
ಪುರುಷೋತ್ತಮನೆ ನಮೋ, ಪುರುಷಸಿಂಹನೆ ನಮೋ;
ಕವಿ ನಮೋ, ಋಷಿ ನಮೋ, ಪ್ರಭು ನಮೋ, ವಿಭು ನಮೋ;
ಗುರು ನಮೋ, ಅಜ ನಮೋ, ಹರಿ ನಮೋ, ಶಿವ ನಮೋ;
ಓಂ ನಮೋ, ಹ್ರೀಂ ನಮೋ; ಮುಹುರ್ನಮೋ, ಪುನರ್ನಮೋ;
ನಮೋ ನಮೋ ನಮೋ ನಮೋ ನಮೋ ನಮೋ ನಮೋ!”

## ಸಂಚಿಕೆ ೧೨

# ತಪಸ್ಸಿದ್ಧಿ

ಈರೈದು ಮೇಲ್ಮೂರು ಸಂವತ್ಸರಗಳುರುಳಿ
ತುದಿಗೆಯ್ದಿವಂದುದು ಚತುರ್ದಶಂ. ವಿರಹದಿಂ
ಸೊರಗಿದಳಯೋಧ್ಯಾ ನಗರನಾರಿ. ಬಂದಿಳಿಕೆ
ಹಿಡಿದುದಿಕ್ಷ್ವಾಕು ನೀರ್ವೊಯ್ದು ನಡಪಿದ ಮರಕೆ.
ರಘು ಜಲಕ್ರೀಡೆಯಾಡಿದ ಸರೋವರ ತಟಂ
ದರೆ ದರಿಸಿ, ಪರ್ಬಿದುದು ಸಾಂದ್ರಂ ಜಲಪಿಶಾಚಿ,
ಪಾಚಿ. ನೃಪವರ ದಿಲೀಪಂ ಮೇಯಿಸಿದ ದನದ
ಸಂತಾನ ಶತಶತಗಳಿಂ ತುಂಬಿ, ಸೋರ್ವಮೃತ
ಧಾರೆ ನಿಚ್ಚಂ ತೊಯ್ದಮೃತ ಶಿಲೆಯ ಗೋಶಾಲೆ,
ತಂತುಕಾರ ಸಹಸ್ರ ಜಾಲ ವೈರೂಪ್ಯದಿಂ,
ಖಿನ್ನಮಿದೆ ಪಾಳೂರ ತುರುಪಟ್ಟಿಯೋಲ್. ಅಜಂ
ಸಂಚರಿಸಿದುದ್ಯಾನ ವೀಥಿಗಳೊಳಿರ್ಕೆಲದ
ಪಳು ಸಂಕ್ರಮಿಸಲಳಿದುಮುಳಿದುದೈ ಸ್ಮೃತಿಪಥಂ,
ಕೈಕೆಯಣುಗನ ಮೊಗದ ನವಿರಿಡಿದ ನೋಂಪಿಯೋಲ್!
ಸಾಲದೇನಿನಿತೆ ಸೂಚನೆ ನಿನಗೆ, ಓ ವಾಣಿ,
ವಾಗ್ದೇವಿ? ಯಾಚಿಸುವೆ ಕೈಮುಗಿದು. ಪಿಂತಿರುಗು;
ಬಾ, ತಾಯಿ; ಸಾಲ್ಗುಮಾ ಲಂಕೆ, ರಾಕ್ಷಸ ಲಂಕೆ,
ರಣಘೋರ ಲಂಕೆ, ರಾಮನ ಶಂಕೆ, ಜಾನಕಿಯ
ಬೆಂಕೆ! ಬಿಡು, ಸಾಲ್ಗುಮಾ ಲಂಕೆ! ತೋರೆಮಗೆಂತು
ಸುವ್ರತನ್ ಭರತದೇವಂ? ತಪಮಿರ್ಪಳೆಲ್ಲಿ ಆ
ತೋರೂರ್ಮಿಳಾ ದೇವಿ? ಕೌಸಲ್ಯೆಯಿಹಳೆಂತೊ?

ಬರ್ದುಕಿಹಳೆ ಭರತನಂಬಿಕೆ? ಲಕ್ಷ್ಮಣನ ತಾಯಿ
ತಾನೊರ್ವಳನಿಬರಿಗೆ ಸಂತೈಕೆಯಾಗುತೆ
ಅದೆಂತಿಹಳೊ? ಹಾಡಿ ತೋರೆಮಗೆ, ಓ ತಾಯೆ, ಹೇ
ವಾಗ್ದೇವಿ!
ಲಂಕೆಯಂ ತೊರೆಯಲ್ಕದೆತ್ತಣದು
ಶಂಕೆ ನಿನಗಿನ್? ವಿಭೀಷಣನ ಸತ್ಕಾರಮುಂ
ತನಗೆ ಬೇಡದೆ; ಭರತನಂ ಕಾಣುವಳ್ಕರೆಗೆ
ಗಗನ ಗಮನದ ಮನೋವೇಗದ ವರೂಥಮಂ
ಪುಷ್ಪಕವನೇರ್ದು; ಮುನಿವರ ಅಗಸ್ತ್ಯಾಶ್ರಮದಿ
ಮತ್ತೆ ಕಿಷ್ಕಿಂಧೆಯಲಿ, ಪಣ್ಮರವೆ ಗುರಿಯಾಗಿ
ರೆಂಕೆಗೆದರಿದ ಪಕ್ಷಿ ಬೇರೆ ತರುಗಳಲಿನಿತೆ
ವಿಶ್ರಮಕೆ ನಿಲ್ವಂದದಿಂ ತಂಗುತಲ್ಲಿಂದೆ
ಪಾರ್ದನೈಸಲೆ ರಾಮನುಂ ಲಂಕೆಯಿಂದಾ
ಸುದೂರದಾ ಭರದ್ವಾಜನಾಶ್ರಮಕೆ? ಲಂಕೆಯಂ
ತೊರೆಯಲ್ಕದೆತ್ತಣದ ಶಂಕೆ ನಿನಗಿನ್? ಬಾ,
ತಪಸ್ವಿದರ್ಶನಕೆ, ನಂದಿಗ್ರಾಮದಾಶ್ರಮಕೆ!
ಅಣ್ಣನೈತರ್ಪುದರ್ಕಿನ್ನಿರ್ಪವೇಳ್ ಪಗಲ್.
ಕೈಕೊಳ್ವೆನಾತನ ಸುಖಾಗಮನಕೋಸುಗಂ
ಕಡು ನೋಂಪಿಯಂ. ಪೂಜಿಸುವೆನಗ್ನಿದೇವನಂ,
ಸಚ್ಚಿದಾನಂದ ಇಚ್ಛಾಪ್ರತಿಮನಂ. ಮತ್ತೆ
ವಿಶ್ವದೇವರ್ಕಳಂ ಪ್ರಾರ್ಥಿಸುವೆನಭ್ಯುದಯ
ಸಿದ್ಧಿಗಾ ಸೃಷ್ಟಿನಿಯಮಸ್ಫೂರ್ತಿ ಚಿಚ್ಛಕ್ತಿ
ಮೂರ್ತಿ ಸ್ವರೂಪಂಗಳಂ. ವಾರ್ತೆಯಾದೊಡಂ
ಶ್ವೇತಪಕ್ಷದ ಚೈತ್ರಪಂಚಮಿಯ ವಾಸರಂ
ಮುಗಿವನ್ನೆಗಂ ಬರದಿರಲ್ಕಾಂ ನಿವೇದಿಪೆನ್
ವೈಶ್ವಾನರಂಗೀ ಕಳೇಬರವನೆನುತೆ ಋಷಿ
ಭರತಂ, ಗುರು ವಸಿಷ್ಠ ಮಂಗಳಾಶೀರ್ವಾದ
ಹಸ್ತ ಮಸ್ತಕ ನಮ್ರನಾಗಿ, ಸೂರುಳ್ ತೊಟ್ಟು,
ತೊಡಗಿದನು ನಿರಶನವ್ರತಸಹಿತಮಾತ್ಮಮಯ
ಯಜ್ಞಮಂ ಕ್ರತುಪೂರ್ಣಮಂ. ಸುದ್ದಿಯಂ ತಿಳಿಯೆ
ಕಳುಪಿದ ಸಮರ್ಥರೋರೊರ್ವರುಂ ಪಿಂತಿರುಗಿ,

ಮುನಿ ಅಗಸ್ತ್ಯಾಶ್ರಮವನುಳಿದು ಮುನ್ನಡೆದವರ್
ಅದೇನಾದರೋ ತಿಳಿಯದೆಂದೆಂದೆ ಪೇಳ್ದರ್
ನಿರಾಶೆಯಂ. ಕೊನೆಯಿರುಳ್ ಕಳೆಯುತಿರೆ, ಮರುವಗಲೆ
ಮಾಂಡವಿಯ ಮನದನ್ನನಗ್ನಿ ಪ್ರವೇಶಮಂ
ಮನದಿ ನಿಚ್ಚಯಿಸುತಿರೆ, ಯಜ್ಞಕುಂಡಾಗ್ನಿಯಿಂ
ಜ್ವಾಲೆಯೇಳ್ವಂದದಿಂ ಜ್ವಾಲಾವಿಲೀನಮೆನೆ
ಮೈದೋರ್ದುದೊಂದಮರ ಸುಂದರ ಸೂಕ್ಷ್ಮತೇಜದ
ಸುರಾಂಗನಾ ಮೂರ್ತಿ:
"ಕಂದ, ನಿನ್ನಗ್ರಜಂ
ಇಂದೊ ನಾಳೆಯೊ ದಿಟಂ ಪಿಂತಿರುಗಿ ಬಂದಪನ್.
ಮಾಣ್ ಮನದ ತರಿಸಲ್ಕೆಯಂ."
"ದೇವಿ, ನೀನಾರ್?
ಸುಧಾ ಸುಖವನೆರೆಯುತಿಹೆ ಬೆಂದೆದೆಗೆ!"
"ಮತ್ತಾರ್
ಸದಾ ನಿನ್ನ ಸುಕ್ಷೇಮ ಚಿಂತನೆಯೊಳಿರ್ಪರಾ
ಮಂಥರೆ ವಿನಾ?"
"ಬೇಡಮಾ ಪೆಸರನೊರೆಯದಿರ್,
ಪೂಜ್ಯೆ. ಆ ಗೂನಿ ಕಾರಣಮಾಗೆ ನಾನಿಂತು,
ಇಂದಿಲ್ಲಿ, ಕೈಕೊಂಡೆನೈಸೆ ಕಡುಗಜ್ಜಮಂ."
"ವತ್ಸ, ಕಾರಣಳಲ್ತು; ಬರಿ ಕರಣಮಾ ಕುಬ್ಜೆ.
ಮಂಥರಾ ಪ್ರೇಮದಂತಃಕರಣಮಂ ಕಾಣೆ
ನೀಂ. ರಾಮನಂ ಮತ್ತೆ, ನಿನ್ನಭ್ಯುದಯಕಾಗಿ,
ಪಿಂ ಮರಳ್ಚುವುದ್ಯೋಗದೊಳ್ ತೊಡಗಿರಲ್ಕವಳ್
ದವಾಗ್ನಿಗಾಹುತಿಯಾದಳಲ್ತೆ? ಬಹಿರಂಗದೊಳ್
ಆ ಕುಬ್ಜೆ ವಿಕೃತಿಯೆಂತಂತೆ ಹೊರನೋಟಕಾ
ಗೂನಿ ಗೆಯ್ದುದು ಪಾಪವೇಷಿ. ನಾನೆಯೆ, ನೋಡು,
ನಿನ್ನ ಮಂಥರೆಯಂತರಾತ್ಮದ ಪುಣ್ಯಲಕ್ಷ್ಮಿ!"
"ದಿಟಮೊ? ಮೇಣೆನ್ನ ನಿರಶನದನ್ನರಸ ರಹಿತ
ಪಿತ್ತ ಚಿತ್ತದ ವಿಕಾರಮೊ?"
"ನಿರ್ಧರಿಸು ನೀನೆ!"
ಕಿಡಿಯೆ? ಕಿರುನಗೆ ಮಿನುಗೊ? ಲಗ್ನವಾದುದು ಮೂರ್ತಿ

ಅಗ್ನಿಯುರಿಯಾಗಿ ತಲೆದೂಗಿ! ನಿಬ್ಬೆರಗಾಗಿ
ಕೈಮುಗಿದನಾ ಕೈಕೆಯಣುಗಂ ಹುತಾಶನಗೆ,
ರಾಮಾಗಮನದಾಶ್ವಾಸನದ ಕೃತಜ್ಞತೆಗೆ.
  ಬೆಳಗಾದುದಾ ಇರುಳ್. ತುಳುಕಿದುದು ಹೊಂಬೆಳಗು,
ರಾಶಿ ರಾಶಿಯೆ, ಪೂರ್ವ ದಿಗ್ವನಿತೆಯೆತ್ತಿರ್ದ
ಸ್ವರ್ಣ ವರ್ಣದ ಪೂರ್ಣ ಕುಂಭದಿಂ, ಕೋಸಲದ
ದೇಶ ದೇವಿಯ ವನ ನದೀ ವಸನ ಭೂಷಣಕೆ
ಲೇಪಿಸುತೆ ಮಧುಕಾಂತಿಯಂ. ಚೈತ್ರ ಪಂಚಮಿಯ
ಶುದ್ಧ ಪಕ್ಷದ ವಾಸರೇಶ್ವರಂ ತಳತಳಿಸಿ
ಮೂಡುತಿರೆ, ತಿರೆಯರಿಯದೇನರಿಯದೊಡೆ ಭರತಂ,
ನಿರಂತರಂ ಜಾನಕೀಪ್ರಿಯ ದರ್ಶನಧ್ಯಾನ
ನಿರತಂ, ಆ ರಾಮನಾಗಮನದಾಹ್ಲಾದಮಂ?
ಟುವಿ ಟುವ್ವಿ! ಟುವ್ವಿ ಟುವಿ! ಟುವ್ವಿ ಟುವಿಟುವಿಟುವ್ವಿ!
ಟುವ್ವಿ ಮಾಗಿಗೆ ಟುವ್ವಿ! ಸುವ್ವಿ ಸುಗ್ಗಿಗೆ ಸುವ್ವಿ!
ರಾಮನಾಗಮನದಾಶಂಸನಾಹ್ಲಾದಮಂ,
ಕೋಗಿಲೆಗಳೆಂತೊ ಗಿಳಿವಿಂಡೆಂತೊ ತಾಮಂತೆವೋಲ್,
ಪೂವೆರ್ದೆಯ ಜೇನೀಂಟಿ ಸರಗೈದುವಿಂಚರದಿ
ನಲಿವ, ಕುಕಿಲುವ, ಕುಣಿವ, ನೆಗೆವ, ಕುಪ್ಪಳಿಸುಲಿವ
ಬಣ್ಣಬಣ್ಣದ ಗರಿಯ ಮಿಂಚೆಸೆವ ತರತರದ
ಕಿರುವಕ್ಕಿಗಳ್, ಪೆಸರರಿಯದಾ! ಸುಮಾಕ್ಷತೆಯ
ಶುಭಮೆರಚಿ ರಂಗವಲ್ಲಿಯನಿಕ್ಕಿದುವು ಹೊಂಗೆ.
ಕೆಂದಳಿರ್ ತೋರಣಂಗಟ್ಟಿದುವು ಮಾಮರಂ.
ಪೊಂಜೆತ್ತಿದುವು ಮುತ್ತುಗದ ಮರಂ, ಸಾಲ್ಗೊಂಡು
ಕುಂಕುಮ ಕುಸುಮ ಹಸ್ತದಿಂ ಪಗಲ್‌ದೀವಿಗೆಯ
ಪಿಡಿವವೋಲ್. ಗಂಧವಹನೆಂಬ ಬಿರುದಂ ಮರಳಿ
ಪಡೆವೆನೆಂಬೊಂದಹಂಭಾರದಿಂ ಮಂದಮಂದಂ
ಬೀಸಿ ಬಂದಲೆದನೈ ಮಂದಾನಿಲಂ, ದಕ್ಷಿಣ
ದಿಶಾ ಘನೌದಾರ್ಯಸ್ವರೂಪಾಂಜನೇಯನೋಲ್?
  ಪದಿನಾಲ್ಕು ಬರಿಸಗಳ ಪಿಂದೆ ತಾನರಿತ ಪೂ
ಇಂದು ಪಣ್ಣಾದುದಂ ಕಾಣ್ಬ ತಾನಲೆ ಸುಕೃತಿ?
ಬಿಂದುವೋಲಂದು ತನ್ನತಿಥಿಯಾಗಾಶ್ರಮಕೆ

ಬಂದಾತನಿಂದು ತಾಂ ಸ್ವಸ್ವರೂಪಜ್ಞಾನ
ಪೂರ್ಣ ಸಾಕ್ಷಾತ್ಕಾರದಿಂ ಸಿಂಧು ತಾನಾಗಿ
ಬಿಜಯಿಸಿದನೆಂದು, ದಿವ್ಯಜ್ಞಾನಿ ಋತವಿದ್
ಭರದ್ವಾಜನಾತನನಿದಿರ್ಗೊಂಡು, ಸಂಭ್ರಮದಿ
ಸತ್ಕರಿಸಿದನು ಪೂಜಿಪೋಲ್, ಪೂರ್ಣಚಂದ್ರಮುಖಿ
ಸೀತಾದ್ವಿತೀಯನಂ ಶ್ರೀರಾಮಚಂದ್ರನಂ,
ವಾನರ ಸಮೇತಂ ವಿಮಾನದಿಂದವತರಿಸಿ
ಲಕ್ಷ್ಮಣ ಸಹಿತ ತನಗೆ ಪೊಡಮಟ್ಟನಂ. ತನ್ನಾ
ತಪೋವನದೊಳೊರ್ ಪಗಲ್ ಕಳೆಯವೇಳ್ಕೆಂದ ಗುರು
ಗುರುವಚನ ಗೌರವಕಲ್ಲಿ ನಿಂದನಾದೊಡಮಿರದೆ
ಭರತಂಗೆ ತನ್ನಾಗಮನ ಯೋಗವಾರ್ತೆಯಂ
ಮುನ್ನರುಹೆ, ತಿಳುಹಿ ಕಳುಹಿದನಾಂಜನೇಯನಂ,
ಶೃಂಗಿಬೇರಪುರಪಥದಿಂ ಗುಹನನೊಡಗೂಡಿ
ದಿವ್ಯ ನಂದಿಗ್ರಾಮದಾಶ್ರಮಕೆ.
ಓ, ಏಕೆ
ತಳ್ವುತಿಹೆ, ದಕ್ಷಿಣ ಘನೌದಾರ್ಯಮೂರ್ತಿ, ಹೇ
ಪವನಪ್ರಿಯಕುಮಾರ? ಕ್ಷಣಮುಂ ಪ್ರತೀಕ್ಷಣೆಗೆ
ಯುಗಮಲ್ತೆ? ಬೇಗೆಯಲಿ ಬಾಯಾರಿಹುದೊ ಭರತ
ಹೃಚ್ಚಾತಕಂ! ಬೇಗ ಬಾರ್ಯೆ, ಸಮೀರಸುತ:
ತಾರಯ್ಯ, ಜೀಮೂತವಾಹನನ ಕರುಣೆಯೋಲ್,
ರಾಮವಾರ್ತಾ ವರ್ಷ ಜೀಮೂತಮಂ! ಲಂಕೆಯೊಳ್
ನೀನಂದು ಜಾನಕಿಗೆ ರಾಮವಾರ್ತೆಯನೊರೆದು
ಪೊರೆದಂತೆವೋಲಿಂದು ಕೋಸಲದಿ ಪೊರೆಯೆ ಬಾ
ಭರತನಂ. ನಿನಗಾರ್ ಜಗತ್‌ತ್ರಯದಿ, ಮಿಗಿಲೊಳರ್
ಸಂದೇಶ ವಾಹಕ ವರೇಣ್ಯ ಗುರು ನೀನಲ್ತೆ,
ಹೇ ಜಗತ್‌ಪ್ರಾಣ ಮುಖ್ಯಪ್ರಾಣ?
ಅದೇನದೇನ್?
ಕೊರಳೆತ್ತಿ ಬೆರಗಾಗಿ ನೋಡುತಿಹರಲ್ಲಲ್ಲಿ
ಕೋಸಲಗ್ರಾಮೀಣ ಪಲ್ಲಿಜನಂ? ಗುಹಂ,
ವ್ಯಾಧರಾಜಂ, ತಾನೆ ಕಡೆವೆದೇರ್ ನಡಸುತಿರೆ;
ಪಕ್ಕದೊಳ್, ಪ್ಲವಗಲಾಂಛನರುಡುಗೆ ತೊಡುಗೆಯಿಂ,

ರಣವೃತ್ತಿ ನಿವೃತ್ತ ನಾಗರಿಕ ಲಕ್ಷಣಗಳಿಂ,
ಕುಳ್ಳಾಂಜನೇಯನಿರ್ಕೆಲದೌತ್ತರೇಯ ಪ್ರಕೃತಿ
ಸೌಮ್ಯ ಸೌಂದರ್ಯಮಂ ಮೆಚ್ಚುತೈತಂದು ಪೊಕ್ಕನ್
ನಂದಿಗ್ರಾಮ ಬಹಿರ್‌ವಲಯಮಂ. ಕ್ಷೇತ್ರದಾ
ಗೌರವಕೆ ತೇರಿಳಿಯುತಿರ್ವರುಂ ಬರುತಿರಲ್,
ಬಟ್ಟೆವಟ್ಟೆಯೊಳೆಲ್ಲಿಯುಂ ಮೂಕವಿಸ್ಮಯದಿ
ನಿಂದುದು ಜನಂ ದಿಟ್ಟಿನಟ್ಟು, ಮರುತಾತ್ಮಜನ
ತೇಜಕ್ಕೆ ಗಾತ್ರಕ್ಕೆ ನೇತ್ರಕಾಂತಿಗೆ ಮತ್ತೆ
ಆತ್ಮದೋಜೆಯ ವಿಶೇಷಾಕೃತಿಗೆ. ಮಹಿಮೆಗೇಂ
ಪರಿಚಯವನೊರೆಯವೇಳ್ಕುಮೆ? ಮಂದಿ ತಲೆಬಾಗಿ
ವಂದಿಸಿದುದಾ ಮಹಾವೀರಂಗೆ, ಕಿಷ್ಕಿಂಧೆ
ತಾನಯೋಧ್ಯಾ ರಕ್ಷಣೆಗೆ ಪೆತ್ತ ವಿಂಧ್ಯಗಿರಿ
ಸನ್ನಿಭ ಜಗದ್ ವಂದ್ಯ ಭವ್ಯ ಗಂಭೀರಂಗೆ!
ಧ್ಯಾನಸ್ತಿಮಿತಲೋಚನಂ ಭರತನೊಯ್ಯನೆಯೆ
ಕಣ್ದೆರೆದು ನೋಡಿ, ಕಂಡನು ಮುಂದೆ ದಿಂಡುರುಳಿ
ದಂಡಪ್ರಣಾಮಮಂ ಗೆಯ್ದಿರ್ದ ಗುಹನಂ,
ನಿಷಾದನೃಪನಂ:
''ಬಾಳ್‌ಗೆಳೆಯ, ಏಳ್, ಬಿಯದರರಸ,
ನಿನ್ನಾಳ್ಗಳೇನಾದೊಡಂ ಮಂಗಳವನೆನಗೆ
ತಂದರೇನಣ್ಣನಂ ಕುರಿತ ಶುಭವಾರ್ತೆಯಂ?
ಪೇಳ್!'' ವಿಷಣ್ಣಾನನದಿ ಕೇಳ್ದ ಭರತಗೆ ಗುಹಂ
ಸುಪ್ರಸನ್ನಂ ''ದೂತನೈತಂದಿಹನ್!'' ಎನುತ್ತೆ,
ಭರತ ಭಾವಸ್ಥಿತಿಯನುದ್ರೇಕಿಸಲ್ ಬೆದರಿ
ತನ್ನ ಪುಲಕಾನಂದಮಂ ದಮನಗೆಯ್ಯುತ್ತೆ
ನೀರಸಧ್ವನಿಯೊಳೆಂದನ್:
''ದೇವ, ತಿಳಿಯೆನಾಂ
ನಿಶ್ಚಿತವನಾದೊಡಂ ನಮಗಿನ್ ನಿರಾಶೆಯಂ
ಮಾಣ್ಬುದುಚಿತಂ.''
''ಪೇಳ್, ಸಹೋದರಂ ಬರ್ದುಕಿಹನೆ?''
''ಸಲ್ಲದತ್ಯಾಶೆಯುಂ, ದಾಶರಥಿ. ಬರ್ದುಕಿರ್ಪ
ಚಿಹ್ನೆಯಂ ತೋರಲ್ ಸಮರ್ಥನೊರ್ವನನಿಲ್ಲಿ

ಕರೆತರೆ ಸಮರ್ಥನೆಂ.''
"ಆರವನ್? ನಿನ್ನಾಳೆ''
"ರಾಮನಾಳ್!''
"ರಾಮದೂತನೆ? ಎಲ್ಲಿ? ಎಲ್ಲಿ ತೋರ್!
ಕರೆದು ತಾ!''
"ರಾಮನಟ್ಟಿದನೆಂದೆ ನಂಬೆನಾಂ.
ಬಂದನಾ ಗುರು ಭರದ್ವಾಜಾಶ್ರಮದ ದೆಸೆಯ
ಪಳುವಟ್ಟೆಯಿಂ.''
"ನೋಳ್ಪೆನಾತನಂ ಕರೆದು ತಾ!''
"ಗುರು ವಸಿಷ್ಠಂಗತಿಥಿಯಾಗಿಹನ್. ಈಗಳೆಯೆ
ಕರೆತರ್ಪನಾತನಂ.''
"ದಣಿದು ಬಂದಿಹನೆ, ಬಹು
ದೂರದಿಂ? ಏನ್ ಪೇಳ್ದನಾತನ್ ನಿನಗೆ, ಗುಹ?''
"ದಂಡಕಾರಣ್ಯದೊಳ್ ರಾಮಲಕ್ಷ್ಮಣರೊಡನೆ
ರಾಕ್ಷಸಂ ಕಳ್ದುಯ್ದ ಸೀತೆಯಂ...''
"ಏನೇನ್?
ಏನೆಂದೆ? ಏನ್ ಪೇಳ್ದನತ್ತಿಗೆಯನುಯ್ದರೆ
ನಿಶಾಚರರ್?'' ತತ್ತರಿಸುತಿರ್ದನಂ ಕೈವಿಡಿದು
ಕುಳ್ಳಿರಿಸುತುಪಚರಿಸಿ ಗಹನಗೋಚರ ಗುಹಂ:
"ಅಲ್ತಲ್ತು; ತಪ್ಪಿದೆನ್. ಲಂಕಾಧಿನಾಥನಂ,
ವಾನರ ಸಹಾಯದಿಂ, ಕಡುಗಾಳೆಗದಿ ಕೊಂದು,... ''
"ಓಡು, ನಡೆ, ಗುಹ; ಕರೆದು ತಾ ಆ ಮಹಾತ್ಮನಂ.
ರಾಮಕಥೆಯಂ ಪೇಳ್ವ ಜಿಹ್ವೆಯ ಪುನೀತನಂ,
ಶ್ರೀದೂತನಂ!''
ಗುಹಂ ಪೋದತ್ತಲಿಯೆ ದಿಟ್ಟಿ
ಬೆಸೆದತ್ತು. ರಾಮ ಪಾದುಕೆಯನಿರ್ಕಯ್ಗಳಿಂ
ಹೃದಯಕೊತ್ತಿದನ್, ಎತ್ತಿ ಪಣೆಗಿಟ್ಟನ್, ಅಲ್ಲಿಂದೆ
ನೆತ್ತಿಗೇರಿಸಿದನದನ್, ಅಶ್ರು ಬಿಂದೂತ್ಕರಂ
ಪೊನಲಿಳಿದು ಮರೆಯಾಗುವೋಲ್ ಶ್ಮಶ್ರುಮಯ ಮುಖದಿ.
ಭರತನಿಂತಿರೆ ಪೊಕ್ಕನೆಲೆವನೆಯ ಬಾಗಿಲಿಂ
ಮರುತಾತ್ಮಜಂ, ಗುರು ಸಹಿತಮಟವಿಗೋಚರಂ

ವೆರಸಿ. ತನ್ನೆವೆಯಿಕ್ಕದಕ್ಷಿಯ ಕವಾಟದಿಂ
ರಾಮನೆಯೆ ಹೃನ್ಮಂದಿರಂಬೊಕ್ಕವೋಲಾಗಿ,
ನಿರ್ನಿಮೇಷಂ ಭರತನೀಕ್ಷಿಸಿದನಾ ರುಂದ್ರ
ವಾನರನ ಶ್ರೀಮನ್ ಮಹಾಕಾರಮಂ! ತನ್ನ
ಪುರುಷಕಾರವನನಿತುಮಂ ತೂಗಿ ಅಳೆವವೋಲ್
ಕಣ್ಣೊಳೆಯೆ ತಳೆವವೋಲ್ ದಿಟ್ಟಿಯಿಂ ಪೀರ್ವವೋಲ್
ನಟ್ಟು ನಿಟ್ಟಿಸುತಿರ್ದ ರಾಮಾನುಜಂ, ತನಗೆ
ಮೊದಲಂದು ಪಂಪಾ ಸರಸ್ತೀರದಲಿ ಕಣ್ಗೆ
ಬಿಳ್ದ ಸೀತಾದುಃಖಿ ರಾಮನಂ ಬಗೆಗೆ ತರೆ,
ನಿಷ್ಪಕ್ಷ್ಮನಾಗಿ ಸಂವೀಕ್ಷಿಸಿದನನಿಲಜಂ
ಭರತನ ತಪೋಧನಶ್ರೀರೂಪಮಂ: ಜಟಾ
ಜಟಿಲನಂ, ಪಂಕದಿಗ್ಧಾಂಗನಂ, ದಾಂತನಂ,
ಬ್ರಹ್ಮರ್ಷಿ ಸಮತೇಜನಂ, ರಾಮ ಪಾದುಕಾ
ಮಕುಟ ಸಂಪದ್ಯುಕ್ತನಂ, ಭಾವಿತಾತ್ಮನಂ,
ಚೀರವಲ್ಕಲ ಕೃಷ್ಣಮೃಗ ಚರ್ಮವಸನನಂ,
ದೀನನಂ, ಕೃಶನಂ, ತಪೋಧರ್ಮಚರ್ಯೆಯ
ಮಹದ್ ಬ್ರಹ್ಮಚಾರಿಯಂ ಶ್ಮಶ್ರುಮಯ ಮುಖದಿಂದೆ
ಸತ್ಯವಿಕ್ರಮ ಚಿಹ್ನನಂ, ಭ್ರಾತೃವಾತ್ಸಲ್ಯ
ಘನಮೂರ್ತನಂ ನೋಡಿ, ನೋಡಿ, ಒಯ್ಯನೆ ಬಾಗಿ,
ಕರಪುಟಾಂಜಲಿಯಾದನಾಂಜನೇಯಂ:
"ಕುಶಲಿ,
ಮಹಾತ್ಮ, ಸೀತಾ ಲಕ್ಷ್ಮಣರ್ ಸಹಿತನ್, ಆರ್ಗೆ ನೀಂ
ಜಡೆವೆರಸಿ ತಪಮಿರ್ಪೆಯೋ ಆ ಜಗತ್‌ಪೂಜ್ಯನ್,
ಭ್ರಾತೃವತ್ಸಲ ರಾಮಚಂದ್ರಂ!"
ವಿವಶನಂತೆ
ಭರತನೆಳ್ದನು ಹರ್ಷರಸಮೂರ್ಛಿತಂ. ಧಾರೆ
ಸೋರ್ವ ಕಂಬನಿವೆರಸಿ, ಶಿಶು ತೊದಲ್ವಂದದಿಂ
ತೊದಲುತ್ತೆತಂದು ಬಿಗಿದಪ್ಪಿದನು, ತೋಳ್ ಬಲಂ
ತರಹರಿಸುವೋಲ್, ಕಾಯಮಂ ಕಪಿಧ್ವಜನಾ!
ಮಹಾ ಬಾಹು ಮರುತಜಂ ತಾನುಮಾತನನಿರದೆ
ತೋಳ ತೊಟ್ಟಿಲೊಳಾನುತಿರೆ, ಪಸುಳೆಯೋಲುಸಿರ್

ಸೋಲ್ತು, ಕಣ್ಮುಚ್ಚಿದನೊ ರಾಮಾನುಜಂ!
ಶಿಶಿರಮಯ
ಶುಶ್ರೂಷೆಗೆಳ್ಚರ್ತ ಭರತಂಗೆ ಮರುತಾತ್ಮಜಂ:
"ಗುರು ಹರಸಿ ಕೊಡುವನಿದೊ; ಕುಡಿ ಮೊದಲ್ ಫಲರಸದ
ಪಾನೀಯಮಂ, ಪೂಜ್ಯ! ಕುಡಿಯಲ್ ಸಮರ್ಥನಹೆ,
ತದನಂತರಂ, ನಾನೊರೆಯಲಿರ್ಪ ಜಾನಕೀ
ಚೋರನಂ ರಣಮುಖದಿ ಕೊಂದ ಕೋಸಲ ಧರಾ
ನಾಥ ಮಹಿಮೆಯ ಕಥಾಕ್ಷೀರಮಂ!"
ಪುರೋಹಿತಂ
ಸ್ವಾದು ಫಲರಸ ಪೂರ್ಣಮಂ ಪೂರ್ಣಚಂದ್ರಿಕಾ
ಚಾರು ಚಾಮೀಕರಸ್ಥಾಲಿಯಂ ಕಂಡಲ್ಕದಂ
ಕೊಂಡನು ಕೈಗೆ: 'ರಾಮಚಂದ್ರಂ ಬಾಳ್ಗೆ! ಗೆಲ್ಗೆ
ರಾಮಚರಿತಂ! ಚಿರಂ ಜೀವಿಸುಗೆ ರಾಮದೂತಂ!'
ಎನುತೆ ಹಣ್ಣಿನ ರಸವನೀಂಟುತಿರೆ ಮಾಂಡವೀ
ಪ್ರಾಣಪ್ರಿಯಂ, ತಣ್ಣಗೆ ತಣಿವುದಿಳೆಯ ಸುಮನಸರ
ಸಹೃದಯ ದಯಾಮಯ ಮನೋಮಂದಿರಂ!
ಸ್ವಯಂ
ಮುಖ್ಯಪಾತ್ರನೆ ಪೇಳ್ದನೆನೆ, ಕೇಳ್ದನೆನೆ ಭರತಂ,
ದಿವ್ಯ ರಸ ಭರಿತಮಂ ಶ್ರೀರಾಮಚರಿತಮಂ
ಮತ್ತೆ ಕಬ್ಬಿಗನೊರೆವುದೇಂ? ಮೊಗೆದನೀಂಟಿದನ್,
ಮುಳುಗಿದನ್, ತೇಲ್ದನೀಜಿದನೇರಿ ದುಮುಕಿದನ್:
ನೊರೆಯ ಐರಾವತಗಳೇರ್ದುವೆನೆ ತೆರೆತೆರೆಯ
ಕೈಲಾಸಗಿರಿಗಳಂ, ಕಲ್ಲೋಲಮಯವಾಯ್ತು
ರಾಘವ ಕಥಾಕ್ಷೀರಸಾಗರಂ!
ಗ್ರಾಮದಿಂ
ಗ್ರಾಮಕ್ಕೆ, ನಗರದಿಂ ನಗರಕ್ಕೆ, ಪತ್ತನದಿ
ಪತ್ತನಕೆ, ಪಲ್ಲಿಯಿಂ ಪಲ್ಲಿಗಾ ಕೋಸಲದ
ಮೂಲೆ ಮೂಲೆಯೊಳೆಲ್ಲಿಯುಂ ಪರ್ಬಿದುದು ವಾರ್ತೆ
ರಘುರಾಮನಾಗಮನದಾ. ಸುದ್ದಿಯಂ ಬಿಡದೆ
ಹಿಂಬಾಲಿಸಿತು ಭರತನಾಜ್ಞೆ. ಚೈತ್ಯಂಗಳಂ
ದೇವ ನಿಲಯಂಗಳಂ ಶುಚಿಗೆಯ್ದು, ಸಿಂಗರಿಸಿ,

ವಾದಿತ್ರ ರವದಿಂ ಸುಗಂಧ ಮಾಲ್ಯಂಗಳಿಂ
ಪೂಜಿಸಿದರರ್ಚಕರ್ ದಿವ್ಯ ಚೇತನಗಳಂ,
ಶ್ರೀರಾಮ ಸದ್ಧರ್ಮ ಮಂಗಳಾರ್ಥಂ.
                                        ಬೆಸನಿತ್ತು
ಕಳುಹಿದನು ಭರತನಾ ಶತ್ರುಚೇತನ ಹಾರಿ
ಶತ್ರುಘ್ನನಂ ಪುರಕೆ ಸಾಕೇತಕದನಂದೆ
ಕಯ್ಗಿಯ್ದು, ತನ್ನ ತಾಯ್ವಿರ್ವೆರಸಿ, ಮಂತ್ರಿಗಳ್
ಸೇನೆಗಳ್ ಛತ್ರ ಚಾಮರ ಶಂಖಭೇರಿಗಳ್
ರಾಜ ಮರ್ಯಾದೆಯಂ ರಾಜಚಿಹ್ನಂಗಳಂ
ಕೂಡಿಕೊಂಡೊಡನೆ ನಂದಿಗ್ರಾಮಕ್ಕೈತರ್ಪವೋಲ್.
ಶ್ರೀ ವಾರ್ತೆ ಶತ್ರುಘ್ನನಿಂ ತಿಳಿದುದೆಯೆ ತಡಂ
ತೊರೆದುದು ಶವಸ್ಥಿತಿಯನುಸಿರೆಳೆದುದು ಅಯೋಧ್ಯೆ;
ಜಡನಿದ್ರೆಯಿಂದೆಳ್ದುದಯ್ ನೃಪತಿಮಂದಿರಂ!
ಸುಣ್ಣ ಸೊದೆಯಂ ತಳೆದು ಮನೆಮನೆಯ ಗೋಡೆಗಳ್
ಬೆಳ್ಳಿಯಾದುವು ಚೈತ್ರದಾತಪದಿ. ನೀರೆರೆದ
ಬೀದಿಗಳ್ ತೋರಣಂಗಟ್ಟಿದುವು. ಕತ್ತುರಿಯ
ಪರಿಮಳದ ರಂಗೋಲಿಯಿಕ್ಕಿದುವು ಮನೆಮನೆಯ
ಮುನ್ನೆಲಂಗಳ್. ಚಿನ್ನದಂಬಾರಿಯಾನೆಗಳ್
ತೇರುಗಳ್ ಕುದುರೆಗಳ್ ಭಾರಿ ಕಾಲಾಳುಗಳ್
ಸಾಲ್ಗೊಂಡು ಸಂಚರಿಸ ತೊಡಗಿದುವು; ಶಿಲ್ಪಿಗಳ್
ಗುಂಪು ಗುಂಪೆಯೆ ನೆರೆದು ಸಮರಿದರ್ ದಾರಿಯಂ,
ನಾಗರಿಕ ಸಂಚಾರ ಸುಭಗಮಪ್ಪಂತೆವೋಲ್.
ದಿಗ್ದಂತಿ ಕಿವಿನಿಮಿರೆ ಸಂತೋಷ ಭೇರಿಗಳ್
ಸಂಭ್ರಮದಿ ಮೊಳಗಿದುವು ಧಳಧಳಧಳಂ!
                                                ಸರಯೂ
ನದೀ ತಟ ಕುಟೀರದ ತಪಸ್ವಿನಿಗದೇತಕೊ
ತನೂರುಹಂ ನಿಮಿರುತೆ, ಅಪೂರ್ವಮೆಂಬಂದದಿಂ,
ಬಹುಕಾಲ ಪೂರ್ವ ಪರಿಚಿತಕೆ ಕಿವಿಗೊಟ್ಟಳಾ
ಗಿರಿವನಗಳುಂ ತಲ್ಲಣಿಸೆ ಮೊಳಗುತ್ತೈತಂದ
ಭೇರಿಯ ಧಳಂಧಳಂಧಳಂ ಧಳಧ್ವನಮಯ
ಸಂಭ್ರಮಕೆ. ಕಂಡಳೊಯ್ಯನೆ ತನ್ನ ತಂಗೆಯಂ

ಕರೆಕರೆಯುತೋಡಿ ಬಂದಶ್ರುರುಚಿರಾಕ್ಷಿಯಂ
ಭರತಸತಿ ಮಾಂಡವಿಯನೂರ್ಮಿಳಾ ದೇವಿ:
                                                  ''ಏಳ್
ಏಳ್, ಅಕ್ಕ! ಕೇಳ್, ಭೇರಿ ಚೀರುತಿವೆ ವಾರ್ತೆಯಂ!''
ಸುಸ್ಥಿರೆ ತಪಸ್ವಿನಿಗೆ ಜೀವಮಸ್ಥಿರಮಾಗಿ
ಗದ್ಗದಿಸಿದಳ್:
                    ''ದೇವರ್ರೈತಂದರೇನ್ ತಂಗೆ,
ವನವಾಸದಿಂ?''
                    ''ಬೇಗಮೇಳ್; ಪೋಗವೇಳ್ಕುಮಾ
ಸ್ವಾಮಿ ಸಪಮಿರ್ಪ ನಂದಿಗ್ರಾಮದಾಶ್ರಮಕೆ!''
''ಮೀಯದುಡದೆಯೆ ತೊಡದೆ ಪೋಪುದೇನವರೆಡೆಗೆ,
ತಂಗೆ? ಮಂಗಳಮಲ್ತು!''
                              ''ನೋಡಬಾರದೆ ಅವರ್
ನಿನ್ನ ನಿಡು ಕಡುನೋಂಪಿಯಂ?''
                                        ''ಚಿಃ! ಕಡಲ್ಗಿದಿರ್
ಪನಿಗೇಂ ಪ್ರದರ್ಶನಂ? ದೇವರ ತಪಕ್ಕಿದಿರ್
ನಮ್ಮದೊರ್ ತೃಣಮಲ್ತೆ! ಸಂತೋಷ ಸಮಯದೊಳ್
ತೋರ್ಪುದನುಚಿತವೆಮ್ಮ ಕಷ್ಟಮಂ! ತನ್ನ ತಾನ್
ಇಲ್ಲಗೈವುದೆ ಎಲ್ಲ ಸಾಧನೆಗೆ ಕೊನೆಯ ಗುರಿ;
ಮೇಣ್ ತಪಕೆ ಕೇಳ್, ತಂಗೆ, ಪರಮಪ್ರಯೋಜನಂ!''
ವೀಚಿ ವೀಚಿಯ ಪೊಳೆವ ರೋಚಿಯ ತರಂಗಿಣಿಯ
ಕುಣಿಕುಣಿದು ನಲಿವ ತಿಳಿನಗೆಯ ಮಣಿವಾರಿಯೊಳ್
ಮುಡಿಮುಳುಗೆ ಮಿಂದಳುಟ್ಟಳು ಬಿಳಿ ದಳಿಂಬಮಂ,
ಮಡಿಗೆ ನೂರ್ಮಡಿ ಮೆರೆಯೆ ಕಡುನೋಂಪಿ. ಸಿರಿಮುಡಿಗೆ
ಪಣೆಗೆ ಮೇಣಡಿಗಳಿಗೆ ಕಟಿಯೆಡೆಗೆ ಸೌಮಿತ್ರಿಯಂ
ನೆನೆದಲಂಕರಿಸಿದಳು ತನ್ನಯ್ದೆತನಮಂ! ತೊರೆಗೆ
ಬನಕೆ ಮೇಣೆಲೆವನೆಗೆ ನಿತ್ಯಪರಿಚಿತ ಲತಾ
ತರುರೂಪಿ ಚೇತನಗಳಿಗೆ ನಮಿಸಿದಳು, ತಪದ
ಸಫಲತೆಗೆ ವತ್ಸರ ಚತುರ್ದಶಗಳಿಂ ತನಗೆ
ಧೃತಿಯನಿತ್ತುಪಕೃತಿಗೆ. ಪಕ್ಕಿಗಳ್ಗಕ್ಕಿಯಂ
ಬಿಕ್ಕಿ, ಮಿಗಗಳಿಗೆಳೆಯ ಗರುಕೆಯಂ ತಿನಲಿತ್ತು,

ಸ್ಥಲದೇವತಾ ಚರಣಕಭಿನಮಿಸಿ ಧೂಳಿಯಂ
ಶಿರದೊಳಾಂಪಂತೆ ಪೊಡೆವಟ್ಟು ನೆತ್ತಿಯೊಳಿನಿತು
ಮೃತ್ತಿಕೆಯನಾಂತು ಬೀಳ್ಕೊಟ್ಟಳೆಲೆವನೆಯನಾ
ತವರಿನತ್ತೆಯ ಮನೆಗೆವೋಪಂತೆ. ತಂಗಿಯಂ
ಕೂಡಿ ಬಂದಾಣ್ಮನಂಬಿಕೆಯಡಿಗೆ ಮಣಿದಳಂ
ಪಿಡಿದೆತ್ತಿ ಬಿಗಿದಪ್ಪಿದಳ್ ಸುಮಿತ್ರಾದೇವಿ!
‘‘ನಿನ್ನ ತಾಳಿಯ ಪುಣ್ಯಮೈಸಲೆ, ಮಗಳೆ, ಮರಳ್ದುದು
ಕಾಡು ಪಾಲಾದೆಮ್ಮ ಕುಲದೇಳ್ಗೆ! ಪಿರಿಯತ್ತೆಯರ್
ಕಾದಿಹರೆಮಗೆ ದೇವಿ ಕೌಸಲ್ಯೆ. ಕಿರಿಯತ್ತೆಯಂ
ಕಂಡು, ತನ್ನೊಡನೆ ನಂದಿಗ್ರಾಮಕಾಕೆಯಂ
ಕರೆದೊಯ್ವ ಕರ್ತವ್ಯದಲಿ ತೊಡಗಿಹಳ್ ಪಿರಿಯ
ರಾಣಿ. ಊರ್ಮಿಳೆ, ನಮ್ಮ ಸಂಕಟಕಿಂದು ಬಂದುದು
ವಿರಾಮಮಾ ಕೈಕೆಯ ಮನೋವ್ಯಥೆಗೆ ಪೇಳೆಂದು
ಬರ್ಪುದೊ ಪರಿಸಮಾಪ್ತಿ? ಬಾ, ನಡೆವಮಾಕೆಯಂ
ತಣಿಸಿ ಸಂತೈಸಿ ಕರೆದೊಯ್ವಮಾ ರಘುರಾಮ
ಮೇಣ್ ಭರತ ಸಂದರ್ಶನದ ಪುಣ್ಯದರ್ಶನಕೆ!’’
ನಡೆದರನಿಬರು ಕೈಕೆಯರಮನೆಗೆ. ಕಂಡರವಳಂ,
ರಾಮಜನನಿಯ ತೋಳ ತಳ್ಕಿಯೊಳಳುತ್ತಿರ್ದಳಂ,
ಕೃಶ ಮಲಿನ ಮೂಕ ಶೋಕದ ಶಿಲಾಪ್ರತಿಮಳಂ,
ಪಾಳ್‌ವಿಳ್ದ ಪೂಜಾರಹಿತ ದೇವಮಂದಿರದ
ವಿಗ್ರಹಂಬೋಲ್ ಮ್ಲಾನೆಯಂ, ಸಂಸ್ಕಾರಹೀನೆಯಂ,
ಗುರುದುರಿತ ದುಃಖಭಾರದಿ ಕುಸಿದ ಕಡುದೀನೆಯಂ.
ತನಗೆ ಮಣಿದೂರ್ಮಿಳೆಯನೆತ್ತಿ ಮುತ್ತೊತ್ತಿದಳ್
ಕೈಕೆ; ಕಣ್ಬನಿ ಕರೆದಳೇನೊಂದನಾಡದ
ಶಿಲಾ ಮೌನದಿಂ! ಭರತನಂಬಿಕೆಯ ವಕ್ಷದೊಳ್
ಮೊಗಮಿಟ್ಟು ಮಗಳಾಗಿ ನುಡಿದಳೂರ್ಮಿಳೆ:
‘‘ಅಮ್ಮ,
ನಿಮ್ಮ ದುಃಖದ ಮೇರೆಯಂ ನಾನಳೆಯಲಾರೆ;
ಚಿಕ್ಕವಳ್. ನಮಗಾಗಿ, ನಿಮ್ಮ ಮಕ್ಕಳಿಗಾಗಿ,
ಓಕರಿಸದೀಂಟವೇಳ್ಕಾ ಕಾಳಕೂಟೋಪಮದ
ಹೃತ್ತಾಪಮಂ. ತಾಯಿ, ನಿನಗಲ್ಲದಿನ್ನಾರ್ಗೆ, ಪೇಳ್,

ಸಂಮ್ಮಥಿತ ದಶರಥ ತನೂಜ ಜೀವಿತ ಕಥಾ
ಸಾಗರೋತ್ಥಿತ ಘೋರ ಗರಳಮಂ ಧರಿಸುವ
ಶಿವಾ ಶಿವ ಶ್ರೀಕಂಠ ಶಕ್ತಿ? ಆಶೀರ್ವದಿಸು,
ಏಳು ಬಾರಮ್ಮ; ನೇಸರ್‌ಬಳಿಯ ಬಾಳ್ ತುಂಬಿ
ಪರಿವುದಾನಂದ ಭಾಗೀರಥಿಯವೋಲ್!''
ಸುಯ್ದಳ್!
ಊರ್ಮಿಳೆಯ ಸಿರಿಮೊಗವನೆತ್ತಿ ಮುದ್ದಾಡಿದಳ್;
ನಸುನಕ್ಕಳಾ ತಾಯಿ, ನೃಪತಿಮಂದಿರಮನಿತು
ಮಂಕುಗಳೆದೊಳ್ಪು ಬೆಳ್ಪನೆ ಬೆಳಗುವೋಲಂತೆ!
ಮೆರವಣಿಗೆವರಿದುದೊ ಅಯೋಧ್ಯೆ, ವನವಾಸಿ ಋಷಿ
ಸಂಸ್ಕೃತಿಯನಿದಿರುಗೊಳೆ ನಡೆವ ನಾಗರಿಕತೆಯ
ಸಿರಿಮಾಳ್ಕೆಯಿಂದೆ, ನಂದಿಗ್ರಾಮದತ್ತಣ್ಗೆ:
ಪೃಥಿವಿ ಸಿಂಚಿತಮಾಯ್ತು ಹಿಮಶೀತವಾರಿಯಿಂ.
ಸಮತೆಯಾಂತುದು ನತೋನ್ನತ ವನೋರ್ವೀತಲಂ.
ಪುಷ್ಪಲಾಜೆಯ ಗಂಧ ಬಂಧುರ ಪಥಂ ಜನಕೆ
ಮಾರ್ಗದರ್ಶಕಮಾಯ್ತು ಪೂಜ್ಯ ಪದ ಸನ್ನಿಧಿಗೆ
ರಘುರಾಮನಾ. ಹೇಮಕಕ್ಷ್ಯೆಗಳನಾಂತೆಸೆವ
ಮತ್ತ ನಾಗ ಸಹಸ್ರಗಳ್; ಧ್ವಜಪತಾಕೆಗಳ್
ವೇಗ ಸಂಜಾತ ಗಿರಿವಿಪಿನ ವಾತಕೆ ತೊನೆಯೆ,
ತಲೆಯೊಲೆವ ಪೊಂದೇರ ಸಾಲುಗಳ್; ಮುಖ್ಯರಂ,
ಕನಕ ರಶ್ಮಿಯನೆಳೆದು ತಮ್ಮ ಖುರಗತಿಗಳಂ
ನಿಯಮಿಸುವಮಾತ್ಯರಂ, ಪೊತ್ತ ಪೆರ್ಮೆಗೆ ಕೆನೆದು
ನೆಲಮಂ ಬೆರಂಟುವ ತುರಂಗತತಿಗಳ್; ತೈಲ
ಧಾರೋಪಮಂ ಪೊನಲ್ವರಿವ ಅವಿರಳ ಗತಿಯ
ಅಮಲ ಶಸ್ತ್ರದ್ಯುತಿಯ ವರ್ಣವಸ್ತ್ರಾಕೃತಿಯ
ಶತ ಶತ ಪದಾತಿಗಳ್; ಪುರಮಹಿಳೆಯರ್ ವೆರಸಿ
ದಶರಥಸ್ತ್ರೀಜನಂ ಹೇಮಯಾನಂಗಳೊಳ್
ನಡುವೆಯ್ತರೆ, ವೀರ ಶತ್ರುಘ್ನನಂ ಕೂಡಿ
ಪ್ರವಹಿಸಿತಯೋಧ್ಯೆ ನಂದಿಗ್ರಾಮದತ್ತಣ್ಗೆ!
ಆರ್ಯಪಾದಂಗಳಂ.–ಬೆಳ್ಮಲರ್ ಮುಡಿದುವಂ–,
ಪೊಂಬಿಡಿಯ ಬೆಳ್ಚವರಿವೀಸಿ, ನೇಸರ್‌ಬಳಿಯ

ಪಾಲ್‌ನೊರೆಯ ಬಿಳಿಯ ಕೊಡೆಯಂ ನೆಳಲ್‌ವಿಡಿದೆತ್ತಿ
ಹರ್ಷದುಂದುಭಿ ರವಂ ಮೊಳಗೆ, ತಾಯ್ವಿರ್‌ವೆರಸಿ,
ಮಂತ್ರಪಾಲ ಸುಮಂತ್ರ ಜಾಬಾಲಿ ಮೊದಲಪ್ಪ
ಸಚಿವರ್ಯೆತರೆ ಬಳಸಿ, ಪೌರ ನರ ನಾರಿಯರ್,
ಮಂಗಳದ್ರವ್ಯಂಗಳಂ ಪಿಡಿದು ಬರೆ,—ನೆತ್ತಿಯೊಳ್
ಪೊತ್ತು ರಾಮನನಿದಿರುಗೊಳ್ವಾತುರದ ಮನದಿ
ಭರತನೆಯ್ದಿದನಾಂಜನೇಯ ಸತ್‌ಸಂಗ ಸುಖಿ,
ತ್ಯಕ್ತ ನಂದಿಗ್ರಾಮನಾ ಭರದ್ವಾಜಾಶ್ರಮ
ದಿಶಾ ಪ್ರಸಕ್ತಮುಖಿಯಾಗಿ. ಹನುಮನ ಕೂಡೆ
ಕಾತರಿಪ ತನ್ನೆರ್ದೆಯ ಕುದಿಹದನುಮಾನಮಂ
ಪೇಳುತ್ತೈತರೆ, ಮುಂದೆ, ಗೋಮತಿಯನೊಡವೆರೆವ
ವಾಲುಕೀ ವಾಹಿನಿಯ ರಮ್ಯ ಸಾಮೀಪ್ಯದಾ
ಸಾಲವನಮಂ ಬೆಳಗಿದುದು ಬಾಲಸೂರ್ಯನೊಲ್
ಸ್ಥಿರೆಗವತರಿಪ ರಾಮವಾಹನಂ, ವ್ಯೋಮ ಚರ
ಕಾಮ ರೂಪ ವಿಮಾನಮಾ ಪುಷ್ಪಕಂ! ಘೇ ಉಘೇ
ಘೋಷಧ್ವನಿಗೆ ಕಂಪ್ರಿಸಿತವನಿ!—ಲೆಕ್ಕಿಪರದಾರ್
ಬೆಕ್ಕಸದ ಪಕ್ಕಿದೇರಂ? ರಾಮ! ಲಕ್ಷ್ಮಣ! ಸೀತೆ!
ನೆರೆದ ಜನಮನಕನ್ಯ ಲಕ್ಷ್ಯಮಿರ್ಪುದೆ? ತನ್ನ
ಮಾನಹಾನಿಗೆ ಮುನಿದೊ ರಾಮನಿಂಗಿತವರಿತೊ
ಪಾರ್ದುದು ವಿಹಂಗಮ ವರೂಥಂ ಕುಬೇರನಂ
ಸ್ಮರಿಸಿ, ಮುನ್ನಿನ ತನ್ನ ನೆಲೆಗೆ!

ಮುಗಿದುವು ಕೋಟಿ
ಕರಕಮಲಂ; ಲೆಕ್ಕಂಗಿಡಲ್ ಬಾಗಿದುವು ಶಿರಂ;
ಲಕ್ಷೋಪಲಕ್ಷ ಹಸ್ತಂಗಳಿಂದುದುರಿತು ಕಣಾ
ಕುಸುಮ ವೃಷ್ಟಿ! ಹುಚ್ಚುಹೊಳೆ ಹರಿದುದಾನಂದವೆನೆ
ವರ್ತಿಸಿದರಾ ನಾಗರಿಕರಾಟವಿಕರಂತೆವೋಲ್!—
ಅದೊ ರಾಮಚಂದ್ರನದೊ ಅಲ್ಲಿ ಸೀತಾದೇವಿ!
ಅಲ್ಲಿ ಕಾಣದೊ ದೇವಲಕ್ಷ್ಮಣಂ! ಗುರುತಿಪುದೆ
ಕ್ಲಿಷ್ಟಮಾಯ್ತೆನಗೆ ಪದಿನಾಲ್ಕು ಬರಿಸಗಳಾಚೆ
ಕಂಡೊಂಗೆ! ಧೀರನಾರವನೊ? ವಾನರ ನೃಪಂ
ಸುಗ್ರೀವನಲ್ತೆ! ಬಳಿಯಿರ್ಪನ್? ವಿಭೀಷಣಂ!—

ಕೇಳ್ವವರ ಪೇಳ್ವವರ ನೋಳ್ಪಾತುರದಿ ನುಗ್ಗಿ
ಪೋಪವರ ಬರ್ಪವರ ತುಮುಲಮೇರ್ದುದು ಕಡಲ್
ಕಡೆಗೊಂಡವೋಲ್. ಮುನ್ನಮಾಳೋಚಿಸಿದ ತೆರದಿ
ನೆಗಳಲಾರೇನ್ ಸಮರ್ಥರೆ, ಸಿದ್ಧಿಯೊಳ್ ಮುಳುಗೆ
ಬುದ್ಧಿ? ಇಂತೆಯೆ ನಡೆವೆನಿಂತೆಯೆ ನುಡಿವೆನೆಂಬ
ಕೃತಕ ಮರ್ಯಾದೆಯನಿತುಂ ಮರೆತುದಾನಂದ
ಸಹಜವರ್ತನೆಗೆ ಶರಣಾಗಿ!
ಕಂಡುದೆ ತಡಂ
ರಾಮನಂ, ಭರತಂ ಮರಂಬಟ್ಟನೋಲ್ ನಿಂದು
ಚಲಿಸದಾದನ್. ಕಂದನಂ ಕಂಡು ಕೌಸಲ್ಯೆ
ಮುಂಬರಿಯಲೆಳಸಿಯುಂ ಬೇರೆಯಾರನೊ ನೋಡಿ
ಬೆರಗಾದಳಂತೆವೋಲ್ ಪಿಂಜರಿದು ನಿಂದಳ್
ಸಖೀಜನರಡರ್ಪಂ ಬಯಸಿ. ಮುನ್ನಮಿರ್ದ್ದೆರ್ದೆಯ
ಪಾಪ ಭಾವದ ಭಾರಮನಿತುಂ ಕಳಲ್ದವೋಲ್
ತನ್ನಾತ್ಮಕೊಯ್ಯನೆಯೆ ನವಪುಣ್ಯಚೇತನಂ
ಕಾಂತಿಬುಗ್ಗೆಯ ತೆರದಿ ಚಿಮ್ಮಿ ಭರತನ ತಾಯಿ,
ಕೈಕೆ, ರಾಮನ ಮಹಾ ಮಹಿಮೆಯ ವಿಕಾಸನಕೆ
ತಾನೆ ಕಾರಣಳೆಂಬ ಜನಮನಭ್ರಾಂತಿಯಿಂ
ಬಿಡುತೆಗೊಂಡಾ ಕೈಕೆ ನಡೆದಳತಿಶಾಂತಿಯಿಂ
ಶ್ರೀರಾಮನೆಡೆಗೆ! ಪಿಡಿದೆತ್ತಿದಳು ತನ್ನಡಿಗೆ
ಮಣಿದಾತನಂ! ನಿನ್ನ ಮೆಯ್ಯಂ ಪೆತ್ತ ತಾಯಲ್ತು,
ನಿನ್ನಾತ್ಮಮಂ ಪೆತ್ತಳಾನೆಂಬ ಪೆರ್ಮೆಯಂ
ನುಡಿಯಿಲ್ಲದೆಯೆ ನುಡಿದಳೆಂಬಂತೆ ಪರಸಿದಳ್
ಚಿನ್ಮಯ ಮಹಾಮೌನದಿಂ!
ತನ್ನ ತಾಯಿಯ
ವಿಚಿತ್ರ ಚಿತ್ತಸ್ಥಿತಿಗೆ ಭರತನಚ್ಚರಿವಡುತೆ
ಮುಂಬರಿದನೆಳ್ಚರ್ತನೋಲ್: ಅಪ್ರಕಟಮಾದೊಡೇನ್?
ಅಪುಣ್ಯರೂಪದಿ ತೋರ್ದೊಡೇನ್? ತಪಂ ತಪಮಲ್ತೆ!
ಭರತನೊಡನೊಡನಿತರರನಿಬರುಂ ನಡೆ ನಡೆದು
ಸಲಿಸಿದರು ತಮತಮಗೆ ತಗುವ ಮರಿಯಾದೆಯಂ
ರಘುವರಗೆ, ಮೈಥಿಲಿಗೆ, ಲಕ್ಷ್ಮಣಗೆ, ಸುಗ್ರೀವ

ಜಾಂಬವ ವಿಭೀಷಣ ನಳಾಂಗದ ದ್ವಿವಿದ ಮೇಣ್
ಮೈಂದ ನೀಲರ್ಗೆ. ತಾಂ ಪೂಜಿಸಿದ ಪಾದುಕೆಗಳಂ
ಪೂಜ್ಯಪಾದನ ಪದಕೆ ತೊಡಿಸಿದನು ಭರತಂ,
ಕಿರೀಟವನೆ ಚರಣತಲ ಸೇವೆಗೆ ಸಮರ್ಪಿಪೋಲ್.
ವಾನರ ಮಹಾಮಹಿಮರುಂ ರಾಕ್ಷಸೇಂದ್ರನುಂ
ಬಾಷ್ಪಲೋಚನರಾಗಿ ಬದ್ಧಾಂಜಲಿಗಳಾಗಿ
ಶಿರ ಬಾಗಿ ದರ್ಶಿಸಿದರಾ ಮಹದ್ ದೃಶ್ಯಮಂ!
   ಧರಿಸಿ ಆ ಪಾದುಕೆಗಳಂ ಚರಣ ಚರನಾಗಿ
ತನ್ನಾಶ್ರಮಂ ಬೊಕ್ಕನೆನೆ ನೃಪಋಷಿ ತಪಸ್ವಿ
ರಾಮಭದ್ರಂ, ಭರತನ ತಪಸ್ಯೆಗಿನ್ನೊಳದೆ
ಪೇಳಧಿಕತರ ಸಿದ್ಧಿ? ಭರತಾಶ್ರಮದೊಳಂದು
ವಿಶ್ರಮಿಸಿದನು ಜಾನಕೀ ಜೀವಿತೇಶ್ವರಂ
ಬಂಧು ಮಿತ್ರರ್ ವೆರಸಿ, ಮರುದಿನಮಯೋಧ್ಯಾ
ಪ್ರಯಾಣಮಂ ನಿಶ್ಚಯ್ಸಿ. ಭರತನಿಚ್ಚೆಯನರಿತ
ಶತ್ರುಘ್ನನಾಜ್ಞೆಯಿಂ ಸಾಕೇತ ಪುರಿಗೆಯ್ದಿದರ್
ಮಂತ್ರಿಗಳ್, ಗುರು ವಸಿಷ್ಠನ ನಿರೂಪದಿ ಸಮೆಯೆ
ಪಟ್ಟಾಭಿಷೇಕದ ಮಹೋತ್ಸವಕೆ ಸಕಲ ಶುಭ
ಸನ್ನಾಹಮಂ. ಶ್ಮಶ್ರುವರ್ಧಕ ಕರ್ಮಕಿತ್ತಲ್
ಸುಶೀಘ್ರರುಂ ನಿಪುಣರುಂ ಸುಖಹಸ್ತರುಮೆನಿಪ್ಪ
ಶಿಕ್ಷಿತ ಕ್ಷುರಮರ್ದಿಗಳ್ ಬಂದು, ರಾಮೇಚ್ಛೆಯಿಂ
ಭರತಂಗೆ ಕತ್ತರಿಸಿದರ್ ಮೊದಲ್ ಜಟೆಗಳಂ;
ಗೆಯ್ದರ್ ಮುಖಕ್ಷೌರಮಂ, ಚಾರು ಕೂರ್ಚಂಗಳಂ
ಬಿಡಿಸಿ. ಲಕ್ಷ್ಮಣಗೆ, ವಾನರ ಮಹಾ ಮುಖ್ಯರಿಗೆ,
ಸಖ ವಿಭೀಷಣಗೆ ಮೇಣ್ ಕೊನೆಗೆ ತನಗುಂ ವದನ
ಸೌಂದರ್ಯ ಸಂಸ್ಕಾರಮಾಗೆ, ಪರಿಮಳ ತೈಲ
ಲೇಪನದಿ ಗಂಧೋದಕದಿ ಮಿಂದಿರನಿಬರುಂ,
ಕಡೆದ ರನ್ನದ ಕಾಂತಿಯಿರ್ಮಡಿಸುವಂದದಿಂ
ಪೊಳೆಯೆ ಸಹಜಾತ್ಮತೇಜಂ!
                                        ಸೊಸೆಯನಾದರಿಸಿ
ತಣಿದರಿಲ್ಲಂದಿರುಳ್ ಕೈಕೆ ಕೌಸಲ್ಯಾದಿ
ದೇವಿಯರ್. ಅಕ್ಕನುಪಚಾರದಲಿ ಮರೆತುದೈ

ತನ್ನತನಮೂರ್ಮಿಳೆಗೆ. ಮಾಂಡವೀ ಶ್ರುತಕೀರ್ತಿಯರ್
ಸೀತೆಯಂ ಬೆಂಬಿಡದೆ ಮತ್ತೆ ಚಿಕ್ಕವರಾಗಿ
ತಂಗೆತನದಕ್ಕರೆಯನುಕ್ಕಿಸಿದರಕ್ಕಂಗೆ
ತಂದೆ ಜನಕನ ಕಾಣುವಾಸೆಗಳುವುಕ್ಕುವೋಲ್!
ಮಗನ ಮನದನ್ನೆಯಂ ಸಂತವಿಟ್ಟಳೊ ತಾಯಿ
ಕೌಸಲ್ಯೆ: ''ಮರುದಿನಮೆ ಪಟ್ಟಾಭಿಷೇಕೋತ್ಸವಂ!
ಬಳಿಯಟ್ಟಿ ಕರೆಸದಿರ್ಪನೆ ದಶರಥಾತ್ಮಜಂ,
ಪೇಳ್ ಮಗಳೆ, ಮಾವನಂ, ಮಿಥಿಳೇಂದ್ರನಂ, ಪೂಜ್ಯ
ರಾಜರ್ಷಿಯಂ, ಸೀತೆಯಂ ಪೆತ್ತ ಪುಣ್ಯಾತ್ಮನಂ?''

## ಸಂಚಿಕೆ ೧೩

# ಅಭಿಷೇಕ ವಿರಾಡ್‌ದರ್ಶನಂ

ಓಂಕಾರಮುಖ ಸಚ್ಚಿದಾನಂದ ಋತಚಿತ್
ಸ್ವರೂಪಿಣಿಯೆ, ಶಿವೆ ಸರಸ್ವತಿ ಲಕ್ಷ್ಮಿಯರ್ ಮೊದಲ್
ನಿಶ್ಶೇಷ ದೇವಗೋಷ್ಠಿ ಸಮಷ್ಟಿ ರೂಪಿಣಿಯೆ,
ಸೃಷ್ಟಿಕಾರಿಣಿಯೆ, ಭರತಾರಿಣಿಯೆ, ಹೇ ಜಗದ್
ಧಾರಿಣಿಯೆ, ನಿನಗಿದೊ ಸಮರ್ಪಿಸುವೆನಾತ್ಮಮಂ
ಚರಣಕಿರಣದ ಸೋಂಕಿಗೆನ್ನೀ ಸಹಸ್ರಾರ
ಚಕ್ರದ ಶಿರಸ್ಸರೋಜಂ, ಅಯೋಧ್ಯಾ ರಾಮ
ಪಟ್ಟಾಭಿಷೇಕೋತ್ಸವದ ವಿರಾಡ್ ವೈಭವಕೆ
ಕವಿಕೃತಿಪ್ರತಿಮೆ ತಾನೆನೆ, ವಿಕಾಸಂಗೊಳ್ವವೋಲ್!
ಬಲವಂದುದೀ ಮೇದಿನೀ ಗೋಲಮೊಂಬತ್ತು ಸೂಳ್
ತಪೋನಿಧಿಯನಾದಿತ್ಯನಂ, ತವ ಕೃಪೆಯೊಳಾಂ
ಮಹಾಬ್ಧಿಯಾತ್ರೆಯನಿದಂ ತೊಡಗಿ ಗುರುಕಾವ್ಯಮಂ.
ನೀನೆ ತಾರಿಣಿ, ನೀನೆ ತರಣಿಃ ಭವತಾರಿಣಿಯೆ,
ರಣಮಯ ಧರಿತ್ರಿಯೀ ವರ್ಷ ತಾರಣದಲ್ಲಿ
ಕಾಣುತಿಹುದೆನಗಿದರ ದೂರ ಪಾರಾವಾರ
ತೀರ ರೂಪಂ. ದೇವಗೋಚರಮದಂ ತೋರ್,
ಜಗಜ್ಜನನಿ, ರಾಮ ಪಟ್ಟಾಭಿಷೇಕದ ವಿರಾಡ್
ವ್ಯಾಪಾರಮಂ ಪ್ರತಿಮಿಸುವ ವಿಶ್ವರೂಪಮಂ!
ಇತಿಹಾಸಮಲ್ತು; ಬರಿ ಕಥೆಯಲ್ತು; ಕಥೆ ತಾಂ
ನಿಮಿತ್ತಮಾತ್ರಂ, ಆತ್ಮಕೆ ಶರೀರದೋಲಂತೆ.
ಮೆಯ್ವೆತ್ತುದಿಲ್ಲಿ ರಾಮನ ಕಥೆಯ ಪಂಜರದಿ

ರಾಮ ರೂಪದ ಪರಾತ್ಪರನ ಪುರುಷೋತ್ತಮನ
ಲೋಕಲೀಲಾ ದರ್ಶನಂ. ಬಂಧ ಲೀಲೆಗಾ
ಮೋಕ್ಷಮೆಯೆ ಪರಮಪುರುಷಾರ್ಥಮಾ ಮುಕ್ತಿಗೀ
ಪಟ್ಟೋತ್ಸವಂ ತಾಂ ಪರಬ್ರಹ್ಮತ್ವ ಸಿದ್ಧಂಗೆ
ಸಮನಿಸುವ ಕೈವಲ್ಯಸವನೋತ್ಸವಕೆ ಸಮಂ!
''ಸಮನೆ? ಮಿಗಿಲದಕೆ! ಕಾಣ್!''
ಆರ ಆಜ್ಞೆಗೊ ಕಣ್
ತೆರೆದತ್ತತೀಂದ್ರಿಯಕೆ. ಕಂಡೆನಚ್ಚರಿಯೆನಲ್
ನಿರಾಕಾರನೊರ್ವನಂ! ಭಯಭಕ್ತಿ ಗೌರವದಿ
ರೋಮಹರ್ಷದಿ ಬಾಗಿ ಕೇಳ್ದೆನಾ ಸಾನ್ನಿಧ್ಯ
ಮಾತ್ರ ತನುಸೂಕ್ಷ್ಮನಂ: ''ನೀನಾರ್, ಮಹಾಪುರುಷ?''
''ಗುರುವನೆಯೆ ಗುರುತಿಸದವಂ ಶಿಷ್ಯನೆಂತಹನೊ?''
ವಾತ್ಸಲ್ಯದಿಂದೊರೆದುದಾ ಭವ್ಯ ಸಾನ್ನಿಧ್ಯ
ಸತ್ತ್ವಂ: ''ಅನಾದಿಕವಿ ನಾಂ ಕಣಾ! ವಾಲ್ಮೀಕಿ
ವ್ಯಾಸ ಹೋಮರ್ ದಾಂತೆ ಫಿರ್ದೂಸಿ ಮಿಲ್ಟನ್
ಮಹಾಕವೀಶ್ವರರೆನಗೆ ಬಾಹುಮಾತ್ರಗಳಲ್ತೆ?
ಬಹು ನಾಮರೂಪಗಳ್, ಬಹು ಕಾಲದೇಶಗಳ್
ನನಗೆ. ನೀನುಂ ನಾನೆಯೆ, ಕುವೆಂಪು!''
ತಲ್ಲಣಿಸಿದೆನ್
ಮಂದ್ರಕಂಠಧ್ವನಿಯ ರುಂದ್ರಗಾಂಭೀರ್ಯಕಾಂ.
ದಿವ್ಯ ಜಿಹ್ವೆಯೊಳೆನ್ನ ನಾಮಾಕ್ಷರಂಗಳಂ
ಕೇಳ್ದು ವಿಸ್ಮಿತನಾಗಿ ತುಟಿನಡುಗಿ ತೊದಲುತಿರೆ:
''ನಾನೊರೆದುದಲ್ಲದೆಯೆ ನೀನ್ ಬರೆದುದೇನ್, ವತ್ಸ?
ನಿನ್ನಹಂಕಾರದಲ್ಪತೆ ಗೆಯ್ದ ದೋಷಗಳ್, ಕೇಳ್,
ನಿನ್ನವಲ್ಲದೆ ಕೃತಿಯ ಪೆರ್ಮೆಗೇಂ ಕವಿಯೆ ನೀನ್?
ಏಳ್, ಏಳ್! ತೊರೆ ಆ ಅವಿದ್ಯೆಯಂ! ತೋರ್ಪೆನದೊ
ಕಾಣ್!''
ಕಂಡೆನಾಂ ಕಂಡೆನಾ ಕಂಡುದೇನಂದರಿಯೆ!
ಶೂನ್ಯತೆಗೆ ಮುಳುಗುತಿರ್ದೆನ್ನ ಮತಿಯಂ ಪಿಡಿದು
ತನ್ನ ವಕ್ಷದೊಳಪ್ಪುತಾ ಕೃಪಾ ಭಗವದ್
ವಿಭೂತಿ ಪುರುಷಂ:

"ಪ್ರಾಣೆ ನೀಂ: ಪ್ರಾಣಮಯಮಂ
ಮನೋಮಯಮುಮಂ ಮೀರ್ದ ವಿಜ್ಞಾನಮಂ ಕಂಡು
ಕಾವ್ಯಸತ್ತಾ ಜ್ಞಾನದಿಂದಿರ್ಪುದಸದಳಂ!
ಕಂಡ ದರ್ಶನಕೊಂದು ವಿರಚಿಸುವೆನಾಂ ಬೃಹತ್
ಪ್ರತಿಮೆಯಂ. ತಾನತೀಂದ್ರಿಯಮಾದೊಡಂ, ಕಾಣ್
ಕವಿಪ್ರಾಣೆ, ಪ್ರಾಣಬುದ್ಧಿಗ್ರಾಹ್ಯಮಪ್ಪುದನದಂ!"
ದಿವ್ಯ ಸಾನ್ನಿಧ್ಯ ವಕ್ಷದೊಳಾಂ ನಭೋಂಗಣದ
ನೀಡದೊಳ್ ಕುಳ್ತ ನಕ್ಷತ್ರ ಪಕ್ಷಿಯೊಲಿರ್ದು
ಪ್ರೇಕ್ಷಿಸಿದೆನಭಿಷೇಕ ಲೀಲಾ ಮಹರ್‌ಲಕ್ಷ್ಮೀ
ವಿಭೂತಿಯಂ:
ಮೇರೆಗಾಣದ ಕಾಲದೇಶದ
ಚಿದಾಕಾಶಮಂ ತುಂಬಿದತ್ತೊಂದು ನೀಲಮೌನಂ.
ಮೌನ ಸಿಂಧುವೊಳೇಳ್ವ ನಾದ ಬುದ್ಬುದಗಳೋಲ್
ಚಲಿಸಿದುವು ವಿವಿಧ ವರ್ಣಾಗ್ನಿಯ ತರಂಗಗಳ್.
ಶರಧಿ ನಾಭಿಯಿನೇಳ್ದುವೈರಾವತಂಗಳೇಳ್,
ದಿಶೆಗಳುಜ್ವಲಿಸೆ. ಚಕ್ರಾಕಾರದೊಳ್ ನಿಂದು
ಸೊಂಡಿಲ್ಗಳಿಂದಾಂತುವೊಂದುದಕಸದ್ಮದಿಂ
ಮೂಡಿ ಬಂದಮೃತರುಚಿಯಂಬುಜದ ಮುಕುಳಮಂ.
ಗಾನ ಮರುತನ ಸೋಂಕಿಗೊಯ್ಯೊಯ್ಯನೆಸಳೆಸಳೆ
ಬಿರಿದರಳ್ದುದು ತಾವರೆಯ ಮುಗುಳ್. ಪೇಳ್ವೆನೇಂ?
ತುಂಬಿದತ್ತದರ ಕಂಪಂಬುಜ ಭವಾಂಡಮಂ!
"ನೀಂ ನೋಡುತಿರ್ಪಾ ಸರೋಜದೊಂದೊಂದೆಸಳ್
ಬಹುಕೋಟಿ ಯೋಜನ ಸುವಿಸ್ತೀರ್ಣದೊಂದೊಂದು
ದೇವಲೋಕಂ ಕಣಾ!" ಸುಖಭೀತಮನನಾಗಿ
ನೋಡುತಿರಲಾಂ ಮುನ್ನಡೆದನೊಂದೆರಳ್ ಪಜ್ಜೆಯಂ
ವಕ್ಷ ರಕ್ಷೆಯೊಳೆನ್ನನಾಂತ ಗುರುದೇವನಾ
ಲೋಕಶಿಲ್ಪಿಯ ಕಲ್ಪನೆಯ ಕಲಾಸತ್ಯಮಂ
ಬಳಿಸಾರ್ವವೋಲ್: ಕಂಡೆನಾ ಕಮಲ ದಲ ದಲಗಳಲಿ,
ಬಾಂದಳದಿ ಕಿಕ್ಕಿರಿವರಿಲ್‌ಚುಕ್ಕಿಗಳನೆಂತಂತೆ,
ಸಾಂದ್ರಮುಜ್ಜ್ವಲಿಸಿರ್ದ ಕಾಂತಿಕೇಂದ್ರಂಗಳಂ,
ಗಣಿತಂ ದಣಿವ ಸಂಖ್ಯೆಯಲಿ. ತಿರ್ರನೆಯೆ ತಿರುಗಿ

ರಚಿಸಿದುವಲಾತಚಕ್ರಂಗಳಂ ವಿದ್ಯುನ್ಮಹಾ
ವೇಗದಲಿ: "ದಿವ್ಯ ಚಿಚ್ಛಕ್ತಿಯಿಂ ತಿರುಗುತಿಹ
ಸೃಷ್ಟಿ ಚಕಂಗಳ್ ಕಣಾ, ಮೂಲಗಳ್ ತಾಂ ಮನುಜ
ವಿಶ್ವದೊಳ್ ಪ್ರಕೃತಿನಿಯಮಂಗಳೋಲ್ ತೋರ್ಪಖಿಲ
ಜಡದ ಮೇಣ್ ಜೀವಚೇಷ್ಟಿತಕೆ." ಮುಂಬರಿದಿನಿತು
ನಿಲ್ಲಲಾತಂ, ಕಂಡೆನೊಂದೊಂದಲಾತಕೃತ
ನೇಮಿಯುಂ ತಾಂ ಪುಟ್ಟಿದತ್ತಮಿತ ದೇವತಾ
ಹಸ್ತ ಹಸ್ತ ನ್ಯಸ್ತ ವಿನ್ಯಾಸದಿಂ. ಆ ಜ್ಯೋತಿ,
ನಮ್ಮ ಬೆಳಕೆಯೆ ತನ್ನ ನೆಳಲ ನೆಳಲಿಗೆ ನೆಳಲ್
ತಾನೆಂಬುವಾ ಚಿತ್ ತಪೋಜ್ಯೋತಿ ಏ ತನುವೆತ್ತ
ಆ ದೇವತಾಕೃತಿಯ ದಿವ್ಯಪ್ರಕಾರಗಳ್
ಬೆಳೆದುವೊಂದೊಂದುಮಾಗಸಕಿದಿರ್ ನಿಮಿರೇಳ್ವ
ಶಿಖರಮಯ ಗಿರಿಪಂಕ್ತಿ ಸಂಭವ ದಿಗಂತಕೃತ
ರೇಖಾ ಮುಖಂಗಳೋಲ್, ಬೈಗಿನಾಕಾಶದೊಳ್
ಕೆತ್ತಿದೊಲ್ ದಿಗ್ದೇಶಮಂ. ದಳಸಹಸ್ರದೊಳೊಂದು
ದಳದಿ, ಕಿಡಿಕೋಟಿಗಳಲೊಂದು ಕಿಡಿಗಾಲಿಯೊಳ್,
ಪಂಕ್ತಿ ಪಂಕ್ತಿಯ ದೇವತಾ ರೂಪಗಳಲೊಂದೆಮಗೆ
ಗುರಿಯಾಗಿ ಬೆಳೆಬೆಳೆದು ನಮ್ಮನೊಳಗೊಳ್ಳುತಿರೆ,
ಗುರುದೇವ ವಾಣಿ:

"ನೀನೀಗಳೀ ಜ್ಯೋತಿರ್
ದಿವೌಕಸನ ದಿಗುಮೊಗಂಬುಗುವಯ್, ಲಲಾಟದಾ
ಪ್ರಜ್ಞಾನ ಪಥದಿಂದಮಾತನ ಮನೋಮಯಕೆ!"
ಪೊಕ್ಕನಾಂ ಸಹಿತೊಯ್ಯನಾ ದೇವ ಫಾಲಾಕ್ಷಿಯಂ,
ರವಿಯ ಛವಿ ಪುಗುವಂತೆ ಗಾಜಿನ ಗವಾಕ್ಷಮಂ, ಮೇಣ್
ಕವಿಯ ಕನಕಸ್ವಪ್ನಮಂ ಪ್ರವೇಶಿಸುವಂತೆವೋಲ್
ಸಹೃದಯಪ್ರತಿಭೆ. ನೀರಿಗೆ ಮರಳ್ದುರುಳ್ದೊಂದು
ಮೀನಂತೆವೋಲಾಡೆನಾಂ. ಬರ್ದುಕಿದೋಲುಸಿರ್
ಸುಯ್ದೆನೆಂದನ್:

"ಗುರುವೆ, ಸ್ವಪ್ನದಿಂದೆಳ್ಚರ್ತನೋಲ್
ಬಗೆಗದಡುವಾ ಭ್ರಮೆಯಿಂದಮೀ ಪರಿಚಿತಪ್ರಮೆಗೆ
ಪಿಂತಿರುಗಿದಂತಾದುದಯ್. ವಿಕೃತಿಲೋಕದಿಂ

ಮಿಥ್ಯೆಯಿಂ ಪ್ರಕೃತಿಲೋಕಕೆ ಮತ್ತೆ ಸತ್ಯಕ್ಕೆ
ಬಂದು ನೆಮ್ಮದಿಯಾಂತುದೆನ್ನ ಜೀವಂ.''
ಕೇಳ್ದು
ಪಸುಳೆ ತೊದಲಿಗೆ ತಾಯಿ ನಗುವಂತೆ ನಕ್ಕನಾ
ದಿವ್ಯ ಪುರುಷಂ: ''ವತ್ಸ, ಮೀನ್ಗೆ ನೀರೊಳಗಿರ್ಪ
ಗಾಳಿಯೆ ಗಾಳಿ. ನೀರನುಳಿಯಲ್ಕುಸಿರ್ ಕಟ್ಟಿ,
ವಾಯುಮಂಡಲಮೆ ವಾಯುವಿಹೀನವೆಂಬಂತೆ
ತೋರ್ಪುದಯ್. ನಿನಗುಮಂತೆಯೆ ಸತ್ಯಲೋಕಗಳ್
ತೋರ್ದುವು ಅಸತ್ಯದೋಲ್. ತೋರುತಿಹುದೀ ಮಿಥ್ಯೆ
ಘನತರದ ಸತ್ಯದೋಲ್. ನನಸಿನೊಳ್ ಚರಿಸುತಿರೆ
ಕನಸಿನೊಲ್ ತೋರ್ದುದಾ ಅಸಂಖ್ಯ ದೇವರೊಳೊರ್ಬ
ದೇವನ ಮನೋಮಯಂ ಕಾಣ್ಬ ಕನಸಂ ಬೊಕ್ಕು
ಗಟ್ಟಿ ನನಸಂ ಮೆಟ್ಟಿ ಮುಟ್ಟಿ ನಿಂದಂತೆವೋಲ್
ನಿನಗನುಭವಂ. ನೆಳಲ್ ನೆಳಲನಲ್ಲದೆ ಅನ್ಯಮಂ
ನನ್ನಿಯಂ ತಿಳಿಯದೊಪ್ಪದು ಕಣಾ! ನೋಡಿದುವೆ
ಯೋಗಬುದ್ಧಿಗ್ರಾಹ್ಯ ಮನುಜವಿಶ್ವಂ. ಇದುವುಮಾ
ಸ್ಥೂಲ ನರಮತಿಗೆ, ನಿನಗಾ ಸತ್ಯಲೋಕಗಳ್
ತೋರ್ಪಂತೆವೋಲ್, ಬರಿಯ ಕಾವ್ಯವಿಭ್ರಮೆ ನೆಯ್ವ
ನಶ್ವರ ಮನೋಹರಂ, ಕಲಾಮಾತ್ರಮೆಯೆ ರುಚಿರ
ಮೇಣಚಿರ ಸತ್ಯಂ ಕಣಾ! ಖಿನ್ನನಾಗದಿರ್;
ನಾಂ ಗೆಯ್ದುದಾರ ಖಂಡನೆಯಲ್ತು; ಲೀಲಾಮಯೀ
ಮಾಯಾ ಸ್ವರೂಪ ಕಥನಂ.''
ಮನೋಲೋಕದಾ
ಚಿಚ್ಛಕ್ತಿ ವಿಭವಂಗಳಂ, ಸಾಗರೋಪಮ
ಮಹರ್ಷಿ ರೂಪಂಗಳಂ, ಬುದ್ಧಿ ಪ್ರಭಾವಗಳ
ಚಿನ್ಮಯಾಕೃತಿಗಳಂ, ಸಿದ್ಧಿ ಶಕ್ತಿಗಳಾದಿ
ಮಾತೃಕೆಯರಂ, ಕೃಪೆಗಳಂ, ನಮಸ್ಕಾರಾದಿ
ವಿನಯಂಗಳಂ, ಪ್ರತಿಭೆ ಮೇಣ್ ಜ್ಞಾನಸಾಧನಾ
ತೇಜೊ ವಿಶೇಷಂಗಳಂ ತೋರುತಿಳಿದಿಳಿದಿಳಿದು
ಪೊಕ್ಕನ್, ಮನೋಮಯದ ಮಾತೃಸತ್ತ್ವಂ ಪರಿವ
ಪೊರ್ಕುಳಿಂ ಭ್ರೂಣಕೆಂಬಂತೆವೋಲ್, ಪ್ರಾಣಮಯ

ಜಗಕೆ. ಕಣ್ಣೆನಗೆ ತತ್ತರಿಸಿತಾ ಶತಶತಶತಂ
ಸಹಸ್ರರೀತಿಯ ವರ್ಣ ಕಿರ್ಮಿರರತೆಗೆ. ಶುಕ್ಲ
ಮೇಣ್ ಕೃಷ್ಣ ಮೇಣ್ ನೀಲ, ಮೇಣ್ ರಕ್ತ, ಮೇಣ್ ಕಪಿಶ,
ಮೇಣ್ ಧೂಮ್ರ ಪಾಟಲ ಪಿಂಗಲಾದಿ ನಾನಾ
ಬೃಹತ್ತರಂಗಿತ ಸಮುದ್ರಾಂಗಿಯಾಗೆಸೆದುದಾ
ಓಜಶ್ಮರಧಿ ಸಾಗರಂ. ಮಧುರ, ವಾತ್ಸಲ್ಯ,
ಸಖ್ಯ, ಮೇಣ್ ದಾಸ್ಯ, ಮೇಣ್ ವೈರಾದಿ ಭಾವಗಳ್
ಮೆರೆದುವು ಮಹಾವೀರ್ಯ ಮಕರಂಗಳೋಲ್. ರಾಗ
ಮೇಣ್ ದ್ವೇಷ, ಕೋಪ ಮೇಣ್ ಕಾಮ ಮೇಣ್ ರೋಷ ಮೇಣ್
ಅಸೂಯಾದಿಗಳ್ ಮೆರೆದುವಲ್ಲಲ್ಲಿ ನಕ್ರಂಗಳೋಲ್.
ಮರ್ತ್ಯಜೀವನದ ತಾಟಸ್ಥ್ಯಮಂ ಕಡೆಕಡೆದು
ಶ್ರದ್ಧೆ ಸಂದೇಹಗಳನಿರದೆ ಹೊಡೆದೆಬ್ಬಿಸುವ,
ಮೇಣ್ ಜನತೆ ಜನತೆಯೊಳ್ ಪಕ್ಷ ಪಕ್ಷಂಗಳಂ
ಕೆರಳಿಸುವ ಶತ ಶತ ಮತಂಗಳುಂ ತಾಮಲ್ಲಿ
ರಾರಾಜಿಸಿದುವಗ್ನಿವರ್ಣದ ವೃಕಂಗಳೋಲ್,
ಜೋಲ್ವ ಜಿಹ್ವೆಯೊಳತಿ ಭಯಾನಕಂ! ಪೃಥ್ವಿಯೊಳ್
ಘೋರ ಯುದ್ಧಂಗಳಂ ಪೊತ್ತಿಸುವ ಛಲಂಗಳ್,
ಮಹತ್ತ್ವಾಶೆಗಳ್, ಯಶೋಲೋಭಗಳ್, ಕೃಪಣತಾ
ಭೂತಗಳ್, ಕೀರ್ತಿಶನಿಗಳ್, ಮಮತಾ ವಿಕಾರಗಳ್
ಮೆರೆದುವಲ್ಲಲ್ಲಿ ಪಶುವೀರ್ಯ ದೈತ್ಯರ್ಕಳೋಲ್.
ಮೇಣ್ ಕ್ಷಮಾ, ಮೇಣ್ ದಯಾ, ಮೇಣ್ ಮೈತ್ರಿ, ಮೇಣಹಿಂಸಾ
ದಿವ್ಯರೂಪಗಳಲ್ಲಿ ಚಂದ್ರರೋಚಿಯ ಚೆಲ್ಲಿ
ತಳತಳಿಸುತಿರ್ದುವಾಶೀರ್ವಾದ ಮುದ್ರೆಗಳವೋಲ್,
ಪಾಲ್‌ಸೋರ್ವ ಪಾಲ್‌ಮೆಯ್ಯ ಹರಾದ್ರಿಧೇನುಗಳವೋಲ್.
ಇಂತಿಂತು ತೋರುತಾ ಪ್ರಾಣಮಯ ಲೋಕದಿಂ,
ಗರ್ಭದಿಂದರ್ಭಕಂ ಯೋನಿಮುಖದಿಂದಿಳಿವವೋಲ್,
ಕರುಣೆಯಿಂದೆನಗಾಗಿ ನನ್ನ ಗುರುದೇವನಾ
ಬ್ರಹ್ಮಕವಿ ತಾನುಮವತರಿಸಿದನು ನನ್ನೊಡನೆ
ಸುಪರಿಚಿತದನ್ನಮಯದೈಂದ್ರಿಯ ಜಗತ್ತಲಕೆ!
ನೀಹಾರಿಕಾ ಲಕ್ಷಗಳ್, ನಕ್ಷತ್ರ ಕೋಟಿಗಳ್,
ಸೂರ್ಯ ಚಂದ್ರಾದಿ ವಂಕಿಮ ದೇಶಕಾಲದ

ಮನೋಜ್ಞವೀಧಿಯಿನಿಳಿದು ಕಂಡೆನೀ ಉರ್ವರೆಯ
ಶಾಶ್ವತ ಅಯೋಧ್ಯೆಯಂ:
"ಕಾಣ್ಬುದದೊ ನೋಡಲ್ಲಿ
ರಾಮಪಟ್ಟಾಭಿಷೇಕೋತ್ಸವದ ಮೂಲಮ್, ಆ
ಮಾನುಷ ಸ್ಥೂಲ ನಶ್ವರ ಕೃತಿಗೆ ತಾನಿದುವೆ
ನಿತ್ಯ ಶಾಶ್ವತ ದಿವ್ಯ ಮಾತೃಕೆ ಕಣಾ!" ಗುರು ತೋರೆ
ಕಂಡೆನಾಂ; ಕೈಮುಗಿದು ನಿಂದೆನಾಂ; ಧನ್ಯನಾಂ:
ಇಂಗಡಲ ನಡುವಣಿಂದೆಳ್ದುದೊಂದೆತ್ತರದ
ನೀಲಿಮಲೆ, ಶಿಖರದ ಕಿರೀಟದಿಂ ಮೀಂಟುತೆ
ಪಯೋದ ಪಥಮಂ. ರಾಜಿಸಿತು ಬಳಿಯೆ ತಳ್ತದಂ
ತೊಡೆಸೋಂಕಿ ಕುಳ್ತವೋಲೊಂದು ಕನಕಾಚಲಂ.
ರಜತಗಿರಿಯೊಂದೆಸೆದುದು ಸಮೀಪದೊಳೆ, ಸೇವೆಯಂ
ಸಲಿಸುವೋಲ್. ಮೇಣೆರ್ದ್ದುದೊಂದನತಿ ದೂರದೊಳ್
ಸಸ್ಯ ಸುಂದರ ಬೃಹದ್‌ಭೂಧರಂ, ಸ್ನೇಹದಿಂದಾ
ನೀಲಾದ್ರಿಭುಜದೆಡೆಗೆ ತನ್ನ ಗಿರಿಬಾಹುವಂ
ಚಾಚಿ. ಮತ್ತಿತರ ಶೈಲಗಳಿರ್ದುವವುಗಳಂ
ಸುತ್ತಿ, ತೆರೆತೆರೆವರಿವ ಸಾಗರದವೋಲೆನ್ನ
ಕಣ್ಣಲೆದು ಸೋಲ್ವನ್ನೆಗಂ. ದೃಷ್ಟಿಸೀಮೆಯಂ
ತುಂಬಿದುದು, ಯವನಿಕೆಯನೆಳೆದಂತೆ, ಗಂಧಮಯ
ಹೇಮಭಾಸುರ ಧೂಳಿ, ಸುರಕಂಠ ಸಂಗೀತ
ದಿವ್ಯ ಛಂದೋ ವಿಲಾಸಾಂದೋಲಿತಂ. ಮಹರ್ಷಿ
ಮುಖಂಗಳಂ ತಳೆದೇಳ್ ಕಡಲ್‌ಗಳುಂ ಕೈಯೆತ್ತಿ
ಅಭೀಷೇಕಮಂಗೈದುವಂಬುದ ಕುಂಭಧಾರೆಯಲಿ,
ಮೊಗೆಮೊಗೆದು ಮುನ್ನೀರ್ಗಳಂ! ಹಿಮಾಲಯ ವಿಂಧ್ಯ
ಸಹ್ಯ ಮೊದಲಹ ಮೇದಿನಿಯ ಗಿರಿಶ್ರೇಣಿಗಳ್
ತೊಯ್ದು, ತಣಿದುವು ದಂಡಕಾರಣ್ಯಗಳ್, ಮಲೆಯ
ನಾಡುಗಳ್ ಮೇಣ್ ಬಯಲ್‌ಸೀಮೆಗಳ್. ಗಂಗೆ ಮೇಣ್
ಯಮುನೆಯರ್, ಕೃಷ್ಣೆ ಕಾವೇರಿ ಮೇಣ್ ತುಂಗೆಯರ್,
ಪೃಥಿವಿಯ ನದ ನದೀ ಸಮೂಹಗಳ್ ಸಂಭವಿಸಿ
ಪರಿದುವಾ ಪರ್ವತ ಶಿರಂಗಳಿಂದಭಿಷೇಕ
ವಾರಿಪ್ರಭವ ಜಟಾ ಸ್ರೋತಂಗಳೋಲ್!

ರಸವಶಂ

ನೋಡುತಿರಲಾಂ, ಬಂದುದೊಯ್ಯೊಯ್ಯನೆಯೆ ಕಿವಿಗೆ,
ಬಹುದೂರದಿಂದೆನೆ, ಸಮುದ್ರ ಮಂದ್ರಮದೊಂದು
ರುಂದ್ರ ಜಯಗಾಥೆಯ ಮಹಾ ನಿನಾದಂ:
"ಕಂದ ಕೇಳ್!"
ಕರುಣೆಯಿಂದೊರೆದುದಿಂತಾ ಗುರುಕೃಪಾ ವಾಣಿ,
"ಮಾನವನ ಕಿವಿಯಾಲಿಸಲ್ಕರಿಯದೀ ಸೃಷ್ಟಿ
ಗಾಥೆಯಂ, ನಿತ್ಯ ರಾಮಾಯಣದ ರಾಮಂಗೆ
ನಿಚ್ಚಮುಂ ನಡೆವ ಪಟ್ಟೋತ್ಸವ ಸ್ತೋತ್ರಮಂ,
ಆಲಿಸದೊ! ಸ್ಥಾವರದಿ, ಜಂಗಮದಿ, ಜಡ ಜೀವ
ಚೇತನ ಚರಾಚರದೊಳಣು ರೇಣು ತೃಣ ಕಾಷ್ಠ
ಕೋಟಿ ಕೋಟಿಯ ಕಂಠದಿಂದೇಳುತಾನಂದ
ಗೋಷ್ಠಿಗಾನಂ!"
ಗುರುಕೃಪೆಯೊಳಾಲಿಸಿದೆನಾಂ
ಅವಾಙ್ಮನೋಗೋಚರವನಖಿಲ ಶಬ್ದಾಬ್ಧಿಯಂ,
ಸರ್ವ ಸಂಗೀತ ಯೋಗದ ಚರಮ ಸಿದ್ಧಿಯಂ,
ಶಿಲೆಗಳಲಿ ಜಲಗಳಲಿ ಲೋಹ ಲೋಹಗಳಲ್ಲಿ
ಖಗಗಳಲಿ ಮೃಗಗಳಲಿ ನಾನಾ ನರಸ್ವರಕಲಾ
ಸಕಲ ವಿನ್ಯಾಸದಲಿ ಮರ್ತ್ಯೇಂದ್ರಿಯಂಗಳಿಗೆ
ಪ್ರತ್ಯಕ್ಷಮಾಗುತಿರ್ಪೋಂಕಾರಮಂ! ಘನಂ
ದ್ರವಮಾಗುವೋಲುರಿಗೆ ಕಪ್ಪುರಂ ಕರಗುವೋಲ್
ಕರಗಿದನು ಗುರು, ತಾನುಮೋಂಕಾರಲಯನಾಗಿ
ನನ್ನೀ ಕೃತಿಯ ಮಹಾಛಂದಸ್ ಶ್ರೀ ಲಯಗತಿಯವೋಲ್!
ಕವಿ ವಿಭೂತಿಗೆ ನಮೋ! ಕೃತಿವಿಭೂತಿಗೆ ನಮೋ!
ದರ್ಶನಧ್ವನಿರಸಾಮೃತ ಪಾನದಾನಂದದಿಂ
ಲೋಕಶೋಕವನಳಿಸಿ ಭುವನತ್ರಯಂಗಳಂ
ತಣಿಪ ನಂದನ ತಪೋದೀಕ್ಷೆಯಂ ಕೊಂಡೆಸಪ
ರಸಋಷಿಗೆ ಯೋಗಮತಿ ಸಹೃದಯ ವಿಭೂತಿಗೆ ನಮೋ!
ಯುಗ ಯುಗದಿ ಸಂಭವಿಪೆನೆಂಬ ಭಗವದ್ದಿವ್ಯಮಾ
ವಚನಮೇಂ ನರರೂಪಮಾತ್ರಕ್ಕೆ ಮುಡಿಪೆ, ಪೇಳ್?
ನರಸಿಂಹ ಮತ್ಸ್ಯ ಕೂರ್ಮಾದಿ ಚರಮಾ ಲೀಲೆಗೇಂ

ಪೊರತೆ ಈ ಕೃತಿರೂಪಮಾ ಭಗವದಾವಿರ್ಭಾವ
ಬಹುರೂಪ ಸೂತ್ರತೆಗೆ? ರಾಮಂಗೆ ಮೊದಲಲ್ತೆ
ರಾಮಾಯಣಂ? ಮುನ್ನಲ್ತೆ, ಪಿರಿದಲ್ತೆ, ಮೆಯ್ಯಲ್ತೆ,
ಮನೆಯಲ್ತೆ ರಾಮಾಯಣಂ? ರಾಮನಾಮದ ಮಹಿಮೆ
ರಾಮಂಗೆ ಮಿಗಿಲೆಂಬವೋಲ್ ರಾಮಾವತಾರಕಿಂ
ಗುರುತರಂ ತಾನ್ಯೆಸೆ ರಾಮಾಯಣಾವತಾರಂ!
ಓಂ ನಮೋ, ರಾಮಾವತಾರಕಿರ್ಮಡಿಯೆನಲ್,
ಮೂಲವಿಗ್ರಹಕೆತ್ತಿದುತ್ಸವದ ಪಡಿಯೆನಲ್,
ನನ್ನೊಳೀ ರಾಮಾಯಣಾವತಾರವನೆತ್ತಿ ಮೇಣ್
ಸರ್ವಭಾಷಾಮಯೀ ಭಗವತಿಯ ಪೂವಡಿಯ
ಕನ್ನಡದ ಸಿರಿಗುಡಿಯ ನುಡಿಯ ಕಣ್ಪಡಿಮೆಯೊಳ್
ಕಡೆದು ಮೂಡಿಹ ನಿತ್ಯರಾಮಂಗೆ, ಓಂ ನಮೋ,
ಓಂ ನಮೋ, ಓಂ ನಮಃ! ಓಂ ಶಾಂತಿಶ್ಶಾಂತಿಶ್ಶಾಂತಿಃ!



# ಅರಿಕೆ

ಚಿತ್ರಾಂಗದೆಯ ಕಥೆ ವ್ಯಾಸಭಾರತದ ಮಹಾಸಾಗರದಲ್ಲಿ ಬಿಂದು ಮಾತ್ರವಾಗಿ ಕಾಣಿಸಿಕೊಂಡಿದೆ. 'ಕನ್ನಡ ಜೈಮಿನಿಭಾರತ'ದಲ್ಲಿ ಅರ್ಜುನ ಬಭ್ರುವಾಹನರ ಕಾಳಗವನ್ನು ವರ್ಣಿಸುವಾಗ ಲಕ್ಷ್ಮೀಶನು ಪ್ರಾಸಂಗಿಕವಾಗಿ ಆಕೆಯ ಪಾತ್ರವನ್ನು ನಮ್ಮ ಮುಂದೆ ತರುತ್ತಾನೆ. ಅಲ್ಲಿ ನಮ್ಮ ಮುಂದೆ ಬರುವವಳು ಬಭ್ರುವಾಹನ ತಾಯಿ. ಅಲ್ಲಿಯ ಆಕೆಯ ಚಿತ್ರವನ್ನು 'ಉತ್ತರ ಚಿತ್ರಾಂಗದಾ' ಎಂದು ಕರೆಯಬಹುದು. ವಂಗ ಕವಿ ರವೀಂದ್ರನಾಥ ಠಾಕೂರರ ಇಂಗ್ಲಿಷಿಗೆ ಭಾಷಾಂತರವಾಗಿರಯವ 'ಚಿತ್ರಾ' ನಾಟಕದಲ್ಲಿ ಚಿತ್ರಾಂಗದೆಯ ಪೂರ್ವಜೀವನವನ್ನು ಚಿತ್ರಿಸಿದ್ದಾರೆ. ಅಲ್ಲಿ ಆಕೆಯನ್ನು ಶೃಂಗಾರದ ಪರಿಪಪೂರ್ಣತೆಯಲ್ಲಿ ಚಿರಸ್ಥಾಯಿಯನ್ನಾಗಿ ಮಾಡಿದ್ದಾರೆ. ಅವರ ಚಿತ್ರವನ್ನು 'ಪೂರ್ವ ಚಿತ್ರಾಂಗದಾ' ಎಂದು ಕರೆಯಬಹುದು. ಈ ಕನ್ನಡ ಕಾವ್ಯದಲ್ಲಿ ಸೃಷ್ಟಿಯಾಗಿರುವ ಚಿತ್ರಾಂಗದೆಯ ಮೈಯಲ್ಲಿ ಲಕ್ಷ್ಮೀಶ ಮತ್ತು ಠಾಕೂರರ ಚಿತ್ರಾಂಗದೆಯರ ನೆತ್ತರು ಕೊಂಚಮಟ್ಟಿಗೆ ಹರಿಯುತ್ತಿರುವುದಾದರೂ ವಂಶಪಾರಂಪರ್ಯವೊಂದು ವಿನಾ ಮತ್ತೆ ಬಹು ವಿಷಯಗಳಲ್ಲಿ ಈಕೆ ಬೇರೆಯಾಗಿದ್ದಾಳೆ. ಇಲ್ಲಿ ಲಕ್ಷ್ಮೀಶನ ಕೃತಿಯಲ್ಲಿರುವಂತೆ ಅತಿಮಾನುಷ ಪೌರಾಣಿಕತೆಯಿಂದ ಪಾರಾಗುವ ಅನುಕೂಲವಿಲ್ಲ; ಠಾಕೂರರ ಕೃತಿಯಲ್ಲಿರುವಂತೆ ತಾರುಣ್ಯದ ಸಂಯಮರಹಿತ ವ್ರತಭ್ರಷ್ಟತೆಗೆ ಪ್ರಾಯಶ್ಚಿತ್ತ ವಿಹೀನವಾದ ಭೋಗಕಿರೀಟವನ್ನಿಟ್ಟು ಪ್ರೇಮದ ಮಂಗಳಾರತಿಯೆತ್ತುವುದಕ್ಕೂ ಸಾಧ್ಯವಾಗಿಲ್ಲ.

'ಪೂರ್ವ ಚಿತ್ರಾಂಗದೆ'ಯನ್ನು ಚಿತ್ರಿಸುವ ಕೆಲವು ಸನ್ನಿವೇಶಗಳಿಗೆ ಈ ಕಾವ್ಯ ಠಾಕೂರರಿಗೆ ಋಣಿಯಾಗಿದೆ. ಮದನನು ವರವನ್ನೀಯುವುದರಲ್ಲಿಯೂ, ಆತನಿಗೂ ಚಿತ್ರಾಂಗದೆಗೂ ನಡೆಯುವ ಸಂಭಾಷಣೆಯಲ್ಲಿಯೂ ಓದುಗರು ಅದನ್ನು ಚೆನ್ನಾಗಿ ಗುರುತಿಸಬಹುದು. 'ಉತ್ತರ ಚಿತ್ರಾಂಗದೆ'ಯ ಚಿತ್ರದಲ್ಲಿ ಲಕ್ಷ್ಮೀಶನ ಋಣ ಅಷ್ಟು ಮೇಲೆದ್ದು ಕಾಣದಿದ್ದರೂ ಮೇಧಾವಿಯಾದ ಓದುಗನಿಂದ ಅದು ತಪ್ಪಿಸಿಕೊಳ್ಳಲಾರದೆಂದು ತೋರುತ್ತದೆ. ಆದರೂ ಈ ಚಿತ್ರಾಂಗದೆ ಆ ಚಿತ್ರಗಳೆರಡನ್ನೂ ಕೂಡಿಸಿ ತಯಾರಾದವಳಲ್ಲ, ಅವುಗಳಿಂದ ಮೂಡಿ ಸೃಷ್ಟಿಯಾಗಿದ್ದಾಳೆ. ಗಣಿತ ಕರ್ಮವಾಗಿಲ್ಲ; ಕಲಾಕೃತಿಯಾಗಿದ್ದಾಳೆ.

ಈ ದೀರ್ಘಕಾವ್ಯವನ್ನು ಸರಳರಗಳೆಯಲ್ಲಿ* ಬರೆದಿದ್ದೇನೆ. ಕೈಲಾದಮಟ್ಟಿಗೆ ರಗಳೆಯಾಗದಂತೆ ನೋಡಿಕೊಳ್ಳಲು ಪ್ರಯತ್ನಿಸಿದ್ದೇನೆ. ಪ್ರಯತ್ನಿಸಿದ್ದೇನೆ ಎಂಬುದರ ಸಂಪುರ್ಣಾರ್ಥ

---

*"ಶ್ರೀ ರಾಮಾಯಣ ದರ್ಶನಂ" ಎಂಬ ಮಹಾಕಾವ್ಯದ ರಚನೆಯಲ್ಲಿ ಸಿದ್ಧವಾದ ಮಹಾಛಂದಸ್ಸಿಗೆ ಹೊಂದಿಕೊಳ್ಳುವಂತೆ ಈ ಮುದ್ರಣದಲ್ಲಿ ಅಲ್ಲಲ್ಲಿ ಹಲವು ಬದಲಾವಣೆಗಳಾಗಿವೆ.

ತಿಳಿದವರಿಗೆ ತಿಳಿಯುತ್ತದೆ.

ರಾಗರಹಿತವಾದ ಧೀರಶೈಲಿಯಿಂದ ಓದುವುದಕ್ಕೆ ಸಾಧ್ಯವಾಗುವಂತೆಯೆ ರಾಗಸಹಿತವಾಗಿ ಭಾರತವೋದಿದಂತೆ ಓದಲೂ ಸಾಧ್ಯ ಎಂಬುದನ್ನು ಗಮಕಿ ವರ್ಯರಲ್ಲೊಬ್ಬರಾಗಿರುವ ಶ್ರೀಮಾನ್ ಕೆ.ಕೃಷ್ಣರಾಯರು ಮನೋಹರವಾಗಿ ನಿದರ್ಶಿಸಿದ್ದಾರೆ ಎಂದು ಹೇಳಲು ಹೆಮ್ಮೆಯಾಗುತ್ತದೆ.

ಕಾವ್ಯದಲ್ಲಿ ಅಲ್ಲಲ್ಲಿ ಬರುವ ಮಿಶ್ರೋಪಮೆ ಮಹೋಪಮೆಗಳು ಪಾಶ್ಚಾತ್ಯ ಸಾಹಿತ್ಯಗಳ ಪುರಾಣಕಾವ್ಯಗಳನ್ನು ಓದಿರುವವರಿಗೆ ಹೊಸದಲ್ಲವಾದರೂ ಕನ್ನಡದಲ್ಲಿ ಇದೇ ಮೊತ್ತ ಮೊದಲನೆಯ ಸಾಹಸವೆಂದು ನಂಬುತ್ತೇನೆ. ಆದ್ದರಿಂದ ಜನಮನದ ದೃಷ್ಟಿಯಲ್ಲಿ ಈ ಕಾವ್ಯಕ್ಕೆ ಯಾವ ಸ್ಥಾನಮಾನಗಳು ಲಭಿಸುತ್ತವೆ ಎಂಬ ವಿಚಾರದಲ್ಲಿ ಕಾವ್ಯಕರ್ತೃವಿನ ಮನಸ್ಸು ತೂಗುಯ್ಯಾಲೆಯಾಗಿದೆ. ಮಹತ್ತಾಗಿ ಸೋಲುವುದೂ ಗೆಲವಿನ ಮಹತ್ತಿಗಿಂತ ಕೀಳಲ್ಲವಷ್ಟೆ!

**ಮೈಸೂರು** **ಕುವೆಂಪು**

೬-೧೦-೧೯೩೬

# ಚಿತ್ರಾಂಗದಾ

## ಮೊದಲನೆಯ ಪರ್ವಂ

ಬ್ರಹ್ಮಮಾನಸ ಮಹದ್‌ಗರ್ಭಸಂಭವೆ, ವಿರಾಟ್
ಪ್ರಭವೆ, ಭವ್ಯಾನಂದ ವಿಭವೆ, ಶಾರದೆ, ವರದೆ,
ಭಾವಚಿಂತಾಖನಿಯೆ, ಶಿಖಿವಾಹನೆಯೆ, ವಾಣಿ,
ಭುವನ ಮೋಹನ ಮಧುರ ದಿವ್ಯ ವೀಣಾಪಾಣಿ,
ವಾಗ್ದೇವಿ, ಸರಸ ಕವಿತಾ ಕಲಾ ಕಲ್ಯಾಣಿ,
ತುಂಬುವೆನು ನಿನ್ನಮಲ ಪಾದಪಂಕೇಜದಲಿ
ಮುಂಗುರುಳ್ದುಂಬಿಗಳನೆಲೆ ತಾಯೆ, ಕೃಪೆಗೈದು
ಕಂದನಂ ಕಾರುಣ್ಯದಿಂ ಕಂಡು, ಜಡಮತಿಗೆ
ದಿವ್ಯ ವೈದ್ಯುತ ಚೇತನವನಿತ್ತು ನಲಿದೊಲಿದು
ನರ್ತನಂಗೈಯೆನ್ನ ಜಿಹ್ವೆಯಲಿ. ನಿನ್ನಿಂದೆ,
ಹೇ ಕಾವ್ಯಕಾಮಿನಿಯೆ, ಭುವನ ಸ್ವರ ಮೇಲನದಿ
ನಿಯಮ ಸಂಯಮ ಪೂರ್ಣ ಮಾಧುರ್ಯವುಕ್ಕುತಿದೆ
ಸ್ವಚ್ಛಂದಮಾನಂದ ಶೀಲಂ! ಆ ಸ್ಫೂರ್ತಿಯಂ
ದಯಪಾಲಿಸೆನಗೆ ನಾನುಲಿಯಲಿಹ ಗಾನದಲಿ
ಸ್ವಾತಂತ್ರ್ಯ ಮಾಧುರ್ಯ ಸಂಯಮಂಗಳ್ ಪೊಣ್ಮೆ,
ನನ್ನ ಕನ್ನಡನಾಡಿನೆರ್ದೆವೂವರಳ್ವವೋಲ್.
ಓ ಕಲ್ಪನಾ ಸುಂದರಿಯೆ, ನಿನ್ನ ಮಹಿಮೆಯೊಳೆ
ವ್ಯಾಧನಾದಂ ಪ್ರಥಮಕವಿ! ಪಸುಳೆ ನಾಂ, ತಾಯೆ,
ನೀನೊರ್ಮೆ ಚುಂಬಿಸಲ್ಕೆನ್ನೀ ತೊದಲ್ವ ತುಟಿ
ಗಾನಗೈಯದೆ ಪೇಳ್ ಬೃಹತ್ ಕಾವ್ಯ ಸಂಗೀತೆಯಂ?
ಮಲಿನಮುಕುರಂ ಮಹಾಸೂರ್ಯನಂ ಕನ್ನಡಿಸಿ
ತಿರೆಗೆ ಕಾಂತಿಯನೀಯಲೆಳಸಿ ಹಿಗ್ಗುವ ತೆರದಿ.
ಪಸುಳೆ ತಾನಾ ದೂರದರಿಲಂ ಪಿಡಿದು ತನ್ನ

ಕೈದೀವಿಗೆಯ ರಚಿಸಲಾಟಿಪೋಲ್, ಉನ್ಮತ್ತ
ಸಾಹಸಿ ದಿಗಂತಮಂ ಬೆಂಬತ್ತಿ ತುಡುಕುವೋಲ್,
ವಾಲ್ಮೀಕಿ ವ್ಯಾಸಾದಿ ಪಂಪ ರನ್ನರ ದಿವ್ಯ
ಕೀರ್ತಿಕಾಮಿನಿಯಡಿಗಳಮಲತರ ಧೂಳಿಯಂ
ಶಿರದೊಳಾನುವ ಪುಣ್ಯಮಂ ಬಯಸಿ, ಹೇ ದೇವಿ,
ನಿನ್ನನೆದೆತುಂಬಿ ಪ್ರಾರ್ಥಿಸುವೆ: ಕೃಪೆದೋರ್ದೆನಗೆ
ನಿನ್ನ ವೀಣಾವಾಣಿಯಂ ನೀಡು, ಓ ತಾಯೆ!
    ಏಳು, ವೀಣೆಯೆ, ಏಳು! ಹೇಳು ಮುಂದಿನ ಕಥೆಯ,
ಹೇ ಅಮೃತ ಭಾಷಿಣಿಯೆ! ಸಂಧ್ಯಾವಿಯತ್ತಳದೊಳ್
ಆರಕ್ತ ಜೀಮೂತ ಪರಿವಾರವೇಷ್ಟಿತಂ
ದಿವಸಮಣಿ ಪಶ್ಚಿಮಾಂಬುಧಿಗಿಳಿಯೆ, ಕತ್ತಲೆಯ
ಪಾಳೆಯಂ ಬೀಡುಬಿಡೆ ಧಾತ್ರಿಯಲಿ, ಮೈದೋರೆ
ತಾರೆಗಳ್ ನಿಶೆಯ ವಸನದ ಕಾಂತಿಕುಸುಮಗಳ್,
ಮೃಗಯಾವಿನೋದದಿಂ ಬಲು ಬಳಲಿದಾ ತರುಣಿ,
ಚಿತ್ರಾಂಗಿ, ಬನದ ದೇಗುಲಕೊಯ್ಯನೈತಂದು,
ಬಳಿಯ ಕೊಳದಲಿ ಮಿಂದು, ಹಣ್ಣು ಹಂಪಲು ತಿಂದು,
ಮಲಗಿದಳ್ ಕಠಿನ ಶಯ್ಯೆಯ ಮೇಲೆ ಕೋಮಲೆ
ಶಿವಾಲಯದುಪಲತಲದಿ. ಹೇ ಅಮೃತಭಾಷಿಣೆಯೆ,
ಹೇಳು ಮುಂದಿನ ಕಥೆಯ! ಏಳು, ವೀಣೆಯೆ, ಏಳು!
    ನಿದ್ರಾಂಗನೆಯ ಪರಮಸಖಿ, ಸ್ವಪ್ನಸುಂದರಿ,
ವಿಭಾವರಿಯ ನಕ್ಷತ್ರ ಖಚಿತಾಂಬರವನುಟ್ಟು
ಕಾಮಧನು ಸೂತ್ರದಾ ಕಟಿಬಂಧನವ ತೊಟ್ಟು
ಭೂಯಾತ್ರೆ ಗೈಯುತಿರೆ—(ಮೋಹನ ವಸಂತದೊಳ್
ಪೂವಿಂದೆ ಪೂವಿಂಗೆ ಪರಿಮಳವನರಸುತ್ತೆ
ಮಧುಸಮಿರಣನಲೆಯುವಂತೆ)—ಕಂಡಳು ಬನದ
ಗುಡಿಯ ಕಲ್ಲಿನ ನೆಲದೊಳೀಶ್ವರಾರ್ಪಿತ ಕುಸುಮ
ಸನ್ನಿಭಳ್ ಚಿತ್ರಾಂಗಿಯಂ. ಮೆಚ್ಚಿ ನಿಂದಳು ದೇವಿ,
ಸ್ವಪ್ನ ಸಾಮ್ರಾಜ್ಯದಾ ಚಕ್ರವರ್ತಿನಿಯಾಕೆ,
ಸ್ವಪ್ನ ಮಧು ಮಾಯೆಯಂ ಬೀಸಿ ರಮಣಿಯ ಮನಕೆ.
ಯಾಮಿನೀಪ್ರಿಯಸಖಿಯೆ, ಹೇ ಸ್ವಪ್ನಕಾಮಿನಿಯೆ,
ಲಲನೆಯಾತ್ಮದೊಳಾವ ಕಮನೀಯ ನಾಕಮಂ

ಕಟ್ಟುತಿಹೆ ತೋರ್:
ನಿಬಿಡ ನೀರವ ಕಾನನಾಂತರಂ
ನಡುವಗಲ ಮಾರ್ತಾಂಡನುರವಣೆಯನಡಗಿಸುತೆ
ತಂಪು ಬನಗತ್ತಲೆಯ ಭೀಷ್ಮ ಸಮ್ಮೋಹನದಿ
ಮೆರೆದತ್ತು ಚಿತ್ರಗತವಾದಂತೆವೋಲ್ ನಿಶ್ಚಲಂ.
ಬಲೋನ್ಮತ್ತ ದೈತ್ಯ ಬಾಹುಗಳಂತೆ, ಸುತ್ತಲುಂ
ಭೀಮ ಭೀಷಣ ಕುಟಿಲ ಜಟಿಲ ವಿನ್ಯಾಸದಿಂ
ಶಾಖಾ ಮಹಾ ಶಾಖೆಗಳ ಬೀಸಿ, ಸ್ವಚ್ಛಂದದಿಂ
ಬೆಳೆದಿರ್ದುವಲ್ಲಿ ಭೂಜೇಶ ಕುಲ ಕೀರ್ತಿಗಳ್
ಲಕ್ಷೋಪಲಕ್ಷವಾಗಿ. ಬಳ್ಳಿದಿಂಡುಗಳಲ್ಲಿ
ನಿಮಿರಿದುವು ಜೋಲುತಿಹ ಹೆಬ್ಬಾವುಗಳ ಹೋಲಿ
ದೀರ್ಘ ವಕ್ರಾಕಾರದಲಿ. ಹುದಗಿ ಅಲ್ಲಲ್ಲಿ
ಛಾಯಾ ವಿರೂಪಗಳ್ ಹುದುಗಿದುವು, ದಿನಮಣಿಯ
ಬೆದರಿಕೆಗೆ ಕಾನನವ ಮರೆಗೊಂಡ ಕತ್ತಲೆಯ
ಕುಲದಂತೆವೋಲ್. ಕರದಿ ಬಿಲ್ಲಂ ಪಿಡಿದು, ಮೇಣುಟ್ಟು
ಮಲ್ಲಗಚ್ಚೆಯ ಪೀತವಸನಮಂ, ತಿರುಗುತಿರೆ
ಚಿತ್ರಾಂಗಿ, ಕಾನನದ ರಾಣಿ ತಾನೆಂಬವೋಲ್,
ಬನಗತ್ತಲೆಯ ಕರ್ಮುಗಿಲ್ಗೆ ಕಣ್ಮಿಂಚೆಸೆದು
ಚಿಮ್ಮಿದುದು ಜಿಂಕೆಮರಿಯೊಂದು ಹೊದರೊಡಲಿಂದೆ,
ಕರಿಮುಗಿಲ್ಗಬ್ಬದಿಂದೊಗೆವ ಮರಿಮಿಂಚೆನಲ್,
ತಿರಿಕವಣೆಯಿಂ ಪಳಂಚುವ ರತ್ನಶಿಲೆಯಂತೆ.
ತೆಕ್ಕನೆಯೆ ಬೆಂಬತ್ತಿದಳ್ ಕನ್ಯೆ: ದಿಟ್ಟಿಯನೆ
ಮಿಕ್ಕು ಮೀರುವ ಜವದಿ ಮುಟ್ಟೆ ಮುಟ್ಟದೆ ನೆಲಂ
ಮೆಟ್ಟಿ ಮುಂಚುವ ಹರಿಣಶಿಶುವ ಸೌಂದರ್ಯಕ್ಕೆ
ಬಗೆಸೋತು, ಎದೆಯೋತು, ಮುದ್ದಿನಾ ಮುದ್ದೆಯಂ
ಒಂದಿನಿತು ನೋಯಿಸದೆ ಹಿಡಿವೆನೆಂಬಾತುರದಿ
ಕಲ್ಮುಳ್ಳು ಹಳ್ಳಕೊಳ್ಳವ ಹಳುವನೊಂದುಮಂ
ಲೆಕ್ಕಿಸದೆ, ತೆಕ್ಕನೆಯೆ ಬೆಂಬತ್ತಿದಳ್ ಕನ್ಯೆ:
ಚೈತ್ರಪ್ರಭಾತದಲಿ ಪೂರ್ವದಿಕ್ತಟದಲ್ಲಿ
ಉದಯನದಿ ಬೆಳ್ಪೊನಲ್ ಪ್ರವಹಿಸೆ ಜಗಂಗಳಿಗೆ
ಕದಿರ ಚೀರ್ಕೊಳವಿಯಲಿ ಹೊನ್ನೀರನೆರಚುತ್ತೆ,

ಮಲೆಯ ಹೂದೋಂಟದಲಿ ತಂಬೆಲರ ಶೀಟಕ್ಕೆ
ತಲೆದೂಗಿ ನಲಿದು ತೆರೆತೆರೆಯಾಗಿ ನಗೆಬೀರಿ
ನೆರೆದಿರಲ್ ಬಣ್ಣ ಬಣ್ಣದ ಕುಸುಮ ಪರಿಷತ್ತು,
ರೆಕ್ಕೆ ಬಂದಿಹ ಹೂವಿನಂತೆ ಬಣ್ಣದ ಚಿಟ್ಟೆ
ಪುಷ್ಪದಿಂ ಪುಷ್ಪಕ್ಕೆ ಹಾರಿ ಬಂಡನು ಹೀರಿ
ಕಂಗೊಳಿಸುತಿರೆ, ಕಂಡು ಬಾಲೆಯೊರ್ವಳ್ ಸೋತು
ತುಡುಕಲದನೆಳಸುವಳ್: ಸುಂದರ ಪತಂಗವದು
ರಾಮನಂ ಮೋಹಿಸಿದ ಮಾರೀಚನಂದದಲಿ
ಸಿಲುಕಿದಂತೊಮ್ಮೆ ಸಿಲುಕದ ತೆರದಿ ಚಿಮ್ಮುತ್ತೆ
ಪೀಡಿಸುತೆ ತುದಿಗೆ ಮಂಗಳಮಾಯವಾದಪುದು.
ಬಯಕೆ ಕೈಗೂಡದಾ ಬಾಲೆ ಹನಿಗಣ್ಣಾಗಿ
ನಿಡುಸುಯ್ದು ನಿಲ್ಲುವಳ್, ಕಂಬನಿಯೊಳಿನ್ನೊಂದು
ಹೊಂಗನಸು ಕಾಂಬಳೆಂಬಂತೆ.
                    ಬೆಂಬತ್ತಿದಳ್
ಚಿತ್ರಾಂಗಿ ತಾನಂತೆವೋಲ್ ಹೊಮ್ಮಿಗವರಿಯ ಹಿಂದೆ.
ಕಂದರಂಗಳನಿಳಿಯುತದ್ರಿಶಿಖರವನೇರಿ,
ನೆಗೆದು ಹಳ್ಳವ ದಾಂಟಿ, ಕೊಳ್ಳಕೊಳ್ಳವ ಧುಮುಕಿ,
ಮುಳ್ಳುಹೊದರೊಳು ನುಗ್ಗಿ, ಮೈ ಬಟ್ಟೆ ಗೀರುತ್ತೆ,
ದಟ್ಟ ಹಳುವಂ ನುಸಿದು, ಬೆದ್ದ ಮೆಳೆಯೊಳು ಜುಣುಗಿ,
ಬಯಲ ಬೆಳೆದಿರುವೊಣಗು ಹುಲ್ಲಿನಲಿ ಕಿಬ್ಬಿಯಲಿ
ಕೆಸರಿನಲಿ ಹಾದು ಹಾದೇದುತ್ತೆ, ಚಲದಿಂದೆ
ಧಾವಿಸಿದಳಂಗನೆ, ಮಿಗದ ಹೊಲಬನೆ ಹಿಡಿದು,
ತೊಳಲಿ ಬಳಲಿ. ಬೆಮರಿದಳ್ ಬೇಂಟೆಯಾಯಾಸದಿಂ
ಚಿತ್ತದುದ್ವೇಗದಿಂದಾ ಪೃಥಿವೀಶನಂದನೆ
ಕನಸಿನೊಳೆ ಕುದಿದು ಕಾಯ್ದು. ಎನಿತು ಬೆನ್ನಟ್ಟಲೇಂ?
ಎನಿತು ಧಾವಿಸಲೇನು? ವ್ಯರ್ಥಮಾದುದು ತುದಿಗೆ,
ಯುಕ್ತಿಯಿಂ ಬ್ರಹ್ಮಮಂ ಸಾಧಿಸೆ ಪ್ರಯತ್ನಿಸುವ
ತರ್ಕದ ಬಯಕೆಯಂತೆ! ರಮಣಿ ನಿಂತಳ್ ಸೋಲ್ತು:
ಸುಯ್ಲಿನಿಂದಾಕೆಯಾ ತುಂಬೆದೆಗಳೇಳುತಿರೆ
ಬೀಳುತಿರೆ, ನೋಡಿದಳ್, ದೂರ ದಿಟ್ಟಿಯನಟ್ಟಿ:
ಮಿಂಚುತಿರ್ದುದು ಜಿಂಕೆಮರಿ ಗಿರಿಯ ಕಂದರದ

ಸುಂದರಾಭೋಗದಲಿ, ಹಸರು ಹಿನ್ನೆಲೆಯಲ್ಲಿ
ಹೊನ್ನ ಹನಿಯಂತೆ, ಪಾರ್ಥಿವಕುಲಾಂಗನೆಯಲ್ತೆ?
ರೋಷದಿ ಹತಾಶೆಯಿಂ ಮೂಡಿದಾಟೋಪದಿಂ,
ಕೋಪದಿಂ, ಬತ್ತಳಿಕೆಯಿಂ ಸೆಳೆದು ಬಾಣಮಂ
ಪೂಡಿದಳ್ ತಿರುವಿಂಗೆ, ಕೊಲ್ವೆಸಾಂ ಕೊಲ್ವೆನೆಂದು.
ಗುರಿನೋಡಿದುದೆ ತಡಂ ಬೆಚ್ಚಿಬಿದ್ದಳು ಕನ್ಯೆ
ಅದ್ಭುತ ಪವಾಡಮಂ ಸಂದರ್ಶಿಸಿದ ವೀರ
ವಿಜ್ಞಾನಿಯೊಲ್ ಬೆಪ್ಪುಬೆರಗಾಗಿ!

ಮತ್ತಾವ
ಮಾಯೆಯಂ ಮಥಿಸಿದೌ ನಿದ್ರಾಸಮುದ್ರದಲಿ,
ಓ ಸ್ವಪ್ನ ಸುಂದರಿಯೆ? ಸೃಷ್ಟಿಸಲ್ ತೊಡಗಿದರೆ
ನಿನ್ನ ಮಾಯಾಕುಂಚಕಿದಿರೆಲ್ಲಿ? ಎಣೆಯೆಲ್ಲಿ?
ದೇಗುಲದ ಕಲ್ನೆಲದಿ ಮಲಗಿಹ ತಳೋದರಿ
ಅದೇಕಿಂತು ಕಂಪಿಪಳ್? ಕಾಣುತಿಹಳೇನಾಕೆ? ತೋರ್.

ಹೊಮ್ಮಿಗದ ಮರಿಯೆಲ್ಲಿ? ಗಿರಿಗಹ್ವರಗಳೆಲ್ಲಿ?
ಹಳುವೆತ್ತ? ಹೊದರೆತ್ತ? ಕಂಗೊಳಿಸುತಿದೆ ಮುಂದೆ
ನಾಕ ವೈಕುಂಠ ಕೈಲಾಸ ಲೋಕಂಗಳನೆ
ತಲೆಮೆಟ್ಟಿ ಗಹಗಹಿಸಿ ನಗುವೊಂದು ಚಾರು ದೃಶ್ಯಂ:
ಮೇಘಾದ್ರಿ ಮುದ್ರಿತ ಸುನೀಲ ಜಲ ಕಲ್ಲೋಲ
ಸಮ್ಮಥನ ಸಂಜಾತ ಮೌಕ್ತಿಕಾಫೇನಮಯ
ತಾಂಡವ ತರಂಗಾಟ್ಟಹಾಸ ಸಂಭ್ರಮ ಮತ್ತ
ಕಾಸಾರಮೆಸೆದತ್ತನಂತ ವಿಸ್ತಾರ ಭವ್ಯಂ!
ವ್ಯೋಮ ದರ್ಪಣವೊಡೆದು ಮುರಿವೊಂದು ತಿರೆಗಿಳಿಯುತೇಂ
ದ್ರವಮಾಯ್ತೊ? ನೆಲವೆಣ್ಣಿನೊಳ್ಳಗೆಯೆ ನೀರಾಯ್ತೊ?
ಸಾಗರವೆ ಸಂಕ್ಷಿಪ್ತ ವೇಷದಲಿ ಮೆರೆದತ್ತೊ?
ಎನೆ ರಾಜಿಪಾ ಸ್ಫಟಿಕ ಸಲಿಲ ವಿಸ್ತೀರ್ಣದೊಳ್,
ಜಲದೇವಿ ವಕ್ಷದೊಳೆಸೆವ ಪಸುರ್ಮಣಿಯಂತೆ,
ನೀಲ ಮಧ್ಯದಿ ಕೆತ್ತಿದೊಂದು ಪಚ್ಚೆಯ ತೆರದಿ
ನಗೆ ಮುಗುಳ್ಗಳಾಲಿಂಗಿಸಿಹ ಹೃದಯವನು ಹೋಲಿ
ದ್ವೀಪವೊಂದವಲೋಕಕಭಿರಾಮತರಮಾಗಿ
ತೇಲಿರ್ದುದುದ್ಯಾನ ನೌಕೆಯೋಲ್. ಸುತ್ತಲುಂ

ಆ ದ್ವೀಪ ನಾವೆಯಂ ಬಳಸಿ ಮೆರೆದುವು ಕಣ್ಗೆ
ಪೇರೊಡಲ ಪೇರೆಸಳ ಹೊಂದಾವರೆಗಳೋಳಿ
ಸೇವಿಸುವ ಪರಿವಾರದಂತೆ. ಕಲಹಂಸಾಳಿ,
ಕೀಲಾಲ ಕ್ರೀಡೆಯಾಸಕ್ತಿಯಿಂ, ಶರದಭ್ರ
ರಂಗದಿಂದಿಳಿತಂದು ಭುವನ ಜೀವನ ಸುಖಕೆ
ಮನಸೋತ ಶ್ವೇತ ಜೀಮೂತ ಶಕಲಗಳೊ ಎನೆ
ಹೋಲಿ, ರಂಜಿಸಿದುವಲ್ಲಲ್ಲಿ ತೇಲಿ, ದ್ವೀಪವೋ
ತೇಲುತಿಹ ನಂದನೋದ್ಯಾನವೋ ಎನಲಲ್ಲಿ
ಕೋಟಿ ವರ್ಣಂಗಳಿಂ ಬಹು ಪರಿಮಳಂಗಳಿಂ
ಇಂದ್ರಚಾಪಂಗಳನೆ ಬಿತ್ತಿ ಬೆಳೆದಗೆಯಂತೆ
ರಮಣೀಯಮಾದತ್ತು ಪುಷ್ಪಗಳ ಪರಿಷತ್ತು
ತಂಗಾಳಿಗುಲ್ಲೋಲಕಲ್ಲೋಲವಾಗಿ ಬಾಗಿ
ತಲೆದೂಗಿ. ಆ ಎಲ್ಲ ಸೊಬಗಿಂಗೆ ಮುಡಿಯಾಗಿ
ದೂರದ ದಿಗಂತದಲಿ ಗಿರಿಯುತ್ತಮಾಂಗದಲಿ
ಮೈದೋರಿದನು ಆಹ ಹೊಂಬಿಸಿಲಿನೆಳನೇಸರು!
ಸ್ವರ್ಗ ತಾಂ ಸ್ವರ್ಗೀಯತರಮಾಯ್ತು! ಮರಿ ಮಿಗವೆ
ಬಿರಿದು ಹೊಂಬೊಳಲಾಯ್ತೆ, ಮದ್ದಿಡದ ಮಣ್ಕುಡಿಕೆ
ಕಿಡಿಗೊಂಡು ಸಿಡಿಯೆ ರಾತ್ರಿಯ ನಭೋಭೋಗದಲಿ
ಕರೆವಂತೆವೋಲ್ ವರ್ಣಮಯ ನಕ್ಷತ್ರವೃಷ್ಟಿ?
   ಬೆಕ್ಕಸದಿ ನೋಡುತಿರ್ದಳ್ ತರಳೆ, ಕಣ್ಗಳೆವೆ
ಇಕ್ಕದೆಯೆ. ಕಂಡಳಿನ್ನೊಂದದ್ಭುತವನಲ್ಲಿ:
ತೇಲುವಾ ದ್ವೀಪ ಮಧ್ಯದ ಪುಷ್ಪರಂಗದೊಳ್
ಅದಾರವಂ ದೇವವಂದಿತ ಮೋಹನಾಕೃತಿಯ
ರುಕ್ಮರಾಗಾತಪ ಸ್ನಾತ ಮಾನವಮೂರ್ತಿ?
ಕಂಡು ನಿಷ್ಪಂದಳಾದಳು ಕನ್ಯೆ, ಕರುವಿಟ್ಟು
ಕಂಡರಿಸಿದಂತೆ, ಮೇಣ್ ಕುಂಚಿಗೆಯ ವರ್ಣಕರ್ಮಂ
ಚಿತ್ರಸ್ಥವಾದಂತೆವೋಲ್. ಕಣೆವೆರಸಿ ಕೈಬಿಲ್
ಜಗುಳ್ದುರುಳಿದುದು ನೆಲಕೆ. ಸ್ಫುರಿಸಿತಾ ಗಂಡೆದೆಯ
ಹೃದಯದಲಿ ತಾನು ಹೆಣ್ಣೆಂಬ ಲಜ್ಜೆಯ ಲಹರಿ
ಮೊತ್ತಮೊದಲ್: ಕೋಮಲತೆ ಕುಡಿವರಿದುದೊಡನೊಡನೆ
ಸೌಂದರ್ಯ ತೃಷೆಯಿಂದೆ. ಪ್ರೇಮಲತೆ ಬಾಯಾರಿ

ಕಾತರಿಸಿತಾವುದನೊ ತಾನರಿಯದುದ ಬಯಸಿ.
ನಾಚಿದಳು ತನ್ನವಸ್ಥೆಗೆ ತಾನೆ ಕನಸಿನಲಿ
ಲಲನೆ ಕನಲ್ದಿನ್ನೊಮ್ಮೆ ಪೌರುಷವನುರೆ ಪಾರ್ದು
ಬರಿದೆ! ಹೋರಾಡುತಿರಲಿಂತು ಬೇರೊಂದಾಯ್ತು:
ಮೂಡುವೆಟ್ಟಿನ ಮುಡಿಯ ತಪನೀಯಮಣಿಯಂತೆ
ತಳತಳಿಸುತಿರ್ದುದಯ ತಪನ ಬಿಂಬದಿ ಮೂಡಿ,
ಘನಿತ ಬಾಲಾತಪದ ರೂವಿಂದೆ ಪೊರಮಟ್ಟು,
ಗಾಳಿವಟ್ಟೆಯೊಳೊಯ್ಯನೊಯ್ಯನೆ ವಿಲಾಸದಲಿ
ತೇಲಿ ಬಂದರು ಮಧುಮದನರಮರ ತೇಜದಲಿ!
ಆ ಪವಾಡದ ಮೇಲಣ ಪವಾಡಕೆದೆ ಬೆಚ್ಚಿ,
ನಿದ್ದೆಯಿಂದೆಚ್ಚತ್ತು ಕಣ್ದೆರೆದಳಂಗನೆ, ಬಿಗಿದ
ಹೊಂಗನಸಿನಾಲಿಂಗನದ ಬಂಧನಂ ಬಿರಿಯೆ,
ವಿಸ್ಮಯದ ಮಂದಸ್ಮಿತದಲಿ. ಮೃಡಮೂರ್ತಿಯಂ
ನೆನೆದು, ದೃಢಭಕ್ತಿಯಲಿ ಕೈಮುಗಿದು ಶಿರಬಾಗಿ
ಗುಡಿಯ ವಿಗ್ರಹಕೆ, ಹೊರಹೊಂಟಳಾಲಯದಿದಿರೆ
ಉಷೆಯ ನಗೆನಸುಕಿನಲಿ ಮಿಸುಗುವ ಸರಸ್ತೀರಕೆ.
    ಅನ್ನೆಗಂ, ಇಂದ್ರದಿಙ್ಮಂಡಲದಿ, ಪೂರ್ವವಧು
ಇನಿತು ಕಣ್ದೆರೆದಂತೆ, ದಿನಮುಖದ ಕೆಂಗಾಂತಿ
ಕುಡಿವರಿದುದು. ತಾರೆಯೊಂದಾಕೆಯ ಲಲಾಟದಲಿ
ರಾಜಿಸಿತು ಬಜ್ಜರದ ಕಿಡಿಯಂತೆವೋಲ್. ನಡುಗಿದಳ್
ರಾತ್ರಿರತಿ ನೆನೆದು ತನ್ನಾಯುವವಸಾನಮಂ.
ಇರುಳ್ನಿದ್ದೆಯಿಂ ಜಗತ್ತೆಳ್ಚರುವ ಸಮಯಮದು
ಶಾಂತಿಯಿಂ, ಶೈತ್ಯದಿಂ, ನಾದಗರ್ಭಿತಮಾದ
ತುಂಬು ಮೌನದಿ ತುಂಬಿ ಶೋಭಿಸಿತು, ಧ್ಯಾನಮಯ
ಗಾಂಭೀರ್ಯದಿಂ. ಹೊಗರೇರುವಾಗಸದೊಳುಕ್ಕಿಬರೆ
ತಿಳಿಕೆಂಪು ನಸುಗೆಂಪು ಹೂಗೆಂಪು ಕಡುಗೆಂಪು,
ಹಳದಿ ಕುಂಕುಮ ಪೀತ ಕನಕ ಚಂದನ ನೀಲ
ವರ್ಣೋಪವರ್ಣಮಯ ಫೇನ ಬುದ್ಬುದ ಸದೃಶ
ಜ್ವಾಲೋಪಮಾರಕ್ತ ಕಾದಂಬಿನಿಗಳೆಸೆಯೆ
ಪಂಕ್ತಿ ಪಂಕ್ತಿಗಳಂತೆ ವಿವಿಧ ವಿನ್ಯಾಸದಲಿ,
ರುಂದ್ರ ರಾತ್ರಿಯ ಪಾತ್ರೆಯಂಚಿನಲಿ ತಕಪಕನೆ

ಕುದಿದೆದ್ದುದೋ ಪಗಲೆನಲ್. ರಂಜಿಸಿತು ಕಣ್ಗೆ
ಬಂಧುರ ದಿನೋದಯದ ದಿವ್ಯಪ್ರಭಾತಕಾವ್ಯಂ!
ಪಸುರ್ಗಡಲ ಪೆರ್ದೆರೆಗಳೋಲ್ ಸ್ಪರ್ಧೆಯೊಳೆದ್ದು
ವೀಚಿವೀಚಿಗಳಾಗಿ ಪ್ರಾಚೀ ದಿಗಂತಮಂ
ತಬ್ಬಿ, ನಾನಾದೆಸೆಗೆ ಹಬ್ಬಿದ ವನಶ್ರೇಣಿ ತಾಂ
ಚಿತ್ರಾಂಗದೆಯ ಮನಕೆ ಚೆಲ್ವಾಯ್ತು, ತನ್ನೆದೆಯ
ಸದ್ಯಃ ಪ್ರಫುಲ್ಲ ನವಯೌವನ ಪ್ರಸಾದದೋಲ್
ವಿಸ್ತಾರ ಚಾರುಧೀರಂ. ರಮ್ಯಾರುಣಜ್ಯೋತಿ
ಕೊಳದ ಜಳದೊಳು ಮಾರ್ಪೊಳೆಯೆ ನೀರುರಿವ ತೆರದಿ,
ಕುಮುದಿನಿಗೆ ಮೊಗಬಾಡಿ, ಕಮಲಿನಿಗೆ ನಗೆಮೂಡಿ,
ತಂಗಾಳಿ ತೀಡಿತು ವಿಹಂಗಗಳನೆಳ್ಚರಿಸುವೋಲ್.
ಮಡಿವಾಳನಿಂಚಿಳ್ಚು, ಕಾಜಾಣನಿಂಚರಂ,
ಕೋಗಿಲೆಯ ನಿಡುಸರಂ, ಗಿಳಿವಿಂಡುಗಳ ಗಳಹು,
ತರತರದ ಪಕ್ಷಿಗಳ ತರತರದ ಕೂಜಿತಂ
ತುಮಲ ಸುಮಧುರಮಾಗಿ ಚೈತ್ರಪ್ರಭಾತಮಂ
ಧ್ವನಿಸಾಂದ್ರಗೈದಿರ್ದುದಂದು. ಉದುರಿದುವು ಹನಿ
ಬನಬನದಿ ತರುಗುಲ್ಮಲತೆಗಳಿಂ, ವನ ವನಿತೆ
ತನ್ನ ನೇಹದ ವಸಂತೋದಯಾನಂದದಿಂ
ಹರ್ಷಾಶ್ರುಬಿಂದುವರ್ಷವ ಸೂಸಿಪೋಲ್. ಕೆದರಿ
ದಳಗಳಂ ಕುಸುಮತತಿ ನಲಿಯೆ ನರುಗಂಪಿನಿಂ,
ಮತ್ತ ಮಧುಪಂಗಳುಂ ಮತ್ತೆ ಭ್ರಮರಂಗಳುಂ
ಹಿಂಡುಹಿಂಡಾಗಿ ಹೂವೊಡಲ ಹೊಂದೂಳಿಯೊಳ್
ಹೊರಳಿ, ಹೊಂಬೊಗರೇರಿ, ಮಲರು ಮಲರಿಗೆ ಹಾರಿ
ಮಕರಂದ ಭಿಕ್ಷೆಯಂ ಬೇಡಿ, ಕುಟಜಂಗಳಲಿ
ಝೇಂಕರಿಸಿದುವು ನಿತ್ಯಯಾತ್ರೆಯೋಂಕಾರಮಂ!
  ನಾರಿಯಾಕೃತಿಯಾಂತೆಸೆವ ಉಷಾ ಶ್ರೀಕಾಂತೆ
ವೈವಿಧ್ಯಮಯ ಮನುಜ ಜೀವನ ರಸಕ್ಕೆಳುಪಿ
ಭೂಮಿಯ ವಿಹಾರಕ್ಕೈತಂದಳೊ ಎನಿಪ್ಪಂತೆ
ಮಣಿಪುರ ಧರಣಿಪಾಲ ಚಿತ್ರವಾಹನ ತನುಜೆ
ಚಿತ್ರಾಂಗಿ ತಾಂ ಚಲಿಸಿದಳ್, ಕೆರೆಯ ನಳನಳಿಸಿ
ಬೆಳೆದ ಎಳಹಸುರು ಹುಲ್ಲಂಚ ಮೇಲಡಿಯಿಟ್ಟು,

ಮುತ್ತು ಚೆಲ್ಲಿದ ತೆರದಿ ಮೂಡಿದೆಳಬಿಸಿಲಿನಲಿ
ಮಿರುಗುವಿಬ್ಬನಿಗಳಂ ಸವರಿ, ಪೂವಡಿಗಳಿಂ
ತಿರೆಯ ಹೃದಯಂ ನಲಿದು ಹಿಗ್ಗುವಂದದಿ ಮತ್ತೆ
ಮುತ್ತಿಟ್ಟು! ಸಾಗುತಿರೆ ಷೋಡಶಕಳಾಪೂರ್ಣ
ಷೋಡಶಿ ವಿಪಿನಪಥದಿ ವೀರವ್ವೆಯಾರದಲಿ,
ಸೂಸಿದುವು ದಾರಿಯ ಗಿಡುಮರಂಗಳಲರ್ವಳೆಗಳಂ;
ದಾಂಗುಡಿಗಳಂ ನಿಮಿರ್ಚುತೆ ಮುದದಿ ಹೂಬಳ್ಳಿಗಳ್
ಕೈಯಾಡಿದುವು ಕೋಮಲೆಯ ನುಣ್ಗದಪಿನೊಳ್;
ವಿಹಂಗಮಗಳೇಕಕಂಠದಿ ಜಯಧ್ವನಿಗೈದು
ಹಾರಾಡಿದುವು ರೆಂಕೆಗರಿಗೆದರುತುತ್ಸಾಹದಿ!
    ಉದಯ ಸಮಯದ ಐಸಿರಿಯ ಸವಿಯುತಿರಲಿಂತು,
ಭೋಂಕನೆಯೆ ನಿಂದಳಂಗನೆಯೊಂದೆಡೆಯೊಳಲ್ಲಿ
ವಿಸ್ಮಯಾವಿಷ್ಟ ದೃಷ್ಟಿಯನಟ್ಟಿ ದೂರಕ್ಕೆ:
ಇದಿರು ದಡದೊಂದರೆಯ ಪಡಿನೆಳಲಿನಗ್ರದಲಿ
ಕಾಣಿಸಿತು, ಪ್ರತಿಬಿಂಬದಂಬರಕ್ಕೆದುರಾಗಿ,
ಪದ್ಮಾಸನ ಸ್ತಿಮಿತ ಧ್ಯಾನಸ್ಥ ಮಾನವ-
ಪ್ರತಿಚ್ಛಾಯೆ, ಕರುವಿಟ್ಟು ಕಂಡರಿಸಿ ಹೂಡಿದಂತೆ!
ನೋಡುತಿರ್ದಳು ಮರಳಿ ಮರಳಿ; ಚಿತ್ತವನೇಕೊ
ಕಾಡುತಿರ್ದಳು ಕೆರಳಿ ಕೆರಳಿ; ಹೃದಯವನೇನೊ
ಬೇಡುತಿರೆಯಿರೆ ತರಳೆಯರಳಿ, ಹೊಳೆದುದು ನೆನಹು:
ಕನಸುದೀವಿಯ ಪುರುಷ ಹರುಷ ಮೂರುತಿಯಿವನೆ?
ಕಾಷಾಯ ಭೂಷಿತಂ, ಪಾವನ ಜಟಾಧಾರಿ,
ಮನ್ಮಥಂಗೆಣೆಯಪ್ಪ ಫಾಲಾಕ್ಷ ಸನ್ನಿಭಂ,
ದೇವವಂದಿತ ಮೋಹನಾಕೃತಿಯ ನರನಿವನೆ?
ರುಕ್ಮರಾಗಾತಪಸ್ನಾತನಾತನೆಯಿವಂ?
ತಪಮಿರ್ದುದೆಂಬಿನಂ ತಾಪಸನ ತೇಜಸ್ಸು
ಸೌಂದರ್ಯಮೆ ಶರೀರಮಂ ತಾಳ್ದಿಳೆಗೆ ವಂದು
ಮೋಹಿಸಿತ್ತಳುಕಿಸಿತ್ತಾ ಮೋಹನಾಂಗಿಯಂ,
ಮೊದಲ ಬೇಟಂ ಮೊಳೆಯುವೆಳ ಎದೆಯಳಂ, ಕನ್ಯೆ
ಚಿತ್ರಾಂಗಿಯಂ!
                    ಪಡಿನೆಳಲಿನಿಂದೆ ನಿರುತಕ್ಕೆ

ದಿಟ್ಟಿಯಟ್ಟಲ್, ಅಲ್ಲಿ, ಬನವೆ ಹಿನ್ನೆಲೆಯಾಗೆ,
ಅರೆ ಮುಳುಗಿ ಮಗ್ಗುಲಿಕ್ಕಿದ ಕರಿಯ ತೆರದಿಂದೆ
ಕೆರೆಯ ಕರೆಯಲಿ ನೀರಿನಿಂದೆದ್ದ ಕರಿಯರೆಯ
ಶಿರದಿ ಮೆರೆದತ್ತಾ ತಪೋವ್ಯಕ್ತಿಯಮಲಾಕೃತಿ!
　ಪಲ್ಲವಿತ ಶೃಂಗಾರವಲ್ಲಿ ಕುಡಿವರಿವಂತೆ
ಯೌವನ ನವೀನ ಚೂತದ ಪೂತ ಸನ್ನಿಧಿಗೆ
ನಡೆದಳೊಯ್ಯನೆ ನೀರೆ, ಕೌತೂಹಲಾವಿಷ್ಟೆ,
ವೈರಾಗಿಯಿರ್ದ ತಡಿಗಾಗಿ. ವ್ಯಾಮೋಹದಿಂ
ಬರಬರುತೆ ಬಳಿಸಾರೆ, ಚಂಚಲಿಸಿದುದು ಚಲನೆ;
ತಡವರಿಸಿದುದು ನಡಿಗೆ; ಎವೆಯಿಕ್ಕದಾಯ್ತಕ್ಷಿ;
ಗದಗದಿಸಿತೆದೆ, ಮೈನವಿರ್ ನಿಮಿರಿ.
　　　　　　　　　　　　ಮಣಿಪುರದ
ನೃಪತನಯೆ, ವೇಷವಾವೇಶದೊಳ್ ಬಿಜ್ಜೆಯೊಳ್
ಬಿಲ್ಲ ಬಿನ್ನಾಣದೊಳ್ ಬೀರದೊಳ್ ಕೆಚ್ಚೆದೆಯ
ಕಜ್ಜದೊಳ್ ಲಜ್ಜೆಯರಿಯದ ಧೀರ ಚರ್ಯೆಯೊಳ್
ನೃಪಕುಮಾರನೆ ತಾನು ಎಂಬಂತಿರಿರ್ದಾಕೆ
ನಿಂದಳದೊ ಮೊತ್ತಮೊದಲಬಲತಾ ಭಾವದಿಂ
ಹಾ ಪೆಣ್ತನದ ನಾಣನನುಭವಿಸಿ!
　　　　　　　　　　　　ಓ ಮಾಯೆ,
ಓ ರತಿಯೆ, ಓ ಕಲಾಸುಂದರಿಯೆ, ನಿರ್ಲಿಪ್ತ
ನಿಶ್ಚಿಂತ ನಿರ್ಗುಣ ಬ್ರಹ್ಮದಲಿ ಶಕ್ತಿಯಂ
ಸೃಷ್ಟಿಯಾಸಕ್ತಿಯಂ ಕೆರಳಿಸಿದ ಮೋಹಿನಿಯೆ,
ಪ್ರೇಮ ಸೌಂದರ್ಯ ರೂಪದಿ ಸುಳಿದು ವಿಶ್ವಮಂ
ಶುಷ್ಕತಾ ಶೂನ್ಯಕ್ಕೆ ಬಿಡದೆ ಹೊರೆಯುವ ರಸವೆ,
ನಿನ್ನ ಬಂಧುರ ಬಂಧನಾಲಿಂಗನಕೆ ಸಿಲ್ಕಿ
ಶಶಿ ಸೂರ್ಯ ಗ್ರಹಗೋಷ್ಠಿ ತಾರೆಗಳೆ ನಡೆಯುತಿರೆ
ಪೆಣ್ಣೊರ್ವಳಂತಪ್ಪುದೊಂದು ಸೋಜಿಗವೆ ಪೇಳ್?
ಚೈತ್ರೋದಯದ ವಿಪಿನ ಹೃದಯದೊಳ್ ಚೈತನ್ಯ-
ಧುನಿಯಾಗಿ ಬೇರು ಬೇರುಗಳಲ್ಲಿ, ಕೊಂಬೆಯಲಿ,
ಪರ್ಣ ಪರ್ಣಾಂತರಂಗದಿ, ಮುದ್ದು ಮೊಗ್ಗಿನಲಿ,
ಹೂವಿನಲಿ, ಬಳ್ಳಿಯಲಿ, ತರು ಶರೀರದ ನಾಡಿ

ನಾಡಿಯಲಿ, ಖಗ ಮೃಗಂಗಳ ಪ್ರಾಣಪಾತ್ರದಲಿ,
ತೃಣ ತೃಣಂಗಳ ಜೀವನಾಲವಾಲದಿ ತುಂಬಿ
ಪ್ರವಹಿಪಾ ಸ್ಫೂರ್ತಿ, ಮಾಧುರ್ಯನಿರ್ಝರಿಣಿಯೋಲ್,
ಚಿತ್ರಾಂಗದೆಯ ಜೀವ ಶೈಲಾಗ್ರದಿಂ ಧುಮುಕಿ
ಹೃದಯ ಗಹ್ವರಕಲ್ಲಿ, ಪ್ರಣಯ ಪ್ರಪಂಚಮಂ
ಮಥಿಸಿದತ್ತು! ಸೋತು ನಿಂತಳು ಲಲನೆ, ಬರೆದವೋಲ್!
ಗಾನಗೈದುವು ಹಕ್ಕಿ: ಝೇಂಕರಿಸಿದುವು ತುಂಬಿ;
ಬೀಸಿತ್ತು ತಂಗಾಳಿ; ಕಂಪನೆರಚಿತ್ತಲರ್;
ಕಳಕಳಿಸಿ ನಗುತಲಿರ್ದುದು ಕಾಡು; ಕನ್ನಡಿಯ
ತೆರದಿಂದೆ ಹಬ್ಬಿತ್ತು ವಿಸ್ತೃತ ಸರೋವರಂ;
ತಿಳಿಯಾಳದಾಗಸದಿ ಮೆಲ್ಲನೊಯ್ಯನೆ ಮುಗಿಲ್
ಚಲಿಸಿತು ಸರೋವಕ್ಷದಲಿ ಛಾಯೆಯನು ಚೆಲ್ಲಿ;
ಹೊಂಬಿಸಿಲ್ ಹಸರಿ ಎಸೆದಿತ್ತಿಳೆಯೆದೆಯ ಮೇಲೆ!
  ಕ್ಷಣಗಳೊಂದೊಂದು ಯುಗವಾಗಿ ಕಳೆಯುತ್ತಿರಲ್,
ಹೊತ್ತೇರಿ ಬೆಳೆವುತ್ತಿರಲ್ ಬಿಸಿಲ್, ಇರಲಿರಲ್
ಕಣ್ದೆರೆದನೊಯ್ಯನೆಯೆ ಧ್ಯಾನದಿಂದಿಳಿತಂದು
ದಿವ್ಯ ತೇಜಸ್ವಿ. ಕಂಡನು ಮುಂದೆ ನಿಂದಿರ್ದ
ತರುಣ ವೇಷದ ತರುಣಿಯನು ಇನಿತು ಬೆರಗಿಂದೆ.
ಎರಡು ಕಣ್ಗಳುಮೆರಡು ಕಾಸಾರಗಳ ಹೋಲಿ
ಶೋಭಿಸುತ್ತಿರೆ, ಹೆಣ್ಣು ತೇಂಕಾಡಿದಳು ಅಲ್ಲಿ
ತೇಲಿ ಮುಳುಮುಳುಗೇದುತುಸಿರ್ಕಟ್ಟಿದಂತೆವೋಲ್!
ಮೊಗದಲ್ಲಿ ನಗೆಮುಗುಳ್ ಮೂಡಿ ಮೆಲ್ಲನೆ ಮಲರೆ
ಮಧುರ ಗಂಭೀರ ವಚನದಿ ನುಡಿದನು ತಪಸ್ವಿ:
"ಆರು ನೀನೆಲೆ ತರುಣ ವೀರ? ವಿಪಿನಾಂತರದಿ
ಇನಿತು ಮುಂಬೊಳ್ತಿನೊಳಗೇಂ ಗೆಯ್ದು ತಿರಗುತಿಹೆ?
ಚೈತ್ರಪ್ರಭಾತದೀ ರಮ್ಯತಾಸ್ವಾದನೆಯೋ,
ಮೃಗಯಾ ವಿನೋದಮೋ, ನಿನಗಾವುದಳ್ತಿ ಪೇಳ್?
ನುಡಿ, ಅಂಜದಿರು; ನಾವು ಮುನಿವ ಮುನಿವರರಲ್ಲ!'"
'ಅಂಜದಿರು' ಎಂಬ ನುಡಿ ಕಿಡಿಸೂಸೆ, ಬಿಂಕದುರಿ
ಮುಸಗಿದುದು ಭುಗಿಲೆಂದು ವೀರ ನಾರಿಯ ಮನದಿ.
ಎದೆಯ ಹುತ್ತಿನೊಳದುವರೆಗೆ ಮೋಹಮಂತ್ರದಿಂ

ಮುಗ್ಧವಾಗಿರ್ದ ಪುರುಷತೆ ಒಡನೆ ಹೆಡೆಯೆತ್ತಿ
ಪಡಿಹಿಂಸೆಗಣಿಯಾಗಿ ಮಲೆತು ನಿಂದುದು ಕನಲಿ.
ಮರೆತಳು ನಮಸ್ಕಾರಮಂ, ಪೂಜ್ಯಬುದ್ಧಿಯಂ,
ತಾನೊರೆಯವೇಳ್ಕುಮೆಂದಿರ್ದ ಸವಿನುಡಿಗಳಂ.
ನಯಮಂ ವಿನಯಮಂ ವಿಧೇಯತಾಭಾವಮಂ.
ಪ್ರತಿಸ್ಪರ್ಧಿ ವೀರ ಆಲಾಪಮಂ ಗೈವಂತೆ
ಬೆಸಗೊಂಡಳೊರಟಾಗಿ ಆಟವಿಕ ಸ್ತ್ರೀಯವೋಲ್:
“ಅಂಜುವವರಾವಲ್ಲ! ಅಂಜಿಕೆಯ ಕಂಡಿಲ್ಲ,
ಕೇಳಿಲ್ಲ! ಅಂಜುಕುಳಿಗಳ ರಕ್ಷಣೆಯೆ ನಮ್ಮ
ಕುಲಕರ್ಮ; ನಂಜಿನಂತಹ ಲೋಕ ಕಂಟಕರ
ಭಂಜನೆಯೆ ನಾವೊಲಿದ ಕರ್ತವ್ಯ! `ಅಂಜದಿರು!
ಅಂಜದಿರು, ನುಡಿ' ಎನಲ್, ನೀನಾರೆಲೆ ತಪಸ್ವಿ?’”
ದಂತಪಂಕ್ತಿಯ ಕಾಂತಿಯೊಡನೆ ಕಿರುನಗೆ ಮಿರುಗೆ,
ಅನಿಮೇಷ ದೃಷ್ಟಿಯಂ ಬೀರಿ, ಕಿತ್ತಡಿಯಿಂತು
ಕೊಂಕುನುಡಿಸರಳನೆಚ್ಚನ್ ಬಿಂಕದಂಗನೆಗೆ:
“ವೀರಕ್ಕೆ ವಿನಯಮೆಂಬುದು ಮುಡಿಯ ಮಾಣಿಕಂ;
ವಿನಯಮಿರದಿರಲದೆ ಕುಸಂಸ್ಕೃತಿ! ಕಿರಾತರೋಲ್
ಮಾತು ಮಾತಿಗೆ ಮಲೆತು ಕೆರಳಿದರಹಮ್ಮಿನಿಂ
ಕ್ಷಾತ್ರಮಲ್ತದು ಧೂರ್ತಲಕ್ಷಣಂ! ತರುಣ ವೀರ,
‘ನೀನಾರೆಲೆ ತಪಸ್ವಿ!’ ಎಂದೆನ್ನ ಮೂದಲಿಸಿ
ಪ್ರಶ್ನಿಸಿದೆಯಲ್ತೆ? ಪೇಳ್ದಪೆನಾಲಿಸದನಿನ್ನು:
ತಿರಿವ ಬಡಜೋಗಿಗಳ್ ನಾವು ಲೋಗರೆ ದಿಟಂ!
ನೆಲೆಯಿಲ್ಲದಲೆದಲೆದು ಬೇರು ಬಿಳ್ಕೆಯನುಂಡು
ತರುತಲ ನಿವಾಸದಲಿ ಬರುನೆಲದ ಹಾಸಿನಲಿ
ಬಿದ್ದೆದ್ದು ಬಳಲುವರ್ ನಾವು ಲೋಗರೆ ದಿಟಂ!
ನಿಮ್ಮ ಯೋಗ್ಯತೆಯಿಲ್ಲ; ನಯವಿಲ್ಲ; ನುಣ್ಪಿಲ್ಲ;
ಸಿರಿಯಿಲ್ಲ, ಪೆಂಪಿಲ್ಲ, ನಾವು ಲೋಗರೆ ದಿಟಂ!
ನೀವು ಯೋಗ್ಯರೆ ಅಹುದು!—ಮುನಿಯದಿರ್, ಸಾತ್ವಿಕನೆ,
ತಾಳ್ಮೆಯೊಳೆ ಬಾಳ್ಮೆಯಿದೆ. (ನಿನ್ನಾನನದಿ ಕೆಂಪು
ಸುಳಿಯಲದೆ ಚೆಲ್ವಾಗಿ ಪೊಣ್ಮುತಿದೆ!—) ನಾನಾರೆ?
ಕುರುವಂಶನಾಮದೊಂದರಸುಮನೆತನಮಿಹುದು.

ಬಲ್ಲೆಯೇಂ?—ಸುಪ್ರಸಿದ್ಧನು ನೀನು. ನಿನಗೆ ಆ
ಅಪ್ರಸಿದ್ಧದ ಅರಿವದೆಂತಹುದು? ಆ ಬಳಿಯ
ಪಾಂಡುರಾಜಗೆ ಪಂಚಪಾಂಡವರ್ ಜನಿಸಿದರ್.—
ನೀರಸ ಕಥಾಲಾಪಮಿದು ನಿನಗೆ ಬೇಸರಂ!—
ಕೇಳಿಬಲ್ಲೆಯ ಯುಧಿಷ್ಠಿರ ಭೀಮರೆಂಬರಂ?
ನಕುಲ ಸಹದೇವರಂ? ಪಾರ್ಥನೆಂಬಾತನಂ?
ಶ್ರೀಕೃಷ್ಣನೆಂಬೊರ್ವ ಗೊಲ್ಲನಂ?—ನೀನರಿಯೆಃ
ಅಖ್ಯಾತರಲ್ಪರಜ್ಞಾತರವರನಿಬರುಂ!
ನೀಂ ಜಗದ್ವಿಖ್ಯಾತ ವನಚರಂ! ನಿನಗೆಂತು
ವೇದ್ಯಮಹುದಜ್ಞಾತರಿತಿಹಾಸಮದು? ಇರಲಿ;
ನಾಂ ಯುಧಿಷ್ಠಿರನಲ್ತು, ಮೇಣ್ ಭೀಮನುಮಲ್ತು;
ನಕುಲ ಸಹದೇವರೊಳಗೊಬ್ಬಾತನಲ್ತು; ಮೇಣ್
ಕೃಷ್ಣನೆಂಬಾ ಗೋವಳಿಗನಲ್ತು. ಆದೊಡಾಂ
ಧರ್ಮಜ ಕೃಪಾಪೋಷಿತಂ; ಭೀಮನಕ್ಕರೆಗೆ
ಪಾತ್ರನಾಗಿಹ ಕೃಷ್ಣ ಪದಕಮಲ ಕಿಂಕರಂ;
ಪಾಂಡವರ ಮಧ್ಯಮಂ; ಮೇಣ್ ಧನಂಜಯನೆಂಬ
ದುರ್ಯಶಕ್ಕೀಡಾಗಿ ತೊಳಲ್ವ ನಾನರ್ಜುನಂ!''"
ಇಂತು ನುಡಿಗಣೆಯ ಬಿರುವಳೆಯ ಸುರಿದು ತಪಸ್ವಿ
ಸಿಂಹಗಾಂಭೀರ್ಯದಿಂದೆಳ್ದು ನಡೆದಡವಿಯೊಳ್
ಮರೆಯಾದನೊರ್ಮೆಯುಂ ಸಿಂಹಾವಲೋಕನಂ
ಗೈಯದೆಯೆ. ನಾರಿ ನಿಂತಳು ಕಂಬದಂತಲ್ಲಿ,
ಮಾತನುಳಿದುಬ್ಬೆಗದ ಮೋನದಲಿ ನಿಡುಸುಯ್ದು,
ತನ್ನ ಕಣ್ಣಂ ತಾನೆ ನಂಬಲಾರದೆ, ಬೆಪ್ಪು
ಬೆರಗಾಗಿ, ಲಜ್ಜೆ ಭಯ ವಿಸ್ಮಯದ ಭಾರದಿಂ
ಕುಸಿದು ಕುಗ್ಗಿ!—ಕೆಚ್ಚೆದೆಯ ಬೇಂಟೆಯ ಕಿರಾತಕಲಿ
ಪಶ್ಚಿಮಾದ್ರಿಯ ರುದ್ರಸಾಂದ್ರ ಭೀಷಣರುಂದ್ರ
ಘೋರ ವಿಪಿನಾಂತರದ ನಿಮ್ನೋನ್ನತಂಗಳಲಿ
ಬೆಳಗಿನಿಂ ಬೈಗನ್ನೆವರಮಲೆದು, ಕಾಣದಿರೆ
ಬೇಂಟೆ, ಬೇಸರದಿಂದೆ, ತನುವಿನಾಸರದಿಂದೆ,
ಕನಲುವನ್; ಕುದಿಯುವನ್; ಬಿದಿಯ ಬಯ್ವನ್ ಬಾಯ್ಗೆ
ಬಂದಂತೆ. ಪೊಳ್ತಿಳಿಯುತಿರೆ, ಪಸಿವುಮೇರಿ ಬರೆ,

ಬಾಣಮಂ ಬತ್ತಳಿಕೆಗಿಡಿಯುತೆ, ಹತಾಶೆಯಿಂ
ಬಿಲ್ಲನೊರ್ದೆಸೆಗೆಸೆದು ಪವಡಿಪನ್ ಹಚ್ಚನೆಯ
ಹಸುರ ಮೇಲಲ್ಲಿ ಹಳುವಿನ ತಣ್ಣೆಲರಿನಲ್ಲಿ.
ಮಗ್ನನಾಗಿರಲವಂ ನಿದ್ರಾ ಸಮುದ್ರದಲಿ,
ತೃಪ್ತ ಜಠರದ ಭೀಮ ಭೀಷ್ಮ ಭಲ್ಲುಕಮೊಂದು
ಚರಿಸುತ್ತೈತಂದು ಕಾಣುತೆ ನರನ ಗಾತ್ರಮಂ
ಫೂತ್ಕರಿಸುತಾಘ್ರಾಣಿಪುದು ಬರಿಯ ಕೌತುಕಕೆ!
ಕೋಳ್ಮಿಗದ ಸಿನುಗು ಕೌರಹ ಬಿಸಿಯುಸಿರ್ ಮೊಗಕೆ
ತೀಡುತಿರೆ, ಕರ್ವೇಡನೆಳ್ಚತ್ತು ಕಣ್ದೆರೆಯೆ: ಹಾ,
ಮೊಗದ ಮೇಲಿದೆ ಹಿರಿಯ ಕರ್ರನೆ ಕರಡಿ ಮೋರೆ!
ತೆಕ್ಕನೆಯೆ ಕಣ್ದೆರೆಯೆ ನರನಾ ಕಾಳ್ಮಿಗಂ ಬೆಚ್ಚಿ
ಹೂಂಕರಿಸುತೋಡಿಯಡವಿಗೆ ಜುಣುಗುವುದು ಜವದಿ.
ಬೇಡನಾದರೊ ತೆರೆದ ಕಣ್ಗಳ ಮುಚ್ಚಲಾರದೆ,
ಕೂಗಲಾರದ ಚಲಿಸಲಾರದತಿ ವಿಸ್ಮಯದಿ,
ಕಂಗೆಟ್ಟು, ಮರವಟ್ಟು, ಬಡಿದುದೆನೆ ಬಲ್‌ಗರಂ
ಮಿಳ್ಮಿಳನೆ ನೋಡುವನ್ ಕರಡಿ ಹೋದತ್ತಕಡೆ
ಮಂಕು ಮರುಳಾಗಿ!—ಹಾ! ನಿಂತಳಂತಯೆ ತರುಣಿ,
ತನ್ನ ಬಾಳಿನ ಬಯಕೆಯಾರಾಧನೆಯ ಮೂರ್ತಿ,
ತನ್ನಿಷ್ಟದೇವತಯೆ, ತನ್ನೊಲುಮೆಯರ್ಜುನನೆ,
ತನ್ನೆದುರಿನೊಳ್ ಮೂಡಿ, ತಿಳಿಯದೊಂದಾಡಿತದ
ತನ್ನ ತಿಳಿಗೇಡಿತನಕಲಸಿ ಮರೆಯಾಗುತಿರೆ
ವನಮಧ್ಯದಲ್ಲಿ! ಅಂತಿರಲಿರಲ್, ವಿಸ್ಮಯಂ
ಶೋಕಕೆಡೆಗೊಟ್ಟು ಚೆಲ್ಲಿತು ಹೆಣ್ಣ ಕಣ್ಣನಲಿ
ಬಿಸುಗಂಬನಿಯ ಹೊನಲ್! ಸುತ್ತಲುಂ ಮೆರೆದತ್ತು
ಚೈತ್ರೋದಯದ ವಿಪುಲ ಸಂಪತ್ತು. ಆದೊಡೇನಾ
ಕನ್ಯೆಯಾತ್ಮವದಿತ್ತನಂತ ದಾರಿದ್ರ್ಯದೋಲ್!

# ಎರಡನೆಯ ಪರ್ವಂ

ಹೇ ಮಧುರ ರಸಮಯ ರಸಾಲ ಧನುವಿಂದೆಸೆವ
ಅತನುದೇವ, ರತೀಶ, ಮಾವು ತಾವರೆಯಸುಗೆ
ನೀಲ ನೈದಿಲೆ ಮಲ್ಲಿಗೆಯ ನಿನ್ನ ಪೂಗಣೆಗೆ,
ಪೆಣ್ದುಂಬಿಗಳ ಕೋದು ಕಯ್ಗಯ್ದ ನಿನ್ನಿಂಪು
ಸಿಂಜಿನಿಯ ಸವಿದನಿಗೆ ಎದೆಸೋಲದಿಹರೊಳರೆ
ಈ ಬೃಹದ್ಬ್ರಹ್ಮ ಸೃಷ್ಟಿಯಲಿ? ತಾಪಸರೆರೆಯ
ಪಿಂಗಲ ಜಟಾಜೂಟ ನಿಟಿಲಾಕ್ಷನಾದಿಯಲಿ
ಭೀಷಣ ತಪಸ್ಸಾಧನಾರಕ್ತಿಯಿಂ ಮಹಾ
ನಿರ್ವಿಕಲ್ಪ ಸಮಾಧಿಯೊಳ್ ಮಗ್ನನಾಗಿರಲ್,
ಸ್ವಾಮಿಯ ವಿರಾಗದಿಂ ಸೃಷ್ಟಿ ರಸವಾರುತಿರೆ,
ಬತ್ತುತಿರೆ ಜೀವರಾಶಿಗಳೆದೆಯ ಜೀವನಂ,
ಉರಿಹೊತ್ತಿ ಬರೆ ದೇವದೇವತೆಗಳೆಲ್ಲರ್ಗೆ,
ಕ್ಷೇಮ ಕ್ಷಯಿಸುತ್ತಿರಲ್ ರಾಕ್ಷಸರ ದೆಸೆಯಿಂದೆ,
ಪ್ರಳಯ ಸನ್ನಿಹಿತವಾದಂತಿರಲಕಾಲದೊಳೆ,
ತಲ್ಲಣಿಸಿ ಕುದಿಗೊಳೆ ಜಗತ್ತು, ಓ ರತಿಪತಿಯೆ,
ಶಿವನೆದೆಗೆ ಕೆಚ್ಚೆದೆಯಿನೆಚ್ಚು ಕುಸುಮೇಷುವಂ
ಮುಕ್ಕಣ್ಣನುರಿಗಣ್ಣೆನಗ್ಗಿಗೊಳಗಾದೆ ನೀಂ!
ನಿನ್ನಿಂದೆ ಬದುಕಿ ಬಾಳ್ದುದು ಜಗಜ್ಜೀವನಂ;
ನಿನ್ನಿಂ ಕಪರ್ದಿ ಶಂಕರನಾಗಿ, ಸುಕುಮಾರಿ
ಗಿರಿಜಾತೆಗರ್ಧದೇಹವನಿತ್ತು, ಸೃಷ್ಟಿಯಂ
ಪೊರೆಯುತಿಹನನವರತಂ! ಹೇ ಅನಂಗನೆ, ನಿನಗೆ
ತನುವಿಲ್ಲದುದರಿಂದೆ ಸರ್ವತನು ತಾನಾಗಿ
ಜಗವನಾಳುತಿಹೆ. ನಿನ್ನಧಿಕಾರಕೆದರಿಲ್ಲ.

ಸಾಗರ ತರಂಗಿಣಿಗಳಿಂದಭಿಷವಂಗೈದು,
ಕಾನನೋದ್ಯಾನ ನವ ಕುಸುಮಂಗಳಂ ಚೆಲ್ಲಿ,
ಶುಕ ಪಿಕ ವಿಹಂಗ ಗೀತಾಂಜಲಿಯನರ್ಪಿಸುತೆ,
ಹೊಂದಳಿಗೆಯಲಿ ಸಂಧ್ಯೆಯೋಕುಳಿಯನೆರಚುತ್ತೆ,
ಸ್ವರ್ಣೋಜ್ಜ್ವಲೋದಯದ ಮಂಗಳಾರತಿಯೆತ್ತಿ
ಪ್ರಕೃತಿದೇವಿಯೆ ತಾನು ರತಿಯ ರೂಪದಿ ನಿನ್ನ
ಪೂಜಿಸುವಳನುದಿನಂ! ಇಂತಿರಲ್ ತವ ಮಹಿಮೆ,
ಪೇಳ್ ಅಬಲೆ ಚಿತ್ರಾಂಗಿ ತಾಂ ತಾಳಲಾಪಳೆ ನಿನ್ನ
ಭುವನ ಸಮ್ಮೋಹನ ಮಧುರ ಮೋಹನಾಸ್ತ್ರಮಂ?
    ಲಜ್ಜಾ ವಿಷಾದದಿಂ ಕುಂದಿ, ಬೇಟದಿ ಕಂದಿ,
ಹಜ್ಜೆಯಿಡುತೊಯ್ಯನೆ ಶಿವಾಲಯಕ್ಕೈತಂದು,
ಪ್ರಾಂಗಣದೊಳೊಡತಿಯಂ ಕಂಡುಲ್ಲಸದಿ ಕೆನೆದು
ಸಂಚಳಿಸುತಿರ್ದ ತನ್ನಾ ತೇಜಿಯನ್ನೇರಿ
ನಡೆದಳಂಗನೆ ದೂರ ಶಿಬಿರವಿದ್ದೆಡೆಗಾಗಿ.
ಹಸುರು ಬನದಲಿ ಸಾಗುತಿರೆ ಧವಳ ರಣತೇಜಿ
ಬಿಂಕಕ್ಕೆ ಕೊರಲ ಕೊಂಕಿಸಿ, ತನ್ನ ಬೆನ್ನಿನಲಿ
ತನ್ನಕ್ಕರೆಯ ಹೊರೆಯ ಹೊತ್ತ ಹೆಮ್ಮೆಗೆ ಹಿಗ್ಗಿ
ಖುರಪುಟಧ್ವನಿಗೈದು, ಕಾಡೆ ಕೆನೆವಂದದಲಿ
ಹೇಷಾರವಂಗೈದು, ತನ್ನ ಗಂಡಸುತನಕೆ
ಪೇಸಿದಳ್ ತಾನೆ ಚಿತ್ರಾಂಗದೆ. ಪರಾಕ್ರಮಂ
ಮುದ್ರಿಸಿದ ತನ್ನಂಗವಟ್ಟವ ಜುಗುಪ್ಸೆಯಿಂ-
ದೀಕ್ಷಿಸಿ, ನಿರಾಯುಧ ಲತಾಂಗಿಯರ ಲಾವಣ್ಯ
ವಿಕ್ರಮವನಬಲಾ ಮಹಾಬಲವನುರೆ ಹಾರಿ,
ಚೈತ್ರವಾಹಿನಿ ಬರುತಲಿರೆ ಕಾಣಿಸಿತು ಮುಂದೆ
ಕಣಿವೆಯಗಲಕೆ ಹಬ್ಬಿ ಪಾಳೆಯಂ: ತರತರದ
ವರ್ಣಂಗಳಿಂದೆಸೆವ ಪಟಗೃಹದ ಪಂಕ್ತಿಯಿಂ,
ಶುಷ್ಕ ತೃಣ ಪರ್ಣ ವಿರಚಿತ ಕುಟೀರಾಳಿಯಿಂ,
ವಿಜಯ ಚಿಹ್ನೆಯ ಪತಾಕಾಧ್ವಜ ಪ್ರಸರದಿಂ,
ತಳಿರಿಡಿದ ಮಂಗಳದ ಗುಡಿ ತೋರಣಂಗಳಿಂ,
ಅಲ್ಲಲ್ಲಿ ಪಾಕಾಗ್ನಿಯಿಂ ಪೊಣ್ಮಿ ನಭಕೇಳ್ವ
ಧೂಮ ವಿನ್ಯಾಸಂಗಳಿಂ, ಸಮರ ವಿಶ್ರಾಂತ

ಸೈನಿಕರ ಹರ್ಷಪ್ರದರ್ಶನದ ಘೋಷದಿಂ,
ಜಯಗಾನದಿಂ, ಹಾಸ್ಯ ಪರಿಹಾಸ್ಯ ಶಬ್ದದಿಂ,
ಹಟ್ಟಿಯಿಂದುಣ್ಮಿಬಹ ರಣವಾಜಿದಂತಿಗಳ
ಹೇಷಾರವಂಗಳಿಂ ಬೃಂಹಿತಧ್ವನಿಗಳಿಂ,
ಜಯಮತ್ತ ಡಿಂಡಿಮಧ್ವಾನಂಗಳಿಂ, ಮುಂದೆ
ರಣಶಿಬಿರಮೆಸೆದತ್ತು ಬಲು ಕಳಕಳತೆವೆತ್ತು
ಚಲನಮಯ ನಾದಮಯ ಜೀವಮಯವಾಗಿರ್ಪ
ಚಿತ್ರಗತ ಪತ್ತನದ ವಿಸ್ತೃತ ವಿಲಾಸದಿಂದೆ!
　　ಪಾಳೆಯದ ಹೆಬ್ಬಾಗಿಲಲಿ ತನ್ನನಿದಿರ್ಗೊಂಡು
ಸಂತೋಷದಿಂ ಸ್ವಾಗತವನಿತ್ತು ವಂದಿಸಿದ
ಸಾಮಂತ ಸೇನಾನಿ ಮನ್ನೆಯರ ಮನ್ನಿಸುತೆ
ಉಚಿತ ವಚನದಲಿ, ಹೋದಿರುಳು ತಾಂ ಬಾರದಿರೆ
ಉಬ್ಬೆಗಂಬಡುತಿರ್ದರಿಗೆ ನೆವವನೊರೆಯುತ್ತೆ
ಮಿತಭಾಷೆಯಲಿ, ಉದಾಸೀನದಿಂ ಬೀಳ್ಕೊಂಡು,
ತನ್ನ ಬೀಡಾರದೆಡೆ ಆ ಮಹಾಪ್ರಾಣಿಯಿಂ
ಭೂತಲಕ್ಕವತರಿಸಿ, ಕಿಂಕರನ ಕೈಗಿತ್ತು
ಕಾಂಚನ ಕಟಕ ಖಲೀನಾಗ್ರಮಂ, ಕೈಕೊಳುತೆ
ಕನ್ನೆಯರ ಕೈಂಕರ್ಯಮಂ ಪೊಕ್ಕಳಾ ರಾಜ್ಞಿ
ಭರ್ಮ ಕರ್ಮಂಗೈದ ರಮ್ಯ ಪಟ ಹರ್ಮ್ಯಮಂ.
　　ವರುಣ ದಿಙ್ನಗರಿಯಿಂ ನಡೆದು ಪೊಳ್ತರೆಯಿಂದೆ
ನೆಳಲೆಂಬ ದಿವಸ ಯಾತ್ರಿಕನು ಮಧ್ಯಾಹ್ನದಲಿ
ಬಿಸಿಲ ಬೇಗೆಗೆ ಬಿಗುರ್ತು, ತರುತಲವನ್ನಾಶ್ರಯಿಸಿ
ವಿಶ್ರಮಿಸಿಕೊಂಡೆಳ್ದು ಮುಂದೆಸೆಗೆ ಚಲಿಸುತಿರೆ
ಶಕ್ರದಿಕ್ಚಕ್ರಾಭಿಮುಖಮಾಗಿ, ಮಣಲೂರ
ರಾಜನಂದಿನಿ ತನ್ನ ನಚ್ಚಿನ ಪಸಾಯಿತೆಗೆ
ಬೆಸಸಲಿಕ್ಕಟಿ ಕರೆದು `ಪೆಣ್ತನಕೆ ತಗುವಂತೆ ಮೇಣ್
ಚೆಲ್ವರಳುವಂತೆನ್ನ ಪಸದನಂಗೈ' ಎಂದು,
ಶೃಂಗಾರಗೈದಳಾ ಆಳಿ ಅಚ್ಚರಿವಡುತೆ
ತನ್ನೊಡತಿಯತಿವಿಶೇಷಾಕಾಂಕ್ಷೆಗೆಃ ಕುಮಾರಿ
ವೀರತನವನು ಕುರಿತ ಗಂಡುಡುಗೆಯನು ಕಳೆದು,
ಶೈವಾಲವಾವರಿಸಿದೆಳೆಯ ತಾವರೆಯಂತೆ

ಚಾರು ಭೀರುತೆ ಮೆರೆಯೆ ನಾರಿಯ ದುಕೂಲಮಂ
ತಳೆದು, ಹೊಂಬಳೆಗಳನು ಕೈಗೆ, ಕಿಂಕಿಣಿಗಾನ
ಗೈವ ಮಣಿನೂಪುರಗಳನು ಕಾಲ್ಗೆ: ನಡುವಿಂಗೆ,
ತೋಯದಾಂಬರ ಶೋಭಿತಾಂತರಿಕ್ಷದ ಲಕ್ಷ್ಮಿ
ಕಟಿವಲಯದಿಂದ್ರಧನು ರಶನದಿಂದೆಸೆವಂತೆ,
ರಮಣೀಯ ರತ್ನಮಯಕಾಂಚನದ ಕಾಂಚಿಯಂ
ತೊಟ್ಟು; ಮುಕ್ತಾವಳಿಯನಳವಡಿಸಿ ಗ್ರೀವಕ್ಕೆ;
ಶರದುದಯ ರವಿ ರುಕ್ಮ ರುಚಿಯಿಂದೆ ಶತಪತ್ರ
ಪತ್ರಾಗ್ರದಂಬು ಬಿಂದು ವಿರಾಜಿಪಂತೆ, ಕಿವಿ
ತನಿಮುತ್ತುಗಳಿನೊಪ್ಪೆ; ಕಗ್ಗತ್ತಲೆಯ ರಾತ್ರಿ
ನಕ್ಷತ್ರಮಾಲೆಯಿಂ ಮೆರೆವಂತೆ, ಮೇಣುಷೆಯ
ಭಾಳದಲಿ 'ಬೆಳ್ಳಿ'ಯೊಂದೆಯೆ ಮಿರುಗುವಂದದಲಿ,
ಕುಂತಲವನಲರಿಂದಲಂಕರಿಸಿ, ಹಣೆಯಲ್ಲಿ
ಚಂದ್ರಕುಂಕುಮ ಬಿಂದುವನ್ನಿಟ್ಟು—ಮೆರೆದಳಾ
ಪಾರ್ಥಿವ ಕುಮಾರಿ, ಶಿಶಿರವನುಳಿದ ಬನದಸಿರಿ
ಸುಂದರ ವಸಂತಮಂ ತಳೆದು ರಾರಾಜಿಪೋಲ್!
    ರನ್ನಗನ್ನಡಿಯಲ್ಲಿ ತನ್ನ ಪಡಿನೆಳಲೊಗೆಯೆ
ಕನ್ನೆ ಮೊಗದಲಿ ನಗೆಯ ಮುಗುಳರಳಿ ಮಲರಾಯ್ತು;
ತನ್ನ ಚೆಲುವಿಗೆ ತಾನೆ ಚೆನ್ನೆ ಸೋಜಿಗವಟ್ಟು
ಆಲಿಸಿದಳಚ್ಚರಿಯ ಕಣ್ಣಾಲಿಗಳ್ ನಟ್ಟು!
ಮರೆತಳು ಪಸಾಯಿತೆಯ ಬಳಿಯಿರ್ಪುದಂ. ಮತ್ತೆ
ಹೆರರೆದುರ್ ಸ್ವಪ್ರಶಂಸೆಯ ಹೀನತೆಯನಿನಿತು
ಲೆಕ್ಕಿಸದೆ ನೋಡುತಿರ್ದಳು ಕನ್ನೆ ತನ್ನ ತಾಂ
ತನಗೆ ತಾನನ್ಯವೋಲ್! ಮೊಗಂ ಕೆನ್ನೆ ಕಿವಿ ಕಣ್ಣು
ಹುಬ್ಬು ಚೆಂದುಟಿ ಬಾಯ್ ಎಸಳ್‌ಮೂಗು ಹಣೆ ಕುರುಳ್
ಹೆದೆಯೇರಿದಂಗಜನ ಬಿಲ್ಗೊಂಕಿನುಪಮೆಯೆದೆ
ಒಂದೊಂದುಮಂ ನೋಡಿ ನೋಡಿ ಹಿಗ್ಗಿದಳಾಕೆ
ಕನ್ನಡಿಯನಾಲಂಗಿಸುವ ಚುಂಬಿಸುವ ಬಗೆಯ
ಬಿಗಿಹಿಡಿದು ತಡೆದು! ಸಿರಿವೆಣ್ಣಿಗಿನಿಯನ ಜಯಿಸೆ
ಚೆಲುವಿನಲಗೊಂದಿರಲ್ ಬೇರೆ ಕೂರಂಬೇಕೆ?
ಚೆಲುವಿಗೆಲ್ಲೆಡೆ ಗೆಲ್ಲ! ಸೋಲುಂಟೆ ಪೇಳ್? ಯತಿವೇಷಿ

ಪಾರ್ಥದೇವನನಿಂದು ಕಯ್ದುವಿಲ್ಲದ ಕದನ
ಕಲೆಯಿಂದೆ ಗೆಲ್ದಪೆನ್ ತಾನೆಂಬ ಪೆರ್ಮೆಯಿಂ
ಚೈತ್ರವಾಹಿನಿ ತನ್ನನಾರುಮನುಸರಿಸದೊಲ್
ಕಟ್ಟಾಣತಿಯನಿತ್ತು ಪಾಳೆಯವ ಪೊರಮಡುತೆ
ಕಾಡಿನಾ ಗುಡಿಯೆಡೆಗೆ ನಡೆತಂದಳೇಕಾಂಗಿನಿ.
   ಹೊಂಗದಿರ ಜೀರ್ಕೊಳವಿಯಿಂ ಸಂಜೆ ಜಿರ್ರೆಂದು
ರಂಗೆರಚಿ, ವಿಪಿನ ಛಾಯಾಂಧತೆಯೊಳಲ್ಲಲ್ಲಿ
ಕೆಂಬಿಸಿಲ್ ಕೋಲು ಕೋಲಾಗಿ ತರು ತರು ಮಧ್ಯೆ
ತೂರಿ ಬಂದೆಸೆದತ್ತು, ಕನ್ನೆಳಲ ಪಸಲೆಯಲಿ
ಹೊನ್ನೀರ ಮಳೆಹೊಯ್ಯಲಲ್ಲಲ್ಲಿ ನೀರುಗಳ್
ಸಣ್ಣ ಸಣ್ಣಗೆ ತಂಗಿ ಮಿರುಗುವಂತೆ. ಮೃದುಗಾಳಿ
ತೀಡಿತ್ತು ಮರಗಳಲಿ ಮರ್ಮರ ಧ್ವನಿಮಾಡಿ;
ಗೂಡಿಂಗೆ ಗೊತ್ತು ಕೂರಲು ಹೋಹ ಪಿಕಳಾರಿ
ಕಾಮಳ್ಳಿ ಗಿಳಿಗಳುಲಿ ಕೇಳಿಸಿತ್ತಿಂಪಾಗಿ
ಕಾನನದ ವಿಜನ ನೀರವದಿ.  ರಾಜಕುಮಾರಿ
ಬನದೊಳಲ್ಲಲ್ಲಲೆದು, ನಿಂತಾಲಿಸುತೆ, ಮರಳಿ
ಮುಂಬರಿದು ಹಾರಯಿಸಿ ನಿಡುನೋಟವಟ್ಟುತ್ತೆ,
ಮೇಣೊರ್ಮೆ ಬಳ್ಳಿಹೊದರನೆ ಕುಟೀರಂಗೆತ್ತು
ತಲ್ಲಣಿಸಿ ಮುಂ ನಡೆದು, ತಪ್ಪನರಿಯುತೆ ನಾಚಿ,
ಸವ್ಯಸಾಚಿಯನರಸುತಿರೆ ಕಳ್ತಲೆಯ ಪೊನಲ್
ರಯ್ಯನೊಯ್ಯನೆ ಪರಿದು ಬಂದಾವರಿಸಿತಿಳೆಯ.
ಒಡನೊಡನೆ ಪೂರ್ವದ ಸುದೂರದ ದಿಗಂತದೆಡೆ
ಕತ್ತಲೆಯ ಕಾಡಿನಂಚಿಗೆ ಬೆಂಕಿ ಹೊತ್ತಿತೆನೆ,
ಹೊನ್ನಿನುರಿ ಹೊಮ್ಮಿ, ತಣ್ಣಗೆ ಹಬ್ಬಿ, ಹುಣ್ಣಿಮೆಯ
ಉಣ್ಣೆಮುಗಿಲಿನ ಹಾಸುಹೊಕ್ಕಿನೊಳ್ ಜೊನ್ನಸರಿ
ಪ್ರವಹಿಸಿತು.  ನೋಡುತಿರೆಯಿರೆ ಕಣ್ಣನೋಟದೊಳೆ
ಗೋಚರಿಸಿತಮೃತಕಿರಣನ ಕನಕಮಂಡಳಂ,
ಮಿಸುನಿಯೊಳ್ ತೇದ ಹಾಲಿನ ಮಳೆಯ ದೆಸೆದೆಸೆಗೆ
ಚೆಲ್ಲಿ. ಹಿಮರೋಚಿಯಂಬುಧಿ ವೀಚಿಗಳ ಮೇಲೆ
ತೇಲಿತು ಜಗತ್ತು ರಜನಿಯ ಸುಧಾ ಸ್ವಪ್ನದಲಿ.
ಬೆಳ್ದಿಂಗಳಿಂಗಡಲ ಹೊನ್‌ಜೊನ್ನದಲೆಗಳೆಡೆ

ಒಮ್ಮೆಯಾಸೆಯ ಪಿಂಚೆಯೌನ್ನತ್ಯದಲಿ, ಒಮ್ಮೆ
ನೈರಾಶ್ಯಕಂದರದ ನಿಮ್ನತೆಯೊಳೇರಿಳಿದು
ತೇಂಕಾಡಿದತ್ತಹಾ ಪ್ರೇಮ ಕಾತರ ಪೂರ್ಣ
ರಾಕೆಯ ಹೃದಯನೌಕೆ! ಕಾಮಿನಿ ಕಿರೀಟಿಯಂ
ಇಂತರಸಿ ಅಲೆಯುತಿರೆ, ದೂರ ಮರಗತ್ತಲೆಯ
ರಕ್ಕಸಿಯ ಉರಿವ ಕಣ್ಣೆಂಬಂತೆ ರಂಜಿಸಿದೆ, ಕಾಣ್,
ಉರಿನಾಲಗೆಯ ನಾಟ್ಯದಿಂ ನಲಿವ ಕೆಂಬೆಂಕೆ:
ಶರಧಿ ಪರಿವೃತ ಧರಾಮಂಡಲವ ಸುತ್ತಿ ತಾಂ
ಪೊಸದೇಶಗಳ ಕಂಡುಹಿಡಿವೆನೆಂಬುಲ್ಲಸದಿ
ಸಾಹಸದ ನಾವಿಕಂ ತನ್ನ ಹಡಗಿನ ಪಡೆಯ
ಕೂಡಿ ತೊಡಗುವನು ಪಾರಾವಾರ ಯಾತ್ರೆಯಂ,
ಬೀಸಿಬಹ ಪವಮಾನಹತಿಗುರ್ಬಿ ಪಟಗೆದರಿ
ಆ ಭೈತ್ರವಂಬುಧಿಯ ಗಂಭೀರ ವಿಸ್ತರದ
ವೇಲಾ ವಿಹೀನತೆಯ ನೀಲ ಕೀಲಾಲದಲಿ
ತೇಲಿ ಪಯಣಂಗೈದು ಮುಂಬರಿದು ದಿನ ದಿನಕೆ
ದೂರ ದೂರವನೈದುವುದು. ಕರ್ಣಧಾರನದೊ
ದಿನ ದಿನಂ ಕೂಪಕದ ತುದಿಗೇರಿ, ಪೊಸನಾಡು
ಕಣ್ಗೆ ಬಿಳ್ದಪುದೆಂಬ ಹಾರೈಕೆಯಿಂ ನೋಡಿ
ನೋಡಿ ಬಳಲ್ವನ್ನೆಗಂ ದಿಟ್ಟಿ, ಕೆಳಗಿಳಿದು ಬರೆ,
ಕೇಳ್ದಪರ್ ಪಡೆಯ ಜನರವನ ಸುತ್ತುಂ ಮುತ್ತಿ.
ನುಡಿವನೆಂದಿನವೋಲೆ—ಮೇಲೆ ನೀಲಾಕಾಶ,
ಕೆಳಗೆ ನೀಲಾಂಬುನಿಧಿ, ನೆಲನ ಕುರುಹಿಲ್ಲೆಂದು!
ಇಂತು ದಿನಗಳ್ ಕಳೆದು, ಪಕ್ಷಪಕ್ಷಗಳುರುಳಿ,
ಮಾಸ ಮಾಸಗಳಾಗಿ ಹೋಗುತಿರಲಾಹಾರ
ಸಾಮಗ್ರಿ ಕೊನೆಮುಟ್ಟಿ ಬರೆ, ತಲ್ಲಣದಿ ಮಂದಿ
ಬೇಸರಿಂದಾಸರಿಂದಳಿವೆವೆಂಬಳ್ಕಿನಿಂ
ಹಡಗಿನೊಡೆಯನ ಮೇಲೆ ಕನಲ್ದಪರ್, ಮೇಣವಂ
ಪಿಂತಿರುಗಲೊಪ್ಪದಿರಲಣಿಮಾಡುವರ್ ಕ್ರಾಂತಿಗೆ!
ಭೀತ ನೌಕಾಸ್ವಾಮಿ ಭಗವಂತನಂ ಬೇಡಿ,
ನೋಡೆ ದಿಙ್ಮೇಖಲಾವಲಯಮಂ, ಭೊಂಕನೆಯೆ
ಕಂಗೆಸೆವುದೊಂದು ಭೂಭಾಗವತಿದೂರದಲಿ,

ಮಂಜು ಮಸುಕಾಗಿ, ಗಗನಾಂಬುಧಿಯ ತೀರದಲಿ,
ಸ್ವರ್ಗದಧರಂ ಮರ್ತ್ಯದಧರಮಂ ಚುಂಬಿಸುವ
ತಾಣದಲಿ! ಮೈಮರೆವನಾನಂದದಿಂ; ಕೂಗಿ
ಕರೆವನಾ ತನ್ನ ಹಡಗಿನ ಪಡೆಯ ಮಂದಿಯಂ;
ಹರ್ಷದ ಕೃತಜ್ಞತೆಯಿನಿಳಿಯುತಿರೆ ಕಣ್ಣೀರು,
ತೋರ್ದಪಂ ಮಾತನುಳಿದೆಲ್ಲರ್ಗೆ ತಾಂ ಕಂಡ
ಕಾಣ್ಕೆಯಂ, ಪಡಗು ಪಡೆ ಸಂತಸದಿಂದೆ ಹುಚ್ಚೆದ್ದು
ಕಡಲ ಮೊರೆವೆರಸಿ ಗೆಲುವಿನ ದನಿಗಳೇಳುತಿರೆ,
ಬೇಗ ಬೇಗನೆ-ಬೇಗಿ ನೂಂಕುವನು ನಾವೆಯಂ
ತಾಂ ದಿಗಂತದೆಡೆ ಸಂದರ್ಶಿಸಿದ ವೇಲಾವನಿಯ
ಕಡೆಗೆ!

ಅಂತಾಶೆಯಿಂದುಬ್ಬುತಾಶಂಕೆಯಿಂ
ಕಳವಳಿಸಿ, ಕತ್ತಲೆಯ ರಕ್ತನಾಲಗೆಯಂತೆ
ನರ್ತಿಸುವುರಿಯ ಕುರಿತು, ನಡೆದಳಾ ಚಿತ್ರಾಂಗದೆ.
ಸಾರೆ ಬರೆ ಬರಲನಲ ಪರಿವೇಷ ವಳಯದೊಳ್
ಕಂಡುದರ್ಜುನನ ಯತಿಮೂರ್ತಿ, ಮಾಗಿಯ ಮಂಜು
ಕವಿದ ಪ್ರಾತಃಕಾಲದಿನಬಿಂಬದೊಲ್, ಮಸುಳಿ
ರಜನಿಯ ತಮಿಸ್ರದಿಂದೆ. ಆ ಪೊಳ್ತಿನಂಬರಂ
ಪೌರುಷದ ರೂಕ್ಷಣ ಧನುರ್ವಿದ್ಯೆಯಲ್ಲದೆಯೆ
ಲಲನಾ ಸಹಜ ರತಿಕಲಾಭ್ಯಾಸವಿನಿತಿರದ
ಆ ಚೈತ್ರವಾಹಿನಿ ಕಿರೀಟಿಯೆಡೆಗೈದಿದಳ್,
ವರನೆಡೆಗೆ ವೈಯಾರದಿಂದೈದುವಂಗನೆಯ
ಪಾಂಗಿನಿಂದಲ್ತು, ವಿದ್ವೇಷಿಯಂ ಸಂಹರಿಸೆ
ವಿಜಯ ದೃಢನಿಶ್ಚಯದಿ ಬಿಂಕದಿಂ ಮುಂಬರಿವ
ಕಲಿಯ ವಿಕ್ರಮ ಗಮನ ವಿನ್ಯಾಸಮಂ ಮೆರೆದು.
ಪುರುಷೊನೊಲ್ಮೆಯನಾಕೆ ವೈರಿಯನೆ ಗೆಲುವಂತೆ
ಬಲದಿನಾಕ್ರಮಿಸಿ ಗೆಲೆ ಭಾವಿಸಿದಳಜ್ಞಾನದಿ.
ನಾರಿ ಬಳಿಸಾರಿ ಬರೆ, ಯತಿವೀರನಾಲಿಸುತೆ
ಶುಷ್ಕ ಪತ್ರದ ಮರ್ಮರ ಧ್ವನಿಯನೊಂದಿನಿತು
ಕೌತುಕದಿ ಕೊರಲೆತ್ತಿ ನೋಡುತಿರೆ, ಕಾಣಿಸಿತು
ಹತ್ತಿರೆ ನಮಸ್ಕಾರಮಂ ನುಡಿದು ಬರುತಿರ್ದ

ಸ್ತ್ರೀಯಾಕೃತಿ. ಸೆಟೆಯೊ ಕಪಟವೊ ದಿಟವೊ ಮಾನವಿಯೊ
ಮೋಹಿನಿಯೊ ರಕ್ಕಸಿಯೊ ಎಂಬ ಶಂಕೆಯಿನೊಡನೆ
ಚೆಚ್ಚರಿಂದೆಚ್ಚರಿಕೆಯಿಂ ಕೇಳ್ದನಿಂತೆಂದು:
"ಆರು ನೀನೆಲೆ ತರುಣಿ? ಈ ರಾತ್ರಿ, ಈ ಘೋರ
ವಿಪಿನದೊಳ್ ನಕ್ತಂಚರಿಯವೋಲ್ ಅದೇಕಿಂತು
ಸುತ್ತುತಿಹೆ? ಕೋಳ್ಮಿಗಗಳಲೆವ ಪೊಳ್ತಿದು; ಪೆಣ್
ನೀನಾಗಿಯುಂ ಇನಿತಳುಕದೆಯೆ ಇರುಳನಲೆಯುತಿಹೆ?
ಮಾನವ ಸ್ತ್ರೀಯರ್ಗೆ ಈ ಬಾಳ್ಕೆ ಸೋಜಿಗಂ!
ಮೇಣ್ ಸದ್ವಂಶಜಾತರಿಗೆ ತಾಂ ತಗುವುದಲ್ತು!"
ಮಾರ್ನುಡಿದಳಿಂತವಳ್: "ನಿನ್ನನ್ನರಿರೆ, ಯತಿವೀರ,
ಕಾಡೆ ತಾನಾದಪುದು ನಾಡಿಗಿಂತಲು ಮಿಗಿಲ್
ಸುಕ್ಷೇಮತರಮಾಗಿ: ದಿವಮಾದಪುದು ರಾತ್ರಿ ತಾಂ:
ಭಯಮೆ ತಾನಹುದುಲ್ಲಸಂ; ನಕ್ತಂಚರತೆ ತಾನೆ
ನಿರ್ಮಲ ಪ್ರೇಮಯಾತ್ರೆಗೆ ಸಮಂ! ಪ್ರಣಯಾಗ್ನಿ
ಎದೆಯನಾವರಿಸೆ ಕತ್ತಲೆಯಿಹುದೆ ಕಂಗಳಿಗೆ?
ಒಲುಮೆಗಿಚ್ಚಿನ ಕೆಚ್ಚನಿದಿರೊಳೇವುದು ಭೀತಿ? ಮೇಣ್
ನಿನ್ನೆಡೆಯೊಳಾನಿರೆ ಕುಲೀನತೆಗೆ ಕುಂದಿಹುದೆ?
ಪಿರಿಯದೊಂದಾಸೆಯುರಿ ಬಗೆಗೆ ತಗುಲಿರೆ ಬಂದೆ;
ನೀನದಕೆ ಗುರಿ! ಕೌತುಕಕೆ ಬೆಚ್ಚದಿರ್ ಬರಿದೆ,
ವೀರ ಯತಿ. ಇಂದು ಬೆಳಗುಂಬೊಳ್ತು ಬಳಿಯಿರ್ಪ
ದೀರ್ಘ ವಿಸ್ತೃತ ದೀರ್ಘಿಕೆಯ ದಡದೆ ತಿರುಗಾಡೆ
ಬಂದಿರ್ದ ನನ್ನಗ್ರಜಂ ನಿನ್ನನರುಹಿದನ್
ನನಗೆ. ಯತಿವೇಷದಿಂದೆನ್ನಾಸೆಯರ್ಜುನನೆ,
ಪ್ರೇಮದ ತಪಸ್ಸೆ ಸಾಕ್ಷಾತ್ಕರಣವೆತ್ತಂತೆ,
ಇಲ್ಲಿಗೈತಂದುದನ್ ಕೇಳ್ದೊಡೆನ್ನಿಚ್ಛೆಲತೆ
ದಾಂಗುಡಿವರಿದು ಬಂದಿಹುದು ನಿನ್ನಡಿಗಳೆಡೆಗೆ.
ವೀರ ಅರ್ಜುನದೇವ, ಅಪರಿಚಿತೆಯಾದೊಡಂ
ನಿನ್ನ ಪ್ರೇಯಸಿ ನಾನು. ಪ್ರಣಯ ಭಿಕ್ಷೆಯೆ ಬೇಡಿ
ಬಂದೆ ನಾಂ; ಸುಂದರನೆ, ದಯೆಗೈ, ಕರುಣಿಸೆನಗೆ."
    ಧೀರಾಂಗನೆಯ ಧೈರ್ಯದಾಲಾಪಮಂ ಕೇಳ್ದು
ಹೊಮ್ಮಿದುದು ಕಿರುನಗೆ ಕಿರೀಟಿಯ ಮುಖಾಂಬುಜದಿ.

ಸಂಕೋಚವೇನೆಂಬುದನೆ ತಿಳಿಯದವಳಂತೆ
ನಿಂತಿರ್ದವಳ ಪುರುಷಭಂಗಿಯಂ ನಿಡಿದಾಗಿ
ದೃಷ್ಟಿಸುತೆ "ಸಾಹಸಿ, ಕಿರಾತ ಕನ್ಯೆ!", ಎನ್ನುತಿರೆ,
"ಅಲ್ತಲ್ತು!" ಎಲೆ ಲಲನೆ, "ಅಲ್ಲದಿರೆ ವರ್ತಿಪರೆ
ನಾಗರಿಕರೀ ರೀತಿ ಪ್ರಣಯ ಪ್ರಸಂಗದಲಿ?
ಮೇಣದಂತಿರ್ಕೆ, ನೀಂ ಬಂದ ಬಟ್ಟೆಯೊಳೆ ತೆರಳ್
ಕ್ಷೇಮದಿಂ. ಮುನಿಯದಿರ್; ನಿಷ್ಕರುಣಿ ಎನ್ನದಿರ್,
ಬನವೆಣ್ಣೆ. ನಾನರ್ಜುನನೆ ದಿಟಂ. ಕ್ಷೇತ್ರದಿಂ
ಕ್ಷೇತ್ರಕ್ಕೆ ಕಾರಣಾಂತರದಿಂದೆ ಭೂಯಾತ್ರೆ
ಗೈಯುತಿಹೆ ಬ್ರಹ್ಮಚರ್ಯವ್ರತವ ಕೈಕೊಂಡು,
ಯತಿವೇಷವನೆ ಧರಿಸಿ. ನೋಂಪಿಯಳಿದಲ್ಲದೆಯೆ
ಸಲ್ಲದೌ ನಿನ್ನ ಬಯಕೆಯ ಸಿದ್ಧಿ.—ನೋಂಪಿಯಾ
ಮಾತಿರಲಿ; ಬನವೆಣ್ಣೆ, ನಿನ್ನೊಳೇನಿದೆ ಎನಗೆ
ಎಣೆಯಾಗಿ? ಮೇಣೆನ್ನರ್ದೆಗೆ ಹೂವುಗಣೆಯಾಗಿ?
ನೀನಾವ ಪಾರ್ಥಿವ ಕುಲಾಂಬುಧಿಯ ಕಡೆಹದಲಿ
ಮೂಡಿರುವ ಕೌಸ್ತುಭಂ? ಮೇಣ್ ನಿನಗದೇನಿಹುದೊ
ಸೌಂದರ್ಯ ಸಂಪದಂ? ಬಿತ್ತರದ ಲೋಕದೊಳ್
ಕೇವಲ ಕನಿಷ್ಠರೆನೆ ನಿನಗಿಂತಲುತ್ತಮರ್!"
ಎನುತಿರೆ ಧನಂಜಯಂ, ಚಿತ್ರಾಂಗದೆಯ ಮಾನ
ಹೊತ್ತಿದುದು ಕಿಡಿದೋರಿ. ಕೋಪ ಪ್ರದರ್ಶನಂ
ಪೌರುಷಕೆ ಕುರುಹೆಂದು ಬೆದರಿ, ಕಂಬನಿಗರೆದು,
ಸೋಲ್ತೊಮ್ಮೆ ಗೆಲ್ದಳಾಕೆ! ಸ್ತ್ರೀಯ ಸಹಜೈಶ್ವರ್ಯ
ದೇಸಿ ತಾನಿಲ್ಲದಿರೆ ತನ್ನ ವಂಶವನರುಹಿ
ಕುಲಕೆ ಮೇಣವಹೇಳನಂಗೈದು ಫಲವೇನು?
ಎನುತಾಕೆ ಪ್ರಣಯಭಂಗಕೆ ಕಟುತಿರಸ್ಕೃತಿಗೆ
ಮನನೊಂದು, ಶೋಕಭಾರಕೆ ಕುಸಿದು, ಪೊಸೆದೆಸೆದ
ಸುಗ್ಗಿ ಮೊಗ್ಗೆಯ ತೆರದಿ ಮೊಗಂ ಕಂದಿ, ಮೌನದಲಿ
ಹಿಂದಿರುಗಿದಳು ಬನದ ನಡುವಣ ಶಿವನ ಗುಡಿಗೆ.

ಶೂನ್ಯತೆ ಹಠಾತ್ತಾಗಿ ತುಂಬಿದುದು ಹೃದಯಮಂ;
ಶುಷ್ಕ ನಿಷ್ಫಲಮಾಗಿ ತೋರ್ದುದು ಜಗತ್ತು; ನಿಶೆ,
ಪೂರ್ಣಿಮಾ ಜ್ಯೋತ್ಸ್ನಾ ಸುಧೌತಾಂಬರವನುಟ್ಟ

ಮಧುರ ನಿಶೆ, ವಿಧುರಮಾಗೆಸೆದತ್ತು; ಹೊಸದಾಗಿ
ತಾನುಟ್ಟುಡುಗೆ ತೊಡುಗೆಗಳೆ ಸೆರೆಯ ಹೊರೆಯಾಗಿ
ಸುತ್ತಿಬಿಗಿದುವು ಶೃಂಖಲೆಯ ಭಾರದಂತೆವೋಲ್
ಚಿತ್ರಾಂಗದೆಯ ಗಾತ್ರಮಂ. ಹೇಸಿದಳು ರಮಣಿ
ತನ್ನವಸ್ಥೆಗೆ ತಾನೆ. ನೆಲದ ಸಿರಿ, ಬಿಲ್ಬಿಜ್ಜೆ,
ಮೈಬಲ್ಮೆ, ರಣಕೀರ್ತಿ, ಮೇಣ್ ಅರಸುಕುವರಿಯತನಂ
ತೃಣವಾಗಿ ಋಣವಾಗಿ ಕಾಣಿಸಿದುವಬಲೆಯರ
ಗುಣವಾದ ಫಲ್ಗುಣನ ಮೋಹಿಸುವ ವಲ್ಗುತೆಯ
ಮುಂದೆ. ಮೆಯ್ಗದರಿಕೊಂಡತಿರ್ದ ನಗಗಳಂ
ತೆಗೆದೊಗೆದು, ದೇಗುಲದ ಜಗಲಿಯೊಳೆ ದಿಂಡುರುಳಿ,
ಮದನಹರನಿದಿರಿನಲಿ ಕೈಮುಗಿದು ಮೈಚಾಚಿ
ಬೇಡಿದಳ್ ಮದನ ಕೃಪೆಯಂ ನಾರಿ, ತುಂಬೆದೆಯ
ಭಕ್ತಿಯಿಂದುತ್ಕಂಠಿತಾತ್ಮದಾಕಾಂಕ್ಷೆಯಿಂದೆ.
ಮಾತುಗಳನೊರೆಯಲಿಲ್ಲಾಕೆಃ ಎದೆ ತುಂಬಿರಲ್
ತಾವೆಲ್ಲಿ ನುಡಿಗಳಿಗೆ? ವಾಕ್ ಸೀಮೆಯಂ ದಾಂಟುತಾ
ಮಹಾಕಾಂಕ್ಷೆಯ ಮಹತ್ತರ ಪ್ರಾರ್ಥನಾಹ್ರದಂ
ದೀರ್ಘ ಭಾವ ಪ್ರವಾಹದ ಮೌನಮಾತ್ರದಲಿ
ಪರಿಣಮಿಸಿದತ್ತು! ಇಂತಿರೆ ತಪೋನಿದ್ರೆಯೊಳ್,
ಸ್ವಪ್ನವೊ ದರ್ಶನವೊ ಮೇಣ್ ಸ್ವಪ್ನದರ್ಶನವೊ
ಹೇಳಬಲ್ಲವರಾರು? ನಾರಿ ಕಂಡಳು ಕಣ್ಣ
ಕತ್ತಲೆಯ ಕೊಲೆಗೈವ ಕಾಂತಿ ಪ್ರವಾಹಮಂ.
ತನ್ಮಧ್ಯೆ, ಮುಗಿಲಿನೆಡೆ ಮಳೆಬಿಲ್ಲೆಸೆಯುವಂತೆ,
ರಾಜಿಸಿತು ಮಧುರ ಮದನನ ಮೂರ್ತಿ, ಚೆಲ್ವಾಂತ
ವದನ ಹಾಸದಿ ಮಧುವಿಲಾಸಮಂ ಬಿಂಬಿಸುತೆ
ಪುಣ್ಯ ಪ್ರಸನ್ನತೆಯಲಿ. ಯೌವನದ ಕಂಗಳಿಗೆ
ಮನ್ಮಥನಪರಿಚಿತನೆ? ಬಂಡುಣಿಗೆ ತಾವರೆಯ
ಹೃದಯಕಳಶದ ಜೇನಿನೌತಣಕೆ ಕರೆ ಬೇಕೆ?
ರಸದ ಬಿಣ್ಪಂ ಬೀಗಿ, ಬಸಿರ ಭಾರಕೆ ಬಾಗಿ,
ಪಶ್ಚಿಮ ದಿಗಂತದಿಂ ಗಂಭೀರ ಗತಿಯಿಂದೆ
ಮಿಂಚೆಸೆದು ಮೊಳಗುತ್ತೆ ಮಲೆಯ ಬನಗಳ ಮೇಲಿ
ನೀರೊಡಲ ಕಾರ್ಮುಗಿಲು ಕರ್ರಗುಬ್ಬುತ ಹಬ್ಬಿ

ತೇಲಿ ಬರೆ ಕಂಡದಂ ಸೋಗೆ ನವಿಲುನ್ಮದದಿ
ಗರಿಗಣ್ಗಳಂ ಕೆದರುತಟ್ಟಹಾಸದಿ ಕೇಗಿ,
ವರ್ಷಾಗಮನಕುರ್ಬಿ ನರ್ತನಂಗೈವಂತೆ
ಚಿತ್ರಾಂಗದೆಯ ಹೃದಯ ನಲಿದುಲಿದು ನರ್ತಿಸಿತು
ಭಾವಜನ ಸಂದರ್ಶಿಸಿ. ಸಂಭಾಷಿಸಿದಳಿಂತು:
"ದೇವಮೂರ್ತಿಯೆ ನಮೋ! ಪಂಚಬಾಣನೆ ನೀನು?
ರತಿರಮಣನಲ್ಲದಿರೆ ನನ್ನೆದೆ ಅದೇಕಿಂತು
ಚಿರಬಂಧು ಸಂದರ್ಶನದಿ ನಲಿಯುವಂದದಲಿ,
ಹೂವಿನೆಸಳಿನ ಮೇಲೆ ಕುಳ್ಳಿತು ವಿಕಂಪಿಸುವ
ಬಣ್ಣ ಚಿಟ್ಟೆಯ ರೆಂಕೆಗಳ ತೆರದಿ ನಡುಗುತಿದೆ?'"
"ಸೃಷ್ಟಿಮೂಲ ಪ್ರಥಮನಾಂ, ಸ್ಫೂರ್ತಿಯಾಂ, ಪೃಥುಲನವ್:
ಸುಖದುಃಖ ಪಾಶದಿಂ ಜೀವರನು ಬಂಧಿಸುವೆನಾಂ
ಭಾವಜಂ! ಭುವನ ಹೃದಯದಿ ಪ್ರೇಮಸೌಂದರ್ಯದಾ
ವಿದ್ಯುತ್ಪ್ರವಾಹಮಂ ಚೋದಿಸುತೆ, ಮೃತ್ಯು ಜರೆ
ಬೇಸರಗಳಾನಂದಮಂ ತವಿಸದೊಲ್, ಚಿರಮದಂ
ಪೊರೆಯುತಿಹ ಚಿರಯೌವನೋಲ್ಲಾಸನಿಧಿ ನಾನ್.
ಲಲನೆ, ನೀನಾವ ಬಯಕೆಯೊಳಿಂತು ಪೊಚ್ಚಪೊಸ
ಜೌವನದ ಕಿರುಹರೆಯದೊಳೆ ಪೇಳ್ ತಪವನಾಚರಿಸಿ
ಕೋಮಲ ಶರೀರಮಂ ಕ್ಷಯಿಸುತಿಹೆ? ಯಜ್ಞಮಿದು
ಕ್ರೂರತರಮೆನಗೆ ದಲ್ ಪ್ರಿಯಮಲ್ತು! ಓ ಸುಂದರಿಯೆ,
ಏತಕಿದು? ನೀನಾರು? ನಿನ್ನ ಪ್ರಾರ್ಥನೆಯೇನು?'"
"ಪ್ರೇಮನಿಧಿ, ಓ ರತಿಪತಿಯೆ, ಮದನದೇವನೆ, ನಮೋ!
ದಿನವೊಂದರೊಳೆ ಯುಗದ ತಪವನಾಚರಿಸಿ ನಾಂ
ಬೆಂದೆ ನೊಂದೆ! ಆವುದಿದೆ, ದೇವ, ನಿನಗರಿಯದುದು?
ಮಣಿಪುರದ ರಾಜನಂದಿನಿ; ಚಿತ್ರವಾಹಂಗೆ
ತನುಜೆಯಾಂ. ಪೆಸರೆನಗೆ ಚಿತ್ರಾಂಗದೆ. ಪುಷ್ಪಾಸ್ತ್ರ,
ಚಂದ್ರಚೂಡಂ ಕೃಪೆಯೊಳೆನ್ನಯ ಪಿತಾಮಹಗೆ
'ಸಂತತಿಯೊಳೊಂದೊಂದೆ ಪುತ್ರಸಂತಾನಮಕ್ಕೆ'
ಎಂದು ವರವಿತ್ತೊಡಂ, ನಿರ್ಭಾಗ್ಯೆ ಕರಿನೆಯೆಂ,
ನನ್ನ ತಂದೆಗೆ ಬಿಡದೆ ಪುತ್ರಿಯಾಗುದಿಸಿದೆನ್.
ಪೆಣ್ಣಾದೊಡಂ, ಭಾವದಲಿ ನಿಷ್ಠುರೆಯೆಯಾಗಿ

ತಾರಕಿತ ಸೌಂದರ್ಯ ಸಂಪದಂ, ಇಂದ್ರಧನು,
ಕಲಕಂಠನುಲಿ, ಮಯೂರನ ನೃತ್ಯದೈಶ್ವರ್ಯಂ,
ಮೊದಲ ಹೊಸ ಮಳೆಯಲ್ಲಿ ಮಿಂದ ಮಲೆಗಳ ಹಸುರು,
ಮೊರೆದು ನೊರೆಗರೆದು ಮಿರುಮಿರುಗಿ ಶಿಲೆಯಿಂ ಶಿಲೆಗೆ
ಚಿಮ್ಮಿ ನೆಗೆಯುವ ತೊರೆಯ ಲೀಲೆಯ ಮನೋಹರತೆ,
ಸರ್ವಮುಂ ನಿನ್ನ ಅಂಗೋಪಾಂಗಮಂ ಸುತ್ತಿ
ಮುತ್ತಿ ನೆಯ್ಯಲಿ ಜಗನ್ಮೋಹನದ ಜಾಲಮಂ!
ನಿನ್ನೆಡೆಯೊಳಾನಿರ್ದು ಸವ್ಯಸಾಚಿಯ ನೋಂಪಿ ತಾಂ
ನಿನ್ನ ಮೈಮುಡಿಗಳಿಂ ಸೂಸುವ ಸುವಾಸನೆಗೆ
ಮೈಮರೆಯುವಂತೆ ಮಾಳ್ಪೆನ್! ಏಳು, ನೀರೇಜಮುಖಿ,
ನೋಡುः ನೀನೀಗಳಂಗಜ ಮೋಹ ದೀಪಶಿಖಿ!"
   ಮರೆಯಾಯ್ತು ದರ್ಶನಂ! ಕಣ್ದೆರೆದಳೊಯ್ಯನೆಯೆ,
ಚಿತ್ರಾಂಗದೆ: ಮರುವುಟ್ಟುವಡೆದಂತವೋಲಾಕೆ
ಸ್ವಪ್ನ ಮಧುರಾನುಭವದಾನಂದದಿಂದುಬ್ಬಿ
ನೋಡಿದಳು ಹೊರಗೆ: ಹಬ್ಬಿತ್ತು ಸ್ವಾಪ್ನಿಕ ವಿಪಿನ
ಚಂದ್ರಿಕಾ ಸಾಂದ್ರಮಾಯೆ! ಹಾಡುತಿರ್ದುದು ತೇನೆ!

# ಮೂರನೆಯ ಪರ್ವಂ

ಏಳು, ವೀಣೆಯೆ! ಏಳು, ಶೃಂಗಾರ ಸುಂದರಿಯೆ!
ಏಳು, ಅಂತರ್ಯಾಮಿ ಚಿಂತಾ ಪ್ರಭಾಮಯಿಽ
ಪ್ರತಿಭಾ ಮನೋಹರಿಯೆ! ಹೇಳು ಮುಂದಣ ಕಥಾ
ಭೋಗಮಂ, ಮಧುಮಯ ಪ್ರಣಯ ಪ್ರಸಂಗಮಂ.
ಕವಿ ನಿರನುಭವಶಾಲಿ. ಅದರಿಂದೆ ಬೇಡಿದಪೆ
ನಿನ್ನನಾಂ. ಜಡಮತಿಗೆ ರಸಮಂತ್ರಮಂ ನೀಡಿ,
ಮಿಡಿದು ನುಡಿಸೆನ್ನೆದೆಯ ನಾದಮಯದಿಂದ್ರಧನು
ತಂತ್ರಿಯಿಂ ಮಾಡಿದ ಮಹಾಕಾಶವೀಣೆಯಂ!
ಪೂವಡಿಗಳುಷೆವೆಣ್ಣು ಪೂರ್ವ ರೋದೋಂತದೆಡೆ
ಕೆಂದುಟಿಯ ನಗೆಬೀರಿ ಹೊಂಗದಿರ್ಗಯ್ಗಳಿಂ
ಬಿತ್ತಿ ಸೂಸಿದಳು ಹನಿಮುತ್ತುಗಳ ಸೇಸೆಯಂ
ಬಿತ್ತರದ ವಸುಮತಿಯ ಸಿರಿ ಹಸುರುಡೆಯ ಮೇಲೆ.
ಸರಸಿಯಂಚಲದ ಕೋಮಲ ನವ್ಯ ಶಾದ್ವಲದ
ಮೃದು ಮೆತ್ತೆಯಲಿ, ಚೂತ ತರುತಲದ ಸೊಂಪಿನಲಿ
ಪದ್ಮಾಸನಂಬೆತ್ತು ಮಂಡಿಸಿರ್ದರ್ಜುನಂ
ಕಂಡು ನಿಬ್ಬೆರಗಾದನದೊ ನಟ್ಟು ಕಣ್ದಿಟ್ಟಿ
ಕಟ್ಟೆದಿರಿನಲ್ಲಿ! ಕಿವಿಗೊಟ್ಟು ಕೇಳುತಿಹನದೊ!
ಬಿಳ್ದಪುದೊ ಗಂಧರ್ವ ಮಧುರ ಗಾಯನ ವೃಷ್ಟಿ,
ಪ್ರವಹಿಪುದೊ ನಿರ್ಜರ ಸ್ತ್ರೀ ಗೇಯ ನಿರ್ಝರಿಣಿ
ಎಂಬಂತೆ ಸಂಗೀತದುಲ್ಲೋಲ ಕಲ್ಲೋಲ
ಲೋಲ ವೀಚಿಯ ವಾಹವೊಂದೊಯ್ಯನೈತಂದು
ವನಮಂ ತಟಾಕಮಂ ಧರೆಯನಾಕಾಶಮಂ
ಪರ್ವತಪ್ರಾಂತಮಂ ಚುಂಬಿಸಾಲಿಂಗಿಸುತೆ

ಮಲಗಿಸಿತು ಮಧುಜಗವನಾನಂದ ಮೂರ್ಛೆಯಿಂದೆ!
ಪೆಣ್ದುಂಬಿ ಗಾವರಂ ಕೋಗಿಲೆಯ ನಿಡುಸರಂ
ಬಹುಪಕ್ಷಿ ಕೂಜನದ ತುಮುಲ ಕಾಕಲಿ ಗೀತಿ
ಆ ಗಾನ ಗೌರವದೆದುರು ಮೂಕವಾಗುತಿರೆ,
ಮಿಂದುದರ್ಜುನನಾತ್ಮವಾ ಸ್ವನಸ್ರೋತದಲಿ
ಮೈನವಿರ್ನಿಮಿರಿ: ಜನ್ಮಾಂತರದ ಭೋಗಮಂ
ಬಗೆಗೆ ತಂದುದು; ಮೇಣ್ ಭವಿಷ್ಯ ಸುಖದಾಶೆಯಂ
ಕಡೆದುದೆದೆಯಲಿ; ಕರಗಿದಂತಾಯ್ತು ಜಡಜಗಂ
ಕಾಲದೇಶ ಸಮೇತಮಿಂಪಿನ ಸಮಾಧಿಯೊಳ್
ಪ್ರಲಯಮಾಗಿ! ಎವೆಯಿಕ್ಕದೆಯೆ ನೋಡುತಾಲಿಸಿರೆ,
ತೆಕ್ಕನೆಯೆ, ಪುಷ್ಪಮಯವಾದ ಕಾನನದಿಂದೆ
ಪೊಣ್ಮುವ ಸುಗಂಧವೆನೆ, ಕೊಳದಾಚೆಯಂಚಿನಲಿ
ಹೊಮ್ಮಿದುದು ಗಾನಮೆ ಘನೀಭೂತಮಾದಂತೆ
ಸರ್ವ ಸೌಂದರ್ಯನಿಧಿ ಲಲನಾ ಕಲಾ ಸುಕೃತಿ!
ಸ್ಥೂಲತೆಯನುಳಿದ ಬಿಳಿದಂತದಿಂ ಕಯ್ಗಯ್ದು
ಸವಿಗನಸೆ ಸಂಚರಿಸಲೆಳಸಿದುದೊ ಎಂಬೊಲಾ
ಮೃದುಗಮನೆ, ಹರಿಣನೇತ್ರೆ, ಲತಾಂಗಿ, ನಳಿನಮುಖಿ,
ಹೂಗಳಿಗೆ ಹೂವೆಂಬ ಭ್ರಾಂತಿಯಂ ಪುಟ್ಟಿಸುತೆ,
ಲತೆಗಳಿಗೆ ಲತೆಯಂತೆ ಬಳುಕುತ್ತೆ, ಕಂಪಿಂಗೆ
ಕಂಪಾಗಿ, ತಂಬೆಲರಿಗೆಲರಾಗಿ ಸುಳಿಯುತ್ತೆ,
ಮೃದುಗಾನದಾಲಾಪಮಂ ಗೆಯ್ಯುತೊಯ್ಯನೆಯೆ
ನಡೆತಂದು ಕೆರೆಯಂಚಿನಲಿ ನಿಂದು ಬೀಸಿದಳ್
ಮುಗುಳ್ನಗೆಯ ಮಾಯೆಯಂ! ಭೋಂಕನೆ ವಸಂತರ್ತು
ಬಿರಿದರಳಿ ಸ್ವರ್ಗದಿಂ ಮರ್ತ್ಯಕವತರಿಸಿತೆನೆ,
ಲಲಿತೆಯಂ ಕಾಣುಹ ತಡಂ ಕಿರೀಟಿಯ ತೃಷಿತ
ಸರ್ವೇಂದ್ರಿಯಂಗಳಿಗೆ ಮಧುಪಾನಮಾದತ್ತು:
ಕೆಂದಳಿರು, ತುರುಗಲರು, ಪರಭೃತಧ್ವನಿ, ಭೃಂಗ
ಮಧುಪ ನಿವಹದ ಗಾನ, ಗಿಣಿ ಗೊರವಂಕೆಗಳೆ
ಮೊದಲಹ ವಿಹಂಗಮಗಳಿಂಪುದನಿ, ಹರಿಣಾದಿ
ಬೆಳ್ಮಿಗಗಳಳುಕಿಲ್ಲದಿಹ ಸಂಚರದ ಲೀಲೆ,
ಹೂಗಂಪುವೊತ್ತು ಬನಬನವಲೆವ ಮೆಲುಗಾಳಿ,

ತಂಪು ಬಿಸಿಲಿಂಪಲಂಪುಗಳಿಂದೆ ಸೊಂಪಿಡಿದ
ಕಾನನಂ ಮಧುಮಹೋತ್ಸವಮಾದ ತೆರದಿಂದೆ
ರಾಜಿಸಿತು, ರಂಜಿಸಿತು, ಶೋಭಿಸಿತ್ತರ್ಜುನಂ
ಕಾಣಲೊಡಮಂಗಜನ ಶೃಂಗಾರ ಶಾಣೆಯಂ,
ಮದನ ವರದಿಂ ಸ್ವರ್ಗ ಸೌಂದರ್ಯದೈಸಿರಿಯ
ಸೂರೆಗೊಂಡೆಸೆದಿರ್ದ ರತಿರೂಪಿ ಚಿತ್ರಾಂಗಿಯಂ!
ಸರ್ವ ರಸ ರೂಪಾದಿ ಗಂಧ ವರ್ಣಂಗಳುಂ
ಸ್ಪರ್ಶಮುಂ ಸುರಗೇಯಮುಂ ನೆರೆದು ಹಿನ್ನೆಲೆಯ
ಚಿತ್ರಿಸಿರೆ, ಕೆರೆಯ ಪಸುರಿಡಿದ ಕರೆಯಂಚಿನಲಿ
ನಿಂತಾ ಧವಳಸ್ವಪ್ನೆ, ಚೈತ್ರಾಗಮದ ಪೂತ
ಲತೆಯಂತೆ ನಸುಬಾಗಿ, ಪ್ರಾತಃಸರೋವರದ
ಸಲಿಲ ದರ್ಪಣದಲ್ಲಿ ತನ್ನ ತಾಂ ದರ್ಶಿಸುತೆ
ಬೆಚ್ಚಿದಳ್, ಪಡಿನೆಳಲ ಸೊಬಗಿಗಚ್ಚರಿವಟ್ಟು,
ಕಯ್ಗಣ್ಮೆದಾಹ್ಲಾದದಿಂ! ನಗೆಯ ಬೆಳ್ಮುಗುಳೊಂದು
ತೊಂಡೆವಣ್ದುಟಿಗಳಿನಿಯೆತ್ತಿನಿಂದರಳುತಿರೆ,
ಚೆನ್ನೆ ನಳಿತೋಳ್ಗಳಿಂ, ಕಿಸಲಯ ಸದೃಶ ಮದನ
ಕರದ ಕರವಾಳ್ಗಳಿಂ, ಮಸಿಗತ್ತಲೆಯ ಕೊಳದ
ಕಟ್ಟನೊಡೆಯುತ್ತೆ ಕರ್ಬೊನಲ ಪರಿಯಿಸುವಂತೆ
ತುರುಬು ಸಡಿಲಿಸಿ ಬೀಸಿದಳ್ ಕೇಶಪಾಶಮಂ,
ಧರ್ಮಾನುಜನ ವ್ರತದ ಕೊರಳಿಗುರುಳ್ಗಣ್ಣಿಯಂ
ತೊಡರ್ಚಿ ಬಿಗಿವಂತೆ. ನೋಡುತ್ತಲಿರ್ದನು ನರಂ
ಮೈಯೆಲ್ಲ ಕಣ್ಣಾಗಿ, ಜೀವ ತಾಂ ದೃಷ್ಟಿಯಾಗಿ!
ನಿಶ್ಚಲಿತ ಯಮುನೆಯ ತರಂಗಿತ ತಮೋವೇಣಿ
ಪೆರೆನೊಸಲ ಬೆಳ್ದಿಂಗಳ್ವೆಟ್ಟನಿಂದಿಳಿದುದೆನೆ
ಕರಿ ಸುರುಳಿಗುರುಳು ತೆರೆತೆರೆಯಾಗಿ ನೆರೆ ಜೋಲ್ದ
ಬಿಡುಮುಡಿಯ ನಿಡುವೊನಲ್ ರಾರಾಜಿಸಿತು ಕಣ್ಗೆ
ಕದ್ದಿಂಗಳಂ ಮೆತ್ತಿ. ಮೃದುಲ ವಕ್ಷಸ್ಥಲದ
ತೆರೆಮರೆಯ ಸೆರಗನೊಯ್ಯನೆ ಮೆಲ್ಲನೋಸರಿಸಿ,
ನಾಣ್ಮೆಸಲಳಿಯದಿಹ ಕುಂದಿಲ್ಲದವಯವದ
ಕೋಮಲ ಮೃಣಾಳತೆಯನೀಕ್ಷಿಸುತೆ, ಪೆರ್ಮೆಯಿಂ
ಬಿಂಕದೊಯ್ಯಾರದಿಂ ನರನಿರ್ದ ತಡಿದೆಸೆಗೆ

ನೋಡಿದಳ್, ಕಂಡರುಂ ಕಂಡಳಿಲ್ಲೆಂಬಂತೆ.
ಸಂಭ್ರಮಾನಂದಾತಿಶಯಕವಳುಡುಗೆ ಕರಗುತೇನ್
ಆಕಾಶಮಾಗಿಹುದೊ ಎನೆ ಸೂಕ್ಷ್ಮತರಮಾಗಿ
ಮುಚ್ಚದೆಯೆ ಸೊಬಗನಾವರಿಸಿರ್ದುದಂಗಮಂ!
   ಪಡಿನೆಳಲ ಪೊತ್ತು ತಾಂ ಧನ್ಯನೆಂದಾ ಕೊಳಂ
ಜುಮ್ಮೆಂದು ಪುಳಕಿಸುವ ಮಾಳ್ಕೆ ಕಂಪಿಸಿದತ್ತು
ತಂಬೆಲರ ಚುಂಬನಕ್ರೀಡೆಯಿಂದೆ. ಕಣ್ಣಾಗಿ
ಬೆರಗು ಹೊಡೆದರ್ಜುನಂ ನೋಡುತಿರಲಾ ಭಾಮೆ
ಬಂದವೊಲೆ ಹಿಂದಿರುಗಿ ನಿಬಿಡ ಕಾಂತಾರದಲಿ
ತರುಗುಲ್ಮಪರ್ಣಗರ್ಭಂಬೊಕ್ಕು, ಸುರಸಂಧ್ಯೆ ತಾಂ
ಶರ್ವರಿಯ ತೋಳ್ಸೆರೆಯೊಳಿಳಿದು ಬಯಲಪ್ಪವೋಲ್,
ಮರೆಯಾದಳಿರದೆ. ಸೃಷ್ಟಿಯ ಹೃದಯಸತ್ತ್ವ ತಾಂ
ಪರಮ ಸೌಂದರ್ಯದಾಕೃತಿವೆತ್ತಿನಿತು ಮಿಂಚಿ
ಸುಳಿದಡಗಿದಂತಾಯ್ತು. ಮೇಲೆಳ್ದನರ್ಜುನಂ.
ಕನಸಿನಿಂದೆಚ್ಚತ್ತುಮದನರಸುವವನಂತೆ
ನೋಂಪಿಯಂ ಪಳಿದು, ನುಡಿಯಾಣೆಯಂ ಕಡೆಗಣ್ಚಿ,
ಮಧುಪ ಭೃಂಗ ವಿಹಂಗ ಸಂಗೀತ ಸಂಗದಲಿ
ಮಧುರಂಗದಂತರಂಗದ ವಿಪಿನವೀಥಿಯೊಳು
ಒಲುಮೆ ಮರುಳಮರ್ದುದೆನೆ ತೊಳಲಿದಂ ನಿಡುವೊಳ್ತು
ಸೊಬಗಿನರಸಿಯನರಸಿ. ಕರ್ವುವಿಲ್ಲನ ಬರಂ
ನರನಂ ಮರುಳ್ಮಾಡಿ ಚಿತ್ರಾಂಗದೆಯ ನೆಲೆಗೆ
ಕೊಂಡೊಯ್ದುದಿಂತು!
                    ಕಾಣುತೆ ಸಿವನ ಕೋಯಿಲಂ
ನಡೆದು ಬಾಗಿಲ್ವಾಡಮಂ ಸೇರಿ ನೋಡುತಿರೆ,
ಯತಿಗೆ ಶಿವಗುಡಿಯೆ ಮದನನ ಸದನವಾಯಿತೆನೆ
ಗೋಚರಿಸಿತಾ ಕಂಡ ಕಾಮಿನಿಯ ವಿಗ್ರಹಂ,
ವೈರಾಗ್ಯದಾತ್ಮಹತ್ಯೆಗೆ ಮಾಯೆ ಸಾರ್ಚಿದಾ
ಪ್ರಗ್ರಹಂ! ಬಿರುಗಾಳಿಗುಬ್ಬೆದ್ದ ವಿಕ್ಷುಬ್ಧ
ವಿಸ್ತೃತ ಸಮುದ್ರದ ತರಂಗ ತಾಂಡವದಂತೆ
ಭಾವದುದ್ರೇಕಮವ್ವಳಿಸಿರ್ದುದರ್ಜುನನ
ಪ್ರಾಣಪಾರಾವಾರದಾ ಹೃದಯವೇಲೆಯಂ.

ನುಡಿಯಲೆಳಸಿದನೊರ್ಮೆ; ನುಡಿಯಲೆಳಸಿದನಿರ್ಮೆ;
ನುಡಿದೋರಲಾರದೆಯೆ ಪ್ರಸ್ತರ ಪ್ರತಿಮೆಯೋಲ್
ನೋಡುತಿರ್ದನು ಬರಿದೆ ಮಿಳ್ಮಿಳನೆ. ಶಾಂತಿಮಯ
ದೇವಕುಲದಂಗಣದೊಳಲರಿಡಿದ ಮಲ್ಲಿಗೆಯ
ಹೊದರಿನೆಡೆ ತುದಿವೆರಳ ಮೇಲ್ ನಿಕ್ಕುಳಿಸಿ ನಿಂದು
ತೋಳೆತ್ತಿ ಹೂಗೊಯ್ಯುತಿರ್ದಾ ಮೃಗಾಕ್ಷಿ ತಾಂ,
ಮಿರುಮಿರುಪ ಪೀತನೀಲಾಭಕಂಠದ ಕೇಕಿ
ನೆಗಳ್ವಂತೆ ಸಂಕುಗೊರಲಂ ಬಿಂಕದಿಂ ಕೊಂಕಿ,
ಪರಿಚಿತ ಧನಂಜಯನನಪರಿಚಿತೆಯಂದದಿಂ
ನೋಡಿ, ಕೆಸುವಿನೆಲೆ ಮೇಲೆಸೆವ ಶಿಶಿರದ ಬಿಂದು
ಗಾಳಿಗೆ ಜಗುಳ್ವಂತೆ ಪಾರ್ಥನ ಹೊರೆಗೆ ಬಂದು
ಕೈಜೋಡಿಸುತೆ, ನಾಣ್ಚೆ ಕೆಂಪೇರುತಿರೆ ಮೊಗಂ,
ಸವಿಗೊರಲ್ವೀಣೆಯಂ ಮಿಡಿದಳ್ ವಿನಯದಿಂದೆ:
''ಯತಿಪತಿಯೆ, ಬಿಜಯಗೈ; ಸನ್ಮಾನ್ಯನೆನಗೆ ನೀಂ;
ಮೇಣತಿಥಿ. ದೇಗುಲವಿದೆನ್ನ ಮನೆ, ಆಶ್ರಮಂ.
ನಾಂ ತಪಸ್ವಿನಿಯಿಲ್ಲಿ. ನಿನಗೆ ಸುಸ್ವಾಗತಂ!''"
ಪಳಪಳನೆ ಸುರಿಯುತಿರೆ ಮಾತುಗಳ ಮುತ್ತುಮಳೆ
ಕಡುಬಡವನಂತಾದನರ್ಜುನಂ. ನಾಚಿದನ್;
ತನ್ನ ವೇಷಕೆ ತಾನೆ ಹೇಸಿದನ್. 'ಯತಿಪತಿ'
ಯತಿತ್ವಮಂ ಪಳಿಯುತ್ತೆ, ಪಾರುತೆ ಪತಿತ್ವಮಂ,
ತನ್ನ ನಿಜಮಂ ನುಡಿದನತಿ ಕಾತರತೆಯಿಂದೆ:
''ಕುಸುಮ ಕೋಮಲೆ, ನಾನು ಯತಿಯಲ್ಲ, ಕ್ಷತ್ರಿಯಂ.
ಕೋಳುಹೋಗದಿರೆನ್ನನಂತು ಸಂಭಾವಿಸುತೆ.
ಸಂಗ್ರಾಮಗಳಲಿ ಕೋದಂಡಮಂ ಪಿಡಿದರಿಯ
ರುಂಡಮುಂಡಂಗಳಂ ಖಂಡಖಂಡಂಗೈದು
ಚೆಂಡಾಡಿ ದಿಂಡುರುಳ್ಚಿದೀ ಕೈಯ ಕಲೆಗಳಂ
ನೋಡಿಲ್ಲಿ. ಕೌಕ್ಷೇಯಕಾಘಾತಗಳನುಂಡು,
ಲೋಹಿತಸ್ರೋತದೊಳ್ಮುಳುಗಿ, ಮಜ್ಜೆಯೊಳದ್ದಿ,
ಬಿರುಸಾದ ದೇಹವಿದು ಪಾರ್ಥಿವಕುಲೋದ್ಭವಂ:
ಯತಿವೇಷವೆನಗೆ ಆಂತರವಲ್ಲವಾಗಂತುಕಂ.''
ನಸುಮುಗುಳ್ನಗೆಯನಲರಿಸುತೆ ನುಡಿದಳ್ ನಾರಿ:

"ವೀರವರ, ನೀನಾಡುವುದೆ ಬೇಡವೆನ್ನೆದೆಗೆ,
ನಿನ್ನ ಕಂಡೊಡನೆ, ಗೋಚರಮಾಯ್ತು ಕೈತವಂ!
ಅಂತೆ ನಾನಾದೊಡಂ ಜಾತಿ ಜೋಗಿನಿಯಲ್ತುಃ
ಬಗೆಯೊಂದು ಬಯಕೆಯಂ ಪಡೆಯೆ ನೋಂತಿಹೆನಿಂತು.''"
"ಸುಂದರಿಯೆ, ಪೇಳಾವ ಪುಣ್ಯಂಗೈದುದಾ ಬಯಕೆ
ನಿನ್ನೆದೆಯನಾಲಿಂಗಿಸೆ? ಬಯಕೆ ನಿನಗಾವುದೌ
ಲೋಕದ ಬಯಕೆಯಾಗಿರುವ ನಿನಗೆ? ಉದಯಾದ್ರಿ
ಅಸ್ತಾದ್ರಿಗಳ ಮಧ್ಯೆ ಶರಧಿಮುದ್ರಿತ ಧರೆಯ
ರಾಷ್ಟ್ರ ರಾಷ್ಟ್ರಂಗಳಂ ಚರಿಸಿ ಬಂದಿಹೆನು ನಾಂ
ತೀರ್ಥಯಾತ್ರೆಯಲಿ. ನುಡಿ, ಬಯಕೆಯೇನೆಂಬುದಂ;
ಮೇಣದಾರೆಂಬುದಂ. ಮುದದಿಂ ನಿವೇದಿಪೆನ್
ನನ್ನರಿವು ಬಲ್ಮೆಗಳಿಗೊಳಗಾದುದೆಲ್ಲಮಂ.
ನುಡಿ, ಬಯಕೆಯಂ, ದೇವಿ, ಓ ಭುವನ ಮೋಹನ ಮೂರ್ತಿ!''"
"ನನ್ನಿಷ್ಟನಾತಂ ಜಗತ್ಪ್ರಸಿದ್ಧಂ, ವೀರಂ,
ಮೂರು ಲೋಕಂಗಳಲಿ ದೊರೆಯಿಲ್ಲವಾತಂಗೆ
ಸೌಂದರ್ಯದಲಿ ಬುದ್ಧಿಯಲಿ ಮಹಾವಿಕ್ರಮದಲಿ!''"
"ಅಹುದಹುದೆ? ಅದಾರವಂ ದೇವಿಯ ಕೃಪಾದೃಷ್ಟಿ
ಪರಿಪುಷ್ಟ ಪುಣ್ಯಪಾತ್ರಂ?''"
"''ಸದ್ವಂಶ ಸಂಜಾತಂ.
ಪಾರ್ಥಿವಕುಲ ವರಿಷ್ಠವಂಶ ಸಂಭವಶ್ರೇಷ್ಠಂ!''
"ಇಂದುಮುಖಿ, ಹೆಸರಿನ ಹುಸಿಗೆ ನಿನ್ನೆದೆಯ ಸಿರಿಯ
ಮಾರದಿರು. ನಂಬಿ ಬರುಗನಸೊಂದನಾಮೇಲೆ
ಕೋಳುಹೋಗದಿರು. ವಿಗ್ರಹಮಿಲ್ಲದಾ ಗುಡಿಗೆ
ಕಳುಹದಿರು ನಿನ್ನೊಲುಮೆಯೈಸಿರಿಯ ಪೂಜೆಯಂ.
ಫಣಿವೇಣಿ, ಕೀರ್ತಿಯೆಂಬುದು ಗಿರಿಯ ಕಂದರದ
ನೀಹಾರಮಿನನುದಯಕೆಂತು ಹಬ್ಬುವುದಂತು
ಕಿವಿಯಿಂದ ಕಿವಿಗೆ ನಾಲಗೆಯಿಂದ ನಾಲಗೆಗೆ
ನೆಗೆಯುವುದು ಹಿಂಜಿ ಹಸರಿಸಿ ಹಬ್ಬಿ. ಗಾತ್ರವದು
ಸೂತ್ರವಲ್ಲಾತ್ಮಕ್ಕೆ. ನಿನ್ನ ಹೃದಯದ ನಿಧಿಯ
ಸೂರೆಗೊಂಡಿರುವಾತನಾರವನ್? ನುಡಿಯೆನಗೆ!''
"ಹೆರರ ಜಸಕಿಂತೇಕೆ ಕರುಬುತಿಹೆ, ವೀರಯತಿ?

ನೆಲದರಿಕೆಯಾ ಮಹಾ ಕುರುಕುಲವನರಿಯೆಯಾ?''"
"ಕುರುಕುಲಂ?''"
"''ಕುರುವಂಶ ಶರಧಿಯ ಸುಧಾಸೂತಿ
ಲೋಕೈಕವೀರ ನಾಮವನು ಕೇಳ್ದರಿಯೆಯಾ?''"
''ನಿನ್ನ ಚೆಂದುಟಿಗಳಿಂ ಕೇಳಲಾಟಿಪೆನದಂ;
ಲೋಲಲೋಚನೆ, ಹೆಸರ ಹೆಜ್ಜೇನನೂಡೆನಗೆ!''"
ಕಲಹಂಸ ಗಾಮಿನಿಯು ಕಿರುನಗೆಯ ಬಿಂಕದಿಂ
ಸೂಸಿದಳ್ ಕಲಕಂಠ ಕೋಕಿಲೆಯ ವಾಣಿಯಂ,
ಸವ್ಯಸಾಚಿಯ ಧಮನಿಯಲಿ ಹರಿಯೆ ಮಧುಮದಿರೆ:
''ತ್ರಿಭುವನ ಜಗದ್ವಿಜಯಿ ಅರ್ಜುನಂ!—ಬೆರಗಾಗಿ
ದೃಷ್ಟಿಸುತ್ತಿಹೆಯೇಕೆ?—ಬಹುಗುಣಿತ ಜನಗಣದ
ಸಂಸ್ತುತಿಯ ಧವಳ ಧಾರಾ ಸ್ವಾತಿ ವರ್ಷಕ್ಕೆ
ಬಾಯ್ದೆರೆಯುತೆನ್ನ ಹೃದಯದ ಭಕ್ತಿ ಶುಕ್ತಿಯಲಿ
ಮುತ್ತುಗಳ ರಚಿಸಿ ಕೋದಿಹೆ ವರಣಮಾಲೆಯಂ;
ಪ್ರೇಮಾಂಜಲಿಯ ನಿವೇದಿಸಲು ಕಾದಿರುವೆನ್ನೆ!
ಹೇಳೆನಗೆ, ಯತಿವರನೆ, ಆ ಕೀರ್ತಿ ಬರಿ ಹುಸಿಯೆ?
ಹುಸಿಯೆಂದು ಹೇಳೊಮ್ಮೆ; ಆ ವರಣಮಾಲೆಯನು
ಹರಿದು, ಮತ್ತುಗಳನೊಡೆದಿಳೆಗದ್ದಿ ಹುಡಿಗೈವೆ!''"
''ಬೇಡ ಬೇಡಾ ಸಾಹಸಂ, ದೇವಿ; ಬೇಡುವೆನು.
ಆ ಹೆಸರುಮಾ ಬಲ್ಮೆಯಾ ಧೈರ್ಯವಾ ಕೀರ್ತಿ
ಹುಸಿಯಿರಲಿ, ಇರದಿರಲಿ; ಕೈಬಿಡದಿರಾತನಂ,
ಕರುಣೆಗೈ! ನಿನ್ನೆದೆಯ ಕೋಮಲಾಶ್ರಯದಿಂದೆ
ನೂಂಕದಿರು; ದಿಕ್ಕಿಲ್ಲದಿಹನು ಪರದೇಶಿ ತಾಂ!
ಇದೊ ದೇವಿ, ಮಣಿದ ಮೊಳಕಾಲಿನಲಿ ಸೆರಗೊಡ್ಡಿ
ಶರಣಾರ್ಥಿಯಾಗಿರುವನರ್ಜುನಂ!''"
"''ಆ:! ನೀನೆ
ಅರ್ಜುನನೆ?'' ''ಅಹುದು; ನಾನಾ ಪ್ರೇಮಭಿಕ್ಷಾರ್ಥಿ!
ನಿನ್ನೆದೆಯ ಬಾಗಿಲಿಗೆ ತಿರುಪೆಗಾಗಿಯೆ ಬಂದೆ.''"
ಎನುತೆ ಮೊಳಕಾಲೂರಿ, ತೃಷಿತ ದೃಷ್ಟಿಯ ಬೀರಿ,
ಕರಪುಟಾಂಜಲಿಯೆತ್ತಿ, ತನ್ನ ತನುರುಚಿರತೆಯ
ಪದತಲದಿ ಪೂಜೆಗೈವಾತನನು ಕಾಣುತಂ

ಕನಿಕರದಿ ಕರಗಿದಳ್ ಚಿತ್ರಾಂಗಿ. ಭಾವದಿಂ
ತಲ್ಲಣಿಸಿತೆದೆಯುರ್ಬ್ಬಿ. ಕಣ್ ತೊಯ್ದುದಿರ್ಪಿನಿಂ.
ಸುಯ್ದೋರಿದತ್ತುಸಿರು. ಕಾಯಂ ವಿಕಂಪಿಸುತೆ
ಬೆವರಿದುದು. ಮಣಿದ ಮುಗಿಲಿನ ಮೇಲೆ ಮಳೆಬಿಲ್ಲು
ನಸುಬಾಗಿ, ನಿಲ್ವಂತೆ, ನರನನೆತ್ತಲ್ ಕೊಂಕಿ,
ಮರಳಿ ಹಿಂಜರಿದು, ನೆಟ್ಟನೆ ನಿಮಿರಿದಳ್ ನಿಂತು
ಕಲ್ಪತರುವಂತೆ. ಸಂಯಮವ ಸಾಧಿಸಿ ಮತ್ತೆ
ನುಡಿದೋರಿದಳ್ ಮನ್ಮಥನ ಶಿಷ್ಯೆ: "ವೀರವರ,
ಧರ್ಮಾನುಜಾರ್ಜುನಂ ದ್ವಾದಶಾಬ್ದಂಬರಂ
ಬ್ರಹ್ಮಚರ್ಯವ್ರತವ ಕೈಕೊಂಡು ಪೃಥ್ವಿಯೊಳ್
ತೀರ್ಥಯಾತ್ರೆಯ ಮಾಳ್ಪನೆಂಬುದೇಂ ಮಿಥ್ಯೆಯೇಂ?"
"ತಿಂಗಳಿರುಳಿನ ಕತ್ತಲೆಯ ಕಟ್ಟಳೆಯ, ದೇವಿ,
ಕೆಡಿಪಂತೆಯೆಸಗಿರುವೆ ನೀನೆನ್ನ ನೋಂಪಿಯಂ.
ನಿನ್ನಿದಿರೊಳಾವ ನಿಯಮಂ? ಏನು ಸಂಯಮಂ?
ಸುಡುವುದಗ್ನಿಗೆ ಕಟ್ಟು; ವಿಶ್ವಕರ್ತೃವಿನಾಜ್ಞೆ;
ತರಗೆಲೆಯನೆಂತಂತು ಸುಗ್ಗಿಯ ಮುಗುಳ್ಗಳಂ,
ಶವವನೆಂತಂತೆ ಜೀವಿಪ ಹಸುಳೆಯಂ, ದಹಿಸಿ
ತೋರ್ದುಪುದು ನಿಷ್ಪಕ್ಷಪಾತಮಂ; ಆದೊಡಂ
ನಿನ್ನನ್ನರೊಂದು ಕೈಯಿಡೆ ನಿಯಮಮಂ ತ್ಯಜಿಸೆ
ಹಿಂಜರಿಯದೌ! ಪಾಲಿಸುವೆನೆಂತು ನಿಷ್ಠೆಯಂ
ಭಾವರಾಗದ ಜೀವಿ, ಸಹಜ ಸಂಚಲ ನರಂ
ನಾಂ? ಪರಾಜಯಮಿದುವೆ ಪರಮಜಯವಿಂದೆನಗೆ!"
ಕೇಳಿದಳ್. ಮನದಿ ಸಂತೋಷಿಸುತೆ ಬಾಹ್ಯದಲಿ
ಹಗೆನುಡಿಯನಾಡಿದಳ್: "ಪತಿತನಾಗದಿರು, ಯತಿ!
ಹೂಣಿಕೆಯ ನೇಮವನು ಮುರಿದು ಕಾಮಗೆ ನೀಡಿ
ಕಾಣಿಕೆಯನಪಯಶೋದುಂದುಭಿಯ ಮೊಳಗದಿರ್
ನಿನ್ನ ಕೀರ್ತಿಯ ಲೋಕದಲಿ. ಕಾಡಿಗೆಯ ಕಣ್ಣು
ಕತ್ತಲಿಸಿದುದೆ ನಿನ್ನ ಚಿತ್ತಮಂ? ಧೀರ ಮುನಿ,
ಪೈಜೆಯಂ ಪಾಲಿಸುವ ನಿನ್ನ ಧೈರ್ಯವದೆತ್ತ
ಜಾರಿದುದೊ? ಎನ್ನೊಳೇನಂ ಕಾಣುತಿಂತು ನೀಂ
ಧುಮುಕುತಿಹೆ ನಾಯಕದ ನರಕಕ್ಕೆ? ಕೇಳೊರ್ಮೆ

ನಾಂ ಸಾಂದ್ರ ವಿಪಿನ ಕೇಂದ್ರದಿ ಸಂಚರಿಸುತಿರಲ್
ಕ್ಷುಧಿತ ಭೀಷಣ ಭೀಮ ಫಣಿವರ ಕರಾಳತರ
ಕ್ರೂರನೇತ್ರದ ಮೋಹದಾಕರ್ಷಣೆಗೆ ಸಿಲ್ಕಿ
ಕೋಮಲ ಕುರಂಗ ಶಿಶುವೊಂದೊಯ್ಯನೊಯ್ಯನೆಯೆ,
ಸೂಜಿಗಲ್ಲಿನ ಸೆಳೆತಕೊಳಗಾದ ಸೂಜಿಯೊಲು,
ಮೃತ್ಯುಜಿಹ್ವಾಗಹ್ವರಾಭಿಮುಖಮಾಗಿರ್ದು
ಚೀರಿದತ್ತಡವಿಯೆ ಮರುಗುವಂತೆ. ಭೀಷ್ಮಫಣಿ
ನೇತ್ರಸೂತ್ರದಿನೆಳೆಯುತಿರೆ ಬಿಗಿದು, ಜಿಂಕೆಮರಿ
ಬಿಡಿಸಿಕೊಳಲೆಳಸಿಯುಂ ಬಿಡಿಸಿಕೊಳಲಾರದೆಯೆ
ತನ್ನಿಚ್ಛೆಗೆದುರಾಂತೆ ಘೋರಾಹಿ ಮುಖದೆಡೆಗೆ
ಚಲಿಸಿದುದು.—ರಕ್ಷಿಸಿದೆನಾನೇಣಶಾಬಮಂ
ಕೊನೆಗದಂತಿರ್ಕೆ!—ನೀನಾ ಮಿಗವಸುಳೆಯೋಲೆ
ಕುರುಡು ಮೋಹದೊಳದ್ದಿ ಮರುಳ್ಗೊಂಡು ನುಗ್ಗುತಿಹೆ!
ನಶ್ವರದ ಪೂಜೆಗೆ ಚಿರಂತನವ ಬಲಿಗೊಡಲು
ಹವಣಿಸುತ್ತಿಹೆ. ಪ್ರೇಮಮಲ್ತು; ಕಾಮದ ಚಿಹ್ನೆ
ಇದು ಕಣಾ! ಕ್ಷಣಿಕ ಸುಖ ಸಂಪ್ರಾಪ್ತಿಗೋಸುಗಂ
ಶಾಶ್ವತಾತ್ಮದ ಬಲಿಯೆ! ಏನಿದೀ ದುರ್ಬಲತೆ?
ಅರ್ಜುನದೇವ, ಮಿಥ್ಯೆ ನಿನ್ನ ಪೌರುಷದ ಕಥೆ!''"
''ನನ್ನ ಜೀವನ ಪರಮಪುರುಷಾರ್ಥ ರೂಪಿಣಿಯೆ,
ಭುವನೈಕಮೋಹಿನಿಯೆ, ನೀನೆನ್ನ ಸಂಪದಕೆ
ಲಕ್ಷ್ಮಿ; ವಿದ್ಯೆಗೆ ವಾಣಿ; ಪರಮಸೌಂದರಕೆ ರತಿ;
ಸರ್ವಾಭಿಲಾಷೆಗಳಿಗಾಕಾಂಕ್ಷೆಗಳಿಗೆಲ್ಲ
ಚರಮಗತಿ! ನೀನೆ ಶಾಶ್ವತ ಸತ್ಯ; ಪ್ರಾಣೇಶ್ವರಿ,
ನಿನ್ನನುಳಿದೆಲ್ಲವೂ ಬರಿಯ ನಶ್ವರ, ಮಿಥ್ಯೆ!
ನೀನಿಲ್ಲದೆಲ್ಲವೂ ಶೂನ್ಯ ಶೂನ್ಯಂ, ಪೂರ್ಣೆ!
ನೀನಮೃತವೆನಗೆ; ನೀನಿಲ್ಲದಮೃತವೆ ಮೃತ್ಯು!
ನೀ ಮಾಯೆ; ನೀ ಮುಕ್ತಿ! ಜಪ ತಪ ವ್ರತವೇಕೆ
ನೀನೆಯಿರೆ; ಸೊದೆಯ ಸೋನೆಯೆ ಸುರಿಯುತಿರೆ ಮರುಳು
ಕೃಷಿಯೇಕೆ ಉದರಪೋಷಣೆಗೆ! ಕಾಂಚನಖನಿಯ
ಖನನಂ ವೃಥಾ ಪರಿಶ್ರಮವಲ್ತೆ ಸ್ಪರ್ಶಮಣಿ
ಕರದೊಳಿರೆ? ಸೊಡರೇಕೆ ತಳತಳಿಸುತಿರೆ ಖಮಣಿ?

ಹೇ ಚಿತ್ತರಂಗಿನಿಯೆ, ನಿನ್ನ ಸಂಗವೆ ಪರಮ
ಮಂಗಲಂ; ಮೋಕ್ಷಮಾಲಿಂಗನಂ! ತೆಗೆ, ಕೀರ್ತಿ
ಬರಿ ಮಾಯೆ! ನೀನೆ ನಿರುತಂ; ಮಿಕ್ಕುದೆಲ್ಲ ಹುಸಿ!''"
ನುಡಿದನಿಂತರ್ಜುನಂ. ನೋಡಿದನು ತನ್ನೆದುರು
ನಿಂದೆಸೆವ ಸೌಂದರ್ಯದಿವಮಂ, ತೃಷಾಪೂರ್ಣ
ನೇತ್ರಸೂತ್ರದಿ ಬಂಧಿಸೆಳೆವಂತೆ. ಮದನನುರಿ
ಗಾತ್ರಸಂಪೂರ್ಣದಲಿ ನಾಳನಾಳಂಬೊಕ್ಕು
ದಹಿಸಿದತ್ತೊಡನೊಡನೆ ರಾಗಾರುಣಜ್ವಾಲೆ
ಪ್ರೋಜ್ವಲಿಸುವೋಲ್ ಉಗ್ರದಾವಾಗ್ನಿ ತರುನಿಚಯಮಂ
ಕೊಂಡುರಿಯುವಂತೆ ಪೊತ್ತಿದುದು ಚಿತ್ರಾಂಗಿಯಂ
ಪ್ರಣಯ ಪ್ರಲಯ ಶಿಖಿ. ವಿಕಂಪಿಸಿದಳುತ್ಕಂಠೆ.
ನಿಂದುದು ಹರಿವ ಕಾಲಮಂತೆ ನಿಂದುದು ಸೃಷ್ಟಿ
ದೃಷ್ಟಿಸುತ್ತಾ ಮಧುರ ಮನ್ಮಥ ಮುಹೂರ್ತಮಂ,
ಕರ್ತವ್ಯಮಂ ಮರೆತು ತನ್ಮಯತೆಯಿಂದೆ. ವಿಧಿ
ಇಂದ್ರಧನುರಿಂದ್ರಜಾಲಂ ನೆಯ್ದು ಬೀಸುತಿರೆ,
ಮಧುಮದನರೋಕುಳಿಯ ಬಣ್ಣನೀರನ್ನೆರಚಿ
ಚೆಲ್ಲಿದರ್ ಬೆಂಕೆಯುರಿಗೆಣ್ಣೆಯಂ: "ಪ್ರೇಮನಿಧಿ,
ಪ್ರಾಣೇಶ, ಸೂರೆಗೊಳ್ಳೆನ್ನ ಸರ್ವಸ್ವಮಂ,
ಮೇಣೆನ್ನನಿಲ್ಲಗೈ!" ಎನುತೆ ನಳಿತೋಳ್ಗಳಂ
ನೀಡಿದಳ್ ಚಿತ್ರಾಂಗಿ! ಪ್ರೇಮದಾಲಿಂಗನದಿ
ಶೂನ್ಯವಾಯಿತ್ತೆಲ್ಲವಾನಂದ ವಿಸ್ಮೃತಿಯ
ಭೋಗ ನಿರ್ವಾಣದಲಿ! ಉದುರಿತು ಕುಸುಮವೃಷ್ಟಿ
ಮಲ್ಲಿಗೆಯ ಹೊದರಿಂದೆ, ಮಾತನುಳಿದಿನಿಮುತ್ತುಗಳ್
ತಿರೆಯ ತುಟಿಗಿಳಿವಂತೆ; ತೀಡಿದುದು ತೆಂಗಾಳಿ;
ಎಸೆದುದು ವಿಹಂಗ ಮಂಗಲವಾದ್ಯಮೆತ್ತಲುಂ
ಋತುನೃಪನ ಸಾಲಂಕೃತಾಸ್ಥಾನವೆನೆ ಮೆರೆವ
ಚಾರು ಕಾಂತಾರದ ಮನೋಜ್ಞ ತರುಗೋಷ್ಠಿಯಿಂ:
ಸ್ವರ್ಗ ಮರ್ತ್ಯಂಗಳುಂ ಕಾಲದೇಶಂಗಳುಂ
ಸುಖದುಃಖ ಜನ್ಮಮೃತ್ಯುಗಳೆಲ್ಲಮೊಂದಾಗಿ
ಮುಳುಗಿರ್ದುವೊಂದನಂತಾನಂದ ರಸಧಿಯಲಿ!
ಇಂತು ಕಾಲದ ಪಕ್ಷಿ ಪಗಲಿರುಳ್ಗಳೆಂಬೆರಡು

ರೆಂಕೆಗರಿ ಬಿರ್ಚಿ ಸುಖಮಧುಸುಧೆಯನೀಂಟುತ್ತೆ
ಹಾರುತ್ತಿರೆ, ನವೀನ ದಂಪತಿಗಳಿರ್ವರುಂ
ರಸದ ಹರಿಗಲನೇರಿ ಜೇನು ಹೊಳೆಯಲಿ ತೇಲಿ
ಪಯಣಗೈದರು, ಸೋರ್ಮುಡಿಯ ಹೆರಳು ಮುಂಗುರುಳು
ನುಣ್ಗದಂಪಿಂಪು ಕೆಂದುಟಿ ಎರ್ದೆಗಳೆಂದೆಂಬ
ನಂದನ ದ್ವೀಪ ಬೃಂದಾವನದಿ ಮಾಂದಳಿರ
ತೂಗುಯ್ಯಲೆಯ ಶಯ್ಯೆಯಲಿ, ರಾಸಲೀಲೆಯಲಿ!
ಚಿತ್ರವಾಹನ ಪುತ್ರಿಯುಂ ಶಕ್ರತನಯನುಂ
ಮಧುಮದನರಿಂದ್ರಜಾಲದ ಲಲಿತ ಪಂಜರದಿ
ಎಣೆವಕ್ಕಿಗಳ ಹೋಲಿ ಭೋಗಿಸಿದರನುದಿನಂ
ಗೃಹ ಬಂಧು ಮಿತ್ರರಂ ಮರೆದು, ಕರ್ತವ್ಯಮಂ
ತೊರೆದುಃ ನವಪಲ್ಲವಿತ ವನವನಲೆಯುತ್ತೊರ್ಮೆ,
ಪರಿಮಳಿತ ಪುಷ್ಪಾಪಚಯದಿ ದಾಮವ ರಚಿಸಿ
ಓರೊರ್ವರಿಗೆ ಸೂಡುತಾನಂದಿಸುತ್ತೊರ್ಮೆ,
ಕಾಮಳ್ಳಿ ಕಾಜಾಣ ಪಿಕಳಾರ ಗಿಳಿ ಚೋರೆ
ಕೋಗಿಲೆಗಳುಲಿಹಕ್ಕೆ ನಲಿಯುತುಂ, ಬಿನದಿಸುತೆ
ಕುಳಿರ ತಿಳಿಗೊಳನ ತಣ್ಣನೆ ಮೀಹದಿಂದೊರ್ಮೆ,
ಇನಿರಸದ ಪಣ್ಗಳಂ ತಿರಿದುಂಡು, ದಿನದಿನಂ
ಬಿಡದೆ ರಮಿಸಿದರಿಂತು. ತಾನೆನಿತ್ತೊರ್ಮೆ ಅರ್ಜುನಂ
ನಡುಪಗಲ ಬಿರುಬಿಸಿಲಳುರೆ ಜಗತ್ತೆಲ್ಲಮಂ,
ತರುವರದ ನಿಬಿಡ ಛಾಯಾ ಶೀತಲಾಶ್ರಯದಿ
ಶಾದ್ವಲದ ಮೇಲೆ ಕಿಸಲಯದ ಪರ್ಯಂಕದಲಿ
ಬಿಂಬಾಧರೆಯ ಕೋಮಲಾಂಕದೆಡೆ ಶಿರವಿಟ್ಟು
ವಿಶ್ರಮಿಸಿಕೊಳುತೆ, ಹೇಳುವನು ಪಾಂಡವ ಕಥಾ
ವಿಸ್ತಾರಮಂ. ಕೇಳುತೆ ಮೃಗಾಕ್ಷಿ ಮರೆದಪಳ್
ಬಾಹ್ಯಮಂ. ಮುಗಿಯೆ ಹೊರಗಣ್ಣಲರ್ದಪುದು ಮನದ
ಮಾಯಾಕ್ಷಿಃ ಮಿಂಚುವುವು ಚಿತ್ತರಸಭಿತ್ತಿಯಲಿ
ಹಸ್ತಿಪುರಿ ಮೇಣಿಂದ್ರಪ್ರಸ್ಥಾದಿ ನಗರಗಳ್,
ನಾಡುಗಳ್, ಪಾಳಯದ ಬೀಡುಗಳ್ ಕಾಳೆಗದ
ನೋಟಗಳ್; ಪಾಂಡು ಧೃತರಾಷ್ಟ್ರ ಕೌರವ ಭೀಷ್ಮ
ದ್ರೋಣ ಧರ್ಮಜ ಭೀಮ ಕರ್ಣ ದ್ರೌಪದಿ ಶಕುನಿ

ಶ್ರೀಕೃಷ್ಣ ಬಲರಾಮ ನಕುಲ ಸಹದೇವಾದಿ
ನೆಲದರಿಕೆಯಾಳುಗಳ್! ಆಲಿಸುತ್ತಾಲಿಸುತೆ
ತೇಲಿಹೋಹಳು ಕನಸಿನಲಿ ಚಿತ್ರೆ, ತಾನೆ ತಾಂ
ಕನಸಾಗಿ. ಕುಸುಮ ವನ ಜನಿತ ಪರಿಮಳ ಮಂದ
ಶೀತಲಸಮೀರಣಂ ಶೀಡುತ್ತಿರೆ ಕಿರೀಟಿ
ಕಥೆಯ ಹೇಳುತ್ತೆ ಹೇಳುತ್ತೆ ಜೋಂಪಿಸಿ ಮಲಗಿ
ನಿದ್ದೆಗೈಯುವನೊಯ್ಯನೆಯೆ ಕಣ್ಣೆವೆಯ ಮುಚ್ಚಿ.
ನಿದ್ರಿಸುವ ಸೌಂದರ್ಯಮುದ್ರಿಕೆಯ ಕಣ್ದೆಣೆಯೆ
ನೋಡಿ ನಲಿದಪಳಬಲೆ. ಚುಂಬನಕ್ಕೆವೆ ಬಿರ್ಚಿ
ನಗೆಮುಗುಳನಿನಿತು ಅಲರಿಸುತೆ ಕೇಳುವನವಂ:
"ನೀನಾರೆಲೆಗೆ ಚೆನ್ನೆ? ಯಾವ ದೂರದ ದಿವ್ಯ
ಲೋಕದಿಂದಿಳಿತಂದು ಎನ್ನ ಬಾಳನು ಇನಿತು
ಇನಿಗೈದಪೆ? ನಿನ್ನ ಹೆಸರೇನರುಹು. ಸವಿದದನು
ಸುಖಿಸುವೆನು. ಕೇಳಿದೆನೆನಿತೊ; ಹೆಸರನೊರೆಯದಿಹೆ!
ಹೆಸರಿಲ್ಲವೇ ನಿನಗೆ? ನೀನೆನಗೆ ತೋರುತಿಹೆ
ಮಧುರಮಾಯಾಸ್ವಪ್ನದಂತೆ. ನಿರುತವನರಿಯೆ.
ಹೆಸರನೊರೆ, ಓ ಎನ್ನ ಸವಿಗನಸೆ, ಮನದನ್ನೆ!'"
ಬಾಯ್ದೆರೆಯನರಳಿಸುತೆ ಮರಿಗೋಗಿಲೆಯ ತೆರದಿ
ಚಿತ್ರಾಂಗಿ: "ಹೆಸರೇಕೆ, ಓ ಎನ್ನ ಎದೆಯನ್ನ?
ಬಿಸಿಲ ಬೇಗೆಗೆ ಬಳಲಿ ದಾರಿ ಬಳಿ ತೋಂಟದಲಿ
ಸ್ವಾದು ಚೂತದ ಫಲವ ಕೊಯ್ದುಂಬವಂಗೇಕೆ
ಹೊಲದ ಹೆಸರಿನ ಗೊಡವೆ? ಓ ಎನ್ನ ಉಸಿರೊಲವೆ,
ತನಿವಣ್ಣನುಂಡು ಸವಿ! ಯಾರಾದರೇನಂತೆ
ನಾಂ? ಹೆಸರಿನಲಿ ರಸವೆ? ಹೆಸರಿಲ್ಲದವಳು ನಾಂ.
ಬರಿ ಮಾಯೆ! ಸವಿಸೊನ್ನೆ! ಆದರೇಂ! ಮನದನ್ನ,
ಮಾಯೆ ನನ್ನಿಯ ಮೊದಲ ಛಾಯೆ! ಇಂದಲ್ಲದಿರೆ,
ಎಂದಾದರೊಂದುದಿನವರಿವೆ ನೀಂ, ನಾನಾರು
ಎಂಬುದನು, ಮುಂದೆ.—ನೋಡಿದೊ ಮಧುವಿಪಿನವೆಂತು
ಮುಳುಗಿದೆ ಹಗಲ್ಗನಸಿನಲಿ! ತಣ್ಣನೆಯ ಗಾಳಿ
ಶೀಡುತಿಹುದೆಂತು ಬಿಜ್ಜಣವಿಕ್ಕಿ! ನೋಡಲ್ಲಿ
ಬಿಸಿಲ ಹನಿ ಹಸುರಿನಲಿ ತಂಪನೆರಚುತೆ ಕಣ್ಗೆ

ಕುಣಿಯುತಿಹುದೆಂತು! ಆ ಮರದ ಕೊಂಬೆಯಮೇಲೆ
ನವಿಲು ಕುಳಿತಿದೆ ಚಿತ್ರ ಬರೆದಂತೆ! ಆ ಹರಿಣಿ
ತನ್ನ ಮುರಿಯೊಡನೆಂತು ಸರಸವಾಡುತಿದೆ! ಅದೊ,
ಬನದ ಮೌನದ ತೂರ್ಯವನೆ ಊದುವಂದದಲಿ
ವನವನಪ್ರತಿಧ್ವನಿತ ಕಳಕಂಠವಾಣಿ! ಆಃ
ಗಿರಿಯಿಂದೆ ಗಿರಿಗೆಂತುಟನುರಣಿತವಾಗುತಿದೆ ಕೇಳ್!''"
ಮಧುರವಾಙ್ಮಧುಧಾರೆ ಸೋರೆ, ಫಾಲ್ಗುಣ ತಾರೆ,
ಆ ನೀರೆ ತಾಂ ಪಾಡೆ ಸ್ವರಸರಸ್ಸಲಿಲದಲಿ
ಕಾಡೆ ತೇಂಕಾಡುವೋಲ್ ಕುಂತಿಯ ತನೂಭವಂ
ಗಾನದಾನಂದ ವೈತರಣಿಯಲಿ ಮುಳುಗಿ ಮೈ
ಮರೆದಪಂ. ಚೈತ್ರವಾಹಿನಿಯಿಂತು ತಾನಾರು
ಎಂಬುದನೆ ರಟ್ಟುಗೈಯದೆಯೆ ಫಲ್ಗುಣನೊಡನೆ
ಕ್ರೀಡಿಸಿರೆಯಿರೆ ಇಕ್ಷುದಂಡ ಕೋದಂಡನಿಂ
ಪಡೆದುಕೊಂಡವಧಿಯದು ಬಳಿಸಾರಿದತ್ತೊಯ್ಯನೆ.
ಮೇಣೊರ್ದಿನಂ ದಿವಸದವಸಾನ ಸಮಯದಲಿ
ಫಲ್ಗುಣಂಬೆರಸಿ ಚಿತ್ರಾಂಗಿ ಬನವೂಗಳಂ
ತಿರಿದಿನಿಯನಂ ಅಲಂಕರಿಸುತುಂ, ಪಣ್ಗಳಂ
ಕುಯ್ದುಕುಯ್ದಾತಂಗೆ ತಿನಲೀಯುತುಂ, ಕ್ರೀಡೆಯಿಂ
ಪುಷ್ಪಿತವ್ರತತಿತತಿಯಿಂ ವ್ರತಿಪತಿಯ ಕಟಿಗೆ
ಸಾರಸನಮಂ ರಚಿಸಿ ತೊಡಿಸುತುಂ, ವ್ರೀಡೆಯಿಂ
ಮುಡಿಸುತುಂ, ಸರಸವಾಡುತ್ತೆ ಸಾರಸವದನೆ
ಮೆಲ್ಲಮೆಲ್ಲನೆ ಬಳಿಯ ಕುತ್ಕೀಲ ಚೂಡದ ತುಂಗ
ಶೃಂಗರಂಗಕ್ಕೇರಿದಳ್.  ತೋರಿದಳ್ ಪತಿಗೆ
ರಮಣೀಯ ದೃಶ್ಯವೈಶಾಲ್ಯಮಂ: ಗಿರಿಯೊಡನೆ
ಗಿರಿ, ಕಾಡೊಡನೆ ಕಾಡು, ನಗಕಿದಿರು ಕಾನನಂ,
ಕಾಂತಾರಕಿದಿರು ಪರ್ವತಪಂಕ್ತಿ, ವರ್ಧಿಸುತೆ
ಸ್ಪರ್ಧಿಸುತೆ ದೂರದಂಬರದ ಪಾರಂಬರಂ
ನೆರೆ ಪರ್ವಿ ಮೆರೆದಿರ್ದುವಾ ದೃಷ್ಟಿಸೀಮೆಯಲಿ.
ನೋಡುತಿರಲಿರಲರ್ಜುನಂ ಸುಯ್ದು, ಖಿನ್ನತಾ
ಭಾರದಿಂ ಬಾಗುತೆ, ಕುಬೇರ ದಿಙ್ಮುಖವಾಗಿ
ನಟ್ಟಾಲಿ ಬೀಳ್ವಂತೆ ನಿಟ್ಟಿಸುತೆ ಮೌನಮಿರೆ

ಕಂಡು ಕಾತರೆ ಚಿತ್ರೆ ಸಕುರಣ ಧ್ವನಿಯಿಂದೆ
ಬೆಸಗೊಂಡಳಿಂತು: "ಓ ನನ್ನ ಪ್ರಾಣಪ್ರಭೂ,
ಶೂನ್ಯ ಚುಂಬಿತ-ಅಸ್ತ-ಅಚಲ-ಚೂಡದಿ ವರುಣ-
ದಿಕ್ತಟದಿ ಮುಕ್ತಪಾದಾವಲಂಬಂ ರವಿಯ
ರುಕ್ಮಬಿಂಬಂ ಕ್ರಕಚಿತ ದಿಗಂತರೇಖೆಯಂ
ಮೆಟ್ಟಿ ನಿಂದೆಸೆಯುತಿರೆ ನೀನದೇನಿಂತೇಕೆ, ಪೇಳ್,
ಉತ್ತರ ದಿಶಾವಲಯದತ್ತ ಚಿತ್ತನುಮಾಗಿ
ನಟ್ಟ ನಿಡುನೋಟದಿಂದೇನನಾಲೋಚಿಸಿಹೆ?''
ನಲ್ಲೆಯ ಕದಂಪಂ ಬೆರಳ್ದಳಿರಿಂ ಸವರುತಿಂತು
ಮಾರುತ್ತರಂಗೊಟ್ಟನಿಂದ್ರಜಂ: "ಹೃದಯೇಶ್ವರಿ,
ನೀನೆನ್ನನೇಕಿಲ್ಲಿಗೆಳೆತಂದೆ, ಅಯ್ಯೊ, ಈ
ಎತ್ತರಕೆ, ಮೇಣ್ ಬಿತ್ತರಕ್ಕೆ? ಆ ಕಂದರದ
ಸಂಕುಚಿತ ಜೀವನವೆ ಸುಖದಮಾಗಿರ್ದತ್ತು.
ಅಲ್ಲಿ ನಿನ್ನೊಡಗೂಡಿ ವಿಸ್ತೃತ ಪ್ರಪಂಚವಿದು
ಇಹುದೆಂಬುದನೆ ಮರೆತ ಸೊಗದೊಳ್ ನೆನೆಯದಿರ್ದೆ.
ಅಯ್ಯೊ, ನೀನಿಲ್ಲಿಗೇಕೆನ್ನನೆಳೆತಂದೆ? ಸತಿ,
ಉತ್ತರಾಶಾ ಮೇಖಲೆಯ ದಾಂಟುತೆನ್ನಾಶೆ
ಗರಿಗೆದರಿ ಹಾರುತಿದೆ ಅಗ್ರಜಾವರಜರಂ
ಸಂದರ್ಶಿಸುವ ಸಂಭ್ರಮದಿ. ಇಂದು ನನ್ನೆದೆಯ
ಹಕ್ಕಿ ತುಡಿದಿದೆ ಮದನ ಕನಕ ಪಂಜರದಿಂದೆ
ಬಿಡುಗಡೆಯ ಬಯಸಿ! ಸುಂದರಿ, ನಿನ್ನ ಮನೆಯೆಲ್ಲಿ?
ತಂದೆತಾಯಿಯರಕ್ಕತಂಗಿಯರ್ ತಮ್ಮದಿರ್
ಬಂಧುಗಳ್ ಬಳಗದವರಾರಿಲ್ಲವೇಂ ನಿನಗೆ?
ನೋಡೆ ನಿನ್ನಂ ಬಯಸುವವರಿಲ್ಲವೇನಲ್ಲಿ ಪೇಳ್?
ಮೇಣ್ ನೀಂ ನೋಡಲೆಳಸುವರಿಲ್ಲವೇಂ?''
ರತಿಪತಿಯ
ವರದವಧಿ ಕೊನೆಮುಟ್ಟಿಹುದನರಿತು ಚಿತ್ರಾಂಗಿ
ನಿಡುಸುಯ್ದು ಕಡುದುಗುಡದಿಂದೆ: "ಹೃದಯೇಶ್ವರಾ,
ಇಂದಿಂಗೆ ಬೇಸತ್ತೆಯೇನೆನಗೆ? ದಣಿವಾಯ್ತೆ
ನಿನಗಿಂದು? ಇರು, ಇನಿಯ, ನಾಳೆ ಮುಂಬೆಳಗಿನಲಿ
ನಾನಿಲ್ಲವಾದಪೆನ್! ಕನಕಪಿಂಜರದಿಂದೆ

ಹೃತ್ಪಕ್ಷಿ ಮುಕ್ತಿ ಪಡೆದಪುದು! ಮನೆ ನನಗಿಲ್ಲ.
ಹೆಸರಿಲ್ಲ. ನಾನೊಂದು ಕನಸು. ನಿನ್ನೆದೆಯೊಲ್ಮೆ
ಕಾಣುತಿಹ ಸವಿಗನಸು. ನಿದ್ದೆಯಿಂದೆಚ್ಚತ್ತು
ನಾಳೆ ನೀಂ ನೋಳ್ಪನಿತರೊಳೆ ಬಿರಿವುದೀ ಮಾಯೆ!
ಆವರೆಗೆ ಈ ಹೂವನೂ ಧರಿಸು ಮಾಲೆಯಲಿ,
ಪ್ರಾಣೇಶ! ಎನಿತೆನಿತೊ ಹೂವುಗಳು, ಇದಕಿಂತ
ಬಣ್ಣದಲಿ ಕಂಪಿನಲಿ ಚೆಲುವಿನಲಿ ನೂರ್ಮಡಿಯ
ಹೂವುಗಳು ನಿನ್ನ ಹಾರದೊಳೊಳವು; ಬಲ್ಲೆನಾಂ!
ಆದೊಡಂ ನಿನ್ನಲಸ ಸಮಯದಲಿ, ಈ ವಿಜನ
ವಿಪಿನದಲಿ, ನಿನ್ನ ಕ್ರೀಡಾವಸ್ತುವಾಗಿರ್ದು,
ಬೇಸರಾಸರ್ಗಳೆದು ಹಗಲಿರುಳು ನಿನ್ನೊಡನೆ
ನಲಿದಾಡಿದೀ ದೀನ ಕಾನನ ಪ್ರಸೂನಮಂ,
ಹೇ ಕಾಂತ, ಮರೆಯದಿರು; ತೊರೆಯದಿರು!''"

ಅರ್ಜುನಂ

ಪೆರೆನೊಸಲನಡಿಗೆ ಚಾಚಿದ ತಿಮಿರಕುಂತಲೆಯ
ಮೈತಬ್ಬಿ, ಗದ್ಗದಿತ ಕರುಣಾರ್ದ್ರ ವಾಣಿಯಿಂ:
''ಹಗಲಿರುಳನೆಂದಿಗೂ ಕೈಬಿಡದು, ಕಾಮಿನಿಯೆ;
ಉದಯಾಸ್ತ ಹಸ್ತ ಸಂಸರ್ಗದಿಂ ಪೃಥ್ವಿಯಂ
ಸುತ್ತುವರ್ ದಿನದಿನಂ ಚಿರ ರಾಸಕೇಳಿಯಿಂ!
ಅಂತೆ ನಾವಿರ್ವರುಂ! ಚಿಂತೆ ನಿನಗೇಕೆ, ಸಖಿ?''"
ಪದ್ಮದಲದಿಂ ಶಿಶಿರಬಿಂದು ಬಸಿವಂದದಲಿ
ಕಂಬನಿಗಳುರುಳೆ ಹನಿಹನಿ ಮುತ್ತು ಮುತ್ತಾಗಿ,
ಮೃಗನೇತ್ರೆ ಶುಭಗಾತ್ರೆ ನುಡಿದಳಿಂತಾ ಚಿತ್ರೆ:
''ಪೃಥಿವೀಂದ್ರ, ರತಿವರನ ವರಮಹಿಮೆಯಿಂದಾದ
ಸೌಂದರ್ಯವಿದು ನಶಿಸುವುದು ನಾಳೆ; ಋತುನೃಪಂ
ಬಿಟ್ಟ ಕಾನನ ರಾಜಿಯಂತೆವೋಲಾದಪೆಂ!
ಹಿಂದೊರ್ಮೆ ನೂಂಕಿದಂದದೊಳೆನ್ನನಿನ್ನೊರ್ಮೆ
ಹಳಿಯುವೆ ಕಿರಾತ ಕನ್ನಿಕೆಯೆಂದು; ಮಾಯೆಯಿಂ
ಸೋಂಪಿಯಂ ಕಿಡಿಸಿ ವಂಚಿಸಿದ ಶಾಕಿನಿಯೆಂದು!
ನೀನಿಲ್ಲಿಗೈತಂದ ಪ್ರಥಮಾ ನಿಶೀಥದಲಿ
ಶೀತಕಿರಣಸ್ನಾತ ಶುಭ್ರೋರ್ಣದಭ್ರತತಿ

ವಿಭ್ರಾಜಿಸಿರೆ, ಹುತಾಶನ ಮುಂದೆ ತರುತಲದ
ನಿನ್ನೆಡೆಗೆವಂದ ನಾಣಿಲಿ ನಿಶಾಚರಿಯ ನೆನೆ!
ಪರಿಭೂತೆಯವಿನೀತೆ ಲಜ್ಜೆಯಿಲ್ಲದ ಧೂರ್ತೆ
ನಾನಾ ಕಿರಾತೆ! ಶ್ರೀ ಮದನ ಪ್ರಸಾದದಿಂ
ನಿನ್ನ ಹೃದಯವನೊಂದು ಮಾಸಂಬರಂ ಗೆಲ್ದು
ಸಗ್ಗವನೆ ಸೂರೆಗೊಂಡಾಕೆ! ಓಪನೆ, ಪಾಪಿ
ಇವಳೆಂದು ಕೋಪಿಸದೆ ಕಾವುದೈ. ಕಂಪಿಸಿದೆ
ನನ್ನೆದೆ ಅಮಂಗಲದ ಭೀತಿಯಿಂ!'' ವಿಸ್ಮಿತಂ
ಸಸ್ಮಿತವದನನಾಗಿ ಕಥೆಗೇಳುತೆ ಕಿರೀಟಿ
ರಮಣಿಯಂ ಸಂತೈಸುತಿರೆ, ದೂರ ಬಹುದೂರ
ಕಂದರ ಪ್ರಾಂತದಲಿ ದೇವೇಂದ್ರ ದಿಕ್ಕಿನೆಡೆ
ಮೆಲ್ಲಮೆಲ್ಲನೆ ದಟ್ಟಯಿಸುತಿರ್ದ ಕತ್ತಲೆಯ
ಮರ್ಬಿನಲಿ ಮಿರುಗಿದುವು ಸಾಸಿರ ಸೊಡರ್ಮಾಲೆ,
ಮಳೆಬಿದ್ದ ಮಲೆನಾಡಿನಡವಿಯಲಿ ಕವಿದುಬಹ
ಕಾರ್ಗತ್ತಲೆಯ ಗರ್ಭದೊಳ್ ನಿಬಿಡ ವೃಕ್ಷಲತೆ
ಮಸಿಮುದ್ದೆಯಾಗಿರುವ ಮೌನದೇಕಾಂತದಲಿ
ಲಕ್ಷೋಪಕ್ಷ ಖದ್ಯೋತ ಸಂಕುಲರಾಶಿ
ಮೆರೆವಂತೆ, ಮೇಣ್ ಕರ್ದಿಂಗಳಾಗಸದಲ್ಲಿ
ಅಮೃತಪಥದಲಿ ಹೊಳೆವ ತಾರಾಸ್ತಬಕ ಮಹಾ
ಸ್ತೋಮದಂತೆ! ಕೌತುಕದೊಳವಲೋಕನಂಗೈದು
ದೀಪಾಳಿಯಂ, ಪ್ರಶ್ನಿಸಿದ ದಿವಿಜೇಂದ್ರಸೂನುವಿಗೆ
ತರುಣಿಯೆಂದಳ್ ನಗುತೆಃ ''ಮಣಿಪುರದ ಭೂಪಾಲ
ಚಿತ್ರವಾಹನ ತನಯೆ, ಪಾರ್ಥಿವ ಮಹಾವೀರೆ,
ಚಿತ್ರಾಂಗದೆಯ ಬಿಟ್ಟ ಪಾಳೆಯದ ಬೀಡಿನಲಿ
ದೀಪಗಳ್ ಜ್ವಲಿಸುತಿವೆ!'' ಎನೆ ಕುತೂಹಲದಿಂದೆ
ಆ ಕ್ಷಾತ್ರರಮಣಿಯ ಕಥಾ ತೇಜದೇಳ್ಗೆಯಂ
ಕೇಳ್ವಾತುರದಿ ಪೃಥಾನಂದನಂ ಬೆಸಗೊಳಲ್,
ಹೇಳಿದಳು ಚಿತ್ರೆ ಪಾರ್ಥಂಗೆ ರೋಮೋದ್ಗಮಂ
ಸಂಭವಿಸುವಂತೆ. ಸತಿ ಹೇಳುತಿರೆಯಿರೆ, ನರಂ
ಕೇಳುತಿರುತಿರಲೆದ್ದುದೊಂದು ರಕ್ಕಸ ಗಾಳಿ
ತ್ರಿಭುವನವನಲುಗಿಪಾ ಪ್ರಲಯಪ್ರಭಂಜನನೆ

ಗಿರಿವನವನಪ್ಪಳಿಸಿ, ನಾಶದಾವೇಶದಿಂ
ಬೀಸಿ. ಭೂಧರಮೆ ಶಿರವೊಲೆದುದೆನೆ ವಿಪಿನಾಳಿ
ತೂಗಿದತ್ತೆಡಬಲಕೆ. ನೈಕ ಶತಮಾನದಿಂ
ಭೀಷ್ಮ ಪವಮಾನಹತಿಯಂ ಪ್ರತಿಭಟಿಸಿ ಮಲೆತು
ನಿಮಿರಿರ್ದ ಗರುವ ತರುವರಕುಲಂ ಮೂಲಮಂ
ತಿರಿಪಿ ಮಿಾಂಟಿದವೋಲ್ ನೆಲಕ್ಕುರುಳಿದುವು, ಪೊದರ್
ಗಿಡುಗಳಂ ಪುಡಿಗೈದು, ರೌರವ ಮಹಾರವಂ
ಕಾಡೆ ಕೂಗಿಡುವಂತೆ ಪೊಣ್ಮೆ. ಮಂತ್ರಿಯ ಮುಂದೆ
ಮಂತ್ರಕೆ ಬೆದರುತೋಡುವ ಮರುಳ್ಗಳನೆ ಹೋಲಿ
ಧೂಳಿ ತರಗೆಲೆ ತೃಣಂ ಕಸಕಡ್ಡಿಗಳ ಹಿಂಡು
ಚೆದರಿದುದು ನಾನಾದೆಸೆಗೆ ನುಗ್ಗಿ. ಒಡನೊಡನೆ
ವರುಣ ಹರಿದಂತದಿಂದೆದ್ದುದು ನಭಶ್ಶಿರಕೆ
ಕಾರ್ಮುಗಿಲ್ ಕರ್ಬೊಗೆಯ ಪೆರ್ಬಂಡೆಯಂತುರ್ಬಿ,
ದುಶ್ಶಕುನ ಛಾಯೆಯಂತೊಯ್ಯನೊಯ್ಯನೆ ಪರ್ವಿ
ಗಗನದಾದ್ಯಂತಮಂ. ಕೆಮ್ಮಿಂಚು ಹೊಮ್ಮಿಂಚು
ಕುಡುಮಿಂಚು ಕುಡಿಮಿಂಚು ಗೆರೆ ಬಳ್ಳಿಮಿಂಚುಗಳ
ಗೊಂಚಲ್ಗಳೆತ್ತಲುಂ ಕರ್ಮೋಡಮೊತ್ತದಲಿ,
ಕಾರೆಂಬ ಕಾಳಾಹಿಯಗ್ನಿ ಜಿಹ್ವೆಗಳಂತೆ,
ಸಂಚಲಿಸಿ ಚಂಚಲಿಸಿ ಮಿಂಚಿ ಮುಂಚುತೆ ಹಿಂಚಿ
ರಂಜಿಸಿದುವತಿಭಯಂಕರ ಶಂಕರತೆವೆತ್ತು.
ನಡುನಡುವೆ ದಿಗ್ಭಿತ್ತಿಗಳ ಬೆಸುಗೆ ಬಿರಿವಂತೆ
ನಿರ್ಘೋಷಿಸಿತು ರೋಷದಿಂದಶನಿ, ಕಂಪಿಸುವವೋಲ್
ಗಿರಿವನಸ್ಥಿರ ಧರಾಮಂಡಲಂ! ಸನ್ನಿಹಿತ
ವರ್ಷಭೀಷಣ ಮುಖಕೆ ಬೆದರಿ, ಕಾರ್ಗತ್ತಲೆಯ
ವನಮಧ್ಯೆ, ದಂಪತಿಗಳಿರ್ವರುಂ ಬೇಗದಿಂ
ಶಿವಗುಡಿಗೆ ನಡೆದರುದ್ವೇಗದಿಂ. ಭೋರೆಂದು
ಕಾರು ಕಾರ್ದತ್ತಾಲಿಕಲ್ಗವಣೆಗಳನೆಸೆದು
ಪೊಡವಿಯಡವಿಯ ಹೊಡೆಗೆ! ಹೊರಗೆ ಕತ್ತಲೆ ರಾತ್ರಿ
ಸಿಡಿಲ್ಮಿಂಚು ಗುಡುಗು ಮಳೆಯಗುರ್ವುವಡೆದಿರುತಿರಲ್
ಚಿತ್ರ ಸಿತವಾಹಂಗೆ ಚಿತ್ರಾಂಗದೆಯ ಕಥೆಯಂ
ಚಿತ್ರಿಸಿದಳಬಲಾಸುಲಭ ಕಲಾಧ್ವನಿಯಿಂದೆ.

ಮುಳ್ಳುಮೊನೆಗೆಡೆಯಿಲ್ಲದಂದದಿ ಧರಿತ್ರಿಯಂ
ತೀವಿರ್ದುದಿರಿವ ಕಲ್ಗತಂಲೆ. ಮುಸಲಧಾರೆ
ಪೊಯ್ದುತ್ತವಿಚ್ಛಿನ್ನಮಾಗಿ, ಭೈರವ ಗಾಳಿ
ಮರ್ದಿಸೆ ಹುಹುಂಕೃತಿಯೊಳಡವಿ ಗೋಳಿಡುವವೋಲ್!
   ಇಂತಿರುಳು ಸಾಗುತಿರೆ, ಕಥೆ ಮುಗಿಯಲರ್ಜುನಂ
ಲಲಿತೆಯಂ ಮುದ್ದಿಸುತೆ ಮಾತು ಮಾತಿನ ಮಧ್ಯೆ,
ಮರುದಿನಂ ಪೊರಮಟ್ಟು ತೀರ್ಥಯಾತ್ರೆಯ ಮುಗಿಸಿ
ತಿಂಗಳಾರಕೆ ಮರಳಿ ಬಹೆನೆಂದು ನುಡಿಯಿತ್ತು,
ಕಷ್ಟದಿಂದೆಂತಾನುಮವಳನೊಡಬಡಿಸಿದಂ
ಪ್ರಣಯಪ್ರಯತ್ನದಿಂ. ಕಂಬನಿಯ ಸೂಸುತ್ತೆ,
ಕಾಂತನಂ ನಳಿತೋಳ್ಗಳಿಂದೆ ಬಿಗಿಯಪ್ಪುತ್ತೆ,
ಪತಿದೇವನಂ ಬಿಡುವ ಮನಸಿಲ್ಲದೆಯೆ ಬಿಡಲ್
ಸಮ್ಮತಿಯಿತ್ತಳಾಕೆ. ಪವಡಿಸಿದರಿರ್ವರುಂ
ಮೊಗಕೆ ಮೊಗಮೆರ್ದೆಗೆ ಎರ್ದೆಯಿಟ್ಟು ಆಲಿಂಗನದ
ಸುಖಲಹರಿಯಲಿ ತೇಲಿ: ಕರಗಿತು ಕಡೆಯ ರಾತ್ರಿ!

# ನಾಲ್ಕನೆಯ ಪರ್ವಂ

ಇರುಳು ಕಳಿದುದು. ಉದಯ ಚೂಡದಲಿ ಮೂಡಿದಳು
ಉಷೆ. ನೋಡೆ, ಮೂಡಣದ್ರಿಯ ಕೋಡುಗಲ್ಲಿನೆಡೆ
ರುಚಿರ ರವಿ ರೋಚಿಮಂಡಲವಿಣಿಕಿ ಬರೆ, ಭೂಮಿ
ಹೊಸ ಮಳೆಯ ಮಿಂದೆಸೆವ ಮಲೆಯ ಮಾಲೆಯ ನೆವದಿ
ಗಹಗಹಿಸಿ ಬೀರಿತು ಪಸುರ್ನಗೆಯ ವೀಚಿಯಂ,
ಹಿಮಮಣಿ ಮರೀಚಿಗಳ ದನ್ತಪಂಕ್ತಿಯ ಕಾನ್ತಿ
ದೆಸೆದೆಸೆಗೆಸೆಯೆ.
ಪಕ್ಷಿಗಾನದಿಂದೆಳ್ಚರುತೆ,
ನಿದ್ರಿತ ಮನೋರಮೆಯ ತೋಳ್ತಳ್ಕೆಸೆರೆಯಿಂದೆ
ಬಿಡಿಸಿಕೊಂಡೊಯ್ಯನೆಯೆ ಮೊಗವನವಲೋಕಿಸುತೆ,
ಬೆರಗಾದನರ್ಜುನಂ ಕಂಡು ಚಿತ್ರಾಂಗದೆಯ
ಸರಳ ಸಾಮಾನ್ಯ ಸೌಂದರ್ಯಮಂ! ಅಂಗಜನ
ಸಂಗವಿಲ್ಲದ ಕಂಗಳಿಗೆ ರುಚಿಸದೆಂಬಂತೆ
ಹೆಂಗಳಲಿ ಶೃಂಗಾರವಿಂದ್ರಜಾತಂಗಾಕೆ
ತೋರಿದಳ್, ಪೂವಾಗಿ ಪೋಗಿ ಮಿಡಿಗಾಯ್ಗಳಂ
ಪಡೆದೊಡಲ ವಾಸಂತದಂತ್ಯದ ರಸಾಲದೋಲ್; ಮೇಣ್
ಕೆಂದಳಿರ ಕೋಮಲ ಶ್ರೀ ಸುಂದರತೆ ಮಾಣ್ದು
ಪಸುರೆಲೆಗಳಂ ಪೊದೆದ ತರುಸುಂದರಿಯವೋಲ್.
ನಲ್ಲೆ ನಯನೋತ್ಪುಲ್ಲೆಯಪ್ಪಾ ಮುನ್ನಮಲ್ಲಿಂ
ತೆರಳ್ದಪುದೆ ಲೇಸೆಂದು ಭಾವಿಸಿ, ವಿಷಣ್ಣದಿಂ
ತನ್ನುಂಗುರವನೊಯ್ಯನಾ ಕಯ್ಯ ಬೆರಳಿಂಗೆ
ತುಡಿಸಿ, ಕರುಣಾರ್ದ್ರಹೃದಯದಿ ಸುಯ್ದು ನಿಡುನೋಡಿ,
ಪೋದಿರುಳ್ ಪೂಜಿಸಿದ ಪುಷ್ಪೋಪಹಾರದಿಂ

ಮೆರೆವ ಮಂಗಲ ಚಂದ್ರಮೌಳಿಗೆ ಮಣಿದು ಬಾಗಿ,
ತಿಂಗಳಾರಕೆ ಮರಳಿ ಬಂದು ಕಾಣುವೆನೆಂಬ
ಭರವಸೆಯ ನೆಮ್ಮಿ, ಧೈರ್ಯವನೊತ್ತಿ ಚಿತ್ತಕ್ಕೆ,
ಹೊರಹೊಂಟನಾ ಸವ್ಯಸಾಚಿ, ದಮಯಂತಿಯಂ
ನಳನೃಪಂ ನಡುಗಾಡಿನಲಿ ಬಿಟ್ಟುಹೋದಂತೆ.
ನಡೆಯುತಿರಲಡಿಗಡಿಗೆ ಹಿಂದಕೆಳೆದುದು ಮನಂ;
ದೃಷ್ಟಮಲ್ಲದ ಸೂಕ್ಷ್ಮಮೋಹಸೂತ್ರದಿ ಪದಂ
ಬಿಗಿದಂತೆವೋಲಾಗೆ, ಮುಗ್ಗುರಿಸಿ ನಿಲ್ಲುತುಂ
ಪಿಂದೆಸೆಗೆ ನೋಡುತುಂ, ಕಾದಂಬರಿಯನುಳಿದು
ದೇವ ಚಂದ್ರಾಪೀಡನೆಯ್ದಿದವೊಲಾ ನರಂ
ಮುಂಬರಿದನೆಂತಾನುಮೆದೆಯ ಚಾಂಚಲ್ಯಮಂ
ನಿಗ್ರಹಿಸಿ ವ್ಯಗ್ರಮನದಿಂದೆ. ಖಗದಿಂಚರಂ
ಮುಳುಗುವಂದದಲಿ ನಗದಂಚಿನೊಳ್ ದಟ್ಟಯಿಸಿ
ಬೆಳೆದಿರ್ದ ಬಿದಿರುಮೆಳೆ ಪವನ ಸಂಘರ್ಷಣೆಗೆ
ಘೀಂಕರಿಸಲಿಭದಂತೆವೋಲ್ ವಿಕಟರವಗೈದು,
ಕಂಪಿಸಿತು ಕಾಂತಾರಮಾ ಕೀಚಕಧ್ವನಿಗೆ!
　ನಡೆದನತ್ತ ಕಿರೀಟಿ. ಇತ್ತ ದೇಗುಲದಲ್ಲಿ
ಚಿತ್ರಾಂಗದೆಯ ಸುಪ್ತ ಸುಖಮತ್ತಚಿತ್ತದಲಿ
ಸವಿಗನಸುಗೊಳದ ತಾವರೆಯ ಹೊನ್ನಿನ ಗುಳ್ಳೆ
ಬಿರಿದುದು. ತೆರೆಯುತೆವೆಯನೊಯ್ಯನೆ ಬಿಸಜನೇತ್ರೆ
ದೃಷ್ಟಿಸುತೆ ಸುತ್ತಲುಂ, ತನ್ನೆಡೆಯ ಸಜ್ಜೆಯಲಿ
ಕಾದಲಂ ಕಾಣದಿರಲುದ್ವಿಗ್ನ ಖೇದದಿಂ
ಕಳವಳಿಸುತೆದ್ದು ಕರೆದಳ್, ಮಧುನಿಕುಂಜದಲಿ
ಪಕ್ಷಿವಧು ಹೃದಯಮಿಲನಕೆ ತನ್ನ ನಲ್ಲನಂ
ನೇಹದಿ ಕುಕಿಲ್ವಂತೆ. ನೀರವ ಭವಾಲಯಂ
ದನಿಯ ಮರುಬಿಂಬಿಸಲ್, ಮರುದನಿಯನಲ್ಲದೆಯೆ
ಮಾರ್ನುಡಿಯನಾಲಿಸದೆ, ವಿಹ್ವಲಿಸಿ, ಲಲಿತಾಂಗಿ
ತೊಳಲಿದಳ್, ದೇಗುಲದೊಳೆಲ್ಲೆಡೆಯೊಳಂ, ಕರೆಯುತೆ
ಹುಡುಕಿ ಹುಡುಕಿ. ತರ್ವಾಯವಾಯತನದಿಂ ಪೊರಗೆ
ಪೊರಮಟ್ಟು, ಕಣ್ಬೊಲದ ಬನದೊಳೆತ್ತಲುಮೆಸೆದು
ದೃಷ್ಟಿಯ ಮಯೂಖಗಳನರಸಿದಳ್ ನಿಡುನೋಡಿ,

ಪೆಳರ್ವೆರಸಿ ಕರೆಕರೆಯುತೋಡಾಡಿ, ಹುಲಿ ಹಿಡಿದ
ದನದ ಕರು ಕಂಗೆಟ್ಟು ಪೊಲಬುಗೆಟ್ಟಡವಿಯಲಿ
ಅಂಬೆಯುಂಬೆಂದು ತನ್ನಂಬೆಯಂ ಹಂಬಲಿಸಿ
ನೆರೆ ಹಲುಬುತೊರಲಿ ಕರೆವಂತೆ. ಕೊಳದೆಡೆಗೆಯ್ದಿ
ತವಕದಿಂದವಲೋಕನಂಗೆಯ್ದು, ಒಡನೊಡನೆ
ಮರಳಿದನ್ ಮಾಕಂದ ಕಂದರ್ಪ ತರುತಲದ
ಪೊದರ್ವನೆಗೆ; ನಿಲ್ಲದಲ್ಲಿಂದೆ ಪರಿದಳ್ ಮುಂದೆ
ಬನದೊಳುಂ ಕಳ್ದು ಬಾಯ್ದೊಡಿದುಯ್ಯಲೆಯೆಡೆಗೆ;
ಧಾವಿಸಿದಳಲ್ಲಿಂದೆ ಚಕ್ಷುಶ್ಶ್ರವಾಕ್ಷಿಯಿಂ
ತಾಮಿರ್ವರಂದೊಂದು ಪಕ್ಷಿಯಂ ರಕ್ಷಿಸಿದ
ಮೊರಡಿಯೆತ್ತರದ ತಾಣಕ್ಕೆ; ಮೇಣತ್ತಣಿಂ
ತಳರ್ದಳೆತ್ತೆತ್ತಲುಂ ಗೊತ್ತುಗುರಿಯಿಲ್ಲದೆಯೆ
ಚಿತ್ತದುನ್ಮತ್ತತೆಯೊಳೆಂತಂತೆ ಪುತ್ತುಮಂ
ಪೊದರುಮಂ ಗೆತ್ತು ತ್ರಿದಿವನಾಥಜಾತಂಗೆ,
ಸುಟ್ಟುರೆಯೊಳಲೆವ ತರಗೆಲೆಯಂತೆ, ಘೂರ್ಣಿಸುವ
ನೀರ್ದಿಗುರಿಗೊಳಗಾದ ಬಣಗು ತೃಣಕಣದಂತೆ.
ಪೊಳೆಯುತಿರ್ದುದು ಬಿಸಿಲ್; ಕಂಡಳಿಲ್ಲದನಾಕೆ.
ಪಾಡುತಿರ್ದುದು ಪಕ್ಕಿಯದನು ಕೇಳಿದಳಿಲ್ಲ.
ತಿರುಗಿದಳ್ ತಿರುತಿರುಗಿ, ತೊಳಲಿದಳ್ ತೊಳತೊಳಲಿ.
ಬಗೆಯದೆ ಬಳಲ್ಕೆಯಂ, ಬೆಮೆಗೊಂಡ ಪಾಂಗಿನಿಂ,
ಪಾಸುಪೊಕ್ಕಾಗಿ ಬನಬೆಟ್ಟಗಳಲೆಲ್ಲೆಲ್ಲಿಯುಂ,
ಮಿಗಗಳುಂ ಬೆಕ್ಕಸದಿನಲ್ಲಲ್ಲಿ ನಡೆಗೆಟ್ಟವೋಲ್
ನಿಂತು ಕೌತುಕದಿನೀಕ್ಷಿಸುವ ತೆರದಿ!
ಕೃತ್ತಿಕೆಯ
ತಿಂಗಳಲಿ, ವಿಪಿನಪರಿವೃತ ವಿಪುಲವಿಸ್ತರದ
ಗದ್ದೆಕೋಗಿನಲಿ, ಹಳದಿಯ ಪೈರು ಬೆಳೆಬೆಳೆದು
ಹಬ್ಬಿಯಿರೆ ಶಾಲಿವನ ವನಧಿಯ ಸುವಿಸ್ತೀರ್ಣ
ಲಂಬಾಯಮಾನ ಸೈಕತವೇಲೆಯನು ಹೋಲಿ,
ಲೋಲಶೀಲ ಸಮೀರನೊಯ್ಯನೊಯ್ಯನೆ ತೀಡೆ
ನೆಲವೆ ಸಪ್ರಾಣತೆಯಿನುಸಿರೆಳೆದು ಬಿಡುವಂತೆ
ತೆರೆಯೆದ್ದು ತೆರೆಬಿದ್ದು ಬತ್ತ ಬಿತ್ತರ ಗದ್ದೆ

ತೆನೆವುಲ್ಗೆ ತೆನೆಯುಜ್ಜುವುದು ಸುಯ್ದನಿಯ ಸೂಸಿ.
ಹೊಂಬಣ್ಣವೆರಚುವುದು ಮುಂಬಿಸಿಲ್. ತುಂಬುವುದು
ಕಾಡುಗಳನೆಲ್ಲ ಪೊನ್ದೆನೆಯ ಕಮ್ಮಿತು ಗಾಳಿ
ಮಿಗವಕ್ಕಿಗಳ ಹಿಂಡನೌತಣಕ್ಕಾಹ್ವಾನಿಸಿ!
ಬಂದೆರಗಿದಪ್ಪವಾ ವ್ರೀಹಿವಿಸ್ತಾರಕ್ಕೆ
ಬನಮೆಚ್ಚ ಕೆಮ್ಮೊನೆಯ ಪಸುರ್ಗರಿಯ ಕಣೆಗಳೆನೆ
ಗಿಳಿವಿಂಡು ದಂಡು; ಕಬ್ಬಿನ ಗರಿಗೆ ಹಕ್ಕಿಗಳ
ಕರಿಮುಗಿಲ್; ಗುಬ್ಬಳಿಸಿ ಪಟಪಟನೆ ಹಾರಿಬಹ
ಹೊರಸುಗಳ ಸಮುದಯಂ; ಪುರುಲೆಗಳ ಪೆರ್ಮಂದೆ;
ಬರ್ಹಿಗಳ ರಮಣೀಯ ಸಮುದಾಯಮಿತ್ಯಾದಿ
ನಾನಾ ಶಕುಂತವ್ರಜಂ. ಪೊಲಗಾಹಿಯಬ್ಬರಿಸಿ
ದಿಕ್ಕುದಿಕ್ಕಂಬೊಕ್ಕು ತಾನೆಳ್ಬುತಿರಲಿರದೆ
ಬೆಮರಿಳಿದು ಬಿಸುಸುಯ್ದು ಮುಡಿಬಿರ್ಚಿ ಮುನಿಸುರ್ಕಿ,
ಪಾಮರಿಯ ಬಿರುದನಿಗೆ ಕೈಪರೆಗೆ ಬಾಯ್ಪರೆಗೆ
ಕಲ್ಗವಣೆಗೊಂದಿನಿತು ಪೆಳರಿ ಗಾರಾಗುತುಂ,
ಭುರ್ರೆಂದು ಪೆರತೊಂದೆಡೆಗೆ ಪಾರಿ ಮಂಡಿಸುತೆ
ತೊಡಗಿದಪವಿನ್ನೊರ್ಮೆ ನೆಲ್ಮೇವಿಗೆ. ಕಂಡದಂ
ಪೀಡಿತ ಗ್ರಾಮ ಶ್ಯಾಮಾಂಗಿ ಕೋಪಕ್ಕಳುತೆ
ಬೈಯುತ್ತೆ ಶಪಿಸುತ್ತೆ ತೊಳಲುವಳ್ ಗದ್ದೆಯಂ
ಮರುಳಮರ್ದಳಂತೆ. ಇಂತವಳಿತರ ಖಗತತಿಯ
ಕಾಡಿಸುತ್ತೋಡಿಸುತ್ತಿರೆಯಿರೆ, ಮನೋಹರಂ
ಮೋಹನ ಮಯೂರ ಮಿಥುನಂ ಬೆಳಗು ಪೊಳ್ತಿನೊಳೆ
ನವಿಲುಕಲ್ಲಿನ ಕಾಡಿನೆತ್ತರದ ಕೋಡಿನಿಂ
ಬೆಳೆದ ಗದ್ದೆಯ ಹಳದಿಗಿಳಿತಂದು ಮೆಲ್ಲನೆಯೆ
ಮೂಲೆಗದ್ದೆಯಲಿ ಮೆಲ್ಲುತೆ ನೆಲ್ಲಲೊಚ್ಚತಂ
ಪಾರಿದಪವೊಲ್ಮೆವೊಯ್ಯಾರದಿಂ ಗಿರಿನೆತ್ತಿಗೆ.
ಒಡಲಿಚನಲಂಪಿನಿಂದೊನಪಿನೊಲಗಾರ್ತಿಯಂ
ಹೃದಯಮಿಲನಕೆ ಮೋಹಿಸುವ ಮಧುರ ಮನದಿಂದೆ
ತಾನಾ ಪುರುಷಕೇಕಿ ಬರ್ಹಿಣಿಯ ಸಮ್ಮುಖದಿ
ಬಿರ್ಚುತೆ ಕಲಾಪ ಮೇಚಕ ಸಹಸ್ರಂಗಳಂ
ರಚಿಸಲನುಗೆಯ್ದಪುದು ಪ್ರಣಯಮಯ ನರ್ತನದಿ

ದೇವಾಪ್ಸರಾ ಲಾಸ್ಯಮಯ ನಂದನೋದ್ಯಾನಮಂ.
ಆನಂದಸ್ಪಂದನದ ಬರ್ಹಿಪಿಂಛಧ್ವನಿಗೆ,
ಬಣ್ಣಬಣ್ಣದ ಕಣ್ಣುಕಣ್ಣುಗಳ ಕುಣಿತಕ್ಕೆ,
ಹೊಳೆವ ಹಸುರಿನ ಕಾಂತಿ ಮಿರುಗುತಿರೆ ಬಿಂಕದಿಂ
ಕೊಂಕುವಾ ನೀಲಕಂಠದ ಗಾಡಿಗರುವಕ್ಕೆ,
ಪದವೆತ್ತಿ ಪದವಿಟ್ಟು ತಿರೆಯ ತಲ್ಲಣಗೊಳಿಸಿ
ಕುಣಿವ ಬಿನ್ನಾಣಕ್ಕೆ, ನೆತ್ತಿಯ ವಿಭ್ರಂಭಿಸುವ
ಚೂಡ ಚಲನಾ ವೈಖರಿಗೆ ಸೋಲ್ದಪುದು ಜಗವೆ!
ಸೋಲದಿರ್ಪುದೆ ನವಿಲ್ವೆಣ್ಣು? ಕುಣಿವಿನಿಯನಂ
ವ್ಯಾಬದ್ಧ ಲಕ್ಷ್ಯದೃಷ್ಟಿಯಿನೆಳೆದು ಪೀರ್ವಂತೆ
ನೋಡುತಿರಲುತ್ಫುಲ್ಲತೋಲ್ಲಾಸದಿಂದೆ, ಹಾ!
ಕಳ್ದಡಗಿದರಗುಲಿಯದೊರ್ವ ಬಿಯದಂ ಬಿಟ್ಟ
ಮೃತ್ಯುಮಯ ಬಾಣವದೊ ಗಂಡುನವಿಲೆದೆಯಲ್ಲಿ
ನಟ್ಟುಚ್ಚಳಿಸಿ ಚಿಮ್ಮುತಿದೆ ಬಿಸಿಯ ನೆತ್ತರಂ!
ಸಂಜೆಯೋಕುಳಿಯಲ್ಲಿ ಮಿಂದಡವಿ ಪಸುರಂತೆ
ರಂಜಿಸಿದೆ ನೆಲಕುರುಳಿ ಬಿಳ್ದು ನೆಗೆನೆಗೆಯುವಾ
ಶೋಣಿತ ಪ್ಲಾವಿತ ಮಯೂರನೆರ್ದೆ, ಕೆಂಪೇರಿ
ಕರುಣ ಭೀಕರವಾಗಿ! ಒರ್ಮೊದಲೆ ಬಿರಿದತ್ತು
ಪ್ರಣಯ ನೃತ್ಯದ ಮೋಹ ಸಂಕಲ್ಪ ಬುದ್ಬುದಂ!
ನಾರಾಚದೇರಿಗಾರದೆ ಸೋಗೆ ನರಳುದನಿಯಂ
ಬೀರಿ ಚೀರಿಡೆ, ಕಾಣಿಸಲ್ ಜವನ ಜವದಿಂ ಬಳಿಗೆ
ನುಗ್ಗಿಬರ್ಪಾ ಮಾಯ್ದು ಕರ್ವೇಡನುಂ, ಬೆದರಿ,
ಬರ್ಹಿವಧು ತಾಂ ಪ್ರಾಣಭಯದಿಂದೆ ಪ್ರಾಣೇಶನಂ
ಮರಣಮುಖನಂ ಬಿಟ್ಟು, ಕಣ್ಣು ಮೇಣೆರ್ದೆಗೆಟ್ಟು
ಪಾರಿದಪುದಾರ್ತನಾದಂಗೈಯುತಲ್ಲಿಂದೆ
ದೂರಾಂತರದ ಕಾನನಾಂತರಕೆ. ನೋವಿಂಗೆ
ಕೂಗುವಾ ಸುಂದರ ಮಯೂರನಂ ಬಂದೆರಗಿ
ಕುತ್ತಿಗೆಯ ಮುರಿದೆತ್ತಿಕೊಂಡೊಯ್ವನಾ ಕ್ರೂರ
ಶಬರನತಿ ಹರ್ಷದಿಂ, ವರ್ಷಮೇಘಂ ರಮ್ಯ
ಸುರಚಾಪಮಂ ಪೊತ್ತು ನಭದೊಳ್ ನಡೆಯುವಂತೆ!
ಬೈಗು ಬರಲೊಂಟಿತನಕುರೆ ಬಳಲಿ, ಬೇಸತ್ತು,

ವಿರಹದಿಂ ಪ್ರಿಯತಮ ಸಮಾಗಮ ಪ್ರತ್ಯಾಶೆ
ಹೃದಯಮಂ ಬೇಯಿಸಲ್ಕಾ ಬೇಟವೆಣ್ ಸೋಗೆ
ನವಿಲುಕಲ್ಲಿಗೆ ಮರಳಿ ಬಂದು ಕರೆವುದು ಕೇಗಿ
ತನ್ನೆರೆಯನಂ. ಬರಿದೆ! ಪ್ರಾಣಪ್ರಿಯಾಣ್ಮನಂ
ಕಾಣದಿರೆ ಪೊತ್ತುವುದು ಹರಣದುರಿ. ಸುತ್ತುತಿರೆ
ಹುಚ್ಚುಗಿಚ್ಚೇರಿ ಕರೆಕರೆದು ಪತಿವಿಹಗನಂ
ಶೋಕಾತಿಭಾರದಿಂದಾ ಕೇಕಿ, ಮುಚ್ಚುವುದು
ಮೆಲ್ಲನೆ ಭುವನಲಿಪ್ಪು ಬದ್ಧಭ್ರುಕುಟಿ ರಾತ್ರಿ!
ಅಂತಾ ಮಯೂರಸತಿಯಂ ಪೋಲ್ದು ಚಿತ್ರಾಂಗಿ
ಕರೆದೊರಲಿ ತೊಳಲುತಿರೆ ಸವ್ಯಸಾಚಿಯನರಸಿ
ಉನ್ಮತ್ತೆಯಂತೆ, ಕಂಡುದು ಕೈಯ ಬೆರಳಿನಲಿ
ರಂಜಿಪಂಗುಲಿಮುದ್ರೆ. ರಾವಣಂ ಕಳ್ದುಯ್ದ
ಯೆನಂತರಂ ಭೂಪತಿತ ಸೀತೆಯಾಭರಣಮಂ
ಸಂದರ್ಶಿಸಿದ ದಶರಥನ ತನೂಭವಗೆಂತು
ಹರ್ಷ ಶೋಕಂಗಳೆರಡುಂ ಪೆರ್ಚಿ, ದುಃಖಾಗ್ನಿ
ಕಿಡಿಗಳೊಡಗೂಡಿ ಸಂತಸದ ಕಂಬನಿಗಳುಂ
ಪೊನಲ್ವರಿದುವೋ ಅಂತು ತನ್ನಿನಿಯನುಂಗುರಂ
ಕಾಣಲೊಡಮಿರ್ಮಡಿಸಿದಳಲಿಂದೆ ಸೊಗದಿಂದೆ
ಕಣ್ಣುಎದೆ ಕದಪು ತುಟಿ ಕೆನ್ನೆ ಹಣೆಗದನೊತ್ತಿ,
ಮತ್ತೆ ಮತ್ತಿರದೊತ್ತಿ, ಮುದ್ದಿಸುತೆ ರೋದಿಸುತೆ
ಮೈಮರೆತಳಡಿವಿಯಾ ತೊಯ್ದ ನೆಲವುಲ್ಲಿನಾ
ತರಗು ಸಜ್ಜೆಯಲಿ. ತೀಡಿತ್ತಲೆವ ತಂಗಾಳಿ;
ಹಾಡುತಿರ್ದುವು ವಿಹಂಗಾಳಿ, ಪುಷ್ಪಿತ ಫಲಿತ
ಮಧುತರುಶ್ರೇಣಿಯಲಿ; ಹೊಳೆಯುತಿರ್ದುದು ಬಿಸಿಲ್;
ಬಲಿಯುತಿರ್ದುದು ನೆಳಲ ತಂಬೊಳಲ್, ಬರಬರುತೆ
ಕಳ್ತಲೆ ಕರಂಗಿದಂತಾಗಿ; ಏರ್ದುದು ಪೊಳ್ತು.
ಕಣ್ದೆರೆದಳಂಗನೆ. ಅಳುತ್ತಳುತೆ ಸುತ್ತಲುಂ
ನೋಡಿದಳರಸುವಂತೆ. ಎಂತಾನುಮರ್ಜುನಂ
ತಾನಲ್ಲಿ ತೋರ್ದಪಂ ಎಂಬ ಅತಿಕಾಂಕ್ಷೆಯಿಂ
ಭವಿಸಿದಾ ಭ್ರಾಂತಿಯಿಂ, ಬಯಸಲಾರದೆ ಬಯಸಿ,
ನೋಡಿದಳರಸಿಯರಸಿ ಸುತ್ತಲೆತ್ತೆತ್ತಲುಂ.

ಬನಮಲ್ಲದೇನೊಂದುಮಿರಲಿಲ್ಲ. ಕುಕಿಲುತ್ತೆ
ಹಾರಿದುದು ಕೋಗಿಲೆಯೊಂದು, ಮರದಿಂದ ಮರಕೆ.
ತಿಂಗಳಾರಕೆ ಮರಳಿ ಬಹೆನೆಂಬ ಭಾಷೆಯಂ
ಭಾವಿಸುತೆ, ಭಾಮಿನಿ ಸಮಾಧಾನ ಬುದ್ಧಿಯಿಂ
ಮೇಲೇಳುತಲ್ಲಿಂ ನಡೆದು ಶಿವಾಯತನಕ್ಕೆ,
ಹರನನರ್ಚಿಸುತವನ ಹರಕೆಯ ಹಸಾದಮಂ
ಮುಡಿಯೊಳಾನುತೆ, ರಮಣನುಂಗುರವನೆದೆಯಲ್ಲಿ
ಗುಟ್ಟಾಗಿ ಬೈಚಿಟ್ಟು ನಡೆದಳ್ ಶಿಬಿರದೆಡೆಗೆ,
ಗರ್ಭಿತರಹಸ್ಯೆ ತಾನಾಗಿ!

ಗುಲಾಬಿಯ ರಂಗು

ಮೂಡುವೆಣ್ಣನ ಕೆನ್ನೆಗಳಲರಳಿ ಕೆಂಪೇರೆ,
ಮರುದಿನಂ ಬೆಳಗಿನಲಿ ಚಿತ್ರಯಾಣತಿಯಂತೆ
ಬೀಡು ತೆಗೆದುದು ಕಟಕಮೆಳ್ದು ನಡೆದುದು ವಿಜಯ-
ಭೇರೀರವಕೆ ಬಿರಿಯೆ ದಿಗ್ಭಿತ್ತಿಗಳ ಬೆಸುಗೆ.
ದಿವಸ ದಿವಸಂ ಕಳೆದು ಪಯಣ ಪಯಣಂ ಪರಿದು,
ವಾಹಿನಿ ಸಮುದ್ರಲಗ್ನಕೆ ಸಮೀಪಿಸುವಂತೆ,
ಚೈತ್ರವಾಹಿನಿಯ ವಾಹಿನಿ ತೋಷಘೋಷದಿಂ
ತುಂಬಿತಂಬರ ಕುಂಭಿನಿಗಳಂ, ಅದೂರದಲಿ
ಕಡಲ ಕರೆಯಲಿ ಮೆರೆಯೆ ಮಣಲೂರ ಪತ್ತನಂ,
ಚಿತ್ರವಾಹನ ನೃಪನ ನಚ್ಚಿನ ರಾಜಧಾನಿ:
ಭ್ರೂಭಂಗ ಮಾತ್ರದಿಂ ವೈರಿಗಳನೆದುರಿಸುವ
ಭೂರಮೆಯ ಬದ್ಧಭ್ರುಕುಟಿ ತಾಂ ದುರ್ಗರೂಪದೊಳ್
ನಿಂದುದೆನೆ ಕೋಂಟೆ ಮೆರೆದುದು ಧೀರ ದೀರ್ಘಮಾ
ಪುಟಭೇದನವ ಸುತ್ತಿ. ಭೀಕರಾಕಾರದಿಂ
ಮಲೆತ ಸಾಸಿರ ಶಿರದುರಗನಂತೆ ಹೆಡೆಯೆತ್ತಿ.
ಅಂಬರಾಂಬುದ ಚುಂಬಿ ಜಾಂಬೂನದಾಂಕಿತದಿ
ಕೋಲ್ಮಿಂಚಿನಂದದಿಂ ಮಿರುಮಿರುಗಿ ನಿಮಿರಿರ್ದ
ಡೆಂಕಣಿಯ ಸಾಲ್ಗಳಂ ಪೊತ್ತು ನೆತ್ತಿಯೊಳೆಸೆವ
ಕೊತ್ತಳಗಳಿಂದೆ, ಮೇಣಾಳುವೇರಿಗಳಿಂದೆ,
ಪಾತಾಳಮನೆ ಪುಗುವಗಳ್ತೆಯಿಂ, ದಟ್ಟಯಿಸಿ
ಕಿಕ್ಕಿರಿದ ಹರ್ಮ್ಯಾದಿ ಭವನ ಸೌಧಂಗಳಿಂ,

ಧವಳಿಮ ಸುಧಾ ಚೂರ್ಣಮಾಕೀರ್ಣಮಾಗಿರ್ದ
ಕುಡ್ಯಕುಲಸಂದೋಹದಿಂ, ರುಕ್ಮರುಚಿಯಿಂದೆ
ರವಿಯ ಛವಿಯಲಿ ರಕ್ತ ವಿದ್ಯುತ್ತದೆಂಬಿನಂ
ಕಣ್ದಿಟ್ಟಿಯನೆ ಕುಕ್ಕಿ ಕೋರೈಸಿ ರಂಜಿಸುತೆ
ವ್ಯೋಮ ಮಂಡಲವನಂಡಲೆದು ತಿವಿದುರ್ಕೆಳ್ದ
ಕಾರ್ತಸ್ವರಾಲೇಪನದ ಗೋಪುರಂಗಳಿಂ,
ಋತುರಾಜ ತರುರಾಜಿ ರಾಜಿಸುವ ರಮಣೀಯ
ಗಂಧ ಬಂಧುರ ಶಾದ್ವಲೋದ್ಯಾನಗೋಷ್ಠಿಯಿಂ
ಆ ಮಹಾ ನಗರಸುಂದರಿ ವಿಜಯಮಾಲೆಯಂ
ಕೈಲಾಂತು ನಗೆಯ ಬೆಳ್ದೆರೆಗಳಂ ಬೀರುತ್ತೆ
ಕಣ್ಮಿಂಚುಗಳನೆಸೆದು, ದಿಗ್ವಿಜಯಮಂ ಗೈದು
ಬರ್ಪ ಚತುರಂಗಮಂ ತುದಿವೆರಳಿನೊಳೆ ನಿಂದು
ಕಾತರದಿ ಕಾದಿಹಳೆನಲ್ಕೆ, ಶೋಭಿಸಿ ನಲಿದು
ರಂಜಿಸಿತು ರಾಜಧಾನಿ.
                    ಸೇನೆ ಬಂದುದನರಿತು
ನಗರ ನಗರವೆ ಅದನ್ನಿದಿರುಗೊಳ್ವುರ್ಕೆಹದಿ,
ಅರಸರಸಿಯರ್ವೆರಸಿ, ಶುಭವಾದ್ಯಮೆಸೆಯುತಿರೆ,
ನವಕುಸುಮದಾಮ ಧೂಪದ ಧೂಮ ಮೊದಲಾದ
ಪರಿಮಳಸ್ತೋಮವಾ ವ್ಯೋಮಮಂ ವ್ಯಾಪಿಸಿರೆ,
ಸುಸ್ವಾಗತಂ ಗೈಯೆ ಸರ್ವ ಸನ್ನಾಹದಿಂ
ಪ್ರವಹಿಸಿತು ದುರ್ಗದ ಮಹಾದ್ವಾರ ಸನ್ನಿಧಿಗೆ.
    ಪಿತೃಮಾತೆಯರ್ಗೆರಗಿ, ಗುರುಜನಕೆ ವಂದಿಸುತೆ,
ಹರಕೆವೆತ್ತಿನ್ನಿತರ ಬಂಧುಗಳನಳ್ಕರಿಂ
ನುಡಿಸುತುಂ, ಕೆಳದಿಯರನೊಲಿದಪ್ಪಿ ತೋಳ್ಗಳಿಂ
ಬಂಧಿಸುತೆ, ತುಳಿಲ್ಗೆಯ್ದ ತುಳಿಲಾಳ್ಗಳನ್ನುಚಿತ
ವಚನದಿಂದುಪಚರಿಸಿ, ನಾಗರಿಕ ಸಂಸ್ಕೃತ
ಶ್ರೀಮಂತರಂ ಮನ್ನಣೆಯ ಮಾಡಿ ಬೀಳ್ಕೊಟ್ಟು,
ಉತ್ಸವಂ ಬಳಸಿರೆ ನಿರುತ್ಸಾಹಿಯಾಗಿ ತಾಂ,
ಹಿಮಧೂಳಿ ತಳ್ತ ಹೇಮಂತ ಕಮಲಿನಿಯಂತೆ,
ಚಿತ್ರಾಂಗದೆ, ವಿಷಣ್ಣದೀನಾಸ್ಯೆ, ನರಮೂರ್ತಿ-
ಚಿಂತಾಂತರಂಗೆ ನಗರದ ರಾಜಮಾರ್ಗದಲಿ

ನಡೆಗೊಂಡ ಮೆರವಣಿಗೆಯಾ ಸೇದೆಯಂ ಸಹಿಸಿ,
ಪೊಕ್ಕಳ್, ಹಿರಣ್ಮಯ ಕಲಾಕರ್ಮದಿಂ ಸಮೆದು
ವರ್ಷಸಮಯದ ತಟಿದ್ಗಣದಿ ಸಿಂಗರವೆತ್ತಡಂ
ಕ್ಷೀರ ಫೇನೋಪಮ ಶರನ್ಮೇಘದೋಲಿರ್ದ,
ತನ್ನರಮನೆಯ ಭವ್ಯಮಾ ಪ್ರಾಸಾದಮಂ. ಜನಂ
ರಾಜತನುಜೆಯ ಸೋಜಿಗದ ಪರಿಯ ತಂತಮಗೆ
ಮಾತಾಡಿಕೊಳುತೆ ನಡೆದುದು, ವಿವಿಧ ಕಲ್ಪನೆಯ
ಬೆಂಡುಗಳನೀಸುತ್ತೆ ಸಂಶಯ ಶರಧಿಯಲ್ಲಿ.
   ಕಮಲವರಳಲು ಕುಮುದವರಳ್ವುದನೆ ಹಾರೈಸಿ,
ಕುಮುದಂ ವಿಕಾಸಿಸಲು ಕಮಲದ ಸೊಗವ ಬಯಸಿ,
ಪಗಲನಿರುಳಿಂದೆ ಮೇಣಿರುಳಂ ಪಗಲ್ಗಳಿಂ
ಮಿಂಟಿ ನೂಂಕುತೆ ಚಿತ್ರ ತಿಂಗಳಾರ್ಕಳೆವುದನೆ
ಕಾಯುತಿರ್ದಳ್ ಕಾತರದ ಹೃದಯವೇಧೆಯಲಿ.
ಮುನ್ನಿನ ಲಘುತ್ವವಳಿದುದು: ಪೌರುಷತೆ ಮಾಸಿ
ಪಲ್ಲವಿಸಿತಬಲಾಸಹಜ ಲಜ್ಜೆ ತಾನೇಕಾಂತ
ಲೋಲುಪ್ತಿಯೊಡನೆ. ಮೇಣಂದಿನ ಬಹಿರ್ಮುಖತೆ
ಹಿಮ್ಮೆಟ್ಟೆ ಗೋಚರಿಸಿತಂತರ್ಮುಖತೆ. ಸಖೀ
ಜನರೊಡನೆ ನುಡಿಯಲೊಲ್ಲಳು; ಮಾತುಕತೆಗಳಲಿ
ಬಿನದಂಗಳಲಿ ನೆರೆಯಲೊಲ್ಲಳು; ಮರೆತು ಮೆಯ್ಯಂ
ಜಾನಿಸುವಳನುದಿನಂ ನಿಂತಲ್ಲಿ ಕುಳಿತಲ್ಲಿ,
ತೆರೆದ ಕಣ್ಮುಚ್ಚದೆಯೆ, ಮುಚ್ಚಿರಲ್ ತೆರೆಯದೆಯೆ!
ಕೆಳದಿಯರ್ಬಳಿಯೊಳಿರೆ ಲೆಕ್ಕಿಸದೆ ನುಡಿಸುವಳ್
ಪೂಗಳಂ ಲತೆಗಳಂ ತರುಗಳಂ, ಚೇತನಕೆ
ಜಡಕೆ ಭೇದವನರಿಯಳೆಂಬಂತೆ. ಸುರಿಯುತಿರೆ ಜಡಿ,
ಕಾರ್ಮುಬ್ಬು ಹಗಲಿರುಳು ಮಂಕು ಕವಿದಂತಿಳೆಯ
ತಬ್ಬಿರಲ್, ವರ್ಷರ್ತು ತೋಯಿಸಿರೆ ಧಾತ್ರಿಯಂ,
ಚೇಸರಿನ ಮಳೆಗಾಲದಂತಿರ್ದಳಾ ಲಲನೆ
ನರನ ಪುನರಾಗಮನದ ಶರತ್ಪ್ರಸನ್ನತೆಗೆ
ತಪಮಿರ್ದ ನೆಲವೆಣ್ಣಿನಂತೆ.
                ಇಂತಿರುತಿರಲ್,
ವಾರ್ತೆಯಂ ಕೇಳ್ದವಳ ತಾಯ್ತಂದೆಯರ್ಬಂದು

ಪುತ್ರಿಯಂ ನುಡಿಸಿ ಬೆದರಿದರವಳ ದುಃಸ್ಥಿತಿಗೆ.
ಜವ್ವನದ ಜಾಡ್ಯಕ್ಕೆ ಮದುವೆ ತಾಂ ಮದ್ದೆನುತೆ
ಬಗೆದು ಮಣಿಪುರದರಸು ತನ್ನರಸಿಯೊಡನುಸುರಿ
ಪೋದನೊಪ್ಪಿಸುವಂತೆ ಮಗಳಂ ಪರಿಣಯಕ್ಕೆ.
ತಾಯಿಯಕ್ಕರೆಯ ಒಳ್ನುಡಿಗಳುರೆ ಕಾಯಿಸಿದ
ಸರಳಾಗೆ ಕಿವಿಗೆ, ಚಿತ್ರಾಂಗದೆ ತನಗೆ ಮದುವೆ
ನಿರ್ಜನಾರಣ್ಯದೊಳ್ ಗಾಂಧರ್ವವಿಧಿಯಿಂದೆ
ಶಿವನ ಸಾಕ್ಷಿಯೊಳಾದ ವೃತ್ತಮಂ ಗೋಪ್ಯದಲಿ
ಪೇಳೆ ಗದ್ಗದೆಯಾಗಿ, ನಡುಗುತೊರೆದಳ್ ಜನನಿ:
"ಮಗಳೆ, ನೀನೇಂ ಗೆಯ್ದೆ? ಹಾ! ಕುಲದ ಕೀರ್ತಿಯಂ
ಮುಣುಗಿಸಿದೆ! ಮರ್ಯಾದೆ ಮಿರ್ದೆ! ಯಃಕಶ್ಚಿತಂ
ಬೈರಾಗಿಯಂ ವಿಪಿನಮಧ್ಯೆ ಕಳ್ದೊಡಗೂಡಿ
ನಮ್ಮಯ ಕುಲದ ಯಶಶ್ಚಂದ್ರಿಕೆಯ ಪಾಳ್ಗೆಯ್ದೆ,
ಪಳಿಯ ಕರ್ದಿಂಗಳಂ ಮೆತ್ತಿ." ಎನೆ ಕೇಳ್ದದಂ,
ತನ್ನಾ ಪ್ರಣಯದೇವತಾ ನಿಂದೆಗಳಲುತ್ತೆ:
"ಕೈಮುಗಿವೆ! ಹಳಿಯದಿರು, ತಾಯೆ, ಹೃದಯೇಶನಂ.
ನನ್ನನೊಲಿದಾ ನರಂ ನೆಲದರಿಕೆ ಬಳಿಯವಂ;
ಕೀಳು ಕುಲದವನಲ್ಲ; ಯಃಕಶ್ಚಿತನುಮಲ್ಲ
ತಂದಪಂ ಕುಲದ ಕೀರ್ತಿಗೆ ದಿವಾದೀಪ್ತಿಯಂ,
ಮೇಣೆನ್ನನೊಲ್ದು ಪೆತ್ತರ್ಗೆ ಸಂತೃಪ್ತಿಯಂ!
ತಿಂಗಳಾರಕೆ ಕರೆದು ತರ್ಪೆನಾನಾತನಂ
ಮಣಿಪುರಕೆ. ಪುಣ್ಯವಹುದೆಮ್ಮ ಧರೆ ವಲ್ಲಭನ
ಪದಧೂಳಿಯಿಂ. ಪಳಿಯದಿರು ಪುರುಷಸಿಂಹನಂ,
ಸರ್ವ ವಿಧದಿಂ ಲೋಕವಿಖ್ಯಾತ ಪಾರ್ಥಂಗೆ
ದೊರೆಯಾಗುವೆನ್ನ ಬಾಳ್ಮೆಯ ಸಗ್ಗದಿಂದ್ರನಂ!"
ಕೆಚ್ಚೊರೆದ ಮಗಳ ಮುದ್ದಿಸುತಾ ಮಹಾರಾಣಿ
ತನ್ನಳಿಯನಾಖ್ಯ ಕುಲ ವಿಷಯ ಗೋತ್ರಂಗಳಂ
ಕೇಳಲದನೊರೆಯಲೊಪ್ಪದೆ ಕುವರಿ, ಸಿಂಗಮಂ
ಬಿಟ್ಟನ್ಯಮಂ ವರಿಸುವುದೆ ಸಿಂಗಿಣಿ ಎನುತ್ತಾಡಿ
ಕಳುಹಿದಳ್ ಮಾತೆಯಂ ಮೆಚ್ಚಿಸಿ ನೆಚ್ಚುಗೊಟ್ಟು.
    ಪಗಲಿರುಳ್ಗಾಲಿಗಳ ಮೇಲೆ ಕಾಲದ ತೇರು

ತಾನುರುಳ್ದತ್ತನಂತಾಚ್ಛಿನ್ನ ಯಾತ್ರೆಯಲಿ.
ಶತಪತ್ರನೇತ್ರೆ ಚಿತ್ರಾಂಗದೆಯ ಜೀವನಂ
ಪ್ರೋದ್ವಿಗ್ನ ದೂರ ದೀರ್ಘ ನಿರೀಕ್ಷಣೆಯ ಕಠಿನ
ನಿಶಿತ ಶೂಲದ ಮೊನೆಯ ಕೊನೆಯೊಳ್ ತಪಂಗೈದು
ಪ್ರವಹಿಸಿರೆ, ಮುಟ್ಟಿಬಂದುದು ತೇಲಿ ಹತ್ತಿರಕೆ
ಷಣ್ಮಾಸದವಧಿಃ ಜಡವೇಷದಿಂ ಮೇಘರತಿ
ತನ್ನ ತಾಯ್ಮನೆಯಪ್ಪ ಕಡಲೊಡಲನೊಡಗೊಂಡು
ದೂರಾಂತರದ ಸಹ್ಯಗಿರಿ ಮನ್ಮಥನ ನೆನೆದು
ನಮೆದಪಳ್; ಬಳಿಸಾರೆ ಕಾರ್ಪೊಳ್ತು ಮೇಲೆಳ್ದು
ತಪನ ಕರಕೃಪೆಯಿಂ, ಪ್ರಭಂಜನನ ನೆರವಾಂತು
ನಡೆದು, ಸುರಚಾಪ ವರ್ಣಾಭರಣಗಳ ಧರಿಸಿ,
ಸಹ್ಯಸುಂದರ ವರನ ವರಿಸಿ, ಎದೆಯಿಂ ಸ್ಮರಿಸಿ
ಬರಬರುತೆ ಪಸುರ್ಸಿರಿಯ ಮಲೆಯನಾಡಂ ಕಂಡು
ರೋಮಾಂಚನಂಗೊಂಡು ಮೆರೆವಳ್ ಮುಗಿಲ ನಾರಿ.
ಮೆಯ್ಯೊಡವೆಗಳ ಕಾಂಚನದ ಹೊಳಹೊ ದನಿಯೊ ಎನೆ
ಮಿಂಚುಗೊಂಚಲ್ಗಳಿಂ ಮೊಳಗುಬಳಗಂಗಳಿಂ
ಹನಿಗಂಪು ತಂಪು ಮೇಣ್ ಬೀಸುಗಾಳಿಗಳಿಂದೆ
ರಂಜಿಸುವ ಕಾರ್ಮುಗಿಲ್ಕಾಂತೆಯಂ ಕಾಣುತ್ತೆ
ಗಿರಿಮದನನುರ್ಬಿದಪನೆರ್ದೆಯಿಂಪನನುಭವಿಸಿ.
ನವಿಲುಗಳ್ ಕುಣಿಯೆ, ಅರಸಂಚೆಗಳ್ ಕೊಂಚೆಗಳ್
ತಣಿಯೆ, ಕೃಷಿಕರ್ ಕೃತಜ್ಞತೆಯಿಂ ನುತಿಸಿ ಮಣಿಯೆ,
ಬಿಸಿಲ ಬೇಗೆಗೆ ಬೆಂದ ಬುವಿಯು ಬಾಂಬೊಚ್ಚಮಂ
ಮೊಗೆದು ಮೊಗೆದೀಂಟುತೀಂಟುತೆ ದಣಿಯೆ, ತೃಣರಾಶಿ
ಮೈದೋರೆ ಪಚ್ಚೆಯ ಪುಲಕದಂತೆ, ಬಿತ್ತಗಳ
ಬಣಗೆದೆಯೊಳಾಶಾಂಕುರದ ಹರಣದಲೆಯಲೆಯೆ,
ಸಂಭ್ರಮದಿನಾಲಿಂಗಿಪಳ್ ಸಹ್ಯದೇವನಂ
ಮೇಘಾಂಗನೆಃ ಆದರಾಹಾ ಮರಳಿ ಜಡವಾಗಿ
ಪರಿದಪಳ್ ಮತ್ತೆ ತಾಂ ಕಡಲೊಡಲಿಗೇಕಾಕಿನಿ!
ವರ್ಷ ಪ್ರಣಯ ಯಾತ್ರೆಯಾ ಮೇಘರಾಗಿಣಿಗೆ
ಪ್ರಸ್ಥಾನ ಪ್ರಸ್ತಾವ ಮಾತ್ರದಿನುಪಮೆವೆತ್ತು
ಪೊರಮಟ್ಟಳಾ ಚಿತ್ರೆಯಾಪ್ತಸಖಿಯರ್ವೆರಸಿ,

ಪಾರ್ಥನನಿದಿರ್ಗೊಂಡು, ಅವನಂ ಬೆರಗುಗೊಳಿಸಿ,
ತನ್ನ ಪಿತೃಗಳ್ ಕೂಡಿ ಮಣಿಪುರದ ಜನರೆಲ್ಲ
ಬೆಕ್ಕಸಂಬಡುವಂತೆ, ಹಿಗ್ಗಿ ನೆರೆ ನಲಿವಂತೆ,
ಕರೆದು ತಂದಪೆನೆಂಬ ಪೆರ್ಮೆಯಾನಂದದಿಂದೆ.
ಕರಗಿ ದೂರಂ ದಿನದಿನಕೆ ಶಿವಗುಡಿಯ ಬನಂ
ಸನ್ನಿಹಿತವಾಗುತಿರೆ, ಸವಿನೆನಹಿನಿಂದೆ ಮೇಣ್
ಬರಲಿರುವ ಸಗ್ಗಸೊಗದಳುಪಿಂದೆ, ತುಂಬಿದುದು
ಚಿತ್ರಾಂಗದೆಯ ಮನಂ, ತುಂಬಿದ ಪೊಡೆಯವೋಲೆ!
ಪೆರ್ಚಿದುದು ನಾರಿಯೆದೆ, ಮೂಡಿ ಪೊಂಬೆರೆ ತೋರೆ
ತೆರೆ ದಡಕ್ಕವ್ವಳಿಪ ಪೀಯೂಷ ವಾರಿಧಿಯ
ಸಂಭ್ರಮ ಜಲೋಚ್ಛ್ವಾಸದೋಲ್, ಗೋಚರಿಸೆ ಕಣ್ಗೆ
ಮೊದಲ ಬೇಟದ ಮೊಳಕೆ ಪಣ್ಗೊಂಡ ಕಾನನಂ,
ಮೊದಲ ಮೋಹದ ಬಲೆಯ ನೆಯ್ದೆಡೆಯ ತಿಳಿಗೊಳಂ,
ಮೊದಲ ಮಿಲನದ ಮತ್ತೆ ವಿರಹದ ಶಿವಾಲಯಂ!
ತಾಣದಿಂ ತಾಣದೆಡೆಗೋಡಲಾರದೆ ಓಡಿ,
ಓಪನನೆ ಕಾಣ್ಬಂತುಟತ್ಯಾದರಂಬೆತ್ತು
ನೋಡಿ, ಬಿರಿವೂಗಳಂ ಚುಂಬಿಸುತೆ, ಪರ್ಣಮಂ
ಮುದ್ದಿಸುತೆ, ಮೋಹಿಸುತೆ ವಿವಿಧ ವರ್ಣಂಗಳಂ,
ತೀಡುತ್ತೈತಂದ ತಂಗಾಳಿಯಂ ಸಖಿಯೆಂದು
ಕ್ರೀಡಿಸುತೆ, ಪೀಡಿಸುತೆ ಮಣಿದಿರ್ದ ಲತೆಗಳಂ
ಬಿನದಕ್ಕೆ, ತಾಂ ಮಿಂದ ತಾವರೆಯ ತಿಳಿಗೊಳನ
ನೀರ್ಗನ್ನಡಿಯೊಳಾನನಂಗಂಡು ಮೆಚ್ಚುತ್ತೆ,
ಒಂದೊಂದು ತಾಣಂ ಮಹಾಕ್ಷೇತ್ರಮೆಂಬಂತೆ
ಕೆಳದಿಯರ್ಗವುಗಳಂ ಕರೆಕರೆದು ನುತಿಗೈದು
ತೋರುತಂ, ನಂದನಕ್ಕಿರ್ಮಡಿಯ ಬನಮೆನುತೆ
ಸಾರುತುಂ, ತಾನರಿಯದಾವುದನೊ ಪಾರುತುಂ,
ಇರ್ದ ಸೌಂದರ್ಯಕೆ ವಿಶೇಷತೆಯನೀಯುತ್ತೆ,
ಸೌಂದರ್ಯಮಿಲ್ಲದೆಡೆಗದನು ವಿಕ್ಷೇಪಿಸುತೆ,
ಸಖಿಯರ್ಗಗೋಚರಸ್ವರ್ಗದಲಿ ಚಂದ್ರಮುಖಿ
ಮನದೊಳೆ ಮರಳಿ ಬಾಳಿದಳ್ ಕಳೆದ ಕಾಲಮಂ!
    ಬೆಳಗಾದುದಾ ದಿನಂ, ಪುಲಕಿತ ಕುತೂಹಲದ

ಶುಭದಿನಂ, ಇನಿಯನೈತರುವ ಅವಧಿಯ ದಿನಂ,
ಷಣ್ಮಾಸದ ನಿರೀಕ್ಷಣಂ ಫಲಿಸುವಾ ದಿನಂ,
ಚಿತ್ರಾಂಗದೆಯ ಜೀವನೋದ್ವಿಗ್ನ ಜಿಹ್ವೆಯಲಿ
ಬೇವುಬೆಲ್ಲದ ದಿನಂ; ಬೆಳಗಾದುದಾ ದಿನಂ!
ಪೂಜೆಗೈದಂಗಜಾರಿಗೆ, ಮಧುರ ಮಂಗಲದ
ಸಂಗೀತದಿಂ ಸ್ತುತಿಸಿ, ಶೃಂಗಾರಸದನೆ ತಾಂ
ಲಲಿತಾಂಗಿಯರ ಸಂಗದಲಿ ವಿಪಿನರಂಗಮಂ
ಪೊಕ್ಕಳ್ ಸಮುಲ್ಲಾಸದಿಂ ಪಾರ್ಥದೇವನಂ
ಸ್ವಾಗತಿಸುವುತ್ಸಾಹದಿಂದೆ. ದೆಸೆದೆಸೆಗಲೆದು,
ಗಣಿಸದೆ ಬಳಲ್ಕೆಯಂ ಶೃಂಗತುಂಗಕ್ಕಡರಿ
ಕಂದರಕ್ಕನ್ವೇಷಣಾದೃಷ್ಟಿಯಂ ಬೀರಿ,
ನರನಿರಲಿ, ನರರೊರ್ವರುಂ ಕಾಣಿಸದಿರಲ್ಕೆ,
ಬಿಸುಸುಯ್ದು, ತುದಿಯ ಕಲ್ಗೋಡಿಗೇರುತೆ ಕಾಯ್ದು,
ತೃಷಿತದೃಷ್ಟಿಯ ಬೀರುತಿರಲೊಯ್ಯನೊಯ್ಯನೆಯೆ
ಮರದಡಿಗೆ ನೆಳಲುರುಳಿ ಪೊಳ್ತೇರುತಿರ್ದತ್ತು.
ಪಗಲೇರಿದಂತೆ ಚಿತ್ರಾಂಗದೆಯ ಹೃದಯಾಬ್ಧಿ
ಕದಡಿದುದು ಕಾತರತೆಯೆಂಬ ಪವನನ ಹತಿಗೆ.
ತುಳುಕಿದುದು ನಯನಾಶ್ರು. ಕೆಳದಿಯರ ಸಂತೈಕೆ
ಮೂದಲಿಕೆಯಂತಾಗೆ, ತಂದೆತಾಯಂದಿರಿಗೆ
ಕೊಟ್ಟ ವಚನವ ನೆನೆದು, ಮರುಗಿದಳಬಲೆ ಕೊರಗಿ
ದೀನದುಃಖದಲಿ.
ಇಂತಿರುತಿರಲ್ ಮುಳುಗಿದುದು
ಪಡುವಣೆಡೆ ಮುತ್ತಪೊಳ್ತೊಲವಿನ ಕೊಲೆಯೊಳಾದ
ಕೆಮ್ಮುಗಿಲ ನೆತ್ತರ್ಗೆಸರಿನಲ್ಲಿ. ಗರ್ಭಿಣಿಯ
ಹೃದ್ಗರ್ಭದಿ ನಿರಾಶೆ ದಟ್ಟಯಿಸಿ ಕವಿವಂತೆ
ಕವಿತಂದುದಿರುಳು.
ಹೇ ಆಶಾವಿಲಾಸಿನಿಯೆ,
ನಿಶೆಗೆ ನಕ್ಷತ್ರದೊಲೆ ನೀಂ ಬಹೆ ನಿರಾಶೆ ಬರೆ.
ನಿನ್ನಮೃತಪಾಶದಿಂದಲೆ ಮೃತ್ಯುವಡಿಗಡಿಗೆ
ಹಿಮ್ಮೆಟ್ಟುತಿದೆ ಭುವನ ತಿಕ್ತ ಜೀವನದಿಂದೆ.
ಬಡತನದ ಕಣ್ಗೆ ಸಂಪತ್ತಿನ ಕನಸು ನೀನು;

ರಾಮಗಿರ್ಯಾಶ್ರಮದ ವಿರಹಿ ಯಕ್ಷನ ಮುಂದೆ
ಮೇಘದೂತನು ನೀನು; ಪ್ರಣಯಕ್ಕೆ ಪ್ರತ್ಯಾಶೆ;
ಧರೆಯ ಸಂಕಟದೆದುರು ಪರದ ನಾಕವನೊಡ್ಡಿ
ಸಂತವಿಡುತಿಹೆ ಬೆಂದು ಕುದಿವೆದೆಯ ಮನುಜರಂ!
ಆಶಾವಿಲಾಸಿನಿಯ ಕೃಪೆಯಿಂದೆ ಚಿತ್ರಾಂಗಿ
ಕಳೆದಳಾ ರಾತ್ರಿಯಂ, ಕಣ್ಣ ಕುದಿನೀರಿನಲಿ
ಬೇಯಲೆದೆದಾವರೆ. ನಿರೀಕ್ಷಣೆಯ ಮೊನೆಮೇಲೆ
ಮೈದೋರುತಾಶಾ ಖಮಧ್ಯಕೇರುತೆ ಮತ್ತೆ
ಮರುದಿನವದುರುಳ್ದುದು ಹತಾಶಾಂಧತೆಯ ಬಿಲಕೆ.
ಹಗಲೇರಿ ಹಗಲಿಳಿಯುತಿರುಳಾಗಿರುಳು ಹೋಗಿ
ಕಾಲಜೀವನ ಸೋರಿದುದು, ಜೀವನಾಂಜಲಿಯ
ಬರಿಗೈದು. ಇಂತೈದು ಮೇಲ್ಐದು ಪಗಲ್ಗಳಂ
ನಿಂತ ತುದಿವೆರಳಿನೊಳೆನಲ್ಕೆ ಕಾಯ್ದಾ ಬಸುರಿ
ರೋಷದುಃಖ ದ್ವಂದ್ವದಲಿ ಬೆಂದು ಮಣಿಪುರಕೆ
ಪಿಂತಿರುಗಿ ಬಂದಳತಿಭೀಷಣ ಮನಃಸ್ಥಿತಿಯಲಿ!

# ಐದನೆಯ ಪರ್ವಂ

ಉರುಳುರುಳು, ಸಾಗರವೆ, ಮುನ್ನೀರಿನಾಗರವೆ,
ತೆರೆತೋಳ್ಗಳಿಂದೆಯಾಲಿಂಗಿಸಿ ಧರಿತ್ರಿಯಂ
ವರುಷ ಶತ ಗತವಾದರಳಿಯದನುರಾಗದಲಿ,
ಹರುಷ ಭೋಗದಲಿ! ಸುರನೀಲ ಸುಂದರಮೂರ್ತಿ,
ಗಂಭೀರ ವಿಸ್ತಾರ ಸುಗಭೀರ ನೀರನಿಧಿ,
ನೇಸರಿಂ ಕೆಲಸಿಡಿದು ನಮ್ಮಾಧರಾದೇವಿ
ಬೆಂಕಿ ಮಾಹದೊಳಂದು ಮಿಂದೆದ್ದ ಮೊದಲಲ್ಲಿ
ಹೆತ್ತ ಬಾಳ್ಗಿಂಬಿತ್ತ ದಾತೃವೆ, ನಮೋ ನಮಃ!
ಗಡಿಮೀರಿ ನಿಡುಬೆಳೆದ ನಿನ್ನ ತಡಿಗುಂಟೆ ಗುಡಿ?
ಅಲ್ಲಿಯಾತ್ಮದ ಬಯಕೆವಳ್ಳಿ ದಾಂಗುಡಿ ದಾಂಟಿ,
ಕಾಲದೇಶಾಂಡವನೊಡೆದು ಮೀಂಟಿ, ಬ್ರಹ್ಮಮಂ
ತಬ್ಬುವುದನಂತತೆಯನೀಂಟಿ! ಮಾನವನೆದೆಗೆ
ಧೀರತೆಯ ಕಿಡಿಗರೆದು ಸಾಹಸಕ್ಕೆಳೆದೊಯ್ವ
ಕರೆ ನಿನ್ನ ಮೊರೆ, ನಿರಂತರ ಚೇತಸದ ಜಲಧಿ!
ನರನ ನಾಗರಿಕತೆಯ ತೀರ್ಥಯಾತ್ರೆಯ ಮಹಾ
ವಿಸ್ತೃತ ಸಲಿಲ ಪಥವೆ, ಮೊರೆದುರುಳು, ರತ್ನಧಿಯೆ,
ಉಲ್ಲೋಲ ಕಲ್ಲೋಲ ರುದ್ರಾಟ್ಟಹಾಸದಿಂ
ಶಂಕರ ಭಯಂಕರದ ಮೋಹವನೆರಚಿ ಬೀಸಿ!
ಮೊರೆದುದಂಬುಧಿಯಂತು ಮಣಿಪುರ ಸಮೀಪದಲಿ
ದೀರ್ಘ ಸೈಕತ ವೇಲೆಯನ್ನಪ್ಪಳಿಸಿ ಬಡಿದು
ಮಂಥನದಿ ಮುತ್ತೆದ್ದು ನೊರೆಗರೆವಲೆಗಳಿಂದೆ.
ನಿಂದುದು ಬೃಹನ್ನಿಶೆಯ ಜ್ಯೋತ್ಸ್ನಾತಪೋಮೂರ್ತಿ

ಮುಡಿಯುತೆ ಸುಧಾಕಿರಣನಂ ಜಟಾಜೂಟದಲಿ,
ನಿಶ್ಚಲಧ್ಯಾನ ನಿದ್ರೆಯಲಿ, ವಿಶ್ವವ್ಯಾಪಿ
ತಾನಾಗಿ. ನಿರ್ಜನ ನಿಶಾ ವೇಳೆಯಲಿ ಚಿತ್ರೆ,
ಕ್ಷಾತ್ರಕುಲ ರಮಣಿ, ಬಾಳ್ಗೊಲೆಗುಜ್ಜುಗಂಗೈದು
ಕಡಲತಡಿಗೈತಂದು, ಮಣಿದು ದಿಕ್ಪಾಲರಿಗೆ,
ಗಗನದೇವರ್ಕಳಿಗೆ, ಪವನಂಗೆ, ಸಾಗರಗೆ,
ಶಶಿತಾರೆಗಳಿಗೆ ಬಿನ್ನೈಸಿದಳ್ ಕೈಮುಗಿದುಃ
"ಲೋಕಸಾಕ್ಷಿಗಳಲ್ತೆ, ಕರುಣ ದೇವರ್ಕಳಿರ,
ಕಾರ್ಯದವಿವೇಕಮಂ ಲೆಕ್ಕಿಸದೆ ಕಾರಣದ
ಪರಿತಾಪಮಂ ಗಣಿಸಿ ಕ್ಷಮಿಸಿಮಪರಾಧಮಂ,
ದುಃಖಾಗ್ನಿ ದಗ್ಧ ದುರ್ಬಲೆಯ ಈ ಪಾಪಮಂ!
ಒಲುಮೆಗಿಂತಲು ಬೇರೆ ಪರಮಾರ್ಥವಿನ್ನಿಲ್ಲ
ನರರ ಬದುಕಿನಲಿ; ಮೇಣರ್ಥಹೀನಂ ಬಾಳ್ಮೆ
ಒಲುಮೆಯಿಲ್ಲದಿರೆ. ಹೂವಿಂದೆ ಸಾರ್ಥಕವಹುದು
ಗಿಡದ ಬಾಳಂತೆ ಬಾಳ್ಗಿಡಕೆ ಒಲುಮೆಯೆ ಹೂವು.
ಒಲಿದೊಲ್ಮೆ ಮರಳಿಯೊಲಿಯದಿರೆ ಒಲುಮೆಗದೆ ಕೊಲೆ!
ಮೊದಲೆ ಕೊಲೆಯಾಗಿರುವ ನನ್ನೆದೆಯನಾನಿಂದು
ಮತ್ತೆ ಕೊಲೆಗೈವೆನೆ? ಕಳೇಬರವನರ್ಪಿಸುವೆ
ಪಾವನ ಸರಿತ್ಪತಿಯ ವಿಸ್ತೃತೌದಾರ್ಯಕ್ಕೆ!"
ಪ್ರವಹಿಸೆ ಕಪೋಲದಲಿ ಲವಣಾಶ್ರುಬಿಂದುತತಿ,
ನದಿ ಹರಿಯುವಂತೆ ಕಡಲಿಂಗೆ ಲಾವಣ್ಯವತಿ
ನಡೆದಳ್ ಲವಣಸಿಂಧುತಟಕೆ. ನಡೆದುದೆ ತಡಂ,
ಲಕ್ಷೋಪಲಕ್ಷ ಹೆಡೆಗಳನೆತ್ತಿ ಭುಸ್ಸೆಂಬ
ಸಾಸಿರ ಶಿರದ ಮಹಾಫಣಿಯಂತೆ ಸಾಗರಂ
ವಿಕ್ಷುಬ್ಧ ವೀಚಿಯುಚ್ಛ್ವಾಸದಿಂ ಮುನಿದೆದ್ದು
ಗರ್ಭಾತ್ಮಘಾತಿನಿಯ ನೂಂಕಿದುದೊಲಿದ ತಾಯ್
ತನೂಜೆಯಂ ತಡೆವವೋಲ್! ಒಡನೆ, ಮೈದೋರ್ದುದೆನೆ
ಸಾಗರದ ಸಾರವೆ ಸಲಿಲದಾಕೃತಿಯ ನೀಗಿ,
ಮೆರೆದುದು ಸಮುದ್ರ ಮೂರುತಿ ವಾರಿಧಿಯ ಮಧ್ಯೆ
ಸರ್ವ ಸೌಂದರ್ಯ ಸಾಕ್ಷಾತ್ಕಾರಮಾದವೋಲ್!
ನವ್ಯ ನವರತ್ನಮಯ ಕಾಂಚನ ಕಿರೀಟದಿಂ

ಪೊಣ್ಮುವ ಗಭಸ್ತಿಯಿಂ ಪರಿವೇಷ ಮಂಡಲಂ
ಬಣ್ಣಬಣ್ಣದ ಕದಿರ್ ಪೆಣೆದ ಹಿನ್ನೆಲೆಯಂತೆ
ಶೋಭಿಸುತ್ತಿರಲ್, ತರುಣಾರುಣ ಶರೀರ ರುಚಿ
ತೆರೆಯ ನೊರೆಮುತ್ತಿನಿಂ ಮೆರೆವ ನೀರಾಂಬರದಿ
ಹೊರಸೋಸಿ ಎಸೆಯೆ, ಮೇಣ್ ಸುತ್ತಲೆತ್ತತ್ತಲುಂ
ನೀರಧಿಯಲೆಗಳೊಡನೆ ನೀರದಂಗಳ ರಾಜಿ
ಸ್ಪರ್ಧೆಯಿಂ ನರ್ತನಂಗೈಯೆ, ತಾವರೆಮೊಗದ
ಮೀನನೇತ್ರದ ಕೂರ್ಮಸಮ ಕಪೋಲದ ಚೆಲುವ
ಶೈವಾಲ ಶೃಂಗಾರದಂಬುಧಿಯ ಶ್ರೀಮೂರ್ತಿ
ಘೋಷಿಸಿತಿಂತು ಗಂಭೀರ ನೀರದ ನಿನಾದದಿಂ:
“ಸಾಹಸಂಗೈಯದಿರ್; ನಡೆ, ಮಗಳೆ, ನಿನ್ನೆಡೆಗೆ.
ಕಡಲೊಡಲ ಕುಳಿರಿನಿಂ ಬೆಚ್ಚನೆಯ ಮನೆಮಡಿಲೆ
ಲೇಸು. ಕಣ್ಣೆದುರಿರ್ಪ ನೋವು ತಾನದೆ ಸೊಗಂ
ಕಾಣದಿಹ ಸಾವಿಗಿಂ. ಮೇಣ್, ಮರ್ದ್ದಲ್ತು ಕೊಲೆ
ವಿರಹಕ್ಕೆ. ನಿನಗಹುದು ನಿನ್ನಿನಿಯ ದರ್ಶನಂ
ನೀನು ಕೊನೆಯುಸಿರೆಳೆವ ಮೊದಲ್. ನಿನ್ನೊಡಲಿನೊಳ್
ಬಳೆಯುತಿದೆ, ಸ್ವಾತಿಹನಿ ಮುತ್ತಾಗಿ ಬೆಳೆವಂತೆವೋಲ್,
ನಿಮ್ಮ ಬೇಟದ ಸಾರಸರ್ವಸ್ವ ಶಿಶು! ಒಲ್ಮೆ ತಾಂ
ಬಾಳ್ಗಿಡಕೆ ಪೂವೆಂದೆಯಲ್ತೆ? ದಿಟಮಾದೊಡಂ,
ಮರಕೆ ಮಲರಲ್ಲದೆಯೆ ಹಣ್ಣು ಗುರಿಯಪ್ಪಂತೆ,
ಪ್ರಣಯ ಸಾಧನೆಗೆ ಶಿಶುವಾತ್ಸಲ್ಯ ತಾಂ ಸಿದ್ಧಿ!
ಮಿಡಿ ಬಂದ ಮಾವು ಹೂ ಹೋದುದೆಂದಳಲಹುದೆ?
ಫಲದ ಸಾಫಲ್ಯಕ್ಕೆ ಸುಮದ ಸೌಂದರ್ಯ ಬಲಿ
ತಾನಂತೆ ಬಲಿಯಹುದು ನೀರನೀರೆಯರೊಲುಮೆ
ಕಂದನಾನಂದಕೆ. ಹಸುಳೆಯೊಲ್ಮೆ ದಾಂಪತ್ಯ
ಮಂದಿರಕೆ ಗೋಪುರದ ಹೊಂಗಳಸಮಲ್ಲದೆಯೆ
ಗರ್ಭಗುಡಿಯಲಿ ಪುಣ್ಯವೇದಿಕೆಯ ದೇವಮೂರ್ತಿ:
ವತ್ಸ ವಾತ್ಸಲ್ಯಮಿಲ್ಲದ ವಿವಾಹಂ ವ್ಯರ್ಥಮೌ!
ಮಗನಹಂ ನಿನ್ನ ಮಗನಾತನಂ ಮುದ್ದಿಪುದು,
ಲಾಲಿಪುದು, ಪಾಲಿಪುದು, ತಿದ್ದುವುದು! ಗುರುವಾಗಿ
ನೀನವಗೆ ಕಲಿಸುವುದು ಪೃಥಿವೀಶ ಕಲೆಗಳಂ!

ಜೀವದ್ವಯಂಗಳಂ ಕೆರಳಿ ಕಗ್ಗೊಲೆಗೈವ
ಈ ಸಾಹಸಂ ಬೇಡವಾ ಸಾಹಸಂಗೈದು
ಬದುಕು, ನಡೆ, ಕೀರ್ತಿವೆತ್ತಿರು ತಪಸ್ವಿನಿಯಾಗಿ!"
    ಇಂತೆಂದು ನಿಂತುದಾಶೀರ್ವಾದದಾ ವಾಣಿ;
ಕಣ್ಣೊಳೆಯೆ ಕಾಣದಾದುದು ಸಮುದ್ರದ ಮೂರ್ತಿ!
ಕಣಸಿನಿಂದೆಚ್ಚತ್ತವೋಲ್ ಚಿತ್ರೆ ಮೈತಿಳಿದು
ನಡೆದಳೊಯ್ಯನೆ ತನ್ನ ಮಂದಿರಕೆ, ಬಹು ಬಹುಲ
ಭಾವ ಭಾರದಲಿ. ಅಂದು ಮೊದಲಾಗುತಾ ರಮಣಿ
ತಾಯಾಗಿ ಪೊತ್ತು ಪೊರೆದಳ್ ತನ್ನ ಸುಪವಿತ್ರ
ಭಾರಮಂ, ಪೂಜ್ಯ ಮನದಿಂ, ಪೂಜೆಯೆಂದರಿದು.
ತುಂಬಿ ಬರಲೊಂಬತ್ತು ತಿಂಗಳಾ ಪಸುಳೆ ತಾಂ
ತಿಂಗಳೊಗೆತರ್ಪಂತೆ ಕಳ್ತಲಾಕಾಶದಲಿ
ಜನ್ಮಿಸಿತು, ಜನಮನ ಸಮುದ್ರವುಲ್ಲಾಸದಿಂ
ಪಿಂತಣಾಶಂಕೆಯಂ ತೊರೆದುಚ್ಚಳಿಸುವಂತೆ:
ಪೇಳದಿರ್ದೊಡಮೇನ್, ತಾಯ್? ತಾಂ ಪೇಳ್ದತ್ತು
ಚಂದ್ರಸಮ ತೇಜಸ್ವಿ ಶಿಶು ತನ್ನ ವಂಶಮಂ!
    ಕ್ಷತ್ರಿಯೋಚಿತಮಾಗಿ ರಾಜಸಂಭ್ರಮದಿಂದೆ
ಬಭ್ರುವಾಹನನೆಂದು ಪೆಸರಿಟ್ಟು, ಚಿತ್ರಾಂಗಿ
ಪಾರ್ಥನಂ ಮರೆದಳೆನೆ ಅರ್ಭಕನ ಮೋಹದಿಂ
ಪೆರ್ಮೆಯಿಂ ಮೊಲೆಯೂಡಿ ಪಾಲಿಸಿದಳಾತನಂ,
ಸಿಂಹಿಣಿ ಕಿಶೋರಕೇಸರಿಯಂ ಪೊರೆಯುವಂತೆ.
ಮತ್ತೊರ್ವನರ್ಜುನನೊ ಎನೆ ಬಭ್ರುವಾಹನಂ
ಬಳೆದನಾ ತನ್ನ ನಾಡಿಗೆ ಕೋಂಟೆ ತಾನಾಗಿ,
ನೆರೆಯ ನೆಲಗಳ ದೊರೆಗೊಡಂಕೆಗೆ ಕೊಡಲಿಯಾಗಿ!
    ಚಿತ್ರವಾಹನನಳಿಯೆ ಚಿತ್ರಾಂಗದೆಯೆ ರಾಜ್ಯ
ಸೂತ್ರಮಂ ಪಿಡಿದು, ದರ್ಪದಿ ನಡೆದು, ಕಿರುಮಗಂ
ಹರೆಯಕ್ಕೆವಂದಮೇಲದನವನ ಕೈಲಿಟ್ಟು,
ಹೊಳಲ ಹೊರವಳಯದೊಂದುದ್ಯಾನ ವನದಲ್ಲಿ
ನಿಚ್ಚಂ ತಪಂ ನಿಂದುಮೋರೊರ್ಮೆ ತನ್ನೆಡೆಗೆ
ತನಯಂ ಬರಲ್ಕೆ ಕಲಿಪಳ್ ರಾಜನೀತಿಯಂ
ಮೇಣ್ ಧರ್ಮಭೀತಿಯಂ. ಆ ಬಭ್ರುವಾಹನಂ

ಬಲ್ಮೆಯೆನಿತಿರ್ದೊಡಂ, ಕರ್ಚ್ಚಿ ವಿಷಮಂ ಕಾರಿ
ಕೊಲ್ಲದೆಯೆ ಹೆಡೆಯೆತ್ತಿ ಹೆದರಿಸುವ ನಯಮನೆಯೆ
ಪಿಡಿದು, ನಿರ್ನಿಮಿತ್ತದಿ ವಿಜಯಲಾಂಪಟ್ಯದಿಂ
ನೆರೆ ನಾಡುಗಳ ಮುತ್ತಿ ನೆತ್ತರಂ ತೊರೆ ಹರಿಸಿ
ಕಪ್ಪಗಾಣಿಕೆ ಕೊಳ್ಳದೆಯೆ, ನೆರೆಯ ದೊರೆಗಳಂ
ಮಿತ್ರರಂಗೈದರಸುಗೆಯ್ಯುತ್ತುಮಿರೆ ಭೂಮಿ
ವರ್ಧಿಸಿತು ಸ್ವರ್ಗಮಾಯ್ತೆಂಬಿನಂ. ಮಣಿಪುರಂ
ಬಿತ್ತರಿಸಿ ಶೋಭಿಸಿತು. ಸೌಂದರ್ಯ ಸ್ವಾತಂತ್ರ್ಯ
ಸಂಸ್ಕೃತಿಗಳಂವೆರಸಿ ಧೈರ್ಯಶೌರ್ಯಂಗಳಿಂ
ಶಾಂತಿಯಿಂ ನಲಿದತ್ತು ಜನಪದಂ ನಿಚ್ಚಮಾ!
  ಸಂವತ್ಸರಗಳುರುಳಿ ಹರಿದುದು ನಿರಂತರಂ
ಕಾಲನದಿ. ತಿಂಗಳಾರಕೆ ಮರಳಿಯೈತಂದು
ಕಾಂಬೆನೆಂದೊರೆದು ವಚನವನಿತ್ತ ಪಾರ್ಥಯತಿ
ಕಾರಣಾಂತರದಿಂದೆ ತಿಂಗಳೆರಡಂ ತಳುಹಿ
ಬನದ ಶಿವಗುಡಿಗೆ ಬಂದಿನಿಯಳಂ ಕಾಣದೆಯೆ
ಕಣ್ಣೀರು ಕರೆಗಣ್ಮೆ ಮನದಿ ಮಮ್ಮಲ ಮರುಗಿ,
ತಿಳಿಯದೆಯೆ ಕಾಂತೆಯೆಲ್ಲಿರ್ದಳಾರ್ಗೆಂಬುದಂ,
ಕಾದಲೆಗೆ ಕಾದಲ್ಲಿ ಕೆಲದಿನಂಗಳುಮಿರ್ದವಳ್
ತೋರದಿರೆ, ಮುಂಬರಿದನುತ್ತರೋತ್ತರಮಕ್ಕೆ
ತನ್ನಕ್ಕರೆಯ ಪೆಣ್ಗೆನುತೆ ಭಾರತೋತ್ತರಕೆ.
ಮುಂದೆ ಸಂಭವಿಸಿತ್ತು ನಿಯತಿ ಕೃತ ನಿಯಮದಿಂ
ಕುರು ಪಾಂಡುಸಂಭವರ ಭೀಷಣ ರಣೋದ್ಯಮಂ,
ಮೈನವಿರನೊಡರಿಪ ಮಹದ್‌ಭವ್ಯಭಾರತಂ,
ಗಾಂಗೇಯ ದ್ರೋಣಾದಿ ಕರ್ಣ ದುರ್ಯೋಧನರ
ಜೀವಕಾನನ ದಹನ ಪ್ರೋಜ್ವಲಂ, ಮುರವೈರಿ
ಪಾರ್ಥ ಧರ್ಮಜ ಭೀಮನಭಿಮನ್ಯು ಮೊದಲಪ್ಪ
ವೀರರ ಯಶೋಕೇತನಾಂಕಿತ ನಿಕೇತನಂ!
ಆ ಮಹಾಘಟನೆಗಳ ಸಂಘಟ್ಟಣೆಯ ಮಧ್ಯೆ
ಕಿಡಿಮಳೆಯ ನಟ್ಟನಡು ಸಿಡಿಮದ್ದಿನಂತಿರ್ದ
ಸಿತವಾಹನಂಗೆಲ್ಲಿ ಚಿತ್ರಾಂಗದೆಯ ನೆನಹು?
ಪೆಸರೆಂಬುವವಲಂಬಮಾದೊಡಂ ತಾನುಂಟೆ ಪೇಳ್

ಸ್ಮೃತಿಗೆ? ಪೆಸರಿಲ್ಲದಾ ವನಿತೆ ಬಗೆಯಿಂ ಜಗುಳಿ
ಬಿಳ್ದಳೊಯ್ಯನೆ ವಿಸ್ಮೃತಿಯ ತಿಮಿರ ವೈತರಣಿಗೆ!
ನರನು ಮರೆತೊಡಮೇನು ಮರೆಯುವುದೆ ತಾಂ ಋತಂ?
ಮರೆದಪಳೆ ಚಿತ್ರಾಂಗದೆ? ಭಾರತಾರಂಭಮಂ
ಕೇಳ್ದಂದು ಮೊದಲ್ಗೊಂಡು ಯೆಪಾರ್ಥಂಗೆ ಗೆಲಮಕ್ಕೆ!
ಅರ್ಜುನಗೆ ಸೊಗಮಕ್ಕೆ! ಜಯವಧು ಸವತಿಯಕ್ಕೆ!
ಧರ್ಮಸಂಸ್ಥಾಪಕಂ ದೇವಕೀನಂದನಗೆ
ನಿತ್ಯಮಂಗಳಮಕ್ಕೆ! ಲೋಕಕ್ಕೆ ಶಾಂತಿಯಕ್ಕೆ!
ಎಂದು ನೋಂತಭವನಂ ಪ್ರಾರ್ಥಿಸಿದಳನುದಿನಂ
ಪಾಂಡವ ವಿಜಯವಾರ್ತೆ ಕಿವಿಗೆ ಬೀಳ್ವನ್ನೆಗಂ!
ಅಂತು ನೋಂಪಿಯೊಳಿರುತ್ತಿರೆ ಬಭ್ರುವಾಹನಂ
ತಾನೊರ್ಮೆ ತಾಯೆಡೆಗೆ ವಂದು, ಮಾತಿನ ನಡುವೆ
ನೋಂಪಿಯುದ್ದೇಶಮಂ ಕೇಳೆ, ಬೆಸಸಿದಳಾಕೆ:
"ಧರ್ಮದ ಜಯಕೆ ಬೇಡುತಿಹೆನೀಶನಂ. ಋತದ
ಖಡ್ಗಕ್ಕೆ ಸುವ್ರತದ ಪ್ರಾರ್ಥನೆಯಹುದು ಸಾಣೆ.
ಧರ್ಮದ ಮಹಾಭಾರತದ ಜಯಕೆ ಪಾರ್ಥನಾ
ಪೌರುಷವೆನಿತೊ ಚಿತ್ರೆಯಿಾ ವ್ರತದ ಪ್ರಾರ್ಥನಾ
ಪೌರುಷಂ ತಾನನಿತೆವೇಳ್ಕುಮೆಂಬುದು ಶ್ರದ್ಧೆ
ನನತು! ಧರ್ಮದ ಮೇಲ್ಮೆಗಾಗಿ ಹೋರಾಡುವಾತಂ
ಗೆಲ್ದರದಕಾತನಾ ಬಿಲ್ಬಲ್ಮೆಯೊಂದಲ್ತು
ಕಾರಣಂ; ಧರ್ಮಿಷ್ಠರಾದರಾಶೀರ್ವಾದ
ಪೂರ್ಣಬಲಮಿಹುದಲ್ಲಿ ತಿಳಿ ದಿಟಂ. ಗಾಂಗೇಯ
ದೇಹಮಾ ಕೌರವರ ಪಕ್ಷಮಾಗಿರ್ದೊಡಂ
ಪರಕೆಯೆಲ್ಲಂ ಪಾಂಡವರ ಕಡೆಗೆ! ಮುರವೈರಿ
ಪಾಂಡವರ ಕಡೆಗೆ; ಬಲವೆರಸಿ ಬಲರಾಮನಾ
ಕೌರವರ ಕಡೆಗಲ್ತೆ? ನಾನಂತೆ ಪಾರ್ಥನಾ
ಗಾಂಡೀವಕಾಶೀರ್ವಚನಶಕ್ತಿಯಂ ನೀಡಿ
ನೆರವಾದಪೆಂ!"
ತಾಯ ನುಡಿಯನಾಲಿಸಿ ಮಗಂ
ಹೇಳಿದನು ಕಣ್ಣನಲಿ ಹನಿ ತುಂಬಿ ತಾನುಮಾ
ಕುರುಭೂಮಿಗೆಯ್ದಿ, ಧರ್ಮದ ಜಯಕೆ ನೆರವಾಗಿ,

ಮಣಿಪುರದ ಕೀರ್ತಿಗೆ ಕಲಶವಿಟ್ಟು ಬಹೆನೆಂದು.
ಕರೆಯದೆಯೆ ತೆರಳುವುದು ನೆಲದೊಡೆಯರಿಗೆ ತಗುವ
ಮರಿಯಾದೆಯಲ್ಲೆಂದೊರೆಯೆ ಜನನಿ, ಮಗನದಕೆ
ಸುಯ್ದು, ತಾನೆಂದಾದರೊಂದು ದಿನಮರ್ಜುನಗೆ
ಮಾರಾಂತು ಕದನಮುಖದಲ್ಲಿ ತನ್ನದಟುಮಂ
ತೇಜಮಂ ತೋರಿ, ಮುಂದಾವಗಂ ಮಣಿಪುರದ
ದೊರೆಗಳಂ ಮರೆಯದಂದದಿ ಮಾಳ್ಪೆನೆಂದುರಿದು
ನುಡಿಯೆ, ಕಂಪಿಸಿ ತಾಯಿ ತಿಳಿಯದಾಶಂಕೆಯಿಂ,
ಸಂತೈಸಿ ಕಳುಹುತೆ ಕುಮಾರನಂ, ಕೈಮುಗಿದು
ಕಣ್ಮುಚ್ಚಿ ಬೇಡಿದಳ್ ಸುರರಂ ಪೊರೆಯಿಮೆಂದು!
ಪೊಳ್ತುಪೊಳೆಯಿಂತು ಪರಿದಿರೆ ಪರ್ವಿದುದು ವಾರ್ತೆ:
ಕ್ರತು ನಿಮಿತ್ತದಿ ಜನ್ನಗುದುರೆ ಬೆಂಗಾವಲ್ಗೆ
ಸೈನ್ಯಸಾಗರ ಸಹಿತ ರಣಧೀರ ನೃಪರೊಡನೆ
ರಣವಧೂವಲ್ಲಭಂ ವಿಜಯಂ ವಿಜಯಕೆಂದು
ಪೊರಮಟ್ಟು, ದೇಶದೇಶಂ ಗೆಲ್ಲುತದಟಿನಿಂ
ಬಾಕ್ಕೆಳಿಸುತೆ, ಚಂಡ ಜವದಿಂದಮಿತ್ತಣ್ಗೆ
ನುರ್ಗುತಿಹನೆಂದು. ಚಿತ್ರಾಂಗದೆಗೆ ಸಂತಸಂ
ಕೈಗಣ್ಮಿದತ್ತು, ಬಹುಕಾಲದಾನಂತರಂ
ಪ್ರತ್ಯಕ್ಷವಹುದೆಂದು ಪತಿಯ ಸಂದರ್ಶನಂ.
ಮೇಣಂತೆ ನಲಿದನಾಕೆಯ ಕುವರನುಂ, ತನಗೆ
ಮೂಜಗದ ಬೀರದ ಜಸಕೆ ತವರಿನಂತಿರ್ಪ
ಸವ್ಯಸಾಚಿಯ ಕೂಡೆ ಸಮರಂ ದೊರೆವುದೆನುತೆ.
ಇರ್ವರುಂ ತಾಮೊರ್ವರೊರ್ವರ್ಗೆ ಗುಹ್ಯಮಂ
ಪೇಳದಿರೆ, ವರ್ಷರ್ತು ಹರ್ಷಮನೆರಚುವಂತೆ
ಕಾರ್ಮುಗಿಲ್ ಮುತ್ತಿ ಗಗನವನ್ನೆದೆ ಮಳೆಗರೆಯೆ,
ಪಸುರುಗುವ ಪೊಸವುಲ್ಲ ಸೊಂಪಿಡಿದೆಸೆವ ನೆಲದ
ಶಾದ್ವಲ ಶ್ಯಾಮಲ ಸ್ಮಿತದ ಸುಂದರ ರೋಚಿ ತಾಂ
ಸುರಕಾರ್ಮುಕದ ವರ್ಣಗಳ ಮೆರೆದು ಮೋಹಿಸುವ
ನಾನಾ ಕುಸುಮತತಿಯ ಕೇಸರದ ಧೂಳಿಯಂ
ಕೆದರುತಿಹ ಗಾಳಿಯಂ ಕೆಳೆಗೊಂಡು ಕಳಕಳಿಸೆ,
ಪಕ್ಷಿ ಸುಸ್ವನಮಯ ಪುರೋದ್ಯಾನವೀಧಿಯೊಳ್

ಪಾಳೆಯಂ ಬಿಟ್ಟುದರ್ಜುನನ ಸೇನೆ! ಯಜ್ಞಹರಿ
ಪಟ್ಟಲಿಖಿತಂ ವೆರಸಿ ಕಟ್ಟುಗೊಂಡುದು ಕೂಡೆ
ಚಿತ್ರಾಂಗದಾ ತನೂಜನ ದಿಟ್ಟ ಭಟರಿಂದೆ!
    ಬತ್ತಿಸಿ ನೃಪಾಲರಾಟೋಪಮಂ ಕೋಪದಿಂ,
ನೀಲಧ್ವಜನ ಮುರಿದು, ಹಂಸಧ್ವಜನ ಗೆಲ್ದು,
ಸೋಲಿಸಿ ಪ್ರಮಿಾಲೆಯಂ, ಲಕ್ಷ್ಮಿಯ ನಿವಾಸಮೆನೆ
ಸ್ವರ್ಣ ಸಂಪತ್ತಿನಿಂ ಮೇರುವಿಂಗೆಣೆಯಾಗಿ
ಕಣ್ಣು ಕೋರೈಸೆ ರಾಜಿಪ ರಾಜಧಾನಿಗಳ
ಸುಲಿಸುಲಿದು ಸೂರೆಗೊಂಡಾ ಪಾರ್ಥನೆಯೆ ಕಂಡು
ಮಣಿಪುರದ ಸಿರಿಗೆ ಬೆರಗಾಗಿ ಕೇಳಿದನಂದು
ಹಂಸಧ್ವಜನ ಕುರಿತು ನಾಡಿನರಸಾರೆಂದು.
  "ಏನನೆಂಬೆನು ಪಾರ್ಥ? ಈ ಹೊಳಲಿನರಸನಿಗೆ
ಸಿದ್ದಾಯಕಾಗಿ ನಾವನಿಬರುಂ ತಪ್ಪದೆಯೆ
ಪ್ರತಿವರ್ಷಕೊಂದು ಸಾಸಿರ ಬಂಡಿ ಚಿನ್ನಮಂ
ತೆತ್ತು ಬಹೆವಲ್ಲದಿರೆ ದಂಡನೆಯೆಂದು ಬೆದರಿ!
ಈತಂಗೆ ಸಚಿವಂ ಸುಬುದ್ಧಿ. ಮೇಣೀತನಾ
ವಾಹಿನಿಯ ವಾರ್ಧಿಯನ್ನೀಸಬಲ್ಲವರಿಲ್ಲ
ಲೋಕದಲಿ. ಪೆಸರಾತನಿಗೆ ಬಭ್ರುವಾಹನಂ!
ಕರುಣೆಯಲಿ ನಯವಿನಯಗಳಲಿ ಮೇಣದಟಿನಲಿ
ಸಂಸ್ಕೃತಿಯ ಸೌಜನ್ಯಭಕ್ತಿಯಲಿ ಸೊಬಗಿನಲಿ
ಸರ್ವಸಂಪನ್ನತೆಯೊಳಾತಂಗೆ ಸಮನಿಲ್ಲ
ತ್ರೈಜಗದೊಳುಂ. ಪುಣ್ಯಪುರುಷನಾತಂಗೆ ಗುರು
ಆತನ ಜನನಿಯಂತೆ! ವರ ತಪಸ್ವಿನಿಯಾಗಿ,
ದೇಶದಭ್ಯುದಯಕೊಂದಾಶೀರ್ವಚನಮಾಗಿ,
ನಗರೋಪವನದೊಳೆಲೆವನೆಯೊಳಿರುತಿಹಳಂತೆ!
ಪೆಸರಾಕೆಗಾ ದೇವಿಗಿರ್ಪುದೈ ಚಿತ್ರಾಂಗದೆ!
ಚಿತ್ರಾಂಗದೆಯ ಕಥೆ ವಿಚಿತ್ರಮೆಂದಾಡುವರ್:
ಚಿತ್ರವಾಹನಗಾಕೆಯೊಬ್ಬಳೆ ಕುವರಿಯಾಗಿ
ಜನಿಸೆ, ಮಗಳಂ ಮಗನೆಯೆಂದೊಲಿದು ಸಲಹಿದನು
ಆಣ್ಮಾರ್ಗೆ ತಗುವ ಕಲಿಯ ಕಲಿಸಿ. ಜವ್ವನದಿ
ಬೇಂಟೆಗೆನುತಾಕೆ ಕಾಡೊಳಗಲೆಯುತಿರಲೊರ್ವ

ಗೈರಿಕವಸನವೇಷಿ ಸುರಪುರುಷನೈತರಲ್,
ಕಣ್ಬೇಟವಗ್ಗಲಿಸಿ, ಗಾಂಧರ್ವ ವಿಧಿಯಿಂದೆ
ಮದುವೆ ನಿಲೆ, ಬಭ್ರುವಾಹನ ಜನನಮಾಯ್ತೆಂದು
ಕರ್ಣಪ್ರತೀತಿಯಿದೆ. ದಿಟಮೆಂತೊ ನಾನರಿಯೆ!”
ಹಂಸಧ್ವಜನ ನುಡಿಯ ಕೇಳುತರ್ಜುನನೆದೆಯ
ಗಹ್ವರ ಗಹನದಲಿ ಮೂಡಿತೊಂದತಿದೂರದಾ
ದೂರಸ್ಮೃತಿ. ಆದರದಕಿದಕೇನು ನಂಟೆನುತೆ
ತಳ್ಳುತಾಚೆಗೆ ನೆನಹನೊಡನೆ ಬಳಿ ಕುಳಿತಿರ್ದು
ಕಥೆಯ ಕೇಳುತಲಿರ್ದ ವೃಷಕೇತುವಂ ಕುರಿತು
ಯೆಯುವಕ ವೀರನೆ, ಬಭ್ರುವಾಹನಗೆ ಮಾರಾಂತು
ಜಯಿಸುವೆಯ ನೀನೆಂದು ಮೊದಲಾಗಿ ನುಡಿಗಳಂ
ತೊಡಗಿದನ್. ಆದರೇನ್? ಬಿದಿಯ ವಂಚಿಸಲಹುದೆ?
ಕಣ್ಮುಚ್ಚಲೇನರ್ಜುನಂ? ನೋಡು ಅದೊ ಛಾಯೆ
ರಾಹುವಂದದಿ ಬರುತಲಿದೆ ಬಳಿಗೆ ಬಳಿಸಾರ್ದು!
ಒಯ್ಯನೊಯ್ಯನೆ ತನ್ನೆಡೆಗೆ ಪಾರಿ ಬರುತಿರ್ಪ
ವಿಧಿ ವಿಹಂಗಮ ಪಕ್ಷ ಛಾಯೆಯೆನೆ, ಕಳ್ತಲೆಯ
ಕರ್ಗಪ್ಪು, ಪಗಲಳಿಯೆ, ತೀವಿತು ಧರಿತ್ರಿಯಂ.
ಏನ ನೆನೆದನೊ ಮನದೊಳಿಂದ್ರಜಂ? ಮೂಡುವಾ
ತಾರಾಳಿಯೊಡನೆ ತಾನಾರುಮರಿಯದ ರೀತಿ
ಮಾರುವೇಷವ ಧರಿಸಿ, ಮೆಲ್ಲಮೆಲ್ಲನೆ ಹೊಳಲ
ಬೀದಿಗಳನಲೆದಲೆಯುತರಸಿ ಚಿತ್ರಾಂಗದೆಯ
ಪರ್ಣಶಾಲೆಯ ಬಳಿಗೆ ವಂದು, ಬೆರಗಾದನಾ
ನಿರ್ಜನತೆ ನೀರವತೆ ನಿರ್ಭೀತಿಯನು ನೋಡಿ
ಪೂಜೆಯೊಳ್ ತೊಡಗಿರ್ದ ಚಿತ್ರಾಂಗಿಯಾ! ಒಡನೆ
ಹೊಮ್ಮಿ ಗೌರವಭಾವವಾತನೆರ್ದೆಯಲಿ ನರಂ
ಹೊರದೂಡಿದನು ತನ್ನ ತೋರಿದಾಶಂಕೆಯಂ.
ಹಂಸಧ್ವಜಂ ಪೇಳ್ದ ಕಥೆಯನಾಕರ್ಣಿಸುತೆ
ಮುನ್ನ ಬಹುವತ್ಸರಗಳಾಚೆ ಕಾನನ ಮಧ್ಯೆ
ಯತಿವೇಷಿಯಾಗಿ ಬರೆ ತಾನು ಕಂಡೊಲ್ದಾಕೆ
ಮೇಲೆ ಕಣ್ಮರೆಯಾಗಿ ಪೋದಾಕೆಯಿರಬಹುದೆ
ರಾಣಿ ಚಿತ್ರಾಂಗಿಯೆಂದೆಂಬ ಸಂದೆಯದಿಂದೆ

ಬಂದು ಕಂಡರ್ಜುನಂಗಳಿದುದು ಮನದ ಶಂಕೆ.
ಚಿತ್ತದಲಿ ಚಿತ್ರಿಸುತ್ತಾ ಭುವನ ರಮಣೀಯ
ರಮಣಿಯಂ ಹೋಲಿಸಿದನಲ್ಲಿ ತನ್ನೆದುರಿರ್ದ
ರಾಜ್ಞೀ ತಪಸ್ವಿನಿಯ ರೂಪಿಂಗೆ! ಹೋಲಿಕೆಯೆ?
ತೆಗೆ ತೆಗೆ ಅದೆಲ್ಲಿಯದು? ಅವಳೆಲ್ಲಿ ಇವಳೆಲ್ಲಿ?
ಸರ್ವ ಸೌಂದರ್ಯಸಾರವದು! ನಿಸ್ಸಾರವಿದು!
ತಾಯ್ತನದ ಗಾಂಭಿರ್ಯವನು ಹೋಲಿಸುವುದುಂಟೆ
ತರಳ ತರುಣತೆಯ ಮೋಹನ ಚಂಚಲತೆಯೊಡನೆ?
ಪುಷ್ಪ ಗರ್ಭಿತ ನವ ವಸಂತದ ಲಸಲ್ಲತೆಗೆ
ಪಣ್ ಬೀತುಪೋದ ಮಾಗಿಯ ಮರದ ಸಾಮ್ಯಮೇಂ?
ಅಂತಿಂತುಮಿವಳಲ್ಲಮವಳೆಂದು ತರಿಸಂದು
ಮರಳಿದನ್ ಪಾಳೆಯಕೆ ಮರುಳಾಗುತಾ ನರಂ
ಸಂದೇಹಮಂ ತವಿಸಿ, ತನ್ನೆದೆಯ ಸಂತೈಸುತೆ.
    ಅತ್ತ ಕಾಹಿನ ಭಟರ್ ತನಗೆ ತಂದಿತ್ತ ಆ
ಜನ್ನಗುದುರೆಯ ಹಣೆಯ ಉರವಣೆಯ ಒಕ್ಕಣೆಯ
ಪಟ್ಟಲಿಖಿತದ ಕನಕದೋಲೆಯಂ ತಾನೋದಿ,
ಸಾಹಸಂ ಲಭಿಸಿತೆಂದುರ್ಕಿಹದಿನುರಿದೆದ್ದು,
ಕಾಳೆಗಂಗೊಡೆ ಮನಂಮಾಡಿ, ಮಂತ್ರಿಗೆ ಬೆಸಸಿ,
ಹಗೆಗೊಲೆಗೆ ತಾಯಿಯಾಶೀರ್ವಾದಮಂ ಪಡೆಯೆ
ಪುರವನದ ನಡುವಿರ್ದ ಪರ್ಣಶಾಲೆಗೆ ಜವದಿ
ರಯಗತಿಯಿನೈತಂದನಾ ಇಂದ್ರಜ ತನೂಜಂ.
ಬರೆ ಕುಮಾರಂ, ಜನನಿ ಸಂಭ್ರಮದಿನಿದಿರೆದ್ದು,
ಮಣಿದಾ ಮಣಿಪುರೇಶಮಣಿಯಂ ಮಣಿಯುತೆತ್ತಿ
ಬೆಸಗೊಳಲ್ ಮುದದಿಂದೆ ಬಂದ ಹದನೇನೆಂದು,
ಧವಳ ಧೌತಾಂಬರದ ವರ ಜಪಮಣಿಯ ಕರದ
ಧ್ಯಾನಸ್ತಿಮಿತ ಶಾಂತಿಮಂಡಿತ ಮುಖಾಂಬುಜದ
ತಾಯಂ ತಪಸ್ವಿನಿಯನಳ್ಕರುಳ್ಳುವ ತೆರದಿ
ವೀಕ್ಷಿಸುತೆ ಪಾರ್ಥಜಂ ರಾಜ್ಯಕಾರ್ಯವನರುಹಿ
ಪರಕೆ ಬೇಡುತಿರೆ, ಹಮ್ಮೈಸಿ ಕುಳಿತಾ ಮಾತೆ
ಕಂಬನಿಯ ಕರೆದು ಮಾತಿಲಿಯಾಗಿ ರೋದಿಸಿರೆ,
ಬೆರಗು ಹೊಡೆದಂತಿರ್ದನಾ ಬಭ್ರುವಾಹನಂ:

“ಮಗನೆ, ಮನ್ನಿಸು ನಿನ್ನ ಮಾತೆಯ ಅಧೈರ್ಯಮಂ,
ನಾಣ್ಚುತಿಹಳೈ ನಿನ್ನ ಕಲಿತನಕ್ಕೆನ್ನೆರ್ದೆಯ
ಹೆದರಿಕೆಯ ಹೆಣ್ಣು. ಸಾಹಸಿ, ವೀರ, ಧುರಧೀರ
ಕಲಿ ನಿನಗೆ ರುಚಿಸದಿರ್ದೊಡಮೆನ್ನ ಸಾತ್ವಿಕತೆ,
ದೀನ ವಾಣಿಯನಾಲಿಸೈ: ಧರ್ಮನಂದನಂ
ಪೂಜ್ಯನಾತನ ತುರಗಮೇಧಮುಂ ಧರ್ಮಕೃತಿ.
ಧರ್ಮಸಂಸ್ಥಾಪಕಂ ಶ್ರೀ ಕೃಷ್ಣನೀ ಕ್ರತುಗೆ
ಜೀವಾತುವಾಗಿಹಂ. ಧರ್ಮಾನುಜಾರ್ಜುನಂ
ಬಂದಿಹನು ಪುಣ್ಯಕೃತಿ ಹಯಮೇಧಕೋಸುಗಮೆ
ಕುದುರೆ ಬೆಂಗಾವಲ್ಗೆ. ಪುಣ್ಯಮಂ ಪ್ರತಿಭಟಿಸಿ
ನಿಲ್ವುದು ಧರ್ಮಮಲ್ತು. ಧರ್ಮ ರಕ್ಷಕರೆಲ್ಲರುಂ
ನೆರಪಿ ನೆರವಾಗಬೇಕಾದುದಿದಕೇಕೆ ನೀಂ
ನಿಲ್ಲುವೈ ಎಡರಾಗಿ? ಖಿಬೇರೊಂದು ತೆರದಿಂದೆ
ನಿನಗೆ ಗುರು ಪೃಥೆಯಾತ್ಮಜಂ. ಬಾಲ್ಯ ಕಾಲದಲಿ
ಕಲಿಯಾದೆನಾನರ್ಜುನನ ನಾಮ ಜಪದಿಂದೆ
ಬಿಲ್ಬಿಜ್ಜೆಯಂ ಕಲಿತು! ಸಾನಲ್ತೆ ಗುರು ನಿನಗೆ?
ಗುರುಗೆ ಗುರುವಾದವಗೆ ಗೌರವಮೆ ಗುರುಗಾಣ್ಕೆ!
ಗುರು ಪಿತೃಗೆ ಸಮನಲ್ತೆ? ವೈರಿಸಂಹೃತಿಯಿಂದೆ
ಪಿತೃವಧಾ ಪಾತಕಂ ಬಿಡದೆ ಬರ್ಪುದೆ ದಿಟಂ
ನೀನಿಂದಳವಿಗೊಟ್ಟು ಮಲೆಯಲ್ಕೆ: ಮುನಿಯದಿರ್,
ಕಂದ, ಕೇಳ್ದು ನನ್ನೀ ನನ್ನಿಯಂ!” ಪಾರ್ಥಜಂ
ಮಾತೆಯ ನುಡಿಗೆ ನಡುಗಿ ಭೀತಿಯಿಂದಡಿಗೆರಗಿ:
“ಕ್ಷತ್ರಿಯರ ಪಂಥದಿಂದಾತನ ತುರಂಗಮಂ
ಕಟ್ಟಿದೆನ್. ನಿಮ್ಮ ಚಿತ್ತಕೆ ಬಾರದಿರ್ದೊಡದು,
ನಿಮ್ಮಡಿಗೆ ಸಂಪ್ರೀತಿಯೇನದಂ ಬೆಸಸಿದೊಡೆ
ಕೈಕೊಂಬೆನದಕೇತಕಳುವುದಂ” ದಮ್ಮನಂ
ಸಂತವಿಡುತಿರೆ ನುಡಿದಳಾ ಮಾತೆ: “ವಹಿಲದಿಂ
ನಡೆ, ನಿನ್ನಖಿಳ ರಾಜ್ಯಸಂಪತ್ತುಮಂ ಗುರುಗೆ,
ಧರ್ಮಜಾನುಜಗೆ, ಮಧುಸೂದನ ಪ್ರಿಯಸಖಗೆ
ಮದ್ಗುರುವಿನಡಿದಾವರೆಗಳಿಗೆ ನಿವೇದಿಸೈ.
ಸನ್ಮಾನದಿಂದಾತನಂ ಪುರಕೆ ಕರೆದು ತಾ;

ಸಂತುಷ್ಟಳಾದಪೆಂ ನಾಂ ಭಟವರೇಣ್ಯನಾ
ನರವೀರವರನ ಸಂದರ್ಶನ ಸುಕೃತದಿಂದೆ.''
ಎನುತ್ತೆ ಸೂನುಗೆ ಬುದ್ಧಿವೇಳ್ದು ಕಳುಹುತೆ, ಮತ್ತೆ
ಸಂಕಲ್ಪ ಸಂಪ್ರಾಪ್ತಿಗಾಗಿ ಪರಮೇಶನಂ
ಪೂಜಿಸುತೆ, ಪಾರ್ಥನ ಬರವಿಗುಬ್ಬಿದಳ್ ಚಿತ್ರೆ!
    ಮರುದಿನಂ ಮೂಡಣೆಡೆ ಬೆಳ್ಳಿದಾರಗೆ ಬಾಡೆ,
ಬೆಟ್ಟಗೋಡಂ ಮೆಟ್ಟಿ ಕನಕ ದಿನಮಣಿ ಮೂಡೆ,
ಹಕ್ಕಿಯಿಂಚರ ಹಾಡೆ, ದೇಗುಲದ ವಾದ್ಯತತಿ
ಮಂಗಳ ರವಂ ಗೆಯ್ಯೆ, ಸುಪ್ರಭಾತಂ ನೆಯ್ಯೆ
ಸ್ವರ್ಗೀಯ ರಮ್ಯತೆಯನಾ ಬಭ್ರುವಾಹನಂ
ಜನನಿಯ ನಿರೂಪದಂತಾಜಿ ನಿಂದತ್ತೆಂದು
ಪುರದೊಳಗೆ ಡಂಗುರಂಬೊಯ್ಸಿದಂ; ತೆಗೆಸಿದಂ
ಕೋಶದ ಸುವಸ್ತುಗಳನೆಲ್ಲಮಂ ನರನಡಿಗೆ
ನೈವೇದ್ಯಮಂ ನೀಡೆ. ಗುಡಿ ತೋರಣಂಗಳಂ
ಕಟ್ಟಿಸುತೆ ನಗರವನಲಂಕರಿಸಿ, ಸೇನೆಯಂ
ಶಾಂತಿಕೇತನದಿಂದೆ ಸಿಂಗರಿಸಿ, ಮನ್ನೆಯರ
ನಾಗರಿಕ ಜನರೆಲ್ಲರಂ ಕರೆಸಿ, ನೆರಪುತ್ತೆ
ಶೃಂಗಾರ ಸಾಗರ ತರಂಗಾಂಗಿಯರೆನಲ್ಕೆ
ಕನ್ನಡಿ ಕಳಶವಿಡಿದ ಕನ್ನೆಯರ ಗಡಣಮಂ,
ಸಾತ್ವಿಕ ಸುಮಂಗಳದ ಸಂಗೀತ ಶೈಲಿಯಿಂ
ಪೊರಮಟ್ಟನೊಂದು ಮೆರವಣಿಗೆ ವೈಖರಿಯಿಂದೆ
ಪಾರ್ಥನ ಶಿಬಿರಕಾಗಿ.
                    ಇತ್ತ ಪಾರ್ಥನ ಸೇನೆ
ಪ್ರದ್ಯುಮ್ನನನುಸಾಲ್ವನಿನಸುತನ ಸೂನು ಮೇಣ್
ಯೌವನಾಶ್ವಂ ಹಂಸಕೇತು ನೀಲಧ್ವಜಂ
ಮೊದಲಾದ ರಣಕಲಾ ಕೋವಿದರ ಸನ್ನೆಯಲಿ
ವೈರಿದಳದಾಗಮನವನೆ ನಿರೀಕ್ಷಿಸುತುಮಿರೆ
ವಿವಿಧ ವ್ಯೂಹಂಗಳಂ ರಚಿಸಿ, ಗೋಚರಮಾಯ್ತು
ಸಮರವೀವ ಸುಭಟರ ಮೋಹರಕೆ ಬದಲಾಗಿ
ಬೀಗರನ್ನೆದುರುಗೊಳಲೆಂಬಂತೆ ತನ್ನೆಡೆಗೆ
ಮೋಹನಾಂಗಿಯರೊಡನೆ ಮೋಹದಿಂ ಬರುತಿರ್ದ

ಮದುವೆ ದಿಬ್ಬಣದೊಸಗೆ ಮೆರವಣಿಗೆ! ಗೊಳ್ಳೆಂದು
ನಗೆಯ ತೆರೆ ನೊರೆಯುಕ್ಕೆ ಮಸಗಿತುತ್ಸಾಹದಿಂ
ಪಾಂಡವ ದಳದ ಜಳಧಿ; ಸಿಡಿಲು ಕೋಲಾಡಿದುದು
ಸಂಖ್ಯೆಯಿಲ್ಲದ ಕೈಗಳಂಕೆಯಿಲ್ಲದ ಜನರ
ಚಪ್ಪಾಳೆ; 'ನಿನಗೊಸಗೆ!' 'ತನಗೊಸಗೆ!' 'ಪೆಣ್ ಚೆಲ್ವು!'
'ಸವಿಗೆಲ್ವು!' ಎಂದು ಜವ್ವನಿಗ ಸೈನಿಕರೆಲ್ಲ
ತಮತಮಗೆ ನುಡಿದರ್ ಕುಚೋದ್ಯ ಚೋದ್ಯಂಗಳಂ!
'ಹೊಳಲನಾಳುವರೇನು ಗಂಡಸರೊ?' 'ಗಂಡಸರ
ಕಂಡೊಡನೆ ಗಂಡರೆಮಗೆಂದೆಂಬ ಹೆಂಗಸರೊ?'
'ಅಂದಾ ಪ್ರಮಿಳೆಯಾದೊಡಮೆಮಗೆ ಮಾರಾಂತು
ಗಂಡಂ ಮೆರೆದಳಲ್ತೆ?' 'ಬಭ್ರುವಾಹನ ಎಂಬ
ಹೆಸರು ಸ್ತ್ರೀಲಿಂಗವೋ ಪುಲ್ಲಿಂಗವೋ ತಿಳಿಯೆ?'
ಇಂತಿಂತು ಬೀರಾಳ್ಗಳಿಲ್ಲಲ್ಲಿ ನಗೆ ನುಡಿಯುತಿರೆ
ಬೆಕ್ಕಸಂಗೊಂಡಿಂದ್ರಜಂ ಪಕ್ಕದಲ್ಲಿರ್ದನಂ
ಪ್ರದ್ಯುಮ್ನನಂ ಕುರಿತು: "ದನುಜಾರಿ ನಂದನನೆ,
ಕರವಾಳ್ಗಳಂ ಪಿಡಿದು ರೋಷದಿಂ ಮೇಲ್ವಾಯ್ವ
ಕೂರಾಳ್ಗಳಂ ನೆರಪಿ ಬರ್ಪ ಬದಲೀ ನೃಪಂ
ನಾರಿಯರ ಗಡಣದೊಡನೈತರ್ಪನೇಕಿಂತು?
ಹೆತ್ತ ತಾಯಿಯೆ ಬಿಜ್ಜೆಯೋಜಳಾದೀತಂಗೆ
ಬದುಕಿನಲಿ ರಾಣಿಯರೊ, ಕದನ ಸಮುಖದಲ್ಲಿ
ಬದುಕಿಪ ಗುರಾಣಿಯರೊ ಸ್ತ್ರೀದಳಂ? ಸೋಜಿಗಂ!"
ಎಂದಣಕವಾಡುತಿರೆಯಿರೆ ಬಳಿಗೆ ಬಂದುದಾ
ಬಭ್ರುವಾಹನ ನಾಗರಕ ಸೇನೆ. ತೇರಿಂದೆ
ಭೂಮಿಗವತರಿಸಿ, ಗುರುವೆಂಬ ಗೌರವದಿಂದೆ
ಪಾರ್ಥನ ಬಳಿಗೆ ನಡೆದು ಚಿತ್ರಾಂಗದೆಯ ಮಗಂ
ಮಣಿಯೆ ಸಾಷ್ಟಾಂಗದಿಂ, ವೀರಪಾನೋನ್ಮತ್ತ
ಮತಿಯಾ ಕಿರೀಟಿ ಮೋರೆಯ ತಿರುಹಿ ಕಿರುನಗೆಯ
ಮದದಿಂದಹಂಕೃತಿಯ ಬಿಂಕದಿಂದಿತರರಂ,
ಕಾಳಗಕೆ ಬೆದರಿ ತನ್ನಡಿ ಶರಣ್ಬೊಕ್ಕರಂ,
ತಾಂ ಪಿಂದೆ ಕಂಡಂತೆ ಕಂಡುದಾಸೀನದಿಂ
ವರ್ತಿಸೆ, ಕಿರೀಟಿಯ ಸುತಂ ಕನಲ್ದನೊಳಗೊಳಗೆ

ಮುನಿಸು ಹೊಗೆ ಹೊತ್ತಿ. ಬಯ್ದನು ಮನದೊಳಬ್ಬೆಯಂ
ತನ್ನನೀ ದುರವಸ್ಥೆಗಪಮಾನ ಕೂಪಕ್ಕೆ
ನೂಂಕಿ ನಗೆಗೇಡುಮಾಡಿದಳೆಂದು! ಕುಲುಮೆಯೊಳ್
ಕಾಯ್ದ ಕಬ್ಬುನದಂತೆ ಕೆಂಪಾದ ಮೊಗದಿಂದೆ
ಕೇಸುರಿಯ ಕಾರುವಕ್ಷಿಗಳಿಂದೆ ದುರುದುರನೆ
ವೈರಿಯಾ ಮೋರೆಯನಿರಿದು ನೋಡಿ: "ಎಲವೆಲವೊ
ನಯರುಚಿ ವಿಹೀನ, ಸಂಸ್ಕೃತಿ ಬಾಹಿರ, ಕಿರಾತ,
ಜಯಮದಾಂಧನೆ, ಪಾರ್ಥ, ಗೌರವವರಿಯೆಯೆಲಾ!
ಧರ್ಮಜನ ಧರ್ಮಕಾರ್ಯದೊಳಿರ್ಪೆ ನೀನೆಂದು
ಮೇಣ್ ಗುರುವೆಂದೊರೆದ ಜನನಿಯಾಣತಿಯಂತೆ
ಬಂದು ನಾಸೆರಗಿದೊಡೆ ಮೋರೆ ತಿರುಗಿದೆಯಲಾ
ನೆಣಗೊಬ್ಬಿನಿಂ ಸೊರ್ಕಿ! ಸಮರೋತ್ಸವಕೆ ಸುಗಿದು
ನಿನ್ನ ಬಲ್ಮೆಯ ಜಸದ ಹುಸಿವೆಳಗಿಗುರೆ ಸೋಲ್ತು
ಸೋಲ್ಮೆಯಪಕೀರ್ತಿಯಿಂ ನುಸುಳಿಕೊಳಲೆಂದಳಸಿ
ಬಂದೆನೆಂದರಿಯದಿರೊ! ಜನನಿಯುಪದೇಶದಾ
ವಿನಯಕೆ ವಿಧೇಯನಾಗವಿವೇಕಿಯಾದೆನಾಂ!
ನಿನ್ನ ಕೀರ್ತಿಗೆ ಚಿತೆಯನೊಡ್ಡೈಸಲೆಂದಿರ್ದೆ;
ಮೇಣೆನ್ನ ಭುಜಪರಾಕ್ರಮ ತೀರ್ಥದಲಿ ನಿನ್ನ
ಭಸ್ಮಾವಶೇಷಮಂ ತೊಳೆಯಲೆಂದಿರ್ದೆನ್ನನಾ
ಬೋಳೈಸಿದಳ್ ತಾಯಿ! ನಿನ್ನ ಸೂಡಿಗೆ ನೀನೆ
ಕೆರಳಿಸೆನ್ನಂ ಕಿಚ್ಚನುರಿಯಿಟ್ಟೆಯೆಂದು ತಿಳಿ!
ನಿನ್ನ ವಿಕ್ರಮ ಸಿಂಹದಾ ಕೇಸರವನೆಲ್ಲ
ಕತ್ತರಿಸದಿರೆ, ಪೆರ್ಚುಗೆಯ ದಂಷ್ಟ್ರನಖಗಳಂ
ಕಸಿಮಾಡದಿರೆ, ನಿನ್ನನೀ ನಿನ್ನ ಪಡೆವೆರಸಿ
ಬಿರುಗಾಳಿ ತರಗೆಲೆಯನೊದೆದಟ್ಟುವಂತೆಬ್ಬಿ
ನಾಡಿನಾಚೆಯ ನರಿಯ ಮಾಡದಿರೆ, ಹೆತ್ತಬ್ಬೆ
ಮೇಣಯ್ಯನಾಣೆ! ಬಾಳಿದು ಸುಡಲಿ!" ಎಂದುರಿದು
ನುಡಿಯುರಿಯ ದಳ್ಳಿಸುವ ಬಭ್ರುವಾಹನಗಾ ನರಂ
ಹುಬ್ಬುಗಂಟಿಕ್ಕಿ ನೋಡುತ್ತುಗ್ರ ವ್ಯಗ್ರದಿಂ:
"ಬಾಯ್ಗುದುರೆವಾಯ್ಗೆ ಕಡಿವಾಣವನ್ನಿಕ್ಕೆಲವೊ
ಹೆಂಬೇಡಿ! ಬಳ್ಳಿಕ್ಕುತಿದೆ ಪೊಳ್ಳು ಜಂಬುಕಂ

ಸಿಂಗದಿದಿರಿನಲಿ! ನಿನ್ನನ್ನರಂ ಬಾಯ್ನುಡಿಯ
ಬೀರರನ್ನೆನಿತೊ ಕಂಡಿಹೆನೊ ನಾಂ. ಭೀರುವಿಗೆ
ವೀರರ್ಗುಚಿತಮಾದ ಗೌರವ ದೊರೆಯದೆಮ್ಮ
ಸಾನ್ನಿಧ್ಯದೊಳ್. ಸೆಣಸಿ ಶೂರ ಸಂಗ್ರಾಮದಲಿ
ಬಿಳ್ದೊಡಂ ಬಳ್ದೊಡಂ ಸನ್ಮಾನ್ಯನಾ ಕಲಿಯೆ;
ಮೇಣುಳಿದ ಪಂದೆಗಳಿಗಾ ಪೂಜೆ ಸಲ್ಲದೈ.
ಕಾದಲಾರ್ಪೊಡೆ ಕಾದಿ ಗೆಲಿ. ಹೋರಿ ಸೋತೊಡಂ
ಸಯ್ತೊಡಂ ವಿಖ್ಯಾತನಹೆ. ಕಳಕ್ಕಾರದಿರೆ
ಕಪ್ಪಕಾಣಿಕೆಯೊಡನೆ ಕಾಲ್ಗೆರಗಿ, ಕಟ್ಟಿದಾ
ಕ್ರತು ತೇಜಿಯನ್ನೊಡನೆ ತಂದಿತ್ತು, ಕೊಟ್ಟುದಕೆ
ಗಳಪದೆ ಹಸಾದವೆಂದಿರು. ನಪುಂಸಕರುಂಟು
ಕೆಲರವರ್ ಸತ್ತ್ವದ ಪೆಸರ್ ನುಡಿದು ಸಮತೆಯಂ
ನಟಿಸಿ ಸಾಧಿಸಲೆಳಸುವರ್ ಪೌರುಷತೆಯೊಡನೆ.
ಮುಂ ಕುದುರೆಯಂ ಕಟ್ಟಿ ಹುಡುಗಾಟವೆಂದರಿತೆ
ನೀನೀಗಳೇಂ? ಸಂಸ್ಕೃತಿಗೆ ವಂದಿಯಾದೊಡೇಂ
ನೀನದಕ್ಕೊಡೆಯನಲ್ತೆಂಬುದಂ ತೋರುತಿದೆ
ನಿನ್ನ ನಾಲಗೆಯ ನಡೆ! ತಂದೆಯಿಲ್ಲದೆ ಹುಟ್ಟಿ
ಪಂದೆಯಾದೆಲವೊ ನಿನ್ನಯ್ಯನೇಂ ಬಳೆತೊಟ್ಟ
ನಟ್ಟುವನೊ? ದಿಟ್ಟನಿಂದೆಂದಾದೊಡಂ ಪಂದೆ
ಪುಟ್ಟುವುದೆ?"
        ಬಿರುನುಡಿಗಳಂ ತನ್ನ ಮೊಗಕಿರಿದು
ಜರೆದೇಡಿಪರ್ಜುನನ ಮುಖಕೆ ದಿಟ್ಟೆಯಿನೊದ್ದು
ಪಿಂತಿರುಗಿದಂ ಬಭ್ರುವಾಹನಂ, ಮಖಹಯಂ
ಪುರಜನಸ್ತ್ರೀಯರಂ ಚತುರಂಗ ಸೇನೆಯಂ
ಬೆರಸಿ, ಭೀಷಣ ಯುದ್ಧ ಸನ್ನದ್ಧನಾಗಲ್ಕೆ!
ಫಲ್ಗುಣನ ತಾರುಣ್ಯದಪರಾವತಾರಮೆನೆ
ವೀರವಲ್ಗುತೆವೆತ್ತೆಸೆದ ಬಭ್ರುವಾಹನನ
ಕಂಡು, ಪೋಲ್ಪೆಗೆ ಬೆರಗುಗೊಂಡರಾ ಸೇನೆಯಲಿ
ಪಳಬರಾದವರೆಲ್ಲರುಂ. ಮತ್ತೆ ಕೆಲಬರ್ಗೆ
ಮೂಡಿದುದು ಗೌರವದೊಡನೆ ಭೀತಿ. ಇಂದ್ರಜನ
ಕೆಚ್ಚೆದೆಯೊಳುಂ ತೋರ್ದುದು ಅಧೀರತೆಯ ಛಾಯೆ!

ವೀರಪುಂಗವರರ್ಥಮಯ ಮೌನ ನೇತ್ರದಿಂ
ನೋಡಿದರ್ ತಾವೊಬ್ಬರೊಬ್ಬರಂ. ವರ್ಷರ್ತು
ಗಗನದಲಿ ಕಾಳಮೇಘಗಳೊತ್ತಿ ಮುತ್ತಿಬರೆ
ಜಡಿಯ ಸೋನೆಯನಿರದೆ ಸೂಸಿ, ದುರ್ದಿನಂ
ಕರ್ಕಶವಾಯ್ತು ವಿಧಿಯ ಬದ್ಧ ಭ್ರುಕುಟಿಯಂತೆ.
ಚೀರಿದತ್ತೊಂದು ರಣಶಕುನಿ, ಕಿವಿಗೊಟ್ಟು ಕೇಳ್,
ದುಶ್ಯಕುನ ಗರ್ಭಿತ ವಿಕೃತ ವಿಕಟ ರವದಿಂದೆ!

# ಆರನೆಯ ಪರ್ವಂ

ಪ್ರಲಯ ರೌದ್ರಾಭೀಲ ಶೂಲಧರ ಧೂರ್ಜಟಿಯ
ತಾಂಡವ ಸಮಯ ಚಂಡ ಡಮರು ಡಿಂಡಿಮದಂತೆ
ಮೊಳಗಿದುದು ರಣಭೇರಿ, ಮೇರು ಮಾರ್ದನಿ ಬೀರಿ
ಬಿರುದುದೆನೆ ದಿಗ್ಭಿತ್ತಿ! ಧಿಮ್ಮಿ ಧಿಮಿಧಿಮಿ ಧಿಮ್ಮಿ
ಗದೆಯ ಘಾತಸ್ಥೂಲ ಭೀಮ ವಿನ್ಯಾಸದಿಂ,
ಕುಣಿಕುಣಿಯೆ ನರಮುಂಡಮಾಲೆ ಕಟಿಬಂಧನದಿ,
ಪಸಿಯ ಬಿಸಿಬಿಸಿ ನೆತ್ತರುಗುವ ರುಂಡದ ಸರಂ
ಕಂಠದಲಿ ರಿಂಗಣಗುಣಿಯುತಾಡೆ, ಕತ್ತಲಲಿ
ಮಳೆಹೊತ್ತಿ ಕಾಳ್ಗಿಚ್ಚು ದಳ್ಳುರಿಯುರಿವವೋಲೆ
ಕರ್ಮೊಗದ ಕೆನ್ನೀರ್ ಬಸಿವ ನಾಲಗೆ ಮೇಲೆ
ಕೆಳಗೆ ಬಳ್ಕುತೆ ದಿಕ್ಕುದೆಸೆ ನೆಕ್ಕಿತೆನೆ ಜೋಲೆ,
ಪದಹತಿಗೆ ರಣರಂಗವೆಡಬಲಕೆ ತೂಗಿತೆನೆ
ತೊಡಗಿದಳ್ ನರ್ತನಕೆ ಕರ್ಕಶ ಕದನಕಾಳಿ:
ರುಂದ್ರ ಚಾಮುಂಡಿಯ ಚಲಚ್ಚಂಡ ಛಂದಸಿಗೆ
ಚಲಿಸಿತು ಚಮೂದ್ವಯಜಳಧಿ ಲಯವಿನೋದದಲಿ!
ಬಭ್ರುವಾಹನ ಸೇನೆಯೊಂದು ಕಡೆ; ಸಮ್ಮುಖದಿ
ಫಲ್ಗುಣ ವರೂಥಿನಿಯ ಪಂಕ್ತಿ: ಮುಂಗಾರಿನಲಿ
ಸಿಡಿಲು ಮಿಂಚಿನ ಗಬ್ಬದೆರಡು ಕಾರ್ಮುಗಿಲೋಳಿ
ಬಾನ್ಗಾಳಿಯುರುಬಿಂಗೆ ಸಂಘಟ್ಟನಂಗೈದು
ತಟಿದಗ್ನಿಯುಳ್ಕೆಯನಿರಮ್ಮದಾರಾವಮಂ
ಕಾರುವ ಮೊದಲ್ ದಿಟ್ಟಿಗಾಳೆಗಂ ಗೆಯ್ವಂತೆ
ನಿಂದುವಾಯೋಜನಂಗೊಂಡು ರಣಕಣುವಾಗಿ.

ತೇರಾನೆ ಕುದುರೆ ಕಾಲಾಳುಗಳ್ ತಿರೆಯೆಲ್ಲಮಂ
ತೀವಿ ಜೃಂಭಿಸಿದತ್ತು, ಶೀರ್ಷಕ ತನುತ್ರಾದಿ
ಭರ್ಮಕರ್ಮದ ವರ್ಮ ಚರ್ಮಾಸಿ ತೂಣೀರ
ಖಡ್ಗ ಕೋದಂಡ ಮುದ್ಗರ ಗದಾ ಕೇತನಂ
ಭಿಂಡಿವಾಲಂ ಚಕ್ರ ಪರಿಘಚಯಮಿತ್ಯಾದಿ
ನಾನಾಯುಧಂಗಳ ಕನತ್ಕನಕ ಕಾಂತಿಯಿಂ,
ದಿವಿಜ ದೃಷ್ಟಿಗುಮೆಂದು ಪರ್ವಮಾದುದೆನಲ್ಕೆ!
ಸಂಗರ ಪ್ರಾರಂಭ ಸಮಯ ತೂರ್ಯ ಧ್ವನಿಗೆ
ವೇಗದುದ್ವೇಗದಿಂ ರೋಷದಿಂ ಘೋಷದಿಂ
ಸಂಧಿಸಿತುಭಯ ಬಲಂ, ಭೂಕಂಪ ಕಾಲದಲಿ
ಸಮ್ಮುಖ ಶಿಖರ ಸೀಮೆಯಿಂದೆ ಬಂಡೆಗಳುರುಳಿ
ಕಂದರ ತಲದಿ ಢಿಕ್ಕಿಹೊಡೆದು ಹುಡಿಹುಡಿ ಹಾರಿ
ಕಿಡಿಕಿಡಿ ಸಿಡಿಯುವಂತೆ. ಕರಿಘಟೆಯ ಬೃಂಹಿತಂ,
ಹಯದ ಹೇಷಾರವಂ, ಚಕ್ರಚೀತ್ಕೃತಿ ರವಂ,
ಸಿಂಜಿನಿಯ ಚಾಪಟಂಕೃತಿ, ಕಲಿಯ ಪೌರುಷದ
ರುಷಿತರಾವಂ, ಖಡ್ಗ ಖಡ್ಗದ ಖಣಲ್, ಕವಚ
ಶೀರ್ಷಕ ಠಣಾರವಂ, ಬಹುಲ ನಾನಾರವಂ
ಕೀಲಿಸಿತು ಕಿವಿಗತಿ ಕಠೋರವಂ! ಚಿಮ್ಮಿದುದು
ಕೆನ್ನೆತ್ತರಿನ ಚಿಲುಮೆ ಗಾಯಗಾಯಂಗಳಿಂ;
ಧುಮುಕಿತ್ತು ಶೋಣಿತದ ರಕ್ತಧುನಿ; ರಣಕಾಳಿ
ರುಂಡ ಮುಂಡಗಳ ಚೆಂಡಾಟವಾಡಿದಳಲ್ಲಿ;
ಯಮ ಭಯಂಕರವಾದುದಾ ಕಳಂ. ಅಭ್ರದೊಳ್
ನೆರೆದಿರ್ದಮರಗಣಂ ಬೆರ್ಚಿದುದು. ಕರಯುಗದಿ
ವಿಜಯಮಾಲೆಯನಾಂತು, ಗಜಪುರದ ಕಡೆಗೊರ್ಮೆ
ಮಣಿಪುರದ ಕಡೆಗೊರ್ಮೆ ಬಗೆಯನಿರ್ಕಡೆ ಮಾಡಿ,
ಕೇಸೊಲವಿನುಯ್ಯಾಲೆಯಲಿ ನಲಿದಳ್ ವಿಜಯಲಕ್ಷ್ಮಿ!
ಇಂತುಟಾ ದಿನವೆಲ್ಲ ರಣದ ಕೋಲಾಹಲಂ
ಕೊಲೆಯ ಹಾಲಾಹಲಂ ಹರಿದುದೆಡೆಬಿಡದಲ್ಲಿ
ಮಣಿಪುರ ಧರಣಿಯಲ್ಲಿ. ಬಭ್ರುವಾಹನ ಜನನಿ
ತಿಳಿಯದೇನೊಂದುಮಂ ತೃಣ ಕುಟೀರದ ಮಧ್ಯೆ
ಬೇಡುತಿರ್ದಳ್ ಬಿಡದೆ ಫಣಿಧರ ಪಿನಾಕಿಯಂ

ತನ್ನಭೀಷ್ಟಂ ಸಫಲಮಕ್ಕೆಂದು. ಪೊತ್ತಿಳಿದು
ಕತ್ತಲಾದುದು. ಮತ್ತೆ ಕತ್ತಲಳಿದುದಯದೆಡೆ
ಮುಂಬೆಳಕು ಮೈದೋರಿದುದು ಮಳೆಯ ಮರ್ಬಿನಲಿ.
ಖಿನ್ನತೆ ವಿಷಣ್ಣತೆಗಳೆತ್ತಲುಂ ಮುತ್ತಿಬರೆ
ಹಾರೈಸಿದಾ ವಾರ್ತೆ ಬರದೆ ಚಿತ್ರೆಯ ಮನಕೆ
ಭವಿಸಿತೊಂದತಿ ಚಿತ್ರಹಿಂಸೆ. ಮೇಣಾ ದಿನಂ
ಕಳಿದುದು ನಿರೀಕ್ಷಣೆಯ ನಿಶಿತಧಾರೆಯ ಮೇಲೆ.
ಪತಿಸುತಹಿತದಿ ಕುತೂಹಲಿತ ಮಾನಸೆಯಾಕೆ
ಪೂಜಿಸಿದಳಾ ರಾತ್ರಿ, ತಮದ ನಿದ್ರೆಯನುಳಿದು
ಸಾತ್ವಿಕ ತುರೀಯ ನಿದ್ರಾ ಭಕ್ತಿರಸದಿಂದೆ.
ಇರುತಿರಲ್, ಧ್ಯಾನನಿದ್ರಾ ಸ್ವಪ್ನದರ್ಶನದಿ
ಕಾಣಿಸಿತ್ತೊಂದು ದಿವ್ಯಾಕೃತಿ ರುಚಿರ ಮೂರ್ತಿ!
“ಸಾಧ್ವಿಯೆ, ತಪಸ್ವಿನಿಯೆ, ಪಿಂಗಲ ಜಟಾಧಾರಿ
ಮಂಗಲ ವಿಭೂತಿಯಾ ತ್ರಿಶೂಲಿಯಾಣತಿಯಂತೆ
ಬಂದಿಹೆನೆಡೆಗೆ ನಿನ್ನ. ಮಣಿಪುರದ ಕಣದಲ್ಲಿ
ಮಡಿದುದೌ ನಿನ್ನ ರಣಕಲಿ ಕುಮಾರನ ಕೈಲಿ
ಕದನ ಮುಖದಲಿ ಫಲ್ಗುಣನ ಸೇನೆಯಲಿ ಜನಂ
ವಿಪುಲ ಸಂಖ್ಯೆಯಲಿ. ಚಣಚಣಕೆ ವೈರಿಯ ದಳಂ
ಬಲಗುಂದುತಳಿದುಳಿದು ಹಿಂಜರಿಯುತೋಡುತಿದೆ
ಲೆಕ್ಕಿಸದೆ ವೀರ ಪಾರ್ಥನ ವೀರವಾಣಿಯಂ.
ಗಾಯಗೊಂಡರ್ ಕೆಲರ್ ಸೇನಾನಿಗಳ್; ಕೆಲರ್
ತೊರೆದರಸುವಂ. ಮೇಣುಳಿದವರ್ಗೆ ಮಿಡುಕುತಿದೆ
ಹರಣಂ ಕೊರಳಿನಲ್ಲಿ. ಸೂರ್ಯನ ಮಗನ ಮಗಂ,
ಹಂಸಧ್ವಜಂ, ನೀಲಕೇತು, ಮೇಣನುಸಾಲ್ವ
ಪ್ರದ್ಯುಮ್ನ ಯೌವನಾಶ್ವಾದಿ ರಣವೀರರುಂ
ಬಳಲಿದರಳವಿಗೊಟ್ಟು. ಕಟ್ಟಕಡೆಗೇನೆಂಬೆ?
ಕೈಗೂಡಿತಾಹವಂ ನಿನ್ನ ಕಂದಗೆ ನರಗೆಃ ಮೇಣ್
ಹಬ್ಬಿತು ಪ್ರಳಯ ಭೀತಿ ಲೋಕಕ್ಕೆ; ಕಂಪಿಸಿತು
ರೌಪ್ಯಗಿರಿ; ಸುಗಿದರಮರರ್ ಬೆದರಿ ಬಿರುವುರಿಗೆ!
ದೇವಪತಿ ಪರಿದೋಡಿ ಕೈಲಾಸಕಭವನಂ
ಬೇಡಿದನ್ ಕ್ಷೇಮಮಂ ತನ್ನ ನಂದನ ನರಗೆ.

ನನ್ನನಿಲ್ಲಿಗೆ ಕಳುಹಿದನ್ ಸುಧಾಕರಮೌಳಿ
ನಿನ್ನ ಭಕ್ತಿಗೆ ಮೆಚ್ಚಿ: ಹೋಗು ನಡೆ ಬೇಗದಲಿ;
ತಳುವಿದರೆ ಬೀಳುವುದು ಪಾರ್ಥನ ಕಳೇಬರಂ
ರಣಧರೆಗೆ; ತೊಡಗಿದೆ ನಿಶಾಯುದ್ಧಮಿಾ ರಾತ್ರಿ;
ನಿನ್ನ ಹೃದಯದ ಬಲಯನಿತ್ತು ರಣದೇವತೆಗೆ,
ಕೆರಳ್ದ ಬಿದಿಯಂ ತಣಿಸಿ, ಪತಿಸುತರ್ಗಿರ್ವರ್ಗೆ
ನೀಂ ಶುಭಂಕರಿಯಾಗು, ನಡೆ, ಹೋಗು ಬೇಗದಲಿ!''
ನಡುಗಿ, ಬೆದರುತೆ, ಬೆವರಿ, ಕಣಸಿನಿಂದೆಳ್ಚತ್ತು,
ಹಾ ಎನುತ್ತಾ ಜನನಿಯಾ ಸತಿಯುಮಾ ಚಿತ್ರೆ
'ಹಾ ಮಗನೆ! ಹಾ ಪತಿಯೆ!' ಎಂದೊರಲಿ ಕಂಗೆಟ್ಟು,
ಕುದಿವೆದೆಯಳೋ ಎಂದು ರೋದಿಸೆಲೆವನೆಯಿಂದೆ
ಪೊರಮಟ್ಟು, ಕರ್ಗ್ಗತ್ತಲೊಳ್ ಮುಗ್ಗುರಿಸಿ ನಡೆದು
ಬಂದಳರಮನೆಗೆ, ಪಗಲೆನೆ ದೀಪರಾಜಿಯಿಂ
ತೊಳಪ ಬೀದಿಗಳ ನಡುನಡು ಮಂದಿ ಕಿಕ್ಕಿರಿದು
ನುಡಿಯ ಡಂಗುರ ಹೊಯ್ಯುತಿರೆ ವಿಜಯವಾರ್ತೆಯಂ,
ಕೇಳಿ, ಹವ್ವನೆ ಹಾರಿ ಹಮ್ಮೈಸಿ! ಮುತ್ತಿದರ್
ಕೆಳದಿಯರವಳ ಸುತ್ತಿ, ನಿರ್ಜನತೆ ನಿಶ್ಚಿಂತೆ
ನಿರ್ಮಲತೆಗಳ ತಪಸ್ವಿನಿ, ರಾಣಿ, ಅರಮನೆಗೆ
ಇರುಳೊಳೊರ್ವಳೆ ಬಂದುದಕ್ಕಕ್ಕಜಂ ತಾಳ್ದು.
ಹೇಳಿದರು ಧೈರ್ಯಮಂ: ರಣವಾರ್ತೆ ಶುಭವೆಂದು:
ದೇವಿ, ನೀಂ ಧನ್ಯೆ ಮಗನಂ ಪಡೆದು; ಪಾರ್ಥನಂ
ಹಿಮ್ಮೆಟ್ಟಿಸಿದನೆಂದು; ವೈರಿಯನುರಿಪನೆಂದು;
ಮಣಿಪುರದ ಕೀರ್ತಿಗೆ ಕಳಶವಿಕ್ಕಿ ಬಹನೆಂದು:
ಹಜ್ಜೆ ಹಜ್ಜೆಗೆ ವೈರಿವಾಹಿನಿ, ವಿಹಂಗಮಂ
ನಾರಾಚದೇರಿಂಗೆ ಗರಿಗಳನುದುರಿಸುತ್ತೆ
ಹೋಹಂತೆ, ದಿಂಡುರುಳಿ ಬೀಳುತಿರುವಾಳ್ಗಳಂ
ಪತ್ತು ಸಾಸಿರ ಲಕ್ಕದಂತುದುರ್ಚುತೆ ಕೆದರಿ
ಕೆಟ್ಟೋಡುತಿದೆ ಎಂದು; ಭೀತಿ ಬೇಡಣಮೆಂದು!
ಕಿವಿಗೆ ನುಡಿಯಲಗಿಕ್ಕಿ ತಿರುಪಿದವೊಲಾಗಲಾ
ವೀರಸತಿ ತಡವ ಮಾಡದೆ ಬೇಗ ತನ್ನಿಮೆನೆ
ತಂದರಾಳ್ಗಳದೊಂದು ಧವಳ ರಣತೇಜಿಯಂ.

ಶಾಂತಿಯಂ ಸೂಚಿಸೆ ಶರತ್ಸಮಯ ತೋಯದಂ
ಬೋಲೆಸೆವ ಧೌತಧವಳಾಂಬರ ಪತಾಕೆಯಂ
ಸರ್ವರುಂ ಕಾಣ್ಬಂತುಟೆತ್ತಿ, ಮೇಣೂದುತ್ತೆ
ಸಂಧಿ ಸೂಚಕ ಸುಸ್ವರದ ವೀರ ತೂರ್ಯಮಂ,
ನೆಗೆದು ಕುದುರೆಯ ಬೆನ್ನೆ ನಡೆದಳಾಹವದೆಡೆಗೆ
ಕವಚಗಿವಚಂ ಕತ್ತಿಗಿತ್ತಿಗಳನೊಂದುಮಂ
ಕೈಕೊಳದೆ, ಕೊರಳ ಜಪಮಣಿಮಾಲೆ ಮೇಣುಟ್ಟ
ನಾರು ಬೆಳ್ಪನೆ ಸೀರೆಯಲಿ! ಕೆಳದಿಯರ್ಕೆಲರ್
ಹಿಂಬಾಲಿಸಲ್ ಯತ್ನಿಸಿದರೇನು? ನಿಮಿಷದಲಿ
ಮಿಂಚಿ ಕಣ್ಮರೆಯಾಗಿ ಹೊಕ್ಕಳು ಕಳನ ನಡುವೆ
ಬಭ್ರುವಾಹನ ಜನನಿ, ಸಿತವಾಹನನ ಪತ್ನಿ,
ಮಣಿಪುರದ ರಾಣಿ ಚಿತ್ರಾಂಗದೆ.
ಯಮಾಲಯಂ
ತಾನೆನಲ್ಕೆಸೆದುದಾ ರಣಭೂಮಿ! ಅಸ್ತ್ರಾಗ್ನಿ
ಪೊತ್ತಿದ ಸಹಸ್ರಾರು ದೀವಿಗೆ ಸೊಡರ್ಮಾಲೆಗಳ್
ನರ್ತಿಸುವ ತಿಮಿರ ಕಾಳಿಯ ರಸನೆಗಳ ಹೋಲಿ
ರಂಜಿಸುದುವಲ್ಲಿ. ನೆತ್ತರುರುಷ್ಟಿ ತೊಪ್ಪನೆಯೆ
ತೊಯ್ದ ಕೆಂಗೆಸರಿನಲಿ, ಕಿವಿಗೆ ಕರ್ಕಶಮಾದ
ರಣದ ಭೀಷಣ ರುದ್ರ ಕಠಿನ ಕೋಲಾಹಲಂ
ಮಿಾಸಿದತ್ತು. ರೋಷದುನ್ಮಾದ ಶಿಖರಿಯನೇರಿ
ಜ್ವಾಲಾಮುಖಿಯೆನಲ್ಕೆ ಧುಮುಕುತಿರ್ದುದು ರಣಂ!
  ಕೂರ್ಮೊನೆಯ ಬಾಣಾಳಿ ಹಾಸುಹೊಕ್ಕಡಹಾಯ್ದು
ಸಂಚಳಿಸಿ, ನೆರೆಯಗುರ್ವಾಗಿರ್ದು, ಮೃತ್ಯುವಿನ
ಭೋಜನ ಸಮಯ ವದನ ರದನ ಪಂಜರದಂತೆ
ದುರ್ದಮ್ಯ ದುರ್ವಾರವಾಗಿ, ಕೊನೆಯಿಲ್ಲವೆನೆ
ಕಣ್ದಿಟ್ಟಿ ಹೋಹನ್ನೆಗಂ ಹಸರಿ ಹಬ್ಬಿರ್ದ
ರುಂದ್ರ ರಣರಂಗದಲಿ, ನುಗ್ಗಿ ನಡೆದಳ್ ಚಿತ್ರೆ,
ಬಿಳಿಯ ಬಾವುಟವಿಡಿದು, ತುತ್ತುರಿಯ ದನಿಗೈದು,
ಶಾಂತಿಯಂ ತೋರಿ ಮೇಣ್ ಸಂಧಿಯನಿರದೆ ಸಾರಿ!
ಚುಚ್ಚಿದುವು ಬಾಣಗಳಲಗು ತೇಜಿಯಂ ಮತ್ತೆ
ರಾಜ್ಞಿಯಂ. ಬಿಳಿಯ ಮೈ ಕೆಂಪಾದುದಶ್ವಕ್ಕೆ.

ಸಾಧ್ವಿಯಾ ಶ್ವೇತಾಂಬರಂ ರಕ್ತ ರಂಗಾಗಿ
ಚಿಮ್ಮಿತ್ತರುಣಜಲಂ ಧವಳಿಮ ಪತಾಕೆಗುಂ.
ಯುದ್ಧ ಶಬ್ದದ ಮಧ್ಯೆ, ಪೊಂಜುಗಳುರಿವ ಕಾಂತಿ
ಕತ್ತಲಲಿ ಕಣ್ಮಾಯೆಗೈಯುವಾ ಗಲಿಬಿಲಿಯ
ಹೋರಟೆಯ ಹೋರಾಟದಟಮಟದ ಹುಚ್ಚಿನಲಿ
ಮೊದಲು ಲೆಕ್ಕಿಸಲಿಲ್ಲವಾರುಮಾ ತೇಜಿಯಂ
ಮೇಣದರ ಮೇಲಿರ್ದ ಶಾಂತಿಯ ಪತಾಕೆಯಂ
ಪಿಡಿದು ಸಂಧಿಯ ತುತ್ತುರಿಯನೂದುತಿರ್ದಳಂ.
ಆದರೇನೊಂದಿನಿತು ಹೊತ್ತಿನೊಳೆ ಕೆಲರಾಳುಗಳ್
ಕೇಳಿ ತೂರ್ಯವನೊಡನೆ ಕಂಡರಾ ಧ್ವಜಮುಮಂ.
ವೈರಿಯ ಕುಹಕವೇನು? ಅಲ್ತಲ್ತು! ನೋಡು ಅದೊ!
ಶುಭದೇವತಾ ಮೂರ್ತಿ, ಬಭ್ರುವಾಹನ ಜನನಿ,
ವೀರ ವೀರರ ವೀರಮಾತೆ! ಹೋ ಹೋ ಎಂದು
ಗುಲ್ಲೆದ್ದುದೊಡನೆ! ಭಟರಲಿ ಕೆಲವರದೊ ಮುಂದೆ
ನುಗ್ಗುತಿಹರಾಕೆಯ ಸಹಾಯಕೆ!

ಅಲೆಕ್ಕಿಸುತೆ

ತನಗಾದ ನಾರಾಚದೇರ್ಗಳಂ, ಚಿತ್ರಾಂಗಿ
ಬಭ್ರುವಾಹನ ರಥದ ಕೇತನವನರಸುತ್ತೆ
ಧಾವಿಸುತ್ತಿರೆ, ಕಾಣಿಸಿತು ಮುಂದೆ ದೂರದಲಿ
ಸಮರ ಭೈರವ ಭೀಷ್ಮಲೀಲೆಯಲಿ ತೊಡಗಿರ್ದ
ತಂದೆ ಮಕ್ಕಳ ಕಾಹುರದ ಕಾಳೆಗದ ರಾಹು!
ಕಾಣಿಸಿತು ನೆತ್ತಿಯೆಡೆ ರಣಚಂಡಿಯೊಡಗೂಡಿ
ರಕ್ತದಾಹಾತುರದಿ ಕುಣಿಯುತಿರ್ದಾ ಮೃತ್ಯು!
`ಕೊಳ್ಳೆನ್ನ, ಕೊಳ್ಳೆನ್ನ! ಕಾಪಾಡು ಕಾಪಾಡು,
ಪತಿಸುತರನೋ ಮೃತ್ಯು!' ಎಂದೆನುತ್ತಾ ರಾಣಿ
ಹೊತ್ತ ಬಾವುಟದೊಡನೆ ತೂರ್ಯದ ಮಹಾರವಂ
ಪೊರೆಪೊಣ್ಮೆ ಕರೆಗಣ್ಮೆ ಕಳಕೆಲ್ಲ ಕೇಳ್ವಂತೆ
ದನಿಗೈದು, ಹಯದಿಂ ಕೆಳಕ್ಕೆ ಧುಮ್ಮಿಕ್ಕಿ 'ಹಾ!
ಹಾ! ಮಗನೆ! ಹಾ ಮಗನೆ! ಕೈಯ ತಡೆ! ಕೈಯ ತಡೆ!
ದಮ್ಮಯ್ಯ! ದಮ್ಮಯ್ಯ!' ಎನುತಾರ್ದು, ಬಸವಳಿದು,
ಧೊಪ್ಪೆಂದು ಕೆಡೆದಳಾ ತಂದೆ ಮಕ್ಕಳ ನಡುವೆ,

ಸೇತುವೆನೆ ಪಿಣಿಲು ಹೆಣೆದಾ ಕಣೆಯ ರುಧಿರಮಯ
ಶಯ್ಯೆಯಲಿ! ಧುಮುಕಿದರು ಹಾ ಎನುತ್ತಿರ್ವರುಂ
ಬಭ್ರುವಾಹನ ನರರ್ ತಂತಮ್ಮ ತೇರ್ಗಳಿಂ!
ನಡೆದೋಡಿದರ್ ನಾರಿ ಬಿದ್ದೆಡೆಗೆಃ ಬಳಿಯೆಯೆ
ಬಾಣಂಗಳಿಡಿದಾ ಪತಾಕೆಯಿದೆ! ಹೊನಲಿಡುತೆ
ಹರಿಯುತಿದೆ ನೆತ್ತರಾ ಮೆಯ್ಗಾಯಗಳ ಮುಖದಿ!
ತಾನುಟ್ಟ ಬಟ್ಟೆ ತೊಪ್ಪನೆ ತೊಯ್ದು ಸೋರುತಿದೆ!
ಮೈಮರೆತ ತಾಯಿಯಂ ಚಿತ್ರಾಂಗದೆಯ ಸೂನು
ಕಂಡೊಡನೆ, ಹಾ ಎನುತ್ತಡಿಗೆ ಮುಡಿಯಂ ಚಾಚಿ
ಕಂಗೆಟ್ಟು ರೋದಿಸುತ್ತಿರಲರ್ಜುನಂ ತನ್ನ
ಸೆರಗಿನೆಲರಂ ಬೀಸಿ, ತರಿಸಿ ನೀರಂ, ನೀಡಿ,
ಮಾಡಿದನು ಶುಶ್ರೂಷೆಯಂ. ಕಣ್ ತೆರೆಯುತಾ ಚಿತ್ರೆ
ಹುಯ್ಯಲಿಡುವಾ ತನ್ನ ಕಂದನಂ, ಪಕ್ಕದೊಳೆ
ಖಿನ್ನಮುಖಿಯಾಗಿರ್ದ ಪತಿದೇವನಂ ನೋಡಿ,
ಕರುಣೆಯಿಂ ದುಃಖದಿಂ ಹರ್ಷದಿಂ ರಾಗದಿಂ
ನೋಡಿ, ನೆರೆನೋಡಿ, ನಿಡುಸುಯ್ಯುತೆ ನುಡಿದಳಿಂತುಃ
"ದುಗುಡಮೇಕೆಲೆ ಮಗನೆ? ಸಂತಸಕೆ ಸಮಯಮಿದು!
ನಾನಳಿವೆನಾದರೇಂ? ಮಂಗಳ ಮುಹೂರ್ತಕ್ಕೆ
ನಾನಿಲ್ಲಿಗೈತಂದೆನಲ್ಲದಿರ್ದೊಡೆ ನಿನ್ನ ಈ
ತಂದೆಯಂ ಕೊಲುತಿರ್ದೆ ನೀಂ! ಮಹಾ ಪಾತಕಕೆ
ಪಕ್ಕಾಗುತಿರ್ದೆ. ನಾನಿನ್ನೆಗಂ ನಿನ್ನೊಡನೆ
ಪೇಳದ ರಹಸ್ಯವೊಂದಿರ್ಪುದದನಿಂದೊರೆವೆನ್
ಆಲಿಸೈ. ನೀನುಮಂತೆಯೆ ಕೇಳ್ವುದೈ, ನರನೆಃ
ನೀನೆನ್ನ ಹೃದಯೇಶನೆನ್ನ ಪತಿ! ಬೆಚ್ಚದಿರ್,
ಬೆರಗಾಗದಿರ್, ಕೆಚ್ಚುನುಡಿಯೆನ್ನದಿರ್."

ಚಿತ್ರೆ

ಹೇಳಿದಳು ತನ್ನ ಕಥೆಯಾದ್ಯಂತಮಂ, ಬಹುಲ
ಸಂಕ್ಷೇಪದಿಂದೆ ನರನಾಮಾಂಕಿತದ ಮುದ್ರೆಯಂ
ಶ್ರೀಯುಂಗುರವನಿತ್ತಳಾತನ ಕೈಗೆ ಸಾಕ್ಷಿಯಂ.
ಕೈಯೊಂದರೊಳ್ ಮಗನ ಮತ್ತೊಂದರೊಳ್ ಪತಿಯ
ಪಾಣಿಯಂ ಪಿಡಿದು, ಸಂಧಿಯನೊರೆದು, ಶಾಂತಿಯಂ

ನುಡಿದು, ಶಾಂತಾತ್ಮದಿಂ ಶಿವನಾಮವಂ ಸ್ಮರಿಸಿ
ಕಣ್ಣುಮುಚ್ಚಿದಳಮೃತಮಯ ಚಿರಸಮಾಧಿಯಲಿ!
ಪ್ಲವಿಸಿತ್ತಸೀಮರೋದನಮೆತ್ತಲುಂ! ರಣಂ
ಮಿಂದತ್ತು ಕರೆವ ಕಂಬನಿ ಮಳೆಯ ತೀರ್ಥದಲಿ!
    ಕಳೆದುದಾ ವಿಷಮ ವಿಷಮಯ ರಾತ್ರಿ. ಮರುದಿನಂ
ಮೂಡಿದುದು. ಕವಿದು ಮೋಡಂ ಸೋನೆಮಳೆ ಸೂಸಿ
ಖಿನ್ನವಾಗಿತ್ತಾ ಜಗತ್ತು ಮೌನದೊಳತ್ತು.
ಬೆಚ್ಚಿ ಬಿದ್ದತ್ತಿದ್ದಕಿದ್ದಂತೆ ಮಣಿಪುರಂ
ಧರೆ ಬಿರಿಯಲಬ್ಬರಿಯೆ ಶೋಕ ಭೇರೀರವಂ,
ಕಹಳೆ ನಿಸ್ಸಾಳತತಿ! ಮೃದುವಾದ್ಯ ಸುಸ್ವನಂ
ವೈದಿಕ ಪುರೋಹಿತರ ಮಂತ್ರಘೋಷಂ ಬೆರಸಿ
ಮೇಲೆದ್ದುದೊಯ್ಯನೊಯ್ಯನೆ ಜನರ ರೋದನದ
ಕೂಡೆ. ಮಣಿಪುರದರಮನೆಯ ಕನಕ ವಪ್ರದಿಂ
ಪೊರಮಟ್ಟು ನಡೆದುದು ಮಸಣಯಾತ್ರೆ ವಾರಿಧಿಯ
ವಿಸ್ತೃತ ಹರಿದ್ರಾಭ ಸೈಕತ ವೇಲೆಯೆಡೆಗೆ.
ದಂತಿಗಳ ಪಂತಿಗಳ ವಾಜಿಗಳ ರಾಜಿಗಳ,
ಕಾಲಾಳುಗಳ ಸಾಲುಗಳ, ರಥ ಸಮೂಹಗಳ,
ದೃಷ್ಟಿ ದೂರಂಬರಂ ನದಿಯಂತೆ ಪರಿದಿರ್ದ
ನಾಗರಿಕ ನರನಾರಿಯರ ದಳದ ಮೆರವಣಿಗೆ
ಚಲಿಸಿತು ಕಡಲತಡಿಗೆ, ದುಃಖಭಾರಾಕ್ರಾಂತ
ಮಂದಗತಿಯಿಂದೆ. ಚಾಮರ ಛತ್ರಗಳ ಮಧ್ಯೆ
ಪುಷ್ಪ ನವಪರಿಮಳಗಳಿಂದೆ ಸಿಂಗರಗೈದ
ಚಿತ್ರಾಂಗದೆಯ ಕಳೇಬರವಿರ್ದ ಶಿಬಿಕೆಯೆಡೆ
ಪಾರ್ಥ ಪಾರ್ಥಜರಿರ್ವರುಂ ಕಾಲ್ನಡಿಗೆಯಿಂದೆ
ಸಾಗಿದರಿತರ ಮಿತ್ರ ಸಾಮಂತ ಗೋಷ್ಠಿಯಲಿ.
ಕಟಿಯೊಳಸಿಕೋಶಮಿರೆ ಕನಕ ಖಚಿತಂ ಚಾರು,
ಝುಗಝುಗಿಸೆ ಕೌಕ್ಷೇಯಕಂ ರಾಜಗೌರವಕೆ
ಮುಷ್ಟಿಯಲಿ, ಛಂದೋ ಗಮನದಿಂದೆ ಮನದಿಂದೆ
ನಡೆದರಾ ಉಭಯ ಸೈನ್ಯಗಳೈಕಮತ್ಯದಲಿ.
    ಚಂದನ ಶ್ರೀಗಂಧ ಕಾಷ್ಠದಿಂಧನದಿಂದೆ,
ಕಸ್ತೂರಿ ಕರ್ಪೂರ ಸಜ್ಜರಸ ಲೋಬಾನ

ಯಕ್ಷಕರ್ದಮದಿಂದೆ, ಬಕುಳ ಮಲ್ಲಿಗೆ ಜಾಜಿ
ಮೊಲ್ಲೆ ಸಂಪಗೆ ಕಮಳ ದೇವಕುಸುಮಗಳಿಂದೆ
ಕಂಪಿಡಿದು, ಸೊಂಪಿಡಿದು, ಮರ್ತ್ಯನಿಂ ಸ್ವರ್ಗಕ್ಕೆ
ಕೊಂಡೊಯ್ಯುವೊಂದು ಬೃಂದಾರಕ ವಿಮಾನವೆನೆ,
ಚಿತೆ ಹೂಡಿ ನಿಂದುದು ವನಧಿ ವೇಲೆಯಲಿ. ಮಂದಿ
ಸಂದಣಿಸಿ ಬಂದು ನೆರೆದುದು ಕಡಲಿನಂಚಿನಲಿ,
ಮತ್ತೊಂದು ಮಾನವ ಸಮುದ್ರವೆಂಬಂತೆ. ಘನ
ಘನಸಾರ ಕಾಶ್ಮೀರಜನ್ಮಾದಿ ಲೇಪನದ,
ಧೌತ ಕೌಶೇಯ ಪರಿಧಾನ ಪರಿಶೋಭಿತದ,
ನವರತ್ನಮಯ ಹೇಮದಾಭರಣ ಭೂಷಿತದ,
ಉಚಿತ ಪರಿಕರ್ಮಾಂಗ ಸಂಸ್ಕಾರ ಕೃತ ಶವಂ
ಚಿತೆಗಡರ್ದತ್ತು. ಮೃದುವಾದ್ಯ ವೀಣಾರವಂ
ಪೊರಪೊಣ್ಮೆತಾಕ್ರಂದನಂವೆರಸಿ. ಮಾರುತಂ
ಗಂಧಭಾರಕೆ ಕುಸಿದು ಸುಯ್ದಿರೆ, ಸಮುದ್ರಪತಿ
ಮೊರೆದಿರೆ ತರಂಗ ಸಂಕುಲ ನಾದದಿಂ, ನಭಂ
ಸೋನೆಮಳೆ ನೆವದಿಂದೆ ಬಿಡದೆ ಕಂಬನಿ ಸೂಸೆ,
ಸರ್ವಶುಚಿ ಸಪ್ತಾರ್ಚಿ ಸೂಡನದೊ ಪೊತ್ತಿದಂ
ಪೊಗೆ ಸೂಸಿ, ಕಿಡಿಗೆದರಿ, ನೆತ್ತರುರಿನಾಲಗೆಯ
ತಾಂಡವದಿನಿಂಧನ ಸುಗಂಧ ಚಿತೆಯಂ ನೊಣೆದು
ನೆಕ್ಕಿಃ ಧಗಧಗಧಗಿಸುತಾಪೋಷನಂಗೈದು!
   ಕಂಡರೆಲ್ಲರು ಚಿತಾ ಚಿತ್ರಭಾನುವ ಮಧ್ಯೆ,
ಕಣಸು ಕಂಡಂತೆ, ಚಿತ್ರಾಂಗದೆಯ ಸುಪ್ರಭಾ
ಸುರಧನು ದುಕೂಲ ಸುಂದರ ದೇವಮೂರ್ತಿಯಂ,
ಪುಷ್ಪಕ ವಿಮಾನ ಪೀಠಸ್ಥೆಯಂ! ನಂದನದ
ಸುರಕುಜದಲರ ಹಾರಮಂ ಪಿಡಿದು ಗೀರ್ವಾಣ
ಫಣಿವೇಣಿಯರುಮಿರ್ದರಲ್ಲಿ, ಸುರಗಾನಮಂ
ಪಾಡಿ. ನೋಡುತಿರೆ ಪುಷ್ಪಕಮೇರ್ದುದಂಬರಕೆ
ಜನತೆಯುತ್ಕಂಠೆಯಲಿ!
                    ಜ್ಞಾನಮಜ್ಞಾನಮಂ
ದಹಿಸುವಂತಗ್ನಿ ಸುಡೆ ಸುಡೆ ಕಾಯ ಮಾಯೆಯಂ
ತವಿಸಿದರದಂ ಪ್ರೇಮದಮೃತತ್ವದಂತಿರ್ದು

ಕುಂಭ ಕುಂಭಂಗಳಲಿ ತುಂಬಮೆನೆ ತುಂಬೆರೆದ
ಫೇನ ಧವಳಿಮ ಧೇನುದುಗ್ಧಾಭಿಷೇಕದಿಂದೆ!
    ಹಗಲಿರುಳು ಏಳುದಿನಮಲ್ಲಿ ಚೈತ್ಯಾಲಯಂ
ಚಿತ್ರಾಂಗದೆಯ ಯಶಶ್ಚೈತ್ರ ಸುರತರುವಂತೆ
ಬೆಳೆದುದೊಯ್ಯನೆ ಹಾಲುಗಲ್ಲಿನಲಿ. ಕುಳಿರಿಂದೆ
ಹೆಪ್ಪಾದ ಹಾಲ್ಗಡಲಿನೈಕಿಲೊಳ್ಗಡ್ಡೆಯಂ
ಕಡಿಕಡಿಯುತಿಟ್ಟಿಗೆಯನೊಟ್ಟಿ, ಕಲ್ಪನೆಯಲ್ಲಿ
ಸವಿಯ ನೆನಹಿನ ಮನೆಯನೊಲಿದು ನಿರ್ಮಿಸುವಂತೆ,
ಕಟ್ಟಿದರಜಸ್ರಂ ಸಹಸ್ರ ಶಿಲ್ಪಿಗಳಲ್ಲಿ
ಸ್ಮಾರಕ ನಿಕೇತನ ಸ್ತೂಪಮಂ! ತಿರೆಯೊಲ್ಮೆ
ಸಿರವೆತ್ತಿ ಸಗ್ಗನೀಲಿಗೆ ಮುತ್ತು ಕೊಡುವಂತೆವೋಲ್
ಮಣಿಪುರ ಮನದ ಮಹಾ ಸ್ಮೃತಿಸುಧಾಶಿವರೂಪಿ ತಾಂ
ಮೆರೆದುದಾ ಮೂಕಶೋಕದ ಶಿಲೆಯ ಸಂಗೀತೆ!

# ಕುವೆಂಪು
## ಜೀವನ ಪಥ

೧೯೦೪ : ಜನನ: ೨೯-೧೨-೧೯೦೪ - ಹಿರೇಕೊಡಿಗೆಯಲ್ಲಿ, ತಾಯಿ: ಸೀತಮ್ಮ, ತಂದೆ: ವೆಂಕಟಪ್ಪಗೌಡರು, ಕುಪ್ಪಳಿ, ತೀರ್ಥಹಳ್ಳಿ ತಾ|, ಶಿವಮೊಗ್ಗ ಜಿಲ್ಲೆ

೧೯೨೦-೨೭: ಮೈಸೂರಿನಲ್ಲಿ ವಿದ್ಯಾಭ್ಯಾಸ

೧೯೨೨ : 'ಬಿಗಿನರ್ಸ್ ಮ್ಯೂಸ್' ಮತ್ತು ಕೆಲವು ಕನ್ನಡ ಬರವಣಿಗೆಗಳು

೧೯೨೭: ಬಿ.ಎ. ಪದವಿ, ಮೊದಲ ಇಂಗ್ಲಿಷ್ ಕವಿತಾ ಸಂಕಲನದ ಪ್ರಕಟಣೆ

೧೯೨೯ : ಕಲ್ಕತ್ತಾಯಾತ್ರೆ; ಬೇಲೂರು ರಾಮಕೃಷ್ಣಮಠದಲ್ಲಿ ದೀಕ್ಷೆ, ಎಂ.ಎ.ನಲ್ಲಿ ಉತ್ತೀರ್ಣ, ಮಹಾರಾಜಾ ಕಾಲೇಜಿನಲ್ಲಿ ಅಧ್ಯಾಪಕರಾಗಿ ನೇಮಕ

೧೯೩೦ : ಮೊಟ್ಟಮೊದಲನೆಯ ಕವನಸಂಕಲನ – 'ಕೊಳಲು' ಪ್ರಕಟಣೆ

೧೯೩೬ : 'ಕಾನೂರು ಹೆಗ್ಗಡತಿ' ಹಾಗೂ 'ಚಿತ್ರಾಂಗದಾ' ಖಂಡಕಾವ್ಯದ ಪ್ರಕಟಣೆ

೧೯೩೭ : ಶ್ರೀಮತಿ ಹೇಮಾವತಿ ಅವರೊಡನೆ ಮದುವೆ; 'ಉದಯರವಿ' ಯಲ್ಲಿ ನೆಲೆಸಿದ್ದು

೧೯೩೮ : ಮೊದಲನೆಯ ಮಗ ಪೂರ್ಣಚಂದ್ರ ತೇಜಸ್ವಿ ಜನನ (೮-೯-೧೯೩೮)

೧೯೩೯ : ಕನ್ನಡ ರೀಡರ್ ಆಗಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ನೇಮಕ

೧೯೪೧ : ಎರಡನೆಯ ಮಗ ಕೋಕಿಲೋದಯ ಚೈತ್ರ ಜನನ (೨-೫-೧೯೪೧)

೧೯೪೩ : ಮೊದಲನೆಯ ಮಗಳು ಇಂದುಕಲಾ ಜನನ (೨೧-೭-೧೯೪೩)

೧೯೪೫ : ಎರಡನೆಯ ಮಗಳು ತಾರಿಣಿ ಜನನ (೬-೨-೧೯೪೫)

೧೯೪೬ : ಕನ್ನಡ ಪ್ರಾಧ್ಯಾಪಕ ಹಾಗೂ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ನೇಮಕ

೧೯೪೯ : 'ಶ್ರೀ ರಾಮಾಯಣ ದರ್ಶನಂ' – ಮೊದಲ ಮಹಾಸಂಪುಟ ಪ್ರಕಟಣೆ

೧೯೫೧ : 'ಶ್ರೀ ರಾಮಾಯಣ ದರ್ಶನಂ' – ಎರಡನೇ ಮಹಾಸಂಪುಟ ಪ್ರಕಟಣೆ

೧೯೫೫ : ಮಹಾರಾಜಾ ಕಾಲೇಜಿನ ಪ್ರಿನ್ಸಿಪಾಲರಾಗಿ ನೇಮಕ, 'ರಾಮಾಯಣ ದರ್ಶನಂ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ

೧೯೫೬ : ಮೈಸೂರು ವಿಶ್ವವಿದ್ಯಾನಿಲಯದಿಂದ ಗೌರವ ಡಿ.ಲಿಟ್, ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ ನೇಮಕ

೧೯೫೭ : ಧಾರವಾಡದಲ್ಲಿ ನಡೆದ ೩೯ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ

೧೯೫೮ : ರಾಷ್ಟ್ರಪತಿಗಳಿಂದ 'ಪದ್ಮಭೂಷಣ' ಪ್ರಶಸ್ತಿ ಸ್ವೀಕಾರ

೧೯೬೦ : 'ಮಾನಸ ಗಂಗೋತ್ರಿ' ಸ್ಥಾಪನೆ, ಉಪಕುಲಪತಿ ಹುದ್ದೆಯಿಂದ ನಿವೃತ್ತಿ

೧೯೬೪ : ರಾಜ್ಯಸರ್ಕಾರದಿಂದ 'ರಾಷ್ಟ್ರಕವಿ' ಪ್ರಶಸ್ತಿ

೧೯೬೬ : ಕರ್ನಾಟಕ ವಿಶ್ವವಿದ್ಯಾಲಯದಿಂದ ಗೌರವ ಡಿ.ಲಿಟ್. ಪ್ರಶಸ್ತಿ

೧೯೬೭ : 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಪ್ರಕಟಣೆ

೧೯೬೮ : 'ರಾಮಾಯಣ ದರ್ಶನಂ' ಕೃತಿಗೆ ಕನ್ನಡದ ಪ್ರಪ್ರಥಮ ಜ್ಞಾನಪೀಠ ಪ್ರಶಸ್ತಿ

೧೯೬೯ : ಬೆಂಗಳೂರು ವಿಶ್ವವಿದ್ಯಾನಿಲಯದ ಗೌರವ ಡಿ.ಲಿಟ್ ಪ್ರಶಸ್ತಿ

೧೯೮೨ : ಪತ್ನಿ ಶ್ರೀಮತಿ ಹೇಮಾವತಿ ಅವರ ನಿಧನ

೧೯೮೮ : ರಾಷ್ಟ್ರಪತಿಗಳಿಂದ 'ಪದ್ಮವಿಭೂಷಣ' ಪ್ರಶಸ್ತಿ ಸ್ವೀಕಾರ

೧೯೮೮ : ಕರ್ನಾಟಕ ಸರ್ಕಾರದಿಂದ 'ಪಂಪ' ಪ್ರಶಸ್ತಿ

೧೯೯೨ : ಕರ್ನಾಟಕ ಸರ್ಕಾರದಿಂದ 'ಕರ್ನಾಟಕ ರತ್ನ' ಪ್ರಶಸ್ತಿ

೧೯೯೪ : ಕುವೆಂಪು ನಿಧನ: ೧೧-೧೧-೧೯೯೪

ಕುವೆಂಪು ಕನ್ನಡ ಸಾಹಿತ್ಯದ ಸ್ರಷ್ಟಾರ,
ದ್ರಷ್ಟಾರ, ವಕ್ತಾರ. ಜಡಗೊಂಡು
ಮ್ಲಾನಮುಖಿಯಾಗಿದ್ದ ಇಪ್ಪತ್ತನೆಯ
ಶತಮಾನದ ಆರಂಭದ ಕನ್ನಡವನ್ನೂ,
ಕರ್ನಾಟಕವನ್ನೂ, ಕನ್ನಡಿಗರನ್ನೂ ಒಟ್ಟೊಟ್ಟಿಗೆ
ಒಗ್ಗೂಡಿಸಿ ಕಸುವು ತುಂಬಿದ ಬಗೆಯನ್ನು
ಪರಿಭಾವಿಸಿದರೆ ಬೆರಗು ಆವರಿಸುತ್ತದೆ.
ಸಣ್ಣಪುಟ್ಟದರಲ್ಲಿ ವಿರಮಿಸದೆ ಎತ್ತರಗಳಿಗೆ
ಜಿಗಿದ ಅವರು ಸಾಹಿತ್ಯದತ್ತ ಹೊರಳಿದ,
ಸಾಹಿತ್ಯ ವಿಮರ್ಶೆಯನ್ನು ಹೊರಳಿಸಿದ
ಸಂದರ್ಭ ವಿಶಿಷ್ಟವಾದದ್ದು. ವಿಶ್ವಕವಿ
ಕುವೆಂಪುರವರ ಈ ಸಮಗ್ರ ಸಾಹಿತ್ಯ
ಕರಂಡಕ ಅಮೃತದ ಮಡು, ಮಿಂದವರು
ಧನ್ಯರಾಗುವರು; ಜ್ಯೋತಿಯ ಖನಿ,
ಹೊಕ್ಕವರು ಪ್ರಬುದ್ಧರಾಗುವರು.

▪ ನಾಡೋಜ ಪ್ರೊ| ಹಂಪನಾ



ಕುವೆಂಪು ಸ್ಮಾರಕ ಜೈವಿಕ ಧಾಮ, ಕುಪ್ಪಳಿ